# ಋಗ್ವೇದಸಂಹಿತಾ

ಭಾಗ—೨೪

ಐದನೆಯ ಅಷ್ಟಕದ ಅಧ್ಯಾಯಗಳು ೬-೮

ಆರನೆಯ ಅಷ್ಟಕದ ಅಧ್ಯಾಯ, ೧

ಏಳನೆಯ ಮಂಡಲದ, ಸೂಕ್ತಗಳು ೮೧-೧೦೪

ಎಂಟನೆಯ ಮಂಡಲದ ಸೂಕ್ತಗಳು ೧-೨೦



ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೨೩

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದಸಂಹಿತಾ

(ಕರ್ನಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೨೩

ಐದನೆಯ ಅಷ್ಟಕದ ೬—೮ನೇ ಅಧ್ಯಾಯಗಳು

ಆರನೆಯ ಅಷ್ಟಕದ ೧ನೇ ಅಧ್ಯಾಯವು

ಏಳನೆಯ ಮಂಡಲದ ಸೂಕ್ತಗಳು ೮೧-೧೦೪

ಎಂಟನೆಯ ಮಂಡಲದ ಸೂಕ್ತಗಳು ೧-೨೦



*Translated with Exhaustive Critical Notes & Explanations*

*by*

ASTHANA MAHAVIDWAN

H. P. VENKATA RAO

*Editor*

*Printed at*

SREE VINAYAK PRINTING WORKS, MYSRORE

1953

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

—o—

**Translator & Editor :**

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

---

**ಸಹಾಯಕ ವಿದ್ವನ್ಮಂಡಲಿ**

1. ಶ್ರೀ G. N. ಚಕ್ರವರ್ತಿ, M. A,
Professor of Sanskrit, St. Philomina's College, Mysore.

2. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.

3 ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೋತಿಷ ವಿದ್ವಾನ್ ಮತ್ತು ಕರ್ನಾಟಕ ಭಾಷಾಪಂಡಿತರು,

4. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು, ಋಗ್ವೇದ ಘನಪಾಠಿಗಳು.

5. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತ ವಿದ್ವಾನ್.

6. ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು, ಮೀಮಾಂಸಾದರ್ಶನ ಪಂಡಿತರು.

7. ಬ್ರ॥ ಶ್ರೀ॥ ವೆಂಕಟರಮಣಾಚಾರ್, M. A., B. T., ಸಾಹಿತ್ಯವಿದ್ವಾನ್.

8. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.

9. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯ ವಿದ್ವಾನ್,
Govt. Oriental Research Institute. Mysore.

10. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು.
Govt. Oriental Research Institute, Mysore.

# ಪೀಠಿಕೆ.

---

ವೇದಗಳಲ್ಲಿ, ಅದರಲ್ಲಿಯೂ ಋಗ್ವೇದದಲ್ಲಿ, ಅನೇಕದೇವತೆಗಳನ್ನು ಸ್ತುತಿಸಲಾಗಿದ್ದರೂ ಇಂದ್ರ, ಅಗ್ನಿ, ವಿಶ್ವೇದೇವತೆಗಳು, ಅಶ್ವಿನೀದೇವತೆಗಳು, ದ್ಯಾವಾಪೃಥಿವೀ, ಉಷಸ್ಸು, ಮರುದ್ದೇವತೆಗಳು, ಮಿತ್ರ, ವರುಣ, ಆದಿತ್ಯ ಇವರೇ ಮುಖ್ಯರಾದವರು. ಈ ದೇವತೆಗಳಲ್ಲಿಯೂ ಇಂದ್ರನಿಗಿರುವ ಸ್ಥಾನವು ಮತ್ತೆ ಯಾವ ದೇವತೆಗಳಿಗೂ ಇಲ್ಲ. ಪುರಾಣಾದಿಗಳಲ್ಲಿ ಶಿವ, ವಿಷ್ಣು ಗಳಿಗಿರುವ ಸ್ಥಾನವೂ ವೇದಾಂತದಲ್ಲಿ ಬ್ರಹ್ಮ (ಪರಬ್ರಹ್ಮ) ನಿಗಿರುವ ಸ್ಥಾನಮಾನಗಳೂ ಋಗ್ವೇದದಲ್ಲಿ ಇಂದ್ರನಿಗಿವೆ. ಈ ಇಂದ್ರನು ಶಿಷ್ಟರನ್ನು ಪಾಲಿಸುವುದಲ್ಲದೆ ದುಷ್ಟರನ್ನು ಶಿಕ್ಷಿಸುವನೆಂದು ಇಂದ್ರನ ಗುಣಗಳನ್ನೂ, ಸಾಹಸಕೃತ್ಯಗಳನ್ನೂ ನಾನಾವಿಧವಾಗಿ ಸ್ತುತಿಸಲಾಗಿದೆ. ಋಷಿಗಳು ಇಂದ್ರನನ್ನು ಸ್ತುತಿಸುವಾಗ ತಾವು ಮಾಡುವ ಸ್ತುತಿಗೂ, ಯಜ್ಞಾದಿಸತ್ಕರ್ಮಗಳಿಗೂ ಪ್ರತಿಫಲವಾಗಿ ಅನ್ನಾದ್ಯಾಹಾರ, ಧನ, ಗೃಹ, ವೀರರಾದ ಪುತ್ರರು, ದುಷ್ಟರಿಂದ ರಕ್ಷಣೆ ಮೊದಲಾದುವುಗಳನ್ನು ತಮಗೆ ಅನುಗ್ರಹಿಸಬೇಕೆಂದೂ, ದುಷ್ಟರಾದವರೂ, ಸತ್ಕರ್ಮಾನುಷ್ಠಾನಗಳಿಗೆ ವಿಘ್ನವನ್ನುಂಟುಮಾಡುವವರೂ ಆದ ಅಸುರರನ್ನು ಸಂಹಾರಮಾಡಬೇಕೆಂದೂ ಪ್ರಾರ್ಥಿಸಿದ್ದಾರೆ. ಅಸುರರನ್ನು ಸಂಹಾರಮಾಡುವಾಗ ಮೋಸ, ವಂಚನೆ, ಕುಟಿಲೋಪಾಯಗಳಿಂದ ಯುದ್ಧಮಾಡುವ ಅಸುರರನ್ನು ಅದೇ ವಿಧವಾದ ಉಪಾಯಗಳಿಂದ ಯುದ್ಧಮಾಡಿ ಸಂಹರಿಸುತ್ತಾನೆಂದು ಅನೇಕ ಪೂರ್ವೇತಿಹಾಸಗಳಿವೆ. ಉದಾಹರಣೆಗೆ ಹೇಳುವುದಾದರೆ, ನಮುಚಿಯೆಂಬ ಅಸುರನನ್ನು ಇಂದ್ರನು ಸಂಹಾರಮಾಡಬೇಕಾದಾಗ ಉಪಯೋಗಿಸಿದ ಬುದ್ಧಿವಂತಿಕೆಯು ಸ್ವಾರಸ್ಯವಾಗಿದೆ. ಅದನ್ನೇ ಇಲ್ಲಿ ಸೂಕ್ಷ್ಮವಾಗಿ ತಿಳಿಸುವೆವು. ನಮುಚಿಯೆಂಬುವನು ಒಬ್ಬ ರಾಕ್ಷಸನು. ಇವನು ದಾಸರೆಂದು ಕರೆಯಲ್ಪಡುವ ಈ ದೇಶದ ಪೂರ್ವನಿವಾಸಿಗಳಲ್ಲಿ ಪ್ರಸಿದ್ಧನಾದ ಮುಖಂಡನೆಂದು ಋಗ್ವೇದದ ಅನೇಕ ಋಕ್ಕುಗಳಲ್ಲಿ ಸೂಚಿತವಾಗಿದೆ. ಇವನು ಮಹಾ ಬಲವುಳ್ಳವನಾದುದರಿಂದ ಇಂದ್ರನು ಇವನೊಡನೆ ಯುದ್ಧಮಾಡಿ ಜಯಿಸುವುದು ಬಹಳ ಕಷ್ಟವಾಯಿತು. ಈ ವಿಷಯದಲ್ಲಿ ಋ. ಸಂ. ೧-೫೩-೭; ೨-೧೪-೫; ೭-೧೯-೫; ೧೦-೭೩-೭; ೫-೩೦-೭; ೫-೩೦-೮; ೬-೨೦-೬; ೮-೧೪-೧೩ ಎಂಬ ಋಕ್ಕುಗಳಲ್ಲಿ ನಮುಚಿಯ ಸಂಹಾರದ ವಿಷಯವು ಸೂಚಿತವಾಗಿರುವುದಲ್ಲದೆ ತೈತ್ತಿರೀಯಬ್ರಾಹ್ಮಣದಲ್ಲಿ (ಕೃಷ್ಣ ಯಜುರ್ವೇದ) ಈ ವಿಷಯದಲ್ಲಿ ಸ್ವಲ್ಪ ವಿಸ್ತಾರವಾದ ವಿವರಣೆ ಇದೆ. ಅದನ್ನೇ ನಾವು ಇಲ್ಲಿ ಬರೆದಿದೇವೆ.

ಇಂದ್ರೋ ವೃತ್ರಗ್ಂ ಹತ್ವಾ । ಅಸುರಾನ್ ಪರಾಭಾವ್ಯ । ನಮುಚಿಮಾಸುರಂ ನಾಲಭತ । ತಗ್ಂ ಶಚ್ಯಾಗೃಹ್ಣಾತ್ । ತೌ ಸಮಲಭೇತಾಂ । ಸೋಽಸ್ಮಾದಭಿಶುನತರೋಽಭವತ್ । ಸೋಽಬ್ರವೀತ್ । ಸಂಧಾಗ್ಂ ಸಂದಧಾವಹೈ । ಅಥ ತ್ವಾವಸ್ರಕ್ಷ್ಯಾಮಿ । ನ ಮಾ ಶುಷ್ಕೇಣ ನಾರ್ದ್ರೇಣ ಹನಃ । ನ ದಿವಾ ನ ನಕ್ತಮಿತಿ । ಸ ಏತಮಪಾಂ ಫೇನಮಸಿಂಚತ್ । ನ ವಾ ಏಷ ಶುಷ್ಕೋ ನಾರ್ದ್ರೋ ವ್ಯುಷ್ಟಾಸೀತ್ । ಅನುದಿತಃ ಸೂರ್ಯಃ । ನ ವಾ ಏತದ್ದಿವಾ ನ ನಕ್ತಂ । ತಸ್ಯೈತಸ್ಮಿನ್ ಲೋಕೇ । ಅಪಾಂ ಫೇನೇನ ಶಿರ ಉದವರ್ತಯತ್ । ತದೇನಮನ್ವವರ್ತತ । ಮಿತ್ರದ್ರುಗಿತಿ । ಸ ಏತಾನಪಾಮಾರ್ಗಾನಜನಯತ್ । ತಾನಜುಹೋತ್ । ತೈರ್ವೈ ಸ ರಕ್ಷಾಗ್ಂಸ್ಯಪಾಹತ । ಯದಪಾಮಾರ್ಗಹೋಮೋ ಭವತಿ । ರಕ್ಷಸಾಮಪಹತ್ಯೈ ॥

(ತೈ. ಬ್ರಾ. ೧-೭-೧-೬, ೭)

ಪೂರ್ವದಲ್ಲಿ ಇಂದ್ರನು ವೃತ್ರಾಸುರನನ್ನು ಸಂಹಾರ ಮಾಡಿದಮೇಲೆ ಇನ್ನೂ ಇತರ ರಾಕ್ಷಸರನ್ನೂ ಸಂಹಾರ ಮಾಡಿದನು. ಆದರೆ ನಮುಚಿಯೆಂಬ ರಾಕ್ಷಸನನ್ನು ಜಯಿಸಲಾಗಲಿಲ್ಲ. ಇವನು ಮಹಾ ಬಲಶಾಲಿಯಾಗಿದ್ದನು. ಯಾವ ವಿಧವಾದ ಆಯುಧಗಳಿಗೂ ಜಗ್ಗಲಿಲ್ಲ. ಆದುದರಿಂದ ಇಂದ್ರನು ಅವನನ್ನು ತನ್ನ ಶರೀರಬಲದಿಂದಲೇ ಗೆಲ್ಲಬೇಕೆಂದು ಯೋಚಿಸಿ ಅವನೊಡನೆ ಮಲ್ಲಯುದ್ಧವನ್ನು ಪ್ರಾರಂಭಿಸಿದನು. ಆದರೂ ಯುದ್ಧಮಾಡಿದಂತೆಲ್ಲ ನಮುಚಿಯ ಬಲವೇ ವೃದ್ಧಿಯಾಗುತ್ತಿತ್ತು. ಇಂದ್ರನು ಅವನ ಹಿಡಿತದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಆಗ ಇಂದ್ರನು ತನ್ನನ್ನು ಬಿಡಬೇಕೆಂದು ನಮುಚಿಯನ್ನು ಕೇಳಲು, ಆಗ ಆ ಅಸುರನು ಇಂದ್ರನನ್ನು ಕುರಿತು—ಎಲೈ ಇಂದ್ರನೇ, ನಿನ್ನನ್ನು ಬಿಡಬೇಕಾದರೆ ನಾನು ಹೇಳಿದಂತೆ ಕೇಳಬೇಕು. ಈಗ ನಾವು ಒಬ್ಬರಿಗೊಬ್ಬರು ಸಂಧಿಯನ್ನು ಮಾಡಿಕೊಳ್ಳೋಣ. ನೀನು ಮತ್ತೆ ನನ್ನೊಡನೆ ಯಾವುದಾದರೂ ತಂತ್ರದಿಂದ ಯುದ್ಧಮಾಡಿ ನನ್ನನ್ನು ಕೊಲ್ಲಬೇಕೆಂದು ಇಚ್ಛಿಸಬಹುದು. ಅಂತಹ ಸಂದರ್ಭದಲ್ಲಿ ನೀನು ನನ್ನನ್ನು ಕೊಲ್ಲಬೇಕೆಂದು ಉಪಯೋಗಿಸುವ ಆಯುಧವು ಹಸಿಯಾಗಿರಕೂಡದು, ಒಣಗಿರಲೂ ಕೂಡದು. ಹಗಲಿನಲ್ಲಿ ನನ್ನನ್ನು ಕೊಲ್ಲಕೂಡದು, ರಾತ್ರಿಯಲ್ಲಿಯೂ ಕೊಲ್ಲಕೂಡದು. ಈ ನಿಯಮಗಳಿಗೆ ನೀನು ಒಪ್ಪುವಿಯಾದರೆ ನಿನ್ನನ್ನು ಬಿಡುವೆನು ಎಂದು ಹೇಳಿದನು. ಇಂದ್ರನು ಹಾಗೆಯೇ ಆಗಲೆಂದೊಪ್ಪಿ ಅವನ ಹಿಡಿತದಿಂದ ಬಿಡಿಸಿಕೊಂಡು ಇವನನ್ನು ಹೇಗೆ ಜಯಿಸಬೇಕೆಂದು ಆಲೋಚಿಸತೊಡಗಿದನು. ಕೆಲವು ಕಾಲದಮೇಲೆ ಇಂದ್ರನು ಸಮುದ್ರತೀರದಲ್ಲಿ ಸಂಚರಿಸುತ್ತಿದ್ದಾಗ ಅವನ ಮನಸ್ಸಿಗೆ ಒಂದು ಉಪಾಯವು ಹೊಳೆಯಿತು ಸಮುದ್ರದ ನೊರೆಯು ಅವನ ದೃಷ್ಟಿಗೆ ಬಿದ್ದಿತು ಈ ನೊರೆಯು ಹಸಿಯೂ ಅಲ್ಲ, ಒಣಗಿದುದೂ ಅಲ್ಲ ಆದುದರಿಂದ ಇದನ್ನೇ ಆಯುಧವನ್ನಾಗಿ ಮಾಡಿಕೊಂಡು ನಮುಚಿಯನ್ನು ಸಂಹರಿಸುವೆನು. ರಾತ್ರಿಯು ಕಳೆದು ಉಷಃಕಾಲವು ಪ್ರಾರಂಭವಾಗಿ ಸೂರ್ಯನು ಉದಯಿಸುವುದಕ್ಕೆ ಮೊದಲು ಚೆನ್ನಾಗಿ ಬೆಳಕಾಗಿರುವುದು. ಆ ಕಾಲವು ಕತ್ತಲೆಯಲ್ಲದ್ದರಿಂದ ರಾತ್ರಿಯೂ ಅಲ್ಲ, ಸೂರ್ಯನು ಉದಯಿಸಿರುವುದಿಲ್ಲವಾದ್ದರಿಂದ ಹಗಲೂ ಅಲ್ಲ. ಇಂತಹ ಕಾಲದಲ್ಲಿ ನಮುಚಿಯೊಡನೆ ಯುದ್ಧಮಾಡಿ ನೀರಿನ ನೊರೆಯಿಂದ ನಿರ್ಮಿತವಾದ ಆಯುಧದಿಂದ ಅವನನ್ನು ಕೊಂದರೆ ನಾನು ಮಾತಿಗೆ ತಪ್ಪಿದಂತಾಗುವುದಿಲ್ಲ ಎಂದು ನಿಶ್ಚಯಿಸಿ ಅದರಂತೆ ನಮುಚಿಯೊಡನೆ ಯುದ್ಧಮಾಡಿ ಆ ನೊರೆಯಿಂದ ಅವನ ಶಿರಸ್ಸನ್ನು ಕತ್ತರಿಸಿದನು. ಆದರೂ ಆ ದೈತ್ಯನು ಮೃತನಾಗದೆ ಇಂದ್ರನನ್ನು ಕೊಲ್ಲುವುದಕ್ಕಾಗಿ ಅವನನ್ನು ಅಟ್ಟಿಸಿಕೊಂಡುಬಂದನು. ಎಲೈ ಮಿತ್ರದ್ರೋಹಿಯಾದ ಇಂದ್ರನೇ, ನಿಲ್ಲು, ನಿಲ್ಲು. ನೀನು ನನ್ನನ್ನು ಕೊಲ್ಲುವುದಿಲ್ಲವೆಂದು ಮಾತುಕೊಟ್ಟು ಈಗ ಇಂತಹ ಮಿತ್ರದ್ರೋಹಕರವಾದ ಕೆಲಸವನ್ನು ಮಾಡಿರುತ್ತೀಯೆ. ನಿನ್ನನ್ನು ಈಗಲೂ ಕೊಲ್ಲದೇ ಬಿಡುವುದಿಲ್ಲ ಎಂದನು. ಆಗ ಇಂದ್ರನು ಹೆದರಿ ಅಪಾಮಾರ್ಗವೆಂಬ ವೃಕ್ಷವಿಶೇಷವನ್ನು ಸೃಷ್ಟಿಸಿ ಅದರ ಸಮಿತ್ತುಗಳಿಂದ ವೀರ್ಯವೃದ್ಧಿಗಾಗಿ ಅಗ್ನಿಯಲ್ಲಿ ಹೋಮಮಾಡಿದನು. ಅದರಿಂದ ಇಂದ್ರನ ಬಲವು ಅಧಿಕವಾಗಿ ಆ ನಮುಚಿಯನ್ನು ಸಂಹಾರಮಾಡಿದನು. ಆದುದರಿಂದ ರಾಕ್ಷಸರ ಬಾಧೆಯಿಂದ ಪಾರಾಗಬೇಕೆಂದು ಬಯಸುವವರು ಅಪಾಮಾರ್ಗಸಮಿತ್ತುಗಳಿಂದ ಹೋಮಮಾಡಬೇಕು ಎಂದಿರುವುದು. ಇಂತಹ ಸ್ವಾರಸ್ಯವಾದ ಪೂರ್ವೇತಿಹಾಸಗಳೂ, ಉಪಾಖ್ಯಾನಗಳೂ ವೇದಗಳಲ್ಲಿ ಬಹಳವಾಗಿರುವವು. ಅವುಗಳನ್ನೇ ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಪುರಾಣಾದಿಗಳಲ್ಲಿ ವಿಸ್ತಾರವಾಗಿ ವರ್ಣಿಸಲಾಗಿರುವುದು.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ, ಮೂಲಭೂತವೂ ಆದ ಇಂತಹ ಋಗ್ವೇದ ಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರರಾದಿಯಾದ ಸಕಲ ಜನರೂ ಜ್ಞಾನಾಭಿ

ವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್**.ಐ. ಮಹಾಪ್ರಭುವರ್ಯರೂ ಅವರ ಸರ್ಕಾರದವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ ಅವರ ಕುಟುಂಬಕ್ಕೂ ರಾಜಕುಮಾರಿಯರಿಗೂ, **ಶ್ರೀಕಂಠದತ್ತ ನೃಸಿಂಹರಾಜ ಒಡೆಯರ್**, ಎಂಬ ಶುಭಾನಾಮಾಂಕಿತರಾದ ರಾಜಕುಮಾರರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು.
ವಿಜಯನಾಮ ಸಂ॥ ಶ್ರಾವಣ ಶುಕ್ಲೈಕಾದಶೀ ಶುಕ್ರವಾರ
ತಾ॥ 21-8-1953

ಅನುವಾದಕ
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್

# ವಿಷಯಾನುಕ್ರಮಣಿಕೆ



## ಐದನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು



### ಏಳನೆಯ ಮಂಡಲದ ಸೂಕ್ತಗಳು


| | | ಪುಟಸಂಖ್ಯೆ |
|---|---|---|
| ೮೧. | ಪ್ರತ್ಯು ಅದರ್ಶಿ ಎಂಬ ಎಂಭತ್ತೊಂದನೆಯ ಸೂಕ್ತವು | 2 |
| ೮೨. | ಇಂದ್ರಾವರುಣಾ ಎಂಬ ಎಂಭತ್ತೆರಡನೆಯ ಸೂಕ್ತ | 9 |
| | ವನುಷ್ಯತಿ ಶಬ್ದದ ನಿರ್ವಚನವು | 11 |
| ೮೩. | ಯುವಾಂ ನರಾ ಎಂಬ ಎಂಭತ್ತಮೂರನೆಯ ಸೂಕ್ತ | 25 |
| ೮೪. | ಆ ವಾಂ ರಾಜಾನೌ ಎಂಬ ಎಂಭತ್ತನಾಲ್ಕನೆಯ ಸೂಕ್ತ | 39 |
| ೮೫. | ಪುನೀಷೇ ವಾಂ ಎಂಬ ಎಂಭತ್ತೈದನೆಯ ಸೂಕ್ತ | 46 |
| ೮೬. | ಧೀರಾ ತ್ವಸ್ಯ ಮಹಿನಾ ಎಂಬ ಎಂಭತ್ತಾರನೆಯ ಸೂಕ್ತ | 53 |
| ೮೭. | ರದತ್ಪಥೋ ವರುಣಃ ಎಂಬ ಎಂಭತ್ತೇಳನೆಯ ಸೂಕ್ತ | 64 |
| ೮೮. | ಪ್ರ ಶುಂಧ್ಯುವಂ ವರುಣಾಯ ಎಂಬ ಎಂಭತ್ತೆಂಟನೆಯ ಸೂಕ್ತ | 74 |
| ೮೯. | ಮೋ ಷು ವರುಣ ಎಂಬ ಎಂಭತ್ತೊಂಭತ್ತನೆಯ ಸೂಕ್ತ | 84 |
| ೯೦. | ಪ್ರ ವೀರಯಾ ಶುಚಯಃ ಎಂಬ ತೊಂಭತ್ತನೆಯ ಸೂಕ್ತ | 90 |
| ೯೧. | ಕುವಿದಂಗ ನಮಸಾ ಎಂಬ ತೊಂಭತ್ತೊಂದನೆಯ ಸೂಕ್ತ | 100 |
| ೯೨. | ಆ ವಾಯೋ ಭೂಷ ಎಂಬ ತೊಂಭತ್ತೆರಡನೆಯ ಸೂಕ್ತ | 111 |
| ೯೩. | ಶುಚಿಂ ನು ಸ್ತೋಮಂ ಎಂಬ ತೊಂಭತ್ತಮೂರನೆಯ ಸೂಕ್ತ | 120 |
| ೯೪. | ಇಯಂ ವಾಮಸ್ಯ ಮನ್ಮನ ಎಂಬ ತೊಂಭತ್ತನಾಲ್ಕನೆಯ ಸೂಕ್ತ | 130 |
| ೯೫. | ಪ್ರ ಕ್ಷೋದಸಾ ಧಾಯಸಾ ಎಂಬ ತೊಂಭತ್ತೈದನೆಯ ಸೂಕ್ತ | 142 |
| ೯೬. | ಬೃಹದು ಗಾಯಿಷೇ ಎಂಬ ತೊಂಭತ್ತಾರನೆಯ ಸೂಕ್ತ | 152 |
| ೯೭. | ಯಜ್ಞೇ ದಿವಃ ಎಂಬ ತೊಂಭತ್ತೇಳನೆಯ ಸೂಕ್ತ | 159 |

| | | ಪುಟಸಂಖ್ಯೆ |
|---|---|---|
| ೯೮. | ಅಧ್ವರ್ಯವೋಽರುಣಂ ಎಂಬ ತೊಂಭತ್ತೆಂಟನೆಯ ಸೂಕ್ತ | 172 |
| ೯೯. | ಪರೋ ಮಾತ್ರಯಾ ತನ್ವಾ ಎಂಬ ತೊಂಭತ್ತೊಂಭತ್ತನೆಯ ಸೂಕ್ತ | 181 |
| ೧೦೦. | ನೂ ಮರ್ತೋ ದಯತೇ ಎಂಬ ನೂರನೆಯ ಸೂಕ್ತವು | 191 |
| | ಪ್ರ ತತ್ತೇ ಅದ್ಯ ಎಂಬ ಋಕ್ಕಿನ ವಿಶೇಷವಿನಿಯೋಗ | 198 |
| | ವಿಷ್ಣುವಿಗೆ ಶಿಪಿವಿಷ್ಟ ಎಂಬ ಹೆಸರು ಬರಲು ಕಾರಣ ಮತ್ತೂ ಶಿಪಿವಿಷ್ಟ ಶಬ್ದದ ನಿರ್ವಚನ ಇತ್ಯಾದಿ | 199 |
| | ವಿಷ್ಣುವು ವಸಿಷ್ಠಋಷಿಗೆ ಸಹಾಯಕೊಡದ ವಿಚಾರ-ಶಿಪಿವಿಷ್ಟಶಬ್ದದ ಅರ್ಥವಿವರಣೆ ಇತ್ಯಾದಿ | 201 |
| | ವಷಟ್ಕಾರ ಸ್ವರೂಪ ಮತ್ತು ಅರ್ಥವಿವರಣೆ | 203 |
| | ವಷಟ್ಕಾರ ಸ್ವರೂಪ ಮತ್ತು ಪ್ರಯೋಗದ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿರುವ ವಿಸ್ತಾರವಾದ ವಿವರಣೆ | 204 |
| | ಅನುವಷಟ್ಕಾರ ವೆಂದರೇನು ? ಅದರ ವಿವರಣೆ | 205 |
| | ವಷಟ್ಕಾರವನ್ನು ಉಪಯೋಗಿಸುವ ವಿಧಾನ | 205 |
| | ವಜ್ರ, ಧಾಮಚ್ಛತ್, ರಿಕ್ತ ಎಂಬ ವಷಟ್ಕಾರದ ಮೂರು ಪ್ರಭೇದಗಳು | 206 |
| | ಮೂರುವಿಧ ವಷಟ್ಕಾರಗಳ ಪ್ರಯೋಗದಿಂದ ಲಭಿಸುವ ಫಲಭೇದಗಳು | 207 |
| | ವಷಟ್ಕಾರವನ್ನು ಪಠಿಸುವಾಗ ಅನುಸರಿಸಬೇಕಾದ ವಿಧಿನಿಯಮಗಳು | 208 |
| | ಸ್ವಸ್ತಿಶಬ್ದಾರ್ಥವಿವರಣೆ | 210 |
| | ಇಲ್ಲಿಗೆ ಐದನೆಯ ಅಷ್ಟಕದಲ್ಲಿ ಆರನೆಯ ಅಧ್ಯಾಯವು ಸಮಾಪ್ತವು. | |


## ಏಳನೆಯ ಅಧ್ಯಾಯವು.


| | | |
|---|---|---|
| ೧೦೧. | ತಿಸ್ರೋ ವಾಚಃ ಎಂಬ ನೂರೊಂದನೆಯ ಸೂಕ್ತವು | 213 |
| ೧೦೨. | ಪರ್ಜನ್ಯಾಯ ಪ್ರ ಗಾಯತ ಎಂಬ ನೂರೆರಡನೆಯ ಸೂಕ್ತವು | 222 |
| ೧೦೩. | ಸಂವತ್ಸರಂ ಶಶಯಾನಾ ಎಂಬ ನೂರಮೂರನೆಯ ಸೂಕ್ತ | 226 |
| | ಸೂಕ್ತದ ಪೀಠಿಕೆ-ಮಂಡೂಕಶಬ್ದದ ರೂಪನಿಷ್ಪತ್ತಿ, ಯಾಸ್ಕರ ನಿರ್ವಚನ ಇತ್ಯಾದಿ | 226 |
| | ಸಂವತ್ಸರಂ ಶಶಯಾನಾ ಎಂಬ ಋಕ್ಕಿಗೆ ಯಾಸ್ಕರ ನಿರ್ವಚನ | 228 |
| | ಉಪಪ್ಲವತ ಮಂಡೂಕಿ ಎಂಬ ಪರಿಶಿಷ್ಟಮಂತ್ರ ಮತ್ತು ಅದಕ್ಕೆ ಯಾಸ್ಕರು ಹೇಳಿರುವ ನಿರ್ವಚನ | 240 |
| ೧೦೪ | ಇಂದ್ರಾಸೋಮಾ ತಪತಂ ಎಂಬ ನೂರ ನಾಲ್ಕನೆಯ ಸೂಕ್ತ | 241 |
| | ಮಂತ್ರಗಳ ಅರ್ಥಾನುಸಾರವಾಗಿ ಪರೋಕ್ಷಕೃತ, ಪ್ರತ್ಯಕ್ಷಕೃತ ಇತ್ಯಾದಿ ನಾನಾ ಪ್ರಭೇದಗಳ ವಿವರಣೆ—ಉದಾಹರಣೆ ಸಹಿತವಾಗಿ. | 262 |

ಪುಟಸಂಖ್ಯೆ

ಪರಾಶರಃ ಎಂಬ ಶಬ್ದಕ್ಕೆ ಯಾಸ್ಕರ ನಿರುಕ್ತವು. 271

ಈ ಮಂಡಲದ ೩೫ ನೇ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಶಂವತೀಃ ಪಾರಯಂತಿ ಇತ್ಯಾದಿ ಪರಿಶಿಷ್ಟಮಂತ್ರಗಳು. 276

೫೫ ನೇ ಸೂಕ್ತಾಂತ್ಯದಲ್ಲಿ ಪಠಿಸಬೇಕಾದ ಸ್ವಪ್ನ ಸ್ವಪ್ನಾಧಿಕರಣೇ ಇತ್ಯಾದಿ ಪರಿಶಿಷ್ಟ ಮಂತ್ರಗಳು 277

೯೬ ನೇ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಯಸ್ಯ ವ್ರತಂ ಎಂಬ ಪರಿಶಿಷ್ಟಮಂತ್ರವು. 278

೧೦೩ ನೇ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಉಪಪ್ಲವತ ಎಂಬ ಪರಿಶಿಷ್ಟಮಂತ್ರವು 278

ಇಲ್ಲಿಗೆ ಏಳನೆಯ ಮಂಡಲವು ಸಮಾಪ್ತವು

## ಎಂಟನೆಯ ಮಂಡಲವು

ಮಂಡಲದ ಪೀಠಿಕೆ— 279

ಕಣ್ವಋಷಿಯ ಪರಿಚಯ. 280

ಎಂಟನೆಯ ಮಂಡಲದ ಋಷಿಗಳು ಮತ್ತು ಅವರಿಂದ ದೃಷ್ಟವಾದ ಸೂಕ್ತಗಳ ವಿವರಣೆ ಇತ್ಯಾದಿ 284

೧. ಮಾ ಚಿದನ್ಯದ್ವಿ ಶಂಸತ ಎಂಬ ಮೊದಲನೆಯ ಸೂಕ್ತವು 290

ಮಾತ್ವಾ ಸೋಮಸ್ಯ ಎಂಬ ಋಕ್ಕಿನ ನಿರುಕ್ತವು ಮತ್ತು ಗಲ್ದಯಾ ಎಂಬ ಶಬ್ದದ ನಿರ್ವಚನ ವಿವರಣೆ ಇತ್ಯಾದಿ. 315

ಆಸಂಗ ನೆಂಬ ರಾಜನಿಗೆ ಪುಂಸತ್ವವು ಪ್ರಾಪ್ತವಾದ ವಿಚಾರದಲ್ಲಿ ಪೂರ್ವೇತಿಹಾಸ ಮತ್ತು ಅವನ ಪತ್ನಿಯ ಅಭಿನಂದನೆ ಇತ್ಯಾದಿ. 332

೨ ಇದಂ ವಸೋ ಸುತಂ ಎಂಬ ಎರಡನೆಯ ಸೂಕ್ತವು. 333

ಇಂದ್ರ ಇತ್ಸೋಮಪಾಃ ಎಂಬ ಋಕ್ಕಿನ ವಿಶೇಷವಿನಿಯೋಗ. 339

೩. ಪಿಬಾ ಸುತಸ್ಯ ರಸಿನಃ ಎಂಬ ಮೂರನೆಯ ಸೂಕ್ತ. 379

೪ ಯದಿಂದ್ರ ಪ್ರಾಗಪಾಕ್ ಎಂಬ ನಾಲ್ಕನೆಯ ಸೂಕ್ತ. 410

ಆಪಿತ್ವೇ, ಪ್ರಪಿತ್ವೇ ಎಂಬ ಶಬ್ದಗಳ ನಿರ್ವಚನ, ಅರ್ಥವಿವರಣೆ ಇತ್ಯಾದಿ. 415

ಸ್ಫಾರಂ ರಾಧಃ ಎಂಬ ಋಕ್ಕಿನ ನಿರುಕ್ತವು. 435

ಆರನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು ಸಮಾಪ್ತವು.

## ಎಂಟನೆಯ ಅಧ್ಯಾಯವು.

೫ ದೂರಾದಿಹೇವ ಎಂಬ ಐದನೆಯ ಸೂಕ್ತವು. 439

೬. ಮಹಾ ಇಂದ್ರೋ ಯ ಓಜಸಾ ಎಂಬ ಆರನೆಯ ಸೂಕ್ತವು. 480

ಪುಟಸಂಖ್ಯೆ

೭. ಪ್ರ ಯದ್ವಸ್ತ್ರಿಷ್ಟುಭಂ ಎಂಬ ಏಳನೆಯ ಸೂಕ್ತ 528

೮. ಆ ನೋ ವಿಶ್ವಾಭಿಃ ಎಂಬ ಎಂಟನೆಯ ಸೂಕ್ತ 565

೯. ಆ ನೂನಮಶ್ವಿನಾ ಎಂಬ ಒಂಭತ್ತನೆಯ ಸೂಕ್ತ 590

೧೦. ಯುಕ್ತ್ವಾ ದೀರ್ಘಪ್ರಸದ್ಮನಿ ಎಂಬ ಹತ್ತನೆಯ ಸೂಕ್ತ. 614

೧೧. ತ್ವಮಗ್ನೇ ವ್ರತಪಾ ಅಸಿ ಎಂಬ ಹನ್ನೊಂದನೆಯ ಸೂಕ್ತ. 622

ಇಲ್ಲಿಗೆ ಐದನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು ಸಮಾಪ್ತವು



## ಆರನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು.

೧೨. ಯ ಇಂದ್ರ ಸೋಮಪಾತಮಃ ಎಂಬ ಹನ್ನೆರಡನೆಯ ಸೂಕ್ತ. 635

೧೩. ಇಂದ್ರಃ ಸುತೇಷು ಸೋಮೇಷು ಎಂಬ ಹದಿಮೂರನೆಯ ಸೂಕ್ತ. 671

ತಮಿದ್ವರ್ಧಂತು ನೋ ಗಿರಃ ಇತ್ಯಾದಿ ವಾಕ್ಯಗಳ ಅರ್ಥವಿವರಣೆ. 690

ಪ್ರತದ್ವಸೂ ಎಂಬ ಶಬ್ದದ ನಿರ್ವಚನ ಮತ್ತು ಅರ್ಥವಿವರಣೆ. 699

೧೪. ಯದಿಂದ್ರಾಹಂ ಎಂಬ ಹದಿನಾಲ್ಕನೆಯ ಸೂಕ್ತ. 705

೧೫. ತಮ್ವಭಿ ಪ್ರ ಗಾಯತ ಎಂಬ ಹದಿನೈದನೆಯ ಸೂಕ್ತವು. 720

೧೬. ಪ್ರ ಸಮ್ರಾಜಂ ಚರ್ಷಣೀನಾಂ ಎಂಬ ಹದಿನಾರನೆಯ ಸೂಕ್ತ. 734

೧೭. ಆ ಯಾಹಿ ಸುಷುಮಾ ಎಂಬ ಹದಿನೇಳನೆಯ ಸೂಕ್ತ. 747

೧೮. ಇದಂ ಹ ನೂನಂ ಎಂಬ ಹದಿನೆಂಟನೆಯ ಸೂಕ್ತ 762

೧೯. ತಂ ಗೂರ್ಧಯಾ ಸ್ವರ್ಣರಂ ಎಂಬ ಹತ್ತೊಂಬತ್ತನೆಯ ಸೂಕ್ತ 784

ಸುವಾಸ್ತ್ವಾ ಅಧಿ ತುಗ್ವನಿ ಎಂಬ ವಾಕ್ಯದ ನಿರ್ವಚನವು 827

೨೦. ಆ ಗಂತಾ ಮಾ ರಿಷಣ್ಯತ ಎಂಬ ಇಪ್ಪತ್ತನೆಯ ಸೂಕ್ತವು 827

ಇಲ್ಲಿಗೆ ಆರನೆಯ ಅಷ್ಟಕದಲ್ಲಿ ಮೊದಲನೆಯ ಅಧ್ಯಾಯವು ಸಮಾಪ್ತವು

ವಿಷಯಾನುಕ್ರಮಣಿಕೆ ಸಮಾಪ್ತವು.





॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

## ಭಾಗ—೨೩



### ॥ ಪಂಚಮಾಷ್ಟಕೇ ಷಷ್ಠೋಽಧ್ಯಾಯಃ ॥

ಐದನೆಯ ಅಷ್ಟಕದ ಅಧ್ಯಾಯಗಳು ೬-೮
ಆರನೆಯ ಅಷ್ಟಕದಲ್ಲಿ ೧ನೆಯ ಅಧ್ಯಾಯವು

---

### ಏಳನೆಯ ಮಂಡಲದ ಸೂಕ್ತಗಳು ೮೧—೧೦೪
### ಎಂಟನೆಯ ಮಂಡಲದ ಸೂಕ್ತಗಳು ೧—೨೦

---

ಸಪ್ತಮಮಂಡಲದಲ್ಲಿ ವಸಿಷ್ಠಋಷಿದೃಷ್ಟವಾದ ಸೂಕ್ತಗಳಲ್ಲಿ ೭೫-೮೧ ವರೆಗೆ ಇರುವ ೭ ಸೂಕ್ತಗಳು ಉಷೋದೇವತಾಕವು. ಇವುಗಳಲ್ಲಿ ೭೫-೮೦ ವರೆಗಿನ ೬ ಸೂಕ್ತಗಳನ್ನು ಹಿಂದಿನ ಭಾಗದಲ್ಲಿಯೇ ವಿವರಿಸಲಾಗಿದೆ. ಕೊನೆಯ ಸೂಕ್ತವಾದ ೮೧ರಿಂದ ಈ ಅಧ್ಯಾಯವು ಪ್ರಾರಂಭವಾಗುವುದು. ಉಷೋದೇವತೆಯ ಪರವಾದ ವರ್ಣನೆಯು ಋ. ಸಂ. ಭಾಗ ೫ ಪುಟ 560-563 ಗಳಲ್ಲಿಯೂ ಇತರ ಕಡೆಗಳಲ್ಲಿಯೂ ವಿಸ್ತಾರವಾಗಿ ವಿವೃತವಾಗಿರುವುದರಿಂದ ಇಲ್ಲಿ ವಿಶೇಷವಿವರಣೆಯ ಅವಶ್ಯಕತೆ ಇರುವುದಿಲ್ಲ. ಆದುದರಿಂದ ಋಕ್ಕುಗಳಿಗೆ ಪ್ರತಿಪದಾರ್ಥ ಭಾವಾರ್ಥಗಳನ್ನೂ ಕ್ಲಿಷ್ಟಪದಗಳ ಅರ್ಥವಿವರಣೆಯನ್ನೂ ವಿವರಿಸಲಾಗಿದೆ.

# ಏಳನೆಯ ಮಂಡಲದಲ್ಲಿ ಎಂಭತ್ತೊಂದನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಅಥ ಷಷ್ಠೋ ವ್ಯಾಖ್ಯಾಯತೇ । ಸಪ್ತಮೇ ಮಂಡಲೇ ಪಂಚಮೇಽನುವಾಕೇ ದಶ ಸೂಕ್ತಾನಿ ವ್ಯಾಕೃತಾನಿ । ಪ್ರತ್ಯು, ಅದರ್ಶೀತಿ ಷಡೃಚಮೇಕಾದಶಂ ಸೂಕ್ತಂ ವಸಿಷ್ಠಸ್ಯಾರ್ಷಮುಷಸ್ಯಂ । ಪ್ರಥಮಾದ್ಯಾ ಅಯುಜೋ ಬೃಹತ್ಯೋ ದ್ವಿತೀಯಾದ್ಯಾ ಯುಜಃ ಸತೋಬೃಹತ್ಯಃ । ತಥಾ ಚಾನುಕ್ರಾಂತಂ । ಪ್ರತ್ಯು ಷಟ್ ಪ್ರಾಗಾಥಮಿತಿ ॥ ಪ್ರಾತರನುವಾಕ ಉಷಸ್ಯೇ ಕ್ರತೌ ಬಾರ್ಹತೇ ಛಂದಸ್ಯಾಶ್ವಿನಶಸ್ತ್ರೇ ಚೇದಂ ಸೂಕ್ತಂ । ಸೂತ್ರಿತಂ ಚ । ಪ್ರತ್ಯು ಅದರ್ಶಿ ಸಹ ವಾಮೇನೇತಿ ಬಾರ್ಹತಂ । ಆ. ೪-೧೪ । ಇತಿ॥**

ಅನುವಾದವು – ಐದನೆಯ ಅಷ್ಟಕದಲ್ಲಿ ಇದುವರೆಗೆ ಐದು ಅಧ್ಯಾಯಗಳು ಮುಗಿದಿರುವುದರಿಂದ ಈಗ ಆರನೆಯ ಅಧ್ಯಾಯದ ವಿವರಣೆಯನ್ನು ಆರಂಭಿಸುವೆವು. ಏಳನೆಯ ಮಂಡಲದ ಐದನೆಯ ಅನುವಾಕದಲ್ಲಿ ಹತ್ತು ಸೂಕ್ತಗಳನ್ನು ಹಿಂದಿನ ಅಧ್ಯಾಯದಲ್ಲಿ ವ್ಯಾಖ್ಯಾನಮಾಡಿರುವುದರಿಂದ ಈಗ ಹನ್ನೊಂದನೆಯ ಸೂಕ್ತದವ್ಯಾಖ್ಯಾನವನು ಪ್ರಾರಂಭಿಸುವೆವು. **ಪ್ರತ್ಯು ಅದರ್ಶಿ** ಎಂಬ ಈ ಸೂಕ್ತವು ಏಳನೆಯ ಮಂಡಲದ ಐದನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು, ಉಷೋದೇವತೆಯೇ ದೇವತೆಯು. ಈ ಸೂಕ್ತದ ಅಸಮಸಂಖ್ಯೆಯ ಋಕ್ಕುಗಳು ಎಂದರೆ ೧, ೩, ೫ನೆಯ ಋಕ್ಕುಗಳು ಬೃಹತೀ ಛಂದಸ್ಕವು. ಸಮಸಂಖ್ಯೆಯ ಎಂದರೆ ೨, ೪, ೬ನೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಅನುಕ್ರಮಣಿಕೆಯಲ್ಲಿ **ಪ್ರತ್ಯು ಷಟ್ ಪ್ರಾಗಾಥಂ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಉಷಸ್ಯಕ್ರತುಸಂಬಂಧವಾದ ಬೃಹತೀಛಂದಸ್ಸಿನ ಋಕ್ಕುಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಪ್ರತ್ಯು ಅದರ್ಶಿ ಸಹ ವಾಮೇನೇತಿ ಬಾರ್ಹತಂ** ಎಂಬ ಸೂತ್ರದಿಂದ **(ಆ. ೪-೧೪)** ವಿವೃತವಾಗಿರುವುದು.

## ಸೂಕ್ತ—೮೧

ಮಂಡಲ—೭ ॥ ಅನುವಾಕ—೫ ॥ ಸೂಕ್ತ—೮೧ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ವಸಿಷ್ಠಃ ॥
ದೇವತಾ—ಉಷಾಃ ॥
ಛಂದಃ—೧, ೩, ೫ ಬೃಹತೀ । ೨, ೪, ೬ ಸತೋಬೃಹತೀ ॥

॥ ಸಂಹಿತಾಪಾಠಃ ॥

**ಪ್ರತ್ಯು ಅದರ್ಶ್ಯಾಯತ್ಯುಚ್ಛಂತೀ ದುಹಿತಾ ದಿವಃ ।**
**ಅಪೋ ಮಹಿ ವ್ಯಯತಿ ಚಕ್ಷಸೇ ತಮೋ ಜ್ಯೋತಿಷ್ಕೃಣೋತಿ ಸೂನರೀ ॥೧॥**

॥ ಪದಪಾಠಃ ॥

ಪ್ರತಿ । ಊಂ ಇತಿ । ಅದರ್ಶಿ । ಆऽಯತೀ । ಉಚ್ಛಂತೀ । ದುಹಿತಾ । ದಿವಃ ।

ಅಪೋ ಇತಿ । ಮಹಿ । ವ್ಯಯತಿ । ಚಕ್ಷಸೇ । ತಮಃ । ಜ್ಯೋತಿಃ । ಕೃಣೋತಿ । ಸೂನರೀ ॥ ೧ ॥

॥ ಸಾಯಣಭಾಷ್ಯಂ ॥

ಆಯತ್ಯಾಗಚ್ಛಂತೀ ವ್ಯುಚ್ಛಂತೀ ತಮಾಂಸಿ ವಿವಾಸಯಂತೀ ವರ್ಜಯಂತೀ ದಿವೋ ದ್ಯುಲೋಕಸ್ಯ ಸೂರ್ಯಸ್ಯ ವಾ ದುಹಿತಾ ಪುತ್ರೀ ಏವಂಭೂತೋಷಾಃ ಪ್ರತ್ಯದರ್ಶಿ । ಸರ್ವೈಃ ಪ್ರತಿದೃಶ್ಯತೇ । ಉ ಇತಿ ಪೂರಕಃ । ಸೈಷಾ ಮಹಿ ಮಹತ್ತಮೋ ನೈಶಮಂಧಕಾರಂ । ಅಪ ಉ ಇತಿ ನಿಪಾತದ್ವಯಸಮುದಾಯೋऽಪೇತ್ಯಸ್ಯಾರ್ಥೇ । ಅಪೋ ವ್ಯಯತಿ । ಅಪವೃಣೋತಿ । ಕಿಮರ್ಥಂ । ಚಕ್ಷಸೇ ದರ್ಶನಾರ್ಥಂ । ಏವಂ ಕೃತ್ವಾ ಸೂನರೀ ಜನಾನಾಂ ಸುಷ್ಠು ನೇತ್ರ್ಯುಷಾ ಜ್ಯೋತಿಃ ಪ್ರಕಾಶಂ ಕೃಣೋತಿ । ಕರೋತಿ ॥

॥ ಪ್ರತಿಪದಾರ್ಥ ॥

**ಉಚ್ಛಂತೀ**—ತಮಸ್ಸನ್ನು ನಾಶಮಾಡುತ್ತಾ । **ಆಯತೀ**—ಬರುತ್ತಿರುವವಳೂ । **ದಿವಃ**—ದ್ಯುಲೋಕದ । **ದುಹಿತಾ**—ಪುತ್ರಿಯೂ ಆದ ಉಷೋದೇವಿಯು । **ಪ್ರತಿ ಉ ಅದರ್ಶಿ**—ಎಲ್ಲರಿಗೂ ಗೋಚರಳಾಗುತ್ತಾಳೆ । **ಚಕ್ಷಸೇ**—ದರ್ಶನಾರ್ಥವಾಗಿ । **ಮಹಿ**—ಮಹತ್ತಾದ । **ತಮಃ**—ಅಂಧಕಾರವನ್ನು । **ಅಪೋ ವ್ಯಯತಿ**—ನಾಶ ಮಾಡುತ್ತಾಳೆ । **ಸೂನರೀ**—ಜನಗಳಿಗೆ ಉತ್ತಮವಾದ ಮಾರ್ಗದರ್ಶಕಳಾದ ಉಷಸ್ಸು । **ಜ್ಯೋತಿಃ**—ಪ್ರಕಾಶ ವನ್ನು । **ಕೃಣೋತಿ**—ಉಂಟುಮಾಡುತ್ತಾಳೆ.

॥ ಭಾವಾರ್ಥ ॥

ತಮಸ್ಸನ್ನು ನಾಶಮಾಡುತ್ತಾ ಬರುತ್ತಿರುವವಳೂ ದ್ಯುಲೋಕದ ಪುತ್ರಿಯೂ ಆದ ಉಷೋದೇವಿಯು ಎಲ್ಲರಿಗೂ ಗೋಚರಿಸುತ್ತಾಳೆ ದರ್ಶನಾರ್ಥವಾಗಿ ಮಹತ್ತಾದ ಅಂಧಕಾರವನ್ನು ನಾಶಮಾಡುತ್ತಾಳೆ. ಜನಗಳಿಗೆ ಉತ್ತಮವಾದ ಮಾರ್ಗದರ್ಶಕಳಾದ ಉಷಸ್ಸು ಪ್ರಕಾಶವನ್ನುಂಟುಮಾಡುತ್ತಾಳೆ.

## English Translation

The daughter of heaven is everywhere beheld advancing and shedding light: she drives away the deep darkness that objects may meet the eye: the kind guide of man, she diffuses light.

॥ ವಿಶೇಷವಿಷಯಗಳು ॥

**ಉ**—ಇಲ್ಲಿ ಉ ಎಂಬ ನಿಪಾತವು ಪಾದಪೂರಣಾರ್ಥವಾಗಿ ಉಪಯೋಗಿಸಲ್ಪಟ್ಟಿದೆ. ಈ ಶಬ್ದಕ್ಕೆ ಯಾವ ನಿರ್ದಿಷ್ಟಾರ್ಥವೂ ಇರುವುದಿಲ್ಲ.

॥ ಸಂಹಿತಾಪಾಠಃ ॥

ಉದುಸ್ರಿಯಾಃ ಸೃಜತೇ ಸೂರ್ಯಃ ಸಚಾ ಉದ್ಯನ್ನಕ್ಷತ್ರಮರ್ಚಿವತ್ ।
ತವೇದುಷೋ ವ್ಯುಷಿ ಸೂರ್ಯಸ್ಯ ಚ ಸಂ ಭಕ್ತೇನ ಗಮೇಮಹಿ ॥ ೨ ॥

॥ ಪದಪಾಠಃ ॥

ಉತ್ । ಉಸ್ರಿಯಾಃ । ಸೃಜತೇ । ಸೂರ್ಯಃ । ಸಚಾ । ಉತ್ಽಯತ್ । ನಕ್ಷತ್ರಂ । ಅರ್ಚಿಽವತ್ ।
ತವ । ಇತ್ । ಉಷಃ । ವಿಽಉಷಿ । ಸೂರ್ಯಸ್ಯ । ಚ । ಸಂ । ಭಕ್ತೇನ । ಗಮೇಮಹಿ ॥ ೨ ॥

॥ ಸಾಯಣಭಾಷ್ಯಂ ॥

ಸೂರ್ಯಃ ಸರ್ವಸ್ಯ ಪ್ರೇರಕ ಆದಿತ್ಯ ಉಸ್ರಿಯಾ ರಶ್ಮೀನ್ ಸಚಾ ಸಹ ಯುಗಪದೇವೋತ್ಸೃಜತೇ । ಉದ್ಗಮಯತಿ । ತಥೋದ್ಯದುದ್ಗಚ್ಛತ್ ಪ್ರಾದುರ್ಭವನ್ನಕ್ಷತ್ರಂ ನಭಸಿ ದೃಶ್ಯಮಾನಂ ಗ್ರಹನಕ್ಷತ್ರಾದಿಕಮರ್ಚಿವದ್ದೀಪ್ತಿಮತ್ಕರೋತಿ । ಸೌರೇಣ ತೇಜಸಾ ಹಿ ನಕ್ತಂ ಚಂದ್ರಪ್ರಭೃತೀನಿ ನಕ್ಷತ್ರಾಣಿ ಸಂತೇ । ಸುಷುಮ್ಣಃ ಸೂರ್ಯರಶ್ಮಿಶ್ಚಂದ್ರಮಾ ಗಂಧರ್ವಃ । ವಾ. ಸಂ. ೧೮-೪೦ । ಇತಿ ಹಿ ನಿಗಮಃ । ಏವಂ ಚ ಸತಿ ಹೇ ಉಷ ಉಷೋದೇವತೇ ತವ ಸೂರ್ಯಸ್ಯ ಚ ವ್ಯುಷಿ ವಿವಾಸನೇ ಪ್ರಕಾಶನೇ ಸತಿ ಭಕ್ತೇನಾನ್ನೇನ ಸಂ ಗಮೇಮಹಿ । ವಯಂ ಸಂಗಚ್ಛೇಮಹಿ । ಇಚ್ಛಬ್ದಃ ಪೂರಕಃ ॥

॥ ಪ್ರತಿಪದಾರ್ಥ ॥

**ಸೂರ್ಯಃ**—ಸರ್ವ ಪ್ರೇರಕನಾದ ಸೂರ್ಯದೇವನು । **ಉಸ್ರಿಯಾಃ** - ತನ್ನ ರಶ್ಮಿಗಳನ್ನು । **ಸಚಾ**—ಉಷಸ್ಸಿನೊಡನೆಯೇ । **ಉತ್ ಸೃಜತೇ**—ಪ್ರಕಾಶಪಡಿಸಿ ಹರಡುತ್ತಾನೆ । **ಉದ್ಯತ್**—ಉದಯಿಸುತ್ತಾ । **ನಕ್ಷತ್ರಂ**—ನಕ್ಷತ್ರಾದಿಗಳನ್ನು । **ಅರ್ಚಿವತ್**—ಕಾಂತಿಯುತವಾಗುವಂತೆ ಮಾಡುತ್ತಾನೆ । **ಉಷಃ**—ಎಲೈ ಉಷೋದೇವಿಯೇ । **ತವ ಇತ್**— ನಿನ್ನ ಮತ್ತು । **ಸೂರ್ಯಸ್ಯ ಚ**—ಸೂರ್ಯನ । **ವ್ಯುಷಿ**—ಸಮಕಾಲಿಕವಾದ ಆವಿರ್ಭಾವವುಂಟಾದಾಗ । **ಭಕ್ತೇನ**—ಅನ್ನದೊಡನೆ । **ಸಂ ಗಮೇಮಹಿ**—ನಾವು ಹೊಂದಿಕೊಳ್ಳುವಂತಾಗಲಿ.

॥ ಭಾವಾರ್ಥ ॥

ಸರ್ವಪ್ರೇರಕನಾದ ಸೂರ್ಯದೇವನು ತನ್ನ ರಶ್ಮಿಗಳನ್ನು ಉಷಸ್ಸಿನ ಜೊತೆಯಲ್ಲಿಯೇ ಪ್ರಕಾಶಪಡಿಸಿ ಹರಡುತ್ತಾನೆ. ಉದಯಿಸುತ್ತಲೇ ನಕ್ಷತ್ರಾದಿಗಳನ್ನು ಕಾಂತಿಯುತವಾಗುವಂತೆ ಮಾಡುತ್ತಾನೆ. ಎಲೈ ಉಷೋದೇವಿಯೇ, ನಿನ್ನ ಮತ್ತು ಸೂರ್ಯನ ಸಮಕಾಲಿಕವಾದ ಆವಿರ್ಭಾವವುಂಟಾದಾಗ ನಾವು ಅನ್ನದೊಡನೆ ಹೊಂದಿಕೊಳ್ಳುವಂತಾಗಲಿ. ಎಂದರೆ ನಮಗೆ ಅನ್ನವು ದೊರಕುವಂತಾಗಲಿ.

## English Translation

At the same time the sun sends forth his rays, and, rising, renders the planets luminous: so, Ushas, upon your manifestation, and that of Surya, may we become possessed of sustenance.

॥ ಸಂಹಿತಾಪಾಠಃ ॥

ಪ್ರತಿ ತ್ವಾ ದುಹಿತರ್ದಿವ ಉಷೋ ಜೀರಾ ಅಭುತ್ಸ್ಮಹಿ ॥
ಯಾ ವಹಸಿ ಪುರು ಸ್ಪಾರ್ಹಂ ವನನ್ವತಿ ರತ್ನಂ ನ ದಾಶುಷೇ ಮಯಃ ॥ ೩ ॥

॥ ಪದಪಾಠಃ ॥

ಪ್ರತಿ । ತ್ವಾ । ದುಹಿತಃ । ದಿವಃ । ಉಷಃ । ಜೀರಾಃ । ಅಭುತ್ಸ್ಮಹಿ ।
ಯಾ । ವಹಸಿ । ಪುರು । ಸ್ಪಾರ್ಹಂ । ವನನ್ऽವತಿ । ರತ್ನಂ । ನ । ದಾಶುಷೇ । ಮಯಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ದಿವೋ ದುಹಿತರ್ದಿವೋಽಂತರಿಕ್ಷಾಜ್ಜಾಯಮಾನೇ ಹೇ ಉಷ ಉಷೋದೇವತೇ ತ್ವಾ ತ್ವಾಂ ಜೀರಾಃ ಕ್ಷಿಪ್ರಕಾರಿಣೋ ವಯಂ ಪ್ರತ್ಯಭುತ್ಸ್ಮಹಿ । ಪ್ರತಿಬೋಧ್ಯಾರೋ ಭವೇಮ । ಹೇ ವನನ್ವತಿ । ವನನಂ ಸಂಭಜನಂ ಸಂಭಕ್ತವ್ಯಂ ಧನಂ ವಾ । ತದ್ವತಿ ಯಾ ತ್ವಂ ಪುರು ಬಹು ಸ್ಪಾರ್ಹಂ ಸ್ಪೃಹಣೀಯಂ ಧನಂ ವಹಸಿ ಪ್ರಾಪಯಸಿ ದಾಶುಷೇ ಹವೀಂಷಿ ದತ್ತವತೇ ಯಜಮಾನಾಯ ರತ್ನಂ ರಮಣೀಯಂ ಧನಮಿವ ಮಯಃ ಸುಖಂ ಚ ಯಾ ತ್ವಂ ವಹಸಿ ತಾಂ ತ್ವಾಂ ಪ್ರತ್ಯಭುತ್ಸ್ಮಹೀತ್ಯನ್ವಯಃ ॥

॥ ಪ್ರತಿಪದಾರ್ಥ ॥

**ದಿವಃ ದುಹಿತಃ**—ಅಂತರಿಕ್ಷಕ್ಕೆ ಪುತ್ರಿಯಾದವಳೂ । **ವನನ್ವತಿ**—ಭೋಗಸಾಧನವಾದ ಧನವನ್ನು ಹೊಂದಿರುವವಳೂ ಆದ । **ಉಷಃ**— ಎಲೈ ಉಷೋದೇವಿಯೇ । **ಯಾ**—ಯಾವ ನೀನು । **ಪುರು**—ಅತ್ಯಧಿಕವಾದುದೂ । **ಸ್ಪಾರ್ಹಂ**—ಅತ್ಯಪೇಕ್ಷಿತವಾದುದೂ ಆದ ಧನವನ್ನು ವಹಿಸುವೆಯೋ । **ದಾಶುಷೇ**— ಹವಿಸ್ಸನ್ನರ್ಪಿಸುವ ಯಜಮಾನನಿಗೆ । **ರತ್ನಂ ನ**—ರಮಣೀಯವಾದ ಧನದಂತೆಯೇ । **ಮಯಃ**—ಸುಖವನ್ನೂ ಒದಗಿಸುವೆಯೋ । **ತ್ವಾ**—ಅಂತಹ ನಿನ್ನನ್ನು । **ಜೀರಾಃ**—ಕ್ಷಿಪ್ರಕಾರಿಗಳಾದ ನಾವು । **ಪ್ರತಿ ಅಭುತ್ಸ್ಮಹಿ**—ಎಚ್ಚರಗೊಳಿಸುವ ಶಕ್ತಿಯುಳ್ಳವರಾಗಲಿ.

॥ ಭಾವಾರ್ಥ ॥

ಅಂತರಿಕ್ಷಕ್ಕೆ ಪುತ್ರಿಯಾದವಳೂ, ಭೋಗಸಾಧನವಾದ ಧನವನ್ನು ಹೊಂದಿರುವವಳೂ ಆದ ಎಲೈ ಉಷೋದೇವಿಯೇ, ಯಾವ ನೀನು ಅತ್ಯಧಿಕವಾದುದೂ ಅತ್ಯಪೇಕ್ಷಿತವಾದುದೂ ಆದ ಧನವನ್ನು ವಹಿಸುವೆಯೋ ಹವಿಸ್ಸನ್ನರ್ಪಿ

ಸುವ ಯಜಮಾನನಿಗೆ ರಮಣೀಯವಾದ ಧನದಂತೆಯೇ ಸುಖವನ್ನೂ ಒದಗಿಸುವೆಯೋ ಅಂತಹ ನಿನ್ನನ್ನು ಕ್ಷಿಪ್ರಕಾರಿಗಳಾದ ನಾವು ಎಚ್ಚರಗೊಳಿಸುವ ಶಕ್ತಿಯುಳ್ಳವರಾಗುವಂತೆ ಅನುಗ್ರಹಿಸು.

## English Translation

May we, prompt adorers, awaken you, Ushas, daughter of heaven bountiful divinity, who bring ample and desirable (wealth) and happiness, like riches, to the donor (of the oblation).

॥ ಸಂಹಿತಾಪಾಠಃ ॥

ಉಚ್ಛಂತೀ ಯಾ ಕೃಣೋಷಿ ಮಂಹನಾ ಮಹಿ ಪ್ರಖ್ಯೈ ದೇವಿ ಸ್ವರ್ದೃಶೇ ॥
ತಸ್ಯಾಸ್ತೇ ರತ್ನಭಾಜ ಈಮಹೇ ವಯಂ ಸ್ಯಾಮ ಮಾತುರ್ನ ಸೂನವಃ ॥೪॥

॥ ಪದಪಾಠಃ ॥

ಉಚ್ಛಂತೀ । ಯಾ । ಕೃಣೋಷಿ । ಮಂಹನಾ । ಮಹಿ । ಪ್ರಽಖ್ಯೈ । ದೇವಿ । ಸ್ವಃ । ದೃಶೇ ।
ತಸ್ಯಾಃ । ತೇ । ರತ್ನಽಭಾಜಃ । ಈಮಹೇ । ವಯಂ । ಸ್ಯಾಮ । ಮಾತುಃ । ನ । ಸೂನವಃ ॥ ೪ ॥

॥ ಸಾಯಭಾಷ್ಯಂ ॥

ಹೇ ಮಹಿ ಮಹತಿ ದೇವಿ ದಾನಾದಿಗುಣಯುಕ್ತ ಉಷೋದೇವತೇ ವ್ಯುಚ್ಛಂತೀ ತಮಾಂಸಿ ವರ್ಜಯಂತೀ ಮಂಹನಾ ಮಹಿಮ್ನಾ ಯುಕ್ತಾ । ಯದ್ವಾ । ಮಂಹತಿರ್ದಾನಕರ್ಮಾ । ದಾನಯುಕ್ತಾ। ಯಾ ತ್ವಂ ಸ್ವಃ ಸರ್ವಂ ಜಗತ್ ಪ್ರಖ್ಯೈ ಪ್ರಬೋಧನಾರ್ಥಂ ದೃಶೇ ದರ್ಶನಾರ್ಥಂ ಚ ಕೃಣೋಷಿ ಕರೋಷಿ ತಸ್ಯಾಸ್ತಾದೃಶ್ಯಾ ರತ್ನಭಾಜೋ ರತ್ನಾನಾಂ ರಮಣೀಯಾನಾಂ ಧನಾನಾಂ ಭಾಜಯಿತ್ರ್ಯಾಃ ಸೇವಯಿತ್ರ್ಯಾ ಈಮಹೇ। ಯಾಚಾಮಹೇ। ಕಿಂ। ರತ್ನಭಾಜ ಇತಿ ಸಮಭಿವ್ಯಾಹಾರಾದ್ರತ್ನಾನೀತಿ ಗಮ್ಯತೇ। ಅಪಿ ಚ ವಯಂ ತವ ಪ್ರಿಯತಮಾಃ ಸ್ಯಾಮ । ಭವೇಮ । ಮಾತುರ್ನ ಸೂನವಃ । ಯಥಾ ಮಾತುರ್ಜನನ್ಯಾಃ ಸೂನವಃ ಪುತ್ರಾಃ ಪ್ರಿಯತಮಾ ಭವಂತಿ ತದ್ವತ್ ॥

॥ ಪ್ರತಿಪದಾರ್ಥ ॥

ಮಹಿ—ಮಹಾತ್ಮಳಾದ । ದೇವಿ-ಎಲೈ ಉಷೋದೇವಿಯೇ । ಮಂಹನಾ—ಮಹತ್ವದಿಂದ ಕೂಡಿದವಳೂ। ಉಚ್ಛಂತೀ—ತಮಸ್ಸನ್ನು ನಾಶಪಡಿಸುವವಳೂ ಆದ। ಯಾ-ಯಾವ ನೀನು। ಸ್ವಃ-ಸಕಲ ಜಗತ್ತನ್ನೂ। ಪ್ರಖ್ಯೈ-ಪ್ರಬೋಧನಾರ್ಥವಾಗಿಯೂ । ದೃಶೇ—ದರ್ಶನಾರ್ಥವಾಗಿಯೂ । ಕೃಣೋಷಿ—ಶಕ್ತವಾಗುವಂತೆ ಮಾಡುವೆಯೋ

ತಸ್ಯಾಃ—ಅಂತಹವಳೂ । ರತ್ನಭಾಜಃ—ರಮಣೀಯವಾದ ಧನಯುಕ್ತಳೂ ಆದ । ತೇ—ನಿನಗೆ । ಸೂನವಃ—ಮಕ್ಕಳು । ಮಾತುಃ ನ—ತಾಯಿಯರಿಗೆ ಪ್ರೀತಿಪಾತ್ರರಾಗಿರುವಂತೆ । ವಯಂ—ನಾವು । ಸ್ಯಾಮ ಪ್ರೀತಿಪಾತ್ರರಾಗಿರೋಣವೆಂದು । ಈಮಹೇ—ಯಾಚಿಸುತ್ತೇವೆ.

॥ ಭಾವಾರ್ಥ ॥

ಮಹಾತ್ಮಳಾದ ಎಲೈ ಉಷೋದೇವಿಯೇ, ಮಹತ್ತ್ವದಿಂದ ಕೂಡಿದವಳೂ, ತಮಸ್ಸನ್ನು ನಾಶಪಡಿಸುವವಳೂ ಆದ ಯಾವ ನೀನು ಸಕಲ ಜಗತ್ತನ್ನೂ ಪ್ರಬೋಧನಾರ್ಥವಾಗಿಯೂ ದರ್ಶನಾರ್ಥವಾಗಿಯೂ ಶಕ್ತವಾಗುವಂತೆ ಮಾಡುವೆಯೋ ಅಂತಹವಳೂ ರಮಣೀಯವಾದ ಧನಯುಕ್ತಳೂ ಆದ ನಿನಗೆ ಮಕ್ಕಳು ತಾಯಿಯರಿಗೆ ಪ್ರೀತಿಪಾತ್ರರಾಗಿರುವಂತೆ ನಾವು ಪ್ರೀತಿಪಾತ್ರರಾಗಿರೋಣವೆಂದು ಯಾಚಿಸುತ್ತೇವೆ.

## English Translation

Mighty goddess, who, scattering darkness, are endowed with power to arouse the world and make it visible, we pray that we may be dear to you, the distributress of wealth, as sons are to a mother.

॥ ಸಂಹಿತಾಪಾಠಃ ॥

ತಚ್ಚಿತ್ರಂ ರಾಧ ಆ ಭರೋಷೋ ಯದ್ದೀರ್ಘಶ್ರುತ್ತಮಂ ।
ಯತ್ತೇ ದಿವೋ ದುಹಿತರ್ಮರ್ತಭೋಜನಂ ತದ್ರಾಸ್ವ ಭುನಜಾಮಹೈ ॥೫॥

॥ ಪದಪಾಠಃ ॥

ತತ್ । ಚಿತ್ರಂ । ರಾಧಃ । ಆ । ಭರ । ಉಷಃ । ಯತ್ । ದೀರ್ಘಶ್ರುತ್ऽತಮಂ ।
ಯತ್ । ತೇ । ದಿವಃ । ದುಹಿತಃ । ಮರ್ತऽಭೋಜನಂ । ತತ್ । ರಾಸ್ವ । ಭುನಜಾಮಹೈ ॥ ೫ ॥

॥ ಸಾಯಣಭಾಷ್ಯಂ ॥

ಹೇ ಉಷಃ ತಚ್ಚಿತ್ರಂ ಚಾಯನೀಯಂ ರಾಧೋ ಧನಮಾ ಭರ । ಆಹರ । ಅಸ್ಮಭ್ಯಂ ಪ್ರಯಚ್ಛ । ಯದ್ಧನಂ ದೀರ್ಘಶ್ರುತ್ತಮಂ ದೇಶಕಾಲಯೋರ್ವಿಪ್ರಕರ್ಷೇಽಪ್ಯತಿಶಯೇನ ಶ್ರೋತವ್ಯಂ । ಅಪಿ ಚ ಹೇ ದಿವೋ ದುಹಿತಃ ತೇ ತವ ತ್ವಯಾ ದೇಯಂ ಮರ್ತಭೋಜನಂ ಮರ್ತಾನಾಂ ಮನುಷ್ಯಾಣಾಂ ಭೋಗಯೋಗ್ಯಂ ಯದನ್ನಮಸ್ತಿ ತದ್ರಾಸ್ವ । ದೇಹ್ಯಸ್ಮಭ್ಯಂ । ವಯಂ ಚ ತ್ವದ್ದತ್ತಂ ಧನಮನ್ನಂ ಚ ಭುನಜಾಮಹೈ । ಅಭ್ಯವಹರೇಮ ॥

॥ ಪ್ರತಿಪದಾರ್ಥ ॥

**ಉಷಃ**—ಎಲೈ ಉಷೋದೇವಿಯೇ | **ಯತ್**—ಯಾವ ಧನವು | **ದೀರ್ಘಶ್ರುತ್ತಮಂ**–ಅತಿ ದೀರ್ಘಕಾಲ ಪ್ರಸಿದ್ಧವಾಗಿರುವುದೋ | **ತತ್**—ಅಂತಹುದೂ | **ಚಿತ್ರಂ**—ಆಕರ್ಷಕವಾದುದೂ ಆದ | **ರಾಧಃ**—ಧನವನ್ನು | **ಆಭರ**—ತಂದೊದಗಿಸು | **ದಿವಃ**—ದ್ಯುಲೋಕಕ್ಕೆ | **ದುಹಿತಃ**—ಪುತ್ರಿಯಾದ ಎಲೈ ಉಷಸ್ಸೇ | **ತೇ**—ನಿನ್ನಿಂದ ಕೊಡಲ್ಪಡಬಹುದಾದುದೂ | **ಮರ್ತಭೋಜನಂ**—ಮಾನವರ ಭೋಗಕ್ಕೆ ಯೋಗ್ಯವಾದುದೂ ಆದ | **ಯತ್**—ಯಾವ ಅನ್ನವುಂಟೋ | **ತತ್**—ಆ ಅನ್ನವನ್ನು | **ರಾಸ್ವ**—ನಮಗೆ ಕೊಡು | **ಭುನಜಾಮಹೈ**—ನಾವು ಅದನ್ನು ಅನುಭವಿಸುವಂತಾಗಲಿ.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ಯಾವ ಧನವು ಅತಿ ದೀರ್ಘಕಾಲ ಪ್ರಸಿದ್ಧವಾಗಿರುವುದೋ, ಅಂತಹುದೂ ಆಕರ್ಷಕವಾದುದೂ ಆದ ಧನವನ್ನು ತಂದೊದಗಿಸು. ದ್ಯುಲೋಕಕ್ಕೆ ಪುತ್ರಿಯಾದ ಎಲೈ ಉಷಸ್ಸೇ, ನಿನ್ನಿಂದ ಕೊಡಲ್ಪಡಬಹುದಾದುದೂ, ಮಾನವರ ಭೋಗಕ್ಕೆ ಯೋಗ್ಯವಾದುದೂ ಆದ ಯಾವ ಅನ್ನವುಂಟೋ ಆ ಅನ್ನವನ್ನು ನಮಗೆ ಕೊಡು. ನಾವು ಅದನ್ನು ಅನುಭವಿಸುವಂತಾಗಲಿ.

English Translation

Bring Ushas, such wondrous wealth as may be long renowned bestow, daughter of heaven, that sustenance which is fit for mortals, such as we may enjoy.

॥ ಸಂಹಿತಾಪಾಠಃ ॥

ಶ್ರವಃ ಸೂರಿಭ್ಯೋ ಅಮೃತಂ ವಸುತ್ವನಂ ವಾಜಾ ಅಸ್ಮಭ್ಯಂ ಗೋಮತಃ ।
ಚೋದಯಿತ್ರೀ ಮಘೋನಃ ಸೂನೃತಾವತ್ಯುಷಾ ಉಚ್ಛದಪ ಸ್ರಿಧಃ ॥ ೬ ॥

॥ ಪದಪಾಠಃ ॥

ಶ್ರವಃ । ಸೂರಿಽಭ್ಯಃ । ಅಮೃತಂ । ವಸುಽತ್ವನಂ । ವಾಜಾನ್ । ಅಸ್ಮಭ್ಯಂ । ಗೋಽಮತಃ ।
ಚೋದಯಿತ್ರೀ । ಮಘೋನಃ । ಸೂನೃತಾಽವತೀ । ಉಷಾಃ । ಉಚ್ಛತ್ । ಅಪ । ಸ್ರಿಧಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಉಷಃ ಸೂರಿಭ್ಯಃ ಸ್ತೋತೃಭ್ಯೋಽಸ್ಮಭ್ಯಮಮೃತಂ ಮರಣರಹಿತಂ ನಿತ್ಯಂ ವಸುತ್ವನಂ ವಾಸಕಂ ವಸುತ್ವಯುಕ್ತಂ ವಾ ಶ್ರವಃ ಶ್ರವಣೀಯಂ ಯಶೋ ರಾಸ್ವೇತ್ಯನುಷಂಗಃ । ತಥಾ ಗೋಮತೋಃ

**ಬಹುಭಿರ್ಗೋಭಿರ್ಯುಕ್ತಾನ್ವಾಜಾನನ್ನಾನಿ ಚಾಸ್ಮಭ್ಯಂ ರಾಸ್ವ । ಶಿಷ್ಟಃ ಪರೋಕ್ಷಕೃತಃ । ಮಘೋನೋ ಹವಿಷ್ಮತೋ ಯಜಮಾನಸ್ಯ ಚೋದಯಿತ್ರೀ ಪ್ರೇರಯಿತ್ರೀ ಸೂನೃತಾವತೀ । ಪ್ರಿಯಸತ್ಯಾತ್ಮಿಕಾ ವಾಕ್ಸೂನೃತಾ । ತದ್ವತ್ಯುಷಾಃ ಸ್ರಿಧಃ ಶೋಷಕಾಞ್ಛತ್ರೂನಪೋಚ್ಛತ್ । ಅಪಗಮಯತು ॥**

॥ ಪ್ರತಿಪದಾರ್ಥ ॥

(ಎಲೈ ಉಷೋದೇವಿಯೇ) **ಸೂರಿಭ್ಯಃ**—ಸ್ತೋತೃಗಳಾದ ನಮಗೆ । **ಅಮೃತಂ**—ನಿತ್ಯವಾದುದೂ । **ವಸುತ್ವನಂ**—ಧನಯುಕ್ತವಾದುದೂ ಆದ । **ಶ್ರವಃ**—ಯಶಸ್ಸನ್ನು ಕೊಡು । **ಗೋಮತಃ**—ಗೋವುಗಳಿಂದ ಕೂಡಿದ । **ವಾಜಾನ್**—ಅನ್ನಗಳನ್ನು । **ಅಸ್ಮಭ್ಯಂ**—ನಮಗೆ ಕೊಡು । **ಮಘೋನಃ**—ಹವಿಸ್ಸನ್ನು ಹೊಂದಿರುವ ಯಜಮಾನನಿಗೆ । **ಚೋದಯಿತ್ರೀ**—ಪ್ರೇರಕಳೂ । **ಸೂನೃತಾವತೀ**—ಉತ್ತಮವಾದ ಮಾರ್ಗದರ್ಶಕಳೂ ಆದ । **ಉಷಾಃ**—ಉಷೋದೇವಿಯು । **ಸ್ರಿಧಃ**—ಹಿಂಸಕರಾದ ಶತ್ರುಗಳನ್ನು । **ಅಪ ಉಚ್ಛತ್**—ದೂರಕ್ಕೆ ಓಡಿಸಲಿ

॥ ಭಾವಾರ್ಥ ॥

ಎಲೈ ಉಷೋದೇವಿಯೇ, ಸ್ತೋತೃಗಳಾದ ನಮಗೆ ನಿತ್ಯವಾದುದೂ ಧನಯುಕ್ತವಾದುದೂ ಆದ ಯಶಸ್ಸನ್ನು ಕೊಡು. ಗೋವುಗಳಿಂದ ಕೂಡಿದ ಅನ್ನವನ್ನು ನಮಗೆ ಕೊಡು ಹವಿಸ್ಸನ್ನು ಹೊಂದಿರುವ ಯಜಮಾನನಿಗೆ ಪ್ರೇರಕಳೂ ಉತ್ತಮವಾದ ಮಾರ್ಗದರ್ಶಕಳೂ ಆದ ಉಷೋದೇವಿಯು ಹಿಂಸಕರಾದ ಶತ್ರುಗಳನ್ನು ದೂರಕ್ಕೆ ಓಡಿಸಲಿ.

## English Translation

Grant to the pious immortal fame, conjoined with affluence: grant to us food and cattle: and may Ushas, the encourager of the wealthy (sacrificer), the speaker of truth, drive away our foes.



## ಎಂಭತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಇಂದ್ರಾವರುಣೇತಿ ದಶರ್ಚಂ ದ್ವಾದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ಜಾಗತಂ । ಇದಮಾದೀನಿ ಚತ್ವಾರಿ ಸೂಕ್ತಾನೀಂದ್ರಾವರುಣದೇವತಾನಿ । ತಥಾ ಚಾನುಕ್ರಾಂತಂ । ಇಂದ್ರಾವರುಣಾ ದಶೈಂದ್ರಾವರುಣಂ ಹ ಜಾಗತಂ ತ್ವಿತಿ ॥ ತೃತೀಯೇ ಸವನ ಉಕ್ಥ್ಯೇ ಪ್ರಶಾಸ್ತುಃ ಶಸ್ತ್ರ ಏತತ್ಸೂಕ್ತಂ । ಸೂತ್ರಿತಂ ಚ । ಇಂದ್ರಾವರುಣಾ ಯುವಮಧ್ವರಾಯ ನ ಇತಿ ॥**

ಅನುವಾದವು—ಇಂದ್ರಾವರುಣಾ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಇಂದ್ರಾವರುಣರು ದೇವತೆಗಳು; ಜಗತೀಛಂದಸ್ಸು. ಈ ಸೂಕ್ತದಿಂದ ಮುಂದಿನ ನಾಲ್ಕು ಸೂಕ್ತಗಳು ಇಂದ್ರಾವರುಣದೇವತಾಕವು. ಅನುಕ್ರಮಣಿಕೆ

ಯಲ್ಲಿ—ಇಂದ್ರಾವರುಣಾ ದಶ್ಯೈಂದ್ರಾವರುಣಂ ಹ ಜಾಗತಂ ತು ಎಂದು ಹೇಳಿರುವುದು. ಉಕ್ಥ್ಯವೆಂಬ ಯಾಗದಲ್ಲಿ ತೃತೀಯಸವನಕಾಲದಲ್ಲಿ ಪ್ರಶಾಸ್ತ್ರವೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ಇಂದ್ರಾವರುಣಾ ಯುವಮಾ ವಾಂ ರಾಜಾನೌ ಎಂಬ ಸೂತ್ರದಿಂದ (ಆ. ೬-೧) ವಿವೃತವಾಗಿರುವುದು

## ಸೂಕ್ತ ೮೨

ಮಂಡಲ—೭ ॥ ಅನುವಾಕ—೫ ॥ ಸೂಕ್ತ—೮೨ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೨, ೩ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಾವರುಣೌ ॥
ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ಇಂದ್ರಾವರುಣಾ ಯುವಮಧ್ವರಾಯ ನೋ ವಿಶೇ ಜನಾಯ ಮಹಿ ಶರ್ಮ ಯಚ್ಛತಂ ।
ದೀರ್ಘಪ್ರಯಜ್ಯುಮತಿ ಯೋ ವನುಷ್ಯತಿ ವಯಂ ಜಯೇಮ ಪೃತನಾಸು ದೂಢ್ಯಃ ॥ ೧ ॥

॥ ಪದಪಾಠಃ ॥

ಇಂದ್ರಾವರುಣಾ । ಯುವಂ । ಅಧ್ವರಾಯ । ನಃ । ವಿಶೇ । ಜನಾಯ । ಮಹಿ । ಶರ್ಮ । ಯಚ್ಛತಂ ।
ದೀರ್ಘಽಪ್ರಯಜ್ಯುಂ । ಅತಿ । ಯಃ । ವನುಷ್ಯತಿ ವಯಂ । ಜಯೇಮ । ಪೃತನಾಸು । ದುಃಽಧ್ಯಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೇಂದ್ರಾವರುಣೌ ಯುವಂ ಯುವಾಂ ನೋಽಸ್ಮಾಕಂ ವಿಶೇ ನಿವೇಶಯಿತ್ರೇ ಪರಿಚಾರಕಾಯ ಜನಾಯ ಪುತ್ರಪೌತ್ರಾದಿಲಕ್ಷಣಾಯಾಧ್ವರಾಯ ಯಜ್ಞಾನುಷ್ಠಾನಾರ್ಥಂ ಮಹಿ ಮಹಚ್ಛರ್ಮ ಗೃಹಂ ಸುಖಂ ವಾ ಯಚ್ಛತಂ । ಪ್ರಯಚ್ಛತಂ । ಅಪಿ ಚ ದೀರ್ಘಪ್ರಯಜ್ಯುಂ ದೀರ್ಘಪ್ರತತಯಜ್ಞಮಸ್ಮದೀಯಂ ಜನಂ ಯಃ ಶತ್ರುರತಿ ವನುಷ್ಯತಿ ಅತಿಜಿಘಾಂಸತಿ ಪೃತನಾಸು ಸಂಗ್ರಾಮೇಷು ದೂಢ್ಯೋ ದುರ್ಧಿಯೋ ದುಷ್ಟಾಭಿಸಂಧೀಂಸ್ತಾಞ್ಛತ್ರೂನ್ವಯಂ ಜಯೇಮ । ಅಭಿಭವೇಮ ॥

॥ ಪ್ರತಿಪದಾರ್ಥ ॥

**ಇಂದ್ರಾವರುಣಾ**—ಎಲೈ ಇಂದ್ರ ಮತ್ತು ವರುಣದೇವತೆಗಳೇ | **ಯುವಂ**—ನೀವು | **ನಃ**—ನಮಗೋಸ್ಕರ| **ವಿಶೇ**—ಪೂಜೆಮಾಡತಕ್ಕ | **ಜನಾಯ**—ಪುರುಷನಿಗೆ | **ಅಧ್ವರಾಯ**–ಯಜ್ಞಕ್ಕೆ ಅನುಕೂಲವಾಗುವಂತೆ | **ಮಹಿ**–ಮಹತ್ತಾದ | **ಶರ್ಮ**—ಗೃಹವನ್ನು | **ಯಚ್ಛತಂ**—ಕೊಡಿರಿ | **ದೀರ್ಘಪ್ರಯಜ್ಯುಂ**—ದೀರ್ಘಕಾಲ ಯಜ್ಞದಲ್ಲಿ ನಿರತನಾಗಿರುವ ನಮ್ಮ ಪುರುಷನನ್ನು | **ಯಃ**—ಯಾವ ಶತ್ರುವು | **ಅತಿ ವನುಷ್ಯತಿ**—ಅತಿಯಾಗಿ ಹಿಂಸಿಸುವನೋ| **ಪೃತನಾಸು**—ಸಂಗ್ರಾಮಗಳಲ್ಲಿ | **ದೂಢ್ಯಃ**—ದುಷ್ಟಬುದ್ಧಿಯನ್ನು ಪ್ರಕಟಿಸುವ ಅಂತಹ ಶತ್ರುಗಳನ್ನು | **ವಯಂ**—ನಾವು | **ಜಯೇಮ**—ಜಯಿಸುವಂತಾಗಲಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣದೇವತೆಗಳೇ, ನಮಗಾಗಿ ಪೂಜೆಮಾಡತಕ್ಕ ಪುರುಷನಿಗೆ ಯಜ್ಞಕ್ಕೆ ಅನುಕೂಲವಾಗುವಂತೆ ಮಹತ್ತಾದ ಗೃಹವನ್ನು ಕೊಡಿರಿ. ದೀರ್ಘಕಾಲ ಯಜ್ಞದಲ್ಲಿ ನಿರತನಾಗಿರುವ ನಮ್ಮ ಪುರುಷನನ್ನು ಯಾವ ಶತ್ರುವು ಅತಿಯಾಗಿ ಹಿಂಸಿಸುವನೋ, ಸಂಗ್ರಾಮಗಳಲ್ಲಿ ದುಷ್ಟಬುದ್ಧಿಯನ್ನು ಪ್ರಕಟಿಸುವ ಅಂತಹ ಶತ್ರುಗಳನ್ನು ನಾವು ಜಯಿಸುವಂತಾಗಲಿ.

## English Translation

Indra and Varuna, bestow upon this man, our employer, a spacious chamber for (the celebration of) the sacrifice; and may we subdue in conflicts such evil-minded persons as may seek to injure him who has been long engaged (in your adoration).

॥ ವಿಶೇಷವಿಷಯಗಳು ॥

**ವನುಷ್ಯತಿ**—ಈ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳುವಾಗ ಪ್ರಕೃತ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು ಋಕ್ಕಿನ ಉತ್ತರಾರ್ಧಕ್ಕೆ ನಿರ್ವಚನವನ್ನು ಹೇಳಿದಾರೆ.

> **ವನುಷ್ಯತಿ | ವನುಷ್ಯತಿರ್ಹಂತಿಕರ್ಮಾನವಗತಸಂಸ್ಕಾರೋ ಭವತಿ | ವನುಯಾಮ ವನುಷ್ಯತಃ ಇತ್ಯಪಿ ನಿಗಮೋ ಭವತಿ | ದೀರ್ಘಪ್ರಯುಜ್ಯುಮತಿ ಯೋ ವನುಷ್ಯತಿ ವಯಂ ಜಯೇಮ ಪೃತನಾಸು ದೂಢ್ಯಃ | ದೀರ್ಘಪ್ರತತಯಜ್ಞಮಭಿಜಿಘಾಂಸತಿ ಯೋ ವಯಂ ತಂ ಜಯೇಮ ಪೃತನಾಸು ದೂಢ್ಯಂ ದುರ್ಧಿಯಂ ಪಾಪಧಿಯಂ | ಪಾಪಃ ಪಾತಾಪೇಯಾನಾಂ ಪಾಪತ್ಯಮಾನೋಽವಾಙೇವ ಪತತೀತಿ ವಾ ಪಾಪತ್ಯತೇರ್ವಾ ಸ್ಯಾತ್ ||**
>
> (ನಿ. ೫-೨)

ವನುಷ್ಯತಿ ಶಬ್ದಕ್ಕೆ ಹಿಂಸಿಸುವುದು, ಕೊಲ್ಲುವುದು ಎಂದರ್ಥವು ಈ ಶಬ್ದವು ಹೇಗೆ ನಿಷ್ಪನ್ನವಾಗುವುದೆಂಬುದನ್ನು ವ್ಯಾಕರಣಬದ್ಧವಾಗಿ ತಿಳಿಯಲಾಗುವುದಿಲ್ಲ. **ವನುಯಾಮ ವನುಷ್ಯತಃ** ಎಂಬುದು ಶ್ರುತಿವಾಕ್ಯದ ಉದಾಹರಣೆಯು ಎಂದರೆ ಈ ಶಬ್ದವು—

ತ್ವಯಾ ವಯಂ ಮಘವನ್ ಪೂರ್ವ್ಯೇ ಧನ ಇಂದ್ರತ್ವೋತಾಃ ಸಾಸಹ್ಯಾಮ ಪೃತನ್ಯತೋ ವನು-
ಯಾಮ ವನುಷ್ಯತಃ ।

(ಋ. ಸಂ. ೧-೧೩೨-೧)

ಅಸ್ಮಾಕೇಭಿರ್ನೃಭಿರ್ವಯಂ ಸಾಸಹ್ಯಾಮ ಪೃತನ್ಯತೋ ವನುಯಾಮ ವನುಷ್ಯತೋ ನಭಂತಾ-
ಮನ್ಯಕೇ ಸಮೇ ।

(ಋ. ಸಂ. ೮-೪೦-೭)

ಎಂಬ ಋಕ್ಕುಗಳಲ್ಲಿ ಉಕ್ತವಾಗಿರುವುದು. ಯಾರು ನಮ್ಮನ್ನು ಹಿಂಸಿಸಲಿಚ್ಛಿಸುವರೋ ಅವರನ್ನು ನಾವು ಕೊಲ್ಲುವಂತಾಗಲಿ ಎಂದು ಈ ವಾಕ್ಯದ ಅರ್ಥವು. ಪ್ರಕೃತಋಕ್ಕಿನಲ್ಲಿರುವ,

ದೀರ್ಘಪ್ರಯಜ್ಯುಮತಿ ಯೋ ವನುಷ್ಯತಿ ವಯಂ ಜಯೇಮ ಪೃತನಾಸು ದೂಢ್ಯಃ ।

(ಋ. ಸಂ. ೭-೮೨-೧)

ಎಂಬ ವಾಕ್ಯಕ್ಕೆ ದೀರ್ಘಕಾಲ ಯಜ್ಞದಲ್ಲಿ ನಿರತವಾಗಿರುವ ನಮ್ಮನ್ನು ಯಾವ ಪುರುಷನು ಹಿಂಸಿಸಲಿಚ್ಛಿಸುವನೋ ಅವನನ್ನು ನಾವು ಯುದ್ಧದಲ್ಲಿ ಜಯಿಸುವಂತಾಗಲಿ ಎಂದು ಅರ್ಥವು. ದೀರ್ಘಪ್ರಯಜ್ಯುಂ ಎಂಬ ಶಬ್ದಕ್ಕೆ **ದೀರ್ಘ ಪ್ರತತಯಜ್ಞಂ**—ದೀರ್ಘಕಾಲ ವಿಸ್ತೃತವಾಗಿ ನಡೆಯುತ್ತಿರುವ ಯಜ್ಞದಲ್ಲಿ ನಿರತನಾಗಿರುವ ಎಂದರ್ಥವು. ಇಂತಹ ನಮ್ಮನ್ನು ಹಿಂಸೆ ಮಾಡಬೇಕೆಂದು ಯಾವ ಪುರುಷನು ಬಯಸುವನೋ ಅಂತಹ ಕೆಟ್ಟಬುದ್ಧಿಯುಳ್ಳ, ಪಾಪಬುದ್ಧಿಯುಳ್ಳ ಪುರುಷನನ್ನು ನಾವು ಯುದ್ಧದಲ್ಲಿ ಜಯಿಸುವಂತಾಗಲಿ. **ದೂಢ್ಯಂ** ಎಂದರೆ **ದುರ್ಧಿಯಂ ಪಾಪಧಿಯಂ** ಕೆಟ್ಟ ಬುದ್ಧಿಯುಳ್ಳ, ಪಾಪಕಾರ್ಯದಲ್ಲಿ ಆಸಕ್ತನಾಗಿರುವ, ಎಂದರ್ಥವು. **ಪಾಪಃ ಪಾತಾಪೇಯಾನಾಂ** ಪಾನಮಾಡುವುದಕ್ಕೆ ಯೋಗ್ಯವಲ್ಲದ (ಮದ್ಯಾದಿಗಳನ್ನು) ಪಾನೀಯವನ್ನು ಪಾನಮಾಡುವವನಾದ್ದರಿಂದ ಅಂತಹ ಪುರುಷನಿಗೆ **ಪಾಪಃ** ಎಂದು ಹೆಸರು. ಅಥವಾ ಕೆಟ್ಟ ಕೆಲಸವನ್ನು ಮಾಡುವ ಪುರುಷನು ಪುನಃಪುನಃ ಅಧೋಗತಿಗೆ ಇಳಿಯುವವನಾದ್ದರಿಂದ ಅವನಿಗೆ **ಪಾಪಃ** ಎಂದು ಹೆಸರು. ಅಥವಾ ಪಾಪಶಬ್ದವು ಪತ್-ಬೀಳು ಎಂಬ ಧಾತುವಿನಿಂದ ನಿಷ್ಪನ್ನವಾಗಬಹುದು ಎಂದು ನಿರ್ವಚನದ ಮುಖ್ಯಾರ್ಥವು.

। ಸಂಹಿತಾಪಾಠಃ ।

ಸಮ್ರಾಳನ್ಯಃ ಸ್ವರಾಳನ್ಯ ಉಚ್ಯತೇ ವಾಂ ಮಹಾಂತಾವಿಂದ್ರಾವರುಣಾ
ಮಹಾವಸೂ ।
ವಿಶ್ವೇ ದೇವಾಸಃ ಪರಮೇ ವ್ಯೋಮನಿ ಸಂ ವಾಮೋಜೋ ವೃಷಣಾ ಸಂ
ಬಲಂ ದಧುಃ ॥ ೨ ॥

॥ ಪದಪಾಠಃ ॥

ಸಂಽರಾಟ್ । ಅನ್ಯಃ । ಸ್ವಽರಾಟ್ । ಅನ್ಯಃ । ಉಚ್ಯತೇ । ವಾಂ । ಮಹಾಂತೌ । ಇಂದ್ರಾವರುಣಾ ।
ಮಹಾವಸೂ ಇತಿ ಮಹಾಽವಸೂ ।

ವಿಶ್ವೇ । ದೇವಾಸಃ । ಪರಮೇ । ವಿಽಓಮನಿ । ಸಂ । ವಾಂ । ಓಜಃ । ವೃಷಣಾ । ಸಂ । ಬಲಂ । ದಧುಃ ॥

॥ ಸಾಯಣಭಾಷ್ಯಂ ॥

ದ್ವಿತೀಯಃ ಪಾದಃ ಪರೋಕ್ಷಕೃತಃ ಶಿಷ್ಟಾಃ ಪ್ರತ್ಯಕ್ಷಕೃತಾಃ । ಹೇ ಇಂದ್ರಾವರುಣೌ ವಾಂ ಯುವಯೋರ್ಮಧ್ಯೇಽನ್ಯ ಏಕೋ ವರುಣಃ ಸಮ್ರಾಟ್ ಸಮ್ಯಗ್ರಾಜಮಾನ ಇತ್ಯುಚ್ಯತೇ । ತಾ ಸಮ್ರಾಜಾ ಘೃತಾಸುತೀ । ಋ. ೨-೪೧-೬ । ಇತ್ಯಾದಿಷು ಕೀರ್ತ್ಯತೇ । ಅನ್ಯ ಇಂದ್ರಃ ಸ್ವರಾಟ್ ಸ್ವಯಮೇವಾನ್ಯನಿರಪೇಕ್ಷಯೈವ ರಾಜಮಾನ ಇತ್ಯುಚ್ಯತೇ । ಸ್ವರಾಳಿಂದ್ರೋ ದಮೇ । ಋ. ೧-೬೧-೯ । ಇತ್ಯಾದಿಷು ಕೀರ್ತ್ಯತೇ । ತಥಾವಿಧಾವಿಂದ್ರಾವರುಣೇಂದ್ರಾವರುಣೌ ಮಹಾಂತೌ ಗುಣೈರಧಿಕೌ ಮಹಾವಸೂ ಮಹಾಧನೌ ಚ ಭವತಃ । ಹೇ ವೃಷಣಾ ಕಾಮಾನಾಂ ವರ್ಷಿತಾರಾವಿಂದ್ರಾವರುಣೌ ವಾಂ ಯುವಾಂ ಪರಮೇ ವ್ಯೋಮನ್ಯುತ್ಕೃಷ್ಟ ಆಕಾಶೇ ವಿಶ್ವೇ ದೇವಾಸಃ ಸರ್ವೇ ದೇವಾ ಓಜಃ ಸಂ ದಧುಃ । ಸಮಯೋಜಯನ್ । ಶರೀರದಾರ್ಢ್ಯಾಯ । ತದ್ಧೇತುಭೂತಂ ತದೋಜ ಇತ್ಯುಚ್ಯತೇ । ಸ್ತೂಯತೇ ಚ । ಓಜಃ ಸಾಷ್ಟವಿಃ ದಶೇತಿ । ತಥಾ ಬಲಂ ವೃತ್ರವಧಾದೇಃ ಕಾರ್ಯಸ್ಯ ಹೇತುಭೂತಂ ಸಾಮರ್ಥ್ಯಂ ಚ ಯುವಾಭ್ಯಾಂ ಸಂ ದಧುಃ । ಸಮಯೋಜಯನ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾವರುಣರೇ) ವಾಂ—ನಿಮ್ಮಲ್ಲಿ । ಅನ್ಯಃ—ಒಬ್ಬನಾದ ವರುಣನು । ಸಮ್ರಾಟ್—ಅತ್ಯಂತ ಪ್ರಕಾಶಮಾನನಾದ ಪ್ರಭುವೆಂದು । ಉಚ್ಯತೇ—ಪ್ರಸಿದ್ಧನಾಗಿದ್ದಾನೆ । ಅನ್ಯಃ—ಇನ್ನೊಬ್ಬನಾದ ಇಂದ್ರನು । ಸ್ವರಾಟ್—ಸ್ವಯಂಪ್ರಕಾಶಕನಾದ ಪ್ರಭುವೆಂದು ಪ್ರಸಿದ್ಧನಾಗಿದ್ದಾನೆ । ಇಂದ್ರಾವರುಣಾ—ಇಂತಹ ಪ್ರಸಿದ್ಧರಾದ ಇಂದ್ರಾವರುಣರು । ಮಹಾಂತಾ—ಮಹದ್ಗುಣವುಳ್ಳವರೂ । ಮಹಾವಸೂ—ಅತ್ಯಧಿಕವಾದ ಧನವುಳ್ಳವರೂ ಆಗಿದ್ದಾರೆ । ವೃಷಣಾ—ಕಾಮವರ್ಷಕರಾದ ಎಲೈ ಇಂದ್ರಾವರುಣರೇ । ವಾಂ—ನಿಮ್ಮೊಂದಿಗೆ । ಪರಮೇ ವ್ಯೋಮನಿ—ಉತ್ಕೃಷ್ಟವಾದ ಆಕಾಶದಲ್ಲಿ । ವಿಶ್ವೇ ದೇವಾಸಃ—ಸಕಲ ದೇವತೆಗಳೂ । ಓಜಃ—ವೀರ್ಯವನ್ನು । ಸಂ ದಧುಃ—ಸಂಯೋಜಿಸಿದ್ದಾರೆ । ಬಲಂ—ಶತ್ರುವಧಕ್ಕೆ ಯೋಗ್ಯವಾದ ಬಲವನ್ನೂ । ಸಂ (ದಧುಃ)—ಸಂಯೋಜಿಸಿದ್ದಾರೆ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ನಿಮ್ಮಲ್ಲಿ ಒಬ್ಬನಾದ ವರುಣನು ಅತ್ಯಂತ ಪ್ರಕಾಶಮಾನನಾದ ಪ್ರಭುವೆಂದು ಪ್ರಸಿದ್ಧನಾಗಿದ್ದಾನೆ. ಇನ್ನೊಬ್ಬನಾದ ಇಂದ್ರನು ಸ್ವಯಂಪ್ರಕಾಶಕನಾದ ಪ್ರಭುವೆಂದು ಪ್ರಸಿದ್ಧನಾಗಿದ್ದಾನೆ. ಇಂತಹ ಪ್ರಸಿದ್ಧರಾದ ಇಂದ್ರಾವರುಣರು ಮಹದ್ಗುಣವುಳ್ಳವರೂ, ಅತ್ಯಧಿಕವಾದ ಧನವುಳ್ಳವರೂ ಆಗಿದ್ದಾರೆ. ಕಾಮವರ್ಷಕ

ರಾದ ಎಲೈ ಇಂದ್ರಾವರುಣರೇ, ಸಕಲ ದೇವತೆಗಳೂ ಸಹಾ ಉತ್ಕೃಷ್ಟವಾದ ಆಕಾಶದಲ್ಲಿ ನಿಮ್ಮೊಂದಿಗೆ ವೀರ್ಯವನ್ನೂ ಶತ್ರುವಧಕ್ಕೆ ಯೋಗ್ಯವಾದ ಬಲವನ್ನೂ ಸಂಯೋಜಿಸಿದ್ದಾರೆ.

## English Translation

One of you is titled supreme monarch, so is the other: mighty and most opulent are you, Indra and Varuna: all the gods in the highest heaven, showerers (of benefits), have combined your united strength, (your) united vigour.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಇಂದ್ರಾವರುಣರನ್ನು ಸ್ತುತಿಸುವಾಗ **ಅನ್ಯಃ ಸಮ್ರಾಟ್ ಅನ್ಯಃ ಸ್ವರಾಟ್**—ಎಂಬ ಶಬ್ದಗಳಿಂದ ಸ್ತುತಿಸಲಾಗಿದೆ. ಈ ವಿಷಯದಲ್ಲಿ ಭಾಷ್ಯಕಾರರು ವರುಣನನ್ನು ಸಮ್ರಾಟ್ ಎಂಬ ಶಬ್ದದಿಂದ—

**ತಾ ಸಮ್ರಾಜಾ ಘೃತಾಸುತೀ ಆದಿತ್ಯಾ ದಾನುನಸ್ಪತೀ ।**
**ಸಚೇತೇ ಅನವಹ್ವರಂ ॥**

(ಋ. ಸಂ ೨-೪೩-೬)

ಎಂಬ ಋಕ್ಕಿನಲ್ಲಿ ಸ್ತುತಿಸಿದೆಯೆಂದೂ, ಇಂದ್ರನನ್ನು ಸ್ವರಾಟ್ ಶಬ್ದದಿಂದ—

**ಸ್ವರಾಳಿಂದ್ರೋ ದಮ ಆ ವಿಶ್ವಗೂರ್ತಃ ಸ್ವರಿರಮತ್ರೋ ವವಕ್ಷೇ ರಣಾಯ ।**

(ಋ. ಸಂ ೧-೬೧-೯)

ಎಂಬ ಋಕ್ಕಿನಲ್ಲಿಯೂ ಸ್ತುತಿಸಿದೆಯೆಂದು ಎರಡು ಉದಾಹರಣೆಗಳಿಂದ ಸ್ಪಷ್ಟಪಡಿಸಿದ್ದಾರೆ.

॥ ಸಂಹಿತಾಪಾಠಃ ॥

ಅನ್ವಪಾಂ ಖಾನ್ಯತೃಂತಮೋಜಸಾ ಸೂರ್ಯಮೈರಯತಂ ದಿವಿ ಪ್ರಭುಂ ।
ಇಂದ್ರಾವರುಣಾ ಮದೇ ಅಸ್ಯ ಮಾಯಿನೋಽಪಿನ್ವತಮಪಿತಃ ಪಿನ್ವತಂ ಧಿಯಃ ॥ ೩ ॥

॥ ಪದಪಾಠಃ ॥

ಅನು । ಅಪಾಂ । ಖಾನಿ । ಅತೃಂತಂ । ಓಜಸಾ । ಆ । ಸೂರ್ಯಂ । ಐರಯತಂ । ದಿವಿ । ಪ್ರಭುಂ । ಇಂದ್ರಾವರುಣಾ । ಮದೇ । ಅಸ್ಯ । ಮಾಯಿನಃ । ಅಪಿನ್ವತಂ । ಅಪಿತಃ । ಪಿನ್ವತಂ । ಧಿಯಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ಅಪಾಮುದಕಾನಾಂ ಖಾನಿ ದ್ವಾರಾಣಿ ವೃತ್ರೇಣ ಪಿಹಿತಾನ್ಯೋಜಸಾ ಬಲೇನಾನ್ವತೃಂತಂ । ಅನ್ವವಿಧ್ಯತಂ । ಆವರಕಸ್ಯ ವೃತ್ರಸ್ಯ ವಧೇನ ವೃಷ್ಟಿಪ್ರತಿಬಂಧಂ ನಿರಾಕೃತವಂತಾ-ವಿತ್ಯರ್ಥಃ । ತಥಾ ಸೂರ್ಯಂ ಸರ್ವಸ್ಯ ಪ್ರೇರಕಮಾದಿತ್ಯಂ ದಿವ್ಯಂತರಿಕ್ಷೇ ಪ್ರಭುಂ ಪ್ರಭೂತಂ ಸಂತ-ಮೈರಯತಂ । ಅಭ್ಯಗಮಯತಂ । ಸ್ವರ್ಭಾನುನಾವೃತಂ ಸೂರ್ಯಂ ತದ್ವಧೇನ ಪ್ರಕಾಶಿತವಂತಾ-ವಿತ್ಯರ್ಥಃ । ಹೇ ಇಂದ್ರಾವರುಣೇಂದ್ರಾವರುಣೌ ಮಾಯಿನಃ ಪ್ರಜ್ಞಾಕರಸ್ಯಾಸ್ಯ ಸೋಮಸ್ಯ ಪಾನೇನ ಮದೇ ಹರ್ಷೇ ಸತ್ಯಪಿತೋ ಜಲರಹಿತಾ ನದೀರಪಿನ್ವತಂ । ಜಲೇನಾಪೂರಯತಂ । ತಥಾ ಚ ನಿವಿತ್ಪದ-ಮಾಮ್ನಾಯತೇ । ಅಸ್ಯ ಮದೇ ಜರಿತರಿಂದ್ರೋಽಜಿನ್ವದಜುವೋಽಪಿನ್ವದಪಿತ ಇತಿ । ಅಪಿ ಚ ಧಿಯಃ ಕರ್ಮಾಣ್ಯಸ್ಮಾಭಿರನುಷ್ಠಿತಾನಿ ಕರ್ಮಾಣಿ ಪಿನ್ವತಂ । ಸಿಂಚತಂ । ಫಲೇನ ಪೂರಯತಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾವರುಣರೇ) ಅಪಾಂ—ಉದಕಗಳ । ಖಾನಿ—(ವೃತ್ರನಿಂದ ಮುಚ್ಚಲ್ಪಟ್ಟ) ದ್ವಾರಗಳನ್ನು । ಓಜಸಾ—ನಿಮ್ಮ ವೀರ್ಯದಿಂದ । ಅನು ಅತೃಂತಂ—ಪೂರ್ಣವಾಗಿ ಬಿಡಿಸಿದಿರಿ । ಸೂರ್ಯಂ—ಸೂರ್ಯನನ್ನು । ದಿವಿ—ಅಂತರಿಕ್ಷದಲ್ಲಿ । ಪ್ರಭುಂ—ಪ್ರಭುವಾಗಿರುವಂತೆ । ಆ ಐರಯತಂ—ಸ್ಥಾಪಿಸಿದ್ದೀರಿ । ಇಂದ್ರಾವರುಣಾ—ಎಲೈ ಇಂದ್ರಾವರುಣರೇ । ಮಾಯಿನಃ—ಚೈತನ್ಯದಾಯಿಯಾದ । ಅಸ್ಯ—ಈ ಸೋಮಪಾನದಿಂದ ಉಂಟಾದ । ಮದೇ—ಹರ್ಷದ ಫಲವಾಗಿ । ಅಪಿತಃ—ಜಲರಹಿತವಾದ ನದಿಗಳನ್ನು । ಅಪಿನ್ವತಂ—ಜಲಭರಿತವಾಗುವಂತೆ ಮಾಡಿದಿರಿ । ಧಿಯಃ—ನಮ್ಮ ಕರ್ಮಗಳನ್ನು । ಪಿನ್ವತಂ—ಫಲಭರಿತವಾಗುವಂತೆ ಮಾಡಿದಿರಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ವೃತ್ರನಿಂದ ಮುಚ್ಚಲ್ಪಟ್ಟ ಉದಕಗಳ ದ್ವಾರಗಳನ್ನು ನಿಮ್ಮ ವೀರ್ಯದಿಂದ ಪೂರ್ಣವಾಗಿ ಬಿಡಿಸಿದಿರಿ. ನೀವೇ ಸೂರ್ಯನನ್ನು ಅಂತರಿಕ್ಷದಲ್ಲಿ ಪ್ರಭುವಾಗಿರುವಂತೆ ನಿಯಮಿಸಿ ಸ್ಥಾಪಿಸಿದ್ದೀರಿ. ಎಲೈ ಇಂದ್ರಾವರುಣರೇ, ಚೈತನ್ಯದಾಯಿಯಾದ ಈ ಸೋಮದ ಪಾನದಿಂದ ಉಂಟಾದ ಹರ್ಷದ ಫಲವಾಗಿ ಜಲರಹಿತವಾದ ನದಿಗಳನ್ನು ಜಲಭರಿತವಾಗುವಂತೆ ಮಾಡಿದಿರಿ ನಮ್ಮ ಕರ್ಮಗಳನ್ನು ಫಲಭರಿತವಾಗುವಂತೆ ಮಾಡಿದಿರಿ

## English Translation

Indra and Varuna, you have forced open by your strength the barriers of the waters: you have established Surya as the lord in heaven: in the exhilaration of the inspiring (Soma) you have replenished the dry (beds of the rivers): do you also fulfil the objects of our sacred rites.

॥ ಸಂಹಿತಾಪಾಠಃ ॥

ಯುವಾಮಿದ್ಯುತ್ಸು ಪೃತನಾಸು ವಹ್ನಯೋ ಯುವಾಂ ಕ್ಷೇಮಸ್ಯ ಪ್ರಸವೇ ಮಿತಜ್ಞವಃ ।
ಈಶಾನಾ ವಸ್ವ ಉಭಯಸ್ಯ ಕಾರವ ಇಂದ್ರಾವರುಣಾ ಸುಹವಾ ಹವಾಮಹೇ ॥ ೪ ॥

॥ ಪದಪಾಠಃ ॥

ಯುವಾಂ । ಇತ್ । ಯುತ್ಽಸು । ಪೃತನಾಸು । ವಹ್ನಯಃ । ಯುವಾಂ । ಕ್ಷೇಮಸ್ಯ । ಪ್ರಽಸವೇ । ಮಿತಽಜ್ಞವಃ ।
ಈಶಾನಾ । ವಸ್ವಃ । ಉಭಯಸ್ಯ । ಕಾರವಃ । ಇಂದ್ರಾವರುಣಾ । ಸುಽಹವಾ । ಹವಾಮಹೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ವಹ್ನಯೋ ಹವಿಷಾಂ ಸ್ತೋತ್ರಾಣಾಂ ವಾ ವೋಢಾರ ಋತ್ವಿಜೋ ಯುತ್ಸು ಯುದ್ಧೇಷು ಪೃತನಾಸು ಶತ್ರುಸೇನಾಸು ರಕ್ಷಣಾರ್ಥಂ ಯುವಾಮಿದ್ಯುವಾಮೇವ ಹವಂತೇ । ಆಹ್ವಯಂತಿ । ಮಿತಜ್ಞವಃ ಸಂಕುಚಿತಜಾನುಕಾ ಅಂಗಿರಸೋಽಪಿ ಕ್ಷೇಮಸ್ಯ ರಕ್ಷಣಸ್ಯ ಪ್ರಸವ ಉತ್ಪಾದನೇ ನಿಮಿತ್ತಭೂತೇ ಸತಿ ಯುವಾಮೇವ ಹವಂತೇ । ಅತಃ ಕಾರಣಾತ್ ಹೇ ಇಂದ್ರಾವರುಣೌ ಕಾರವಃ ಸ್ತೋತಾರೋ ವಯಮುಭಯಸ್ಯ ದಿವ್ಯಸ್ಯ ಪಾರ್ಥಿವಸ್ಯ ಚ ವಸ್ವೋ ವಸುನೋ ಧನಸ್ಯೇಶಾನೇಶ್ವರೌ ಸುಹವಾ ಸುಖೇನ ಹ್ವಾತವ್ಯೌ ಯುವಾಮೇವ ಹವಾಮಹೇ । ಆಹ್ವಯಾಮಹೇ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾವರುಣರೇ) ವಹ್ನಯಃ—ಹವಿಸ್ಸುಗಳನ್ನು ವಹಿಸತಕ್ಕ ಋತ್ವಿಕ್ಕುಗಳು । ಯುತ್ಸು—ಯುದ್ಧಗಳಲ್ಲಿ ನಿರತರಾದ । ಪೃತನಾಸು—ಸೇನೆಗಳ ರಕ್ಷಣಾರ್ಥವಾಗಿ । ಯುವಾಂ ಇತ್—ನಿಮ್ಮನ್ನೇ (ಕರೆಯುತ್ತಾರೆ) । ಮಿತಜ್ಞವಃ—ಮೊಣಕಾಲನ್ನೂರಿ ಪ್ರಾರ್ಥಿಸುವ ಅಂಗಿರಸ್ಸುಗಳೂ ಸಹ । ಕ್ಷೇಮಸ್ಯ—ರಕ್ಷಣೆಯ । ಪ್ರಸವೇ—ನಿಮಿತ್ತವಾಗಿ । ಯುವಾಂ—ನಿಮ್ಮನ್ನೇ ಕರೆಯುತ್ತಾರೆ । ಇಂದ್ರಾವರುಣಾ—(ಆದುದರಿಂದ) ಎಲೈ ಇಂದ್ರಾವರುಣರೇ । ಕಾರವಃ—ಸ್ತೋತೃಗಳಾದ ನಾವೂ ಸಹ । ಉಭಯಸ್ಯ—ದ್ಯುಲೋಕ ಮತ್ತು ಪೃಥಿವೀ ಲೋಕಗಳೆರಡರ । ವಸ್ವಃ—ಧನಕ್ಕೂ । ಈಶಾನಾ—ಪ್ರಭುಗಳಾದವರೂ । ಸುಹವಾ—ಸುಲಭವಾದ ಆಹ್ವಾನಕ್ಕೆ ಪಾತ್ರರೂ ಆದ ನಿಮ್ಮನ್ನೇ । ಹವಾಮಹೇ—ಪ್ರಾರ್ಥಿಸಿ ಕರೆಯುತ್ತೇವೆ.

। ಭಾವಾರ್ಥ ।

ಎಲೈ ಇಂದ್ರಾವರುಣರೇ, ಹವಿರ್ವಾಹಕರಾದ ಋತ್ವಿಕ್ಕುಗಳು ಯುದ್ಧಗಳಲ್ಲಿ ನಿರತರಾದ ಸೇನೆಗಳ ರಕ್ಷಣಾರ್ಥವಾಗಿ ನಿಮ್ಮನ್ನೇ ಕರೆಯುತ್ತಾರೆ. ಮೊಣಕಾಲನ್ನೂರಿ ಪ್ರಾರ್ಥಿಸುವ ಅಂಗಿರಸ್ಸುಗಳೂ ಸಹ ರಕ್ಷಣೆಯ ನಿಮಿತ್ತವಾಗಿ ನಿಮ್ಮನ್ನೇ ಕರೆಯುತ್ತಾರೆ. ಆದುದರಿಂದ ಎಲೈ ಇಂದ್ರಾವರುಣರೇ, ಸ್ತೋತೃಗಳಾದ ನಾವೂ ಸಹ ದ್ಯುಲೋಕ ಮತ್ತು ಪೃಥಿವೀ ಲೋಕಗಳೆರಡರ ಧನಕ್ಕೂ ಪ್ರಭುಗಳಾದವರೂ ಸುಲಭವಾದ ಆಹ್ವಾನಕ್ಕೆ ಪಾತ್ರರೂ ಆದ ನಿಮ್ಮನ್ನೇ ಪ್ರಾರ್ಥಿಸಿ ಕರೆಯುತ್ತೇವೆ.

## English Translation

The bearers (of offerings) invoke you, Indra and Varuna, in wars, in battles: on bended knees (the Angirasas invoke you) for the begetting of prosperity; and we, your worshippers, invoke you, who are entitled to respectful homage, the lords of both celestial and terrestrial treasures.

॥ ಸಂಹಿತಾಪಾಠಃ ॥

ಇಂದ್ರಾವರುಣಾ ಯದಿಮಾನಿ ಚಕ್ರಥುರ್ವಿಶ್ವಾ ಜಾತಾನಿ ಭುವನಸ್ಯ
ಮಜ್ಮನಾ ।
ಕ್ಷೇಮೇಣ ಮಿತ್ರೋ ವರುಣಂ ದುವಸ್ಯತಿ ಮರುದ್ಭಿರುಗ್ರಃ ಶುಭಮನ್ಯ
ಈಯತೇ ॥ ೫ ॥

॥ ಪದಪಾಠಃ ॥

ಇಂದ್ರಾವರುಣಾ । ಯತ್ । ಇಮಾನಿ । ಚಕ್ರಥುಃ । ವಿಶ್ವಾ । ಜಾತಾನಿ । ಭುವನಸ್ಯ । ಮಜ್ಮನಾ ।
ಕ್ಷೇಮೇಣ । ಮಿತ್ರಃ । ವರುಣಂ । ದುವಸ್ಯತಿ । ಮರುತ್ಽಭಿಃ । ಉಗ್ರಃ । ಶುಭಂ । ಅನ್ಯಃ । ಈಯತೇ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ಯದ್ಯೌ ಯುವಾಂ ಭುವನಸ್ಯ ಲೋಕಸ್ಯ ಸಂಬಂಧೀನೀಮಾನಿ ಪರಿದೃಶ್ಯಮಾನಾನಿ ವಿಶ್ವಾ ಸರ್ವಾಣಿ ಜಾತಾನಿ ಜಾತಿಮಂತಿ ಭೂತಜಾತಾನಿ ಮಜ್ಮನಾತ್ಮೀಯೇನ ಬಲೇನ ಚಕ್ರಥುಃ ಕೃತವಂತೌ ತಯೋರ್ಯುವಯೋರ್ಮಧ್ಯೆ ಏಕಂ ವರುಣಂ ಕ್ಷೇಮೇಣ ರಕ್ಷಣಹೇತುನಾ ಮಿತ್ರೋ ದೇವೋ ದುವಸ್ಯತಿ । ಪರಿಚರತಿ । ಮಿತ್ರಾವರುಣೌ ಹಿ ಪರಸ್ಪರಂ ಪ್ರಾಪ್ತಸಖ್ಯೌ । ಅತ ಏವ ಸಹಚರೌ

ದೃಶ್ಯತೇ । ಅನ್ಯ ಏಕ ಇಂದ್ರೋ ಮರುದ್ಭಿರ್ಮರುದ್ಗಣೈರುಗ್ರ ಉದ್ಗೂರ್ಣಬಲಃ ಶುಭಂ ಶೋಭನ- ಮಲಂಕಾರಮೀಯತೇ । ಪ್ರಾಪ್ನೋತಿ । ಯದ್ವಾ । ಮರುದ್ಭಿರ್ಮಧ್ಯಸ್ಥಾನೈರ್ದೇವಗಣೈಃ ಸಾರ್ಧಮುಗ್ರ ಓಜಸ್ವೀಂದ್ರಃ ಶುಭಮುದಕಮೀಯತೇ । ಪ್ರೇರಯತಿ ॥

॥ ಪ್ರತಿಪದಾರ್ಥ ॥

**ಇಂದ್ರಾವರುಣಾ**—ಎಲೈ ಇಂದ್ರಾವರುಣರೇ । **ಯತ್**— ಯಾವ ನೀವು । **ಭುವನಸ್ಯ**—ಸಕಲ ಲೋಕ ಕ್ಕೂ ಸೇರಿದ । **ವಿಶ್ವಾ**—ಸಮಸ್ತವಾದ । **ಇಮಾ ಜಾತಾನಿ**—ಈ ಭೂತಜಾತಗಳನ್ನೂ । **ಮಜ್ಮನಾ**—ನಿಮ್ಮ ಶಕ್ತಿಯಿಂದ । **ಚಕ್ರಥುಃ**—ಉತ್ಪನ್ನಮಾಡಿದಿರೋ (ಅವರಲ್ಲಿ ಒಬ್ಬನಾದ) । **ವರುಣಂ**—ವರುಣನನ್ನು । **ಕ್ಷೇಮೇಣ**—ರಕ್ಷಣಾರ್ಥವಾಗಿ । **ಮಿತ್ರಃ**—ಮಿತ್ರದೇವನು । **ದುವಸ್ಯತಿ**—ಪೂಜಿಸುತ್ತಾನೆ । **ಅನ್ಯಃ**—ಇನ್ನೊಬ್ಬ ನಾದ ಇಂದ್ರನು । **ಮರುದ್ಭಿಃ**—ಮರುತ್ತುಗಳೊಡಗೂಡಿ । **ಉಗ್ರಃ**—ಅತ್ಯಧಿಕವಾದ ಶಕ್ತಿಯುತನಾಗಿ । **ಶುಭಂ**—ಶ್ರೇಷ್ಠವಾದ ಅಲಂಕಾರವನ್ನು । **ಈಯತೇ**—ಹೊಂದುತ್ತಾನೆ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಯಾವ ನೀವು ಸಕಲಲೋಕಕ್ಕೂ ಸೇರಿದ ಸಮಸ್ತವಾದ ಈ ಭೂತಜಾತಗಳನ್ನೂ ನಿಮ್ಮ ಶಕ್ತಿಯಿಂದ ಉತ್ಪನ್ನಮಾಡಿದಿರೋ ಅವರಲ್ಲಿ ಒಬ್ಬನಾದ ವರುಣನನ್ನು ರಕ್ಷಣಾರ್ಥವಾಗಿ ಮಿತ್ರದೇವನು ಪೂಜಿಸುತ್ತಾನೆ. ಇನ್ನೊಬ್ಬನಾದ ಇಂದ್ರನು ಮರುತ್ತುಗಳೊಡಗೂಡಿ ಅತ್ಯಧಿಕವಾದ ಶಕ್ತಿಯುತನಾಗಿ ಶ್ರೇಷ್ಠವಾದ ಅಲಂಕಾರವನ್ನು ಹೊಂದುತ್ತಾನೆ ಅಥವಾ ಶ್ರೇಷ್ಠವಾದ ವೃಷ್ಟ್ಯುದಕವನ್ನು ಪ್ರೇರಿಸುತ್ತಾನೆ.

## English Translation

Indra and Varuna, inasmuch as you have created by your might all these beings of the world, therefore Mitra worships Varuna for prosperity, whilst the other, the fierce Indra associated with the Maruts, acquires glory.

॥ ಸಂಹಿತಾಪಾಠಃ ॥

ಮಹೇ ಶುಲ್ಕಾಯ ವರುಣಸ್ಯ ನು ತ್ವಿಷ ಓಜೋ ಮಿಮಾತೇ ಧ್ರುವಮಸ್ಯ ಯತ್ಸ್ವಂ ।
ಅಜಾಮಿಮನ್ಯಃ ಶ್ನಥಯಂತಮಾತಿರದ್ದಭ್ರೇಭಿರನ್ಯಃ ಪ್ರ ವೃಣೋತಿ ಭೂಯಸಃ ॥ ೬ ॥

॥ ಪದಪಾಠಃ ॥

ಮಹೇ । ಶುಲ್ಕಾಯ । ವರುಣಸ್ಯ । ನು । ತ್ವಿಷೇ । ಓಜಃ । ಮಿಮಾತೇ ಇತಿ । ಧ್ರುವಂ । ಅಸ್ಯ । ಯತ್ । ಸ್ವಂ ।

ಅಜಾಮಿಂ । ಅನ್ಯಃ । ಶ್ನಥಯಂತಂ । ಆ । ಅತಿರತ್ । ದಭ್ರೇಭಿಃ । ಅನ್ಯಃ । ಪ್ರ । ವೃಣೋತಿ । ಭೂಯಸಃ ॥ ೬ ॥

॥ ಸಾಯಣಭಾಷ್ಯಂ ॥

ವರುಣಸ್ಯ । ಉಪಲಕ್ಷಣಮೇತತ್ । ಇಂದ್ರಸ್ಯ ವರುಣಸ್ಯ ಚ ತ್ವಿಷೇ ದೀಪ್ತ್ಯರ್ಥಮೋಜೋ ಬಲಂ ನು ಕ್ಷಿಪ್ರಂ ಮಿಮಾತೇ। ಸ್ತೋತ್ರೇಣ ನಿರ್ಮಿಮಾತೇ ಯಜಮಾನಪತ್ನ್ಯೌ । ಸ್ತೋತ್ರೇಣ ಹಿ ಬಲಂ ಜಾಯತೇ । ಕಿಮರ್ಥಂ । ಮಹೇ ಮಹತೇ ಶುಲ್ಕಾಯ ಧನಾಯ । ಈದೃಶಸ್ಯ ಧನಸ್ಯ ಲಾಭಾರ್ಥಂ । ಅಸ್ಯೇಂದ್ರಸ್ಯ ವರುಣಸ್ಯ ಚ ಧ್ರುವಂ ನಿತ್ಯಂ ಸ್ವಂ ಸ್ವಕೀಯಮಸಾಧಾರಣಂ ಯದೋಜೋ ವಿದ್ಯತೇ ತದೋಜೋ ಮಿಮಾತೇ ಇತ್ಯನ್ವಯಃ । ತಯೋರಿಂದ್ರಾವರುಣಯೋರನ್ಯ ಏಕೋ ವರುಣೋಽಜಾಮಿಮಬಂಧುಮಸ್ತುವಂತಂ ಶ್ನಥಯಂತಂ ಹಿಂಸಂತಂ ಕರ್ಮಾಣ್ಯಕುರ್ವಂತಮಸ್ತೋತಾರಮಯಜಮಾನಂ ಚಾತಿರತ್ । ಅಭಿಹಂತಿ । ಅನ್ಯ ಏಕ ಇಂದ್ರೋ ದಭ್ರೇಭಿರಲ್ಪೈರೇವೋಪಾಯೈರ್ಭೂಯಸೋ ಬಹುತರಾಞ್ಛತ್ರೂನ್ಪ್ರ ವೃಣೋತಿ । ಪ್ರಕರ್ಷೇಣಾವೃತಾನ್ ಬಾಧಿತಾನ್ ಕರೋತಿ । ಯದ್ವಾ । ಭೂಯಸೋ ಯಜಮಾನಾನ್ಪ್ರ ವೃಣೋತಿ । ಪ್ರವರಾನ್ಶ್ರೇಷ್ಠಾನ್ ಕರೋತಿ ॥

॥ ಪ್ರತಿಪದಾರ್ಥ ॥

**ಮಹೇ**—ಮಹತ್ತಾದ । **ಶುಲ್ಕಾಯ**—ಧನಕ್ಕಾಗಿ । **ವರುಣಸ್ಯ**—ಇಂದ್ರಾವರುಣರ । **ತ್ವಿಷೇ**—ಕಾಂತಿಯನ್ನು ವೃದ್ಧಿಮಾಡಲು । **ನು**—ಕ್ಷಿಪ್ರವಾಗಿ । **ಅಸ್ಯ**—ಈ ಇಂದ್ರಾವರುಣರಿಗೆ । **ಧ್ರುವಂ**—ನಿತ್ಯವಾದುದೂ । **ಸ್ವಂ**—ಅವರವರ ಅಸಾಧಾರಣವಾದುದೂ ಆದ । **ಯತ್**—ಯಾವ ವೀರ್ಯವಿದೆಯೋ ಅಂತಹ । **ಓಜಃ**—ವೀರ್ಯವನ್ನು । **ಮಿಮಾತೇ**—ಯಜಮಾನನೂ ಮತ್ತು ತತ್ಪತ್ನಿಯೂ ಸ್ತುತ್ಯಾದಿಗಳಿಂದ ಉತ್ಪನ್ನಮಾಡುತ್ತಾರೆ । **ಅನ್ಯಃ**—ಇವರಲ್ಲಿ ಒಬ್ಬನಾದ ವರುಣನು । **ಅಜಾಮಿಂ**—ಸ್ತುತಿಕರ್ತನಲ್ಲದೇ ದೂರವಾಗಿರತಕ್ಕವನೂ । **ಶ್ನಥಯಂತಂ**—ಹಿಂಸಕನೂ ಆದ ಕರ್ಮಭ್ರಷ್ಟನನ್ನು । **ಆತಿರತ್**—ನಾಶಮಾಡುತ್ತಾನೆ । **ಅನ್ಯಃ**—ಇನ್ನೊಬ್ಬನಾದ ಇಂದ್ರನು । **ದಭ್ರೇಭಿಃ**—ಅಲ್ಪಸಾಧನಗಳಿಂದಲೇ । **ಭೂಯಸಃ**— ಅಧಿಕವಾದ ಶತ್ರುಗಳನ್ನೂ । **ಪ್ರ ವೃಣೋತಿ**—ಪೂರ್ಣವಾಗಿ ನಾಶಮಾಡುತ್ತಾನೆ.

॥ ಭಾವಾರ್ಥ ॥

ಮಹತ್ತಾದ ಧನಾರ್ಥವಾಗಿ ಇಂದ್ರಾವರುಣರ ಕಾಂತಿಯನ್ನು ವೃದ್ಧಿಮಾಡಲು ಈ ಇಂದ್ರಾವರುಣರಿಗೆ ನಿತ್ಯವಾದುದೂ ಅವರವರ ಅಸಾಧಾರಣವಾದುದೂ ಆದ ಯಾವ ವೀರ್ಯವಿದೆಯೋ ಅಂತಹ ವೀರ್ಯವನ್ನು ಯಜಮಾನನೂ

ಮತ್ತು ತತ್ಪತ್ನಿಯೂ ಸ್ತುತ್ಯಾದಿಗಳಿಂದ ಉತ್ಪನ್ನಮಾಡುತ್ತಾರೆ. ಇವರಲ್ಲಿ ಒಬ್ಬನಾದ ವರುಣನು ತನ್ನನ್ನು ಸ್ತುತಿಸದೇ ದೂರವಾಗಿರತಕ್ಕವನೂ ಹಿಂಸಕನೂ ಆದ ಕರ್ಮಭ್ರಷ್ಟನನ್ನು ನಾಶಮಾಡುತ್ತಾನೆ. ಇನ್ನೊಬ್ಬನಾದ ಇಂದ್ರನು ಅಲ್ಪ ಸಾಧನಗಳಿಂದಲೇ ಅಧಿಕವಾದ ಶತ್ರುಗಳನ್ನು ಪೂರ್ಣವಾಗಿ ನಾಶಮಾಡುತ್ತಾನೆ.

## English Translation

In honour of (Indra and Varuna) the sacrificer and his wife for (the obtaining of) great wealth, confer (by their praises) that strength which is peculiar to each of them, and ever-enduring ; one of them (Varuna) destroys the unfriendly man neglecting (his worship): the other, (Indra), with scanty (means), discomfits numerous (enemies).

॥ ಸಂಹಿತಾಪಾಠಃ ॥

ನ ತಮಂಹೋ ನ ದುರಿತಾನಿ ಮರ್ತ್ಯಮಿಂದ್ರಾವರುಣಾ ನ ತಪಃ ಕುತಶ್ಚನ ।
ಯಸ್ಯ ದೇವಾ ಗಚ್ಛಥೋ ವೀಥೋ ಅಧ್ವರಂ ನ ತಂ ಮರ್ತಸ್ಯ ನಶತೇ
ಪರಿಹ್ವೃತಿಃ ॥ ೭ ॥

॥ ಪಾದಪಠಃ ॥

ನ । ತಂ । ಅಂಹಃ । ನ । ದುಃಽಇತಾನಿ । ಮರ್ತ್ಯಂ । ಇಂದ್ರಾವರುಣಾ । ನ । ತಪಃ । ಕುತಃ । ಚನ ।
ಯಸ್ಯ । ದೇವಾ । ಗಚ್ಛಥಃ । ವೀಥಃ । ಅಧ್ವರಂ । ನ । ತಂ । ಮರ್ತಸ್ಯ । ನಶತೇ । ಪರಿಽಹ್ವೃತಿಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೇಂದ್ರಾವರುಣೌ ತಂ ಮರ್ತ್ಯಂ ಮನುಷ್ಯಮಂಹಃ ಪಾಪಂ ನ ಸಶತೇ । ನ ವ್ಯಾಪ್ನೋತಿ । ನ ಚ ದುರಿತಾನಿ ದುರ್ಗಮನಾನಿ ಪಾಪಫಲಾನಿ ಚ ಪ್ರಾಪ್ನುವಂತಿ । ಕುತಶ್ಚನ ಕಸ್ಮಾದಪಿ ನಿಮಿತ್ತಾತ್ತಪಃ ಸಂತಾಪಶ್ಚ ತಂ ನ ಪ್ರಾಪ್ನೋತಿ । ಹೇ ದೇವಾ ದೇವೌ ದಾನಾದಿಗುಣಯುಕ್ತಾವಿಂದ್ರಾ-ವರುಣೌ ಯಸ್ಯ ಮರ್ತ್ಯಸ್ಯ ಮನುಷ್ಯಸ್ಯಾಧ್ವರಂ ಯಜ್ಞಂ ಗಚ್ಛಥಃ ಪ್ರಾಪ್ನುಥೋ ಯುವಾಂ ವೀಥಃ ಕಾಮಯೇಥೇ ಚ ಯಸ್ಯ ಹವೀಂಷಿ ತಂ ಮನುಷ್ಯಂ ಪರಿಹ್ವೃತಿಃ ಪರಿಬಾಧಾ ನ ನಶತೇ । ಉಕ್ತಪ್ರಕಾ-ರೇಣ ನ ಪ್ರಾಪ್ನೋತಿ ॥

॥ ಪ್ರತಿಪದಾರ್ಥ ॥

**ದೇವಾ**—ದೇವತಾತ್ಮರಾದ । **ಇಂದ್ರಾವರುಣಾ**—ಎಲೈ ಇಂದ್ರಾವರುಣರೇ । **ಯಸ್ಯ**—ಯಾವ । **ಮರ್ತಸ್ಯ**—ಮಾನವನ । **ಅಧ್ವರಂ**—ಯಜ್ಞಕ್ಕೆ । **ಗಚ್ಛಥಃ**—ನೀವು ಹೋಗುವಿರೋ । **ವೀಥಃ**—ಅದನ್ನು ಆಶಿಸಿ ಅನುಗ್ರಹಿಸುವಿರೋ । **ತಂ ಮರ್ತ್ಯಂ**—ಆ ಯಜಮಾನನನ್ನು । **ಅಂಹಃ**—ಪಾಪವು । **ನ ನಶತೇ**—ಅಂಟುವುದಿಲ್ಲ । **ದುರಿತಾನಿ**—ಪಾಪಫಲಗಳೂ ಸಹ । **ನ**— ಅಂಟುವುದಿಲ್ಲ । **ಕುತಶ್ಚನ**—ಯಾವ ವಿಧವಾದ । **ತಪಃ**—ಸಂತಾಪವೂ **ನ**—ಅಂಟುವುದಿಲ್ಲ । **ತಂ**—ಅದೇ ಮನುಷ್ಯನನ್ನು । **ಪರಿಹ್ವೃತಿಃ**—ಹಿಂಸೆಯೂ । **ನ**—ಸಮೀಪಿಸುವುದಿಲ್ಲ.

॥ ಭಾವಾರ್ಥ ॥

ದೇವತಾತ್ಮರಾದ ಎಲೈ ಇಂದ್ರಾವರುಣರೇ, ಯಾವ ಮಾನವರ ಯಜ್ಞಕ್ಕೆ ನೀವು ಹೋಗುವಿರೋ ಮತ್ತು ಅದನ್ನು ಅಭಿಮಾನದಿಂದ ಆಶಿಸಿ ಅನುಗ್ರಹಿಸುವಿರೋ ಆ ಯಜಮಾನನನ್ನು ಪಾಪವಾಗಲಿ, ಪಾಪಫಲಗಳಾಗಲಿ ಅಂಟುವುದಿಲ್ಲ. ಯಾವ ವಿಧವಾದ ಸಂತಾಪವೂ ಅಂಟುವುದಿಲ್ಲ. ಆ ಮಾನವನನ್ನು ಯಾವ ಹಿಂಸೆಯೂ ಸಮೀಪಿಸುವುದಿಲ್ಲ.

## English Translation

Sin contaminates not, difficulties assail not, nor distress at any time afflicts the mortal, Indra and Varuna, to whose sacrifices you, deities, repair, and of which you approve: such a man ruin, never destroys.

॥ ಸಂಹಿತಾಪಾಠಃ ॥

ಅರ್ವಾಙ್ನರಾ ದೈವ್ಯೇನಾವಸಾ ಗತಂ ಶೃಣುತಂ ಹವಂ ಯದಿ ಮೇ
ಜುಜೋಷಥಃ ।
ಯುವೋರ್ಹಿ ಸಖ್ಯಮುತ ವಾ ಯದಾಪ್ಯಂ ಮಾರ್ಡೀಕಮಿಂದ್ರಾವರುಣಾ
ನಿ ಯಚ್ಛತಂ ॥ ೮ ॥

॥ ಪದಪಾಠಃ ॥

ಅರ್ವಾಕ್ । ನರಾ । ದೈವ್ಯೇನ । ಅವಸಾ । ಆ । ಗತಂ । ಶೃಣುತಂ । ಹವಂ । ಯದಿ । ಮೇ ।
ಜುಜೋಷಥಃ ।
ಯುವೋಃ । ಹಿ । ಸಖ್ಯಂ । ಉತ । ವಾ । ಯತ್ । ಆಪ್ಯಂ । ಮಾರ್ಡೀಕಂ । ಇಂದ್ರಾವರುಣಾ । ನಿ ।
ಯಚ್ಛತಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರಾವಿಂದ್ರಾವರುಣಾ ದೈವ್ಯೇನ ದೇವಸಂಬಂಧಿನಾವಸಾ ರಕ್ಷಣೇನ ಸಹಾರ್ವಾಗಸ್ಮದಭಿಮುಖಮಾ ಗತಂ । ಆಗಚ್ಛತಂ । ಆಗತ್ಯ ಚ ಮದೀಯಂ ಹವಂ ಸ್ತೋತ್ರಂ ಶೃಣುತಂ । ಯದಿ ಮೇ ಮಮ ಜುಜೋಷಥಃ ಪ್ರೀಯೇಥೇ । ಮಯಿ ಪ್ರೀತಿರಸ್ತಿ ಚೇತ್ ಯುವಾಭ್ಯಾಮಾಗಂತವ್ಯಂ ಮದೀಯಂ ಸ್ತೋತ್ರಂ ಶ್ರೋತವ್ಯಂ ಚ ಭವತೀತ್ಯರ್ಥಃ । ಯುವೋರ್ಹಿ ಯುವಯೋಃ ಖಲು ಯತ್ಸಖ್ಯಂ ಸಖಿತ್ವಮುತ ವಾಪಿ ಚ ಯದಾಪ್ಯಮಾಪಿತ್ವಂ ಬಾಂಧವಂ ಮಾರ್ಡೀಕಂ ಮೃಡೀಕಸ್ಯ ಸುಖಸ್ಯ ಸಾಧನಂ ತದುಭಯಂ ಹೇ ಇಂದ್ರಾವರುಣಾ ನಿ ಯಚ್ಛತಂ । ಅಸ್ಮಭ್ಯಂ ಪ್ರಯಚ್ಛತಂ ॥

॥ ಪ್ರತಿಪದಾರ್ಥ ॥

**ನರಾ**—ನೇತೃಗಳಾದ ಎಲೈ ಇಂದ್ರಾವರುಣರೇ । **ದೈವ್ಯೇನ**—ದೇವಸಂಬಂಧಿಯಾದ । **ಅವಸಾ**—ರಕ್ಷಣೆಯೊಡನೆ । **ಅರ್ವಾಕ್**—ನಮಗಭಿಮುಖವಾಗಿ । **ಆ ಗತಂ**—ದಯಮಾಡಿರಿ । **ಇಂದ್ರಾ, ವರುಣಾ**—ಎಲೈ ಇಂದ್ರಾವರುಣರೇ । **ಯದಿ** - ಒಂದುವೇಳೆ । **ಮೇ**—ನನ್ನಲ್ಲಿ । **ಜುಜೋಷಥಃ**—ನೀವು ಪ್ರೀತಿಯನ್ನಿಟ್ಟಿದ್ದೀ ಆದರೆ । **ಹವಂ**—ನಮ್ಮ ಸ್ತೋತ್ರವನ್ನು । **ಶೃಣುತಂ**—ಕೇಳಿರಿ । **ಯುವೋಃ ಹಿ**—ನಿಮ್ಮಿಬ್ಬರದೂ ಆದ । **ಸಖ್ಯಂ**—ಮಿತ್ರತ್ವವನ್ನೂ । **ಉತ ವಾ**—ಅದೂ ಅಲ್ಲದೇ । **ಯತ್**—ಯಾವ । **ಆಪ್ಯಂ**—ನಿಮ್ಮ ಬಂಧುತ್ವವು । **ಮಾರ್ಡೀಕಂ**—ಸುಖಸಾಧನವಾಗಿರುವುದೋ ಅದನ್ನೂ । **ನಿ ಯಚ್ಛತಂ**—ನಮಗೆ ಅನುಗ್ರಹಿಸಿಕೊಡಿರಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಇಂದ್ರಾವರುಣರೇ, ದೇವಸಂಬಂಧಿಯಾದ ರಕ್ಷಣೆಯೊಡನೆ ನಮಗಭಿಮುಖವಾಗಿ ದಯಮಾಡಿರಿ. ನನ್ನಲ್ಲಿ ನಿಮಗೆ ಪ್ರೀತಿಯಿದ್ದದ್ದೇ ಆದರೆ ನಮ್ಮ ಸ್ತುತಿಯನ್ನು ಕೇಳಿರಿ. ನಿಮ್ಮಿಬ್ಬರ ಮಿತ್ರತ್ವವನ್ನೂ ಸುಖಸಾಧನವಾದ ಬಂಧುತ್ವವನ್ನೂ ನಮಗೆ ಅನುಗ್ರಹಿಸಿಕೊಡಿರಿ.

## English Translation

Leaders of rites, come to our presence with divine protection : if you have any regard for me, hear my invocation : verily your friendship, your affinity, is the source of happiness : grant them, Indra and Varuna, (unto us).

॥ ಸಂಹಿತಾಪಾಠಃ ॥

ಅಸ್ಮಾಕಮಿಂದ್ರಾವರುಣಾ ಭರೇಭರೇ ಪುರೋಯೋಧಾ ಭವತಂ

ಕೃಷ್ಟ್ಯೋಜಸಾ ।

ಯದ್ವಾಂ ಹವಂತ ಉಭಯೇ ಅಧ ಸ್ಪೃಧಿ ನರಸ್ತೋಕಸ್ಯ ತನಯಸ್ಯ ಸಾತಿಷು ॥ ೯ ॥

॥ ಪದಪಾಠಃ ॥

ಅಸ್ಮಾಕಂ । ಇಂದ್ರಾವರುಣಾ । ಭರೇಽಭರೇ । ಪುರಃಽಯೋಧಾ । ಭವತಂ । ಕೃಷ್ಟಿಽಓಜಸಾ ।
ಯತ್ । ವಾಂ । ಹವಂತೇ । ಉಭಯೇ । ಅಧ । ಸ್ಪೃಧಿ । ನರಃ । ತೋಕಸ್ಯ । ತನಯಸ್ಯ । ಸಾತಿಷು ॥

॥ ಸಾಯಣಭಾಷ್ಯಂ ॥

ಹೇ ಕೃಷ್ಟ್ಯೋಜಸಾ ಶತ್ರೂಣಾಂ ಕರ್ಷಕಮೋಜೋ ಬಲಂ ಯಯೋಸ್ತಾದೃಶೌ ಹೇ ಇಂದ್ರಾವರುಣೌ ಭರೇ ಭರೇ ಸಂಗ್ರಾಮೇ ಸಂಗ್ರಾಮೇಽಸ್ಮಾಕಂ ಪುರೋಯೋಧಾ ಪುರಸ್ತಾದ್ಯೋದ್ಧಾರೌ ಭವತಂ । ಯದ್ಯೌ ವಾಮುಭಯ ಉಭಯವಿಧಾಃ ಪೂರ್ವಕಾಲೀನಾ ಇದಾನೀಂತನಾಶ್ಚ ನರೋ ನೇತಾರಃ ಸ್ತೋತಾರಃ ಸ್ಪೃಧಿ ಯುದ್ಧೇ ಯೌ ಯುವಾಂ ಹವಂತೇ । ಅಧಾಪಿ ಚ ತೋಕಸ್ಯ ಪುತ್ರಸ್ಯ ತನಯಸ್ಯ ಪೌತ್ರಸ್ಯ ಸಾತಿಷು ಸಂಭಜನೀಯೇಷು ನಿಮಿತ್ತಭೂತೇಷು ಚ ಯೌ ಯುವಾಂ ಹವಂತೇ । ತಾವಸ್ಮಾಕಂ ಪುರೋಯೋಧಾ ಭವತಮಿತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಕೃಷ್ಟ್ಯೋಜಸಾ**—ಶತ್ರುಗಳನ್ನು ಹಿಡಿದೆಳೆಯುವ ಶಕ್ತಿಯುಳ್ಳ । **ಇಂದ್ರಾವರುಣಾ**—ಎಲೈ ಇಂದ್ರಾವರುಣರೇ । **ಯತ್ ವಾಂ**—ಯಾವ ನಿಮ್ಮಿಬ್ಬರನ್ನೇ । **ಉಭಯೇ ನರಃ**—ಹಿಂದಿನ ಸ್ತೋತೃಗಳೂ ಹಾಗೆಯೇ ಇಂದಿನ ಸ್ತೋತೃಗಳೂ । **ಸ್ಪೃಧಿ**—ಯುದ್ಧದಲ್ಲಿ । **ಹವಂತೇ**—ಕರೆಯುತ್ತಿರುವರೋ । **ಅಧ**—ಅಲ್ಲದೇ । **ತೋಕಸ್ಯ**—ಪುತ್ರನ । **ತನಯಸ್ಯ**—ತತ್ಪುತ್ರನ । **ಸಾತಿಷು**—ರಕ್ಷಣ ನಿಮಿತ್ತವಾಗಿಯೂ ಕರೆಯುತ್ತಿರುವರೋ (ಅಂತಹ ನೀವಿಬ್ಬರೂ) । **ಭರೇ ಭರೇ**—ಪ್ರತಿಯೊಂದು ಸಂಗ್ರಾಮದಲ್ಲಿಯೂ । **ಅಸ್ಮಾಕಂ**—ನಮ್ಮ । **ಪುರೋಯೋಧಾ**—ಮುಂಭಾಗದಲ್ಲಿ ನಿಂತು ಯುದ್ಧಮಾಡುವವರಾಗಿ । **ಭವತಂ**—ಆಗಿರಿ.

॥ ಭಾವಾರ್ಥ ॥

ಶತ್ರುಗಳನ್ನು ಹಿಡಿದೆಳೆಯುವ ಶಕ್ತಿಯುಳ್ಳ ಎಲೈ ಇಂದ್ರಾವರುಣರೇ, ಯಾವ ನಿಮ್ಮಿಬ್ಬರನ್ನೇ ಹಿಂದಿನ ಸ್ತೋತೃಗಳೂ ಹಾಗೆಯೇ ಇಂದಿನ ಸ್ತೋತೃಗಳೂ ಯುದ್ಧದಲ್ಲಿ ಕರೆಯುತ್ತಿರುವರೋ ಅಲ್ಲದೇ ತಮ್ಮ ಪುತ್ರಪೌತ್ರಾದಿಗಳ ರಕ್ಷಣ ನಿಮಿತ್ತವಾಗಿಯೂ ಕರೆಯುತ್ತಿರುವರೋ ಅಂತಹ ನೀವಿಬ್ಬರೂ ಸಹ ಪ್ರತಿಯೊಂದು ಸಂಗ್ರಾಮದಲ್ಲಿಯೂ ನಮ್ಮ ಮುಂಭಾಗದಲ್ಲಿ ನಿಂತು ಯುದ್ಧಮಾಡುವವರಾಗಿರಿ

## English Translation

Indra and Varuna, of irresistible strength, be our preceders in every encounter, for both (past and present) worshippers invoke you to defend them in war, or for the acquirement of sons and grandsons

। ಸಂಹಿತಾಪಾಠಃ ।

ಅಸ್ಮೇ ಇಂದ್ರೋ ವರುಣೋ ಮಿತ್ರೋ ಅರ್ಯಮಾ ದ್ಯುಮ್ನಂ ಯಚ್ಛಂತು
ಮಹಿ ಶರ್ಮ ಸಪ್ರಥಃ ।
ಅವಧ್ರಂ ಜ್ಯೋತಿರದಿತೇರ್ಋತಾವೃಧೋ ದೇವಸ್ಯ ಶ್ಲೋಕಂ ಸವಿತುರ್ಮ-
ನಾಮಹೇ ॥ ೧೦ ॥

। ಪದಪಾಠಃ ।

ಅಸ್ಮೇ ಇತಿ । ಇಂದ್ರಃ । ವರುಣಃ । ಮಿತ್ರಃ । ಅರ್ಯಮಾ । ದ್ಯುಮ್ನಂ । ಯಚ್ಛಂತು । ಮಹಿ ।
ಶರ್ಮ । ಸಽಪ್ರಥಃ ।
ಅವಧ್ರಂ । ಜ್ಯೋತಿಃ । ಅದಿತೇಃ । ಋತಽವೃಧಃ । ದೇವಸ್ಯ । ಶ್ಲೋಕಂ । ಸವಿತುಃ । ಮನಾಮಹೇ ॥

। ಸಾಯಣಭಾಷ್ಯಂ ।

ಅಸ್ಮೇ ಅಸ್ಮಭ್ಯಮಿಂದ್ರಾದಯೋ ದ್ಯುಮ್ನಂ ದ್ಯೋತಮಾನಂ ಧನಂ ಯಚ್ಛಂತು । ಪ್ರಯಚ್ಛಂತು। ತಥಾ ಮಹಿ ಮಹತ್ಸಪ್ರಥಃ ಸರ್ವತಃ ಪೃಥು ವಿಸ್ತೀರ್ಣಂ ಶರ್ಮ ಗೃಹಂ ಚ ಪ್ರಯಚ್ಛಂತು । ಅಪಿ ಚರ್ತಾವೃಧ ಋತಸ್ಯ ಯಜ್ಞಸ್ಯ ವರ್ಧಯಿತ್ರ್ಯಾ ಅದಿತೇರದೀನಾಯಾ ದೇವಮಾತುರ್ಜ್ಯೋತಿಸ್ತೇಜಶ್ಚ ನೋಽಸ್ಮಾಕಮವಧ್ರಮಹಿಂಸಕಮಸ್ತು। ವಯಂ ಚ ದೇವಸ್ಯ ದಾನಾದಿಗುಣಯುಕ್ತಸ್ಯ ಸವಿತುಃ ಸರ್ವಸ್ಯ ಪ್ರೇರಕಸ್ಯ ಶ್ಲೋಕಂ ಸ್ತೋತ್ರಂ ಮನಾಮಹೇ । ಜಾನೀಮಃ । ಕುರ್ಮ ಇತ್ಯರ್ಥಃ । ಯದ್ವಾ। ದೇವೇನ ಸವಿತ್ರಾಸ್ಮಭ್ಯಂ ದೇಯಂ ಶ್ಲೋಕಂ ಯಶೋ ಮನಾಮಹೇ । ಯಾಚಾಮಹೇ ॥

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರನೂ । ವರುಣಃ—ವರುಣನೂ । ಮಿತ್ರಃ—ಮಿತ್ರನೂ । ಅರ್ಯಮಾ—ಅರ್ಯಮನೂ । ಅಸ್ಮೇ—ನಮಗೆ । ದ್ಯುಮ್ನಂ—ಧನವನ್ನು । ಯಚ್ಛಂತು—ಕೊಡಲಿ । ಮಹಿ—ಮಹತ್ತಾದುದೂ । ಸಪ್ರಥಃ—

ಅತ್ಯಂತ ವಿಸ್ತೃತವಾದುದೂ ಆದ । **ಶರ್ಮ**—ಗೃಹವನ್ನೂ ಕೊಡಲಿ । **ಋತಾ ವೃಧಃ**—ಯಜ್ಞವರ್ಧಕಳಾದ **ಅದಿತೇಃ**—ಅದಿತಿಯ । **ಜ್ಯೋತಿಃ**—ತೇಜಸ್ಸು । **ಅವಧ್ರಂ**—ನಮಗೆ ಅಹಿಂಸಿತವಾಗಿರಲಿ । **ದೇವಸ್ಯ**—ದೇವ ತಾತ್ಮನಾದ । **ಸವಿತುಃ**—ಸವಿತೃವಿನ । **ಶ್ಲೋಕಂ**—ಸ್ತೋತ್ರವನ್ನು । **ಮನಾಮಹೇ**—ನಾವು ಧ್ಯಾನಿಸಿ ನಿರ್ಮಿಸುತ್ತೇವೆ.

॥ ಭಾವಾರ್ಥ ॥

ಇಂದ್ರನೂ ವರುಣನೂ ಮಿತ್ರನೂ ಅರ್ಯಮನೂ ನಮಗೆ ಧನವನ್ನು ಕೊಡಲಿ. ಮಹತ್ತಾದುದೂ ಅತ್ಯಂತ ವಿಸ್ತೃತವಾದುದೂ ಆದ ಗೃಹವನ್ನೂ ಕೊಡಲಿ. ಯಜ್ಞವರ್ಧಕಳಾದ ಅದಿತಿಯ ತೇಜಸ್ಸು ನಮಗೆ ಅಹಿಂಸಿತವಾಗಿರಲಿ. ದೇವತಾತ್ಮನಾದ ಸವಿತೃವಿನ ಸ್ತೋತ್ರವನ್ನು ನಾವು ಧ್ಯಾನಿಸಿ ನಿರ್ಮಿಸುತ್ತೇವೆ ಮತ್ತು ಪಠಿಸುತ್ತೇವೆ.

## English Translation

May Indra, Varuna, Mitra, and Aryaman grant us wealth and a large and spacious habitation; may the lustre of Aditi, the augmentress of sacrifice, be innoxious to us: we recite the praise of the divine Savitri.

## ಎಂಭತ್ತಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಯುವಾಂ ನರೇತಿ ದಶರ್ಚಂ ತ್ರಯೋದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ಜಾಗತಮೈಂದ್ರಾವರುಣಂ । ಯುವಾಂ ನರೇತ್ಯನುಕ್ರಾಂತಂ ॥ ಅಭಿಪ್ಲವಿಕೇಷೂಕ್ಥ್ಯೇಷು ಸ್ತೋಮವೃದ್ಧೌ ಪ್ರಶಾಸ್ತುರಿದಂ ಸೂಕ್ತಮಾವಾಪಾರ್ಥಂ । ಸೂತ್ರಿತಂ ಚ । ಯುವಾಂ ನರಾ ಪುಶ್ಯತೇ ವಾಂ । ಆ. ೭-೯ । ಇತಿ ॥**

ಅನುವಾದವು **ಯುವಂ ನರಾ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಇಂದ್ರಾವರುಣರು ದೇವತೆಯು, ಜಗತೀ ಛಂದಸ್ಸು ಅನುಕ್ರಮಣಿಕೆಯಲ್ಲಿ—**ಯುವಂ ನರಾ** ಎಂದು ಹೇಳಿರುವುದು. ಅಭಿಪ್ಲವ ಸಂಬಂಧವಾದ ಉಕ್ಥ್ಯಯಾಗದಲ್ಲಿ ಸ್ತೋಮವೃದ್ಧಿಗಾಗಿ ಪ್ರಶಾಸ್ತೃವೆಂಬ ಋತ್ವಿಜನು ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯುವಂ ನರಾ ಪುಶ್ಯತೇ ವಾಂ** ಎಂಬ ಸೂತ್ರದಿಂದ (ಆ. ೭-೯) ವಿವೃತವಾಗಿರುವುದು

## ಸೂಕ್ತ—೮೩

ಮಂಡಲ—೭ ॥ ಅನುವಾಕ—೫ ॥ ಸೂಕ್ತ—೮೩ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೪, ೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಾವರುಣೌ ॥
ಛಂದಃ—ಜಗತೀ ॥

॥ ಸಂಹಿತಾಪಾಠಃ ॥

ಯುವಾಂ ನರಾ ಪಶ್ಯಮಾನಾಸ ಆಪ್ಯಂ ಪ್ರಾಚಾ ಗವ್ಯಂತಃ ಪೃಥು-
ಪರ್ಶವೋ ಯಯುಃ ।
ದಾಸಾ ಚ ವೃತ್ರಾ ಹತಮಾರ್ಯಾಣಿ ಚ ಸುದಾಸಮಿಂದ್ರಾವರುಣಾವ-
ಸಾವತಂ ॥ ೧ ॥

॥ ಪದಪಾಠಃ ॥

ಯುವಾಂ । ನರಾ । ಪಶ್ಯಮಾನಾಸಃ । ಆಪ್ಯಂ । ಪ್ರಾಚಾ । ಗವ್ಯಂತಃ । ಪೃಥುಽಪರ್ಶವಃ । ಯಯುಃ ।
ದಾಸಾ । ಚ । ವೃತ್ರಾ । ಹತಂ । ಆರ್ಯಾಣಿ । ಚ । ಸುಽದಾಸಂ । ಇಂದ್ರಾವರುಣಾ । ಅವಸಾ ।
ಅವತಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರಾವಿಂದ್ರಾವರುಣೌ ಯುವಾಂ । ಷಷ್ಠ್ಯರ್ಥೇ ದ್ವಿತೀಯಾ । ಯುವಯೋರಾಪ್ಯಂ ಬಂಧುಭಾವಂ ಪಶ್ಯಮಾನಾಸಃ ಪಶ್ಯಂತೋ ಯುಷ್ಮದ್ಬಾಂಧವಲಾಭಾರ್ಥಿನೋ ಗವ್ಯಂತೋ ಗಾ ಆತ್ಮನ ಇಚ್ಛಂತೋ ಯಜಮಾನಾಃ ಪೃಥುಪರ್ಶವಃ । ಪೃಥುರ್ವಿಸ್ತೀರ್ಣಃ ಪರ್ಶುಃ ಪಾರ್ಶ್ವಸ್ಥಿ ಯೇಷಾಂ ತೇ ತಥೋಕ್ತಾಃ । ವಿಸ್ತೀರ್ಣಾಶ್ವಪರ್ಶುಹಸ್ತಾಃ ಸಂತಃ ಪ್ರಾಚಾ ಪ್ರಾಚೀನಂ ಯಯುಃ । ಬರ್ಹಿರಾಹರಣಾರ್ಥಂ ಗಚ್ಛಂತಿ । ಪರ್ಶ್ವಾ ಹಿ ಬರ್ಹಿರಾಚ್ಛಿದ್ಯತೇ । ತಥಾ ಚ ತೈತ್ತಿರೀಯಕಂ । ಅಶ್ವಪರ್ಶ್ವಾ ಬರ್ಹಿರಾಚ್ಛೈತೀತಿ । ಹೇ ಇಂದ್ರಾವರುಣೌ ಯುವಾಂ ದಾಸಾ ದಾಸಾನ್ಯುಪಕ್ಷಪಯಿತ್ರೀಣಿ ಚ ವೃತ್ರಾಣ್ಯಾವರಕಾಣಿ ಶತ್ರುಜಾತಾನ್ಯಾರ್ಯಾಣಿ ಚ ಕರ್ಮಾನುಷ್ಠಾನಪರಾಣಿ ಚ ಶತ್ರುಜಾತಾನಿ ಹತಂ । ಹಿಂಸ್ತಂ । ಅಪಿ ಚ ಸುದಾಸಮುಸ್ಮದ್ಯಾಜ್ಯಮೇತತ್ಸಂಜ್ಞಂ ರಾಜಾನಮವಸಾ ರಕ್ಷಣೇನ ಸಾರ್ಧಮವತಂ । ಆಗಚ್ಛತಂ ॥

॥ ಪ್ರತಿಪದಾರ್ಥ ॥

ನರಾ—ನೇತೃಗಳಾದ ಎಲೈ ಇಂದ್ರಾವರುಣರೇ । ಯುವಾಂ—ನಿಮ್ಮ । ಆಪ್ಯಂ—ಬಂಧುತ್ವವನ್ನು । ಪಶ್ಯಮಾನಾಸಃ—ನಿರೀಕ್ಷಿಸುವವರಾಗಿಯೂ । ಗವ್ಯಂತಃ—ಗೋವುಗಳನ್ನು ಇಚ್ಛಿಸುವವರಾಗಿಯೂ ಇರುವ ಯಜಮಾನರು । ಪೃಥುಪರ್ಶವಃ—ದೊಡ್ಡದಾದ ಕೊಡಲಿಗಳನ್ನು ಹಿಡಿದುಕೊಂಡು । ಪ್ರಾಚಾ—ಪೂರ್ವದಿಕ್ಕಿನಲ್ಲಿ । ಯಯುಃ—ಹೊರಟಿದ್ದಾರೆ । ಇಂದ್ರಾವರುಣಾ—ಎಲೈ ಇಂದ್ರಾವರುಣರೇ। ದಾಸಾ ಚ ಆರ್ಯಾಣಿ ಚ ವೃತ್ರಾ—ದಾಸರ ಗುಂಪಿಗೆಸೇರಿದ ಶತೃಗಳನ್ನೂ ಆರ್ಯರ ಗುಂಪಿಗೆ ಸೇರಿದ ಶತ್ರುಗಳನ್ನೂ । ಹತಂ—ನಾಶಮಾಡಿರಿ। ಸುದಾಸಂ—ಸುದಾಸನೆಂಬ ರಾಜನಲ್ಲಿಗೆ । ಅವಸಾ—ರಕ್ಷಣೆಯೊಡನೆ ಕೂಡಿ । ಅವತಂ—ಬನ್ನಿರಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಇಂದ್ರಾವರುಣರೇ, ನಿಮ್ಮ ಬಂಧುತ್ವವನ್ನೂ, ಸಹಾಯವನ್ನೂ ನಿರೀಕ್ಷಿಸಿದವರಾಗಿಯೂ ಗೋವುಗಳನ್ನು ಅಪೇಕ್ಷಿಸುವವರಾಗಿಯೂ ಇರುವ ಯಜಮಾನರು ದೊಡ್ಡದಾದ ಕೊಡಲಿಗಳನ್ನು ಹಿಡಿದುಕೊಂಡು ಪೂರ್ವದಿಕ್ಕಿನಲ್ಲಿ ದರ್ಭೆಗಳನ್ನು ಕತ್ತರಿಸುವುದಕ್ಕಾಗಿ ಹೊರಟಿದ್ದಾರೆ. ಎಲೈ ಇಂದ್ರಾವರುಣರೇ, ದಾಸರ ಗುಂಪಿಗೆ ಸೇರಿದ ಶತ್ರುಗಳನ್ನೂ ಆರ್ಯರ ಗುಂಪಿಗ ಸೇರಿದ ಶತ್ರುಗಳನ್ನೂ ನಾಶಮಾಡಿರಿ. ಸುದಾಸನೆಂಬ ರಾಜನಲ್ಲಿಗೆ ನಿಮ್ಮ ರಕ್ಷಣೆಯೊಡನೆ ಬನ್ನಿರಿ.

## English Translation

Indra and Varuna, leaders (of rites), contemplating your affinity, and desirous of cattle, the worshippers, armed with large sickles, have proceeded to the east (to cut the sacred grass): destroy, Indra and Varuna your enemies, whether Dasas or Aryas and defend Sudas with your protection

॥ ಸಂಹಿತಾಪಾಠಃ ॥

ಯತ್ರಾ ನರಃ ಸಮಯಂತೇ ಕೃತಧ್ವಜೋ ಯಸ್ಮಿನ್ನಾಜಾ ಭವತಿ ಕಿಂ ಚನ ಪ್ರಿಯಂ ।
ಯತ್ರಾ ಭಯಂತೇ ಭುವನಾ ಸ್ವರ್ದೃಶಸ್ತತ್ರಾ ನ ಇಂದ್ರಾವರುಣಾಧಿ ವೋಚತಂ ॥ ೨ ॥

॥ ಪದಪಾಠಃ ॥

ಯತ್ರ । ನರಃ । ಸಂऽಅಯಂತೇ । ಕೃತऽಧ್ವಜಃ । ಯಸ್ಮಿನ್ । ಆಜಾ । ಭವತಿ । ಕಿಂ । ಚನ । ಪ್ರಿಯಂ ।
ಯತ್ರ । ಭಯಂತೇ । ಭುವನಾ । ಸ್ವಃऽದೃಶಃ । ತತ್ರ । ನಃ । ಇಂದ್ರಾವರುಣಾ । ಅಧಿ । ವೋಚತಂ ॥೨॥

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿನ್ಸಂಗ್ರಾಮೇ ನರೋ ಮನುಷ್ಯಾಃ ಕೃತಧ್ವಜ ಉಚ್ಛ್ರಿತಧ್ವಜಾಃ ಸಮಯಂತೇ ಯುದ್ಧಾರ್ಥಂ ಸಂಗಚ್ಛಂತೇ । ಯಸ್ಮಿಂಶ್ಚಾಜಾಜೌ ಯುದ್ಧೇ । ಚನೇತಿ ನಿಪಾತದ್ವಯಸಮುದಾಯೋ ವಿಭಜ್ಯ ಯೋಜನೀಯಃ । ಕಿಂಚ ಕಿಮಪಿ ಪ್ರಿಯಮನುಕೂಲಂ ನ ಭವತಿ ಅಪಿ ತು ಸರ್ವಂ ದುಷ್ಕರಂ ಭವತಿ । ಯತ್ರ ಚ ಯುದ್ಧೇ ಭುವನಾ ಭುವನಾನಿ ಭೂತಜಾತಾನಿ ಸ್ವರ್ದೃಶಃ ಶರೀರಪಾತಾದೂರ್ಧ್ವಂ ಸ್ವರ್ಗಸ್ಯ ದ್ರಷ್ಟಾರೋ ವೀರಾಶ್ಚ ಭಯಂತೇ ಬಿಭ್ಯತಿ । ತತ್ರ ತಾದೃಶೇ ಸಂಗ್ರಾಮೇ ಹೇ ಇಂದ್ರಾವರುಣೌ ನೋಽಸ್ಮಾನಧಿ ವೋಚತಂ । ಅಸ್ಮತ್ಪಕ್ಷಪಾತವಚನೌ ಭವತಂ ॥

॥ ಪ್ರತಿಪದಾರ್ಥ ॥

**ಇಂದ್ರಾವರುಣಾ**—ಎಲೈ ಇಂದ್ರ ಮತ್ತು ವರುಣದೇವತೆಗಳೇ । **ಯತ್ರ**—ಯಾವ ಸಂಗ್ರಾಮದಲ್ಲಿ । **ನರಃ**—ಮಾನವರು । **ಕೃತಧ್ವಜಾಃ**—ಧ್ವಜಗಳನ್ನು ಮೇಲಕ್ಕೆ ಏರಿಸಿಕೊಂಡು । **ಸಮಯಂತೇ**—ಯುದ್ಧಾರ್ಥವಾಗಿ ಒಟ್ಟುಗೂಡುತ್ತಾರೋ । **ಯಸ್ಮಿನ್**—ಯಾವ । **ಆಜಾ ಚನ**—ಯುದ್ಧದಲ್ಲಿಯೇ । **ಕಿಂಚನ**—ಕೊಂಚವಾದರೂ । **ಪ್ರಿಯಂ**—ಅನುಕೂಲದ ಸನ್ನಿವೇಶವು । ( **ನ** ) **ಭವತಿ**—ಇರುವುದಿಲ್ಲವೋ । **ಯತ್ರ**—ಯಾವ ಯುದ್ಧದಲ್ಲಿ । **ಭುವನಾ**—ಸಕಲ ಭೂತಜಾತಗಳೂ । **ಸ್ವರ್ದೃಶಃ**—ಅಂತರಿಕ್ಷದ ಕಡೆ ಮುಖಮಾಡಿಕೊಂಡು । **ಭಯಂತೇ**—ಭಯಪಡುವರೋ । **ತತ್ರ**—ಅಂತಹ ಸಂಗ್ರಾಮದಲ್ಲಿ । **ನಃ**—ನಮಗೆ । **ಅಧಿ ವೋಚತಂ**—ಉತ್ತೇಜಕವಾದ ವಾಕ್ಯಗಳನ್ನು ಹೇಳಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣ ದೇವತೆಗಳೇ, ಯಾವ ಸಂಗ್ರಾಮದಲ್ಲಿ ಮಾನವರು ಧ್ವಜಗಳನ್ನು ಮೇಲಕ್ಕೆ ಎತ್ತಿಹಿಡಿದುಕೊಂಡು ಯುದ್ಧಾರ್ಥವಾಗಿ ಒಟ್ಟುಗೂಡುತ್ತಾರೆಯೋ, ಯಾವ ಯುದ್ಧದಲ್ಲಿ ಕೊಂಚವಾದರೂ ಅನುಕೂಲವಾದ ಸನ್ನಿವೇಶವಿರುವುದಿಲ್ಲವೋ ಯಾವ ಯುದ್ಧದಲ್ಲಿ ಸಕಲ ಭೂತಜಾತಗಳೂ ಅಂತರಿಕ್ಷದ ಕಡೆ ಮುಖಮಾಡಿಕೊಂಡು ಭಯಪಡುವರೋ ಅಂತಹ ಸಂಗ್ರಾಮದಲ್ಲಿ ನಮಗೆ ಉತ್ತೇಜಕವಾದ ವಾಕ್ಯಗಳನ್ನು ಹೇಳಿರಿ.

## English Translation

Where men assemble with uplifted banners, in whatever confl ct, there is something unfavourable; where living beings, looking to heaven, are in fear, there, Indra and Varuna, speak to us (encouragement).

॥ ಸಂಹಿತಾಪಾಠಃ ॥

ಸಂ ಭೂಮ್ಯಾ ಅಂತಾ ಧ್ವಸಿರಾ ಅದೃಕ್ಷತೇಂದ್ರಾವರುಣಾ ದಿವಿ ಘೋಷ
ಆರುಹತ್ ।
ಅಸ್ಥುರ್ಜನಾನಾಮುಪ ಮಾಮರಾತಯೋಽರ್ವಾಗವಸಾ ಹವನಶ್ರುತಾ
ಗತಂ ॥ ೩ ॥

॥ ಪದಪಾಠಃ ॥

ಸಂ । ಭೂಮ್ಯಾಃ । ಅಂತಾಃ । ಧ್ವಸಿರಾಃ । ಅದೃಕ್ಷತ । ಇಂದ್ರಾವರುಣಾ । ದಿವಿ । ಘೋಷಃ । ಆ ।
ಅರುಹತ್ ।

ಅಸ್ಥುಃ । ಜನಾನಾಂ । ಉಪ । ಮಾಂ । ಅರಾತಯಃ । ಅರ್ವಾಕ್ । ಅವಸಾ । ಹವನ॰ಶ್ರುತಾ । ಆ । ಗತಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ಭೂಮ್ಯಾ ಅಂತಾಃ ಪರ್ಯಂತಾ ಧ್ವಸಿರಾಃ ಸೈನಿಕೈರ್ಧ್ವಸ್ತಾಃ ಸಮದೃಕ್ಷತ । ಸಂದೃಶ್ಯಂತೇ । ತಥಾ ದಿವಿ ದ್ಯುಲೋಕೇ ಘೋಷಃ ಸೈನಿಕಾನಾಂ ಶಬ್ದಶ್ಚಾರುಹತ್ । ಆರೂಢೋಽಭೂತ್ । ಜನಾನಾಮಸ್ಮದೀಯಾನಾಂ ಭಟಾನಾಮರಾತಯಃ ಶತ್ರವೋ ಮಾಮುಪಾಸ್ಥುಃ । ಉಪಸ್ಥಿತಾಃ । ಏವಂ ಪ್ರವರ್ತಮಾನೇಽಸ್ಮಿನ್ಯುದ್ಧೇ ಹೇ ಹವನಶ್ರುತಾಹ್ವಾನಶೀಲಾವಿಂದ್ರಾವರುಣೌ ಅರ್ವಾಗಸ್ಮದಭಿಮುಖಮವಸಾ ರಕ್ಷಣೇನ ಸಹಾ ಗತಂ । ಆಗಚ್ಛತಂ ॥

॥ ಪ್ರತಿಪದಾರ್ಥ ॥

**ಇಂದ್ರಾವರುಣಾ**—ಎಲೈ ಇಂದ್ರಾವರುಣರೇ । **ಭೂಮ್ಯಾಃ**—ಭೂಮಿಯ । **ಅಂತಾಃ**—ಪರ್ಯಂತಗಳೆಲ್ಲವೂ । **ಧ್ವಸಿರಾಃ**—ಸೈನಿಕರಿಂದ ಧ್ವಂಸಮಾಡಲ್ಪಟ್ಟಂತೆ । **ಸಮದೃಕ್ಷತ**—ಕಾಣಿಸುತ್ತವೆ । **ಘೋಷಃ**—ಸೈನಿಕರ ಘೋಷವು । **ದಿವಿ**—ದ್ಯುಲೋಕದವರೆಗೂ । **ಆರುಹತ್**—ಹತ್ತಿದೆ । **ಜನಾನಾಂ** ನಮ್ಮ ಜನರ । **ಅರಾತಯಃ**—ಶತ್ರುಗಳೆಲ್ಲರೂ । **ಮಾಂ**—ನನ್ನನ್ನು । **ಉಪಾಸ್ಥುಃ**—ಸಮೀಪಿಸಿದ್ದಾರೆ । **ಹವನಶ್ರುತಾ**—ನಮ್ಮ ಮೊರೆಯನ್ನು ಕೇಳುವ ಎಲೈ ಇಂದ್ರಾವರುಣರೇ । **ಅರ್ವಾಕ್**—ನಮಗಭಿಮುಖವಾಗಿ । **ಅವಸಾ**—ರಕ್ಷಣೆಯೊಡನೆ । **ಆ ಗತಂ**—ದಯಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಭೂಮಿಯ ಪರ್ಯಂತಗಳೆಲ್ಲವೂ ಸೈನಿಕರಿಂದ ಧ್ವಂಸವಾದಲ್ಪಟ್ಟಂತೆ ಕಾಣಿಸುತ್ತವೆ. ಸೈನಿಕರ ಘೋಷವು ದ್ಯುಲೋಕದವರೆಗೂ ಹತ್ತಿದೆ. ನಮ್ಮ ಜನರ ಶತ್ರುಗಳೆಲ್ಲರೂ ನನ್ನನ್ನು ಸಮೀಪಿಸಿದ್ದಾರೆ. ನಮ್ಮ ಮೊರೆಯನ್ನು ಕೇಳುವ ಎಲೈ ಇಂದ್ರಾವರುಣರೇ, ರಕ್ಷಣೆಯೊಡನೆ ನಮಗಭಿಮುಖವಾಗಿ ಬನ್ನಿರಿ.

## English Translation

The ends of the earth are beheld laid waste; the clamour has ascended, Indra and Varuna, to heaven: the adversaries of my people approach me: having heard my invocation, come for my defence.

॥ ಸಂಹಿತಾಪಾಠಃ ॥

ಇಂದ್ರಾವರುಣಾ ವಧನಾಭಿರಪ್ರತಿ ಭೇದಂ ವನ್ವಂತಾ ಪ್ರ ಸುದಾಸಮಾವತಂ ।

ಬ್ರಹ್ಮಾಣ್ಯೇಷಾಂ ಶೃಣುತಂ ಹವೀಮನಿ ಸತ್ಯಾ ತೃತ್ಸೂನಾಮಭವತ್ಪು-

ರೋಹಿತಿಃ ॥ ೪ ॥

॥ ಪದಪಾಠಃ ॥

ಇಂದ್ರಾವರುಣಾ । ವಧನಾಭಿಃ । ಅಪ್ರತಿ । ಭೇದಂ । ವನ್ವಂತಾ । ಪ್ರ । ಸುಽದಾಸಂ । ಅವತಂ ।

ಬ್ರಹ್ಮಾಣಿ । ಏಷಾಂ । ಶೃಣುತಂ । ಹವೀಮನಿ । ಸತ್ಯಾ । ತೃತ್ಸೂನಾಂ । ಅಭವತ್ । ಪುರಃಽಹಿತಿಃ ॥೪॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೇಂದ್ರಾವರುಣೌ ವಧನಾಭಿರ್ವಧಕೈರಾಯುಧೈರಪ್ರತಿಗತಮಪ್ರಾಪ್ತಂ ಭೇದ-ನೇತತ್ಸಂಜ್ಞಂ ಸುದಾಸಃ ಶತ್ರುಂ ವನ್ವಂತಾ ಹಿಂಸಂತೌ ಯುವಾಂ ಸುದಾಸಂ । ಶೋಭನಂ ದದಾತೀತಿ ಸುದಾಃ। ಏತತ್ಸಂಜ್ಞಂ ಮಮ ಯಾಜ್ಯಂ ರಾಜಾನಂ ಪ್ರಾವತಂ। ಪ್ರಕರ್ಷೇಣಾರಕ್ಷತಂ । ಏಷಾಂ ತೃತ್ಸೂನಾಂ ಮಮ ಯಾಜ್ಯಾನಾಂ ಬ್ರಹ್ಮಾಣಿ ಸ್ತೋತ್ರಾಣಿ ಶೃಣುತಂ । ಅಶೃಣುತಂ । ಕದಾ । ಹವೀಮನಿ । ಆಹ್ವ-ಯಂತೇಽಸ್ಮಿನ್ಯುದ್ಧಾರ್ಥಂ ಪರಸ್ಪರಮಿತಿ ಹವೀಮಾ ಸಂಗ್ರಾಮಃ । ತಸ್ಮಿನ್ । ಯಸ್ಮಾದೇವಂ ತಸ್ಮಾತ್ತೃ-ತ್ಸೂನಾಮೇತತ್ಸಂಜ್ಞಾನಾಂ ಮಮ ಯಾಜ್ಯಾನಾಂ ಪುರೋಹಿತಿರ್ಮಮ ಪುರೋಧಾನಂ ಸತ್ಯಾ ಸತ್ಯ-ಫಲಮಭವತ್ । ತೇಷು ಯನ್ಮಮ ಪೌರೋಹಿತ್ಯಂ ತತ್ಸಫಲಂ ಜಾತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರಾವರುಣಾ—ಎಲೈ ಇಂದ್ರಾವರುಣರೇ । ಅಪ್ರತಿ—ಇನ್ನೂ ಸೋಲಿಸಲ್ಪಡದಿರುವ । ಭೇದಂ—ಸುದಾಸನ ಶತ್ರುವಾದ ಭೇದನನ್ನು । ವಧನಾಭಿಃ—ವಧಸಾಧನವಾದ ಆಯುಧಗಳಿಂದ । ವನ್ವಂತಾ—ಹಿಂಸಿಸಿದ ನೀವು । ಸುದಾಸಂ—ಸುದಾಸನೆಂಬ ರಾಜನನ್ನು । ಪ್ರ ಅವತಂ—ಪೂರ್ಣವಾಗಿ ರಕ್ಷಿಸಿದಿರಿ । ಹವೀಮನಿ—ಯುದ್ಧದಲ್ಲಿ । ಏಷಾಂ—ಈ ತೃತ್ಸುಗಳ । ಬ್ರಹ್ಮಾಣಿ—ಸ್ತೋತ್ರಗಳನ್ನು । ಶೃಣುತಂ—ಕೇಳಿದಿರಿ (ಆದುದರಿಂದಲೇ)। ತೃತ್ಸೂನಾಂ—ಯಜ್ಞಕರ್ತರಾದ ಈ ತೃತ್ಸುಗಳಿಗಾಗಿ । ಪುರೋಹಿತಿಃ—ನನ್ನ ಪೌರೋಹಿತ್ಯವು । ಸತ್ಯಾ—ಸತ್ಯ ಫಲವುಳ್ಳದ್ದಾಗಿ । ಅಭವತ್—ಆಯಿತು.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ನಿಮ್ಮ ಸಹಾಯವಿಲ್ಲದೇ ಸೋಲಿಸಲ್ಪಡಲಾಗದ ಸುದಾಸ ಶತ್ರುವಾದ ಭೇದನನ್ನು ವಧಸಾಧನವಾದ ಆಯುಧಗಳಿಂದ ಹಿಂಸಿಸಿದ ನೀವು ಸುದಾಸನೆಂಬ ರಾಜನನ್ನು ಪೂರ್ಣವಾಗಿ ರಕ್ಷಿಸದಿರಿ. ಯುದ್ಧದಲ್ಲಿ ತೃತ್ಸುಜನರ ಸ್ತೋತ್ರಗಳನ್ನು ಕೇಳಿದಿರಿ ಆದುದರಿಂದಲೇ ಯಜ್ಞಕರ್ತರಾದ ಈ ತೃತ್ಸುಗಳಿಗಾಗಿ ನನ್ನ ಪೌರೋಹಿತ್ಯವು ಸತ್ಯ ಫಲವುಳ್ಳದ್ದಾಗಿ ಆಯಿತು.

## English Translation

Indra and Varuna, you protected Sudas, overwhelming the yet unassailed Bheda with your fatal weapons: hear the prayers of these Tritsus in time of battle, so that my ministration may have borne them fruit.

॥ ವಿಶೇಷವಿಷಯಗಳು ॥

ತೃತ್ಸೂನಾಂ, ಭೇದಂ—ತೃತ್ಸುಗಳ ಮತ್ತು ಭೇದನೆಂಬ ರಾಜನ ವಿಷಯವನ್ನು ನಾವು ಋ. ಸಂ. ಭಾಗ ೨೯ರಲ್ಲಿ ೭ ನೇ ಮಂಡಲದ ೧೮ ನೇ ಸೂಕ್ತದ ಪೀಠಿಕೆಯಲ್ಲಿ ವಿಸ್ತಾರವಾಗಿ ತಿಳಿಸಿದೇವೆ. ಅಥವಾ ಇದೇ ಸೂಕ್ತದ ೬ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ಈ ವಿಷಯವಾಗಿ ಬರೆದಿರುವುದನ್ನು ನೋಡಿ.

॥ ಸಂಹಿತಾಪಾಠಃ ॥

ಇಂದ್ರಾವರುಣಾವಭ್ಯಾ ತಪಂತಿ ಮಾಘಾನ್ಯರ್ಯೋ ವನುಷಾಮರಾತಯಃ।
ಯುವಂ ಹಿ ವಸ್ವ ಉಭಯಸ್ಯ ರಾಜಥೋಽಧ ಸ್ಮಾ ನೋಽವತಂ ಪಾರ್ಯೇ
ದಿವಿ ॥ ೫ ॥

॥ ಪದಪಾಠಃ ॥

ಇಂದ್ರಾವರುಣಾ । ಅಭಿ । ಆ । ತಪಂತಿ । ಮಾ । ಅಘಾನಿ । ಅರ್ಯಃ । ವನುಷಾಂ । ಅರಾತಯಃ ।
ಯುವಂ । ಹಿ । ವಸ್ವಃ । ಉಭಯಸ್ಯ । ರಾಜಥಃ । ಅಧ । ಸ್ಮ । ನಃ । ಅವತಂ । ಪಾರ್ಯೇ । ದಿವಿ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣಾ ಅರ್ಯೋಽರೇಃ ಶತ್ರೋಃ ಸಂಬಂಧೀನ್ಯಘಾನ್ಯಾಹಂತೄಣ್ಯಾಯುಧಾನಿ ಮಾ ಮಾಮಭ್ಯಾ ತಪಂತಿ । ಅಭಿತೋ ಬಾಧಂತೇ । ಅಪಿ ಚ ವನುಷಾಂ ಹಿಂಸಕಾನಾಂ ಮಧ್ಯೇಽರಾತಯೋಽಭಿಗಮನಶೀಲಾಃ ಶತ್ರವಶ್ಚ ಮಾಮಭಿತಪಂತಿ । ಯುವಂ ಹಿ ಯುವಾಂ ಖಲೂಭಯಸ್ಯ ಪಾರ್ಥಿವಸ್ಯ ದಿವ್ಯಸ್ಯ ವಸ್ವೋ ವಸುನೋ ಧನಸ್ಯ ರಾಜಥಃ । ಈಶಾಥೇ । ರಾಜತಿರೈಶ್ವರ್ಯಕರ್ಮಾ । ಅಧ ಸ್ಮಾತಃ ಕಾರಣಾತ್ ಪಾರ್ಯೇ ತರಣೀಯೇ ದಿವಿ ದಿವಸೇ ಯುದ್ಧದಿನೇ ನೋಽಸ್ಮಾನವತಂ । ರಕ್ಷತಂ ॥

॥ ಪ್ರತಿಪದಾರ್ಥ ॥

ಇಂದ್ರಾವರುಣಾ—ಎಲೈ ಇಂದ್ರ ಮತ್ತು ವರುಣದೇವತೆಗಳೇ । ಅರ್ಯಃ—ಶತ್ರುಸಂಬಂಧಿಯಾದ । ಅಘಾನಿ—ಆಯುಧಗಳು । ಮಾ—ನನ್ನನ್ನು । ಅಭ್ಯಾತಪಂತಿ—ಪೂರ್ಣವಾಗಿ ಹಿಂಸಿಸುತ್ತವೆ । ವನುಷಾಂ—

ಹಿಂಸಕರಾದ ಶತ್ರುಗಳಲ್ಲಿ । **ಅರಾತಯಃ**—ಮೇಲೆ ಬೀಳತಕ್ಕ ಶತ್ರುಗಳು ನನ್ನನ್ನು ಹಿಂಸಿಸುತ್ತಾರೆ । **ಯುವಂ ಹಿ**—ನೀವಾದರೋ । **ಉಭಯಸ್ಯ**—ದ್ಯಾವಾಪೃಥಿವಿಗಳೆರಡರ ' **ವಸ್ವಃ**—ಸಂಪತ್ತಿಗೂ । **ರಾಜಥಃ**—ಪ್ರಭುಗಳಾಗಿದ್ದೀರಿ । **ಅಧ ಸ್ಮ**—ಆದುದರಿಂದಲೇ । **ಪಾರ್ಯೇ**—ಕಷ್ಟವನ್ನು ದಾಟಬೇಕಾದ । **ದಿವಿ**—ಈ ಯುದ್ಧದಿನದಲ್ಲಿ । **ನಃ**—ನಮ್ಮನ್ನು । **ಅವತಂ**—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣದೇವತೆಗಳೇ, ಶತ್ರುಸಂಬಂಧಿಯಾದ ಆಯುಧಗಳು ನನ್ನನ್ನು ಪೂರ್ಣವಾಗಿ ಹಿಂಸಿಸುತ್ತವೆ. ಹಿಂಸಕರಾದ ಶತ್ರುಗಳಲ್ಲಿ ಮೇಲೆ ಬೀಳತಕ್ಕವರೂ ನನ್ನನ್ನು ಹಿಂಸಿಸುತ್ತಾರೆ. ನೀವಾದರೋ ದ್ಯಾವಾಪೃಥಿವಿಗಳೆರಡರ ಸಂಪತ್ತಿಗೂ ಪ್ರಭುಗಳಾಗಿ ಇದ್ದೀರಿ. ಕಷ್ಟವನ್ನು ದಾಟಬೇಕಾದ ಈ ಯುದ್ಧದಿನದಲ್ಲಿ ನಮ್ಮನ್ನು ರಕ್ಷಿಸಿರಿ.

## English Translation

Indra and Varuna, the murderous (weapons) of my enemy distress me: foes amongst the malignant (assail me): you two are sovereigns over both (celestial and terrestrial) wealth: protect us therefore on the day of battle.

॥ ವಿಶೇಷವಿಷಯಗಳು ॥

ದಿವಿ—ದಿನದಲ್ಲಿ ಎಂದರೆ ಯುದ್ಧ ನಡೆಯುತ್ತಿರುವ ದಿನದಲ್ಲಿ. ಇಲ್ಲಿ ಯುದ್ಧವೆಂದರೆ ಸುದಾಸನಿಗೂ ಅವನ ಶತ್ರುಗಳಾದ ಸಿಮ್ಯು ಮೊದಲಾದ ಹತ್ತು ಮಂದಿ ರಾಜರಿಗೂ ನಡೆದ ಯುದ್ಧವು. ಈ ಯುದ್ಧದ ವಿವರಣೆಯು ವಿಷಯದಲ್ಲಿ ಇದೇ ಸೂಕ್ತದ ೬ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ಬರೆದಿರುವುದನ್ನು ನೋಡಿ.

॥ ಸಂಹಿತಾಪಾಠಃ ॥

ಯುವಾಂ ಹವಂತ ಉಭಯಾಸ ಆಜಿಷ್ವಿಂದ್ರಂ ಚ ವಸ್ವೋ ವರುಣಂ ಚ ಸಾತಯೇ ।
ಯತ್ರ ರಾಜಭಿರ್ದಶಭಿರ್ನಿಬಾಧಿತಂ ಪ್ರ ಸುದಾಸಮಾವತಂ ತೃತ್ಸುಭಿಃ ಸಹ॥

॥ ಪದಪಾಠಃ ॥

ಯುವಾಂ । ಹವಂತೇ । ಉಭಯಾಸಃ । ಆಜಿಷು । ಇಂದ್ರಂ । ಚ । ವಸ್ವಃ । ವರುಣಂ । ಚ । ಸಾತಯೇ ।
ಯತ್ರ । ರಾಜಽಭಿಃ । ದಶಽಭಿಃ । ನಿಽಬಾಧಿತಂ । ಪ್ರ । ಸುಽದಾಸಂ । ಆವತಂ । ತೃತ್ಸುಽಭಿಃ । ಸಹ ॥

॥ ಸಾಯಣಭಾಷ್ಯಂ ॥

ಉಭಯಾಸ ಉಭಯವಿಧಾಃ ಸುದಾಃ ಸಂಜ್ಞೋ ರಾಜಾ ತತ್ಸಹಾಯಭೂತಾಸ್ತೃತ್ಸವಶ್ಚೈವಂ ದ್ವಿಪ್ರಕಾರಾ ಜನಾ ಆಜಿಷು ಸಂಗ್ರಾಮೇಷ್ವಿಂದ್ರಂ ಚ ವರುಣಂ ಚ ಯುವಾಂ ಹವಂತೇ । ಆಹ್ವಯಂತೇ । ಕಿಮರ್ಥಂ । ವಸ್ವೋ ಧನಸ್ಯ ಸಾತಯೇ ಸಂಭಜನಾರ್ಥಂ । ಯತ್ರ ಯೇಷ್ವಾಜಿಷು ದಶಭಿರ್ದಶಸಂಖ್ಯಾಕೈ ರಾಜಭಿಃ ಶತ್ರುಭೂತೈರ್ನೃಪೈರ್ನಿಬಾಧಿತಂ ನಿತರಾಂ ಹಿಂಸಿತಂ ಸುದಾಸಂ ತೃತ್ಸುಭಿಃ ಸಹ ವರ್ತಮಾನಂ ಪ್ರಾವತಂ ಯುವಾಂ ಪ್ರಕರ್ಷೇಣಾರಕ್ಷತಂ । ತೇಷ್ವಾಜಿಷ್ವಿತ್ಯನ್ವಯಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾವರುಣರೇ) ಯತ್ರ—ಯಾವ ಯುದ್ಧಗಳಲ್ಲಿ । ದಶಭಿಃ—ದಶಸಂಖ್ಯಾಕರಾದ । ರಾಜಭಿಃ–ಶತ್ರುರಾಜರಿಂದ । ನಿಬಾಧಿತಂ—ಪೂರ್ಣವಾಗಿ ಹಿಂಸಿತನಾದ । ಸುದಾಸಂ—ಸುದಾಸನೆಂಬ ರಾಜನನ್ನು । ತೃತ್ಸುಭಿಃ ಸಹ—ತೃತ್ಸುಗಳೊಡನೆ । ಪ್ರ ಆವತಂ—ಪೂರ್ಣವಾಗಿ ರಕ್ಷಿಸಿದಿರೋ ಅಂತಹ । ಆಜಿಷು–ಯುದ್ಧಗಳಲ್ಲಿ। ಉಭಯಾಸಃ—ಸುದಾಸ ಮತ್ತು ತೃತ್ಸುವಿನ ಕಡೆಯುವರೆಲ್ಲರೂ । ಇಂದ್ರಂ ಚ—ಇಂದ್ರ ಸಂಜ್ಞಕನೂ । ವರುಣಂ ಚ—ವರುಣ ಸಂಜ್ಞಕನೂ ಆದ । ಯುವಾಂ—ನಿಮ್ಮಿಬ್ಬರನ್ನೇ । ವಸ್ವಃ—ಧನದ । ಸಾತಯೇ—ಲಾಭಾರ್ಥವಾಗಿ । ಹವಂತೇ—ಪ್ರಾರ್ಥಿಸಿ ಕರೆಯುತ್ತಾರೆ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಯಾವ ಯುದ್ಧಗಳಲ್ಲಿ ದಶಸಂಖ್ಯಾಕರಾದ ಶತ್ರುರಾಜರಿಂದ ಪೂರ್ಣವಾಗಿ ಹಿಂಸಿತನಾದ ಸುದಾಸನೆಂಬ ರಾಜನನ್ನು ತೃತ್ಸುಗಳೊಡನೆ ಪೂರ್ಣವಾಗಿ ರಕ್ಷಿಸಿದಿರೋ ಅಂತಹ ಯುದ್ಧಗಳಲ್ಲಿ ಸುದಾಸ ಮತ್ತು ತೃತ್ಸುವಿನ ಕಡೆಯುವರೆಲ್ಲರೂ ಇಂದ್ರಾವರುಣರಾದ ನಿಮ್ಮಿಬ್ಬರನ್ನೇ ಧನದ ಲಾಭಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತಾರೆ.

## English Translation

Both (Sudas and the Tritsus) call upon you two, (Indra and Varuna), in combats for the acquirement of wealth, when you defend Sudas, together with the Tritsus, when attacked by the ten Rajas.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ಸುದಾಸನೆಂಬ ರಾಜನಿಗೂ ಅವನ ಶತ್ರುಗಳಾದ ಹತ್ತು ಮಂದಿ ರಾಜರಿಗೂ ನಡೆದ ಯುದ್ಧದ ವಿಷಯವಾದ ಪ್ರಸ್ತಾಪವಿದೆ. ಈ ವಿಷಯವು ಇದೇ ಮಂಡಲದ ೧೮ ಮತ್ತು ೩೩ ನೇ ಸೂಕ್ತಗಳಲ್ಲಿಯೂ ಉಕ್ತವಾಗಿದೆ. ಈ ವಿಷಯದಲ್ಲಿ ಸೂಕ್ಷ್ಮವಾದ ವಿವರಣೆಯನ್ನು ಇಲ್ಲಿ ಕೊಡುವುದು ಅವಶ್ಯಕವಾಗಿದೆ.

ಸುದಾಸನೆಂಬ ರಾಜನು ಒಂದು ಸಮಯದಲ್ಲಿ ತನಗೆ ವಿರೋಧಿಗಳಾದ ಶಿಮ್ಯು, ತುರ್ವಶ, ದ್ರುಹ್ಯು, ಕವಷ, ಪೂರು, ಅನು, ಭೇದ, ಶಂಬರ, ವೈಕರ್ಣರೆಂಬ ಹೆಸರಿನ ಇಬ್ಬರು ರಾಜರು ಎಂಬ ಒಟ್ಟು ಹತ್ತು ಮಂದಿ ರಾಜರೊಡನೆ

ಯುದ್ಧಮಾಡಬೇಕಾಗಿ ಬಂದಿತು. ಈ ಯುದ್ಧವು ಬಹಳ ಬಿರುಸಾಗಿಯೂ ಭಯಂಕರವಾಗಿಯೂ ನಡೆದಂತೆ ತೋರುತ್ತದೆ. ಈ ಯುದ್ಧದಲ್ಲಿ ತೃತ್ಸುವೆಂಬ ಜನಾಂಗದವರು ಸುದಾಸನಿಗೆ ಸಹಾಯಮಾಡಿದರೆಂದೂ ಈ ಸಹಾಯದ ಪರಿಣಾಮವಾಗಿ ಸುದಾಸನು ಮೇಲೆ ಹೇಳಿದ ಹತ್ತು ಮಂದಿ ರಾಜರನ್ನು ಸೋಲಿಸಿದುದಾಗಿಯೂ ಇದೇ ಮಂಡಲದ ೧೮ ನೇಯ ಸೂಕ್ತದಲ್ಲಿ ವರ್ಣನೆ ಇದೆ. ಇದಲ್ಲದೆ ಈ ಯುದ್ಧದ ಪ್ರಸ್ತಾಪವು ಇದೇ ಮಂಡಲದ ೩೩ ನೆಯ ಸೂಕ್ತದಲ್ಲಿಯೂ ಪ್ರಕೃತ ಸೂಕ್ತದಲ್ಲಿಯೂ (೮೩) ಉಕ್ತವಾಗಿದೆ. ಈ ಯುದ್ಧವು (ಪಂಜಾಬಿನಲ್ಲಿರುವ) ಪರುಷ್ಣೀ ನದಿಯ ದಡದಲ್ಲಿ ನಡೆದಿರುವುದಾಗಿ ತಿಳಿಯಬರುತ್ತದೆ. ಸುದಾಸನ ಕಡೆ ಯದುವೆಂಬ ರಾಜನೂ ಸಹ ತನ್ನ ಅನುಯಾಯಿಗಳಾದ ಮತ್ಸ್ಯರು, ಪಕ್ಥರು, ಭಲಾನರು, ಅಲಿನರು, ವಿಷಾಣಿಗಳು, ಶಿವರು, ಅಜರು, ಯಕ್ಷುಗಳು, ಶಿಗ್ರುಗಳು ಎಂಬ ಜನಾಂಗದವರನ್ನು ಕರೆತಂದು ಸಹಾಯಮಾಡಿರುವುದಾಗಿ ಹೇಳಿದೆ ಇಂತಹ ಮತ್ತೊಂದು ಯುದ್ಧವು ಭೇದನೆಂಬ ಶತ್ರುರಾಜನೊಡನೆ ಯಮುನಾ ನದಿ ತೀರದಲ್ಲಿ ನಡೆದಿರುವುದಾಗಿ ತಿಳಿಯಬರುತ್ತವೆ. ಈ ಭೇದನೆಂಬುವನು ಈ ದೇಶದ ಪೂರ್ವನಿವಾಸಿಗಳಾದ ದಸ್ಯುಜನರ ಮುಖಂಡನೆಂದು ತಿಳಿಯಬರುತ್ತದೆ ಈ ಮಂಡಲ ದ್ರಷ್ಟೃವಾದ ವಸಿಷ್ಠಋಷಿಗೂ ತೃತ್ಸು ಜನಾಂಗದ ರಾಜನಿಗೂ ಮುಖ್ಯವಾಗಿ ಸುದಾಸನಿಗೂ ವಿಶೇಷವಾದ ಸಂಬಂಧವಿರಬೇಕು. ತೃತ್ಸು ಜನರ ರಾಜನಿಗೆ ವಸಿಷ್ಠನು ಪುರೋಹಿತನಾಗಿರಬಹುದು. ತೃತ್ಸು ಜನರ ರಾಜನಾದ ಸುದಾಸನಿಗೆ ಮೊದಲು ವಿಶ್ವಾಮಿತ್ರನು ಪುರೋಹಿತನಾಗಿದ್ದನೆಂದೂ ಈ ರಾಜನು ವಿಪಾಶ್ (Beas) ಶುತುದ್ರಿ (Sutlej) ಎಂಬ ನದೀ ಪ್ರಾಂತ್ಯಗಳಲ್ಲಿ ಶತ್ರುರಾಜರೊಡನೆ ಯುದ್ಧಮಾಡುತ್ತಿದ್ದಾಗ ವಿಶ್ವಾಮಿತ್ರನು ಇವನೊಡನೆ ಇದ್ದನೆಂದೂ ತಿಳಿಯಬರುತ್ತದೆ. ಆದರೆ ಐತರೇಯ ಬ್ರಾಹ್ಮಣದಲ್ಲಿ (ಐ. ಬ್ರಾ. ೭-೩೪-೯) ಸುದಾಸನು ಬಹಳ ಪ್ರಸಿದ್ಧನಾದ ರಾಜನೆಂದೂ ಇವನಿಗೆ ವಸಿಷ್ಠನು ಪುರೋಹಿತನಾಗಿದ್ದನೆಂದೂ ಹೇಳಿದೆ. ಸುದಾಸನನ್ನು ಪೈಜವನ ಎಂದು ಕರೆಯುವುದು ರೂಢಿಯಾಗಿರುವುದರಿಂದ ಇವನು ಪಿಜವನ ಪುತ್ರ ಅಥವಾ ಅವನ ವಂಶೀಕನೆಂದೂ ದಿವೋದಾಸನ ಮೊಮ್ಮಗನೆಂದೂ ಹೇಳಬಹುದು.

॥ ಸಂಹಿತಾಪಾಠಃ ॥

ದಶ ರಾಜಾನಃ ಸಮಿತಾ ಅಯಜ್ಯವಃ ಸುದಾಸಮಿಂದ್ರಾವರುಣಾ ನ ಯುಯುಧುಃ ।
ಸತ್ಯಾ ನೃಣಾಮದ್ಮಸದಾಮುಪಸ್ತುತಿರ್ದೇವಾ ಏಷಾಮಭವನ್ದೇವಹೂತಿಷು ॥

॥ ಪದಪಾಠಃ ॥

ದಶ । ರಾಜಾನಃ । ಸಂಽಇತಾಃ । ಅಯಜ್ಯವಃ । ಸುಽದಾಸಂ । ಇಂದ್ರಾವರುಣಾ । ನ । ಯುಯುಧುಃ ।
ಸತ್ಯಾ । ನೃಣಾಂ । ಅದ್ಮಽಸದಾಂ । ಉಪಽಸ್ತುತಿಃ । ದೇವಾಃ । ಏಷಾಂ । ಅಭವನ್ । ದೇವಽಹೂತಿಷು ॥

।। ಸಾಯಣಭಾಷ್ಯಂ ।।

ಹೇ ಇಂದ್ರಾವರುಣೌ ದಶಸಂಖ್ಯಾಕಾ ರಾಜಾನಃ ಸುದಾಸಃ ಶತ್ರವಃ ಸಮಿತಾಃ ಸಂಗತಾಃ ಪರಸ್ಪರಂ ಸಮವೇತಾ ಅಯಜ್ಯವೋಽಯಜಮಾನಾಃ ಏವಂಭೂತಾಸ್ತೇ ಸುದಾಸಮೇತತ್ಸಂಜ್ಞಮೇಕಮಪಿ ರಾಜಾನಂ ನ ಯುಯುಧುಃ । ನ ಸಂಪ್ರಜಹ್ರುಃ । ಯುವಾಭ್ಯಾಮನುಗೃಹೀತಂ ತಂ ಪ್ರಹರ್ತುಂ ನ ಶೇಕುಃ । ತದಾನೀಮದ್ಮಸದಾಂ । ಅದ್ಮನ್ಯನ್ನೇ ಹವಿಷಿ ಸೀದಂತೀತ್ಯದ್ಮಸದ ಋತ್ವಿಜಃ । ಹವಿರ್ಭಿರ್ಯುಕ್ತಾನಾಂ ನೃಣಾಂ ಯಜ್ಞಸ್ಯ ನೇತೄಣಾಮೃತ್ವಿಜಾಮುಪಸ್ತುತಿಃ ಸ್ತೋತ್ರಂ ಸತ್ಯಾ ಸಫಲಾಭೂತ್ । ಅಪಿ ಚೈಷಾಂ ದೇವಹೂತಿಷು । ದೇವಾ ಹೂಯಂತೇ ಏಷ್ವಿತಿ ದೇವಹೂತಯೋ ಯಜ್ಞಾಃ । ತೇಷು ಸರ್ವೇ ಚ ದೇವಾ ಅಭವನ್ । ಯುಷ್ಮದನುಗ್ರಹಾತ್ಪ್ರಾದುರ್ಭವಂತಿ ।

।। ಪ್ರತಿಪದಾರ್ಥ ।।

**ಇಂದ್ರಾವರುಣಾ**—ಎಲೈ ಇಂದ್ರ ಮತ್ತು ವರುಣದೇವತೆಗಳೇ । **ಅಯಜ್ಯವಃ**—ಕರ್ಮಹೀನರಾದ । **ದಶ ರಾಜಾನಃ**—ಹತ್ತು ಮಂದಿ ಶತ್ರುರಾಜರೂ । **ಸಮಿತಾಃ**—ಒಟ್ಟಿಗೆ ಸೇರಿಕೊಂಡರೂ ಸಹ । **ಸುದಾಸಂ**—ಸುದಾಸನಿಗೆದುರಾಗಿ । **ನ ಯುಯುಧುಃ**—ಯುದ್ಧಮಾಡಲು ಶಕ್ತರಾಗಲಿಲ್ಲ । **ಅದ್ಮಸದಾಂ**—ಹವಿಸ್ಸಿನಿಂದ ಯುಕ್ತರಾದ । **ನೃಣಾಂ**—ಋತ್ವಿಕ್ಕುಗಳ । **ಉಪಸ್ತುತಿಃ**—ಸ್ತೋತ್ರವು । **ಸತ್ಯಾ**—ಸಫಲವಾಯಿತು । **ಏಷಾಂ**—ಈ ಋತ್ವಿಕ್ಕುಗಳಿಂದ ನೆರವೇರಿಸಲ್ಪಡುವ । **ದೇವಹೂತಿಷು**—ಯಜ್ಞಗಳಲ್ಲಿ । **ದೇವಾಃ**—ದೇವತೆಗಳೆಲ್ಲರೂ । **ಅಭವನ್**—ನಿಮ್ಮ ಅನುಗ್ರಹದಿಂದ ಪ್ರಾದುರ್ಭೂತರಾಗುತ್ತಾರೆ.

।। ಭಾವಾರ್ಥ ।।

ಎಲೈ ಇಂದ್ರ ಮತ್ತು ವರುಣದೇವತೆಗಳೇ, ಕರ್ಮಹೀನರಾದ ಹತ್ತು ಮಂದಿ ಶತ್ರುರಾಜರೂ ಒಟ್ಟಿಗೆ ಸೇರಿಕೊಂಡರೂ ಸಹ ಸುದಾಸನಿಗೆದುರಾಗಿ ಯುದ್ಧಮಾಡಲು ಶಕ್ತರಾಗಲಿಲ್ಲ. ಹವಿಸ್ಸಿನಿಂದ ಯುಕ್ತರಾದ ಋತ್ವಿಕ್ಕುಗಳ ಸ್ತೋತ್ರವು ಸಫಲವಾಯಿತು. ಈ ಋತ್ವಿಕ್ಕುಗಳಿಂದ ನೆರವೇರಿಸಲ್ಪಡುವ ಯಜ್ಞಗಳಲ್ಲಿ ದೇವತೆಗಳೆಲ್ಲರೂ ನಿಮ್ಮ ಅನುಗ್ರಹದಿಂದ ಪ್ರಾದುರ್ಭೂತರಾಗುತ್ತಾರೆ.

## English Translation

The ten confederated irreligious Rajas did not prevail, Indra and Varuna, against Sudas: the praise of the leaders (of rites), the offerers of sacrificial food, was fruitful: the gods were present at their sacrifices.

।। ಸಂಹಿತಾಪಾಠಃ ।।

ದಾಶರಾಜ್ಞೇ ಪರಿಯತ್ತಾಯ ವಿಶ್ವತಃ ಸುದಾಸ ಇಂದ್ರಾವರುಣಾವಶಿಕ್ಷತಂ।

ಶ್ವಿತ್ಯಂಚೋ ಯತ್ರ ನಮಸಾ ಕಪರ್ದಿನೋ ಧಿಯಾ ಧೀವಂತೋ ಅಸಪಂತ ತೃತ್ಸವಃ ॥ ೮ ॥

॥ ಪದಪಾಠಃ ॥

ದಾಶಽರಾಜ್ಞೇ । ಪರಿಽಯತ್ತಾಯ । ವಿಶ್ವತಃ । ಸುಽದಾಸೇ । ಇಂದ್ರಾವರುಣೌ । ಅಶಿಕ್ಷತಂ । ಶ್ವಿತ್ಯಂಚಃ । ಯತ್ರ । ನಮಸಾ । ಕಪರ್ದಿನಃ । ಧಿಯಾ । ಧೀಽವಂತಃ । ಅಸಪಂತ । ತೃತ್ಸವಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ದಾಶರಾಜ್ಞೇ ॥ ದಶಶಬ್ದಸ್ಯ ಛಾಂದಸೋ ದೀರ್ಘಃ । ವಿಭಕ್ತಿವ್ಯತ್ಯಯಃ ॥ ದಶಭೀ ರಾಜಭಿಃ ಶತ್ರುಭೂತೈರ್ವಿಶ್ವತಃ ಸರ್ವತಃ ಪರಿಯತ್ತಾಯ ಪರಿವೇಷ್ಟಿತಾಯ ಸುದಾಸೇ ರಾಜ್ಞೇಽ-ಶಿಕ್ಷತಂ । ಬಲಂ ಪ್ರಾಯಚ್ಛತಂ । ಯತ್ರ ಯಸ್ಮಿನ್ದೇಶೇ ಶ್ವಿತ್ಯಂಚಃ ಶ್ವಿತಂ ಶ್ವೈತ್ಯಂ ನೈರ್ಮಲ್ಯಮಂ-ಚಂತೋ ಗಚ್ಛಂತಃ ಕಪರ್ದಿನೋ ಜಟಿಲಾ ಧೀವಂತಃ ಕರ್ಮಭಿರ್ಯುಕ್ತಾಸ್ತೃತ್ಸವೋ ವಸಿಷ್ಠಶಿಷ್ಯಾ ಏತತ್ಸಂಜ್ಞಾ ಋತ್ವಿಜೋ ನಮಸಾ ಹವಿರ್ಲಕ್ಷಣೇನಾನ್ನೇನ ಧಿಯಾ ಸ್ತುತ್ಯಾಸಪಂತ ಪರ್ಯಚರನ್ । ತಸ್ಮಿನ್ದೇಶೇ ಯುವಾಂ ತಸ್ಮೈ ರಾಜ್ಞೇ ಬಲಂ ಪ್ರಾಯಚ್ಛತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರಾವರುಣೌ—ಎಲೈ ಇಂದ್ರ ಮತ್ತು ವರುಣದೇವತೆಗಳೇ । ಯತ್ರ—ಯಾವ ಪ್ರದೇಶದಲ್ಲಿ । ಶ್ವಿತ್ಯಂಚಃ—ಶುದ್ಧವಾಗಿ ಸಂಚರಿಸತಕ್ಕವರೂ । ಕಪರ್ದಿನಃ—ಜಟಾಯುಕ್ತರೂ । ಧೀವಂತಃ—ಕರ್ಮಯುಕ್ತರೂ। ತೃತ್ಸವಃ—ತೃತ್ಸುಸಂಜ್ಞಕರೂ ಆದ ಋತ್ವಿಕ್ಕುಗಳು । ನಮಸಾ—ಹವಿಸ್ಸುಗಳಿಂದಲೂ । ಧಿಯಾ—ಸ್ತುತಿಗಳಿಂದಲೂ । ಅಸಪಂತ—ನಿಮ್ಮನ್ನು ಪೂಜಿಸಿದರೋ ಆ ಪ್ರದೇಶದಲ್ಲಿ । ದಾಶರಾಜ್ಞೇ—ಹತ್ತು ಮಂದಿ ಶತ್ರುರಾಜರಿಂದ । ವಿಶ್ವತಃ—ಸುತ್ತಲೂ । ಪರಿಯತ್ತಾಯ—ಆವರಿಸಲ್ಪಟ್ಟಿದ್ದರೂ ಸಹ । ಸುದಾಸೇ—ಸುದಾಸನೆಂಬ ರಾಜನಿಗೆ (ಅವರೆಲ್ಲರನ್ನೂ ಎದುರಿಸಿ ಸೋಲಿಸುವ) ಅಶಿಕ್ಷತಂ—ಬಲವನ್ನು ಕೊಟ್ಟಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣದೇವತೆಗಳೇ, ಯಾವ ಪ್ರದೇಶದಲ್ಲಿ ಶುದ್ಧವಾಗಿ ಸಂಚರಿಸತಕ್ಕವರೂ ಜಟಾಯುಕ್ತರೂ ಕರ್ಮಯುಕ್ತರೂ ತೃತ್ಸುಸಂಜ್ಞಕರೂ ಆದ ಋತ್ವಿಕ್ಕುಗಳು ಹವಿಸ್ಸುಗಳಿಂದಲೂ ಸ್ತುತಿಗಳಿಂದಲೂ ನಿಮ್ಮನ್ನು ಪೂಜಿಸಿದರೋ ಆ ಪ್ರದೇಶದಲ್ಲಿ ಹತ್ತು ಮಂದಿ ಶತ್ರುರಾಜರಿಂದ ಸುತ್ತಲೂ ಆವರಿಸಲ್ಪಟ್ಟಿದ್ದರೂ ಸಹ ಸುದಾಸನೆಂಬ ರಾಜನಿಗೆ ಅವರೆಲ್ಲರನ್ನೂ ಎದುರಿಸಿ ಸೋಲಿಸುವ ಬಲವನ್ನು ಕೊಟ್ಟಿರಿ.

## English Translation

You gave vigour, Indra and Varuna, to Sudas when surrounded on all sides by the ten Rajas (in the country) where the pious Tritsus, walking in whiteness, and wearing braided hair, worshipped with oblations and praise.

॥ ಸಂಹಿತಾಪಾಠಃ ॥

ವೃತ್ರಾಣ್ಯನ್ಯಃ ಸಮಿಥೇಷು ಜಿಘ್ನತೇ ವ್ರತಾನ್ಯನ್ಯೋ ಅಭಿ ರಕ್ಷತೇ ಸದಾ ।
ಹವಾಮಹೇ ವಾಂ ವೃಷಣಾ ಸುವೃಕ್ತಿಭಿರಸ್ಮೇ ಇಂದ್ರಾವರುಣಾ ಶರ್ಮ ಯಚ್ಛತಂ ॥ ೯ ॥

॥ ಪದಪಾಠಃ ॥

ವೃತ್ರಾಣಿ । ಅನ್ಯಃ । ಸಂಽಇಥೇಷು । ಜಿಘ್ನತೇ । ವ್ರತಾನಿ । ಅನ್ಯಃ । ಅಭಿ । ರಕ್ಷತೇ । ಸದಾ ।
ಹವಾಮಹೇ । ವಾಂ । ವೃಷಣಾ । ಸುವೃಕ್ತಿಽಭಿಃ । ಅಸ್ಮೇ ಇತಿ । ಇಂದ್ರಾವರುಣಾ । ಶರ್ಮ । ಯಚ್ಛತಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ಯುವಯೋರನ್ಯ ಏಕ ಇಂದ್ರೋ ವೃತ್ರಾಣಿ ಶತ್ರೂನ್ ಸಮಿಥೇಷು ಸಂಗ್ರಾಮೇಷು ಜಿಘ್ನತೇ । ಹಂತಿ । ಅನ್ಯ ಏಕೋ ವರುಣಃ ಸದಾ ಸರ್ವದಾ ವ್ರತಾನಿ ಕರ್ಮಾಣ್ಯಭಿ ರಕ್ಷತೇ । ಅಭಿತಃ ಸರ್ವತೋ ರಕ್ಷತಿ । ಹೇ ವೃಷಣಾ ಕಾಮಾನಾಂ ವರ್ಷಿತಾರಾವಿಂದ್ರಾವರುಣೌ ತಥಾವಿಧೌ ವಾಂ ಯುವಾಂ ಸುವೃಕ್ತಿಭಿಃ ಸುಪ್ರವೃತ್ತಾಭಿಃ ಸ್ತುತಿಭಿರ್ಹವಾಮಹೇ । ಆಹ್ವಯಾಮಹೇ । ಆಹೂತೌ ಚ ಯುವಾಮಸ್ಮೇ ಅಸ್ಮಭ್ಯಂ ಶರ್ಮ ಸುಖಂ ಯಚ್ಛತಂ । ದತ್ತಂ ॥

॥ ಪ್ರತಿಪದಾರ್ಥ ॥

ಇಂದ್ರಾವರುಣೌ—ಎಲೈ ಇಂದ್ರಾವರುಣರೇ । ಅನ್ಯಃ—ನಿಮ್ಮಿಬ್ಬರಲ್ಲಿ ಒಬ್ಬನಾದ ಇಂದ್ರನು । ವೃತ್ರಾಣಿ—ಶತ್ರುಗಳನ್ನು । ಸಮಿಥೇಷು—ಸಂಗ್ರಾಮಗಳಲ್ಲಿ । ಜಿಘ್ನತೇ—ಕೊಲ್ಲುತ್ತಾನೆ । ಅನ್ಯಃ—ಇನ್ನೊಬ್ಬನಾದ ವರುಣನು । ಸದಾ—ಯಾವಾಗಲೂ । ವ್ರತಾನಿ—ಯಜ್ಞಕರ್ಮಗಳನ್ನು । ಅಭಿ ರಕ್ಷತೇ—ಪೂರ್ಣವಾಗಿ ರಕ್ಷಿಸುತ್ತಾನೆ । ವೃಷಣಾ—ಕಾಮವರ್ಷಕರಾದ ಎಲೈ ಇಂದ್ರಾವರುಣರೇ । ವಾಂ—ನಿಮ್ಮನ್ನು । ಸುವೃಕ್ತಿಭಿಃ—ಉತ್ತಮವಾದ ಸ್ತುತಿಗಳಿಂದ । ಹವಾಮಹೇ—ಪ್ರಾರ್ಥಿಸಿ ಕರೆಯುತ್ತೇವೆ । ಅಸ್ಮೇ—ನಮಗೆ । ಶರ್ಮ—ಸುಖವನ್ನು । ಯಚ್ಛತಂ—ಕೊಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ನಿಮ್ಮಿಬ್ಬರಲ್ಲಿ ಒಬ್ಬನಾದ ಇಂದ್ರನು ಶತ್ರುಗಳನ್ನು ಸಂಗ್ರಾಮದಲ್ಲಿ ಕೊಲ್ಲುತ್ತಾನೆ. ಇನ್ನೊಬ್ಬನಾದ ವರುಣನು ಯಾವಾಗಲೂ ಯಜ್ಞಕರ್ಮಗಳನ್ನು ಪೂರ್ಣವಾಗಿ ರಕ್ಷಿಸುತ್ತಾನೆ. ಕಾಮವರ್ಷಕರಾದ ಎಲೈ ಇಂದ್ರಾವರುಣರೇ, ನಿಮ್ಮನ್ನು ಉತ್ತಮವಾದ ಸ್ತುತಿಗಳಿಂದ ಪ್ರಾರ್ಥಿಸಿ ಕರೆಯುತ್ತೇವೆ. ನಮಗೆ ಸುಖವನ್ನು ಕೊಡಿರಿ.

## English Translation

One of you destroys enemies in battle, the other ever protects religious observances: we invoke you, showerers (of benefits), with praises: bestow upon us, Indra and Varuna, felicity.

॥ ಸಂಹಿತಾಪಾಠಃ ॥

ಅಸ್ಮೇ ಇಂದ್ರೋ ವರುಣೋ ಮಿತ್ರೋ ಅರ್ಯಮಾ ದ್ಯುಮ್ನಂ ಯಚ್ಛಂತು
ಮಹಿ ಶರ್ಮ ಸಪ್ರಥಃ ।
ಅವಧ್ರಂ ಜ್ಯೋತಿರದಿತೇರೃತಾವೃಧೋ ದೇವಸ್ಯ ಶ್ಲೋಕಂ ಸವಿತುರ್ಮ-
ನಾಮಹೇ ॥ ೧೦ ॥

॥ ಪದಪಾಠಃ ॥

ಅಸ್ಮೇ ಇತಿ । ಇಂದ್ರಃ । ವರುಣಃ । ಮಿತ್ರಃ । ಅರ್ಯಮಾ । ದ್ಯುಮ್ನಂ । ಯಚ್ಛಂತು । ಮಹಿ । ಶರ್ಮ ।
ಸಽಪ್ರಥಃ ।
ಅವಧ್ರಂ । ಜ್ಯೋತಿಃ । ಅದಿತೇಃ । ಋತಽವೃಧಃ । ದೇವಸ್ಯ । ಶ್ಲೋಕಂ । ಸವಿತುಃ । ಮನಾಮಹೇ ॥

॥ ಸಾಯಣಭಾಷ್ಯಂ ॥

ವ್ಯಾಖ್ಯಾತೇಯಂ ॥ ಅಕ್ಷರಾರ್ಥಸ್ತು । ಇಂದ್ರಾದಯೋಽಸ್ಮಭ್ಯಂ ದ್ಯೋತಮಾನಂ ಧನಂ ಪ್ರಯಚ್ಛಂತು ಸರ್ವತೋ ವಿಸ್ತೀರ್ಣಂ ಮಹದ್ಗೃಹಂ ಚ । ಯಜ್ಞಸ್ಯ ವರ್ಧಯಿತ್ರ್ಯಾ ಅದಿತ್ಯಾ ದೇವಮಾತುಸ್ತೇಜಶ್ಚಾಸ್ಮಾಕಮಬಾಧಕಂ ಭವತು । ವಯಂ ಚ ಪ್ರೇರಕಸ್ಯ ದೇವಸ್ಯ ಸ್ತೋತ್ರಂ ಮನಾಮಹೇ । ಕುರ್ಮಹೇ ॥

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನೂ । **ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ । **ಅಸ್ಮೇ**—ನಮಗೆ । **ದ್ಯುಮ್ನಂ**—ಧನವನ್ನು । **ಯಚ್ಛಂತು**—ಕೊಡಲಿ । **ಮಹಿ**—ಮಹತ್ತಾದುದೂ । **ಸಪ್ರಥಃ**—ಅತ್ಯಂತ ವಿಸ್ತೃತವಾದುದೂ ಆದ । **ಶರ್ಮ**—ಗೃಹವನ್ನೂ ಕೊಡಲಿ । **ಋತಾವೃಧಃ**—ಯಜ್ಞವರ್ಧಕಳಾದ । **ಅದಿತೇಃ**—ಅದಿತಿಯ । **ಜ್ಯೋತಿಃ**—ತೇಜಸ್ಸು । **ಅವಧ್ರಂ**—ನಮಗೆ ಅಹಿಂಸಿತವಾಗಿರಲಿ । **ದೇವಸ್ಯ**—ದೇವತಾತ್ಮನಾದ । **ಸವಿತುಃ**—ಸವಿತೃವಿನ । **ಶ್ಲೋಕಂ**—ಸ್ತೋತ್ರವನ್ನು । **ಮನಾಮಹೇ**—ನಾವು ಧ್ಯಾನಿಸಿ ನಿರ್ಮಿಸುತ್ತೇವೆ.

॥ ಭಾವಾರ್ಥ ॥

ಇಂದ್ರನೂ, ವರುಣನೂ, ಮಿತ್ರನೂ, ಅರ್ಯಮನೂ ನಮಗೆ ಧನವನ್ನು ಕೊಡಲಿ. ಮಹತ್ತಾದುದೂ, ಅತ್ಯಂತ ವಿಸ್ತೃತವಾದುದೂ ಆದ ಗೃಹವನ್ನೂ ಕೊಡಲಿ. ಯಜ್ಞವರ್ಧಕಳಾದ ಅದಿತಿಯ ತೇಜಸ್ಸು ನಮಗೆ ಅಹಿಂಸಿತವಾಗಿರಲಿ. ದೇವತಾತ್ಮನಾದ ಸವಿತೃವಿನ ಸ್ತೋತ್ರವನ್ನು ನಾವು ಧ್ಯಾನಿಸಿ ನಿರ್ಮಿಸುತ್ತೇವೆ ಮತ್ತು ಪಠಿಸುತ್ತೇವೆ.

## English Translation

May Indra, Varuna, Mitra, Aryaman, grant us wealth and a large and spacious mansion: may the lustre of Aditi, the augmentress (of sacrifice), be innoxious to us: we recite the praise of the divine Savitri.



## ಎಂಭತ್ತನಾಲ್ಕನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಆ ವಾಮಿತಿ ಪಂಚರ್ಚಂ ಚತುರ್ದಶಂ ಸೂಕ್ತಂ ವಾಸಿಷ್ಠಂ ತ್ರೈಷ್ಟುಭಮೈಂದ್ರಾವರುಣಂ । ಅನುಕ್ರಾಂತಂ ಚ । ಆ ವಾಂ ಪಂಚೇತಿ ॥ ಉಕ್ಥ್ಯೇ ತೃತೀಯಸವನೇ ಮೈತ್ರಾವರುಣಶಸ್ತ್ರ ಇದಂ ಸೂಕ್ತಂ । ಸೂತ್ರಿತಂ ಚ । ಆ ವಾಂ ರಾಜಾನಾವಿಂದ್ರಾವರುಣಾ ಮಧುಮತ್ತಮಸ್ಮೇತಿ ಯಾಜ್ಯಾ । ಆ. ೬-೧ । ಇತಿ ॥**

ಅನುವಾದವು—ಆ ವಾಂ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಇಂದ್ರಾವರುಣರು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಆ ವಾಂ ಪಂಚ ಎಂದು ಹೇಳಿರುವುದು. ಉಕ್ಥ್ಯವೆಂಬ ಯಾಗದ ತೃತೀಯಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗ ವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಆ ವಾಂ ರಾಜಾನಾವಿಂದ್ರಾವರುಣಾ ಮಧುಮತ್ತಮಸ್ಮೇತಿ ಯಾಜ್ಯಾ** ಎಂಬ ಸೂತ್ರದಿಂದ (ಆ. ೬-೧) ವಿವೃತವಾಗಿರುವುದು.

## ಸೂಕ್ತ—೮೪

ಮಂಡಲ—೭ ॥ ಅನುವಾಕ—೫ ॥ ಸೂಕ್ತ—೮೪ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಾವರುಣೌ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಆ ವಾಂ ರಾಜಾನಾವಧ್ವರೇ ವವೃತ್ಯಾಂ ಹವ್ಯೇಭಿರಿಂದ್ರಾವರುಣಾ ನಮೋಭಿಃ ।
ಪ್ರ ವಾಂ ಘೃತಾಚೀ ಬಾಹ್ವೋರ್ದಧಾನಾ ಪರಿ ತ್ಮನಾ ವಿಷುರೂಪಾ ಜಿಗಾತಿ ॥ ೧ ॥

॥ ಪದಪಾಠಃ ॥

ಆ । ವಾಂ । ರಾಜಾನೌ । ಅಧ್ವರೇ । ವವೃತ್ಯಾಂ । ಹವ್ಯೇಭಿಃ । ಇಂದ್ರಾವರುಣಾ । ನಮಃಽಭಿಃ ।
ಪ್ರ । ವಾಂ । ಘೃತಾಚೀ । ಬಾಹ್ವೋಃ । ದಧಾನಾ । ಪರಿ । ತ್ಮನಾ । ವಿಷುಽರೂಪಾ । ಜಿಗಾತಿ ॥ ೧ ॥

॥ ಸಾಯಣಭಾಷ್ಯಂ ॥

ಹೇ ರಾಜಾನೌ ರಾಜಮಾನಾವೀಶ್ವರೌ ವೇಂದ್ರಾವರುಣೌ ಅಧ್ವರೇ ಹಿಂಸಾರಹಿತೇಽಸ್ಮಿನ್ಯಾಗೇ ವಾಂ ಯುವಾಂ ಹವ್ಯೇಭಿರ್ಹವಿರ್ಭಿರ್ನಮೋಭಿಃ ಸ್ತೋತ್ರೈಶ್ಚಾ ವವೃತ್ಯಾಂ । ಆವರ್ತಯಾಮಿ । ಅಪಿ ಚ ಬಾಹ್ವೋರ್ಹಸ್ತಯೋರ್ದಧಾನಾ ಧಾರ್ಯಮಾಣಾ ವಿಷರೂಪಾ । ರೂಪ್ಯತ ಇತಿ ರೂಪಂ ಹವಿಃ । ವಿವಿಧಹವಿರ್ಯುಕ್ತಾ ಘೃತಾಚೀ ಘೃತಮಂಚಂತೀ ಜುಹೂಸ್ತ್ಮನಾತ್ಮನಾ ಸ್ವಯಮೇವ ವಾಂ ಯುವಾಂ ಪರಿ ಪ್ರ ಜಿಗಾತಿ । ಅಭಿಪ್ರಗಚ್ಛತಿ । ಯದ್ವಾ । ವಿಷುರೂಪಾ ನಾನಾವಿಧರೂಪೌ ವಾಮಿತಿ ಯೋಜ್ಯಂ ॥

॥ ಪ್ರತಿಪದಾರ್ಥ ॥

ರಾಜಾನೌ—ಪ್ರಭುಗಳಾದ । ಇಂದ್ರಾವರುಣಾ—ಎಲೈ ಇಂದ್ರ ಮತ್ತು ವರುಣದೇವತೆಗಳೇ । ಅಧ್ವರೇ—ಯಜ್ಞದಲ್ಲಿ । ವಾಂ—ನಿಮ್ಮನ್ನು । ಹವ್ಯೇಭಿಃ—ಹವಿಸ್ಸುಗಳಿಂದಲೂ । ನಮೋಭಿಃ—ಸ್ತುತಿಗಳಿಂದಲೂ । ಆ ವವೃತ್ಯಾಂ—ಪ್ರಾರ್ಥಿಸಿ ಕರೆಯುತ್ತೇನೆ । ಬಾಹ್ವೋಃ—ನನ್ನ ಹಸ್ತಗಳಲ್ಲಿ । ದಧಾನಾ-ಹಿಡಿಯಲ್ಪಟ್ಟಿರುವುದೂ ।

ಘೃತಾಚೀ—ಘೃತಯುಕ್ತವಾದುದೂ ಆದ ಜುಹೂಪಾತ್ರೆಯು । ತ್ಮನಾ—ಸ್ವಯಂಪ್ರೇರಿತವಾಗಿ । ವಿಷುರೂಪಾ—ನಾನಾವಿಧವಾದ ರೂಪವುಳ್ಳ । ವಾಂ ಪರಿ—ನಿಮ್ಮನ್ನುದ್ದೇಶಿಸಿ । ಪ್ರ ಜಿಗಾತಿ—ಸಮೀಪಿಸುತ್ತಾ ಹವಿಸ್ಸನ್ನರ್ಪಿಸುತ್ತದೆ.

॥ ಭಾವಾರ್ಥ ॥

ಜಗತ್ಪ್ರಭುಗಳಾದ ಎಲೈ ಇಂದ್ರ ಮತ್ತು ವರುಣದೇವತೆಗಳೇ, ಯಜ್ಞದಲ್ಲಿ ನಿಮ್ಮನ್ನು ಹವಿಸ್ಸುಗಳಿಂದಲೂ ಸ್ತುತಿಗಳಿಂದಲೂ ಪ್ರಾರ್ಥಿಸಿ ಕರೆಯುತ್ತೇನೆ. ಹಸ್ತಗಳಲ್ಲಿ ಹಿಡಿಯಲ್ಪಟ್ಟಿರುವುದೂ ಘೃತಯುಕ್ತವಾದುದೂ ಆದ ಜುಹೂಪಾತ್ರೆಯು ಸ್ವಯಂಪ್ರೇರಿತವಾಗಿ ನಾನಾವಿಧವಾದ ರೂಪವುಳ್ಳ ನಿಮ್ಮನ್ನುದ್ದೇಶಿಸಿ ಸಮೀಪಿಸುತ್ತಾ ಹವಿಸ್ಸನ್ನರ್ಪಿಸುತ್ತದೆ.

## English Translation

Royal Indra and Varuna, I invite you to the sacrifice with obtlations and with praise: the butter-dropping (ladle), held in our hands, offers spontaneously (the oblation) to you who are of many forms.

॥ ಸಂಹಿತಾಪಾಠಃ ॥

ಯುವೋ॒ರ್ ರಾ॒ಷ್ಟ್ರಂ ಬೃ॒ಹದಿ॑ನ್ವತಿ॒ ದ್ಯೌರ್ಯೌ ಸೇ॒ತೃಭಿ॑ರರ॒ಜ್ಜುಭಿಃ॑ ಸಿನೀ॒ಥಃ ।
ಪರಿ॑ ನೋ॒ ಹೇಳೋ॒ ವರು॑ಣಸ್ಯ ವೃಜ್ಯಾ ಉ॒ರುಂ ನ॒ ಇಂದ್ರಃ॑ ಕೃಣವದು
ಲೋ॒ಕಂ ॥ ೨ ॥

॥ ಪದಪಾಠಃ ॥

ಯು॒ವೋಃ । ರಾ॒ಷ್ಟ್ರಂ । ಬೃ॒ಹತ್ । ಇ॒ನ್ವ॒ತಿ॒ । ದ್ಯೌಃ । ಯೌ । ಸೇ॒ತೃಽಭಿಃ॑ । ಅ॒ರ॒ಜ್ಜುಽಭಿಃ॑ । ಸಿ॒ನೀ॒ಥಃ ।
ಪರಿ॑ । ನಃ॒ । ಹೇಳಃ॑ । ವರು॑ಣಸ್ಯ । ವೃ॒ಜ್ಯಾಃ । ಉ॒ರುಂ । ನಃ॒ । ಇಂದ್ರಃ॑ । ಕೃ॒ಣ॒ವ॒ತ್ । ಊಂ ಇತಿ॑ ।
ಲೋ॒ಕಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ಯುವೋರ್ಯುವಯೋರ್ಬೃಹನ್ಮಹದ್ರಾಷ್ಟ್ರಂ ರಾಜ್ಯಂ ದೌರ್ದ್ಯುಲೋಕರೂಪಮಿನ್ವತಿ । ವ್ಯಾಪ್ನೋತಿ । ಸರ್ವಾನ್ಪ್ರೀಣಯತಿ । ಯೌ ಯುವಾಂ ಸೇತೃಭಿರ್ಬಂಧಕೈರರಜ್ಜುಭೀ ರಜ್ಜುರಹಿತೈ ರೋಗಾದಿಭಿಃ ಸಿನೀಥಃ ಪಾಪಕೃತೋ ಬಧ್ನೀಥಃ ॥ ಷಿಞ್ ಬಂಧನ ಇತಿ ಧಾತುಃ ॥ ತಯೋರ್ಮಧ್ಯೇ ವರುಣಸ್ಯ ವಾರಯಿತುರ್ದೇವಸ್ಯ ಹೇಳಃ ಕ್ರೋಧೋ ನೋಽಸ್ಮಾನ್ಪರಿ ವೃಜ್ಯಾಃ । ಪರಿವೃಣಕ್ತು । ಪರಿತ್ಯಜ್ಯಾನ್ಯತ್ರ ಗಚ್ಛತು । ಇಂದ್ರ ಉ ಇಂದ್ರಶ್ಚೋರುಂ ವಿಸ್ತೀರ್ಣಂ ಲೋಕಂ ಸ್ಥಾನಂ ಕೃಣವತ್ । ಕರೋತು ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾವರುಣರೇ) **ಯುವೋಃ**—ನಿಮ್ಮ । **ಬೃಹತ್**—ಮಹತ್ತಾದ । **ರಾಷ್ಟ್ರಂ**—ರಾಜ್ಯವಾದ। **ದ್ಯೌಃ**—ದ್ಯುಲೋಕವು । **ಇನ್ವತಿ**—ವೃಷ್ಟಿಯಿಂದ ಎಲ್ಲರನ್ನೂ ತೃಪ್ತಿಗೊಳಿಸುತ್ತದೆ । **ಯೌ**—ಯಾವ ನೀವು । **ಅರಜ್ಜುಭಿಃ**—ಹಗ್ಗದರೂಪದಲ್ಲಿಲ್ಲದಿರುವ । **ಸೇತೃಭಿಃ**—ಬಂಧಕಗಳಿಂದ (ರೋಗಾದಿಗಳಿಂದ) । **ಸಿನೀಥಃ**—ಪಾಪಿಗಳನ್ನು ಬಂಧಿಸುತ್ತೀರೋ (ಅವರಲ್ಲಿ ಒಬ್ಬನಾದ) । **ವರುಣಸ್ಯ**—ವರುಣನ । **ಹೇಳಃ**—ಕ್ರೋಧವು । **ನಃ**—ನಮ್ಮನ್ನು । **ಪರಿ ವೃಜ್ಯಾಃ**—ಬಿಟ್ಟುಬಿಡಲಿ । **ಇಂದ್ರ ಉ**—ಇನ್ನೊಬ್ಬನಾದ ಇಂದ್ರನಾದರೋ । **ನಃ**—ನಮಗಾಗಿ। **ಉರುಂ**—ವಿಸ್ತೃತವಾದ । **ಲೋಕಂ**—ವಾಸಸ್ಥಾನವನ್ನು । **ಕೃಣವತ್**—ನಿರ್ಮಿಸಲಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ನಿಮ್ಮ ಮಹದ್ರಾಜ್ಯವಾದ ದ್ಯುಲೋಕವು ವೃಷ್ಟಿಯಿಂದ ಎಲ್ಲರನ್ನೂ ತೃಪ್ತಿಗೊಳಿಸುತ್ತದೆ. ಯಾವ ನೀವು ಹಗ್ಗದ ರೂಪವಲ್ಲದ ಬಂಧಕಗಳಿಂದ ಎಂದರೆ ರೋಗಾದಿಗಳಿಂದ ಪಾಪಿಗಳನ್ನು ಬಂಧಿಸುತ್ತೀರೋ ಅಂತಹ ನಿಮ್ಮಲ್ಲಿ ಒಬ್ಬನಾದ ವರುಣನ ಕ್ರೋಧವು ನಮ್ಮನ್ನು ಬಿಟ್ಟುಬಿಡಲಿ. ಇನ್ನೊಬ್ಬನಾದ ಇಂದ್ರನಾದರೋ ನಮಗೆ ವಿಸ್ತೃತವಾದ ವಾಸಸ್ಥಾನವನ್ನು ನಿರ್ಮಿಸಲಿ.

## English Translation

Your vast kingdom of heaven gratifies (the world with rain), you who bind (the sinner) with bonds not made of rope: may the wrath of Varuna pass away from us: may Indra prepare for us a spacious region.

॥ ಸಂಹಿತಾಪಾಠಃ ॥

ಕೃತಂ ನೋ ಯಜ್ಞಂ ವಿದಥೇಷು ಚಾರುಂ ಕೃತಂ ಬ್ರಹ್ಮಾಣಿ ಸೂರಿಷು ಪ್ರಶಸ್ತಾ ।
ಉಪೋ ರಯಿರ್ದೇವಜೂತೋ ನ ಏತು ಪ್ರ ಣಃ ಸ್ಪಾರ್ಹಾಭಿರೂತಿಭಿಸ್ತಿರೇತಂ ॥ ೩ ॥

॥ ಪದಪಾಠಃ ॥

ಕೃತಂ । ನಃ । ಯಜ್ಞಂ । ವಿದಥೇಷು । ಚಾರುಂ । ಕೃತಂ । ಬ್ರಹ್ಮಾಣಿ । ಸೂರಿಷು । ಪ್ರಽಶಸ್ತಾ ।
ಉಪೋ ಇತಿ । ರಯಿಃ । ದೇವಽಜೂತಃ । ನಃ । ಏತು । ಪ್ರ । ನಃ । ಸ್ಪಾರ್ಹಾಭಿಃ । ಊತಿಽಭಿಃ । ತಿರೇತಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ನೋಽಸ್ಮಾಕಂ ವಿದಥೇಷು ಗೃಹೇಷು ಕ್ರಿಯಮಾಣಂ ಯಜ್ಞಂ ಚಾರುಂ ಶೋಭನಂ ಫಲಸಹಿತಂ ಕೃತಂ । ಕುರುತಂ. । ತಥಾ ಸೂರಿಷು ಸ್ತೋತೃಷ್ವಸ್ಮಾಸು ವಿದ್ಯಮಾನಾನಿ ಬ್ರಹ್ಮಾಣಿ ಪರಿವೃಢಾನಿ ಸ್ತೋತ್ರಾಣಿ ಪಶಸ್ತಾ ಪ್ರಶಸ್ತಾನ್ಯತ್ಯುತ್ಕೃಷ್ಟಾನಿ ಫಲಭಾಂಜಿ ಕೃತಂ । ಕುರುತಂ । ಅಪಿ ಚ ದೇವಜೂತೋ ದೇವಾಭ್ಯಾಂ ಯುವಾಭ್ಯಾಂ ಪ್ರೇರಿತೋ ರಯಿರ್ಧನಂ ನೋಽಸ್ಮಾನುಪಸ್ಪೃತು । ಪ್ರಾಪ್ನೋತು । ತಥಾ ಸ್ಪಾರ್ಹಾಭಿಃ ಸ್ಪೃಹಣೀಯಾಭಿರೂತಿಭೀ ರಕ್ಷಾಭಿರ್ನೋಽಸ್ಮಾನ್ಪ್ರ ತಿರೇತಂ । ಯುವಾಂ ವರ್ಧಯೇಥಾಂ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾವರುಣರೇ), **ನಃ**—ನಮ್ಮ । **ವಿದಥೇಷು**—ಯಜ್ಞಗೃಹಗಳಲ್ಲಿ ನೆರವೇರಿಸಲ್ಪಡುವ । **ಯಜ್ಞಂ**—ಯಜ್ಞವನ್ನು । **ಚಾರುಂ**—ಆಕರ್ಷಕವಾದ ಫಲಯುಕ್ತವಾಗುವಂತೆ । **ಕೃತಂ**—ಮಾಡಿರಿ । **ಸೂರಿಷು**—ಸ್ತುತಿಕರ್ತರಾದ ನಮ್ಮಲ್ಲಿ ಸಿದ್ಧವಾಗಿರುವ । **ಬ್ರಹ್ಮಾಣಿ**—ಸ್ತೋತ್ರಗಳನ್ನು । **ಪ್ರಶಸ್ತಾ**—ಅತ್ಯುತ್ಕೃಷ್ಟವಾದ ಫಲವನ್ನು ಹೊಂದುವಂತೆ । **ಕೃತಂ**—ಮಾಡಿರಿ । **ದೇವಜೂತಃ**—ದೇವತೆಗಳಾದ ನಿಮ್ಮಿಂದ ಪ್ರೇರಿತವಾದ । **ರಯಿಃ**—ಧನವು । **ನಃ**—ನಮ್ಮನ್ನು । **ಉಪಸ್ಪೃತು**—ಸೇರಿಕೊಳ್ಳಲಿ । **ಸ್ಪಾರ್ಹಾಭಿಃ**-ಅತ್ಯಾಕರ್ಷಕಗಳಾದ । **ಊತಿಭಿಃ**—ರಕ್ಷಣೆಗಳಿಂದ । **ನಃ**—ನಮ್ಮನ್ನು । **ಪ್ರ ತಿರೇತಂ**—ಪ್ರವೃದ್ಧರಾಗುವಂತೆ ಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ನಮ್ಮ ಯಜ್ಞಗೃಹಗಳಲ್ಲಿ ನೆರವೇರಿಸಲ್ಪಡುವ ಯಜ್ಞವನ್ನು ಆಕರ್ಷಕವಾದ ಫಲಯುಕ್ತವಾಗುವಂತೆ ಮಾಡಿರಿ. ಸ್ತುತಿಕರ್ತರಾದ ನಮ್ಮಲ್ಲಿ ಸಿದ್ಧವಾಗಿರುವ ಸ್ತೋತ್ರಗಳನ್ನು ಅತ್ಯುತ್ಕೃಷ್ಟವಾದ ಫಲವನ್ನು ಹೊಂದುವಂತೆ ಮಾಡಿರಿ. ದೇವತೆಗಳಾದ ನಿಮ್ಮಿಂದ ಪ್ರೇರಿತವಾದ ಧನವು ನಮ್ಮನ್ನು ಸೇರಿಕೊಳ್ಳಲಿ. ಅತ್ಯಾಕರ್ಷಕಗಳಾದ ರಕ್ಷಣೆಗಳಿಂದ ನಮ್ಮನ್ನು ಪ್ರವೃದ್ಧರಾಗುವಂತೆ ಮಾಡಿರಿ.

## English Translation

Render the sacrifice offered in our dwelling fruitful, the prayers uttered by the worshippers successful: may riches come to us sent by the gods: you two give us increase by your desirable protections.

॥ ಸಂಹಿತಾಪಾಠಃ ॥

ಅಸ್ಮೇ ಇಂದ್ರಾವರುಣಾ ವಿಶ್ವವಾರಂ ರಯಿಂ ಧತ್ತಂ ವಸುಮಂತಂ ಪುರುಕ್ಷುಂ ।

ಪ್ರ ಯ ಆದಿತ್ಯೋ ಅನೃತಾ ಮಿನಾತ್ಯಮಿತಾ ಶೂರೋ ದಯತೇ ವಸೂನಿ ॥

॥ ಪದಪಾಠಃ ॥

ಅಸ್ಮೇ ಇತಿ ಇಂದ್ರಾವರುಣಾ । ವಿಶ್ವಽವಾರಂ । ರಯಿಂ । ಧತ್ತಂ । ವಸುಽಮಂತಂ । ಪುರುಽಕ್ಷುಂ ।

ಪ್ರ । ಯಃ । ಆದಿತ್ಯಃ । ಅನೃತಾ । ಮಿನಾತಿ । ಅಮಿತಾ । ಶೂರಃ । ದಯತೇ । ವಸೂನಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾವರುಣೌ ಅಸ್ಮೇ ಅಸ್ಮಭ್ಯಂ ರಯಿಂ ಧನಂ ಧತ್ತಂ । ಪ್ರಯಚ್ಛತಂ । ಕೀದೃಶಂ । ವಿಶ್ವವಾರಂ ವಿಶ್ವೈಃ ಸರ್ವೈರ್ವರಣೀಯಂ ಸಂಭಜನೀಯಂ ವಸುಮಂತಂ ನಿವಾಸಯುಕ್ತಂ ಪುರುಕ್ಷುಂ ಬಹ್ವನ್ನಂ ಪುರುಭಿರ್ಬಹುಭಿಃ ಪ್ರಶಸ್ಯಂ ವಾ । ಆದಿತ್ಯೋಽದಿತೇಃ ಪುತ್ರೋ ಯೋ ವರುಣೋಽನೃತಾನೃತಾನಿ ಸತ್ಯರಹಿತಾನಿ ಭೂತಾನಿ ಪ್ರ ಮಿನಾತಿ ಪ್ರಹಿನಸ್ತಿ ॥ ಮೀಙ್ ಹಿಂಸಾಯಾಮಿತಿ ಧಾತುಃ ॥ ಶೂರಃ ಶೌರ್ಯವಾನ್ ಸ ವರುಣೋಽಮಿತಾಮಿತಾನ್ಯಪರಿಮಿತಾನಿ ವಸೂನಿ ಧನಾನಿ ದಯತೇ । ಸ್ತೋತೃಭ್ಯೋ ದದಾತಿ ॥

॥ ಪ್ರತಿಪದಾರ್ಥ ॥

ಇಂದ್ರಾವರುಣಾ—ಎಲೈ ಇಂದ್ರ ಮತ್ತು ವರುಣದೇವತೆಗಳೇ । ಅಸ್ಮೇ—ನಮಗೆ । ವಿಶ್ವವಾರಂ—ಅನೇಕರಿಂದ ಅಪೇಕ್ಷಿತವಾದುದೂ । ವಸುಮಂತಂ—ನಿವಾಸಯುಕ್ತವಾದುದೂ । ಪುರುಕ್ಷುಂ—ಪ್ರಭೂತವಾದ ಅನ್ನಯುಕ್ತವಾದುದೂ ಆದ । ರಯಿಂ—ಧನವನ್ನು । ಧತ್ತಂ—ಕೊಡಿರಿ । ಆದಿತ್ಯಃ—ಅದಿತಿಪುತ್ರನಾದ । ಯಃ—ಯಾವ ವರುಣನು । ಅನೃತಾ—ಸತ್ಯರಹಿತವಾದ ಸಕಲ ಭೂತಗಳನ್ನೂ । ಪ್ರ ಮಿನಾತಿ—ಪೂರ್ಣವಾಗಿ ಹಿಂಸಿಸುವನೋ । ಶೂರಃ—ಶೌರ್ಯವಂತನಾದ ಅದೇ ವರುಣನು । ಅಮಿತಾ ವಸೂನಿ—ಅಪರಿಮಿತವಾದ ಧನಗಳನ್ನು । ದಯತೇ—ಸ್ತೋತೃಗಳಿಗೆ ಕೊಡುತ್ತಾನೆ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣದೇವತೆಗಳೇ, ನಮಗೆ ಅನೇಕರಿಂದ ಅಪೇಕ್ಷಿತವಾದುದೂ, ನಿವಾಸಯುಕ್ತವಾದುದೂ, ಪ್ರಭೂತವಾದ ಅನ್ನಯುಕ್ತವಾದುದೂ ಆದ ಧನವನ್ನು ಕೊಡಿರಿ. ಅದಿತಿಪುತ್ರನಾದ ಯಾವ ವರುಣನು ಸತ್ಯರಹಿತವಾದ ಸಕಲ ಭೂತಗಳನ್ನೂ ಪೂರ್ಣವಾಗಿ ಹಿಂಸಿಸುವನೋ ಶೌರ್ಯವಂತನಾದ ಅದೇ ವರುಣನು ಅಪರಿಮಿತವಾದ ಧನಗಳನ್ನು ಸ್ತೋತೃಗಳಿಗೆ ಕೊಡುತ್ತಾನೆ.

## English Translation

Bestow upon us, Indra and Varuna, riches desirable to all, together with a dwelling and abundant food, for the hero, Aditya, who punishes beings devoid of truth, gives (to the devout) unbounded treasures.

॥ ಸಂಹಿತಾಪಾಠಃ ॥

ಇಯಮಿಂದ್ರಂ ವರುಣಮಷ್ಟ ಮೇ ಗೀಃ ಪ್ರಾವತ್ತೋಕೇ ತನಯೇ ತೂತು-
ಜಾನಾ ।
ಸುರತ್ನಾಸೋ ದೇವವೀತಿಂ ಗಮೇಮ ಯೂಯಂ ಪಾತ ಸ್ವಸ್ತಿಭಿಃ ಸದಾ
ನಃ ॥ ೫ ॥

॥ ಪದಪಾಠಃ ॥

ಇಯಂ । ಇಂದ್ರಂ । ವರುಣಂ । ಅಷ್ಟ । ಮೇ । ಗೀಃ । ಪ್ರ । ಆವತ್ । ತೋಕೇ । ತನಯೇ ।
ತೂತುಜಾನಾ ।
ಸುಽರತ್ನಾಸಃ । ದೇವಽವೀತಿಂ । ಗಮೇಮ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೫ ॥

॥ ಸಾಯಣಭಾಷ್ಯಂ ॥

ಮೇ ಮದೀಯೇಯಂ ಗೀಃ ಸ್ತುತಿರಿಂದ್ರಂ ವರುಣಂ ಚಾಷ್ಟ । ಅಶ್ನುತಾಂ । ವ್ಯಾಪ್ನೋತು । ತಥಾ ತೂತುಜಾನಾ ಮಯಾ ಪ್ರೇರ್ಯಮಾಣಾ ಸಾ ತೋಕೇ ಪುತ್ರೇ ತನಯೇ ಪೌತ್ರೇ ಚ ವಿಷಯೇ ಪ್ರಾವತ್ । ಪ್ರರಕ್ಷತ್ವಸ್ಮಾನ್ । ವಯಂ ಚ ಸುರತ್ನಾಸಃ ಶೋಭನಧನಾಃ ಸಂತೋ ದೇವವೀತಿಂ ದೇವೈಃ ಕಾಮಯಿತವ್ಯಂ ಯಜ್ಞಂ ಗಮೇಮ । ಪ್ರಾಪ್ನುಯಾಮ । ಹೇ ಇಂದ್ರಾವರುಣಾದಯಃ ಸರ್ವೇ ದೇವಾಃ ಯೂಯಂ ಸ್ವಸ್ತಿಭಿಃ ಕಲ್ಯಾಣೈರ್ನೋಽಸ್ಮಾನ್ಸದಾ ಸರ್ವದಾ ಪಾತ । ರಕ್ಷತ ॥

॥ ಪ್ರತಿಪದಾರ್ಥ ॥

**ಮೇ**—ನನ । **ಇಯಂ ಗೀಃ**—ಈ ಸ್ತುತಿಯು । **ಇಂದ್ರಂ**—ಇಂದ್ರನನ್ನೂ । **ವರುಣಂ**—ವರುಣನನ್ನೂ । **ಅಷ್ಟ**—ವ್ಯಾಪಿಸಿ ಸೇರಿಕೊಳ್ಳಲಿ । **ತೂತುಜಾನಾ**—ನನ್ನಿಂದ ಅರ್ಪಿತವಾದ ಇದೇ ಸ್ತುತಿಯು । **ತೋಕೇ**—ನಮ್ಮ ಪುತ್ರರಿಗೂ । **ತನಯೇ**—ಪೌತ್ರರಿಗೂ । **ಪ್ರಾವತ್**—ರಕ್ಷಕವಾಗಿರಲಿ । **ವಯಂ**—ನಾವು । **ಸುರತ್ನಾಸಃ**—ಶ್ರೇಷ್ಠವಾದ ಧನವುಳ್ಳವರಾಗಿ । **ದೇವವೀತಿಂ**—ದೇವತೆಗಳಿಗೆ ಇಷ್ಟವಾದ ಯಜ್ಞವನ್ನು । **ಗಮೇಮ**—ಆಚರಿಸುವಂತಾಗಲಿ (ಎಲೈ ಇಂದ್ರಾವರುಣಾದಿಗಳೇ) । **ಯೂಯಂ**—ನೀವೆಲ್ಲರೂ । **ನಃ** ನಮ್ಮನ್ನು । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಸದಾ**—ಯಾವಾಗಲೂ । **ಪಾತ**—ರಕ್ಷಿಸಿರಿ.

॥ ಭಾವಾರ್ಥ ॥

ನನ್ನ ಈ ಸ್ತುತಿಯು ಇಂದ್ರನನ್ನೂ ವರುಣನನ್ನೂ ವ್ಯಾಪಿಸಿ ಸೇರಿಕೊಳ್ಳಲಿ ನನ್ನಿಂದ ಅರ್ಪಿತವಾದ ಇದೇ ಸ್ತುತಿಯು ನಮ್ಮ ಪುತ್ರರಿಗೂ ಪೌತ್ರರಿಗೂ ರಕ್ಷಕವಾಗಿರಲಿ. ನಾವು ಶ್ರೇಷ್ಠವಾದ ಧನವುಳ್ಳವರಾಗಿ ದೇವತೆಗಳಿಗೆ

ಇಷ್ಟವಾದ ಯಜ್ಞವನ್ನು ಆಚರಿಸುವಂತಾಗಲಿ. ಎಲೈ ಇಂದ್ರಾವರುಣಾದಿಗಳೇ, ನೀವೆಲ್ಲರೂ ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

### English Translation

May this my praise reach Indra and Varuna, and, earnestly offered (by me), preserve sons and grandsons: let us, possessed of affluence, present (their) food to the gods: and you, (deities), ever cherish us with blessings.



## ಎಂಭತ್ತೈದನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಪುನೀಷೇ ವಾಮಿತಿ ಪಂಚರ್ಚಂ ಪಂಚದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಾ-ವರುಣಂ । ಪುನೀಷ ಇತ್ಯನುಕ್ರಾಂತಂ ॥ ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಸ್ತೋಮವೃದ್ಧೌ ಪ್ರಶಾಸ್ತುರಿದಮಾವಾಪಾರ್ಥಂ । ಸೂತ್ರಿತಂ ಚ । ಯುವಾಂ ನರಾ ಪುನೀಷೇ ವಾಂ । ಆ. ೭-೯ । ಇತಿ ॥

ಅನುವಾದವು—ಪುನೀಷೇ ವಾಂ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಇಂದ್ರಾವರುಣರು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ ಪುನೀಷೇ ಎಂದು ಮೊದಲಾಗಿ ಹೇಳಿರುವುದು. ಅಭಿಪ್ಲವಸಂಬಂಧವಾದ ಉಕ್ಥ್ಯಯಾಗದಲ್ಲಿ ತೃತೀಯಸವನಕಾಲದಲ್ಲಿ ಸ್ತೋಮವೃದ್ಧಿಗಾಗಿ ಪ್ರಶಾಸ್ತೃವೆಂಬ ಋತ್ವಿಜನು ಇದನ್ನು ಆವಾಪ ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಯುವಂ ನರಾ ಪುನೀಷೇ ವಾಂ ಎಂಬ ಸೂತ್ರದಿಂದ (ಆ. ೭-೯) ವಿಸ್ತೃತವಾಗಿರುವುದು.

### ಸೂಕ್ತ ೮೫

ಮಂಡಲ—೭ ॥ ಅನುವಾಕ—೫ ॥ ಸೂಕ್ತ—೮೫ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೭ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಸಿಷ್ಠಃ ॥
ದೇವತಾ—ಇಂದ್ರಾವರುಣೌ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪುನೀಷೇ ವಾಮರಕ್ಷಸಂ ಮನೀಷಾಂ ಸೋಮಮಿಂದ್ರಾಯ ವರುಣಾಯ ಜುಹ್ವತ್ ।

ಘೃತಪ್ರತೀಕಾಮುಷಸಂ ನ ದೇವೀಂ ತಾ ನೋ ಯಾಮನ್ನುರುಷ್ಯತಾಮ-

ಭೀಕೇ ॥ ೧ ॥

॥ ಪದಪಾಠಃ ॥

ಪುನೀಷೇ । ವಾಂ । ಅರಕ್ಷಸಂ । ಮನೀಷಾಂ । ಸೋಮಂ । ಇಂದ್ರಾಯ । ವರುಣಾಯ । ಜುಹ್ವತ್ ।

ಘೃತಽಪ್ರತೀಕಾಂ । ಉಷಸಂ । ನ । ದೇವೀಂ । ತಾ । ನಃ । ಯಾಮನ್ । ಉರುಷ್ಯತಾಂ । ಅಭೀಕೇ ॥

॥ ಸಾಯಣಭಾಷ್ಯಂ ॥

ಇಂದ್ರಾವರುಣೌ ವಾಂ ಯುವಾಭ್ಯಾಂ ಯುವಯೋರರ್ಥಮರಕ್ಷಸಂ ರಕ್ಷೋರಹಿತಾಂ ರಾಕ್ಷಸೈರಸಂಸ್ಪೃಷ್ಟಾಂ ಮನೀಷಾಂ ಸ್ತುತಿಂ ಪುನೀಷೇ। ಶೋಧಯಾಮಿ। ಕಿಂ ಕುರ್ವನ್ । ಇಂದ್ರಾಯ ವರುಣಾಯ ಚ ಸೋಮಂ ಜುಹ್ವದಿಂದ್ರಂ ವರುಣಂ ಚೋದ್ದಿಶ್ಯ ಸೋಮಮಗ್ನೌ ಪ್ರಕ್ಷಿಪನ್ । ಕೀದೃಶೀಂ ಮನೀಷಾಂ । ದೇವೀಂ ದ್ಯೋತಮಾನಾಮುಷಸಂ ನೋಷಸಮಿವ ಘೃತಪ್ರತೀಕಾಂ ದೀಪ್ತಾವಯವಾಂ। ಶಿಷ್ಟಃ । ಪರೋಕ್ಷಕೃತಃ । ತಾ ತಾವಿಂದ್ರಾವರುಣಾವಭೀಕೇಽಭಿಗತೇ ಯುದ್ಧೇ ಯಾಮನ್ಯಾಮನಿ ಯುದ್ಧಾರ್ಥಂ ಗಮನೇ ಸತಿ ನೋಽಸ್ಮಾನುರುಷ್ಯತಾಂ । ರಕ್ಷತಾಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾವರುಣರೇ) **ಇಂದ್ರಾಯ**—ಇಂದ್ರನನ್ನುದ್ದೇಶಿಸಿಯೂ । **ವರುಣಾಯ**—ವರುಣನನ್ನುದ್ದೇಶಿಸಿಯೂ । **ಸೋಮಂ**—ಸೋಮವನ್ನು । **ಜುಹ್ವತ್**—ಅರ್ಪಿಸುತ್ತಾ । **ವಾಂ**—ನಿಮ್ಮಿಬ್ಬರನ್ನು ಉದ್ದೇಶಿಸಿ । **ದೇವೀಂ**—ಪ್ರಕಾಶಮಾನವಾದುದೂ । **ಉಷಸಂ ನ**—ಉಷೋದೇವಿಯಂತೆ । **ಘೃತಪ್ರತೀಕಾಂ**—ಪ್ರಭಾಯುತವಾದ ಅವಯವಗಳುಳ್ಳದ್ದೂ । **ಅರಕ್ಷಸಂ**—ರಾಕ್ಷಸಾದಿಗಳ ಸ್ಪರ್ಶವಿಲ್ಲದುದೂ ಆದ । **ಮನೀಷಾಂ**—ಸ್ತುತಿಯನ್ನು । **ಪುನೀಷೇ**—ಸುಸಂಸ್ಕೃತವಾದುದನ್ನಾಗಿ ಮಾಡುತ್ತೇನೆ । **ತಾ**—ಆ ಇಂದ್ರಾವರುಣರಿಬ್ಬರೂ । **ಅಭೀಕೇ**—ಸನ್ನಿಹಿತವಾದ । **ಯಾಮನ್**—ಯುದ್ಧವ್ಯಾಪಾರಗಳಲ್ಲಿ । **ನಃ**—ನಮ್ಮನ್ನು **ಉರುಷ್ಯತಾಂ**—ರಕ್ಷಿಸಲಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ಇಂದ್ರನನ್ನುದ್ದೇಶಿಸಿಯೂ, ವರುಣನನ್ನುದ್ದೇಶಿಸಿಯೂ ಸೋಮವನ್ನು ಅರ್ಪಿಸುತ್ತಾ ನಿಮ್ಮಿಬ್ಬರನ್ನೂ ಉದ್ದೇಶಿಸಿ ಪ್ರಕಾಶಮಾನವಾದುದೂ, ಉಷೋದೇವಿಯಂತೆ ಪ್ರಭಾಯುತವಾದ ಅವಯವಗಳುಳ್ಳದ್ದೂ ರಾಕ್ಷಸಾದಿಗಳ ಸ್ಪರ್ಶವಿಲ್ಲದುದೂ ಆದ ಸ್ತುತಿಯನ್ನು ಸುಸಂಸ್ಕೃತವಾದುದನ್ನಾಗಿ ಮಾಡುತ್ತೇನೆ. ಆ ಇಂದ್ರಾವರುಣರಿಬ್ಬರೂ ಸನ್ನಿಹಿತವಾದ ಯುದ್ಧವ್ಯಾಪಾರಗಳಲ್ಲಿ ನಮ್ಮನ್ನು ರಕ್ಷಿಸಲಿ.

## English Translation

I offer to you both adoration, uninterrupted by Rakshasas, presenting the Soma to Indra and to Varuna,—(adoration), of which the members are radiant as the celestial dawn: may they two protect us at the time of going to battle.

॥ ಸಂಹಿತಾಪಾಠಃ ॥

ಸ್ಪರ್ಧಂತೇ ವಾ ಉ ದೇವಹೂಯೇ ಅತ್ರ ಯೇಷು ಧ್ವಜೇಷು ದಿದ್ಯವಃ ಪತಂತಿ ।
ಯುವಂ ತಾಁ ಇಂದ್ರವರುಣಾವಮಿತ್ರಾನ್ಹತಂ ಪರಾಚಃ ಶರ್ವಾ ವಿಷೂಚಃ ॥

॥ ಪದಪಾಠಃ ॥

ಸ್ಪರ್ಧಂತೇ । ವೈ । ಊಂ ಇತಿ । ದೇವಽಹೂಯೇ । ಅತ್ರ । ಯೇಷು । ಧ್ವಜೇಷು । ದಿದ್ಯವಃ । ಪತಂತಿ ।
ಯುವಂ । ತಾನ್ । ಇಂದ್ರಾವರುಣಾ । ಅಮಿತ್ರಾನ್ । ಹತಂ । ಪರಾಚಃ । ಶರ್ವಾ । ವಿಷೂಚಃ ॥ ೨ ॥

॥ ಸಾಯಣಭಾಷ್ಯಂ ॥

ದೇವಹೂಯೇ । ದೇವಾ ವಿಜಿಗೀಷವೋ ಯೋದ್ಧಾರೋ ಹ್ವಯಂತೇ ಯುದ್ಧಾರ್ಥಂ ಪರಸ್ಪರಮಾಹ್ವಯಂತ ಇತಿ ದೇವಹೂಯಃ ಸಂಗ್ರಾಮಃ । ಅತ್ರಾಸ್ಮಿನ್ದೇವಹೂಯೇ ಸಂಗ್ರಾಮೇ ಸ್ಪರ್ಧಂತೇ ವೈ ಶತ್ರವೋಽಸ್ಮಾಭಿಃ ಸ್ಪರ್ಧಂತೇ ಖಲು । ಉ ಇತಿ ಪೂರಕಃ । ಯೇಷು ಸಂಗ್ರಾಮೇಷು ಧ್ವಜೇಷು ಪತಾಕಾಸು ದಿದ್ಯವಃ ಶತ್ರುಕ್ಷಿಪ್ತಾನ್ಯಾಯುಧಾನಿ ಪತಂತಿ ತಾಂಸ್ತೇಷು ಸಂಗ್ರಾಮೇಷು ವಿದ್ಯಮಾನಾನಮಿತ್ರಾಞ್ಛತ್ರೂನ್ ಹೇ ಇಂದ್ರಾವರುಣಾ ಯುವಂ ಯುವಾಂ ಶರ್ವಾ ಶರುಣಾ ಹಿಂಸಕೇನಾಯುಧೇನ ಪರಾಚಃ ಪರಾಙ್ಮುಖಾನ್ ವಿಷೂಚೋ ವಿವಿಧಗತೀಂಶ್ಚ ಹತಂ । ಹಿಂಸ್ತಂ । ಯಥಾ ತೇ ಶತ್ರವಃ ಪರಾಙ್ಮುಖಾ ಇತಸ್ತತಃ ಪಲಾಯಮಾನಾಶ್ಚ ಭವಂತಿ ತಥಾ ಕುರ್ವಾಥಾಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ದೇವಹೂಯೇ—ದೇವತೆಗಳನ್ನು ಸಹಾಯಕ್ಕಾಗಿ ಕರೆಯತಕ್ಕ । ಅತ್ರ—ಈ ಸಂಗ್ರಾಮದಲ್ಲಿ । ಸ್ಪರ್ಧಂತೇ ವೈ—ಶತ್ರುಗಳು ನಮ್ಮೊಡನೆ ಸ್ಪರ್ಧಿಸುತ್ತಾರಲ್ಲವೇ ? । ಯೇಷು—ಯಾವ ಸಂಗ್ರಾಮಗಳಲ್ಲಿ । ಧ್ವಜೇಷು—ಧ್ವಜಗಳಮೇಲೆ। ದಿದ್ಯವಃ—ಶತ್ರುಗಳಿಂದ ಎಸೆಯಲ್ಪಟ್ಟ ಆಯುಧಗಳು । ಪತಂತಿ—ಬೀಳುತ್ತವೆಯೋ।

ತಾನ್—ಆ ಸಂಗ್ರಾಮಗಳಲ್ಲಿ ಪ್ರತಿಭಟಿಸುವ । ಅಮಿತ್ರಾನ್—ಶತ್ರುಗಳನ್ನು । ಇಂದ್ರಾವರುಣಾ—ಎಲೈ ಇಂದ್ರಾವರುಣರೇ । ಯುವಂ—ನೀವಿಬ್ಬರೂ । ಶರ್ವಾ—ಹಿಂಸಕವಾದ ಆಯುಧದಿಂದ । ಪರಾಚಃ—ಪರಾಙ್ಮುಖರಾಗುವಂತೆಯೂ । ವಿಷೂಚಃ—ನಾನಾ ದಿಕ್ಕುಗಳಿಗೆ ಓಡಿಹೋಗುವಂತೆಯೂ । ಹತಂ—ಪ್ರಹರಿಸಿ ಹಿಂಸಿಸಿರಿ.

॥ ಭಾವಾರ್ಥ ॥

ಎಲೈ ಇಂದ್ರಾವರುಣರೇ, ದೇವತೆಗಳನ್ನು ಸಹಾಯಕ್ಕಾಗಿ ಕರೆಯತಕ್ಕ ಈ ಸಂಗ್ರಾಮದಲ್ಲಿ ಶತ್ರುಗಳು ನಮ್ಮೊಡನೆ ಸ್ಪರ್ಧಿಸುತ್ತಾರಲ್ಲವೇ ? ಯಾವ ಸಂಗ್ರಾಮಗಳಲ್ಲಿ ಧ್ವಜಗಳ ಮೇಲೆ ಶತ್ರುಗಳಿಂದ ಎಸೆಯಲ್ಪಟ್ಟ ಆಯುಧಗಳು ಬೀಳುತ್ತವೆಯೋ ಆ ಸಂಗ್ರಾಮಗಳಲ್ಲಿ ಪ್ರತಿಭಟಿಸುವ ಶತ್ರುಗಳನ್ನು ನೀವಿಬ್ಬರೂ ಹಿಂಸಕವಾದ ಆಯುಧದಿಂದ ಪರಾಙ್ಮುಖರಾಗುವಂತೆಯೂ ನಾನಾದಿಕ್ಕುಗಳಿಗೆ ಓಡಿಹೋಗುವಂತೆಯೂ ಪ್ರಹರಿಸಿ ಹಿಂಸಿಸಿರಿ.

## English Translation

In the conflict where (combatants) strive against us, in those (contests) in which bright (weapons) fall upon the banners, do you two, Indra and Varuna, slay with your shaft those enemies who have been routed, and are scattered in various directions.

॥ ಸಂಹಿತಾಪಾಠಃ ॥

ಆಪಶ್ಚಿದ್ಧಿ ಸ್ವಯಶಸಃ ಸದಃಸು ದೇವೀರಿಂದ್ರಂ ವರುಣಂ ದೇವತಾ ಧುಃ ।
ಕೃಷ್ಟೀರನ್ಯೋ ಧಾರಯತಿ ಪ್ರವಿಕ್ತಾ ವೃತ್ರಾಣ್ಯನ್ಯೋ ಅಪ್ರತೀನಿ ಹಂತಿ ॥೫॥

॥ ಪದಪಾಠ॥

ಆಪಃ । ಚಿತ್ । ಹಿ । ಸ್ವಽಯಶಸಃ । ಸದಃಽಸು । ದೇವೀಃ । ಇಂದ್ರಂ । ವರುಣಂ । ದೇವತಾ । ಧುರಿತಿ ಧುಃ ।
ಕೃಷ್ಟೀಃ । ಅನ್ಯಃ । ಧಾರಯತಿ । ಪ್ರಽವಿಕ್ತಾಃ । ವೃತ್ರಾಣಿ । ಅನ್ಯಃ । ಅಪ್ರತೀನಿ । ಹಂತಿ ॥ ೫ ॥

॥ ಸಾಯಣಭಾಷ್ಯಂ ॥

ಆಪಶ್ಚಿದಪ್ಯಿಕಾರಾಃ ಸೋಮಾಶ್ಚ ಸ್ವಯಶಸಃ ಸ್ವಾಯತ್ತಯಶಸ್ಕಾ ದೇವೀರ್ದ್ಯೋತಮಾನಾಃ ಸಂತಃ ಸದಃಸು ಸದನೇಷು ಸ್ಥಾನೇಷ್ವಿಂದ್ರಂ ವರುಣಂ ಚ ದೇವತ್ವೈತೇ ದ್ವೇ ದೇವತೇ ಧುಃ । ಧಾರಯಂತಿ । ಅವಸ್ಥಾಪಯಂತಿ । ಸೋಮೇನಾಪ್ಯಾಯಿತಾ ಹಿ ದೇವತಾಃ ಸ್ವೇ ಸ್ವೇ ಸ್ಥಾನೇಽವತಿಷ್ಠಂತೇ ।

ಯುದ್ವಾ । ವಸತೀವರ್ಯಾಖ್ಯಾ ಆಪ ಏವ ಸೋಮಾಭಿಷವದ್ವಾರಾ ಸದನೇಷ್ವಿಂದ್ರಂ ವರುಣಂ ಚ ಧಾರಯಂತಿ । ತಯೋರಿಂದ್ರಾವರುಣಯೋರನ್ಯ ಏಕಃ ಪ್ರವಿಕ್ತಾಃ ಪೃಥಕ್ಕೃತಾಃ ಪುಣ್ಯಾಪುಣ್ಯವಿವೇಕೇನ ವಿಚಿತ್ರಫಲಭೋಕ್ತ್ರೀಃ ಕೃಷ್ಟೀಃ ಪ್ರಜಾ ಅಸಾಂಕರ್ಯೇಣ ಧಾರಯತಿ । ಅನ್ಯ ಇಂದ್ರೋ ವೃತ್ರಾಣಿ ಶತ್ರುಜಾತಾನ್ಯಪ್ರತೀನ್ಯನ್ಯೈರಪ್ರತಿಗತಾನಿ ಹಂತಿ । ಹಿನಸ್ತಿ ॥

॥ ಪ್ರತಿಪದಾರ್ಥ ॥

**ಸ್ವಯಶಸಃ**—ಸ್ವಯಂಪ್ರಸಿದ್ಧವಾದವೂ । **ದೇವೀಃ**–ಪ್ರಕಾಶಮಾನವಾದವೂ । **ಅಪಶ್ಚಿತ್**–ಉದಕದಂತೆ ಪ್ರವಹಿಸುವವೂ ಆದ ಸೋಮರಸಗಳು । **ದೇವತಾ**—ದೇವತಾತ್ಮರಾದ । **ಇಂದ್ರಂ**—ಇಂದ್ರನನ್ನೂ । **ವರುಣಂ**—ವರುಣನನ್ನೂ । **ಸದಃಸು**—ಯಜ್ಞಸ್ಥಾನಗಳಲ್ಲಿ । **ಧುಃ ಹಿ**—ಅವರವರ ಸ್ಥಾನದಲ್ಲಿ ಸ್ಥಾಪಿಸುತ್ತವೆಯಲ್ಲವೇ । **ಅನ್ಯಃ**—ಈ ಇಂದ್ರಾವರುಣರಲ್ಲಿ ಒಬ್ಬನು (ವರುಣನು) । **ಪ್ರವಿಕ್ತಾಃ**—ಪುಣ್ಯಪಾಪರೂಪಗಳಲ್ಲಿ ಬೇರೆಬೇರೆಯಾದ। **ಕೃಷ್ಟೀಃ**—ಪ್ರಜೆಗಳ ಗುಂಪುಗಳನ್ನು । **ಧಾರಯತಿ**—ನಿಯಮನದಿಂದ ಧರಿಸುತ್ತಾನೆ । **ಅನ್ಯಃ**—ಇನ್ನೊಬ್ಬನಾದ ಇಂದ್ರನು । **ಅಪ್ರತೀನಿ**—ಇತರರಿಂದ ಎದುರಿಸಲು ಸಾಧ್ಯವಿಲ್ಲದ । **ವೃತ್ರಾಣಿ**—ಶತ್ರುಗಳನ್ನು । **ಹಂತಿ**—ಕೊಲ್ಲುತ್ತಾನೆ.

॥ ಭಾವಾರ್ಥ ॥

ಸ್ವಯಂಪ್ರಸಿದ್ಧವಾದವೂ ಪ್ರಕಾಶಮಾನವಾದವೂ ಉದಕದಂತೆ ಪ್ರವಹಿಸುವುವೂ ಆದ ಸೋಮರಸಗಳು ದೇವತಾತ್ಮರಾದ ಇಂದ್ರನನ್ನೂ ವರುಣನನ್ನೂ ಯಜ್ಞಸದನದ ಅವರವರ ಸ್ಥಾನಗಳಲ್ಲಿ ಸ್ಥಾಪಿಸುತ್ತವೆ. ಈ ಇಂದ್ರಾವರುಣರಲ್ಲಿ ಒಬ್ಬನಾದ ವರುಣನು ಪುಣ್ಯಪಾಪರೂಪಗಳಲ್ಲಿ ಬೇರೆಬೇರೆಯಾದ ಪ್ರಜೆಗಳ ಗುಂಪುಗಳನ್ನು ನಿಯಮನದಿಂದ ಧರಿಸುತ್ತಾನೆ. ಇನ್ನೊಬ್ಬನಾದ ಇಂದ್ರನು ಇತರರಿಂದ ಎದುರಿಸಲು ಸಾಧ್ಯವಿಲ್ಲದ ಶತ್ರುಗಳನ್ನು ಕೊಲ್ಲುತ್ತಾನೆ.

## English Translation

The divine Soma (juices), flowing like water, self-renowned, (offered) at religious assemblies, support Indra and Varuna: of whom one regulates mankind, distinguished (as good or bad), and the other slays unresisted foes.

॥ ಸಂಹಿತಾಪಾಠಃ ॥

ಸ ಸುಕ್ರತುರ್ಋತಚಿದಸ್ತು ಹೋತಾ ಯ ಆದಿತ್ಯ ಶವಸಾ ವಾಂ ನಮಸ್ವಾನ್ ।

ಆವವರ್ತದವಸೇ ವಾಂ ಹವಿಷ್ಮಾನಸದಿತ್ಸ ಸುವಿತಾಯ ಪ್ರಯಸ್ವಾನ್ ॥೪॥

॥ ಪದಪಾಠಃ ॥

ಸಃ । ಸುಽಕ್ರತುಃ । ಋತಽಚಿತ್ । ಅಸ್ತು । ಹೋತಾ । ಯಃ । ಆದಿತ್ಯಾ । ಶವಸಾ । ವಾಂ ।
ನಮಸ್ವಾನ್ ।
ಆಽವವರ್ತತ್ । ಅವಸೇ । ವಾಂ । ಹವಿಷ್ಮಾನ್ । ಅಸತ್ । ಇತ್ । ಸಃ । ಸುವಿತಾಯ । ಪ್ರಯಸ್ವಾನ್ ॥

॥ ಸಾಯಣಭಾಷ್ಯಂ ॥

ಸುಕ್ರತುಃ ಶೋಭನಕರ್ಮಾ ಶೋಭನಪ್ರಜ್ಞೋ ವಾ ಸ ಹೋತಾ ಸ್ತೋತಾ ಋತಚಿದೃತಸ್ಯೋದಕಸ್ಯ ಯಜ್ಞಸ್ಯ ವಾ ಚೇತಾ ನಿಚೇತಾಸ್ತು । ಭವತು । ಹೇ ಆದಿತ್ಯಾದಿತೇಃ ಪುತ್ರಾವಿಂದ್ರಾವರುಣೌ ॥ ಛಾಂದಸಃ ಸಾಂಹಿತಿಕೋ ಹ್ರಸ್ವಃ ॥ ಯೋ ನಮಸ್ವಾನ್ನಮಸಾ ನಮಸ್ಕಾರೇಣ ಸ್ತೋತ್ರೇಣ ವಾ ಯುಕ್ತಃ ಶವಸಾ ಬಲೇನ ಯುಕ್ತೌ ವಾಂ ಯುವಾಂ ಪರಿಚರತೀತಿ ಶೇಷಃ । ಸ ಸುಕ್ರತುರಿತ್ಯನ್ವಯಃ । ಅಪಿ ಚ ಯೋ ಹವಿಷ್ಮಾನ್ ಹವಿರ್ಭಿರ್ಯುಕ್ತಃ ಸನ್ನವಸೇ ತರ್ಪಣಾರ್ಥಂ ವಾಂ ಯುವಾಮಾವವರ್ತತ್ ಆವರ್ತಯೇತ್ ಸ ಯಜಮಾನಃ ಪ್ರಯಸ್ವಾನನ್ನವಾನ್ ಭೂತ್ವಾ ಸುವಿತಾಯ ಸುಷ್ಠು ಪ್ರಾಪ್ತವ್ಯಾಯ ಫಲಾಯಾಸದಿತ್ । ಭವೇದೇವ ॥

॥ ಪ್ರತಿಪದಾರ್ಥ ॥

ಆದಿತ್ಯಾ—ಅದಿತಿಪುತ್ರರಾದ ಎಲೈ ಇಂದ್ರಾವರುಣರೇ । ನಮಸ್ವಾನ್—ಸ್ತುತಿಯಿಂದ ಕೂಡಿದ । ಯಃ—ಯಾವ ಸ್ತೋತೃವು । ಶವಸಾ—ಶಕ್ತಿಯುತರಾದ । ವಾಂ—ನಿಮ್ಮನ್ನು ಪೂಜಿಸುವನೋ । ಸುಕ್ರತುಃ—ಉತ್ತಮವಾದ ಕರ್ಮವುಳ್ಳ । ಸಃ ಹೋತಾ—ಅದೇ ಸ್ತುತಿಕರ್ತನು । ಋತಚಿತ್—ಯಜ್ಞದಿಂದ ಲಬ್ಧವಾದ ಫಲವುಳ್ಳವನಾಗಿ । ಅಸ್ತು—ಆಗಿರಲಿ । ಹವಿಷ್ಮಾನ್—ಹವಿಸ್ಸಿನಿಂದ ಕೂಡಿದ ಯಾವ ಯಜಮಾನನು । ವಾಂ—ನಿಮ್ಮನ್ನು । ಅವಸೇ—ನಿಮ್ಮ ತೃಪ್ತ್ಯರ್ಥವಾಗಿ । ಆವವರ್ತತ್—ಸ್ತುತಿಸಿ ಕರೆಯುವನೋ । ಸಃ—ಅದೇ ಯಜಮಾನನು । ಪ್ರಯಸ್ವಾನ್—ಅನ್ನವಂತನಾಗಿಯೂ । ಸುವಿತಾಯ—ಉತ್ತಮವಾದ ಫಲವನ್ನು ಹೊಂದುವವನಾಗಿಯೂ । ಅಸದಿತ್—ಆಗಲಿ.

॥ ಭಾವಾರ್ಥ ॥

ಅದಿತಿಪುತ್ರರಾದ ಎಲೈ ಇಂದ್ರಾವರುಣರೇ, ಸ್ತುತಿಯುಕ್ತನಾದ ಯಾವ ಸ್ತೋತೃವು ಶಕ್ತಿಯುತರಾದ ನಿಮ್ಮನ್ನು ಪೂಜಿಸುವನೋ ಉತ್ತಮವಾದ ಕರ್ಮವುಳ್ಳ ಅದೇ ಸ್ತುತಿಕರ್ತನು ಯಜ್ಞದಿಂದ ಲಬ್ಧವಾದ ಫಲವುಳ್ಳವನಾಗಿ ಆಗಿರಲಿ. ಹವಿಸ್ಸಿನಿಂದ ಕೂಡಿದ ಯಾವ ಯಜಮಾನನು ನಿಮ್ಮನ್ನು ನಿಮ್ಮ ತೃಪ್ತ್ಯರ್ಥವಾಗಿ ಸ್ತುತಿಸಿ ಕರೆಯುವನೋ ಆ ಯಜಮಾನನು ಅನ್ನವಂತನಾಗಿಯೂ ಉತ್ತಮವಾದ ಫಲವನ್ನು ಹೊಂದುವವ ನಾಗಿಯೂ ಆಗಲಿ.

## English Translation

May the devout worshipper derive benefit from sacrifice when offering adoration to you both, sons of Aditi, (endowed) with strength : he who,

liberal of oblations, invites you for your satisfaction, may he, possessing abundance, be in the enjoyment of happiness.

॥ ಸಂಹಿತಾಪಾಠಃ ॥

ಇಯಮಿಂದ್ರಂ ವರುಣಮಷ್ಟ ಮೇ ಗೀಃ ಪ್ರಾವತ್ತೋಕೇ ತನಯೇ ತೂತುಜಾನಾ ।
ಸುರತ್ನಾಸೋ ದೇವವೀತಿಂ ಗಮೇಮ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೫ ॥

॥ ಪದಪಾಠಃ ॥

ಇಯಂ । ಇಂದ್ರಂ । ವರುಣಂ । ಅಷ್ಟ । ಮೇ । ಗೀಃ । ಪ್ರ । ಆವತ್ । ತೋಕೇ । ತನಯೇ । ತೂತುಜಾನಾ ।
ಸುಽರತ್ನಾಸಃ । ದೇವಽವೀತಿಂ । ಗಮೇಮ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೫ ॥

॥ ಸಾಯಣಭಾಷ್ಯಂ ॥

ವ್ಯಾಖ್ಯಾತೇಯಂ । ಮದೀಯಾ ಸ್ತುತಿರಿಂದ್ರಂ ವರುಣಂ ಚಾಶ್ನುತಾಂ । ಮಯಾ ಪ್ರೇರ್ಯಮಾಣಾ ಸಾ ಪುತ್ರೇ ಪೌತ್ರೇ ಚ ವಿಷಯೇಽಸ್ಮಾನ್ಪ್ರರಕ್ಷತು । ವಯಂ ಶೋಭನಧನಾಃ ಸಂತ ಉತ್ತರೋತ್ತರಂ ಯಾಗಂ ಪ್ರಾಪ್ನುಯಾಮ । ಹೇ ಇಂದ್ರಾವರುಣಾದಯೋ ದೇವಾಃ ಅಸ್ಮಾನ್ಸರ್ವದಾ ಕಲ್ಯಾಣೈ ರಕ್ಷತ ॥

॥ ಪ್ರತಿಪದಾರ್ಥ ॥

ಮೇ—ನನ್ನ । ಇಯಂ ಗೀಃ—ಈ ಸ್ತುತಿಯು । ಇಂದ್ರಂ—ಇಂದ್ರನನ್ನೂ । ವರುಣಂ—ವರುಣನನ್ನೂ ಅಷ್ಟ—ವ್ಯಾಪಿಸಿ ಸೇರಿಕೊಳ್ಳಲಿ । ತೂತುಜಾನಾ—ನನ್ನಿಂದ ಅರ್ಪಿತವಾದ ಇದೇ ಸ್ತುತಿಯು । ತೋಕೇ—ನಮ್ಮ ಪುತ್ರರಿಗೂ । ತನಯೇ—ಪೌತ್ರರಿಗೂ । ಪ್ರಾವತ್—ರಕ್ಷಕವಾಗಿರಲಿ । (ವಯಂ—ನಾವು) । ಸುರತ್ನಾಸಃ—ಶ್ರೇಷ್ಠವಾದ ಧನವುಳ್ಳವರಾಗಿ । ದೇವವೀತಿಂ—ದೇವತೆಗಳಿಗೆ ಇಷ್ಟವಾದ ಯಜ್ಞವನ್ನು । ಗಮೇಮ—ಆಚರಿಸುವಂತಾಗಲಿ (ಎಲೈ ಇಂದ್ರ ವರುಣಾದಿಗಳೇ) । ಯೂಯಂ—ನೀವೆಲ್ಲರೂ । ನಃ—ನಮ್ಮನ್ನು । ಸ್ವಸ್ತಿಭಿಃ—ಕಲ್ಯಾಣಗಳಿಂದ । ಸದಾ—ಯಾವಾಗಲೂ । ಪಾತ—ರಕ್ಷಿಸಿರಿ.

॥ ಭಾವಾರ್ಥ ॥

ನನ್ನ ಈ ಸ್ತುತಿಯು ಇಂದ್ರನನ್ನೂ ವರುಣನನ್ನೂ ವ್ಯಾಪಿಸಿ ಸೇರಿಕೊಳ್ಳಲಿ. ನನ್ನಿಂದ ಅರ್ಪಿತವಾದ ಇದೇ ಸ್ತುತಿಯು ನಮ್ಮ ಪುತ್ರರಿಗೂ ಪೌತ್ರರಿಗೂ ರಕ್ಷಕವಾಗಿರಲಿ. ನಾವು ಶ್ರೇಷ್ಠವಾದ ಧನವುಳ್ಳವರಾಗಿ ದೇವತೆಗಳಿಗೆ

ಇಷ್ಟವಾದ ಯಜ್ಞವನ್ನು ಆಚರಿಸುವಂತಾಗಲಿ. ಎಲೈ ಇಂದ್ರಾವರುಣಾದಿಗಳೇ, ನೀವೆಲ್ಲರೂ ನಮ್ಮನ್ನು ಯಾವಾಗಲೂ ಕಲ್ಯಾಣದಿಂದ ರಕ್ಷಿಸಿರಿ.

**English Translation**

May this my praise reach Indra and Varuna: and earnestly offered (by me), preserve sons and grandsons: let us possessed of affluence, present. (their) food to the gods: and do you, (deities), ever cherish us with blessings.



## ಎಂಭತ್ತಾರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಧೀರಾ ತ್ವಸ್ಯೇತ್ಯಷ್ಟರ್ಚಂ ಷೋಡಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವರುಣದೇವತ್ಯಂ ತಥಾ ಚಾನುಕ್ರಾಂತಂ । ಧೀರಾಷ್ಟೌ ವಾರುಣಂ ಹೀತಿ ॥ ಗತೋ ವಿನಿಯೋಗಃ ॥**

ಅನುವಾದವು— ಧೀರಾ ತ್ವಸ್ಯ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ವರುಣನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಧೀರಾಷ್ಟೌ ವಾರುಣಂ ಹ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

### ಸೂಕ್ತ—೮೬

ಮಂಡಲ—೭ । ಅನುವಾಕ—೫ । ಸೂಕ್ತ—೮೬ ।
ಅಷ್ಟಕ—೫ । ಅಧ್ಯಾಯ—೬ । ವರ್ಗ—೮ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ।
ಋಷಿಃ—ವಸಿಷ್ಠಃ ।
ದೇವತಾ—ವರುಣಃ ।
ಛಂದಃ—ತ್ರಿಷ್ಟುಪ್ ।

॥ ಸಂಹಿತಾಪಾಠಃ ॥

ಧೀರಾ ತ್ವಸ್ಯ ಮಹಿನಾ ಜನೂಂಷಿ ವಿ ಯಸ್ತಸ್ತಂಭ ರೋದಸೀ ಚಿದುರ್ವೀ।
ಪ್ರ ನಾಕಮೃಷ್ವಂ ನುನುದೇ ಬೃಹಂತಂ ದ್ವಿತಾ ನಕ್ಷತ್ರಂ ಪಪ್ರಥಚ್ಚ
ಭೂಮ ॥ ೧ ॥

॥ ಪದಪಾಠಃ ॥

ಧೀರಾ । ತು । ಅಸ್ಯ । ಮಹಿನಾ । ಜನೂಂಷಿ । ವಿ । ಯಃ । ತಸ್ತಂಭ । ರೋದಸೀ ಇತಿ । ಚಿತ್ । ಉರ್ವೀ ಇತಿ ।

ಪ್ರ । ನಾಕಂ । ಋಷ್ವಂ । ನುನುದೇ । ಬೃಹಂತಂ । ದ್ವಿತಾ । ನಕ್ಷತ್ರಂ । ಪಪ್ರಥತ್ । ಚ । ಭೂಮ ॥೧॥

॥ ಸಾಯಣಭಾಷ್ಯಂ ॥

ಅಸ್ಯ ವರುಣಸ್ಯ ಜನೂಂಷಿ ಜನ್ಮಾನಿ ಮಹಿನಾ ಮಹಿಮ್ನಾ ತು ಕ್ಷಿಪ್ರಂ ಧೀರಾ ಧೀರಾಣಿ ಧೈರ್ಯವಂತಿ ಭವಂತಿ । ಯೋ ವರುಣ ಉರ್ವೀ ವಿಸ್ತೀರ್ಣೇ ರೋದಸೀ ಚಿದ್ದ್ಯಾವಾಪೃಥಿವ್ಯಾವಪಿ ವಿ ತಸ್ತಂಭ ವಿವಿಧಂ ಸ್ತಬ್ಧೇ ಸ್ವಕೀಯೇ ಸ್ಥಾನೇ ಸ್ಥಿತೇ ಅಕರೋತ್ । ಯಶ್ಚ ಬೃಹಂತಂ ಮಹಾಂತಂ ನಾಕಮಾದಿತ್ಯಂ ನಕ್ಷತ್ರಂ ಚರ್ಷ್ವಂ ದರ್ಶನೀಯಂ ದ್ವಿತಾ ದ್ವೈಧಂ ಪ್ರ ನುನುದೇ ಪ್ರೇರಯತಿ ಸ್ಮ । ಅಹನಿ ಸೂರ್ಯಂ ದರ್ಶನೀಯಂ ಪ್ರೇರಯತಿ ರಾತ್ರೌ ನಕ್ಷತ್ರಂ ತಥೇತಿ ದ್ವಿಪ್ರಕಾರಃ । ಭೂಮ ಭೂಮಿಂ ಚ ಯಃ ಪಪ್ರಥತ್ ಅಪ್ರಥಯತ್ ವಿಸ್ತಾರಿತವಾನ್ । ತಸ್ಯಾಸ್ಯ ವರುಣಸ್ಯೇತ್ಯನ್ವಯಃ ॥

॥ ಪ್ರತಿಪದಾರ್ಥ ॥

ಯಃ—ಯಾವ ವರುಣನು । ಉರ್ವೀ—ಅತಿ ವಿಸ್ತೃತವಾದ । ರೋದಸೀ ಚಿತ್—ದ್ಯಾವಾಪೃಥಿವಿಗಳನ್ನೂ । ವಿ ತಸ್ತಂಭ—ಪ್ರತ್ಯೇಕವಾಗಿ ಸ್ಥಾಪಿಸಿದನೋ । ಬೃಹಂತಂ—ಮಹತ್ತಾದ । ನಾಕಂ – ಅಂತರಿಕ್ಷಸ್ಥವಾದ ನಕ್ಷತ್ರಗಳನ್ನೂ । ಆದಿತ್ಯಂ—ಆದಿತ್ಯನನ್ನೂ । ಋಷ್ವಂ—ಆಕರ್ಷಕವಾದ ರೂಪವುಳ್ಳವನಾಗಿಯೂ । ದ್ವಿತಾ—ಎರಡು ವಿಧವಾದ ರೂಪವುಳ್ಳವನಾಗಿಯೂ । ಪ್ರನುನುದೇ—ಪ್ರೇರಿಸಿದನೋ । ಭೂಮ ಚ—ಭೂಮಿಯನ್ನೂ ಕೂಡ । ಪಪ್ರಥತ್—ಯಾವ ವರುಣನು ಅತಿ ವಿಸ್ತೃತವಾಗುವಂತೆ ಮಾಡಿದನೋ । ಅಸ್ಯ—ಅದೇ ವರುಣನ । ಜನೂಂಷಿ—ಜನ್ಮಗಳು । ಧೀರಾ—ಸ್ಥಿರವಾಗಿ ನಿಲ್ಲತಕ್ಕ । ಮಹಿನಾ ತು—ಮಾಹಾತ್ಮ್ಯದಿಂದ ಕೂಡಿದವಾಗಿಯೇ ಇರುತ್ತವೆ.

॥ ಭಾವಾರ್ಥ ॥

ಯಾವ ವರುಣನು ಅತಿ ವಿಸ್ತೃತವಾದ ದ್ಯಾವಾಪೃಥಿವಿಗಳೆರಡನ್ನೂ ಪ್ರತ್ಯೇಕವಾಗಿ ಸ್ಥಾಪಿಸಿದನೋ, ಮಹತ್ತಾದ ಅಂತರಿಕ್ಷದಲ್ಲಿರುವ ನಕ್ಷತ್ರಗಳನ್ನೂ ಆದಿತ್ಯನನ್ನೂ ಆಕರ್ಷಕವಾದ ರೂಪವುಳ್ಳವವಾಗಿರುವಂತೆ ಪ್ರೇರಿಸಿದನೋ, ಭೂಮಿಯನ್ನೂ ಕೂಡ ಯಾವ ವರುಣನು ಅತಿ ವಿಸ್ತೃತವಾಗುವಂತೆ ಮಾಡಿದನೋ ಅದೇ ವರುಣನ ಜನ್ಮಗಳು ಸ್ಥಿರವಾಗಿ ನಿಲ್ಲತಕ್ಕ ಮಾಹಾತ್ಮ್ಯದಿಂದ ಕೂಡಿದವಾಗಿಯೇ ಇರುತ್ತವೆ.

## English Translation

Permanent in greatness are the births of that Varuna who propped up the vast heaven and earth, who appointed to (their) two-fold (task) the glorious sun and beautiful constellations, who spread out the earth.

॥ ಸಂಹಿತಾಪಾಠಃ ॥

ಉತ ಸ್ವಯಾ ತನ್ವಾ೩ ಸಂ ವದೇ ತತ್ಕದಾ ನ್ವ೧ನ್ತರ್ವರುಣೇ ಭುವಾನಿ ।
ಕಿಂ ಮೇ ಹವ್ಯಮಹೃಣಾನೋ ಜುಷೇತ ಕದಾ ಮೃಳೀಕಂ ಸುಮನಾ
ಅಭಿ ಖ್ಯಂ ॥ ೨ ॥

॥ ಪದಪಾಠಃ ॥

ಉತ । ಸ್ವಯಾ । ತನ್ವಾ । ಸಂ । ವದೇ । ತತ್ । ಕದಾ । ನು । ಅಂತಃ । ವರುಣೇ । ಭುವಾನಿ ।
ಕಿಂ । ಮೇ । ಹವ್ಯಂ । ಅಹೃಣಾನಃ । ಜುಷೇತ । ಕದಾ । ಮೃಳೀಕಂ । ಸುಽಮನಾಃ । ಅಭಿ । ಖ್ಯಂ ॥೨॥

॥ ಸಾಯಣಭಾಷ್ಯಂ ॥

ವರುಣಂ ಶೀಘ್ರಂ ದಿದೃಕ್ಷಮಾಣ ಋಷಿರನಯಾ ವಿತರ್ಕಯತಿ । ಉತೇತಿ ವಿಚಿಕಿತ್ಸಾಯಾಂ । ಉತ ಕಿಂ ಸ್ವಯಾ ತನ್ವಾ ಸ್ವೀಯೇನಾತ್ಮೀಯೇನ ಶರೀರೇಣ ಸಂ ವದೇ । ಸಹವದನಂ ಕರೋಮಿ । ಆಹೋ ಸ್ವಿತ್ ತತ್ತೇನ ವರುಣೇನ ಸಹ ಸಂ ವದೇ । ಕದಾ ನು ಕದಾ ಖಲು ವರುಣೇ ದೇವೇಽಂತರ್ಭುರ್ವಾನಿ । ಅಂತರ್ಭೂತೋ ಭವಾನಿ । ವರುಣಸ್ಯ ಚಿತ್ತೇ ಸಂಲಗ್ನೋ ಭವಾನೀತ್ಯರ್ಥಃ । ಅಪಿ ಚ ಮೇ ಮದೀಯಂ ಹವ್ಯಂ ಸ್ತೋತ್ರಂ ಹವಿರ್ವಾಹೃಣಾನೋಽಕ್ರುಧ್ಯನ್ ವರುಣಃ ಕಿಂ ಕೇನ ಹೇತುನಾ ಜುಷೇತ। ಸೇವೇತ । ಸುಮನಾಃ ಶೋಭನಮನಸ್ಕಃ ಸನ್ನಹಂ ಕದಾ ಕಸ್ಮಿನ್ಕಾಲೇ ಮೃಳೀಕಂ ಸುಖಯಿತಾರಂ ವರುಣಮಭಿ ಖ್ಯಂ । ಅಭಿಪಶ್ಯೇಯ್ಯಂ ॥

॥ ಪ್ರತಿಪದಾರ್ಥ ॥

ಉತ— ಯಾವ ಪ್ರಕಾರವಾಗಿ । ಸ್ವಯಾ ತನ್ವಾ—ತನ್ನ ಶರೀರದೊಡನೆ ಗೋಚರನಾಗಿರುವ ವರುಣನೊಡನೆ । ಸಂ ವದೇ—ಎದುರಿಗೆ ನಿಂತು ಸಂಭಾಷಣೆಯನ್ನು ನಾನು ಮಾಡಬಲ್ಲೆನು ? । ಕದಾ ನು—ಯಾವಾಗ ತಾನೇ । ತತ್ ವರುಣೇ—ಅದೇ ವರುಣನ । ಅಂತಃ—ಹೃದಯಾಂತರ್ಗತನಾಗಿ । ಭುವನಾ ಪ್ರವೇಶಿಸಬಲ್ಲೆನು?। ಮೇ—ನನ್ನ । ಹವ್ಯಂ—ಸ್ತೋತ್ರವನ್ನು । ಅಹೃಣಾನಃ—ಕ್ರೋಧಗೊಳ್ಳದ ವರುಣನು । ಕಿಂ—ಯಾವ ರೀತಿ । ಜುಷೇತ—ಸೇವಿಸಬಹುದು ? । ಸುಮನಾಃ—ಉತ್ತಮವಾದ ಪೂಜಾಮನಸ್ಕನಾದ ನಾನು । ಕದಾ—ಯಾವಾಗ। ಮೃಳೀಕಂ—ಸುಖಕಾರಕನಾದ ವರುಣನನ್ನು । ಅಭಿ ಖ್ಯಂ—ನೋಡಬಲ್ಲೆನು ?

॥ ಭಾವಾರ್ಥ ॥

ತನ್ನ ಶರೀರದೊಡನೆ ಗೋಚರನಾಗಿರುವ ವರುಣನೊಡನೆ ನಾನು ಎದುರಿಗೆ ನಿಂತು ಯಾವ ಪ್ರಕಾರವಾಗಿ ಸಂಭಾಷಣೆಯನ್ನು ಮಾಡಬಲ್ಲೆನು ? ಯಾವಾಗ ತಾನೇ ಅದೇ ವರುಣನ ಹೃದಯಾಂತರ್ಗತನಾಗಿ ಪ್ರವೇಶಿಸಬಲ್ಲೆನು ?

ಕ್ರೋಧರಹಿತನಾದ ವರುಣನು ನನ್ನ ಸ್ತೋತ್ರವನ್ನು ಯಾವ ರೀತಿ ಸೇವಿಸಬಹುದು ? ಉತ್ತಮವಾದ ಪೂಜಾಮನಸ್ಕನಾದ ನಾನು ಸುಖಕಾರಕನಾದ ವರುಣನನ್ನು ಯಾವಾಗ ನೋಡಬಲ್ಲೆನು ?

English Translation

When may I in my person converse with that deity? when may I (be admitted) to the heart of Varuna? by what means may he, without displeasure, accept my oblation? when may I, rejoicing in mind, behold that giver of felicity?

॥ ಸಂಹಿತಾಪಾಠಃ ॥

ಪೃಚ್ಛೇ ತದೇನೋ ವರುಣ ದಿದೃಕ್ಷೂಪೋ ಏಮಿ ಚಿಕಿತುಷೋ ವಿಪೃಚ್ಛಂ ।
ಸಮಾನಮಿನ್ಮೇ ಕವಯಶ್ಚಿದಾಹುರಯಂ ಹ ತುಭ್ಯಂ ವರುಣೋ ಹೃಣೀತೇ ॥

॥ ಪದಪಾಠಃ ॥

ಪೃಚ್ಛೇ । ತತ್ । ಏನಃ । ವರುಣ । ದಿದೃಕ್ಷು । ಉಪೋ ಇತಿ । ಏಮಿ । ಚಿಕಿತುಷಃ । ವಿಽಪೃಚ್ಛಂ ।
ಸಮಾನಂ । ಇತ್ । ಮೇ । ಕವಯಃ । ಚಿತ್ । ಆಹುಃ । ಅಯಂ । ಹ । ತುಭ್ಯಂ । ವರುಣಃ । ಹೃಣೀತೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ವರುಣ ತದೇನಃ ಪಾಪಂ ಪೃಚ್ಛೇ । ತ್ವಾಂ ಪೃಚ್ಛಾಮಿ। ದಿದೃಕ್ಷು ॥ ಛಾಂದಸಃ ಸುಲೋಪಃ। ದ್ರಷ್ಟುಮಿಚ್ಛನ್ನಹಂ ಯೇನ ಪಾಪೇನ ಹೇತುನಾ ತ್ವದೀಯೈಃ ಪಾಶೈರ್ಬದ್ಧೋಽಸ್ಮಿ ಪೃಷ್ಟಃ ಸಂಸ್ತತ್ಪಾಪಂ ಕಥಯ । ಅಹಂ ವಿಪೃಚ್ಛಂ ವಿವಿಧಂ ಪ್ರಷ್ಟುಂ ಚಿಕಿತುಷೋ ವಿದುಷೋ ಜನಾನುಪೋ ಏಮಿ । ಉಪಾಗಾಂ । ತೇ ಕವಯಶ್ಚಿತ್ ಕ್ರಾಂತದರ್ಶಿನೋ ಜನಾಶ್ಚ ಮೇ ಮಹ್ಯಂ ಸಮಾನಮಿತ್ ಸಮಾನಮೇವೈಕರೂಪಮೇವಾಹುಃ । ಅಕಥಯನ್ । ಯದಾಹುಸ್ತದಾಹ । ಹೇ ಸ್ತೋತಃ ತುಭ್ಯಮಯಂ ಹಾಯಮೇವ ವರುಣೋ ಹೃಣೀತೇ । ಕ್ರುಧ್ಯತೀತಿ । ಅತಃ ಕ್ರೋಧಂ ಪರಿತ್ಯಜ್ಯಾಸ್ಮಾನ್ಪಾಶೇಭ್ಯೋ ಮೋಚಯ ॥

॥ ಪ್ರತಿಪದಾರ್ಥ ॥

ವರುಣ—ಎಲೈ ವರುಣನೇ । ತತ್ ಏನಃ—ನಿನ್ನ ವಿಷಯದಲ್ಲಿ ನಾನು ಯಾವ ಪಾಪವನ್ನು ಮಾಡಿರುವೆನ ಎಂಬುದಾಗಿ । ದಿದೃಕ್ಷು—ನಿನ್ನನ್ನು ಸಾಕ್ಷಾತ್ತಾಗಿ ನೋಡಲಿಚ್ಛೆಯುಳ್ಳ ನಾನು । ಪೃಚ್ಛೇ—ಕೇಳುತ್ತೇನೆ । ವಿಪೃಚ್ಛಂ—ಇದೇ ವಿಷಯವನ್ನು ಕೂಲಂಕಷವಾಗಿ ಕೇಳಿ ತಿಳಿಯಲು । ಚಿಕಿತುಷಃ—ಪ್ರಾಜ್ಞರಾದ ಋಷಿಗಳನ್ನು ।

**ಉಪೋ ಏಮಿ**—ನಾನು ಸಮೀಪಿಸಿ ಕೇಳಿದೆನು । **ಕವಯಶ್ಚಿತ್**—ಕ್ರಾಂತದರ್ಶಿಗಳಾದ ಆ ಕವಿಗಳಾದರೋ । **ಮೇ**—ನನಗೆ । **ಸಮಾನಮಿತ್**—ಎಲ್ಲರೂ ಒಂದೇ ಅಭಿಪ್ರಾಯವನ್ನು । **ಆಹುಃ**—ತಿಳಿಸಿದರು (ಅದೇನೆಂದರೆ) । (**ಸ್ತೋತಃ**—ಎಲೈ ಸ್ತೋತೃವೇ) । **ತುಭ್ಯಂ**—ನಿನ್ನ ವಿಷಯದಲ್ಲಿ । **ಅಯಂ ಹ ವರುಣಃ**-ಇದೇ ವರುಣದೇವನು । **ಹೃಣೀತೇ** ಕ್ರುದ್ಧನಾಗಿದ್ದಾನೆ

॥ ಭಾವಾರ್ಥ ॥

ಎಲೈ ವರುಣನೇ, ನಿನ್ನನ್ನು ಸಾಕ್ಷಾತ್ತಾಗಿ ನೋಡಲಿಚ್ಛೆಯುಳ್ಳ ನಾನು ನಿನ್ನ ವಿಷಯದಲ್ಲಿ ನಾನು ಯಾವ ಪಾಪವನ್ನು ಮಾಡಿರುವೆನು ಎಂಬುದಾಗಿ ನಿನ್ನನ್ನೇ ಕೇಳುತ್ತೇನೆ. ಇದೇ ವಿಷಯುವನ್ನು ಕೂಲಂಕಷವಾಗಿ ಕೇಳಿ ತಿಳಿಯಲು ಪ್ರಾಜ್ಞರಾದ ಋಷಿಗಳನ್ನು ನಾನು ಸಮೀಪಿಸಿ ಕೇಳಿದೆನು. ಕ್ರಾಂತದರ್ಶಿಗಳಾದ ಆ ಋಷಿಗಳೆಲ್ಲರೂ ಒಂದೇ ವಿಧವಾದ ಅಭಿಪ್ರಾಯವನ್ನು ತಿಳಿಸಿದರು. ಅದೇನೆಂದರೆ, "ಎಲೈ ಸ್ತೋತೃವೇ, ವರುಣದೇವನು ನಿನ್ನ ವಿಷಯದಲ್ಲಿ ಕ್ರುದ್ಧನಾಗಿದ್ದಾನೆ" ಎಂದು ತಿಳಿಸಿದರು.

## English Translation

Desirous of beholding you, Varuna, I inquire what is my offence: I have gone to make inquiry of the wise: the sages verily have said the same thing to me :—this Varuna is displeased with you.

॥ ಸಂಹಿತಾಪಾಠಃ ॥

ಕಿಮಾಗ ಆಸ ವರುಣ ಜ್ಯೇಷ್ಠಂ ಯತ್ಸ್ತೋತಾರಂ ಜಿಘಾಂಸಸಿ ಸಖಾಯಂ।
ಪ್ರ ತನ್ಮೇ ವೋಚೋ ದೂಳಭ ಸ್ವಧಾವೋಽವ ತ್ವಾನೇನಾ ನಮಸಾ ತುರ
ಇಯಾಂ ॥ ೪ ॥

॥ ಪದಪಾಠಃ ॥

ಕಿಂ । ಆಗಃ । ಆಸ । ವರುಣ । ಜ್ಯೇಷ್ಠಂ । ಯತ್ । ಸ್ತೋತಾರಂ । ಜಿಘಾಂಸಸಿ । ಸಖಾಯಂ ।
ಪ್ರ । ತತ್ । ಮೇ । ವೋಚಃ । ದುಃऽದಭ । ಸ್ವಧಾऽವಃ । ಅವ । ತ್ವಾ । ಅನೇನಾಃ । ನಮಸಾ ।
ತುರಃ । ಇಯಾಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ವರುಣ ಜ್ಯೇಷ್ಠಮಧಿಕಂ ಕಿಮಾಗ ಆಸ । ಕೋಽಪರಾಧೋ ಮಯಾ ಕೃತೋ ಬಭೂವ । ಯದ್ಯೇನಾಗಸಾ ಸಖಾಯಂ ಮಿತ್ರಭೂತಂ ಸಂತಂ ಸ್ತೋತಾರಂ ಜಿಘಾಂಸಸಿ ಹಂತುಮಿಚ್ಛಸಿ । ಹೇ

ದೂಳಭ ದುರ್ಧರ್ಷಾನ್ಯೈರ್ಬಾಧಿತುಮಶಕ್ಯ ಸ್ವಧಾವಸ್ತೇಜಸ್ವಿನ್ ಹೇ ವರುಣ ತದಾಗೋ ಮೇ ಮಹ್ಯಂ ಪ್ರ ವೋಚಃ । ಪ್ರಬ್ರೂಹಿ। ಏವಂ ಸತಿ ತಸ್ಯ ಪ್ರಾಯಶ್ಚಿತ್ತಂ ಕೃತ್ವಾನೇನಾ ಅಪಾಪಃ ಸನ್ನಹಂ ತುರಸ್ತ್ವರಮಾಣಃ ಶೀಘ್ರೋ ನಮಸಾ ನಮಸ್ಕಾರೇಣ ಹವಿಷಾ ವಾ ತ್ವಾಮವೇಯಾಂ । ಉಪಗಚ್ಛೇಯಂ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣದೇವನೇ । **ಯತ್**—ಯಾವ ಅಪರಾಧದ ನಿಮಿತ್ತವಾಗಿ । **ಸಖಾಯಂ**—ನಿನ್ನ ಮಿತ್ರಭೂತನೂ । **ಸ್ತೋತಾರಂ**—ಸ್ತುತಿಕರ್ತನೂ ಆದ ನನ್ನನ್ನು । **ಜಿಘಾಂಸಸಿ**—ಕೊಲ್ಲಲಿಚ್ಛಿಸುವೆಯೋ । **ಜ್ಯೇಷ್ಠಂ**—ಅತಿ ಪ್ರಬಲವಾದ । **ಕಿಂ ಆಗಃ**—ಆ ಪಾಪವು ಯಾವುದು । **ಆಸ**—ನನ್ನಲ್ಲಿದ್ದಿತು ? । **ದೂಳಭ**—ಇತರರಿಂದ ಎದುರಿಸಲು ಸಾಧ್ಯವಿಲ್ಲದ ಶಕ್ತಿಯುಳ್ಳವನೂ । **ಸ್ವಧಾವಃ**—ತೇಜಸ್ವಿಯೂ ಆದ ಎಲೈ ವರುಣನೇ **ತತ್**—ಆ ಪಾಪದ ಸ್ವರೂಪವನ್ನು । **ಮೇ**—ನನಗೆ । **ಪ್ರ ವೋಚಃ**—ಹೇಳು । **ಅನೇನಾಃ**—ಆ ಪಾಪದಿಂದ ಮುಕ್ತನಾದ ನಾನು । **ತುರಃ**–ಶೀಘ್ರವಾಗಿ । **ನಮಸಾ**—ಹವಿಸ್ಸಿನೊಡಗೂಡಿ । **ತ್ವಾ**—ನಿನ್ನನ್ನು । **ಅವ ಇಯಾಂ**—ಸಮೀಪಿಸುವಂತಾಗಲಿ.

॥ ಭಾವಾರ್ಥ ॥

ಎಲೈ ವರುಣದೇವನೇ, ಯಾವ ಅಪರಾಧದ ನಿಮಿತ್ತವಾಗಿ ನಿನ್ನ ಮಿತ್ರಭೂತನೂ ಸ್ತುತಿಕರ್ತನೂ ಆದ ನನ್ನನ್ನು ಕೊಲ್ಲಲಿಚ್ಛಿಸುವೆಯೋ ಅತಿ ಪ್ರಬಲವಾದ ಆ ಪಾಪವು ಯಾವುದು ನನ್ನಲ್ಲಿದ್ದಿತು ? ಇತರರಿಂದ ಎದುರಿಸಲು ಸಾಧ್ಯವಿಲ್ಲದ ಶಕ್ತಿಯುಳ್ಳವನೂ ತೇಜಸ್ವಿಯೂ ಆದ ಎಲೈ ವರುಣನೇ, ಆ ಪಾಪದ ಸ್ವರೂಪವನ್ನು ನನಗೆ ತಿಳಿಸು. ಆ ಪಾಪದಿಂದ ಮುಕ್ತನಾದ ನಾನು ಹವಿಸ್ಸಿನೊಡಗೂಡಿ ಶೀಘ್ರವಾಗಿ ನಿನ್ನನ್ನು ಸಮೀಪಿಸುವಂತಾಗಲಿ

## English Translation

What has that great wickedness been, Varuna, you should seek to destroy the worshipper, your friend ? insuperable, resplendent Varuna, declare it to me, so that, freed from sin, I may quick approach you with veneration.

॥ ಸಂಹಿತಾಪಾಠಃ ॥

ಅವ ದ್ರುಗ್ಧಾನಿ ಪಿತ್ರ್ಯಾ ಸೃಜಾ ನೋಽವ ಯಾ ವಯಂ ಚಕೃಮಾ ತನೂಭಿಃ ।

ಅವ ರಾಜನ್ಪಶುತೃಪಂ ನ ತಾಯುಂ ಸೃಜಾ ವತ್ಸಂ ನ ದಾಮ್ನೋ ವಸಿಷ್ಠಂ ॥

॥ ಪದಪಾಠಃ ॥

ಅವ । ದ್ರುಗ್ಧಾನಿ । ಪಿತ್ರ್ಯಾ । ಸೃಜ । ನಃ । ಅವ । ಯಾ । ವಯಂ । ಚಕೃಮ । ತನೂಭಿಃ ।
ಅವ । ರಾಜನ್ । ಪಶುಽತೃಪಂ । ನ। ತಾಯುಂ । ಸೃಜ । ವತ್ಸಂ । ನ । ದಾಮ್ನಃ । ವಸಿಷ್ಠಂ॥ ೫ ॥

॥ ಸಾಯಣಭಾಷ್ಯಂ ॥

ಹೇ ವರುಣ ಪಿತ್ರ್ಯಾ ಪಿತೃತಃ ಪ್ರಾಪ್ತಾನಿ ನೋಽಸ್ಮದೀಯಾನಿ ದ್ರುಗ್ಧಾನಿ ದ್ರೋಹಾನ್ಬಂಧನ-ಹೇತುಭೂತಾನವ ಸೃಜ । ವಿಮುಂಚ । ಅಸ್ಮತ್ತೋ ವಿಶ್ಲೇಷಯ । ವಯಂ ಚ ಯಾ ಯಾನಿ ದ್ರೋಹ-ಜಾತಾನಿ ತನೂಭಿಃ ಶರೀರೈಶ್ಚಕೃಮ ಕೃತವಂತಃ ಸ್ಮ ತಾನಿ ಚಾವ ಸೃಜ । ಹೇ ರಾಜನ್ರಾಜಮಾನ ವರುಣ ಪಶುತೃಪಂ ನ ತಾಯುಂ ಸ್ತೈನ್ಯಪ್ರಾಯಶ್ಚಿತ್ತಂ ಕೃತ್ವಾವಸಾನೇ ಘಾಸಾದಿಭಿಃ ಪಶೂನಾಂ ತರ್ಪ-ಯಿತಾರಂ ಸ್ತೇನಮಿವ ದಾಮ್ನೋ ರಜ್ಜ್ವೋರ್ವತ್ಸಂ ನ ವತ್ಸಮಿವ ಚ ವಸಿಷ್ಠಂ ಮಾಂ ಬಂಧಕಾತ್ಪಾಪಾದವ ಸೃಜ । ವಿಮುಂಚ ॥

॥ ಪ್ರತಿಪದಾರ್ಥ ॥

(ಎಲೈ ವರುಣನೇ) ಪಿತ್ರ್ಯಾ—ಹಿಂದಿನಿಂದ ವಂಶಾನುಗತವಾಗಿ ಅಂಟಿಕೊಂಡಿರುವ । ನಃ—ನಮ್ಮ । ದ್ರುಗ್ಧಾನಿ—ಪಾಪಗಳಿಂದ (ಪಾಪಫಲವಾದ ಬಂಧನಗಳಿಂದ) । ಅವ ಸೃಜ—ಬಿಡಿಸು । ವಯಂ—ನಾವೂ ಕೂಡ । ತನೂಭಿಃ—ನಮ್ಮ ಶರೀರಗಳಿಂದಲೇ । ಯಾ—ಯಾವ ಪಾಪಕರ್ಮಗಳನ್ನು । ಚಕೃಮ—ಮಾಡಿರುವೆವೋ । ಅವ—(ಅವುಗಳಿಂದಲೂ) ಬಿಡಿಸು । ರಾಜನ್—ಪ್ರಕಾಶಮಾನನೂ ಪ್ರಭುವೂ ಆದ ವರುಣನೇ । ಪಶುತೃಪಂ—ಚೋರತನಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ನಂತರ ಪಶುಗಳಿಗೆ ತೃಣಾದಿಗಳನ್ನು ಕೊಟ್ಟು ತೃಪ್ತಿಪಡಿಸುವ । ತಾಯುಂ ನ—ಕಳ್ಳನನ್ನು ಬಂಧನದಿಂದ ಬಿಡಿಸುವಂತೆಯೂ । ದಾಮ್ನಃ—ಹಗ್ಗದ ಬಂಧದಿಂದ । ವತ್ಸಂ ನ—ಕರುವನ್ನು ಬಿಡಿಸುವಂತೆಯೂ । ವಸಿಷ್ಠಂ—ವಸಿಷ್ಠನಾಮಕನಾದ ನನ್ನನ್ನು । ಅವ ಸೃಜ—ಬಂಧನದಿಂದ ಬಿಡಿಸು

॥ ಭಾವಾರ್ಥ ॥

ಎಲೈ ವರುಣನೇ; ಹಿಂದಿನಿಂದ ವಂಶಾನುಗತವಾಗಿ ಅಂಟಿಕೊಂಡಿರುವ ನಮ್ಮ ಪಾಪಗಳಿಂದ ಎಂದರೆ ಪಾಪಫಲವಾದ ಬಂಧನಗಳಿಂದ ಬಿಡಿಸು. ನಾವೂ ನಮ್ಮ ಶರೀರಗಳಿಂದಲೇ ಮಾಡಿರುವ ಪಾಪಗಳ ಫಲವಾದ ಬಂಧನದಿಂದಲೂ ಬಿಡಿಸು. ಪ್ರಕಾಶಮಾನನೂ ಪ್ರಭುವೂ ಆದ ಎಲೈ ವರುಣನೇ, ಚೋರತನಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ನಂತರ ಪಶುಗಳಿಗೆ ತೃಣಾದಿಗಳನ್ನು ಕೊಟ್ಟು ತೃಪ್ತಿಪಡಿಸುವ ಕಳ್ಳನನ್ನು ಬಂಧನದಿಂದ ಬಿಡಿಸುವಂತೆಯೂ, ತಾಯಿಯ ಹತ್ತಿರ ಹೋಗಲು ಆತುರವುಳ್ಳ ಕರುವನ್ನು ಹಗ್ಗದ ಬಂಧದಿಂದ ಬಿಡಿಸುವಂತೆಯೂ ವಸಿಷ್ಠನಾಮಕನಾದ ನನ್ನನ್ನು ಬಂಧನದಿಂದ ಬಿಡಿಸು.

## English translation

Relax (the bonds) imposed by the ill deeds of our forefathers, and those incurred (by the sins) which we have committed in our persons.

liberate, royal Varuna, like a calf from its tether, Vasishtha, like a thief nourishing the animal (he has stolen).

॥ ಸಂಹಿತಾಪಾಠಃ ॥

ನ ಸ ಸ್ವೋ ದಕ್ಷೋ ವರುಣ ಧ್ರುತಿಃ ಸಾ ಸುರಾ ಮನ್ಯುರ್ವಿಭೀದಕೋ ಅಚಿತ್ತಿಃ ।
ಅಸ್ತಿ ಜ್ಯಾಯಾನ್ಕನೀಯಸ ಉಪಾರೇ ಸ್ವಪ್ನಶ್ಚನೇದನೃತಸ್ಯ ಪ್ರಯೋತಾ ॥೬॥

॥ ಪದಪಾಠಃ ॥

ನ । ಸಃ । ಸ್ವಃ । ದಕ್ಷಃ । ವರುಣ । ಧ್ರುತಿಃ । ಸಾ । ಸುರಾ । ಮನ್ಯುಃ । ವಿಽಭೀದಕಃ । ಅಚಿತ್ತಿಃ ।
ಅಸ್ತಿ । ಜ್ಯಾಯಾನ್ । ಕನೀಯಸಃ । ಉಪಽಅರೇ । ಸ್ವಪ್ನಃ । ಚನ । ಇತ್ । ಅನೃತಸ್ಯ । ಪ್ರಽಯೋತಾ ॥ ೬ ॥

॥ ಸಾಯಣಭಾಷ್ಯಂ ॥

ಹೇ ವರುಣ ಸ ಸ್ವೋ ದಕ್ಷಃ ಪುರುಷಸ್ಯ ಸ್ವಭೂತಂ ತದ್ಬಲಂ ಪಾಪಪ್ರವೃತ್ತೌ ಕಾರಣಂ ನ ಭವತಿ । ಕಿಂ ತರ್ಹಿ ಧ್ರುತಿಃ ಸ್ಥಿರೋತ್ಪತ್ತಿಸಮಯ ಏವ ನಿರ್ಮಿತಾ ದೈವಗತಿಃ ಕಾರಣಂ ॥ ಧ್ರು ಗತಿಸ್ಥೈರ್ಯಯೋರಿತಿ ಧಾತುಃ ॥ ಸಾ ಚ ಧ್ರುತಿರ್ವಕ್ಷ್ಯಮಾಣರೂಪಾ । ಸುರಾ ಪ್ರಮಾದಕಾರಿಣೀ ಮನ್ಯುಃ ಕ್ರೋಧಶ್ಚ ಗುರ್ವಾದಿವಿಷಯಃ ಸನ್ನನರ್ಥಹೇತುಃ । ವಿಭೀದಕೋ ದ್ಯೂತಸಾಧನೋಽಕ್ಷಃ । ಸ ಚ ದ್ಯೂತೇಷು ಪುರುಷಂ ಪ್ರೇರಯನ್ನನರ್ಥಹೇತುರ್ಭವತಿ । ಅಚಿತ್ತಿರಜ್ಞಾನಮವಿವೇಕಕಾರಣಂ । ಅತ ಈದೃಶೀ ದೈವಕ್ಲೃಪ್ತಿರೇವ ಪುರುಷಸ್ಯ ಪಾಪಪ್ರವೃತ್ತೌ ಕಾರಣಂ। ಅಪಿ ಚ ಕನೀಯಸೋಽಲ್ಪಸ್ಯ ಹೀನಸ್ಯ ಪುರುಷಸ್ಯ ಪಾಪಪ್ರವೃತ್ತಾವುಪಾರ ಉಪಾಗತೇ ಸಮೀಪೇ ನಿಯಂತೃತ್ವೇನ ಸ್ಥಿತೋ ಜ್ಯಾಯಾನಧಿಕ ಈಶ್ವರೋಽಸ್ತಿ । ಸ ಏವ ತಂ ಪಾಪೇ ಪ್ರವರ್ತಯತಿ । ತಥಾ ಚಾಮ್ನಾತಂ । ಏಷ ಹ್ಯೇವಾಸಾಧು ಕರ್ಮ ಕಾರಯತಿ ತಂ ಯಮಧೋ ನಿನೀಷತೇ । ಕೌ. ಉ. ೩-೮ । ಇತಿ ॥ ಏವಂ ಚ ಸತಿ ಸ್ವಪ್ನಶ್ಚನ ಸ್ವಪ್ನೋಽಪ್ಯನೃತಸ್ಯ ಪಾಪಸ್ಯ ಪ್ರಯೋತಾ ಪ್ರಕರ್ಷೇಣ ಮಿಶ್ರಯಿತಾ ಭವತಿ। ಇದಿತಿ ಪೂರಕಃ । ಸ್ವಪ್ನೇ ಕೃತೈರಪಿ ಕರ್ಮಭಿರ್ಬಹೂನಿ ಪಾಪಾನಿ ಜಾಯಂತೇ ಕಿಮು ವಕ್ತವ್ಯಂ ಜಾಗ್ರತಿ ಕೃತೈಃ ಕರ್ಮಭಿಃ ಪಾಪಾನ್ಯುತ್ಪದ್ಯಂತ ಇತಿ । ಅತೋ ಮಮಾಪರಾಧೋ ದೈವಾಗತ ಇತಿ ಹೇ ವರುಣ ತ್ವಯಾ ಕ್ಷಂತವ್ಯ ಇತಿ ಭಾವಃ ॥

॥ ಪ್ರತಿಪದಾರ್ಥ ॥

ವರುಣ—ಎಲೈವರುಣನೇ । ಸಃ—ನಮ್ಮಲ್ಲಿರುವ । ಸ್ವಃ ದಕ್ಷಃ—ಆತ್ಮೀಯವಾದ ಬಲವು । ನ—ನಮ್ಮ ಪಾಪಕ್ಕೆ ಕಾರಣವಲ್ಲ (ಆದರೆ) । ಧ್ರುತಿಃ—ನಮ್ಮ ಮೇಲೆ ಪ್ರಭುತ್ವವನ್ನು ತೋರುವ ವಿಧಿಯೇ ಕಾರಣವು ।

**ಸಾ**—ಅದಾವುದೆಂದರೆ । **ಸುರಾ**—ಮಾಂದ್ಯವನ್ನುಂಟುಮಾಡುವ ಸುರೆಯೂ । **ಮನ್ಯುಃ**—ಕ್ರೋಧವೂ । **ವಿಭೀದಕಃ**—ಅನರ್ಥಕಾರಿಯಾದ ದ್ಯೂತಸಾಧನವೂ (ಪಗಡೆಯೂ)। **ಅಚಿತ್ತಿಃ**—ಅಜ್ಞಾನವೂ ಮತ್ತು ಅವಿವೇಕವೂ ಈ ಪಾಪಕಾರಣಗಳಾಗಿವೆ । **ಕನೀಯಸಃ**—ಅಲ್ಪಶಕ್ತಿಯುಳ್ಳ ನನ್ನ ಪ್ರವೃತ್ತಿಗೆ । **ಉಪಾರೇ**—ಸಮೀಪದಲ್ಲಿಯೇ ಇರತಕ್ಕದ್ದೂ । **ಜ್ಯಾಯಾನ್**—ಅಧಿಕವಾದ ಬಲವುಳ್ಳದ್ದೂ ಆದ ವಿಧಿಯು । **ಅಸ್ತಿ**—ಇರುತ್ತದೆ । **ಸ್ವಪ್ನಶ್ಚನ**—ಸ್ವಪ್ನವೂ ಕೂಡ । **ಅನೃತಸ್ಯ**—ಪಾಪಕ್ಕೆ । **ಪ್ರಯೋತಾ ಇತ್**—ಪ್ರೇರಕವೂ ಕಾರಣವೂ ಆಗಿರುತ್ತದೆ.

॥ ಭಾವಾರ್ಥ ॥

ಎಲೈ ವರುಣನೇ, ನಮ್ಮ ಸ್ವಶಕ್ತಿಯಾಗಲಿ ಅಥವಾ ಸ್ವಬುದ್ಧಿಯಾಗಲೀ ನಮ್ಮ ಪಾಪಕ್ಕೆ ನೇರವಾದ ಕಾರಣವಲ್ಲ. ಆದರೆ ನಮ್ಮ ಮೇಲೆ ಪ್ರಭುತ್ವವನ್ನು ತೋರುವ ವಿಧಿಯೇ ಕಾರಣವು ಅದಾವುದೆಂದರೆ ಬುದ್ಧಿಮಾಂದ್ಯವನ್ನುಂಟುಮಾಡುವ ಸುರೆಯೂ, ಕ್ರೋಧವೂ, ಅನರ್ಥಕಾರಿಯಾದ ದ್ಯೂತಸಾಧನವೂ, ಅಜ್ಞಾನವೂ ಮತ್ತು ಅವಿವೇಕವೂ ಈ ಪಾಪಕಾರಣಗಳಾಗಿವೆ. ಅಲ್ಪಶಕ್ತಿಯುಳ್ಳ ನನ್ನ ಪ್ರವೃತ್ತಿಗೆ ಸಮೀಪದಲ್ಲಿಯೇ ಇರತಕ್ಕದ್ದೂ ಅಧಿಕವಾದ ಬಲವುಳ್ಳದ್ದೂ ಆದ ವಿಧಿಯು ಇರುತ್ತದೆ. ಸ್ವಪ್ನವೂ ಕೂಡ ಪಾಪಕ್ಕೆ ಪ್ರೇರಕವೂ ಕಾರಣವೂ ಆಗಿರುತ್ತದೆ.

## English Translation

It is not our own choice, Varuna, but our condition, (that is the cause of our sinning); It is that which is intoxication, wrath, gambling, ignorance; there is a senior in the proximity of the junior: even a dream is a provocative to sin.

॥ ಸಂಹಿತಾಪಾಠಃ ॥

ಅರಂ ದಾಸೋ ನ ಮೀಳ್ಹುಷೇ ಕರಾಣ್ಯಹಂ ದೇವಾಯ ಭೂರ್ಣ-
ಯೇಽನಾಗಾಃ ।
ಅಚೇತಯದಚಿತೋ ದೇವೋ ಅರ್ಯೋ ಗೃತ್ಸಂ ರಾಯೇ ಕವಿತರೋ
ಜುನಾತಿ ॥ ೭ ॥

॥ ಪದಪಾಠಃ ॥

ಅರಂ । ದಾಸಃ । ನ । ಮೀಳ್ಹುಷೇ । ಕರಾಣಿ । ಅಹಂ । ದೇವಾಯ । ಭೂರ್ಣಯೇ । ಅನಾಗಾಃ ।

ಅಚೇತಯತ್ । ಅಚಿತಃ । ದೇವಃ । ಅರ್ಯಃ । ಗೃತ್ಸಂ । ರಾಯೇ । ಕವಿಽತರಃ । ಜುನಾತಿ ॥ ೭ ॥

॥ ಸಾಯಣಭಾಷ್ಯಂ ॥

ಮೀಳ್ಹುಷೇ ಸೇಕ್ತ್ರೇ ಕಾಮಾನಾಂ ವರ್ಷಿತ್ರೇ ಭೂರ್ಣಯೇ ಜಗತೋ ಭರ್ತ್ರೇ ದೇವಾಯ ದಾನಾದಿಗುಣಯುಕ್ತಾಯ ವರುಣಾಯಾನಾಗಾಸ್ತ್ವತ್ಪ್ರಸಾದಾದಪಾಪಃ ಸನ್ನಹಮರಮಲಂ ಪರ್ಯಾಪ್ತಂ ಕರಾಣಿ । ಪರಿಚರಣಂ ಕರವಾಣಿ । ದಾಸೋ ನ ಯಥಾ ಭೃತ್ಯಃ ಸ್ವಾಮಿನೇ ಸಮ್ಯಕ್ ಪರಿಚರತಿ ತದ್ವತ್ । ಅರ್ಯಃ ಸ್ವಾಮೀ ಸ ಚ ದೇವೋಽಚಿತೋಽಜಾನತೋಽಸ್ಮಾನಚೇತಯತ್ । ಚೇತಯತು । ಪ್ರಜ್ಞಾಪಯತು । ಗೃತ್ಸಂ ಸ್ತೋತಾರಂ ಚ ಕವಿತರಃ ಪ್ರಾಜ್ಞತರೋ ದೇವೋ ರಾಯೇ ಧನಾಯ ಧನಪ್ರಾಪ್ತ್ಯರ್ಥಂ ಜುನಾತಿ । ಜುನಾತು । ಪ್ರೇರಯತು ॥

॥ ಪ್ರತಿಪದಾರ್ಥ ॥

ಮೀಳ್ಹುಷೇ—ಕಾಮವರ್ಷಕನೂ । ಭೂರ್ಣಯೇ—ಜಗತ್ತಿಗೆಲ್ಲಾ ಧಾರಕನಾದ ಭರ್ತೃವೂ । ದೇವಾಯ—ದೇವತಾತ್ಮನೂ ಆದ ವರುಣನಿಗೆ । ಅನಾಗಾಃ—ಪಾಪದಿಂದ ಮುಕ್ತನಾದ । ಅಹಂ—ನಾನು । ಅರಂ—ಪೂರ್ಣವಾಗಿ । ದಾಸೋ ನ—ಸೇವಕನು ಯಜಮಾನನಿಗೆ ಸೇವೆಯನ್ನು ಸಲ್ಲಿಸುವಂತೆ । ಕರಾಣಿ—ಉಪಚಾರವನ್ನರ್ಪಿಸುತ್ತೇನೆ । ಅರ್ಯಃ— ಸ್ವಾಮಿಯೂ । ದೇವಃ—ದೇವತಾತ್ಮನೂ ಆದ ವರುಣನು । ಅಚಿತಃ—ಅಜ್ಞಾನಿಗಳಾದ ನಮ್ಮನ್ನು । ಅಚೇತಯತ್—ಎಚ್ಚರಗೊಳಿಸಲಿ । ಕವಿತರಃ—ಅತ್ಯತಿಶಯವಾಗಿ ಪ್ರಾಜ್ಞನಾದ ದೇವನು । ಗೃತ್ಸಂ—ಸ್ತೋತೃವಾದ ನನ್ನನ್ನು । ರಾಯೇ—ಧನಲಾಭಕ್ಕಾಗಿ । ಜುನಾತಿ—ಪ್ರೇರಿಸಲಿ.

॥ ಭಾವಾರ್ಥ ॥

ಕಾಮವರ್ಷಕನೂ, ಜಗತ್ತಿಗೆಲ್ಲಾ ಧಾರಕನೂ, ಭರ್ತೃವೂ, ದೇವಾತ್ಮನೂ ಆದ ವರುಣನಿಗೆ ಪಾಪದಿಂದ ಮುಕ್ತನಾದ ನಾನು ಸೇವಕನು ಯಜಮಾನನಿಗೆ ಸೇವೆಯನ್ನು ಸಲ್ಲಿಸುವಂತೆ ಪೂರ್ಣವಾದ ಉಪಚಾರವನ್ನರ್ಪಿಸುತ್ತೇನೆ. ಪ್ರಭುವೂ, ದೇವತಾತ್ಮನೂ ಆದ ವರುಣನು ಅಜ್ಞಾನಿಗಳಾದ ನಮಗೆ ಜ್ಞಾನವನ್ನು ಕೊಟ್ಟು, ಎಚ್ಚರಗೊಳಿಸಲಿ. ಅತ್ಯತಿಶಯವಾದ ಪ್ರಜ್ಞೆಯನ್ನು ಹೊಂದಿರುವ ವರುಣದೇವನು ಸ್ತೋತೃವಾದ ನನ್ನನ್ನು ಧನಲಾಭಕ್ಕಾಗಿ ಪ್ರೇರಿಸಲಿ.

## English Translation

Liberated from sin, I may perform diligent service, like a slave, to the divine showerer (of benefits), the sustainer of the world: may he, the divine lord, give intelligence to us who are devoid of understanding: may he who is most wise, guide the worshipper to wealth.

॥ ಸಂಹಿತಾಪಾಠಃ ॥

ಅಯಂ ಸು ತುಭ್ಯಂ ವರುಣ ಸ್ವಧಾವೋ ಹೃದಿ ಸ್ತೋಮ ಉಪಶ್ರಿತಶ್ಚಿ-
ದಸ್ತು ।

ಶಂ ನಃ ಕ್ಷೇಮೇ ಶಮು ಯೋಗೇ ನೋ ಅಸ್ತು ಯೂಯಂ ಪಾತ ಸ್ವಸ್ತಿ-

ಭಿಃ ಸದಾ ನಃ ॥ ೮ ॥

। ಪದಪಾಠಃ ।

ಅಯಂ । ಸು । ತುಭ್ಯಂ । ವರುಣ । ಸ್ವಧಾಽವಃ । ಹೃದಿ । ಸ್ತೋಮಃ । ಉಪಽಶ್ರಿತಃ । ಚಿತ್ । ಅಸ್ತು ।

ಶಂ । ನಃ । ಕ್ಷೇಮೇ । ಶಂ । ಊಂ ಇತಿ । ಯೋಗೇ । ನಃ । ಅಸ್ತು । ಯೂಯಂ । ಪಾತ । ಸ್ವಸ್ತಿಽಭಿಃ ।

ಸದಾ । ನಃ ॥ ೮ ॥

॥ ಸಾಯಣಭಾಷ್ಯಂ ॥

ಏಕಾದಶಿನೇ ವಾರುಣೇ ಪಶಾವಯಮಿತಿ ಪುರೋಡಾಶಸ್ಯಾನುವಾಕ್ಯಾ । ಸೂತ್ರಿತಂ ಚ । ಅಯಂ ಸು ತುಭ್ಯಂ ವರುಣ ಸ್ವಧಾವ ಏವಾ ವಂದಸ್ವ ವರುಣಂ ಬೃಹಂತಂ ॥ ಆ. ೩-೭ । ಇತಿ ॥

ಹೇ ಸ್ವಧಾವೋಽನ್ನವನ್ವರುಣ ತುಭ್ಯಂ ತ್ವದರ್ಥಂ ಕ್ರಿಯಮಾಣೋಽಯಮೇತತ್ಸೂಕ್ತಾತ್ಮಕಂ ಸ್ತೋಮಃ ಸ್ತೋತ್ರಂ ಹೃದಿ ತ್ವದೀಯೇ ಹೃದಯೇ ಸು ಸುಷ್ಠು ಉಪಶ್ರಿತ ಉಪಗತಃ ಸಮವೇತೋಽಸ್ತು । ಚಿದಿತಿ ಪೂರಕಃ । ಅಪ್ರಾಪ್ತಸ್ಯ ಪ್ರಾಪಣಂ ಯೋಗಃ ಪ್ರಾಪ್ತಸ್ಯ ರಕ್ಷಣಂ ಕ್ಷೇಮಃ । ನೋಽಸ್ಮದೀಯೇ ಕ್ಷೇಮೇ ರಕ್ಷಣೇ ಶಮುಪದ್ರವಾಣಾಂ ಶಮನಮಸ್ತು । ಯೋಗೇ ಚ ನೋಽಸ್ಮದೀಯೇ ಪ್ರಾಪಣೇ ಶಮು ಶಮನಮೇವಾಸ್ತೂಪದ್ರವಾಣಾಂ । ಹೇ ವರುಣಾದಯೋ ದೇವಾಃ ನೋಽಸ್ಮಾನ್ಸರ್ವದಾ ಸ್ವಸ್ತಿಭಿರವಿನಾಶೈಃ ಪಾತ । ರಕ್ಷತ ॥

॥ ಪ್ರತಿಪದಾರ್ಥ ॥

**ಸ್ವಧಾವಃ**—ಅನ್ನವಂತನಾದ । **ವರುಣ**—ಎಲೈ ವರುಣದೇವನೇ । **ತುಭ್ಯಂ**—ನಿನ್ನನ್ನುದ್ದೇಶಿಸಿ ನಿರ್ಮಿಸಿರುವ । **ಅಯಂ ಸ್ತೋಮಃ**—ಸೂಕ್ತಾತ್ಮಕವಾದ ಈ ಸ್ತೋತ್ರವು । **ಹೃದಿ**—ನಿನ್ನ ಹೃದಯದೊಳಗೆ । **ಸು**—ಉತ್ತಮವಾದ ರೀತಿಯಲ್ಲಿ । **ಉಪಶ್ರಿತಃ**—ಅಂತರ್ಗತವಾಗಿ । **ಅಸ್ತು ಚಿತ್**—ಸಫಲಗೊಳ್ಳಲಿ । **ನಃ**—ನಮ್ಮ । **ಕ್ಷೇಮೇ**—ರಕ್ಷಣೆಗಾಗಿ । **ಶಂ**—ಉಪದ್ರವಗಳ ಶಮನವು । **ಅಸ್ತು**—ಆಗಲಿ । **ನಃ**—ನಮ್ಮ । **ಯೋಗೇ-ಚ**—ಸುಖದೊಡನೆ ಸಂಬಂಧವೂ । **ಶಮು**—ಮಂಗಳಕರವಾಗಿ ಆಗಲಿ (ಎಲೈ ವರುಣಾದಿ ದೇವತೆಗಳೇ) । **ಯೂಯಂ**—ನೀವೆಲ್ಲರೂ । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**—ಮಂಗಳಗಳಿಂದ । **ಪಾತ**—ರಕ್ಷಿಸಿರಿ

॥ ಭಾವಾರ್ಥ ॥

ಅನ್ನವಂತನಾದ ಎಲೈ ವರುಣದೇವನೇ, ನಿನ್ನನ್ನುದ್ದೇಶಿಸಿ ನಿರ್ಮಿಸಿರುವ ಸೂಕ್ತಾತ್ಮಕವಾದ ಈ ಸ್ತೋತ್ರವು ನಿನ್ನ ಹೃದಯದೊಳಗೆ ಉತ್ತಮವಾದ ರೀತಿಯಲ್ಲಿ ಅಂತರ್ಗತವಾಗಿ ಸಫಲಗೊಳ್ಳಲಿ. ನಮ್ಮ ರಕ್ಷಣಾರ್ಥವಾಗಿ ಉಪದ್ರ

ವಗಳ ನಾಶವಾಗಲಿ. ಸುಖದೊಡನೆ ನಮ್ಮ ಸಂಬಂಧವೂ ಮಂಗಳಕರವಾಗಲಿ. ಎಲೈ ವರುಣಾದಿದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಮಂಗಳಗಳಿಂದ ರಕ್ಷಿಸಿರಿ.

## English Translation

May this laudation, food-conferring Varuna, be taken to your heart: may success be ours in retaining what we have, and in acquiring more: and you, (deities), ever cherish us with blessings.

॥ ವಿಶೇಷವಿಷಯಗಳು ॥

**ಏಕಾದಶಿನ್** ಎಂಬ ಇಷ್ಟಿಯಲ್ಲಿ ವರುಣದೇವತೆಯನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ— ಅಯಂ ಎಂಬ ಈ ಋಕ್ಕನ್ನು ಪುರೋಡಾಶಹೋಮದ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತ್ರ ಸೂತ್ರದ— ಅಯಂ ಸು ತುಭ್ಯಂ ವರುಣ ಸ್ವಧಾವ ಏವಾ ವಂದಸ್ವ ವರುಣಂ ಬೃಹಂತಂ ಎಂಬ ಸೂತ್ರದಿಂದ (ಆ. ೩ ೭) ವಿವೃತವಾಗಿರುವುದು.



## ಎಂಭತ್ತೇಳನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ರದತ್ಪಥ ಇತಿ ಸಪ್ತರ್ಚಂ ಸಪ್ತದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವಾರುಣಂ । ಅನುಕ್ರಾಂತಂ ಚ । ರದತ್ಸಪ್ತೇತಿ ॥ ಗತೋ ವಿನಿಯೋಗಃ ॥**

ಅನುವಾದವು— **ರದತ್ಪಥಃ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹದಿನೇಳನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ವರುಣನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— **ರದತ್ಸಪ್ತ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ— ೮೭

ಮಂಡಲ— ೭ ॥ ಅನುವಾಕ— ೫ ॥ ಸೂಕ್ತ— ೮೭ ॥
ಅಷ್ಟಕ— ೫ ॥ ಅಧ್ಯಾಯ— ೬ ॥ ವರ್ಗ— ೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ— ೭ ॥
ಋಷಿಃ— ವಸಿಷ್ಠಃ ॥
ದೇವತಾ— ವರುಣಃ ॥
ಛಂದಃ— ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ರದತ್ಪಥೋ ವರುಣಃ ಸೂರ್ಯಾಯ ಪ್ರಾರ್ಣಾಂಸಿ ಸಮುದ್ರಿಯಾ ನದೀನಾಂ ।
ಸರ್ಗೋ ನ ಸೃಷ್ಟೋ ಅರ್ವತೀರ್ಋತಾಯನ್ ಚಕಾರ ಮಹೀರವನೀರಹಭ್ಯಃ ॥ ೧ ॥

॥ ಪದಪಾಠಃ ॥

ರದತ್ । ಪಥಃ । ವರುಣಃ । ಸೂರ್ಯಾಯ । ಪ್ರ । ಅರ್ಣಾಂಸಿ । ಸಮುದ್ರಿಯಾ । ನದೀನಾಂ ।
ಸರ್ಗಃ । ನ । ಸೃಷ್ಟಃ । ಅರ್ವತೀಃ । ಋತಽಯನ್ । ಚಕಾರ । ಮಹೀಃ । ಅವನೀಃ । ಅಹಽಭ್ಯಃ ॥ ೧॥

॥ ಸಾಯಣಭಾಷ್ಯಂ ॥

ಅಯಂ ವರುಣೋ ದೇವಃ ಸೂರ್ಯಾಯ ಸರ್ವಸ್ಯ ಪ್ರೇರಕಾಯಾದಿತ್ಯಾಯ ಪಥೋ ಮಾರ್ಗಾನಂತರಿಕ್ಷಪ್ರದೇಶಾನ್ಪ್ರ ರದತ್ । ಪ್ರಾಯಚ್ಛತ್ । ಸಮುದ್ರಿಯಾ ಸಮುದ್ರ ಉದಧೌ ಭವಾನಿ । ಯದ್ವಾ। ಸಮುದ್ದ್ರವಂತ್ಯಸ್ಮಾದಾಪ ಇತಿ ಸಮುದ್ರಮಂತರಿಕ್ಷಂ । ತತ್ರ ಭವಾನಿ । ಅರ್ಣಾಂಸ್ಯುದಕಾನಿ ನದೀನಾಂ ಪ್ರಾಸೃಜತ್ । ಸರ್ಗೋ ನ । ಸೃಜ್ಯತೇ ಯುದ್ಧಭೂಮೌ ಸಾದಿನಾ ಪ್ರೇರ್ಯತ ಇತಿ ಸರ್ಗೋಽಶ್ವಃ । ಸ ಯಥಾರ್ವತೀರ್ವಡವಾಃ ಪ್ರತಿ ಶೀಘ್ರಂ ಗಚ್ಛತಿ ತದ್ವದೃತಾಯನ್ನೃತಂ ಶೀಘ್ರಂ ಗಮನಮಾತ್ಮನ ಇಚ್ಛನ್ಮಹೀರ್ಮಹತೀರವನೀ ರಾತ್ರೀರಹಭ್ಯೋಽಹೋಭ್ಯಃ ಸಕಾಶಾಚ್ಚಕಾರ । ಭೇದೇನ ಕೃತವಾನ್ । ಅಸ್ತಂ ಗಚ್ಛನ್ಸೂರ್ಯ ಏವ ವರುಣ ಇತ್ಯುಚ್ಯತೇ । ಸ ಹಿ ಸ್ವಗಮನೇನ ರಾತ್ರೀರ್ಜನಯತಿ ॥

॥ ಪ್ರತಿಪದಾರ್ಥ ॥

ವರುಣಃ—ವರುಣದೇವನು । ಸೂರ್ಯಾಯ—ಸೂರ್ಯನಿಗೆ । ಪಥಃ—ಅಂತರಿಕ್ಷದಲ್ಲಿ ಸಂಚರಿಸುವ ಮಾರ್ಗಗಳನ್ನು । ಪ್ರ ರದತ್—ಕಲ್ಪಿಸಿಕೊಟ್ಟನು । ಸಮುದ್ರಿಯಾ—ಅಂತರಿಕ್ಷಸ್ಥವಾದ । ಅರ್ಣಾಂಸಿ—ಉದಕಗಳನ್ನು । ನದೀನಾಂ—ನದಿಗಳಿಗೆ ವೇಗವಾಗಿ ಸುರಿದು । ಸರ್ಗೋ ನ—ಯುದ್ಧರಂಗದ ಅಶ್ವಗಳಂತೆ ವೇಗವಾಗಿ । ಸೃಷ್ಟಃ—ಪ್ರವಹಿಸುವಂತೆ ಮಾಡಿದನು । ಅರ್ವತೀಃ—ವೇಗಗಾಮಿಯಾದ ಅಶ್ವದಂತೆ । ಋತಾಯನ್—ತನ್ನ ಕರ್ಮಾಚರಣೆಯಲ್ಲಿ ನಿರತನಾಗಿ । ಮಹೀಃ—ಮಹತ್ತಾದ । ಅವನೀಃ—ರಾತ್ರಿಗಳನ್ನು । ಅಹಭ್ಯಃ—ಅಹಸ್ಸುಗಳಿಂದ । ಚಕಾರ—ಬೇರೆ ಮಾಡಿದನು.

॥ ಭಾವಾರ್ಥ ॥

ವರುಣದೇವನು ಸೂರ್ಯನಿಗೆ ಅಂತರಿಕ್ಷದಲ್ಲಿ ಸಂಚರಿಸುವ ಮಾರ್ಗಗಳನ್ನು ಕಲ್ಪಿಸಿಕೊಟ್ಟನು. ಅಂತರಿಕ್ಷಸ್ಥವಾದ ಉದಕಗಳನ್ನು ನದಿಗಳಿಗೆ ಸುರಿದು ಅವು ಯುದ್ಧರಂಗದ ಅಶ್ವಗಳಂತೆ ವೇಗವಾಗಿ ಪ್ರವಹಿಸುವಂತೆ ಮಾಡಿದನು. ವೇಗಗಾಮಿಯಾದ ಅಶ್ವದಂತೆ ತನ್ನ ಕರ್ಮಾಚರಣೆಯಲ್ಲಿ ನಿರತನಾಗಿ ಮಹತ್ತಾದ ರಾತ್ರಿಗಳನ್ನು ಅಹಸ್ಸುಗಳಿಂದ ಬೇರೆಮಾಡಿದನು.

## English Translation

Varuna prepared a path for the sun: he set free the waters of the rivers generated in the firmement: hastaning (to his task), as a horse let loose rushes to (a flock of) mares, he divided the great nights from the days.

॥ ಸಂಹಿತಾಪಾಠಃ ॥

ಆತ್ಮಾ ತೇ ವಾತೋ ರಜ ಆ ನವೀನೋತ್ಪಶುರ್ನ ಭೂರ್ಣಿರ್ಯವಸೇ
ಸಸವಾನ್ ।
ಅಂತರ್ಮಹೀ ಬೃಹತೀ ರೋದಸೀಮೇ ವಿಶ್ವಾ ತೇ ಧಾಮ ವರುಣ
ಪ್ರಿಯಾಣಿ ॥ ೨ ॥

॥ ಪದಪಾಠಃ ॥

ಆತ್ಮಾ । ತೇ । ವಾತಃ । ರಜಃ । ಆ । ನವೀನೋತ್ । ಪಶುಃ । ನ । ಭೂರ್ಣಿಃ । ಯವಸೇ । ಸಸ್ಯವಾನ್ ।
ಅಂತಃ । ಮಹೀ ಇತಿ । ಬೃಹತೀ ಇತಿ । ರೋದಸೀ ಇತಿ । ಇಮೇ ಇತಿ । ವಿಶ್ವಾ । ತೇ । ಧಾಮ ।
ವರುಣ । ಪ್ರಿಯಾಣಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ವರುಣ ತೇ ತ್ವದೀಯಸ್ತ್ವಯಾಂತರಿಕ್ಷೇ ಪ್ರೇರ್ಯಮಾಣೋ ವಾತೋ ವಾಯುರಾತ್ಮಾ ಸರ್ವಸ್ಯ ಪ್ರಾಣಿಜಾತಸ್ಯ ಪ್ರಾಣರೂಪೇಣ ಧಾರಯಿತಾ । ಸ ಚ ರಜ ಉದಕಮಾ ನವೀನೋತ್ । ಸಮಂತಾತ್ಪ್ರೇರಯತಿ । ವಾತೇನ ಹಿ ವೃಷ್ಟಿರ್ಜಾಯತೇ । ಭೂರ್ಣಿರ್ಜಗತೋ ಭರ್ತಾ ಸ ವಾಯುರ್ಯವಸೇ ಘಾಸೇ ಪ್ರಕ್ಷಿಪ್ತೇ ಸತಿ ಯಥಾ ಪಶುರನ್ನವಾನ್ಭವತಿ ತದ್ವತ್ಸಸವಾನ್ । ಸಸಮಿತ್ಯನ್ನನಾಮ । ತದ್ವಾನ್ಭವತಿ । ಹವಿರ್ಲಕ್ಷಣಮನ್ನಮಪಿ ತಸ್ಮೈ ಪ್ರಯಚ್ಛಂತೀತ್ಯರ್ಥಃ । ಯದ್ವಾ ॥ ಸನೋತೇಃ ಕ್ವಸೌ

ರೂಪಂ ॥ ತತಃ ಸಸವಾನ್ ಸಂಭಕ್ತವಾನ್ಯತೋ ಘಾಸೇ ಸತಿ ಪಶುರ್ಯಥಾ ಭಾರವಾಹೀ ಭವತಿ ತದ್ವಜ್ಜಗತೋ ಭರ್ತಾ । ಹೇ ವರುಣ ಮಹೀ ಮಹತ್ಯೌ ಬೃಹತೀ ಪರಿವೃಢೇ ಇಮೇ ರೋದಸೀ ದ್ಯಾವಾಪೃಥಿವ್ಯಾವಂತರ್ಮಧ್ಯೇ । ದ್ಯಾವಾಪೃಥಿವ್ಯೋರ್ಮಧ್ಯ ಇತ್ಯರ್ಥಃ । ತೇ ತವ ವಿಶ್ವಾ ಸರ್ವಾಣಿ ಧಾಮ ಧಾಮಾನಿ ಸ್ಥಾನಾನಿ ತೇಜಾಂಸಿ ವಾ ಪ್ರಿಯಾಣಿ ಸರ್ವೇಷಾಂ ಪ್ರೀತಿಕರಾಣಿ ಭವಂತಿ ॥

। ಪ್ರತಿಪದಾರ್ಥ ॥

(ಎಲೈ ವರುಣನೇ) **ತೇ**—ನಿನ್ನಿಂದ ಪ್ರೇರಿತನಾದ । **ವಾತಃ**—ವಾಯುವು । **ಆತ್ಮಾ**—ಸಕಲ ಜಗತ್ತಿಗೂ ಪ್ರಾಣರೂಪನಾಗಿದ್ದಾನೆ (ಅದೇ ವಾಯುವು) । **ರಜಃ**—ವೃಷ್ಟ್ಯುದಕವನ್ನು । **ಆ ನವೀನೋತ್**—ಸುತ್ತಲೂ ಸುರಿಸುತ್ತಾನೆ । **ಯವಸೇ ಪಶುಃ ನ**—ಹುಲ್ಲನ್ನು ಹಾಕಿದೊಡನೆಯೇ ಪಶುವು ಭಾರವನ್ನು ವಹಿಸಲು ಶಕ್ತವಾಗುವಂತೆ । **ಭೂರ್ಣಿಃ**–ಹವಿಸ್ಸನ್ನು ಸ್ವೀಕರಿಸಿದ ವಾಯುವು ಜಗತ್ತನ್ನು ಧರಿಸಲು । **ಸಸವಾನ್**–ಸರ್ವಶಕ್ತನಾಗುತ್ತಾನೆ । **ವರುಣ**—ಎಲೈ ವರುಣದೇವನೇ । **ಮಹೀ**—ಮಹತ್ತಾದುದೂ । **ಬೃಹತೀ**—ಅತಿ ಪ್ರವೃದ್ಧವಾದುದೂ ಆದ । **ಇಮೇ ರೋದಸೀ**—ಈ ದ್ಯಾವಾಪೃಥಿವಿಗಳ । **ಅಂತಃ**—ಮಧ್ಯಭಾಗದಲ್ಲೆಲ್ಲಾ । **ತೇ**—ನಿನ್ನ । **ವಿಶ್ವಾ**—ಸಮಸ್ತವಾದ । **ಧಾಮ**—ತೇಜಸ್ಸುಗಳೂ ಸಹ । **ಪ್ರಿಯಾಣಿ**—ಸಕಲರಿಗೂ ಪ್ರೀತಿಕಾರಕಗಳಾಗುತ್ತವೆ.

। ಭಾವಾರ್ಥ ॥

ಎಲೈ ವರುಣನೇ, ನಿನ್ನಿಂದ ಪ್ರೇರಿತನಾದ ವಾಯುವು ಸಲಕ ಜಗತ್ತಿಗೂ ಪ್ರಾಣರೂಪನಾಗಿದ್ದಾನೆ. ಅದೇ ವಾಯುವು ವೃಷ್ಟ್ಯುದಕವನ್ನು ಸುತ್ತಲೂ ಸುರಿಸುತ್ತಾನೆ. ಹುಲ್ಲನ್ನು ಹಾಕಿದೊಡನೆಯೇ ಪಶುವು ಭಾರವನ್ನು ವಹಿಸಲು ಶಕ್ತವಾಗುವಂತೆ ಹವಿಸ್ಸನ್ನು ಸ್ವೀಕರಿಸಿದ ವಾಯುವು ಜಗತ್ತನ್ನು ಧರಿಸಲು ಸರ್ವಶಕ್ತನಾಗುತ್ತಾನೆ. ಎಲೈ ವರುಣದೇವನೇ, ಮಹತ್ತಾದುದೂ, ಅತಿ ಪ್ರವೃದ್ಧವಾದುದೂ ಆದ ಈ ದ್ಯಾವಾಪೃಥಿವಿಗಳ ಮಧ್ಯಭಾಗದಲ್ಲೆಲ್ಲಾ ನಿನ್ನ ಸಮಸ್ತವಾದ ತೇಜಸ್ಸುಗಳೂ ಸಹ ಸಕಲರಿಗೂ ಪ್ರೀತಿಕಾರಕಗಳಾಗುತ್ತವೆ

## English Translation

Your spirit is the wind: he sends abroad the waters: he, the cherisher of the world, is the feeder on (sacrificial) food, like an animal upon fodder: all your glories, Varuna, manifested between the vast and spacious heaven and earth, give delight (to all).

। ಸಂಹಿತಾಪಾಠಃ ।

ಪರಿ ಸ್ಪಶೋ ವರುಣಸ್ಯ ಸ್ಮದಿಷ್ಟಾ ಉಭೇ ಪಶ್ಯಂತಿ ರೋದಸೀ ಸುಮೇಕೇ ।
ಋತಾವಾನಃ ಕವಯೋ ಯಜ್ಞಧೀರಾಃ ಪ್ರಚೇತಸೋ ಯ ಇಷಯಂತ
ಮನ್ಮ ॥ ೩ ॥

॥ ಪದಪಾಠಃ ॥

ಪರಿ । ಸ್ಪಶಃ । ವರುಣಸ್ಯ । ಸ್ಮತ್ಽಇಷ್ಟಾಃ । ಉಭೇ ಇತಿ । ಪಶ್ಯಂತಿ । ರೋದಸೀ ಇತಿ । ಸುಮೇಕೇ ಇತಿ ಸುಽಮೇಕೇ ।

ಋತಽವಾನಃ । ಕವಯಃ । ಯಜ್ಞಽಧೀರಾಃ । ಪ್ರಽಚೇತಸಃ । ಯೇ । ಇಷಯಂತ । ಮನ್ಮ ॥ ೩ ॥

॥ ಸಾಯಣಭಾಷ್ಯಂ ॥

ಸ್ಪಶಂತಿ ಸ್ಪೃಶಂತೀತಿ ಸ್ಪಶಶ್ಚರಾಃ । ವರುಣಸ್ಯ ದೇವಸ್ಯ ಸ್ಪಶಶ್ಚರಾಃ ಸ್ಮದಿಷ್ಟಾಃ । ಸ್ಮದಿತ್ಯೇತತ್ ಪ್ರಶಸ್ಯಾರ್ಥೇ ಸಹಾರ್ಥೇ ಚ ವರ್ತತೇ। ಪ್ರಶಸ್ತಗತಯಃ। ಯದ್ವಾ। ಸಹ ಪ್ರೇಷಿತಾಃ ಸಂತಃ। ಸುಮೇಕೇ ಶೋಭನಮೇಹನೇ ಸುರೂಪೇ ಉಭೇ ರೋದಸೀ ದ್ಯಾವಾಪೃಥಿವ್ಯೌ ಪರಿ ಪಶ್ಯಂತಿ । ಪರಿತ ಈಕ್ಷಂತೇ । ಉಭಯೋರ್ಲೋಕಯೋರ್ವರ್ತಮಾನಾನ್ಪುಣ್ಯಾಪುಣ್ಯಕಾರಿಣೋ ಜನಾನ್ಪಶ್ಯಂತೀತ್ಯರ್ಥಃ । ಯಸ್ಮಾ-ದೇವಂ ತಸ್ಮಾತ್ತದ್ಭೀತಾ ಋತಾವಾನಃ ಕರ್ಮವಂತೋ ಯಜ್ಞಧೀರಾ ಯಜ್ಞೇಷು ಕೃತಬುದ್ಧಯಃ ಪ್ರಚೇತಸಃ ಪ್ರಾಜ್ಞಾಃ ಕವಯಃ ಕ್ರಾಂತದರ್ಶಿನೋ ಯೇ ಜನಾ ಮನ್ಮ ಮನ್ಯಾನಿ ಸ್ತೋತ್ರಾಣೀಷಯಂತ ಗಮಯಂತಿ ವರುಣಂ ಪ್ರಾಪಯಂತಿ । ತಾನಪಿ ಪರಿ ಪಶ್ಯಂತೀತ್ಯರ್ಥಃ । ಅತೋಽಸ್ಮಾನಪಿ ಸ್ತೋತ್ರ್ನ್-ಜ್ಞಾತ್ವಾ ಪಾಪಾನ್ಮುಂಚಂತ್ವಿತ್ಯಭಿಪ್ರಾಯಃ ॥

॥ ಪ್ರತಿಪದಾರ್ಥ ॥

**ವರುಣಸ್ಯ**— ವರುಣದೇವನ । **ಸ್ಪಶಃ**—ಚಾರರು । **ಸ್ಮದಿಷ್ಟಾಃ**—ಉತ್ತಮವಾದ ಗತಿಗಳುಳ್ಳವರಾಗಿ । **ಸುಮೇಕೇ**-ಶ್ರೇಷ್ಠವಾದ ರೂಪವುಳ್ಳ । **ಉಭೇ ರೋದಸೀ ಪರಿ** । ದ್ಯಾವಾಪೃಥಿವಿಗಳೆಂಬ ಎರಡು ಲೋಕಗಳ ಸುತ್ತಲೂ । **ಪಶ್ಯಂತಿ**—ಸೂಕ್ಷ್ಮವಾಗಿ ವೀಕ್ಷಿಸುತ್ತಾರೆ ( ಅದರಂತೆಯೇ ) । **ಋತಾವಾನಃ**—ಕರ್ಮವಂತರೂ । **ಯಜ್ಞಧೀರಾಃ**-ಯಜ್ಞದಲ್ಲಿ ನಿರತವಾದ ಬುದ್ಧಿಯುಳ್ಳವರೂ। **ಪ್ರಚೇತಸಃ**-ಪ್ರಾಜ್ಞರೂ । **ಕವಯಃ**-ಕ್ರಾಂತದರ್ಶಿಗಳೂ ಆದ । **ಯೇ**—ಯಾವ ಸ್ತುತಿಕರ್ತರಿದ್ದಾರೆಯೋ ಅವರೂ ಸಹ। **ಮನ್ಮ**—ತಮ್ಮ ಸ್ತುತಿಕರ್ಮಗಳನ್ನೂ । **ಇಷಯಂತ**-(ವರುಣನಿಗೆ)ಒಪ್ಪಿಸುತ್ತಾರೆ.

॥ ಭಾವಾರ್ಥ ॥

ವರುಣದೇವನ ಚಾರರು ಉತ್ತಮವಾದ ಗತಿಗಳುಳ್ಳವರಾಗಿ ಶ್ರೇಷ್ಠವಾದ ರೂಪವುಳ್ಳ ದ್ಯಾವಾಪೃಥಿವಿಗಳೆರಡು ಲೋಕಗಳ ಸುತ್ತಲೂ ಸೂಕ್ಷ್ಮವಾಗಿ ವೀಕ್ಷಿಸುತ್ತಾರೆ. ಅದರಂತೆಯೇ ಕರ್ಮವಂತರೂ, ಯಜ್ಞದಲ್ಲಿ ನಿರತವಾದ ಬುದ್ಧಿಯುಳ್ಳವರೂ, ಪ್ರಾಜ್ಞರೂ, ಕ್ರಾಂತದರ್ಶಿಗಳೂ ಆದ ಯಾವ ಸ್ತುತಿಕರ್ತರಿದ್ದಾರೆಯೋ ಅವರು ತಮ್ಮ ಸ್ತುತಿ ಕರ್ಮಗಳನ್ನೂ ಸಹ ವರುಣನಿಗೆ ಒಪ್ಪಿಸುತ್ತಾರೆ.

## English Translation

The excellent spies of Varuna behold the beautiful heaven and earth, as well as those (men) who, the celebrators of rites, constant in sacrifice, wise and intelligent, address (to him their) praise.

॥ ಸಂಹಿತಾಪಾಠಃ ॥

ಉವಾಚ ಮೇ ವರುಣೋ ಮೇಧಿರಾಯ ತ್ರಿಃ ಸಪ್ತ ನಾಮಾಘ್ನ್ಯಾ ಬಿಭರ್ತಿ ।

ವಿದ್ವಾನ್ಪದಸ್ಯ ಗುಹ್ಯಾ ನ ವೋಚದ್ಯುಗಾಯ ವಿಪ್ರ ಉಪರಾಯ ಶಿಕ್ಷನ್ ॥

॥ ಪದಪಾಠಃ ॥

ಉವಾಚ । ಮೇ । ವರುಣಃ । ಮೇಧಿರಾಯ । ತ್ರಿಃ । ಸಪ್ತ । ನಾಮ । ಅಘ್ನ್ಯಾ । ಬಿಭರ್ತಿ ।

ವಿದ್ವಾನ್ । ಪದಸ್ಯ । ಗುಹ್ಯಾ । ನ । ವೋಚತ್ । ಯುಗಾಯ । ವಿಪ್ರಃ । ಉಪರಾಯ । ಶಿಕ್ಷನ್ । ೪ ॥

॥ ಸಾಯಣಭಾಷ್ಯಂ ॥

ಮೇಧಿರಾಯ ಮೇಧಾವಿನೇ ಮೇ ಮಹ್ಯಂ ವರುಣ ಉವಾಚ । ಉಕ್ತವಾನ್ । ಕಿಮುಕ್ತವಾನ್ ತದಾಹ । ತ್ರಿಃ ಸಪ್ತೈಕವಿಂಶತಿಸಂಖ್ಯಾಕಾನಿ ನಾಮಾನ್ಯಘ್ನ್ಯಾ ಗೌರ್ಬಿಭರ್ತಿ । ಧಾರಯತೀತಿ । ವಾಗತ್ರ ಗೌರುಚ್ಯತೇ । ಸಾ ಚೋರಸಿ ಕಂಠೇ ಶಿರಸಿ ಚ ಬದ್ಧಾನಿ ಗಾಯತ್ರ್ಯಾದೀನಿ ಸಪ್ತ ಚ್ಛಂದಸಾಂ ನಾಮಾನಿ ಬಿಭರ್ತಿ । ಯದ್ವಾ । ವೇದಾತ್ಮಿಕಾ ವಾಗೇಕವಿಂಶತಿಸಂಸ್ಥಾನಾಂ ಯಜ್ಞಾನಾಂ ನಾಮಾನಿ ಬಿಭರ್ತಿ । ಧಾರಯತಿ । ಅಪರ ಆಹ । ಗೌಃ ಪೃಥಿವೀ । ತಸ್ಯಾಶ್ಚ ಗೌರ್ಗ್ಮಾ ಜ್ಮೇತಿ ಪಠಿತಾನ್ಯೇಕವಿಂಶತಿ ನಾಮಾನೀತಿ । ಅಪಿ ಚ ವಿದ್ವಾಞ್ಜ್ಞಾನನ್ವಿಪ್ರೋ ಮೇಧಾವೀ ಸ ವರುಣೋ ಯುಗಾಯ ಯುಕ್ತಾಯೋಪರಾಯೋಪ ಸಮೀಪೇ ರಮಮಾಣಾಯಾಂತೇವಾಸಿನೇ ಮಹ್ಯಂ ಶಿಕ್ಷನ್ನುಪದಿಶನ್ಪದಸ್ಯೋತ್ಕೃಷ್ಟಸ್ಯ ಸ್ಥಾನಸ್ಯ ಬ್ರಹ್ಮಲೋಕಲಕ್ಷಣಸ್ಯ ಸಂಬಂಧೀನಿ ಗುಹ್ಯಾ ಗುಹ್ಯಾನಿ ರಹಸ್ಯಾನ್ಯುಪದೇಶೇ ಗಮ್ಯಾನಿ। ನಶಬ್ದಶ್ಚಾರ್ಥೇ। ಇಮಾನಿ ಚ ವೋಚತ್ । ಉಕ್ತವಾನ್ । ಅತೋಽಹಂ ವರುಣಸ್ಯ ಶಿಷ್ಯೋಽಸ್ಮಿ । ತಸ್ಮಾತ್ಸ ವರುಣೋಽಸ್ಮಾನ್ಪಾಪಾನ್ಮೋಚಯತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಘ್ನ್ಯಾ**—ವಾಗಾತ್ಮಕವಾದ ತತ್ತ್ವವು । **ತ್ರಿಃ ಸಪ್ತ ನಾಮ**—ಇಪ್ಪತ್ತೊಂದು ಪ್ರಭೇದಗಳನ್ನು । **ಬಿಭರ್ತಿ**—ಧರಿಸಿರುತ್ತದೆಯೆಂದು । **ವರುಣಃ**—ವರುಣದೇವನು । **ಮೇಧಿರಾಯ**—ಮೇಧಾವಂತನಾದ । **ಮೇ**—

ನನಗೆ | ಉವಾಚ—ಉಪದೇಶಿಸಿದನು | ವಿದ್ವಾನ್—ಸರ್ವಜ್ಞನೂ | ವಿಪ್ರಃ—ಮೇಧಾವಿಯೂ ಆದ ವರುಣನು | ಯುಗಾಯ—ಯೋಗಶಕ್ತನೂ | ಉಪರಾಯ—ಅವನ ಹತ್ತಿರವೇ ಶಿಷ್ಯವೃತ್ತಿಯನ್ನು ಮಾಡುವವನೂ ಆದ ನನಗೆ | ಶಿಕ್ಷನ್—ಉಪದೇಶಿಸುತ್ತಾ | ಪದಸ್ಯ—ಉತ್ಕೃಷ್ಟವಾದ ಬ್ರಹ್ಮಲೋಕದ | ಗುಹ್ಯಾ ನ—ರಹಸ್ಯಗಳನ್ನೂ ಕೂಡ | ವೋಚತ್—ವಿವರಿಸಿ ತಿಳಿಸಿದನು.

॥ ಭಾವಾರ್ಥ ॥

ಉರಸ್ಸು, ಕಂಠ ಮತ್ತು ಶಿರಸ್ಸು ಈ ಮೂರು ಸ್ಥಾನಗಳಲ್ಲೂ ಸಹ ಗಾಯತ್ರ್ಯಾದಿ ಸಪ್ತ ಛಂದಸ್ಸುಗಳೆಂಬ ಇಪ್ಪತ್ತೊಂದು ಪ್ರಭೇದಗಳನ್ನು ವಾಗಾತ್ಮಕವಾದ ತತ್ತ್ವವು ಧರಿಸಿರುತ್ತದೆಯೆಂದು ವರುಣದೇವನು ಮೇಧಾವಂತನಾದ ನನಗೆ ಉಪದೇಶಿಸಿದನು. ಸರ್ವಜ್ಞನೂ, ಮೇಧಾವಿಯೂ ಆದ ವರುಣನು ಯೋಗಯುಕ್ತನೂ ಅವನ ಹತ್ತಿರವೇ ಶಿಷ್ಯವೃತ್ತಿಯನ್ನು ಮಾಡುವವನೂ ಅರ್ಹನೂ ಆದ ನನಗೆ ಉಪದೇಶಿಸುತ್ತಾ ಉತ್ಕೃಷ್ಟವಾದ ಬ್ರಹ್ಮಲೋಕದ ರಹಸ್ಯಗಳನ್ನೂ ಸಹ ವಿವರಿಸಿ ತಿಳಿಸಿದನು.

## English Translation

Varuna thus spoke to me, possessed of understanding: the cow (speech) has thrice seven appellations: the wise and intelligent Varuna, giving instruction to me, his worthy disciple, has declared the mysteries of the place (of Brahma).

॥ ಸಂಹಿತಾಪಾಠಃ ॥

ತಿಸ್ರೋ ದ್ಯಾವೋ ನಿಹಿತಾ ಅಂತರಸ್ಮಿನ್ತಿಸ್ರೋ ಭೂಮೀರುಪರಾಃ ಷಡ್ವಿಧಾನಾಃ ।
ಗೃತ್ಸೋ ರಾಜಾ ವರುಣಶ್ಚಕ್ರ ಏತಂ ದಿವಿ ಪ್ರೇಂಖಂ ಹಿರಣ್ಯಯಂ ಶುಭೇ ಕಂ ॥ ೫ ॥

॥ ಪದಪಾಠಃ ॥

ತಿಸ್ರಃ | ದ್ಯಾವಃ | ನಿऽಹಿತಾಃ | ಅಂತಃ | ಅಸ್ಮಿನ್ | ತಿಸ್ರಃ | ಭೂಮೀಃ | ಉಪರಾಃ | ಷಟ್ऽವಿಧಾನಾಃ |
ಗೃತ್ಸಃ | ರಾಜಾ | ವರುಣಃ | ಚಕ್ರೇ | ಏತಂ | ದಿವಿ | ಪ್ರऽಈಂಖಂ | ಹಿರಣ್ಯಯಂ | ಶುಭೇ | ಕಂ ॥

॥ ಸಾಯಣಭಾಷ್ಯಂ ॥

ತಿಸ್ರಸ್ತ್ರಿಪ್ರಕಾರಾ ಉತ್ತಮಮಧ್ಯಮಾಧಮಭಾವೇನ ತ್ರಿವಿಧಾ ದ್ಯಾವೋ ದ್ಯುಲೋಕಾ ಅಸ್ಮಿನ್ವರುಣೇऽಂತರ್ಮಧ್ಯೇ ನಿಹಿತಾಃ | ತಿಸ್ರಃ ಪೂರ್ವವತ್ತ್ರಿವಿಧಾ ಭೂಮೀರ್ಭೂಮ್ಯಶ್ಚ ಷಡ್ವಿಧಾನಾಃ | ವಿಧಾನಂ

ವಿಧಾ । ವಸಂತಾದ್ಯೃತುಭೇದೇನ ಷಡ್ವಿಧಾಃ ಪ್ರಕಾರಾ ಯಾಸು ತಾದೃಶ್ಯಃ । ಉಪರಾ ಅಸ್ಮಿನ್ನೇವ ವರುಣ ಉಪ್ತಾ ಅಂತರ್ಭೂತಾಃ । ಲೋಕಾನಾಂ ತ್ರಿತ್ವಂ ಚ ತ್ರಯೋ ವಾ ಇಮೇ ತ್ರಿವೃತೋ ಲೋಕಾ ಇತ್ಯಾ-ದಿನಾ ಬ್ರಾಹ್ಮಣೇನಾನಗನ್ಯತೇ । ತಿಸ್ರೋ ಭೂಮೀರ್ಧಾರಯನ್ । ಋ ೨-೨೭-೮ । ಇತಿ ನಿಗಮಶ್ಚ ಭವತಿ । ಇಮೌ ಲೋಕಾವಾವೃತ್ಯ ವರುಣಸ್ತಿಷ್ಠತೀತ್ಯರ್ಥಃ । ಅಪಿ ಚ ಗೃತ್ಸಃ ಸ್ತುತ್ಯೋ ರಾಜೇಶ್ವರಃ ಸ ವರುಣೋ ದಿವ್ಯಂತರಿಕ್ಷೇ ಹಿರಣ್ಯಯಂ ಹಿರಣ್ಮಯಂ ಸುವರ್ಣಮಯಂ ಹಿತರಮಣೀಯಂ ವಾ ಪ್ರೇಂಖಂ ದೋಲಾವದ್ದಿಗ್ದ್ವಯಸಂಸ್ಪರ್ಶಿನಮೇತಂ ಸೂರ್ಯಂ ಶುಭೇ ಕಂ ದೀಪ್ತ್ಯರ್ಥಂ ಚಕ್ರೇ । ಕೃತವಾನ್ । ದಿವಿ ಸೂರ್ಯಮದಧಾತ್ಸೋಮಮದ್ರೌ । ಋ. ೫-೮೫-೨ । ಇತಿ ಹಿ ಶ್ರೂಯತೇ ॥

॥ ಪ್ರತಿಪದಾರ್ಥ ॥

ತಿಸ್ರಃ—ಉತ್ತಮ, ಮಧ್ಯಮ ಮತ್ತು ಅಧಮಗಳೆಂಬ ಮೂರು ಪ್ರಕಾರಗಳುಳ್ಳ । ದ್ಯಾವಃ—ದ್ಯುಲೋಕಗಳು । ಅಸ್ಮಿನ್—ಇದೇ ವರುಣನ । ಅಂತಃ—ಅಂತಃಪ್ರದೇಶದಲ್ಲಿ । ನಿಹಿತಾಃ—ಸ್ಥಾಪಿತವಾಗಿವೆ । ತಿಸ್ರಃ—ಇದೇ ವಿಧವಾದ ಮೂರು ಪ್ರಭೇದಗಳುಳ್ಳ । ಭೂಮೀಃ—ಪೃಥ್ವಿಗಳೂ ಸಹ । ಷಡ್ವಿಧಾನಾಃ—ವಸಂತಾದಿ ಷಡೃತುಗಳೊಂದಿಗೆ । ಉಪರಾಃ—ಈ ವರುಣನಲ್ಲೇ ಅಂತರ್ಗತವಾಗಿವೆ । ಗೃತ್ಸಃ—ಸ್ತುತ್ಯನೂ । ರಾಜಾ—ಈಶ್ವರನೂ ಆದ । ವರುಣಃ—ವರುಣದೇವನು । ಹಿರಣ್ಯಯಂ—ಸುವರ್ಣಮಯನೂ । ಪ್ರೇಂಖಂ—ಉಯ್ಯಾಲೆಯಂತೆ ಎರಡು ದಿಕ್ಕುಗಳಿಗೂ ಆಂದೋಲನಮಾಡುವವನೂ ಆದ । ಏತಂ—ಈ ಸೂರ್ಯನನ್ನು । ಶುಭೇ ಕಂ—ಪ್ರಕಾಶವನ್ನು ಹರಡುವುದಕ್ಕಾಗಿ । ದಿವಿ—ಅಂತರಿಕ್ಷದಲ್ಲಿ । ಚಕ್ರೇ—ಸ್ಥಾಪಿಸಿದ್ದಾನೆ.

॥ ಭಾವಾರ್ಥ ॥

ಉತ್ತಮ, ಮಧ್ಯಮ ಮತ್ತು ಅಧಮಗಳೆಂಬ ಮೂರು ಪ್ರಕಾರಗಳುಳ್ಳ ದ್ಯುಲೋಕಗಳು ಇದೇ ವರುಣನ ಅಂತಃಪ್ರದೇಶದಲ್ಲಿ ಸ್ಥಾಪಿತವಾಗಿವೆ. ಇದೇ ವಿಧವಾಗಿ ಮೂರು ಪ್ರಭೇದಗಳುಳ್ಳ ಪೃಥ್ವಿಗಳೂ ಸಹ ವಸಂತಾದಿ ಷಡೃತುಗಳೊಂದಿಗೆ ಈ ವರುಣನಲ್ಲೇ ಅಂತರ್ಗತವಾಗಿವೆ. ಸ್ತುತ್ಯನೂ, ಈಶ್ವರನೂ ಆದ ವರುಣದೇವನು ಸುವರ್ಣಮಯನೂ ಉಯ್ಯಾಲೆಯಂತೆ ಎರಡು ದಿಕ್ಕುಗಳಿಗೂ ಆಂದೋಲನಮಾಡುವವನೂ ಆದ ಈ ಸೂರ್ಯನನ್ನು ಪ್ರಕಾಶವನ್ನು ಹರಡುವುದಕ್ಕಾಗಿ ಅಂತರಿಕ್ಷದಲ್ಲಿ ಸ್ಥಾಪಿಸಿದ್ದಾನೆ.

## English Translation

In him are deposited the three heavens, the three earths with their six seasons are sown in him: the most adorable, royal Varuna has made this golden sun undulating in the sky, he has made it to diffuse light.

॥ ಸಂಹಿತಾಪಾಠಃ ॥

ಅವ ಸಿಂಧುಂ ವರುಣೋ ದ್ಯೌರಿವ ಸ್ಥಾದ್ದ್ರಪ್ಸೋ ನ ಶ್ವೇತೋ ಮೃಗಸ್ತು-
ವಿಷ್ಮಾನ್ ।

ಗಂಭೀರಶಂಸೋ ರಜಸೋ ವಿಮಾನಃ ಸುಪಾರಕ್ಷತ್ರಃ ಸತೋ ಅಸ್ಯ ರಾಜಾ॥

। ಪದಪಾಠಃ ।

ಅವ । ಸಿಂಧುಂ । ವರುಣಃ । ದ್ಯೌಃऽಇವ । ಸ್ಥಾತ್ । ದ್ರಪ್ಸಃ । ನ । ಶ್ವೇತಃ । ಮೃಗಃ । ತುವಿಷ್ಮಾನ್ । ಗಂಭೀರऽಶಂಸಃ । ರಜಸಃ । ವಿऽಮಾನಃ । ಸುಪಾರऽಕ್ಷತ್ರಃ । ಸತಃ । ಅಸ್ಯ । ರಾಜಾ ॥ ೬ ॥

॥ ಸಾಯಣಭಾಷ್ಯಂ ॥

ವಾರುಣೇ ಪಶಾವವ ಸಿಂಧುಮಿತಿ ವಪಾಯಾ ಅನುವಾಕ್ಯಾ । ಸೂತ್ರಿತಂ ಚ । ಅವ ಸಿಂಧುಂ ವರುಣೋ ದ್ಯೌರಿವ ಸ್ಥಾದಯಂ ಸು ತುಭ್ಯಂ ವರುಣ ಸ್ವಧಾವಃ । ಆ. ೩-೭ । ಇತಿ ॥

ದ್ಯೌರಿವ ಸೂರ್ಯ ಇವ ದೀಪ್ತೋ ವರುಣಃ ಸಿಂಧುಂ ಸಮುದ್ರಮವ ಸ್ಥಾತ್ । ವೇಲಾಯಾ-ಮವಸ್ಥಾಪಯತಿ । ಯಥಾ ವೇಲಾಂ ನಾತಿಕ್ರಾಮತಿ ತಥಾ ಕರೋತೀತ್ಯರ್ಥಃ । ಕೀದೃಶೋ ವರುಣಃ । ದ್ರಪ್ಸೋ ನ ದ್ರವಣಶೀಲ ಉದಬಿಂದುರಿವ ಶ್ವೇತಃ ಶುಭ್ರವರ್ಣೋ ಮೃಗಃ । ಲುಪ್ತೋಪಮಮೇತತ್ । ಗೌರಮೃಗ ಇವ ತುವಿಷ್ಮಾನ್ ಬಲವಾನ್ ಪ್ರವೃದ್ಧೋ ವಾ ಗಂಭೀರಶಂಸಃ । ಗಂಭೀರೋ ಮಹಾ-ಞ್ಛಂಸಃ ಸ್ತೋತ್ರಂ ಯಸ್ಯ ಸ ತಥೋಕ್ತಃ । ರಜಸ ಉದಕಸ್ಯ ವಿಮಾನೋ ನಿರ್ಮಾತಾ ಸುಪಾರಕ್ಷತ್ರಃ ಸುಷ್ಠು ದುಃಖಾತ್ಪಾರಕಂ ಕ್ಷತ್ರಂ ಬಲಂ ಧನಂ ವಾ ಯಸ್ಯ ತಾದೃಶೋ ವರುಣಃ ಸತೋ ವಿದ್ಯಮಾನ-ಸ್ಯಾಸ್ಯ ಜಗತೋ ರಾಜೇಶ್ವರೋ ಭವತಿ ॥

॥ ಪ್ರತಿಪದಾರ್ಥ ॥

**ದ್ರಪ್ಸೋ ನ**—ಉದಕಬಿಂದುವಿನಂತೆ । **ಶ್ವೇತಃ**—ಶುಭ್ರವರ್ಣವುಳ್ಳವನೂ । **ಮೃಗಃ**—ಗೌರಮೃಗದಂತೆ। **ತುವಿಷ್ಮಾನ್**—ಅಧಿಕವಾದ ಶಕ್ತಿಯುಳ್ಳವನೂ । **ಗಂಭೀರಶಂಸಃ**—ಮಹತ್ಪ್ರಶಂಸೆಗೆ ಯೋಗ್ಯನೂ । **ರಜಸಃ**—ಉದಕಕ್ಕೆ । **ವಿಮಾನಃ**—ನಿರ್ಮಾತೃವೂ । **ಸುಪಾರಕ್ಷತ್ರಃ**—ದುಃಖದಿಂದ ದಾಟಿಸುವ ಶಕ್ತಿಯಳ್ಳವನೂ । **ಸತಃ**—ಸತ್ತಾತ್ಮಕವಾದ। **ಅಸ್ಯ**—ಈ ಜಗತ್ತಿಗೆಲ್ಲಾ । **ರಾಜಾ**—ಈಶ್ವರನೂ । **ದ್ಯೌಃ ಇವ**—ಸೂರ್ಯನಂತೆ ಪ್ರಕಾಶಯುತನೂ ಆದ । **ವರುಣಃ**—ವರುಣನು । **ಸಿಂಧುಂ**—ಸಮುದ್ರವನ್ನು । **ಅವ ಸ್ಥಾತ್**—ಅದರ ದಡವನ್ನು ಮೀರದಂತೆ ನಿಯಮಿಸಿ ಸ್ಥಾಪಿಸಿದ್ದಾನೆ.

। ಭಾವಾರ್ಥ ।

ಉದಕಬಿಂದುವಿನಂತೆ ಶುಭ್ರವರ್ಣವುಳ್ಳವನೂ, ಗೌರಮೃಗದಂತೆ ಅಧಿಕವಾದ ಶಕ್ತಿಯುಳ್ಳವನೂ, ಮಹತ್ಪ್ರಶಂಸೆಗೆ ಯೋಗ್ಯನೂ ಉದಕಕ್ಕೆ ನಿರ್ಮಾತೃವೂ ದುಃಖದಿಂದ ದಾಟಿಸುವ ಶಕ್ತಿಯುಳ್ಳವನೂ, ಸತ್ತಾತ್ಮಕವಾದ ಈ ಜಗತ್ತಿಗೆಲ್ಲಾ ಈಶ್ವರನೂ ಸೂರ್ಯನಂತೆ ಪ್ರಕಾಶಯುತನೂ ಆದ ವರುಣನು ಸಮುದ್ರವನ್ನು ಅದರ ದಡ ಮೀರದಂತೆ ನಿಯಮಿಸಿ ಸ್ಥಾಪಿಸಿದ್ದಾನೆ.

## English Translation

(Radiant) as the sun, Varuna placed the ocean (in its bed), white as a drop (of water), vigorous as an antelope, objects of profound praise, distributor of water, the powerful transporter beyond sin, the ruler of this exist ng (world).

॥ ವಿಶೇಷವಿಷಯಗಳು ॥

ವರುಣನನ್ನುದ್ದೇಶಿಸಿ ಮಾಡುವ ಪಶು ಹೋಮದಲ್ಲಿ– ಅವ ಸಿಂಧುಂ ಎಂಬ ಈ ಋಕ್ಕನ್ನು ವಪಾಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— ಅವ ಸಿಂಧುಂ ವರುಣೋ ದ್ಯೌರಿವ ಸ್ಥಾದಯುಂ ಸು ತುಭ್ಯಂ ವರುಣ ಸ್ವಧಾವಃ ಎಂಬ ಸೂತ್ರದಿಂದ (ಆ. ೩–೭) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಯೋ ಮೃಳಯಾತಿ ಚಕ್ರುಷೇ ಚಿದಾಗೋ ವಯಂ ಸ್ಯಾಮ ವರುಣೇ ಅನಾಗಾಃ ।
ಅನು ವ್ರತಾನ್ಯದಿತೇರೃಧಂತೋ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

॥ ಪದಪಾಠಃ ॥

ಯಃ । ಮೃಳಯಾತಿ । ಚಕ್ರುಷೇ । ಚಿತ್ । ಆಗಃ । ವಯಂ । ಸ್ಯಾಮ । ವರುಣೇ । ಅನಾಗಾಃ ।
ಅನು । ವ್ರತಾನಿ । ಅದಿತೇಃ । ಋಧಂತಃ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೭ ॥

॥ ಸಾಯಣಭಾಷ್ಯಂ ॥

ಆಗೋಽಪರಾಧಂ ಚಕ್ರುಷೇ ಚಿತ್ಕೃತವತೇಽಪಿ ಸ್ತೋತ್ರೇ ಯೋ ವರುಣೋ ಮೃಳಯಾತಿ ಉಪದಯಾಂ ಕರೋತಿ ತಸ್ಮಿನ್ವರುಣೇಽನಾಗಾ ಅನಾಗಸೋಽನಪರಾಧಾಃ ಸಂತೋ ವಯಂ ಸ್ಯಾಮ । ವರ್ತಮಾನಾ ಭವೇಮ । ಕಿಂ ಕುರ್ವಂತಃ । ಅದಿತೇರದೀನಸ್ಯ ವರುಣಸ್ಯ ಸಂಬಂಧೀನಿ ವ್ರತಾನಿ ಕರ್ಮಾಣ್ಯನ್ವಾನುಪೂರ್ವ್ಯೇಣರ್ಧಂತಃ ಸಮರ್ಧಯಂತಃ । ಹೇ ವರುಣಾದಯೋ ದೇವಾಃ ಯೂಯಮಸ್ಮಾನ್ಸರ್ವದಾ ಕಲ್ಯಾಣೈಃ ಪಾಲಯತ ॥

॥ ಪ್ರತಿಪದಾರ್ಥ ॥

**ಆಗಃ**—ಅಪರಾಧವನ್ನು | **ಚಕೃಷೇ ಚಿತ್**—ಮಾಡಿರುವ ಮನುಷ್ಯನಲ್ಲೂ | **ಯಃ**—ಯಾವ ವರುಣನು | **ಮೃಳಯಾತಿ**—ದಯೆಯನ್ನು ತೋರಿಸಿ ಅವನನ್ನು ಸುಖಪಡಿಸುವನೋ | **ವರುಣೇ**—ಅಂತಹ ವರುಣನ ವಿಷಯದಲ್ಲಿ | **ಅದಿತೇಃ**—ಅದಿತಿಪುತ್ರನಾದ ಅದೇ ವರುಣನ | **ವ್ರತಾನಿ**—ಪೂಜಾಕರ್ಮಗಳನ್ನು | **ಅನು**—ಕ್ರಮವಾಗಿ | **ಋಧಂತಃ**—ಬೆಳೆಯುತ್ತಾ (ಅಧಿಕವಾಗಿ ಮಾಡುತ್ತಾ) | **ವಯಂ**—ನಾವು | **ಅನಾಗಾಃ**—ಪಾಪರಹಿತರಾಗಿ | **ಸ್ಯಾಮ**—ಇರೋಣ (ಎಲೈ ವರುಣಾದಿದೇವತೆಗಳೇ) **ಯೂಯಂ**—ನೀವು | **ನಃ**—ನಮ್ಮನ್ನು | **ಸದಾ**—ಯಾವಾಗಲೂ | **ಸ್ವಸ್ತಿಭಿಃ**—ಕಲ್ಯಾಣಗಳಿಂದ | **ಪಾತ**—ರಕ್ಷಿಸಿರಿ.

॥ ಭಾವಾರ್ಥ ॥

ಅಪರಾಧವನ್ನು ಮಾಡಿರುವ ಮನುಷ್ಯನಲ್ಲೂ ಯಾವ ವರುಣನು ದಯೆಯನ್ನು ತೋರಿಸಿ ಅವನನು ಸುಖಪಡಿಸುವುದೋ ಅಂತಹ ವರುಣನ ವಿಷಯದಲ್ಲಿ ನಾವು ಪಾಪರಹಿತರಾಗಿದ್ದು ಅದಿತಿಪುತ್ರನಾದ ಅದೇ ವರುಣನ ಪೂಜಾಕರ್ಮಗಳನ್ನು ಕ್ರಮವಾಗಿ ಬೆಳೆಸುತ್ತಾ ಇರೋಣ. ಎಲೈ ವರುಣಾದಿದೇವತೆಗಳೇ, ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

### English Translation

May we be free from sin against that Varuna, who has compassion upon him who commits offence, we who are duly observing the rites of the son of Aditi: and do you, (gods), ever cherish us with blessings.



## ಎಂಭತ್ತೆಂಟನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಪ್ರ ಶುಂಧ್ಯುವಮಿತಿ ಸಪ್ತರ್ಚಮಷ್ಟಾದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವಾರುಣಂ | ಪ್ರ ಶುಂಧ್ಯುವಮಿತ್ಯನುಕ್ರಾಂತಂ || ಗತೋ ವಿನಿಯೋಗಃ ||**

**ಅನುವಾದವು**—**ಪ್ರ ಶುಂಧ್ಯುವಂ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹದಿನೆಂಟನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ವರುಣನು ದೇವತೆಯು; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪ್ರ ಶುಂಧ್ಯುವಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ ೮೮

ಮಂಡಲ—೭ ॥ ಅನುವಾಕ—೫ ॥ ಸೂಕ್ತ—೮೮ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೧೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ —೭ ॥
ಋಷಿಃ—ವಸಿಷ್ಠಃ ॥
ದೇವತಾ—ವರುಣಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ಶುಂಧ್ಯುವಂ ವರುಣಾಯ ಪ್ರೇಷ್ಠಾಂ ಮತಿಂ ವಸಿಷ್ಠ ಮೀಳ್ಹುಷೇ ಭರಸ್ವ ।
ಯ ಈಮರ್ವಾಂಚಂ ಕರತೇ ಯಜತ್ರಂ ಸಹಸ್ರಾಮಘಂ ವೃಷಣಂ ಬೃಹಂತಂ ॥ ೧ ॥

॥ ಪದಪಾಠಃ ॥

ಪ್ರ । ಶುಂಧ್ಯುವಂ । ವರುಣಾಯ । ಪ್ರೇಷ್ಠಾಂ । ಮತಿಂ । ವಸಿಷ್ಠ । ಮೀಳ್ಹುಷೇ । ಭರಸ್ವ ।
ಯಃ । ಈಂ । ಅರ್ವಾಂಚಂ । ಕರತೇ । ಯಜತ್ರಂ । ಸಹಸ್ರಽಮಘಂ । ವೃಷಣಂ । ಬೃಹಂತಂ ॥ ೧ ॥

॥ ಸಾಯಣಭಾಷ್ಯಂ ॥

ಋಷಿರಾತ್ಮಾನಮೇವ ಪ್ರತ್ಯಕ್ಷೀಕೃತ್ಯ ಸ್ತುತೌ ನಿಯುಂಕ್ತೇ । ಹೇ ವಸಿಷ್ಠ ತ್ವಂ ಮೀಳ್ಹುಷೇ ಸೇಕ್ತ್ರೇ ವರುಣಾಯ ಶುಂಧ್ಯುವಂ ಶೋಧಯಿತ್ರೀಂ ಯದ್ವಾ ಸ್ವತ ಏವ ಶುದ್ಧಾಂ ಪ್ರೇಷ್ಠಾಂ ಪ್ರಿಯತಮಾಂ ಮತಿಂ ಮನನೀಯಾಮೀದೃಶೀಂ ಸ್ತುತಿಂ ಪ್ರ ಭರಸ್ವ । ಪ್ರಹರ । ಪ್ರಾಪಯ । ಯೋ ವರುಣ ಈಮೇನಂ ಸೂರ್ಯಮರ್ವಾಂಚಮಸ್ಮದಭಿಮುಖಂ ಕರತೇ ಅಂತರಿಕ್ಷೇ ಕರೋತಿ ತಸ್ಮೈ ವರುಣಾಯೇತ್ಯನ್ವಯಃ । ಕೀದೃಶಂ ಸೂರ್ಯಂ । ಯಜತ್ರಂ ಯಷ್ಟವ್ಯಂ ಸಹಸ್ರಾಮಘಂ ಬಹುಧನಂ ವೃಷಣಂ ಕಾಮಾನಾಂ ವರ್ಷಕಂ ಬೃಹಂತಂ ಮಹಾಂತಂ ॥

॥ ಪ್ರತಿಪದಾರ್ಥ ॥

ವಸಿಷ್ಠ—ಎಲೈ ವಸಿಷ್ಠಋಷಿಯೇ । ಯಜತ್ರಂ—ಪೂಜ್ಯನೂ । ಸಹಸ್ರಾಮಘಂ—ಅತ್ಯಧಿಕವಾದ ಸಂಪತ್ತುಳ್ಳವನೂ । ವೃಷಣಂ—ವೃಷ್ಟಿಸೇಚಕನೂ । ಬೃಹಂತಂ—ಮಹತ್ಸ್ವರೂಪವುಳ್ಳವನೂ ಆದ । ಈಂ—

ಈ ಸೂರ್ಯನನ್ನು । ಅರ್ವಾಂಚಂ—ನಮಗಭಿಮುಖವಾಗಿ । ಯಃ—ಯಾವ ವರುಣನು । ಕರತೇ—ಅಂತರಿಕ್ಷದಲ್ಲಿ ಸ್ಥಾಪಿಸುವನೋ ಅಂತಹ । ಮೀಳ್ಹುಷೇ—ಕಾಮವರ್ಷಕನಾದ । ವರುಣಾಯ—ವರುಣನನ್ನುದ್ದೇಶಿಸಿ । ಶುಂಧ್ಯುವಂ—ಸ್ವತಃ ಶುದ್ಧವಾದುದೂ । ಪ್ರೇಷ್ಠಾಂ—ಅವನಿಗೆ ಪ್ರಿಯತಮವಾದುದೂ ಆದ । ಮತಿಂ—ಸ್ತೋತ್ರವನ್ನು । ಪ್ರ ಭರಸ್ವ—ಅರ್ಪಿಸು.

॥ ಭಾವಾರ್ಥ ॥

ಎಲೈ ವಸಿಷ್ಠಋಷಿಯೇ, ಪೂಜ್ಯನೂ ಅತ್ಯಧಿಕವಾದ ಸಂಪತ್ತುಳ್ಳವನೂ, ವೃಷ್ಟಿಸೇಚಕನೂ ಮಹತ್ತ್ವರೂಪವುಳ್ಳವನೂ ಆದ ಈ ಸೂರ್ಯನನ್ನು ನಮಗಭಿಮುಖವಾಗಿ ಯಾವ ವರುಣನು ಅಂತರಿಕ್ಷದಲ್ಲಿ ಸ್ಥಾಪಿಸುವನೋ ಅಂತಹ ಕಾಮವರ್ಷಕನಾದ ವರುಣನನ್ನುದ್ದೇಶಿಸಿ ಸ್ವತಃ ಶುದ್ಧವಾದುದೂ ಅವನಿಗೆ ಪ್ರಿಯತಮವಾದುದೂ ಆದ ಸ್ತೋತ್ರವನ್ನರ್ಪಿಸು.

## English Translation

Offer pure and acceptable praise, Vasishta, to the showerer, Varuna, he who makes the adorable (sun), the donor of thousands, the showerer (of benefits), the vast, manifest before (us).

॥ ಸಂಹಿತಾಪಾಠಃ ॥

ಅಧಾ ನ್ವಸ್ಯ ಸಂದೃಶಂ ಜಗನ್ವಾನಗ್ನೇರನೀಕಂ ವರುಣಸ್ಯ ಮಂಸಿ ।
ಸ್ವರ್ಯದಶ್ಮನ್ನಧಿಪಾ ಉ ಅಂಧೋಽಭಿ ಮಾ ವಪುರ್ದೃಶಯೇ ನಿನೀಯಾತ್ ॥ ೨ ॥

॥ ಪದಪಾಠಃ ॥

ಅಧ । ನು । ಅಸ್ಯ । ಸಂಽದೃಶಂ । ಜಗನ್ವಾನ್ । ಅಗ್ನೇಃ । ಅನೀಕಂ । ವರುಣಸ್ಯ । ಮಂಸಿ ।
ಸ್ವಃ । ಯತ್ । ಅಶ್ಮನ್ । ಅಧಿಽಪಾಃ । ಊಂ ಇತಿ । ಅಂಧಃ । ಅಭಿ । ಮಾ । ವಪುಃ । ದೃಶಯೇ । ನಿನೀಯಾತ್ ॥ ೨ ॥

॥ ಸಾಯಣಭಾಷ್ಯಂ ॥

ಅಧಾಧುನಾಸ್ಯ ವರುಣಸ್ಯ ಸಂದೃಶಂ ಸಂದರ್ಶನಂ ನು ಕ್ಷಿಪ್ರಂ ಜಗನ್ವಾನ್ ಗತವಾನಹಮಗ್ನೇರನೀಕಂ ಜ್ವಾಲಾಸಂಘಂ ಮಂಸಿ । ಸ್ತವಾನಿ । ತಂ ವರುಣಂ ಯಷ್ಟುಮಿತಿ ಶೇಷಃ । ಯದ್ಯದಾ ವರುಣಃ ಸ್ವಃ ಸುಖಕರಮಶ್ಮನ್ನಶ್ಮನ್ಯಭಿಷವಾರ್ಥೇ ಪಾಷಾಣೇಽವಸ್ಥಿತಂ । ಅಭಿಷುತಮಿತ್ಯರ್ಥಃ । ಈದೃಶಮಂಧಃ

ಸೋಮಲಕ್ಷಣಮನ್ನಮಧಿಪಾ ಅಧಿಕಂ ಪಾತಾ ಭವೇತ್ ॥ ಛಾಂದಸಃ ಷಷ್ಠ್ಯಭಾವಃ ॥ ಉ ಇತಿ ಪೂರಕಃ। ತದಾನೀಂ ಮಾ ಮಾಂ ವಪುಃ ಶರೀರಂ ಸ್ವಕೀಯಂ । ವಪುರಿತಿ ರೂಪನಾಮ । ಪ್ರಶಸ್ತಂ ರೂಪಂ ವಾ ದೃಶಯೇ ದರ್ಶನಾರ್ಥಮಭಿ ನಿನೀಯಾತ್ । ಅಭಿಪ್ರಾಪಯೇತ್ ॥

॥ ಪ್ರತಿಪದಾರ್ಥ ॥

**ಅಥ**—ಪ್ರಕೃತದಲ್ಲಿ । **ಅಸ್ಯ ವರುಣಸ್ಯ**—ಇದೇ ವರುಣನ । **ಸಂದೃಶಂ**—ಅತ್ಯುತ್ತಮವಾದ ರೂಪವನ್ನು **ನು**—ಕ್ಷಿಪ್ರವಾಗಿಯೇ । **ಜಗನ್ವಾನ್**—ಸಮೀಪಿಸಿದ ನಾನು । **ಅಗ್ನೇಃ**—ಇವನ ಜ್ವಾಲಾರೂಪದ । **ಅನೀಕಂ**—ಸಂಘವನ್ನು । **ಮಂಸಿ**—ಸ್ತುತಿಸುತ್ತೇನೆ (ಅಥವಾ ವರುಣಪೂಜೆಗಾಗಿ ಅಗ್ನಿಯ ಜ್ವಾಲೆಗಳನ್ನು ಸ್ತುತಿಸುತ್ತೇನೆ) । **ಯತ್** ಯಾವಾಗ । [**ವರುಣಃ**—ವರುಣನು, । **ಸ್ವಃ**—ಸುಖಕರವಾದುದೂ । **ಅಶ್ಮನ್**—ಪಾಷಾಣಗಳಿಂದ ಹಿಂಡಲ್ಪಟ್ಟದೂ ಆದ । **ಅಂಧಃ**—ಸೋಮರೂಪವಾದ ಅನ್ನವನ್ನು । **ಅಧಿಪಾಃ**- ಪಾನಮಾಡುವನೋ (ಆಗ) । **ಮಾಂ**—ನನ್ನ । **ವಪುಃ**—ಶರೀರವನ್ನು । **ದೃಶಯೇ**—ಆಕರ್ಷಕವಾದ ಕಾಂತಿಯೊಡನೆ । **ಅಭಿ ನಿನೀಯಾತ್**—ಯೋಜಿಸಲಿ.

॥ ಭಾವಾರ್ಥ ॥

ಪ್ರಕೃತದಲ್ಲಿ ಇದೇ ವರುಣನ ಅತ್ಯುತ್ತಮವಾದ ರೂಪವನ್ನು ಕ್ಷಿಪ್ರವಾಗಿಯೇ ಸಾಕ್ಷಾತ್ಕರಿಸಿದ ನಾನು ಇವನ ಜ್ವಾಲಾರೂಪದ ತೇಜಃಪುಂಜವನ್ನು ಸ್ತುತಿಸುತ್ತೇನೆ. ಯಾವಾಗ ವರುಣನು ಸುಖಕರವಾದುದೂ, ಪಾಷಾಣಗಳಿಂದ ಜಜ್ಜಿ ಹಿಂಡಲ್ಪಟ್ಟದೂ ಆದ ಸೋಮರೂಪವಾದ ಅನ್ನವನ್ನು ಪಾನಮಾಡುವನೋ ಆಗ ನನ್ನ ಶರೀರವನ್ನು ಆಕರ್ಷಕವಾದ ಕಾಂತಿಯೊಡನೆ ಯೋಜಿಸಲಿ

### English Translation

Hastening into his sight, may I (worthily) glorify the aggregated radiance of Varuna, when he is the imbiber of the exhilarating beverage (expressed) by the stones: may he render my person of goodly aspect.

॥ ಸಂಹಿತಾಪಾಠಃ ॥

ಆ ಯದ್ರುಹಾವ ವರುಣಶ್ಚ ನಾವಂ ಪ್ರ ಯತ್ಸಮುದ್ರಮೀರಯಾವ ಮಧ್ಯಂ ।

ಅಧಿ ಯದಪಾಂ ಸ್ನುಭಿಶ್ಚರಾವ ಪ್ರ ಪ್ರೇಂಖ ಈಂಖಯಾವಹೈ ಶುಭೇ ಕಂ॥

॥ ಪದಪಾಠಃ ॥

ಆ । ಯತ್ । ರುಹಾವ । ವರುಣಃ । ಚ । ನಾವಂ । ಪ್ರ । ಯತ್ । ಸಮುದ್ರಂ । ಈರಯಾವ । ಮಧ್ಯಂ ।

ಅಧಿ । ಯತ್ । ಅಪಾಂ । ಸ್ನುಽಭಿಃ । ಚರಾವ । ಪ್ರ । ಪ್ರೇಽಈಂಖೇ । ಈಂಖಯಾವಹೈ । ಶುಭೇ । ಕಂ ॥

॥ ಸಾಯಣಭಾಷ್ಯಂ ॥

ಯದ್ಯದಾ ವರುಣೇ ಪ್ರಸನ್ನೇ ಸತ್ಯಹಂ ವರುಣಶ್ಚೋಭೌ ನಾವಂ ದ್ರುಮಮಯೀಂ ತರಣ-ಸಾಧನಭೂತಾಮಾ ರುಹಾವ ಉಭಾವಾರೂಢಾವಭೂವ । ತಾಂ ಚ ನಾವಂ ಯದ್ಯದಾ ಸಮುದ್ರಂ ಮಧ್ಯಂ ಸಮುದ್ರಸ್ಯ ಮಧ್ಯಂ ಪ್ರತಿ ಪ್ರೇರಯಾವ ಪ್ರಕರ್ಷೇಣ ಗಮಯಾವ । ಯದ್ಯದಾ ಚಾಪಾಮುದಕಾನಾಮ-ಧ್ಯುಪರಿ ಸ್ನುಭಿರ್ಗಂತ್ರೀಭಿರನ್ಯಾಭಿರಪಿ ನೌಭಿಶ್ಚರಾವ ವರ್ತಾವಹೈ । ತದಾನೀಂ ಶುಭೇ ಶೋಭಾರ್ಥಂ ಪ್ರೇಂಖೇ ನೌರೂಪಾಯಾಂ ದೋಲಾಯಾಮಿವ ಪ್ರೇಂಖಯಾವಹೈ ನಿಮ್ನೋನ್ನತೈಸ್ತರಂಗೈರಿತಸ್ತತಶ್ಚ ಪ್ರವಿಚಲಂತೌ ಸಂಕ್ರೀಡಾವಹೈ । ಕಮಿತಿ ಪೂರಕಃ । ಯದ್ವಾ । ಕ್ರಿಯಾವಿಶೇಷಣಂ । ಕಂ ಸುಖಂ ಯಥಾ ಭವತಿ ತಥೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ವರುಣಶ್ಚ**—(ನಾನು) ಮತ್ತು ವರುಣ ಇಬ್ಬರೂ ಸಹ ಒಟ್ಟಿಗೆ । **ನಾವಂ**—ದ್ರುಮಮಯವಾದ ನೌಕೆಯನ್ನು । **ಆ ರುಹಾವ**-ಹತ್ತುವೆವೋ । **ಯತ್**—ಯಾವಾಗ । **ಸಮುದ್ರಂ ಮಧ್ಯಂ**—ಅಂತರಿಕ್ಷರೂಪವಾದ ಸಮುದ್ರಮಧ್ಯದಲ್ಲಿ । **ಪ್ರ ಈರಯಾವ**—ಅತಿಶಯವಾಗಿ ಹೋಗುವೆವೋ । **ಯತ್**—ಯಾವಾಗ । **ಅಪಾಂ**—ಉದಕಗಳ । **ಅಧಿ**—ಮೇಲ್ಭಾಗದಲ್ಲಿ । **ಸ್ನುಭಿಃ**-ಸಂಚರಿಸತಕ್ಕ ನೌಕೆಗಳೊಡನೆ । **ಚರಾವ**-ಸಂಚರಿಸುವೆವೋ ಆಗ । **ಶುಭೇ**—ಮಂಗಳಾತ್ಮಕವಾದ । **ಪ್ರೇಂಖೇ**—ನೌಕಾರೂಪವಾದ ಉಯ್ಯಾಲೆಯಲ್ಲಿ । **ಕಂ**—ಸುಖವಾಗಿ । **ಪ್ರ ಈಂಖಯಾವಹೈ**—ಕ್ರೀಡಾರ್ಥವಾದ ಆಂದೋಲನವನ್ನು ಮಾಡುತ್ತೇವೆ (ತೂಗಾಡುತ್ತೇವೆ)

॥ ಭಾವಾರ್ಥ ॥

ಯಾವಾಗ ನಾನು (ವಸಿಷ್ಠನೂ) ಮತ್ತು ವರುಣನೂ ಒಟ್ಟಿಗೆ ದ್ರುಮಮಯವಾದ ನೌಕೆಯನ್ನು ಹತ್ತುವೆವೋ, ಯಾವಾಗ ಅಂತರಿಕ್ಷರೂಪವಾದ ಸಮುದ್ರಮಧ್ಯದಲ್ಲಿ ಅತಿಶಯವಾಗಿ ಹೋಗುವೆವೋ, ಯಾವಾಗ ಉದಕಗಳ ಮೇಲ್ಭಾಗದಲ್ಲಿ ಸಂಚರಿಸತಕ್ಕ ನೌಕೆಗಳೊಡನೆ ಕ್ರೀಡಾರ್ಥವಾಗಿ ಸಂಚರಿಸುವೆವೋ ಆಗ ಮಂಗಳಾತ್ಮಕವೂ, ನೌಕಾರೂಪವಾದುದೂ ಆದ ಉಯ್ಯಾಲೆಯಲ್ಲಿ ಸುಖವಾಗಿ ಕ್ರೀಡಾರ್ಥವಾದ ಆಂದೋಲನವನ್ನು ಮಾಡುತ್ತೇವೆ.

## English Translation

When (I Vasishtha) and Varuna, ascend the ship together, when we send it forth into the midst of the ocean, when we proceed over the

waters with swift (sailing vessels), then may we both undulate happily in the prosperous swing.

॥ ಸಂಹಿತಾಪಾಠಃ ॥

ವಸಿಷ್ಠಂ ಹ ವರುಣೋ ನಾವ್ಯಾಧಾದೃಷಿಂ ಚಕಾರ ಸ್ವಪಾ ಮಹೋಭಿಃ ।
ಸ್ತೋತಾರಂ ವಿಪ್ರಃ ಸುದಿನತ್ವೇ ಅಹ್ನಾಂ ಯಾನ್ನು ದ್ಯಾವಸ್ತತನನ್ಯಾ-
ದುಷಾಸಃ ॥ ೪ ॥

॥ ಪದಪಾಠಃ ॥

ವಸಿಷ್ಠಂ । ಹ । ವರುಣಃ । ನಾವಿ । ಆ । ಅಧಾತ್ । ಋಷಿಂ । ಚಕಾರ । ಸುಽಅಪಾಃ । ಮಹಃಽಭಿಃ । ಸ್ತೋತಾರಂ । ವಿಪ್ರಃ । ಸುದಿನಽತ್ವೇ । ಅಹ್ನಾಂ । ಯಾತ್ । ನು । ದ್ಯಾವಃ । ತತನನ್ । ಯಾತ್ । ಉಷಸಃ ॥ ೪ ॥

॥ ಸಾಯಣಭಾಷ್ಯಂ ॥

ಏವಂ ವಸಿಷ್ಠೇನಾತ್ಮನೋಕ್ತೇ ಯದ್ವರುಣೇನ ಕೃತಂ ತದ್ದರ್ಶಯತಿ । ವಸಿಷ್ಠಂ ಹ ವಸಿಷ್ಠಂ ಖಲು ವರುಣೋ ನಾವಿ ಸ್ವಕೀಯಾಯಾಮಾಧಾತ್ । ಆರೋಹಯತ್ । ತಥಾ ತಮೃಷಿಮಮಹೋಭಿಃ ರಕ್ಷಣೈಃ ಸ್ವಪಾಂ ಸ್ವಪಸಂ ಶೋಭನಕರ್ಮಾಣಂ ಚಕಾರ । ವರುಣಃ ಕೃತವಾನ್ । ಅಪಿ ಚ ವಿಪ್ರೋ ಮೇಧಾವೀ ವರುಣೋಽಹ್ನಾಂ ದಿವಸಾನಾಂ ಮಧ್ಯೇ ಸುದಿನತ್ವೇ ಯತ್ಫಲತ್ವೇನ ಶೋಭನದಿನತ್ವಂ ತತ್ರ ಸ್ತೋತಾರಮಸ್ಥಾಪಯದಿತಿ ಶೇಷಃ । ಕಿಂ ಕುರ್ವನ್ । ಯಾದ್ಯಾತೋ ಗಚ್ಛತೋ ದ್ಯಾವೋ ದಿವಸಾನ್ ಯಾದ್ಯಾತೀರುಷಾಸ ಉಷಸೋಪಲಕ್ಷಿತಾ ರಾತ್ರೀಶ್ಚ ನು ಕ್ಷಿಪ್ರಂ ತತನನ್ ಸೂರ್ಯಾತ್ಮನಾ ವಿಸ್ತಾರಯನ್ ॥

॥ ಪ್ರತಿಪದಾರ್ಥ ॥

**ವರುಣಃ**—ವರುಣನು । **ವಸಿಷ್ಠಂ ಹ**—ವಸಿಷ್ಠನನ್ನು । **ನಾವಿ**—ತನ್ನ ಸ್ವಂತ ನೌಕೆಯಲ್ಲಿ । **ಅಧಾತ್**—ಹತ್ತಿ ಕುಳ್ಳಿರಿಸಿದನು । **ಮಹೋಭಿಃ**—ಮಹದ್ರಕ್ಷಣೆಗಳಿಂದ । **ಋಷಿಂ**—ಆದೇ ವಸಿಷ್ಠಋಷಿಯನ್ನು । **ಸ್ವಪಾಂ**—ಉತ್ತಮವಾದ ಕರ್ಮವುಳ್ಳವನನ್ನಾಗಿ । **ಚಕಾರ**—ಮಾಡಿದನು । **ವಿಪ್ರಃ**—ಮೇಧಾವಿಯಾದ ವರುಣನು । **ಯಾತ್**—ಕಳೆಯುತ್ತಿರುವ । **ದ್ಯಾವಃ**—ದಿವಸಗಳನ್ನೂ । **ಯಾತ್**—ಕಳೆಯುತ್ತಿರುವ । **ಉಷಾಸಃ**—ಉಷಸ್ಸುಗಳಿಂದ ಉಪಲಕ್ಷಿತಗಳಾದ ರಾತ್ರಿಗಳನ್ನೂ । **ನು**—ಕ್ಷಿಪ್ರವಾಗಿ । **ತತನನ್**—ವಿಸ್ತೃತವಾದವನ್ನಾಗಿ ಮಾಡುತ್ತಾ । **ಅಹ್ನಾಂ**—ದಿವಸಗಳಲ್ಲೆಲ್ಲಾ । **ಸುದಿನತ್ವೇ**—ಅತ್ಯಂತ ಮಂಗಳಕರವಾದ ದಿವಸಗಳಲ್ಲಿ । **ಸ್ತೋತಾರಂ**—ಸ್ತುತಿಕರ್ತನಾದ ವಸಿಷ್ಠನನ್ನು ಇರಿಸಿದನು.

॥ ಭಾವಾರ್ಥ ॥

ವರುಣನು ವಸಿಷ್ಠನನ್ನು ತನ್ನ ಸ್ವಂತ ನೌಕೆಯಲ್ಲಿ ಹತ್ತಿ ಕುಳ್ಳಿರಿಸಿದನು, ಅದೇ ವಸಿಷ್ಠಋಷಿಯನ್ನು ತನ್ನ ಮಹದ್ರಕ್ಷಣೆಗಳಿಂದ ಉತ್ತಮವಾದ ಕರ್ಮವುಳ್ಳವನನ್ನಾಗಿ ಮಾಡಿದನು. ಮೇಧಾವಿಯಾದ ವರುಣನು ಕಳೆಯುತ್ತಿರುವ ದಿವಸಗಳನ್ನೂ, ಕಳೆಯುತ್ತಿರುವ ಉಷಸ್ಸೋಪಲಕ್ಷಿತವಾದ ರಾತ್ರಿಗಳನ್ನೂ ವಿಸ್ತೃತವಾದವನ್ನಾಗಿ ಮಾಡುತ್ತಾ ದಿವಸಗಳಲ್ಲೆಲ್ಲಾ ಅತ್ಯಂತ ಮಂಗಳಕರವಾದ ದಿವಸಗಳಲ್ಲಿ ಸ್ತುತಿಕರ್ತನಾದ ವಸಿಷ್ಠನನ್ನು ಇರಿಸಿದನು.

## English Translation

So Varuna placed Vasishtha in the ship, and by his mighty protection made the Rishi a doer of good works: the wise Varuna placed his worshipper in a fortunate day of days, he extended the passing days, the passing nights.

॥ ಸಂಹಿತಾಪಾಠಃ ॥

ಕ್ವ೧ ತ್ಯಾನಿ ನೌ ಸಖ್ಯಾ ಬಭೂವುಃ ಸಚಾವಹೇ ಯದವೃಕಂ ಪುರಾ ಚಿತ್ ।
ಬೃಹಂತಂ ಮಾನಂ ವರುಣ ಸ್ವಧಾವಃ ಸಹಸ್ರದ್ವಾರಂ ಜಗಮಾ ಗೃಹಂ ತೇ ॥

॥ ಪದಪಾಠಃ ॥

ಕ್ವ । ತ್ಯಾನಿ । ನೌ । ಸಖ್ಯಾ । ಬಭೂವುಃ । ಸಚಾವಹೇ ಇತಿ । ಯತ್ । ಅವೃಕಂ । ಪುರಾ । ಚಿತ್ ।
ಬೃಹಂತಂ । ಮಾನಂ । ವರುಣ । ಸ್ವಧಾऽವಃ । ಸಹಸ್ರऽದ್ವಾರಂ । ಜಗಮ । ಗೃಹಂ । ತೇ ॥ ೫ ॥

॥ ಸಾಯಣಭಾಷ್ಯಂ ॥

ಹೇ ವರುಣ ತ್ಯಾನಿ ತಾನಿ ಪುರಾತನಾನಿ ನಾವಾವಯೋಃ ಸಖ್ಯಾ ಸಖ್ಯಾನಿ ಸಖಿತ್ವಾನಿ ಕ್ವ ಕುತ್ರ ಬಭೂವುಃ । ಪುರಾ ಪೂರ್ವಸ್ಮಿನ್ಕಾಲೇಽವೃಕಮಹಿಂಸ್ಯಮಾತ್ಯಂತಿಕಂ ಯತ್ಸಖ್ಯಮಸ್ತಿ ತತ್ಸಚಾವಹೇ । ಆವಾಂ ಸೇವಾವಹೇ । ಚಿದಿತಿ ಪೂರಣಃ । ಅಪಿ ಚ ಹೇ ಸ್ವಧಾವೋಽನ್ನವನ್ವರುಣ ತೇ ತ್ವದೀಯಂ ಗೃಹಂ ಜಗಮ । ಗಚ್ಛಾನಿ ॥ ಲೋಡರ್ಥೇ ಲಿಟ್ ॥ ಕೀದೃಶಂ ಗೃಹಂ । ಬೃಹಂತಂ ಮಹಾಂತಂ ಮಾನಂ । ಮಾಂತ್ಯಸ್ಮಿನ್ಸರ್ವಾಣಿ ಭೂತಾನಿ ಮಾನಂ । ಸರ್ವಸ್ಯ ಭೂತಜಾತಸ್ಯ ಪರಿಚ್ಛೇದಕಮಿತ್ಯರ್ಥಃ । ಸಹಸ್ರದ್ವಾರಂ ಬಹುದ್ವಾರಂ ॥

॥ ಪ್ರತಿಪದಾರ್ಥ ॥

(ಎಲೈ ವರುಣನೇ) ನೌ—ನಮ್ಮಿಬ್ಬರಲ್ಲಿಯೂ । ತ್ಯಾನಿ—ಹಿಂದೆ ಪ್ರಸಿದ್ಧವಾಗಿದ್ದ । ಸಖ್ಯಾ—ಸಖಿತ್ವವು । ಕ್ವ—ಎಲ್ಲಿ । ಬಭೂವುಃ—ಅಡಗಿದೆ । ಪುರಾ ಚಿತ್—ಹಿಂದೆಲ್ಲಾ । ಅವೃಕಂ—ನಮ್ಮಿಬ್ಬರಿಗೂ ಬಹಳ

ಆತ್ಯಂತಿಕವಾದ । ಯತ್—ಯಾವ ಸಖ್ಯವಿದ್ದಿತೋ ಅದನ್ನು । ಸಚಾವಹೇ—ಪುನಃ ಅನುಭವಿಸೋಣ । ಸ್ವಧಾವಃ—ಅನ್ನವಂತನಾದ । ವರುಣ—ಎಲೈ ವರುಣನೇ । ಬೃಹಂತಂ—ಮಹತ್ತಾದುದೂ । ಮಾನಂ—ಸಕಲ ಭೂತಗಳಿಗೂ ಆಶ್ರಯವಾದುದೂ । ಸಹಸ್ರದ್ವಾರಂ—ಸಹಸ್ರಸಂಖ್ಯಾಕವಾದ ದ್ವಾರವುಳ್ಳದ್ದೂ ಆದ । ತೇ ಗೃಹಂ – ನಿನ್ನ ಗೃಹಕ್ಕೆ । ಜಗಮ—ನಾನೂ ಬಂದು ಸೇರುವಂತಾಗಲಿ.

। ಭಾವಾರ್ಥ ।

ಎಲೈ ವರುಣನೇ, ಹಿಂದೆಲ್ಲಾ ಪ್ರಸಿದ್ಧವಾಗಿದ್ದ ನಮ್ಮಿಬ್ಬರ ಸಖಿತ್ವವು ಈಗೆಲ್ಲಿ ಹೋಯಿತು ? ಹಿಂದೆಲ್ಲಾ ನಮ್ಮಿಬ್ಬರಲ್ಲಿಯೂ ಬಹಳ ಆತ್ಯಂತಿಕವಾದ ಯಾವ ಸಖಿತ್ವವಿದ್ದಿತೋ ಅದನ್ನು ಈಗ ಪುನಃ ಅನುಭವಿಸೋಣ. ಅನ್ನವಂತನಾದ ಎಲೈ ವರುಣನೇ, ಮಹತ್ತಾದುದೂ, ಸಕಲ ಭೂತಗಳಿಗೂ ಆಶ್ರಯವಾದುದೂ ಸಹಸ್ರ ಸಂಖ್ಯಾಕವಾದ ದ್ವಾರವುಳ್ಳದ್ದೂ ಆದ ನಿನ್ನ ಗೃಹಕ್ಕೆ ನಾನು ಬಂದು ಸೇರುವಂತಾಗಲಿ.

## English Translation

What has become of those our ancient friendships? let us preserve them unimpaired as of old: food-bestowing Varuna, may I repair to your vast comprehensive thousand-doored dwelling.

। ಸಂಹಿತಾಪಾಠಃ ।

ಯ ಆಪಿರ್ನಿತ್ಯೋ ವರುಣ ಪ್ರಿಯಃ ಸನ್ತ್ವಾಮಾಗಾಂಸಿ ಕೃಣವತ್ಸಖಾ ತೇ ।
ಮಾ ತ ಏನಸ್ವಂತೋ ಯಕ್ಷಿನ್ಭುಜೇಮ ಯಂಧಿ ಷ್ಮಾ ವಿಪ್ರಃ ಸ್ತುವತೇ ವರೂಥಂ ॥ ೬ ॥

। ಪದಪಾಠಃ ।

ಯಃ । ಆಪಿಃ । ನಿತ್ಯಃ । ವರುಣ । ಪ್ರಿಯಃ । ಸನ್ । ತ್ವಾಂ । ಆಗಾಂಸಿ । ಕೃಣವತ್ । ಸಖಾ । ತೇ ।
ಮಾ । ತೇ । ಏನಸ್ವಂತಃ । ಯಕ್ಷಿನ್ । ಭುಜೇಮ । ಯಂಧಿ । ಸ್ಮ । ವಿಪ್ರಃ । ಸ್ತುವತೇ । ವರೂಥಂ ॥೬॥

॥ ಸಾಯಣಭಾಷ್ಯಂ ॥

ಹೇ ವರುಣ ಯೋ ವಸಿಷ್ಠೋ ನಿತ್ಯೋ ಧ್ರುವ ಆಪಿರ್ಬಂಧುಃ । ಔರಸಃ ಪುತ್ರ ಇತ್ಯರ್ಥಃ । ಯಃ ಪೂರ್ವಂ ಪ್ರಿಯಃ ಸಂಸ್ತ್ವಾಂ ಪ್ರತ್ಯಾಗಾಂಸ್ಯಪರಾಧಾನ್ ಕೃಣವತ್ ಅಕರೋತ್ ಸ ಇದಾನೀಂ ತೇ ತವ ಸಖಾ ಸಮಾನಖ್ಯಾನಃ ಪ್ರಿಯೋಽಸ್ತು । ಹೇ ಯಕ್ಷಿನ್ಯಜನೀಯ ವರುಣ ತೇ ತವ ಸ್ವಭೂತಾ ವಯಮೇನಸ್ವಂತ ಏನಸಾ ಪಾಪೇನ ಯುಕ್ತಾಃ ಸಂತೋ ಮಾ ಭುಜೇಮ । ಮಾ ಭುಜ್ಮಹಿ । ತ್ವತ್ಪ್ರ-

ಸಾದಾತ್ಮ್ಯಾಪರಹಿತಾ ಏವ ಸಂತೋ ಭೋಗಾನ್ ಭುನಜಾಮಹೈ । ವಿಪ್ರೋ ಮೇಧಾವೀ ತ್ವಂ ಚ ಸ್ತುವತೇ ಸ್ತೋತ್ರಂ ಕುರ್ವತೇ ವಸಿಷ್ಠಾಯ ವರೂಥಮನಿಷ್ಟನಿವಾರಕಂ ವರಣೀಯಂ ವಾ ಗೃಹಂ ಯಂಧಿ । ಪ್ರಯಚ್ಛ । ಸ್ಮೇತಿ ಪೂರಕಃ ॥

। ಪ್ರತಿಪದಾರ್ಥ ।

ವರುಣ—ಎಲೈ ವರುಣದೇವನೇ । ಯಃ—ಯಾವ ವಸಿಷ್ಠನು । ತ್ವಾಂ-ನಿನ್ನ ವಿಷಯದಲ್ಲಿ । ಆಗಾಂಸಿ-ಅಪರಾಧಗಳನ್ನು । ಕೃಣವತ್—ಮಾಡಿದ್ದರೂ ಸಹ । ತೇ—ನಿನಗೆ । ನಿತ್ಯಃ—ಶಾಶ್ವತನಾದ । ಆಪಿಃ ಸನ್—ಬಂಧುವಾಗಿರುವುದರಿಂದ । ಸಖಾ—ನಿನ್ನ ಸುಹೃತ್ತಾಗಿಯೂ । ಪ್ರಿಯಃ—ಪ್ರೀತಿಪಾತ್ರನಾಗಿಯೂ ಇರಲಿ । ಯಕ್ಷಿನ್—ಪೂಜ್ಯನಾದ ಎಲೈ ವರುಣನೇ । ತೇ—ನಿನಗೆ ಸೇರಿದ ನಾವು । ಏನಸ್ವಂತಃ—ಪಾಪಯುಕ್ತರಾಗಿದ್ದುಕೊಂಡು । ಮಾ ಭುಜೇಮ—ಸುಖವನ್ನನುಭವಿಸಲಿಚ್ಛಿಸುವುದಿಲ್ಲ । ವಿಪ್ರಃ—ಮೇಧಾವಿಯಾದ ನೀನು । ಸ್ತುವತೇ—ಸ್ತುತಿಕರ್ತನಾದ ವಸಿಷ್ಠನಿಗೆ । ವರೂಥಂ—ಅನಿಷ್ಟನಾಶಕವಾದ ಗೃಹವನ್ನು ॥ ಯಂಧಿ—ಕೊಡು

। ಭಾವಾರ್ಥ ।

ಎಲೈ ವರುಣನೇ, ಯಾವ ವಸಿಷ್ಠನು ನಿನ್ನ ವಿಷಯದಲ್ಲಿ ಅಪರಾಧಗಳನ್ನು ಮಾಡಿದ್ದರೂ ಸಹ ನಿನಗೆ ಶಾಶ್ವತವಾದ ಬಂಧುವಾಗಿರುವುದರಿಂದ ನಿನ್ನ ಸುಹೃತ್ತಾಗಿಯೂ ಪ್ರೀತಿಪಾತ್ರನಾಗಿಯೂ ಇರಲಿ ಪೂಜ್ಯನಾದ ಎಲೈ ವರುಣನೇ, ನಿನಗೆ ಸೇರಿದ ನಾವು ಪಾಪಯುಕ್ತರಾಗಿದ್ದುಕೊಂಡು ಸುಖವನ್ನನುಭವಿಸಲಿಚ್ಛಿಸುವುದಿಲ್ಲ. ಮೇಧಾವಿಯಾದ ನೀನು ಸ್ತುತಿಕರ್ತನಾದ ವಸಿಷ್ಠನಿಗೆ ಅನಿಷ್ಟನಾಶಕವಾದ ಗೃಹವನ್ನು ಕೊಡು.

## English Translation

May he your unvarying kin, who was ever dear, though committing offences against you, still be your friend; adorable Varuna, offending you let us not enjoy (happiness); but do you, who are wise, bestow on your worshipper a secure abode.

। ಸಂಹಿತಾಪಾಠಃ ।

ಧ್ರುವಾಸು ತ್ವಾಸು ಕ್ಷಿತಿಷು ಕ್ಷಿಯಂತೋ ವ್ಯಸ್ಮತ್ಪಾಶಂ ವರುಣೋ ಮುಮೋಚತ್ ।

ಅವೋ ವನ್ವಾನಾ ಅದಿತೇರುಪಸ್ಥಾದ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

। ಪದಪಾಠಃ ।

ಧ್ರುವಾಸು । ತ್ವಾ । ಆಸು । ಕ್ಷಿತಿಷು । ಕ್ಷಿಯಂತಃ । ವಿ । ಅಸ್ಮತ್ । ಪಾಶಂ । ವರುಣಃ । ಮುಮೋಚತ್ ।

ಅವಃ । ವನ್ವಾನಾಃ । ಅದಿತೇಃ । ಉಪಸ್ಥಾತ್ । ಯೂಯಂ । ಪಾತ । ಸ್ವಸ್ತಿಭಿಃ । ಸದಾ । ನಃ ॥೭॥

॥ ಸಾಯಣಭಾಷ್ಯಂ ॥

ಅತ್ರ ಋಗ್ವಿಧಾನಂ । ಧ್ರುವಾಸು ತ್ವಾಸು ಕ್ಷಿತಿಷು ಜಪನ್ ಬಂಧಾತ್ಪ್ರಮುಚ್ಯತೇ । ತಿಷ್ಠನ್ರಾತ್ರೌ ಜಪೇದೇತಾಂ ಪಿಶಾಚಸ್ತಂ ನ ಗಚ್ಛತಿ । ಋಗ್ವಿ. ೨-೨೫ । ಇತಿ ॥

ಧ್ರುವಾಸು ನಿತ್ಯಾಸ್ವಾಸು ದೃಶ್ಯಮಾನಾಸು ಕ್ಷಿತಿಷು ಭೂಮಿಷು ಕ್ಷಿಯಂತೋ ನಿವಸಂತೋ ವಯಂ ಹೇ ವರುಣ ತ್ವಾ ತ್ವಾಂ ಸ್ತುಮ ಇತಿ ಶೇಷಃ । ಸ ಚ ವರುಣೋಽಸ್ಮದಸ್ಮತ್ತಃ ಪಾಶಂ ಬಂಧಕಂ ಪಾಪಂ ವಿ ಮುಮೋಚತ್ । ಮೋಚಯೇತ್ । ತಥಾದಿತೇರಖಂಡನೀಯಾಯಾಃ ಪೃಥಿವ್ಯಾ ಉಪಸ್ಥಾದುಪಸ್ಥಾನಾದವೋ ರಕ್ಷಣಂ ವರುಣೇನ ದತ್ತಂ ವನ್ವಾನಾಃ ಸಂಭಜಮಾನಾ ವಯಂ ಸ್ಯಾಮ । ಅನ್ಯದ್ಗತಂ ॥

॥ ಪ್ರತಿಪದಾರ್ಥ ॥

(ಎಲೈ ವರುಣನೇ!) ಧ್ರುವಾಸು—ನಿತ್ಯಸ್ಥಾಯಿಗಳಾದ । ಆಸು ಕ್ಷಿತಿಷು–ಈ ಪೃಥ್ವಿಗಳಲ್ಲಿ । ಕ್ಷಿಯಂತಃ–ವಾಸಮಾಡತಕ್ಕ ನಾವು । ತ್ವಾ—ನಿನ್ನನ್ನು ಸ್ತುತಿಸುತ್ತೇವೆ । ವರುಣಃ—ಆದೇ ವರುಣನು । ಅಸ್ಮತ್—ನಮ್ಮಿಂದ । ಪಾಶಂ— ಬಂಧವನ್ನು । ವಿ ಮುಮೋಚತ್—ಬಿಡಿಸಲಿ । ಅದಿತೇಃ—ಪೃಥ್ವಿಯ । ಉಪಸ್ಥಾತ್—ಸಮೀಪದಿಂದ । ಅವಃ—ವರುಣದತ್ತವಾದ ರಕ್ಷಣೆಯನ್ನು । ವನ್ವಾನಾಃ –ನಾವು ಅನುಭವಿಸುವಂತಾಗಲಿ (ಎಲೈ ವರುಣಾದಿ ದೇವತೆಗಳೇ) । ಯೂಯಂ—ನೀವು । ನಃ—ನಮ್ಮನ್ನು । ಸದಾ—ಯಾವಾಗಲೂ । ಸ್ವಸ್ತಿಭಿಃ—ಕಲ್ಯಾಣಗಳಿಂದ । ಪಾತ—ರಕ್ಷಿಸಿರಿ

॥ ಭಾವಾರ್ಥ ॥

ಎಲೈ ವರುಣನೇ, ನಿತ್ಯಸ್ಥಾಯಿಗಳಾದ ಈ ಪೃಥ್ವಿಗಳಲ್ಲಿ ವಾಸಮಾಡತಕ್ಕ ನಾವು ನಿನ್ನನ್ನು ಸ್ತುತಿಸುತ್ತೇವೆ. ಆದೇ ವರುಣನು ನಮ್ಮಿಂದ ಬಂಧವನ್ನು ಬಿಡಿಸಲಿ. ಪೃಥ್ವಿಯ ಸಮೀಪದಿಂದ ವರುಣದತ್ತವಾದ ರಕ್ಷಣೆಯನ್ನು ನಾವು ಅನುಭವಿಸುವಂತಾಗಲಿ. ಎಲೈ ವರುಣಾದಿದೇವತೆಗಳೇ ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

Whilst dwelling in these durable worlds, may Varuna loose our bonds: may we be enjoyers of the protection (which has been given by him) from the lap of Aditi, and you (gods), ever cherish us with blessings.

॥ ವಿಶೇಷವಿಷಯಗಳು ॥

ಋಗ್ವಿಧಾನವೆಂಬ ಶೌನಕೋಕ್ತ ಗ್ರಂಥದಲ್ಲಿ ಈ ಋಕ್ಕಿನ ವಿಷಯವಾಗಿ ಈರೀತಿ ಹೇಳಿದೆ—

ಧ್ರುವಾಸು ತ್ವಾಸು ಕ್ಷಿತಿಷು ಜಪನ್ ಬಂಧಾತ್ಪ್ರಮುಚ್ಯತೇ ।
ತಿಷ್ಠನ್ರಾತ್ರೌ ಜಪೇದೇತಾಂ ಪಿಶಾಚಸ್ತಂ ನ ಗಚ್ಛತಿ ॥

(ಋಗ್ವಿಧಾನ. ೨-೩೧೯)

ಧ್ರುವಾಸು ತ್ವಾಸು—ಎಂಬ ಈ ಋಕ್ಕನ್ನು ಜಪಮಾಡಿದರೆ ಬಂಧನದಿಂದ ವಿಮುಕ್ತನಾಗುವನು. ಈ ಋಕ್ಕನ್ನು ರಾತ್ರಿಯಲ್ಲಿ ಜಪಮಾಡಿದರೆ ಅವನ ಸಮೀಪಕ್ಕೆ ಪಿಶಾಚಾದಿಗಳು ಬರುವುದಿಲ್ಲ ಎಂದರೆ ಅವನಿಗೆ ಪಿಶಾಚಾದಿಗಳಿಂದ ಬಾಧೆಯುಂಟಾಗುವುದಿಲ್ಲ.



## ಎಂಭತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಮೋ ಷು ವರುಣೇತಿ ಪಂಚರ್ಚಮೇಕೋನನವತಂ ಸೂಕ್ತಂ ವಾರುಣಂ । ಅಂತ್ಯಾ ಜಗತೀ ಶಿಷ್ಟಾಶ್ಚತಸ್ರೋ ಗಾಯತ್ರ್ಯಃ। ತಥಾ ಚಾನುಕ್ರಾಂತಂ । ಮೋ ಷು ಪಂಚ ಗಾಯತ್ರಂ ಜಗತ್ಯಂತಮಿತಿ॥ ಗತೋ ವಿನಿಯೋಗಃ ॥**

ಅನುವಾದವು—**ಮೋ ಷು ವರುಣ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹತ್ತೊಂಭತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ವರುಣನು ದೇವತೆಯು ; ಈ ಸೂಕ್ತದ ಕೊನೆಯ ಋಕ್ಕು ಜಗತೀಛಂದಸ್ಕವು. ಉಳಿದ ನಾಲ್ಕು ಋಕ್ಕುಗಳು ಗಾಯತ್ರೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಮೋ ಷು ಪಂಚ ಗಾಯತ್ರಂ ಜಗತ್ಯಂತಂ** ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೮೯

ಮಂಡಲ—೭ ॥ ಅನುವಾಕ—೫ ॥ ಸೂಕ್ತ—೮೯ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೧೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಸಿಷ್ಠಃ ॥
ದೇವತಾ—ವರುಣಃ ॥
ಛಂದಃ—೧-೪, ಗಾಯತ್ರೀ । ೫ ಜಗತೀ ॥

॥ ಸಂಹಿತಾಪಾಠಃ ॥

ಮೋ ಷು ವರುಣ ಮೃನ್ಮಯಂ ಗೃಹಂ ರಾಜನ್ನಹಂ ಗಮಂ ।
ಮೃಳಾ ಸುಕ್ಷತ್ರ ಮೃಳಯ ॥ ೧ ॥

॥ ಪದಪಾಠಃ ॥

ಮೋ ಇತಿ । ಸು । ವರುಣ । ಮೃತ್ಽಮಯಂ । ಗೃಹಂ । ರಾಜನ್ । ಅಹಂ । ಗಮಂ ।
ಮೃಳ । ಸುಽಕ್ಷತ್ರ । ಮೃಳಯ ॥ ೧ ॥

॥ ಸಾಯಣಭಾಷ್ಯಂ ॥

ಹೇ ರಾಜನ್ನೀಶ್ವರ ವರುಣ ತ್ವದೀಯಂ ಮೃನ್ಮಯಂ ಮೃದಾದಿಭಿರ್ನಿರ್ಮಿತಂ ಗೃಹಂ ಮೋ ಮಾ ಉ ಮ್ವೇವಾಹಂ ಗಮಂ ಗತೋಽಸ್ಮಿ । ಅಪಿ ತು ಸು ಶೋಭನಂ ಸುವರ್ಣಮಯಮೇವ ತ್ವದೀಯಂ ಗೃಹಂ ಪ್ರಾಪ್ನವಾನಿ । ಸ ತ್ವಂ ಮಾಂ ಮೃಳ । ಸುಖಯ। ಹೇ ಸುಕ್ಷತ್ರ ಶೋಭನಧನ ವರುಣ ಮೃಳಯ। ಉಪದಯಾಂ ಚ ಕುರು ॥

॥ ಪ್ರತಿಪದಾರ್ಥ ॥

**ರಾಜನ್**—ಈಶ್ವರನಾದ । **ವರುಣ**—ಎಲೈ ವರುಣದೇವನೇ । **ಮೃನ್ಮಯಂ**—ಮಣ್ಣಿನಿಂದ ಮಾಡಿದ । **ಗೃಹಂ**—ಮನೆಗೆ । **ಅಹಂ**—ನಾನು । **ಮೋ ಗಮಂ**—ಹೋಗದಿರುವಂತೆ ಮಾಡು । **ಸು**—ಉತ್ತಮವಾದ ಸುವರ್ಣಗೃಹಕ್ಕೆ ಹೋಗುವಂತಾಗಲಿ । **ಸುಕ್ಷತ್ರ**—ಉತ್ತಮವಾದ ಧನವುಳ್ಳ ಎಲೈ ದೇವನೇ । **ಮೃಳ**—ನಮ್ಮನ್ನು ಸುಖಪಡಿಸು । **ಮೃಳಯ**—ದಯೆಯನ್ನು ತೋರು.

॥ ಭಾವಾರ್ಥ ॥

ಪ್ರಭುವಾದ ಎಲೈ ವರುಣನೇ, ಮಣ್ಣಿನಿಂದ ನಿರ್ಮಿತವಾದ ಗೃಹಕ್ಕೆ ನನ್ನನ್ನು ಹೋಗಗೊಡಿಸಬೇಡ. ಸುವರ್ಣಮಯವಾದ ಗೃಹಕ್ಕೆ ನಾನು ಹೋಗುವಂತಾಗಲಿ. ಉತ್ತಮವಾದ ಧನವುಳ್ಳ ಎಲೈ ದೇವನೇ, ನಮ್ಮನ್ನು ಸುಖಪಡಿಸು. ನಮ್ಮ ಮೇಲೆ ದಯೆಯನ್ನು ತೋರು.

## English Translation

May I never go, royal Varuna, to a house made of clay: grant me happiness, possessor of wealth, grant me happiness.

॥ ಸಂಹಿತಾಪಾಠಃ ॥

ಯದೇಮಿ ಪ್ರಸ್ಫುರನ್ನಿವ ದೃತಿರ್ನ ಧ್ಮಾತೋ ಅದ್ರಿವಃ ।
ಮೃಳಾ ಸುಕ್ಷತ್ರ ಮೃಳಯ ॥ ೨ ॥

॥ ಪದಪಾಠಃ ॥

ಯತ್ । ಏಮಿ । ಪ್ರಸ್ಫುರನ್ऽಇವ । ದೃತಿಃ । ನ । ಧ್ಮಾತಃ । ಅದ್ರಿऽವಃ ।
ಮೃಳ । ಸುऽಕ್ಷತ್ರ । ಮೃಳಯ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅದ್ರಿವ ಆಯುಧವನ್ವರುಣ ಯದ್ಯದಾ ಪ್ರಸ್ಫುರನ್ನಿವ ಶೈತ್ಯೇನ ಪ್ರವಿಚಲನ್ನಿವ ತ್ವದ್ಭಯಾದ್ವೇಪಮಾನೋ ದೃತಿರ್ನ ದೃತಿರಿವ ಧ್ಮಾತೋ ವಾಯುನಾ ಪೂರ್ಣಃ ಸನ್ ತ್ವಯಾ ಬದ್ಧೋಽಹಮೇಮಿ ಗಚ್ಛಾಮಿ ತದಾನೀಂ ಮೃಳ । ಸುಖಯ । ಹೇ ಸುಕ್ಷೇತ್ರ ಸುಧನ ಮೃಳಯ । ಉಪದಯಾಂ ಕುರು ॥

॥ ಪ್ರತಿಪದಾರ್ಥ ॥

ಅದ್ರಿವಃ—ಆಯುಧಧಾರಿಯಾದ ಎಲೈ ವರುಣನೇ । ಧ್ಮಾತಃ ವಾಯುವಿನಿಂದ ಪೂರ್ಣವಾದ । ದೃತಿಃ ನ—ಚರ್ಮಚೀಲ (ತಿದಿ) ದಂತೆ । ಪ್ರಸ್ಫುರನ್ನಿವ—(ನಿನ್ನನ್ನು ನೋಡಿ ಭೀತಿಯಿಂದಲೂ ಭಕ್ತಿಯಿಂದಲೂ) ನಡುಗುತ್ತಿರುವೆನೋ ಎಂಬ ವಿನಯದಿಂದ । ಯತ್—ಯಾವಾಗ । ಏಮಿ—ನಿನ್ನನ್ನು ಸಮೀಪಿಸುವೆನೋ (ಆಗ) । ಮೃಳ—ನಮ್ಮನ್ನು ಸುಖಪಡಿಸು । ಸುಕ್ಷತ್ರ—ಉತ್ತಮವಾದ ಧನವುಳ್ಳ ಎಲೈ ವರುಣನೇ । ಮೃಳಯ—ನಮ್ಮ ಮೇಲೆ ದಯೆಯನ್ನು ತೋರಿಸು.

॥ ಭಾವಾರ್ಥ ॥

ಆಯುಧಧಾರಿಯಾದ ಎಲೈ ವರುಣನೇ, ವಾಯುವಿನಿಂದ ಪೂರ್ಣವಾದ ಚರ್ಮಚೀಲವು (ತಿದಿಯು) ನಡಗುವಂತೆ ನಿನ್ನನ್ನು ನೋಡಿ ಭೀತಿಯಿಂದಲೂ, ಭಕ್ತಿಯಿಂದಲೂ ನಡುಗುತ್ತಿರುವೆನೋ ಎಂಬ ವಿನಯದಿಂದ ಯಾವಾಗ ನಿನ್ನನು. ಸಮೀಪಿಸುವೆನೋ ಆಗ ನಮ್ಮನ್ನು ಸುಖಪಡಿಸು. ಉತ್ತಮವಾದ ಧನವುಳ್ಳ ಎಲೈ ವರುಣನೇ ನಮ್ಮ ಮೇಲೆ ದಯೆಯನ್ನು ತೋರಿಸು.

## English Translation

**When, Varuna, I am throbbing as if (with awe) like an inflated skin, grant me happiness, possessor of wealth, grant me happiness.**

॥ ಸಂಹಿತಾಪಾಠಃ ॥

ಕ್ರತ್ವಃ ಸಮಹ ದೀನತಾ ಪ್ರತೀಪಂ ಜಗಮಾ ಶುಚೇ

ಮೃಳಾ ಸುಕ್ಷತ್ರ ಮೃಳಯ ॥ ೩ ॥

॥ ಪದಪಾಠಃ ॥

ಕ್ರತ್ವಃ । ಸಮಹ । ದೀನತಾ । ಪ್ರತಿಽಈಪಂ । ಜಗಮ । ಶುಚೇ ।

ಮೃಳ । ಸುಽಕ್ಷತ್ರ । ಮೃಳಯ ॥ ೩ ॥

॥ ಸಾಯಣಭಾಷ್ಯಂ ॥

ಹೇ ಸಮುಹ ಸಧನ ಶುಚೇ ಸ್ವಭಾವತೋ ನಿರ್ಮಲ ವರುಣ ದೀನತಾ ದೀನತಯಾಶಕ್ತತಯಾ ಕ್ರತ್ವಃ ಕರ್ಮಣಃ ಕರ್ತವ್ಯತ್ವೇನ ವಿಹಿತಸ್ಯ ಶ್ರೌತಸ್ಮಾರ್ತಾದಿಲಕ್ಷಣಸ್ಯ ಪ್ರತೀಪಂ ಪ್ರತಿಕೂಲಮನನುಷ್ಠಾನಂ ಜಗಮ । ಪ್ರಾಪ್ತವಾನಸ್ಮಿ । ಅತ ಏವ ತ್ವಯಾ ಬದ್ಧಃ । ತಾದೃಶಂ ಮಾಂ ಮೃಳ । ಸುಖಯ । ಅನ್ಯದ್ಗತಂ ॥

॥ ಪ್ರತಿಪದಾರ್ಥ ॥

ಸಮುಹ—ಧನಯುಕ್ತನೂ । ಶುಚೇ—ಸ್ವಯಂಶುದ್ಧನೂ ಆದ ಎಲೈ ವರುಣನೇ । ದೀನತಾ—ಅಶಕ್ತಿಯಿಂದಾಗಲಿ ಅಥವಾ ಅಜ್ಞಾನದಿಂದಾಗಲಿ । ಕ್ರತ್ವಃ—ಶ್ರೌತಸ್ಮಾರ್ತಾದಿ ನಿತ್ಯಕರ್ಮಗಳಿಗೆ । ಪ್ರತೀಪಂ—ವಿರುದ್ಧವಾಗಿ । ಜಗಮ—ನಾನು ಆಚರಿಸಿದ್ದರೂ ಸಹ । ಮೃಳ—ನನಗೆ ಸುಖವನ್ನುಂಟುಮಾಡು । ಸುಕ್ಷತ್ರ—ಉತ್ತಮವಾದ ಧನವುಳ್ಳ ಎಲೈ ವರುಣನೇ । ಮೃಳಯ—ನಮ್ಮ ಮೇಲೆ ದಯೆಯನ್ನು ತೋರು.

॥ ಭಾವಾರ್ಥ ॥

ಧನಯುಕ್ತನೂ ಸ್ವಯಂಶುದ್ಧನೂ ಆದ ಎಲೈ ವರುಣನೇ, ಅಶಕ್ತಿಯಿಂದಾಗಲಿ ಅಥವಾ ಅಜ್ಞಾನದಿಂದಾದಲಿ, ನಾನು ವಿಹಿತವಾದ ಶ್ರೌತಸ್ಮಾರ್ತಾದಿರೂಪವಾದ ನಿತ್ಯಕರ್ಮಗಳಿಗೆ ವಿರುದ್ಧರಾಗಿ ಆಚರಿಸಿದ್ದರೂ ಸಹ ನನಗೆ ಸುಖವನ್ನುಂಟುಮಾಡು. ಉತ್ತಮವಾದ ಧನವುಳ್ಳ ಎಲೈ ವರುಣನೇ, ನಮ್ಮ ಮೇಲೆ ದಯೆಯನ್ನು ತೋರು.

English translation

Opulent and pure (Varuna), if through infirmity I have done what is contrary (to the law), yet grant me happiness, possessor of wealth, grant me happiness.

॥ ಸಂಹಿತಾಪಾಠಃ ॥

ಅಪಾಂ ಮಧ್ಯೇ ತಸ್ಥಿವಾಂಸಂ ತೃಷ್ಣಾವಿದಜ್ಜರಿತಾರಂ ।
ಮೃಳಾ ಸುಕ್ಷತ್ರ ಮೃಳಯ ॥ ೪ ॥

॥ ಪದಪಾಠಃ ॥

ಅಪಾಂ । ಮಧ್ಯೇ । ತಸ್ಥಿऽವಾಂಸಂ । ತೃಷ್ಣಾ । ಅವಿದತ್ । ಜರಿತಾರಂ ।
ಮೃಳ । ಸುऽಕ್ಷತ್ರ । ಮೃಳಯ ॥ ೪ ॥

॥ ಸಾಯಣಭಾಷ್ಯಂ ॥

ಅಪಾಂ ಸಮುದ್ರಾಣಾಮುದಕಾನಾಂ ಮಧ್ಯೇ ತಸ್ಥಿವಾಂಸಂ ಸ್ಥಿತವಂತಮಪಿ ಜರಿತಾರಂ ತವ ಸ್ತೋತಾರಂ ಮಾ ತೃಷ್ಣಾ ಪಿಪಾಸಾವಿದತ್ । ಆಪ್ತವತೀ । ಲವಣೋತ್ಕಟಸ್ಯ ಸಾಮುದ್ರಜಲಸ್ಯ ಪಾನಾನರ್ಹತ್ವಾತ್ । ಅತಸ್ತ್ವಾದೃಶಂ ಮಾಂ ಮೃಳ । ಸುಖಯ । ಅನ್ಯದ್ಗತಂ ॥

॥ ಪ್ರತಿಪದಾರ್ಥ ॥

(ಎಲೈ ವರುಣನೇ) ಅಪಾಂ – ಸಮುದ್ರದ ಉದಕಗಳ । ಮಧ್ಯೇ—ಮಧ್ಯಭಾಗದಲ್ಲಿ । ತಸ್ಥಿವಾಂಸಂ—ನಿಂತಿದ್ದರೂ ಸಹ । ಜರಿತಾರಂ—ನಿನ್ನ ಸ್ತೋತೃವಾದ ನನ್ನನ್ನು । ತೃಷ್ಣಾ—ದಾಹವು । ಅವಿದತ್—ವ್ಯಾಪಿಸಿದೆ । ಸುಕ್ಷತ್ರ—ಉತ್ತಮವಾದ ಧನವುಳ್ಳ ವರುಣನೇ । ಮೃಳ— ನನ್ನನ್ನು ಸುಖಪಡಿಸು । ಮೃಳಯ—ನನ್ನಲ್ಲಿ ದಯೆಯನ್ನು ತೋರು.

॥ ಭಾವಾರ್ಥ ॥

ಎಲೈ ವರುಣನೇ, ಸಮುದ್ರದ ಉದಕಗಳ ಮಧ್ಯ ಭಾಗದಲ್ಲಿ ನಿಂತಿದ್ದರೂ ಸಹ ಅವು ಪಾನಾರ್ಹವಲ್ಲದುದರಿಂದ ನಿನ್ನ ಸ್ತೋತೃವಾದ ನನ್ನನ್ನು ದಾಹವು ವ್ಯಾಪಿಸಿದೆ. ಉತ್ತಮವಾದ ಧನವುಳ್ಳ ವರುಣನೇ, ನನ್ನನ್ನು ಸುಖಪಡಿಸು. ನನ್ನ ಮೇಲೆ ದಯೆಯನ್ನು ತೋರು.

English Translation

Thirst distresses (me) your worshipper in the midst of the waters: grant me happiness, possessor of wealth, grant me happiness.

॥ ಸಂಹಿತಾಪಾಠ ॥

ಯತ್ಕಿಂ ಚೇದಂ ವರುಣ ದೈವ್ಯೇ ಜನೇಽಭಿದ್ರೋಹಂ ಮನುಷ್ಯಾಶ್ಚರಾಮಸಿ ।

ಅಚಿತ್ತೀ ಯತ್ತವ ಧರ್ಮಾ ಯುಯೋಪಿಮ ಮಾ ನಸ್ತಸ್ಮಾದೇನಸೋ ದೇವ ರೀರಿಷಃ ॥ ೫ ॥

॥ ಪದಪಾಠ ॥

ಯತ್ । ಕಿಂ । ಚ । ಇದಂ । ವರುಣ । ದೈವ್ಯೇ । ಜನೇ । ಅಭಿಽದ್ರೋಹಂ । ಮನುಷ್ಯಾಃ । ಚರಾಮಸಿ ।

ಅಚಿತ್ತೀ । ಯತ್ । ತವ । ಧರ್ಮ । ಯುಯೋಪಿಮ । ಮಾ । ನಃ । ತಸ್ಮಾತ್ । ಏನಸಃ । ದೇವ । ರೀರಿಷಃ ॥ ೫ ॥

॥ ಸಾಯಣಭಾಷ್ಯಂ ॥

ದೇವಸುವಾಂ ಹವಿಃಷು ವಾರುಣಸ್ಯ ಹವಿಷೋ ಯತ್ಕಿಂ ಚೇದಮಿತಿ ಯಾಜ್ಯಾ । ಸೂತ್ರಿತಂ ಚ । ಯತ್ಕಿಂಚೇದಂ ವರುಣ ದೈವ್ಯೇ ಜನ ಉಪ ತೇ ಸ್ತೋಮಾನ್ಪಶುಪಾ ಇವಾಕರಮಿತಿ ದ್ವೇ । ಆ. ೪.೧೧ । ಇತಿ ॥

ಹೇ ವರುಣ ದೈವ್ಯೇ ದೇವಸಮೂಹರೂಪೇ ಜನೇ ಯದಿದಂ ಕಿಂಚನಾಭಿದ್ರೋಹಮಪಕಾರಜಾತಂ ಮನುಷ್ಯಾ ವಯಂ ಚರಾಮಸಿ ಚರಾಮಃ ನಿರ್ವರ್ತಯಾಮಃ । ತಥಾಚಿತ್ತ್ಯಚಿತ್ತ್ಯಾಜ್ಞಾನೇನ ತವ ತ್ವದೀಯಂ ಯದ್ಧರ್ಮ ಧಾರಕಂ ಕರ್ಮ ಯುಯೋಪಿಮ ವಯಂ ವಿಮೋಹಿತವಂತಃ । ಹೇ ದೇವ ತಸ್ಮಾದೇನಸಃ ಪಾಪಾನ್ನೋಽಸ್ಮಾನ್ಮಾ ರೀರಿಷಃ । ಮಾ ಹಿಂಸೀಃ ॥

॥ ಪ್ರತಿಪದಾರ್ಥ ॥

ವರುಣ—ಎಲೈ ವರುಣನೇ । ದೈವ್ಯೇ—ದೇವತೆಗಳ ಗುಂಪಿಗೆ ಸೇರಿದ । ಜನೇ—ಜನರ ವಿಷಯದಲ್ಲಿ । ಇದಂ ಯತ್ಕಿಂಚನ - ನಿರ್ದಿಷ್ಟವಾಗಿ ತೋರಿಸಬಹುದಾದ ಯಾವುದೇ ಆದರೂ । ಅಭಿದ್ರೋಹಂ—ಅಪಕಾರ ಕರ್ಮವನ್ನು । ಮನುಷ್ಯಾಃ—ಮಾನವರಾದ ನಾವು । ಚರಾಮಸಿ—ಮಾಡಿದ್ದೇ ಆದರೂ । ಅಚಿತ್ತೀ—ಅಜ್ಞಾನದಿಂದ । ತವ—ನಿನ್ನ ನಿಯಮಕ್ಕೆ ಸೇರಿದ । ಯತ್—ಯಾವುದಾದರೂ । ಧರ್ಮ—ಜಗದ್ಧಾರಕವಾದ ನಿಯಮವನ್ನು । ಯುಯೋಪಿಮ—ಮೀರಿ ನಡೆದಿದ್ದೇ ಆದರೂ । ದೇವ—ದೇವತಾತ್ಮನಾದ ಎಲೈ ವರುಣನೇ । ತಸ್ಮಾದೇನಸಃ—ಅಂತಹ ಪಾಪಗಳಿಂದ (ಅವುಗಳ ನಿಮಿತ್ತವಾಗಿ) ನಃ—ನಮ್ಮನ್ನು । ಮಾ ರೀರಿಷಃ—ಹಿಂಸಿಸಬೇಡ

॥ ಭಾವಾರ್ಥ ॥

ಎಲೈ ವರುಣನೇ, ದೇವತೆಗಳ ಗುಂಪಿಗೆ ಸೇರಿದ ಜನರ ವಿಷಯದಲ್ಲಿ ನಿರ್ದಿಷ್ಟವಾಗಿ ತೋರಿಸಬಹುದಾದ ಯಾವುದೇ ಆದರೂ ಅಪಕಾರ ಕರ್ಮವನ್ನು ಮಾನವರಾದ ನಾವು ಮಾಡಿದ್ದೇ ಆದರೂ ಅಥವಾ ಅಜ್ಞಾನದಿಂದ ನಿನ್ನ ನಿಯಮಕ್ಕೆ ಸೇರಿದ ಯಾವುದಾದರೂ ಜಗದ್ಧಾರಕವಾದ ನಿಯಮವನ್ನು ಮೀರಿ ನಡೆದಿದ್ದರೂ ದೇವತಾತ್ಮನಾದ ಎಲೈ ವರುಣನೇ, ಅಂತಹ ಪಾಪಗಳಿಂದ ಎಂದರೆ ಅವುಗಳ ನಿಮಿತ್ತವಾಗಿ ನಮ್ಮನ್ನು ಹಿಂಸಿಸಬೇಡ.

## English Translation

Whatever the offence which we men commit, Varuna, against divine beings, whatever law of you we may through ignorance violate, do not you, divine Varuna, punish us on account of that iniquity.

॥ ವಿಶೇಷವಿಷಯಗಳು ॥

ದೇವಸುವ ಎಂಬ ನಾನಾದೇವತೆಗಳನ್ನುದ್ದೇಶಿಸಿ ಮಾಡುವ ಎಂಟು ಹೋಮಗಳಲ್ಲಿ ಯತ್ಕಿಂಚೇದಂ ಎಂಬ ಈ ಋಕ್ಕನ್ನು ವರುಣದೇವತೆಯನ್ನುದ್ದೇಶಿಸಿ ಮಾಡುವ ಹವಿರ್ಹೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು

ಆಶ್ವಲಾಯನ ಶ್ರೌತಸೂತ್ರದ— **ಯತ್ಕಿಂಚೇದಂ ವರುಣ ದೈವ್ಯೇ ಜನ ಉಪ ತೇ ಸ್ತೋಮಾನ್ಸ್ವಭುಷಾ ಇವಾ ಕರಮಿತಿ ದ್ವೇ** ಎಂಬ ಸೂತ್ರದಿಂದ (ಆ. ೪-೧೧) ವಿವೃತವಾಗಿರುವುದು.



## ತೊಂಭತ್ತನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಷಷ್ಠೇಽನುವಾಕೇ ಪಂಚದಶ ಸೂಕ್ತಾನಿ । ತತ್ರ ಪ್ರ ವೀರಯೇತಿ ಸಪ್ತರ್ಚಂ ಪ್ರಥಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವಾಯವ್ಯಂ । ಯಾಸು ಪಂಚಮ್ಯಾದ್ಯಾಸು ದ್ವಿವಚನಮಸ್ತಿ ತಾ ಐಂದ್ರ್ಯ-ವಾಯವ್ಯಃ । ತಥಾ ಚಾನುಕ್ರಾಂತಂ। ಪ್ರ ವೀರಯಾ ಸಪ್ತ ವಾಯವ್ಯಂ ಹ್ಯೈಂದ್ರ್ಯಶ್ಚ ಯಾ ದ್ವಿವದುಕ್ತಾ ಇತಿ ॥ ತೃತೀಯೇ ಛಂದೋಮೇ ಪ್ರಉಗಶಸ್ತ್ರೇ ಪ್ರ ವೀರಯೇತಿ ವಾಯವ್ಯಸ್ತೃಚಃ । ಸೂತ್ರಿತಂ ಚ । ಪ್ರ ವೀರಯಾ ಶುಚಯೋ ದದ್ರಿರೇ ವಾಂ ತೇ ಸತ್ಯೇನ ಮನಸಾ ದೀಧ್ಯಾನಾಃ । ಆ. ೮.೧೧ । ಇತಿ ॥**

ಅನುವಾದವು—ಏಳನೆಯ ಮಂಡಲದ ಆರನೆಯ ಅನುವಾಕದಲ್ಲಿ ಹದಿನೈದು ಸೂಕ್ತಗಳಿರುವವು. ಅವುಗಳಲ್ಲಿ **ಪ್ರ ವೀರಯಾ** ಎಂಬ ಸೂಕ್ತವು ಮೊದಲನೆಯದು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ವಾಯುವು ದೇವತೆಯು ; ತ್ರಿಷ್ಟುಪ್ ಛಂದಸ್ಸು ಐದನೆಯ ಋಕ್ಕಿನಲ್ಲಿಯೂ ಅದರ ಮುಂದಿನ ಋಕ್ಕುಗಳಲ್ಲಿಯೂ ಇರುವ ದ್ವಿವಚನಾಂತಶಬ್ದಗಳು ಇಂದ್ರವಾಯುಗಳನ್ನು ಸೂಚಿಸುವವು ಅನುಕ್ರಮಣಿಕೆಯಲ್ಲಿ— **ಪ್ರ ವೀರಯಾ ಸಪ್ತ ವಾಯವ್ಯಂ ಹ್ಯೈಂದ್ರ್ಯಶ್ಚ ಯಾ ದ್ವಿವದುಕ್ತಾಃ ।** ಎಂದು ಹೇಳಿರುವುದು. ತೃತೀಯ ಛಂದೋಮಾಮಂತ್ರಪಠನಕಾಲದಲ್ಲಿ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸುವಾಗ **ಪ್ರ ವೀರಯಾ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ವಾಯುಪರವಾದ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಪ್ರ ವೀರಯಾ ಶುಚಯೋ ದದ್ರಿರೇ ವಾಂ ತೇ ಸತ್ಯೇನ ಮನಸಾ ದೀಧ್ಯಾನಾಃ** ಎಂಬ ಸೂತ್ರದಿಂದ (ಆ. ೮.೧೧) ವಿವೃತವಾಗಿರುವುದು.

### ಸೂಕ್ತ—೯೦

ಮಂಡಲ—೭ ॥ ಅನುವಾಕ—೬ ॥ ಸೂಕ್ತ—೯೦ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೧೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ವಸಿಷ್ಠಃ ॥
ದೇವತಾ—೧-೪, ವಾಯುಃ । ೫-೭, ಇಂದ್ರವಾಯೂ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ಪ್ರ ವೀರಯಾ ಶುಚಯೋ ದದ್ರಿರೇ ವಾಮಧ್ವರ್ಯುಭಿರ್ಮಧುಮಂತಃ ಸುತಾಸಃ ।**

ವಹ ವಾಯೋ ನಿಯುತೋ ಯಾಹ್ಯಚ್ಛಾ ಪಿಬಾ ಸುತಸ್ಯಾಂಧಸೋ

ಮದಾಯ ॥ ೧ ॥

। ಪದಪಾಠಃ ॥

ಪ್ರ । ವೀರಯಾ । ಶುಚಯಃ । ದದ್ರಿರೇ । ವಾಂ । ಅಧ್ವರ್ಯುಽಭಿಃ । ಮಧುಽಮಂತಃ । ಸುತಾಸಃ ।

ವಹ । ವಾಯೋ ಇತಿ । ನಿಽಯುತಃ । ಯಾಹಿ । ಅಚ್ಛ । ಪಿಬ । ಸುತಸ್ಯ । ಅಂಧಸಃ । ಮದಾಯ ॥೧॥

। ಸಾಯಣಭಾಷ್ಯಂ ।

ಹೇ ವಾಯೋ ವೀರಯಾ ವೀರಾಯ ವಿವಿಧವೀರಯಿತ್ರೇ । ಸುಪಾಂ ಸುಲುಗಿತಿ ಚತುರ್ಥ್ಯಾ ಯಾಜಾದೇಶಃ ॥ ವಾಂ ತೇ । ವ್ಯತ್ಯಯೇನ ದ್ವಿವಚನಂ ॥ ಶುಭ್ರಂ ಶುಚಯಃ ಶುದ್ಧಾ ಮಧುಮಂತೋ ಮಾಧುರ್ಯೋಪೇತಾಃ ಸುತಾಃ ಸೋಽಭಿಷುತಾಃ ಸೋಮಾ ಏತರೇಯಿಭಿರ್ನವಮೋಽಹನಿ ಪ್ರಉಗೇಽಧ್ವರ್ಯುಭಿರಧ್ವರಸ್ಯ ನೇತೃಭಿರ್ಯತ್ತಿಗ್ಭಿಃ ಪ್ರ ದದ್ರಿರೇ । ಪ್ರದೀಯಂತೇ ॥ ದದ ದಾನ ಇತ್ಯಸ್ಮಾತ್ ದ್ರ್ಯಾಪಂ ॥ ಯತ ಏವಮತಃ ಕಾರಣಾತ್ ಹೇ ವಾಯೋ ನಿಯುತೋ ವಡವಾ ವಹ । ರಥಂ ಪ್ರಾಪಯ । ತೇನ ಚ ರಥೇನಾಚ್ಛ ಯಾಹಿ । ಅಸ್ಮದ್ಯಜ್ಞಮಭಿಗಚ್ಛ । ಅಭಿಗತ್ಯ ಚ ಸುತಸ್ಯಾಭಿಷುತಸ್ಯಾಂಧಸೋಽನ್ನಸ್ಯ ಸೋಮಲಕ್ಷಣಸ್ಯ ಸ್ವಕೀಯಂ ಭಾಗಂ ಪಿಬ । ಕಿಮರ್ಥಂ । ಮದಾಯ ಮದೋತ್ಪತ್ತ್ಯರ್ಥಂ ॥

। ಪ್ರತಿಪದಾರ್ಥ ।

**ವಾಯೋ**—ಎಲೈ ವಾಯುದೇವನೇ । **ವೀರಯಾ**—ವೀರ್ಯಯುಕ್ತನಾದ । **ವಾಂ**—ನಿನ್ನನ್ನುದ್ದೇಶಿಸಿ । **ಶುಚಯಃ**—ಶುದ್ಧವಾದವೂ । **ಮಧುಮಂತಃ**—ಮಾಧುರ್ಯದಿಂದ ಕೂಡಿದವೂ । **ಸುತಾಸಃ**—ಹಿಂಡಲ್ಪಟ್ಟವೂ ಆದ ಸೋಮರಸಗಳು । **ಅಧ್ವರ್ಯುಭಿಃ**—ಅಧ್ವರ್ಯುಗಳಿಂದ । **ಪ್ರ ದದ್ರಿರೇ**—ಅರ್ಪಿತವಾಗುತ್ತವೆ । **ನಿಯುತಃ**—ನಿನ್ನ ಅಶ್ವಗಳನ್ನು । **ವಹ**—ರಥಕ್ಕೆ ಯೋಜಿಸು । **ಅಚ್ಛ**—ನಮಗಭಿಮುಖವಾಗಿ । **ಯಾಹಿ**—ದಯಮಾಡು । **ಸುತಸ್ಯ**—ಹಿಂಡಿ ಸಿದ್ಧವಾಗಿರುವ । **ಅಂಧಸಃ**—ಸೋಮರೂಪದ ಅನ್ನದ ಭಾಗವನ್ನು । **ಮದಾಯ**—ತೃಪ್ತ್ಯರ್ಥವಾಗಿ । **ಪಿಬ**—ಪಾನಮಾಡು.

। ಭಾವಾರ್ಥ ।

ಎಲೈ ವಾಯುದೇವನೇ, ವೀರ್ಯಯುಕ್ತನಾದ ನಿನ್ನನ್ನುದ್ದೇಶಿಸಿ ಶುದ್ಧವಾದವೂ ಮಾಧುರ್ಯದಿಂದ ಕೂಡಿದವೂ ಹಿಂಡಲ್ಪಟ್ಟವೂ ಆದ ಸೋಮರಸಗಳು ಅಧ್ವರ್ಯುಗಳಿಂದ ಅರ್ಪಿತವಾಗುತ್ತವೆ. ನಿನ್ನ ಅಶ್ವಗಳನ್ನು ರಥಕ್ಕೆ ಯೋಜಿಸು. ನಮಗಭಿಮುಖವಾಗಿ ದಯಮಾಡು. ಹಿಂಡಿ ಸಿದ್ಧವಾಗಿರುವ ಸೋಮರೂಪದ ಅನ್ನದ ಭಾಗವನ್ನು ನಿನ್ನ ತೃಪ್ತ್ಯರ್ಥವಾಗಿ ಪಾನಮಾಡು

## English Translation

The sweet and pure Soma juices are offered to you, the hero Vayu, by the priests: therefore harness your Niyut steeds, come hither and drink of the effused Soma for your exhilaration.

॥ ಸಂಹಿತಾಪಾಠಃ ॥

ಈಶಾನಾಯ ಪ್ರಹುತಿಂ ಯಸ್ತ ಆನಟ್ಛುಚಿಂ ಸೋಮಂ ಶುಚಿಪಾ-
ಸ್ತುಭ್ಯಂ ವಾಯೋ ।
ಕೃಣೋಷಿ ತಂ ಮರ್ತ್ಯೇಷು ಪ್ರಶಸ್ತಂ ಜಾತೋಜಾತೋ ಜಾಯತೇ
ವಾಜ್ಯಸ್ಯ ॥ ೨ ॥

॥ ಪದಪಾಠಃ ॥

ಈಶಾನಾಯ । ಪ್ರऽಹುತಿಂ । ಯಃ । ತೇ । ಆನಟ್ । ಶುಚಿಂ । ಸೋಮಂ । ಶುಚಿऽಪಾಃ । ತುಭ್ಯಂ ।
ವಾಯೋ ಇತಿ ।
ಕೃಣೋಷಿ । ತಂ । ಮರ್ತ್ಯೇಷು । ಪ್ರऽಶಸ್ತಂ । ಜಾತಃऽಜಾತಃ । ಜಾಯತೇ । ವಾಜೀ । ಅಸ್ಯ ॥ ೨ ॥

॥ ಸಾಯಣಭಾಷ್ಯಂ ॥

ಶುನಾಸೀರೀಯೇ ಪರ್ವಣಿ ವಾಯವ್ಯಸ್ಯ ಹವಿಷ ಈಶಾನಾಯೇತಿ ಯಾಜ್ಯಾ । ಸೂತ್ರಿತಂ ಚ । ಸ ತ್ವಂ ನೋ ದೇವ ಮನಸೇಶಾನಾಯ ಪ್ರಹುತಿಂ ಯಸ್ತ ಆನಟ್ । ಆ ೨-೨೦ । ಇತಿ ॥ ವಾಯವ್ಯೇ ಪಶಾವೇಷೈವ ಪಶುಪುರೋಡಾಶಸ್ಯ ಯಾಜ್ಯಾ । ಸೂತ್ರಿತಂ ಚ । ಈಶಾನಾಯ ಪ್ರಹುತಿಂ ಯಸ್ತ ಆನಟ್ ಪ್ರ ವೋ ವಾಯುಂ ರಥಯುಜಂ ಕೃಣುಧ್ವಂ । ಆ ೩-೮ । ಇತಿ ॥

ಹೇ ವಾಯೋ ಈಶಾನಾಯೇಶ್ವರಾಯ ತೇ ತುಭ್ಯಂ ತ್ವದರ್ಥಂ ಪ್ರಹುತಿಂ ಪ್ರಕೃಷ್ಟಾಮಾಹುತಿಂ ಚರುಪುರೋಡಾಶಾದಿಸಾಧ್ಯಾಂ ಯೋ ಯಜಮಾನ ಆನಟ್ ಪ್ರಾಪ್ನೋತ್ । ದದ್ಯಾದಿತ್ಯರ್ಥಃ । ತಥಾ ಹೇ ಶುಚಿಪಾಃ ಶುದ್ಧಸ್ಯ ಸೋಮಸ್ಯ ಪಾತರ್ವಾಯೋ ತುಭ್ಯಂ ಶುಚಿಂ ಶುದ್ಧಂ ಸೋಮಂ ಚ ಯಃ ಪ್ರಯ-ಚ್ಛತಿ ಮರ್ತ್ಯೇಷು ಮನುಷ್ಯೇಷು ಮಧ್ಯೇ ತಂ ಯಜಮಾನಂ ಪ್ರಶಸ್ತಂ ಮುಖ್ಯಂ ಕೃಣೋಷಿ । ಕರೋಷಿ । ಸ ಚ ಜಾತೋ ಜಾತಃ ಸರ್ವತ್ರ ಪ್ರಾದುರ್ಭೂತಃ ಪ್ರಖ್ಯಾತಃ ಸನ್ ವಾಜ್ಯಸ್ಯ ಪ್ರಾಪ್ತವ್ಯಸ್ಯ ಧನಸ್ಯ ಪ್ರಾಪ್ತಯೇ ಜಾಯತೇ । ಅವಕಲ್ಪತೇ । ಸರ್ವಂ ಧನಂ ಲಭತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುದೇವನೇ । ಈಶಾನಾಯ—ಸರ್ವೇಶ್ವರನಾದ । ತೇ—ನಿನ್ನನ್ನುದ್ದೇಶಿಸಿ । ಪ್ರಹುತಿಂ—ಚರುಪುರೋಡಾಶಯುಕ್ತವಾದ ಆಹುತಿಯನ್ನು । ಯಃ—ಯಾವ ಯಜಮಾನನು । ಆನಟ್—ಅರ್ಪಿಸುವನೋ (ಅಲ್ಲದೇ) । ಶುಚಿಪಾಃ—ಶುದ್ಧವಾದ ಸೋಮವನ್ನು ಪಾನಮಾಡತಕ್ಕ ಎಲೈ ವಾಯುವೇ । ತುಭ್ಯಂ—ನಿನಗೆ । ಶುಚಿಃ—ಶುದ್ಧವಾದ । ಸೋಮಂ—ಸೋಮರಸವನ್ನು (ಯಾವನು ಅರ್ಪಿಸುವನೋ) । ತಂ—ಆ ಯಜಮಾನನ್ನು । ಮರ್ತ್ಯೇಷು—ಮಾನವರ ನಡುವೆ । ಪ್ರಶಸ್ತಂ—ಅತ್ಯಂತ ಪ್ರಮುಖನನ್ನಾಗಿ । ಕೃಣೋಷಿ—ಮಾಡುತ್ತೀಯೆ । ಜಾತೋಜಾತಃ—ಆ ಯಜಮಾನನು ಸರ್ವತ್ರ ಉತ್ಪನ್ನನಾಗಿ ಎಂದರೆ ಪ್ರಖ್ಯಾತನಾಗಿ । ವಾಜ್ಯಸ್ಯ—ಧನದ ಪ್ರಾಪ್ತಿಗೆ । ಜಾಯತೇ—ಅರ್ಹತೆಯನ್ನು ಪಡೆಯುತ್ತಾನೆ.

॥ ಭಾವಾರ್ಥ ॥

ಎಲೈ ವಾಯುದೇವನೇ, ಸರ್ವೇಶ್ವರನಾದ ನಿನ್ನನ್ನುದ್ದೇಶಿಸಿ ಚರುಪುರೋಡಾಶಯುಕ್ತವಾದ ಆಹುತಿಯನ್ನು ಯಾವ ಯಜಮಾನನು ಅರ್ಪಿಸುವನೋ, ಅಲ್ಲದೇ ಶುದ್ಧವಾದ ಸೋಮವನ್ನು ಪಾನಮಾಡತಕ್ಕ ಎಲೈ ವಾಯುವೇ, ನಿನಗೆ ಶುದ್ಧವಾದ ಸೋಮರಸವನ್ನು ಯಾವನು ಅರ್ಪಿಸುವನೋ ಆ ಯಜಮಾನನನ್ನು ಮಾನವರ ನಡುವೆ ಅತ್ಯಂತ ಪ್ರಮುಖನನ್ನಾಗಿ ಮಾಡುತ್ತೀಯೆ. ಆ ಯಜಮಾನನು ಸರ್ವತ್ರ ಉತ್ಪನ್ನನಾಗಿ ಎಲ್ಲೆಲ್ಲೂ ಪ್ರಸಿದ್ಧನಾಗಿ ಪೂರ್ಣವಾದ ಧನಪ್ರಾಪ್ತಿಗೆ ಅರ್ಹತೆಯನ್ನು ಪಡೆಯುತ್ತಾನೆ.

English Translation

Drinker of Soma juice, Vayu, you elevetes him who among mortals offers to you who are the lord, an excellent oblation, the pure Soma: repeatedly born, he is born for the arquirement of wealth.

॥ ಸಂಹಿತಾಪಾಠಃ ॥

ರಾಯೇ ನು ಯಂ ಜಜ್ಞತೂ ರೋದಸೀಮೇ ರಾಯೇ ದೇವೀ ಧಿಷಣಾ
ಧಾತಿ ದೇವಂ ।
ಅಧ ವಾಯುಂ ನಿಯುತಃ ಸಶ್ಚತ ಸ್ವಾ ಉತ ಶ್ವೇತಂ ವಸುಧಿತಿಂ ನಿರೇಕೇ ॥

॥ ಪದಪಾಠಃ ॥

ರಾಯೇ । ನು । ಯಂ । ಜಜ್ಞತುಃ । ರೋದಸೀ ಇತಿ । ಇಮೇ ಇತಿ । ರಾಯೇ । ದೇವೀ । ಧಿಷಣಾ ।
ಧಾತಿ । ದೇವಂ ।

ಅಧ । ವಾಯುಂ । ನಿಽಯುತಃ । ಸಶ್ಚತ । ಸ್ವಾಃ । ಉತ । ಶ್ವೇತಂ । ವಸುಽಧಿತಿಂ । ನಿರೇಕೇ ॥ ೩ ॥

॥ ಸಾಯಣಭಾಷ್ಯಂ ॥

ನಿಯುತ್ವದ್ಗುಣ ವಿಶಿಷ್ಟವಾಯುದೇವತಾಕೇ ಪಶೌ ರಾಯೇ ನು ಯಮಿತಿ ಪುರೋಡಾಶಸ್ಯ ಯಾಜ್ಯಾ । ಸೂತ್ರಿತಂ ಚ । ರಾಯೇ ನು ಯಂ ಜಜ್ಞತೂ ರೋದಸೀಮೇ ಪ್ರ ವಾಯುಮಚ್ಛಾ ಬೃಹತೀ ಮನೀಷಾ । ಆ. ೩-೮ । ಇತಿ ॥

ಇಮೇ ರೋದಸೀ ದ್ಯಾವಾಪೃಥಿವ್ಯೌ ಯಂ ವಾಯುಂ ರಾಯೇ ಧನಾರ್ಥಂ ನು ಕ್ಷಿಪ್ರಂ ಜಜ್ಞತುಃ ಜನಯಾಮಾಸತುಃ ತಂ ದೇವಂ ದಾನಾದಿಗುಣಯುಕ್ತಂ ವಾಯುಂ ದೇವೀ ದ್ಯೋತಮಾನಾ ಧಿಷಣಾ ಸ್ತುತೀ ರಾಯೇ ಧನಾರ್ಥಂ ಧಾತಿ । ಧಾರಯತಿ । ಧನಂ ಯಥಾ ಲಭ್ಯತೇ ತಥಾ ಪ್ರೇರಯತೀತ್ಯರ್ಥಃ । ಅಧಾಧುನೈವಂ ಸ್ತುತೌ ಪ್ರವೃತ್ತಾಯಾಂ ಸ್ವಾಃ ಸ್ವಕೀಯಾ ನಿಯುತೋ ವಡವಾ ರಥವಾಹಾ ವಾಯುಂ ಸಶ್ಚತ । ಸಚಂತೇ । ಸೇವಂತೇ । ಉತಾಪಿ ಚ ಶ್ವೇತಂ ಶುಭ್ರವರ್ಣಂ ನಿರೇಕೇ । ನಿತರಾಂ ರೇಕೋ ರಿಕ್ತತಾ ನಿರೇಕಃ । ದಾರಿದ್ರ್ಯಮಿತ್ಯರ್ಥಃ । ತಸ್ಮಿನ್ಸತಿ ವಸುಧಿತಿಂ ವಸೂನಾಂ ಧಾತಾರಂ ಪ್ರದಾತಾರಂ ತಂ ವಾಯುಂ ನಿಯುತೋಽಸ್ಮದ್ಯಜ್ಞಂ ಪ್ರಾಪಯಂತೀತಿ ಶೇಷಃ ॥

॥ ಪ್ರತಿಪದಾರ್ಥ ॥

ಯಂ— ಯಾವ ವಾಯುವನ್ನು । ಇಮೇ ರೋದಸೀ— ಈ ದ್ಯಾವಾಪೃಥಿವಿಗಳೆರಡೂ । ನು— ಕ್ಷಿಪ್ರವಾಗಿ। ರಾಯೇ — ಧನದಾನಕ್ಕೋಸ್ಕರ । ಜಜ್ಞತುಃ— ಉತ್ಪನ್ನಮಾಡಿದವೋ । (ತಂ) ದೇವಂ– ದಾನಾದಿಗುಣಯುಕ್ತನಾದ ಅದೇ ವಾಯುವನ್ನು । ದೇವೀ— ಪ್ರಕಾಶಮಾನವಾದ । ಧಿಷಣಾ— ಸ್ತುತಿಯು । ರಾಯೇ— ಧನಾರ್ಥವಾಗಿ । ಧಾತಿ— ಧರಿಸುತ್ತದೆ । ಅಧ— ಸ್ತುತಿಪರನಕಾಲದಲ್ಲೇ । ಸ್ವಾಃ— ಅದೇ ವಾಯುವಿನ । ನಿಯುತಃ— ಅಶ್ವಗಳು । ವಾಯುಂ— ವಾಯುವನ್ನು । ಸಶ್ಚತ— ಸೇವಿಸುತ್ತವೆ । ಉತ— ಮತ್ತು । ಶ್ವೇತಂ — ಶುಭ್ರವರ್ಣವುಳ್ಳವನೂ । ವಸುಧಿತಿಂ — ಧನದಾತೃವೂ ಆದ ವಾಯುವನ್ನು । ನಿರೇಕೇ— ದಾರಿದ್ರ್ಯದಿಂದ ಅಭಿವೃತವಾದ ಪ್ರದೇಶಕ್ಕೆ ಕರೆತರುತ್ತವೆ.

॥ ಭಾವಾರ್ಥ ॥

ಯಾವ ವಾಯುವನ್ನು ಈ ದ್ಯಾವಾಪೃಥಿವಿಗಳೆರಡೂ ಕ್ಷಿಪ್ರವಾಗಿ ಧನದಾನಕ್ಕೋಸ್ಕರ ಉತ್ಪನ್ನಮಾಡಿದವೋ ಯಾವ ದಾನಾದಿಗುಣಯುಕ್ತನಾದ ಅದೇ ವಾಯುವನ್ನು ಪ್ರಕಾಶಮಾನವಾದ ಸ್ತುತಿಯು ಧನಾರ್ಥವಾಗಿ ಧರಿಸುವುದೋ ಅದೇವಾಯುವಿನ ಅಶ್ವಗಳು ಈ ಸ್ತುತಿಪಠನದ ಕಾಲದಲ್ಲೇ ಆತನನ್ನು ಸೇವಿಸುತ್ತಾ ಶುಭ್ರವರ್ಣವುಳ್ಳವನೂ ಧನದಾತೃವೂ ಆದ ವಾಯುದೇವನನ್ನು ದಾರಿದ್ರ್ಯದಿಂದ ಅಭಿವೃತವಾದ ಪ್ರದೇಶಕ್ಕೆ ಕರೆತರುತ್ತವೆ.

## English Translation

His own niyut steeds bear to the place of poverty the white-complexioned dispenser of wealth, Vayu, whom heaven and earth bore for the sake of riches, whom the divine language of praise sustains as a deity for the sake of riches.

। ವಿಶೇಷವಿಷಯಗಳು ।

ನಿಯುತ್ವಾನ್ ವಾಯುಃ ಎಂಬ ದೇವತೆಯನ್ನುದ್ದೇಶಿಸಿ ಮಾಡುವ ಪಶು ಹೋಮದಲ್ಲಿ ರಾಯೇ ನು ಯಂ ಎಂಬ ಈ ಋಕ್ಕನ್ನು ಪುರೋಡಾಶಹೋಮದ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— ರಾಯೇ ನು ಯಂ ಜಜ್ಞತೂ ರೋದಸೀಮೇ ಪ್ರ ವಾಯುಮಚ್ಛಾ ಬೃಹತೀ ಮನೀಷಾ । ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಉಚ್ಛನ್ನುಷಸಃ ಸುದಿನಾ ಅರಿಪ್ರಾ ಉರು ಜ್ಯೋತಿರ್ವಿವಿದುರ್ದೀಧ್ಯಾನಾಃ ।
ಗವ್ಯಂ ಚಿದೂರ್ವಮುಶಿಜೋ ವಿ ವವ್ರುಸ್ತೇಷಾಮನು ಪ್ರದಿವಃ ಸಸ್ರುರಾಪಃ ॥ ೪ ॥

। ಪದಪಾಠಃ ।

ಉಚ್ಛನ್ । ಉಷಸಃ । ಸುಽದಿನಾಃ । ಅರಿಪ್ರಾಃ । ಉರು । ಜ್ಯೋತಿಃ । ವಿವಿದುಃ । ದೀಧ್ಯಾನಾಃ ।
ಗವ್ಯಂ । ಚಿತ್ । ಊರ್ವಂ । ಉಶಿಜಃ । ವಿ । ವವ್ರುಃ । ತೇಷಾಂ । ಅನು । ಪ್ರಽದಿವಃ । ಸಸ್ರುಃ । ಆಪಃ ॥ ೪ ॥

। ಸಾಯಣಭಾಷ್ಯಂ ।

ದ್ವಿತೀಯೇ ಛಂದೋಮೇ ಪ್ರಉಗಶಸ್ತ್ರೇ ವಾಯವ್ಯತೃಚಸ್ಯೋಚ್ಛನ್ನುಷಸ ಇತಿ ತೃತೀಯಾ । ಸೂತ್ರಿತಂ ಚ । ಉಚ್ಛನ್ನುಷಸಃ ಸುದಿನಾ ಅರಿಪ್ರಾ ಇತ್ಯೇಕಪಾತಿನ್ಯಃ । ಆ. ೮-೧೦ । ಇತಿ ॥

ಯೇಽಂಗಿರಸೋ ವಾಯುಮಸ್ತೋಷತ ತೇಷಾಮರಿಪ್ರಾಃ ಪಾಪರಹಿತಾ ಉಷಸಃ ಸುದಿನಾಃ ಶೋಭನದಿನಸ್ಯ ಹೇತುಭೂತಾಃ ಸತ್ಯ ಉಚ್ಛನ್ । ಔಚ್ಛನ್ । ವ್ಯವಾಸಯನ್ । ತೇ ಚ ದೀಧ್ಯಾನಾ ದೀಪ್ಯಮಾನಾಃ ಸಂತ ಉರು ವಿಸ್ತೀರ್ಣಂ ಜ್ಯೋತಿಃ ಸೂರ್ಯಾಖ್ಯಂ ವಿವಿದುಃ । ವಾಯೋಃ ಪ್ರಸಾದಾದಲಭಂತ । ಅಪಿ ಚೋಶಿಜಃ ಕಾಮಯಮಾನಾಸ್ತೇಽಂಗಿರಸೋ ಗವ್ಯಂ ಚಿದ್ಗೋಸಂಘರೂಪಮಪ್ಯೂರ್ವಂ ಧನಂ ಪಣಿಭಿರಪಹೃತಂ ವಿ ವವ್ರುಃ । ವ್ಯವೃಣ್ವನ್ । ಆಲಭಂತ । ತಥಾ ತೇಷಾಮಂಗಿರಸಾಮರ್ಥಾಯ ಪ್ರದಿವಃ ಪುರಾಣ್ಯ ಆಪೋಽನು ಸಸ್ರುಃ । ಅನ್ವಸರನ್ । ಅನ್ವಗಚ್ಛನ್ । ಹಿತಾಹಿತಾಚರಣಪರಾ ಆಸನ್ನಿತ್ಯರ್ಥಃ । ಆವರಕಸ್ಯಾಸುರಸ್ಯ ವಾಯುನಾ ಹನನಾದಸುರೇಣಾಪಹೃತಾ ಪಶುಪ್ರಭೃತೀನ್ ಪುನರ್ಲಬ್ಧವಂತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

(ವಾಯುಪೂಜಕರಾದ ಅಂಗಿರಸ್ಸುಗಳಿಗಾಗಿ) ಅರಿಪ್ರಾಃ—ಪಾಪರಹಿತಗಳಾದ । ಉಷಸಃ—ಉಷಸ್ಸುಗಳು । ಸುದಿನಾಃ— ಉತ್ತಮವಾದ ದಿನಗಳಿಗೆ ಕಾರಣಭೂತವಾಗಿ । ಉಚ್ಛನ್—ಆವಿರ್ಭವಿಸಿದವು । ತೇ — ಆದ

ಅಂಗಿರಸ್ಸುಗಳು । ದೀಧ್ಯಾನಾಃ—ಪ್ರಕಾಶಯುಕ್ತರಾಗಿ । ಉರು—ವಿಸ್ತೃತವಾದ । ಜ್ಯೋತಿಃ—ಸೂರ್ಯಜ್ಯೋತಿಯನ್ನು । ವಿವಿದುಃ—ಪಡೆದರು । ಉಶಿಜಃ—ಗೋವುಗಳನ್ನು ಪಡೆಯಲಿಚ್ಛಿಸಿದ ಅದೇ ಅಂಗಿರಸ್ಸುಗಳು । ಗವ್ಯಂ ಚಿತ್—ಗೋಸಂಘರೂಪವಾದ । ಊರ್ವಂ—ಧನವನ್ನು । ವಿ ವವ್ರುಃ—(ಅವುಗಳನ್ನು ಅಪಹರಿಸಿದ ಪಣಿಗಳಿಂದ) ಪಡೆದರು । ಏಭ್ಯಃ—ಈ ಅಂಗಿರಸ್ಸುಗಳಿಗಾಗಿಯೇ । ಪ್ರದಿವಃ—ಪುರಾತನಗಳಾದ । ಆಪಃ—ಉದಕಗಳು । ಅನು ಸಸ್ರುಃ—ಪ್ರವಹಿಸಿದವು.

॥ ಭಾವಾರ್ಥ ॥

ವಾಯುಪೂಜಕರಾದ ಅಂಗಿರಸ್ಸುಗಳಿಗಾಗಿಯೇ ಪಾಪರಹಿತಗಳಾದ ಉಷಸ್ಸುಗಳು ಉತ್ತಮವಾದ ದಿನಗಳಿಗೆ ಕಾರಣಭೂತವಾಗಿ ಆವಿರ್ಭೂತವಾದವು. ಅದೇ ಅಂಗಿರಸ್ಸುಗಳು ಪ್ರಕಾಶಯುಕ್ತರಾಗಿ ವಿಸ್ತೃತವಾದ ಸೂರ್ಯಜ್ಯೋತಿಯನ್ನು ಪಡೆದರು. ಗೋವುಗಳನ್ನು ಪಡೆಯಲಿಚ್ಛಿಸಿದ ಅದೇ ಅಂಗಿರಸ್ಸುಗಳ ಗೋಸಂಘರೂಪವಾದ ಧನವನ್ನು ಅವುಗಳನ್ನು ಅಪಹರಿಸಿದ ಪಣಿಗಳಿಂದ ಪಡೆದರು. ಈ ಅಂಗಿರಸ್ಸುಗಳಿಗಾಗಿಯೇ ಪುರಾತನಗಳಾದ ಉದಕಗಳು ಪ್ರವಹಿಸಿದವು.

## English Translation

The blameless dawns (ushering) bright days have broken, and, shining radiantly, (the Angirasas) have obtained the vast light (the sun): desirous (to recover it) they have obtained their wealth of cattle, and the ancient waters have subsequently issued for their good.

॥ ವಿಶೇಷವಿಷಯಗಳು ॥

ದ್ವಿತೀಯ ಛಂದೋಮ ಮಂತ್ರ ಪಠನಕಾಲದಲ್ಲಿ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸುವಾಗ ಉಚ್ಛನ್ನುಷಸಃ ಎಂಬ ಈ ಸೂಕ್ತವನ್ನು ವಾಯವ್ಯ ತೃಚದಲ್ಲಿ (ವಾಯುದೇವತಾಕವಾದ ಮೂರು ಸೂಕ್ತಗಳಲ್ಲಿ) ಮೂರನೆಯ ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಉಚ್ಛನ್ನುಷಸಃ ಸುದಿನಾ ಅರಿಪ್ರಾ ಇತ್ಯೇಕಪಾತಿನ್ಯಃ ಎಂಬ ಸೂತ್ರದಿಂದ (ಆ. ೮.೧೦) ವಿವೃತವಾಗಿರುವುದು.

॥ ಸಂಹಿತಾಪಾಠ ॥

ತೇ ಸತ್ಯೇನ ಮನಸಾ ದೀಧ್ಯಾನಾಃ ಸ್ವೇನ ಯುಕ್ತಾಸಃ ಕ್ರತುನಾ ವಹಂತಿ ।
ಇಂದ್ರವಾಯೂ ವೀರವಾಹಂ ರಥಂ ವಾಮೀಶಾನಯೋರಭಿ ಪೃಕ್ಷಃ ಸಚಂತೇ ॥ ೫ ॥

॥ ಪದಪಾಠ: ॥

ತೇ । ಸತ್ಯೇನ । ಮನಸಾ । ದೀಧ್ಯಾನಾಃ । ಸ್ವೇನ । ಯುಕ್ತಾಸಃ । ಕ್ರತುನಾ । ವಹಂತಿ ।
ಇಂದ್ರವಾಯೂ ಇತಿ । ವೀರऽವಾಹಂ । ರಥಂ । ವಾಂ । ಈಶಾನಯೋಃ । ಅಭಿ । ಪೃಕ್ಷಃ । ಸಚಂತೇ ॥

॥ ಸಾಯಣಭಾಷ್ಯಂ ॥

ತೃತೀಯೇ ಛಂದೋಮೇ ಪ್ರಉಗಶಸ್ತ್ರೇ ತೇ ಸತ್ಯೇನೇತ್ಯೈಂದ್ರವಾಯವಸ್ತೃಚಃ। ಸೂತ್ರಿತಂ ಚ। ತೇ ಸತ್ಯೇನ ಮನಸಾ ದೀಧ್ಯಾನಾ ದಿವಿ ಕ್ಷಯಂತಾ ರಜಸಃ ಪೃಥಿವ್ಯಾಂ । ಆ. ೮-೧೧ । ಇತಿ ॥

ತೇ ಪ್ರಸಿದ್ಧಾಃ ಸತ್ಯೇನ ಯಥಾರ್ಥೇನ ಮನಸಾ ಮನನೀಯೇನ ಸ್ತೋತ್ರೇಣ ಯುಕ್ತಾ ದೀಧ್ಯಾನಾ ದೀಪ್ಯಮಾನಾಃ ಸ್ವೇನ ಸ್ವಕೀಯತ್ವೇ ವಿಹಿತೇನ ಕ್ರತುನಾ ಕರ್ಮಣಾ ನಿತ್ಯನೈಮಿತ್ತಿಕಾತ್ಮನಾ ಯುಕ್ತಾಸೋ ಯುಕ್ತಾ ಏವಂಭೂತಾ ಯಜಮಾನಾ ಹೇ ಇಂದ್ರವಾಯೂ ವೀರವಾಹಂ ವೀರ್ಯವಿಶೇಷೈರಿರಯಿತೃಭಿಃ ಸ್ತೋತೃಭಿರ್ವಹನೀಯಂ ಪ್ರಾಪಣೀಯಂ । ಯದ್ವಾ । ವೀರೈರಶ್ವೈರ್ವಹನೀಯಂ । ತಮೀಶಾನಯೋರೀಶ್ವರಯೋರ್ವಾಂ ಯುವಯೋಃ ಸ್ವಭೂತಂ ರಥಂ ವಹಂತಿ । ಸ್ವಂ ಸ್ವಂ ಯಜ್ಞಂ ಪ್ರಾಪಯಂತಿ । ತತ್ರ ಚ ಪೃಕ್ಷೋಽನ್ನಾನಿ ಹವಿರ್ಲಕ್ಷಣಾನ್ಯಭಿ ಸಚಂತೇ । ಯುವಾಮಭಿಸೇವಂತೇ ॥

॥ ಪ್ರತಿಪದಾರ್ಥ ॥

ಇಂದ್ರವಾಯೂ—ಎಲೈ ಇಂದ್ರ ಮತ್ತು ವಾಯುದೇವತೆಗಳೇ । ತೇ—ಪ್ರಸಿದ್ಧರೂ । ಸತ್ಯೇನ—ಸತ್ಯಾತ್ಮಕವಾದುದೂ । ಮನಸಾ—ಧ್ಯಾನಾತ್ಮಕವಾದುದೂ ಆದ ಸ್ತುತಿಯಿಂದ ಕೂಡಿ । ದೀಧ್ಯಾನಾಃ—ಪ್ರಕಾಶಿಸುವವರೂ । ಸ್ವೇನ— ತಮಗೆ ವಿಹಿತವಾದ । ಕ್ರತುನಾ—ನಿತ್ಯಕರ್ಮಗಳಿಂದ । ಯುಕ್ತಾಸಃ—ಕೂಡಿರುವವರೂ ಆದ ಯಜಮಾನರು । ಈಶಾನಯೋಃ—ಸರ್ವೇಶ್ವರರಾದ । ವಾಂ—ನಿಮ್ಮ । ವೀರವಾಹಂ—ವೀರ್ಯಯುಕ್ತವಾದ ಅಶ್ವಗಳಿಂದ ವಹಿಸಲ್ಪಡುವ । ರಥಂ—ರಥವನ್ನು । ವಹಂತಿ—ತಮ್ಮ ತಮ್ಮ ಯಜ್ಞಕ್ಕೆ ಕರೆದೊಯ್ಯುತ್ತಾರೆ । ಪೃಕ್ಷಃ—ಹವಿಸ್ಸಿನ ರೂಪದ ಅನ್ನಗಳು । ಅಭಿ ಸಚಂತೇ—(ಆ ಯಜ್ಞದಲ್ಲಿ) ನಿಮ್ಮನ್ನು ಸೇವಿಸುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುದೇವತೆಗಳೇ, ಸತ್ಯಾತ್ಮಕವಾದುದೂ ಧ್ಯಾನಾತ್ಮಕವಾದುದೂ ಆದ ಸ್ತುತಿಯಿಂದ ಕೂಡಿ ಪ್ರಕಾಶಿಸುವವರೂ ತಮಗೆ ವಿಹಿತವಾದ ನಿತ್ಯಕರ್ಮಗಳಿಂದ ಕೂಡಿರುವವರೂ ಆದ ಯಜಮಾನರು ಸರ್ವೇಶ್ವರರಾದ ನಿಮ್ಮ ವೀರ್ಯಯುಕ್ತವಾದ ಅಶ್ವಗಳಿಂದ ವಹಿಸಲ್ಪಡುವ ರಥವನ್ನು ತಮ್ಮ ತಮ್ಮ ಯಜ್ಞಕ್ಕೆ ಕರೆದೊಯ್ಯುತ್ತಾರೆ. ಆ ಯಜ್ಞದಲ್ಲಿ ಹವಿಸ್ಸಿನ ರೂಪದ ಅನ್ನಗಳು ನಿಮ್ಮನ್ನು ಸೇವಿಸುತ್ತವೆ.

## English Translation

Those (worshippers) illustrious by sincere adoration, assiduous in the discharge of their own duties, bring to you, Indra and Vayu, a hero-bearing chariot, and present to you, two sovereigns, (sacrificial) food.

॥ ವಿಶೇಷವಿಷಯಗಳು ॥

ತೃತೀಯ ಛಂದೋಮಮಂತ್ರಪಠನಕಾಲದಲ್ಲಿ ಪ್ರಉಗಶಸ್ತ್ರಮಂತ್ರಗಳಿಗಾಗಿ ತೇ ಸತ್ಯೇನ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಐಂದ್ರವಾಯವತೃಚವನ್ನಾಗಿ ( ಇಂದ್ರವಾಯುದೇವತಾಕವಾದ ಮೂರು

ಋಕ್ಕುಗಳು) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ತೇ ಸತ್ಯೇನ ಮನಸಾ ದೀಧ್ಯಾನಾ ದಿವಿ ಕ್ಷಯಂತಾ ರಜಸಃ ಪೃಥಿವ್ಯಾಂ ಎಂಬ ಸೂತ್ರದಿಂದ (ಅ. ೮-೧೧) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಈಶಾನಾಸೋ ಯೇ ದಧತೇ ಸ್ವರ್ಣೋ ಗೋಭಿರಶ್ವೇಭಿರ್ವಸುಭಿರ್ಹಿರಣ್ಯೈಃ ।
ಇಂದ್ರವಾಯೂ ಸೂರಯೋ ವಿಶ್ವಮಾಯುರರ್ವದ್ಭಿರ್ವೀರೈಃ ಪೃತನಾಸು ಸಹ್ಯುಃ ॥ ೬ ॥

॥ ಪದಪಾಠಃ ॥

ಈಶಾನಾಸಃ । ಯೇ । ದಧತೇ । ಸ್ವಃ । ನಃ । ಗೋಭಿಃ । ಅಶ್ವೇಭಿಃ । ವಸುಽಭಿಃ । ಹಿರಣ್ಯೈಃ । ಇಂದ್ರವಾಯೂ ಇತಿ । ಸೂರಯಃ । ವಿಶ್ವಂ । ಆಯುಃ । ಅರ್ವತ್ಽಭಿಃ । ವೀರೈಃ । ಪೃತನಾಸು । ಸಹ್ಯುಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರವಾಯೂ ಈಶಾನಾಸ ಈಶ್ವರಾಃ ಪ್ರಭವೋ ಯೇ ಜನಾ ನೋಽಸ್ಮಭ್ಯಂ ಗೋಭಿರಶ್ವೇಭಿರಶ್ವೈರ್ವಸುಭಿರ್ನಿವಾಸಕೈರ್ಹಿರಣ್ಯೈಶ್ಚ ಸಹಿತಂ ಸ್ವಃ ಸುಷ್ಠ್ವರಣೀಯಂ ಸುಖಂ ದಧತೇ ದದತಿ ಪ್ರಯಚ್ಛಂತಿ । ಯದ್ವಾ । ಹಿರಣ್ಯವ್ಯತಿರಿಕ್ತಾನಿ ಧನಾನಿ ವಸೂನಿ । ತೈರ್ಹಿರಣ್ಯೈಶ್ಚ ಸಹೇತ್ಯರ್ಥಃ । ತೇ ಸೂರಯೋ ದಾತಾರೋ ವಿಶ್ವಂ ವ್ಯಾಪ್ತಮಾಯುರನ್ನಂ ಜೀವನಂ ವಾ ಶತ್ರೂಣಾಂ ಸ್ವಭೂತಂ ಪೃತನಾಸು ಸಂಗ್ರಾಮೇಷ್ವರ್ವದ್ಭಿರಶ್ವೈರ್ವೀರೈಃ ಸೂರಭಟೈಶ್ಚ ಸಾಧನಭೂತೈಃ ಸಹ್ಯುಃ । ಅಭಿಭವೇಯುಃ । ಯದ್ವಾ । ಸಹಾರ್ಥೇ ತೃತೀಯಾ । ಅರ್ವದ್ಭಿರ್ವೀರೈಃ ಪುತ್ರೈಶ್ಚ ಸಹಿತಂ ಶತ್ರೂಣಾಮಾಯುರಭಿಭವೇಯುರಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಂದ್ರವಾಯೂ**—ಎಲೈ ಇಂದ್ರ ಮತ್ತು ವಾಯುದೇವತೆಗಳೇ । **ಈಶಾನಾಸಃ**-ಪ್ರಭುಗಳಾದ । **ಯೇ**—ಯಾವ ಯಜಮಾನರು । **ನಃ**—ನಮಗೆ । **ಗೋಭಿಃ**—ಗೋವುಗಳಿಂದ ಕೂಡಿದುದೂ । **ಅಶ್ವೇಭಿಃ**—ಅಶ್ವಗಳಿಂದ ಕೂಡಿದುದೂ । **ವಸುಭಿಃ**—ನಿವಾಸಸ್ಥಾನಗಳಿಂದ ಕೂಡಿದುದೂ । **ಹಿರಣ್ಯೈಃ**—ಸುವರ್ಣಮಯವಾದುದೂ ಆದ । **ಸ್ವಃ**—ಸುಖಜೀವನವನ್ನು । **ದಧತೇ**—ಕಲ್ಪಿಸಿಕೊಡುವರೋ । (**ತೇ**) **ಸೂರಯಃ**—ಅಂತಹ ದಾತೃಗಳು । **ಪೃತನಾಸು**—ಸಂಗ್ರಾಮಗಳಲ್ಲಿ । **ಅರ್ವದ್ಭಿಃ**—ಶ್ವಗಳಿಂದ ಕೂಡಿದವೂ । **ವೀರೈಃ**—ವೀರಪುತ್ರಾದಿಗಳಿಂದ ಕೂಡಿದವೂ । **ವಿಶ್ವಂ**—ಸರ್ವವ್ಯಾಪಕವಾದವೂ ಆದ । **ಆಯುಃ**—ಅನ್ನವನ್ನೂ ಮತ್ತು ಜೀವನವನ್ನೂ । **ಸಹ್ಯುಃ**—ಶತ್ರುಗಳಿಂದ ಜಯಿಸಿ ಪಡೆಯಲಿ.

। ಭಾವಾರ್ಥ ।

ಎಲೈ ಇಂದ್ರ ಮತ್ತು ವಾಯುದೇವತೆಗಳೇ, ಪ್ರಭುಗಳಾದ ಯಾವ ಯಜಮಾನರು ನಮಗೆ ಗೋಯುಕ್ತವಾದುದೂ, ಅಶ್ವಯುಕ್ತವಾದುದೂ, ನಿವಾಸಸ್ಥಾನಗಳಿಂದ ಕೂಡಿದುದೂ, ಹಿರಣ್ಯಸಂಪದ್ಯುಕ್ತವಾದುದೂ ಆದ ಸುಖಜೀವನವನ್ನು ಕಲ್ಪಿಸಿಕೊಡುವರೋ ಅಂತಹ ದಾತೃಗಳು ಸಂಗ್ರಾಮಗಳಲ್ಲಿ ಅಶ್ವಗಳಿಂದ ಕೂಡಿದವೂ, ವೀರಪುತ್ರಾದಿಗಳಿಂದ ಕೂಡಿದವೂ, ಸರ್ವವ್ಯಾಪಕವಾದವೂ ಆದ ಅನ್ನವನ್ನೂ ಮತ್ತು ಜೀವನವನ್ನೂ ಶತ್ರುಗಳಿಂದ ಜಯಿಸಿ ಪಡೆಯಲಿ.

## English Translation

May those munificent princes who confer upon us prosperity by gifts of cattle, horses, treasure, gold, overcome, Indra and Vayu, the entire existence (of their enemies) in contests with horses and with heroes.

। ಸಂಹಿತಾಪಾಠಃ ।

ಅರ್ವಂತೋ ನ ಶ್ರವಸೋ ಭಿಕ್ಷಮಾಣಾ ಇಂದ್ರವಾಯೂ ಸುಷ್ಟುತಿ-
ಭಿರ್ವಸಿಷ್ಠಾಃ ।
ವಾಜಯಂತಃ ಸ್ವವಸೇ ಹುವೇಮ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥

॥ ಪದಪಾಠಃ ॥

ಅರ್ವಂತಃ । ನ । ಶ್ರವಸಃ । ಭಿಕ್ಷಮಾಣಾಃ । ಇಂದ್ರವಾಯೂ ಇತಿ । ಸುಸ್ತುತಿಽಭಿಃ । ವಸಿಷ್ಠಾಃ ।
ವಾಜಽಯಂತಃ । ಸು । ಅವಸೇ । ಹುವೇಮ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೬ ॥

॥ ಸಾಯಣಭಾಷ್ಯಂ ॥

ಅರ್ವಂತೋ ನಾಶ್ವಾ ಇವ ಹವಿಷಾಂ ವೋಢಾರಃ ಶ್ರವಸೋಽನ್ನಸ್ಯ । ದ್ವಿತೀಯಾರ್ಥೇ ಷಷ್ಠೀ । ಅನ್ನಂ ಭಿಕ್ಷಮಾಣಾ ಯಾಚಮಾನಾ ವಾಜಯಂತೋ ವಾಜಂ ಬಲಮಾತ್ಮನ ಇಚ್ಛಂತೋ ವಸಿಷ್ಠಾ ವಯಂ ಸ್ವವಸೇ ಶೋಭನರಕ್ಷಣಾಯ ಸುಷ್ಠುತರ್ಪಣಾಯ ವಾ ಸುಷ್ಟುತಿಭಿಃ ಶೋಭನಾಭಿಃ ಸ್ತುತಿಭಿರಿಂದ್ರವಾಯೂ ಇಂದ್ರಂ ವಾಯುಂ ಚ ಹುವೇಮ । ಆಹ್ವಯೇಮಹಿ । ಅನ್ಯದ್ಗತಂ ॥

। ಪ್ರತಿಪದಾರ್ಥ ।

ಶ್ರವಸಃ—ಅನ್ನವನ್ನು । ಭಿಕ್ಷಮಾಣಾಃ—ಯಾಚಿಸುವವರೂ । ವಾಜಯಂತಃ—ಶಕ್ತಿಯನ್ನಿಚ್ಛಿಸುವವರೂ । ವಸಿಷ್ಠಾಃ—ವಸಿಷ್ಠವಂಶದವರೂ ಆದ ನಾವು । ಅರ್ವಂತೋ ನ—ಅಶ್ವಗಳು ಭಾರವನ್ನು ವಹಿಸುವಂತೆ

ನಾವೂ ಹವಿಸ್ಸನ್ನು ವಹಿಸಿಕೊಡುವವರಾಗಿ । **ಸ್ತವಸೇ**— ಉತ್ತಮವಾದ ರಕ್ಷಣೆಗಾಗಿ । **ಸುಷ್ಟುತಿಭಿಃ**–ಉತ್ತಮವಾದ ಸ್ತುತಿಗಳಿಂದ । **ಇಂದ್ರವಾಯೂ**—ಇಂದ್ರ ಮತ್ತು ವಾಯುದೇವತೆಗಳನ್ನು । **ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ (ಎಲೈ ಇಂದ್ರಾದಿದೇವತೆಗಳೇ) । **ಯೂಯಂ** – ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ** ಕಲ್ಯಾಣಗಳಿಂದ । **ಪಾತ** —ರಕ್ಷಿಸಿರಿ.

॥ ಭಾವಾರ್ಥ ॥

ಅನ್ನವನ್ನು ಯಾಚಿಸುವವರೂ, ಶಕ್ತಿಯನ್ನಿಚ್ಛಿಸುವವರೂ, ವಸಿಷ್ಠವಂಶದವರೂ ಆದ ನಾವು ಅಶ್ವಗಳು ಭಾರವನ್ನು ವಹಿಸುವಂತೆ ನಾವೂ ಹವಿಸ್ಸನ್ನು ವಹಿಸಿಕೊಂಡವರಾಗಿ ಉತ್ತಮವಾದ ರಕ್ಷಣೆಗಾಗಿ ಉತ್ತಮವಾದ ಸ್ತುತಿಗಳಿಂದ ಇಂದ್ರ ಮತ್ತು ವಾಯುದೇವತೆಗಳನ್ನು ಪ್ರಾರ್ಥಿಸಿ ಕರೆಯುತ್ತೇವೆ. ಎಲೈ ಇಂದ್ರಾದಿದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

### English Translation

We, Vasishthas, (bearing oblations) like horses (bearing burdens) soliciting food, desiring strength, invoke with praises Indra and Vayu for (our) sure defence: ever cherish us with blessings



## ತೊಂಭತ್ತೊಂದನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಕುವಿದಂಗೇತಿ ಸಪ್ತರ್ಚಂ ದ್ವಿತೀಯಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವಾಯವ್ಯಂ । ಕುವಿದಂಗೇತ್ಯನುಕ್ರಾಂತಂ ॥ ಗತಃ ಸೂಕ್ತವಿನಿಯೋಗಃ ॥ ವಾಯವ್ಯೇ ಪಶೌ ಕುವಿದಂಗೇತಿ ವಪಾಯಾ ಯಾಜ್ಯಾ । ಸೂತ್ರಿತಂ ಚ । ಕುವಿದಂಗ ನಮಸಾ ಯೇ ವೃಧಾಸ ಈಶಾನಾಯ ಪ್ರಹುತಿಂ ಯಸ್ತ ಆನಟ್ । ಆ. ೩-೮ । ಇತಿ ॥**

ಅನುವಾದವು—**ಕುವಿದಂಗ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ವಾಯುವು ದೇವತೆಯು; ತ್ರಿಷ್ಟುಪ್ ಛಂದಸ್ಸು, ಅನುಕ್ರಮಣಿಕೆಯಲ್ಲಿ—**ಕುವಿದಂಗ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ವಾಯುದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ **ಕುವಿದಂಗ** ಎಂಬ ಈ ಋಕ್ಕನ್ನು ವಪಾಹೋಮದ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಕುವಿದಂಗ ನಮಸಾ ಯೇ ವೃಧಾಸ ಈಶಾನಾಯ ಪ್ರಹುತಿಂ ಯಸ್ತ ಆನಟ್** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

## ಸೂಕ್ತ—೯೧

ಮಂಡಲ—೭ ॥ ಅನುವಾಕ—೬ ॥ ಸೂಕ್ತ—೯೧ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೧೩ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ವಸಿಷ್ಠಃ ॥
ದೇವತಾ—೧-೩, ವಾಯುಃ । ೨, ೪-೭ ಇಂದ್ರವಾಯೂ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಕುವಿದಂಗ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್ ।
ತೇ ವಾಯವೇ ಮನವೇ ಬಾಧಿತಾಯಾವಾಸಯನ್ನುಷಸಂ ಸೂರ್ಯೇಣ ।

॥ ಪದಪಾಠಃ ॥

ಕುವಿತ್ । ಅಂಗ । ನಮಸಾ । ಯೇ । ವೃಧಾಸಃ । ಪುರಾ । ದೇವಾಃ । ಅನವದ್ಯಾಸಃ । ಆಸನ್ ।
ತೇ । ವಾಯವೇ । ಮನವೇ ಬಾಧಿತಾಯ । ಅವಾಸಯನ್ । ಉಷಸಂ । ಸೂರ್ಯೇಣ ॥ ೧ ॥

॥ ಸಾಯಣಭಾಷ್ಯಂ ॥

ದೀವ್ಯಂತಿ ಸ್ತುವಂತೀತಿ ದೇವಾಃ ಸ್ತೋತಾರಃ । ಪುರಾ ಪೂರ್ವಸ್ಮಿನ್ಕಾಲೇ ಯೇ ವೃಧಾಸೋ ವೃದ್ಧಾ ದೇವಾಃ ಸ್ತೋತಾರಃ । ಕುವಿದಿತಿ ಬಹುನಾಮ । ಅಂಗೇತಿ ಕ್ಷಿಪ್ರನಾಮ । ಕುವಿದ್ಬಹುಶೋಽಙ್ಗ ಕ್ಷಿಪ್ರಂ ಕೃತೇನ ನಮಸಾ ವಾಯುವಿಷಯೇಣ ಸ್ತೋತ್ರೇಣ ನಮಸ್ಕಾರೇಣ ವಾನವದ್ಯಾಸೋಽವದ್ಯರಹಿತಾ ಆಸನ್ ತೇಽದ್ಯಾಪಿ ವಾಯವೇ ಹವೀಂಷಿ ದಾತುಂ ಸೂರ್ಯೇಣ ಸಹೋಷಸಮವಾಸಯನ್ । ಉಷಸೋ ವ್ಯುಷ್ಟಿಂ ಸೂರ್ಯೋದಯಂ ಚ ವಾಯುಯಾಗಾರ್ಥಂ ಕುರ್ವಂತೀತ್ಯರ್ಥಃ । ಕಮರ್ಥಂ । ಮನವೇ । ಮನಷ್ಯಾಣಾಂ ಬಾಧಿತಾಯ ಬಾಧಿತಾನಾಂ ಪುತ್ರಾದೀನಾಂ ರಕ್ಷಣಾರ್ಥಮಿತ್ಯರ್ಥಃ । ಯದ್ವಾ । ಮನವೇ ಬಾಧಿತಾಯೇತಿ ಷಷ್ಠ್ಯರ್ಥೇ ಚತುರ್ಥ್ಯೌ । ಬಾಧಿತಸ್ಯ ಮನೋಃ ಪ್ರಜಾಪತೇರ್ಯಾಗೇ ವಾಯವೇ ಹವೀಂಷಿ ದಾತುಮಿತ್ಯನ್ವಯಃ ॥

॥ ಪ್ರತಿಪದಾರ್ಥ ॥

ಪುರಾ—ಪೂರ್ವಕಾಲದಲ್ಲಿ । ವೃಧಾಸಃ—ವೃದ್ಧರಾದ । ಯೇ ದೇವಾಃ—ಯಾವ ಸ್ತೋತೃಗಳು । ಕುವಿತ್—ಅನೇಕವಾಗಿ । ಅಂಗ—ಕ್ಷಿಪ್ರವಾಗಿ ನೆರವೇರಿಸಿದ । ನಮಸಾ—ವಾಯುವನ್ನು ಪ್ರಶಂಸಿಸಿದ ಸ್ತೋತ್ರದಿಂದ । ಅನವದ್ಯಾಸಃ—ಪಾಪರಹಿತರಾಗಿ । ಆಸನ್—ಆಗಿದ್ದರೋ । ತೇ—ಅದೇ ಸ್ತೋತೃಗಳು (ಈಗಲೂ ಸಹ) । ವಾಯವೇ—ವಾಯುವಿಗೆ ಹವಿಸ್ಸನ್ನರ್ಪಿಸಲು । ಸೂರ್ಯೇಣ—ಸೂರ್ಯನ ಜೊತೆಯಲ್ಲಿ ।

ಉಷಸಂ—ಉಷಸ್ಸನ್ನು। ಬಾಧಿತಾಯ—ಶತ್ರುಗಳಿಂದ ಬಾಧಿತರಾದ। ಮನವೇ—ಮಾನವ ಪುತ್ರರ ರಕ್ಷಣಾರ್ಥವಾಗಿ। ಆವಿಃ ಚಕ್ರುಃ—ತೇಜಸ್ಸಿನೊಡನೆ ಆವಿರ್ಭೂತವಾಗುವಂತೆ ಮಾಡಿದರು.

॥ ಭಾವಾರ್ಥ ॥

ವೃದ್ಧರಾದ ಯಾವ ಸ್ತೋತೃಗಳು ಪೂರ್ವದಲ್ಲೆಲ್ಲಾ ಅನೇಕಪ್ರಕಾರವಾಗಿ ನಿಯಮಾನುಸಾರವಾಗಿ ನಿರವೇಚಿಸಿದುದೂ, ವಾಯುವನ್ನು ಪ್ರಶಂಸಿಸಿದುದೂ ಆದ ಸ್ತೋತ್ರದಿಂದ ಪಾಪರಹಿತರಾದರೋ, ಅದೇ ಸ್ತೋತೃಗಳು ಈಗಲೂ ಸಹ ಶತ್ರುಗಳಿಂದ ಬಾಧಿತರಾದ ಮಾನವಪುತ್ರರ ರಕ್ಷಣಾರ್ಥವಾಗಿ ವಾಯುವಿಗೆ ಹವಿಸ್ಸನ್ನರ್ಪಿಸಲು ಸೂರ್ಯನ ಜೊತೆಯಲ್ಲಿ ಉಷಸ್ಸನ್ನೂ ಸಹ ತೇಜಸ್ಸಿನೊಡನೆ ಆವಿರ್ಭೂತವಾಗುವಂತೆ ಮಾಡಿದರು.

## English Translation

Those venerable worshippers, who by promptly and frequently (adoring Vayu) with reverence were formerly free from reproach, have now illumined Ushas and the sun for sacrificing to Vayu and (the preservation of) embarrassed mankind.

॥ ಸಂಹಿತಾಪಾಠಃ ॥

ಉಶಂತಾ ದೂತಾ ನ ದಭಾಯ ಗೋಪಾ ಮಾಸಶ್ಚ ಪಾಥಃ ಶರದಶ್ಚ ಪೂರ್ವೀಃ ।
ಇಂದ್ರವಾಯೂ ಸುಷ್ಟುತಿರ್ವಾಮಿಯಾನಾ ಮಾರ್ಡೀಕಮೀಟ್ಟೇ ಸುವಿತಂ ಚ ನವ್ಯಂ ॥ ೨ ॥

॥ ಪದಪಾಠಃ ॥

ಉಶಂತಾ । ದೂತಾ । ನ । ದಭಾಯ । ಗೋಪಾ । ಮಾಸಃ । ಚ । ಪಾಥಃ । ಶರದಃ । ಚ । ಪೂರ್ವೀಃ ।
ಇಂದ್ರವಾಯೂ ಇತಿ । ಸುಽಸ್ತುತಿಃ । ವಾಂ । ಇಯಾನಾ । ಮಾರ್ಡೀಕಂ । ಈಟ್ಟೇ । ಸುವಿತಂ । ಚ । ನವ್ಯಂ ॥ ೨ ॥

॥ ಸಾಯಣಭಾಷ್ಯಂ ॥

ದ್ವಿತೀಯೇ ಛಂದೋಮೇ ಪ್ರಉಗಶಸ್ತ್ರ ಐಂದ್ರವಾಯವತೃಚಸ್ಯೋಶಂತೇತ್ಯೇಷಾ ಪ್ರಥಮಾ। ಸೂತ್ರಿತಂ ಚ। ಉಶಂತಾ ದೂತಾ ನ ದಭಾಯ ಗೋಪಾ ಯಾವತ್ತರಸ್ತನ್ವೋ ಯಾವದೋಜ ಇತ್ಯೇಕಾ ದ್ವೇ ಚ। ಆ. ೮-೧೦। ಇತಿ॥

ಹೇ ಇಂದ್ರವಾಯೂ ಉಶಂತೋಂಶತೌ ಕಾಮಯಮಾನೌ ದೂತೌ ॥ ದೇವತೇರ್ಗತಿಕರ್ಮಣೋ ದೂತಶಬ್ದಃ ॥ ಗಂತಾರೌ ಗೋಪಾ ಗೋಪಾಯಿತಾರಾವೀದೃಶೌ ಯುವಾಂ ದಧಾಯ ಹಿಂಸಾಯೈ ನ ಭವತಂ । ಅಪಿ ತು ಮಾಸೋ ಮಾಸಾಂಶ್ಚ ಪೂರ್ವೀರ್ಬಹ್ವೀಃ ಶರದಃ ಸಂವತ್ಸರಾಂಶ್ಚ ಚಿರಕಾಲಮಸ್ಮಾನ್ ಪಾಥಃ । ರಕ್ಷತಂ । ಅಪಿ ಚ ಹೇ ಇಂದ್ರವಾಯೂ ಸುಷ್ಟುತಿರಸ್ಮದೀಯಾ ಶೋಭನಾ ಸ್ತುತಿರ್ವಾಂ ಯುವಾಮಿಯಾನಾ ಗಚ್ಛಂತೀ ಪ್ರಾಪ್ನುವಂತೀ ಮಾರ್ಡೀಕಂ ಸುಖಮೀಟ್ಟೇ । ಯಾಚತೇ । ಯದ್ವಾ । ಸುಖಂ ಯಥಾ ಭವತಿ ತಥಾ ಯುವಾಮೀಟ್ಟೇ । ಸ್ತೌತಿ । ತಥಾ ನವ್ಯಂ ಪ್ರಶಸ್ಯಂ ಸುವಿತಂ ಸುಷ್ಠು ಪ್ರಾಪ್ಯಂ ಧನಂ ಚೇಟ್ಟೇ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರ ಮತ್ತು ವಾಯುದೇವತೆಗಳೇ) **ಉಶಂತಾ**—ಪೂಜೆಯನ್ನಪೇಕ್ಷಿಸಿ । **ದೂತಾ**—ಸಂಚರಿಸುವವರೂ । **ಗೋಪಾ**—ಜಗದ್ರಕ್ಷಕರೂ ಆದ ನೀವು । **ದಧಾಯ** – ನಮಗೆ ಹಿಂಸೆಯನ್ನುಂಟುಮಾಡಲು । **ನ**—ಪ್ರಯತ್ನಿಸಬೇಡಿರಿ । **ಪೂರ್ವೀಃ**—ಹಿಂದೆ ಕಳೆದ । **ಮಾಸಃ ಚ**—ಅನೇಕ ಮಾಸಗಳ ಕಾಲವೂ । **ಶರದಃ ಚ**—ಸಂವತ್ಸರಗಳ ಕಾಲವೂ । **ಪಾಥಃ**-ನಮ್ಮನ್ನು ರಕ್ಷಿಸಿದಿರಿ । **ಇಂದ್ರವಾಯೂ**—ಎಲೈ ಇಂದ್ರ ಮತ್ತು ವಾಯುದೇವತೆಗಳೇ । **ಸುಷ್ಟುತಿಃ** –ನಮ್ಮ ಉತ್ತಮವಾದ ಸ್ತುತಿಯು । **ವಾಂ**—ನಿಮ್ಮನ್ನು । **ಇಯಾನಾ**—ಸಮೀಪಿಸುತ್ತಾ । **ಮಾರ್ಡೀಕಂ** - ಸುಖವನ್ನು । **ಈಟ್ಟೇ**—ಯಾಚಿಸುತ್ತದೆ । **ನವ್ಯಂ**—ಪ್ರಶಸ್ಯವಾದುದೂ । **ಸುವಿತಂ ಚ**—ಸುಲಭವಾಗಿ ಹೊಂದಲ್ಪಡಬಹುದಾದುದೂ ಆದ ಧನವನ್ನೂ ಸಹ ಯಾಚಿಸುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುದೇವತೆಗಳೇ, ಪೂಜೆಯನ್ನಪೇಕ್ಷಿಸಿ ಸಂಚರಿಸುವವರೂ, ಜಗದ್ರಕ್ಷಕರೂ ಆದ ನೀವು ನಮಗೆ ಹಿಂಸೆಯನ್ನುಂಟುಮಾಡಲು ಪ್ರಯತ್ನಿಸಬೇಡಿರಿ. ಹಿಂದೆ ಕಳೆದ ಅನೇಕ ಮಾಸಗಳ ಕಾಲವೂ, ಅನೇಕ ಸಂವತ್ಸರಗಳ ಕಾಲವೂ ನಮ್ಮನ್ನು ನೀವು ಸಂರಕ್ಷಿಸಿದಿರಿ. ನಮ್ಮ ಉತ್ತಮವಾದ ಸ್ತುತಿಯು ನಿಮ್ಮನ್ನು ಸಮೀಪಿಸುತ್ತಾ ಸುಖವನ್ನೂ ಸುಲಭವಾಗಿ ಹೊಂದಬಹುದಾದ ಪ್ರಶಸ್ಯವಾದ ಧನವನ್ನೂ ಯಾಚಿಸುತ್ತದೆ.

## English Translation

Desiring (adoration), p oceeding (in the sky), preservers of mankind, be not disposed, Indra and Vayu, to do us harm : protect us through many months and years : our sincere praise, addressed to you both, solicits happiness and excellent wealth.

॥ ವಿಶೇಷವಿಷಯಗಳು ॥

ದ್ವಿತೀಯಛಂದೋಮದ ಪ್ರಉಗಶಸ್ತ್ರಮಂತ್ರಪಠನಕಾಲದಲ್ಲಿ **ಉಶಂತಾ** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಐಂದ್ರವಾಯವತೃಚದ (ಇಂದ್ರವಾಯುದೇವತಾಕವಾದ ಮೂರು ಋಕ್ಕುಗಳಲ್ಲಿ) ಮೊದಲನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಉಶಂತಾ ದೂತಾ ನ ದಧಾಯ ಗೋಪಾ**

ಯಾವತ್ತರಸ್ತನ್ವೋ ಯಾವದ್ಯೋಜ ಇತ್ಯೇಕಾ ದ್ವೇ ಚ ಎಂಬ ಸೂತ್ರದಿಂದ (ಆ. ೮-೧೦) ವಿನ್ಯಸ್ತವಾಗಿರುವುದು.

॥ ಸಂಹಿತಾಪಾಠಃ ॥

ಪೀವೋಅನ್ನಾಂ ರಯಿವೃಧಃ ಸುಮೇಧಾಃ ಶ್ವೇತಃ ಸಿಷಕ್ತಿ ನಿಯುತಾಮಭಿಶ್ರೀಃ ।
ತೇ ವಾಯವೇ ಸಮನಸೋ ವಿ ತಸ್ಥುರ್ವಿಶ್ವೇನ್ನರಃ ಸ್ವಪತ್ಯಾನಿ ಚಕ್ರುಃ ॥೩॥

॥ ಪದಪಾಠಃ ॥

ಪೀವಃಽಅನ್ನಾನ್ । ರಯಿಽವೃಧಃ । ಸುಽಮೇಧಾಃ । ಶ್ವೇತಃ । ಸಿಸಕ್ತಿ । ನಿಽಯುತಾಂ । ಅಭಿಽಶ್ರೀಃ ।
ತೇ । ವಾಯವೇ । ಸಽಮನಸಃ । ವಿ । ತಸ್ಥುಃ । ವಿಶ್ವಾ । ಇತ್ । ನರಃ । ಸುಽಅಪತ್ಯಾನಿ । ಚಕ್ರುಃ ॥೩॥

॥ ಸಾಯಣಭಾಷ್ಯಂ ॥

ನಿಯುತ್ವದ್ವಾಯುದೇವತಾಕೇ ಪಶೌ ಪೀವೋಅನ್ನಾನಿತಿ ವಪಾಯಾ ಯಾಜ್ಯಾ । ಸೂತ್ರಿತಂ ಚ । ಪೀವೋಅನ್ನಾ ರಯಿವೃಧಃ ಸುಮೇಧಾ ರಾಯೇ ನು ಯಂ ಜಜ್ಞತೂ ರೋದಸೀಮೇ । ಆ. ೩-೮ । ಇತಿ ॥ ತಥಾ ದ್ವಿತೀಯೇ ಛಂದೋಮೇ ಪ್ರಉಗಶಸ್ತ್ರೇ ವಾಯವ್ಯತೃಚಸ್ಯೈಷೈವ ದ್ವಿತೀಯಾ । ಸೂತ್ರಿತಂ ಚ । ಪೀವೋಅನ್ನಾ ರಯಿವೃಧಃ ಸುಮೇಧಾ ಉಚ್ಛನ್ನುಷಸಃ ಸುದಿನಾ ಅರಿಪ್ರಾಃ । ಆ. ೮-೧೦ । ಇತಿ ॥

ಪೀವೋಅನ್ನಾನ್ ಪೀವಾಂಸಿ ಸ್ಥೂಲಾನಿ ಪ್ರಭೂತಾನ್ಯನ್ನಾನಿ ಯೇಷಾಂ ತಾನ್ ರಯಿವೃಧೋ ರಯ್ಯಾ ಧನೇನ ವೃದ್ಧಾನೇವಂಭೂತಾನಾಢ್ಯಜನಾನ್ ಸುಮೇಧಾಃ ಶೋಭನಪ್ರಜ್ಞೋ ನಿಯುತಾಂ ವಡವಾನಾಂ ಸ್ವವಾಹಾನಾಮಭಿಶ್ರೀರಭಿಶ್ರಯಣೀಯಃ ಶ್ವೇತಃ ಶ್ವೇತವರ್ಣೋ ವಾಯುಃ ಸಿಷಕ್ತಿ । ಸೇವತೇ । ತೇ ಚ ಜನಾಃ ಸಮನಸಃ ಸಮಾನಮನಸ್ಕಾಃ ಸಂತೋ ವಾಯವೇ ವಾಯುಮುದ್ದಿಶ್ಯ ಯಷ್ಟುಂ ವಿ ತಸ್ಥುಃ । ವಿವಿಧಮವತಿಷ್ಠಂತೇ । ಸ್ಥಿತ್ವಾ ಚ ತೇ ನರಃ ಕರ್ಮಣಾಂ ನೇತಾರೋ ಜನಾ ವಿಶ್ವೇದ್ವಿಶ್ವಾನಿ ಸರ್ವಾಣ್ಯೇವ ಸ್ವಪತ್ಯಾನಿ ಶೋಭನಾಪತ್ಯಹೇತೂನಿ ಯದ್ವಾ ಸುಷ್ಠ್ವಪತನಕಾರಣಾನಿ ವಾಯುದೇವತ್ಯಾನಿ ಕರ್ಮಾಣಿ ಚಕ್ರುಃ । ಕುರ್ವಂತಿ ॥

॥ ಪ್ರತಿಪದಾರ್ಥ ॥

ಸುಮೇಧಾಃ—ಉತ್ತಮವಾದ ಪ್ರಜ್ಞೆಯುಳ್ಳವನೂ । ನಿಯುತಾಂ—ತನ್ನ ಅಶ್ವಗಳಿಗೆ । ಅಭಿಶ್ರೀಃ—ಶೋಭನಕಾರಕನೂ । ಶ್ವೇತಃ—ಶ್ವೇತವರ್ಣವುಳ್ಳವನೂ ಆದ ವಾಯುವು । ಪೀವೋಅನ್ನಾನ್—ಪ್ರಭೂತವಾದ

ಅನ್ನವುಳ್ಳವರೂ । ರಯಿವೃಧಃ—ಧನಸಂಪತ್ತಿನಿಂದ ಪ್ರವೃದ್ಧಮಾನರಾದವರೂ ಆದ ಜನರನ್ನು । ಸಿಷಕ್ತಿ—ಸೇವಿಸುತ್ತಾನೆ (ಅನುಗ್ರಹಿಸುತ್ತಾನೆ) । ತೇ-ಅದೇ ಜನರು। ಸಮನಸಃ-ಒಂದೇ ಮನಸ್ಸುಳ್ಳವರಾಗಿ । ವಾಯವೇ-ವಾಯುವನ್ನು ಉದ್ದೇಶಿಸಿ ಪೂಜಿಸಲು । ವಿ ತಸ್ಥುಃ—ವ್ಯಕ್ತಿಕವಾದ ಸಿದ್ಧತೆಯಿಂದ ನಿಲ್ಲುತ್ತಾರೆ । ನರಃ—ಕರ್ಮನೇತೃಗಳಾದ ಅವರು । ಸ್ವಪತ್ಯಾನಿ—ಉತ್ತಮವಾದ ಪ್ರಜಾಸಂತತಿದಾಯಕವಾದವೂ । ವಿಶ್ವೇತ್—ವಾಯುದೇವತಾನಿರ್ದಿಷ್ಟವಾದವೂ ಆದ ಸಕಲ ಕರ್ಮಗಳನ್ನೂ । ಚಕ್ರುಃ—ನೆರವೇರಿಸುತ್ತಾರೆ.

॥ ಭಾವಾರ್ಥ ॥

ಉತ್ತಮವಾದ ಪ್ರಜ್ಞೆಯುಳ್ಳವನೂ, ತನ್ನ ಅಶ್ವಗಳಿಗೆ ಶೋಭಾಕಾರಕನೂ ಅಥವಾ ತನ್ನ ಅಶ್ವಗಳಿಂದ ಶೋಭಿಸುವವನೂ, ಶ್ವೇತವರ್ಣವುಳ್ಳವನೂ ಆದ ವಾಯುವು ಪ್ರಭೂತವಾದ ಅನ್ನವುಳ್ಳವರೂ, ಧನಸಂಪತ್ತಿನಿಂದ ಪ್ರವೃದ್ಧರಾದವರೂ ಆದ ಜನರನ್ನು ಸೇವಿಸುತ್ತಾನೆ. ಅದೇ ಜನರು ಒಂದೇ ಮನಸ್ಸುಳ್ಳವರಾಗಿ ವಾಯುವನ್ನು ಉದ್ದೇಶಿಸಿ ಪೂಜಿಸಲು ವ್ಯಕ್ತಿಕವಾದ ಸಿದ್ಧತೆಯಿಂದ ನಿಲ್ಲುತ್ತಾರೆ. ಕರ್ಮನೇತೃಗಳಾದ ಅವರು ಉತ್ತಮವಾದ ಪ್ರಜಾಸಂತತಿದಾಯಕವಾದವೂ ವಾಯುದೇವತಾನಿರ್ದಿಷ್ಟವಾದವೂ ಆದ ಸಕಲ ಕರ್ಮಗಳನ್ನೂ ನೆರವೇರಿಸುತ್ತಾರೆ.

## English Translation

The white-complexioned Vayu, intelligent, glorious with the Niyut steeds, favours those men who are well-fed, abounding in riches, for they with one mind stand everywhere, ready to (worship) him, and leaders of rites, they perform all the ceremonies, that are productive of excellent offspring.

॥ ವಿಶೇಷವಿಷಯಗಳು ॥

ನಿಯುತ್ವಾನ್ ವಾಯುಃ ಎಂಬ ದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ಪೀವೋಅನ್ನಾನ್ ಎಂಬ ಈ ಋಕ್ಕನ್ನು ವಪಾಪುರೋನುವಾಕ್ಯಾ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— ಪೀವೋಅನ್ನಾಂ ರಯಿವೃಧಃ ಸುಮೇಧಾ ಶ್ವೇತಃ ಸಿಷಕ್ತಿ... ರಾಯೋ ನು ಯಂ ಜಜ್ಞತೂ ರೋದಸೀಮೇ ಎಂಬ ಸೂತ್ರದಿಂದ (ಅ. ೩-೮) ವಿಸ್ತೃತವಾಗಿರುವುದು. ಮತ್ತು ದ್ವಿತೀಯಛಂದೋಮದ ಪ್ರಉಗಶಸ್ತ್ರಮಂತ್ರಗಳಲ್ಲಿ ವಾಯವ್ಯತೃಚದ ಎರಡನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ- ಪೀವೋ ಅನ್ನಾಂ ರಯಿವೃಧಃ ಸುಮೇಧಾ ಉಚ್ಛನ್ನುಷಸಃ ಸುದಿನಾ ಅರಿಪ್ರಾಃ ಎಂಬ ಸೂತ್ರದಿಂದ (ಅ. ೮-೧೦) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಯಾವತ್ತರಸ್ತನ್ವೋ೩ ಯಾವದೋಜೋ ಯಾವನ್ನರಶ್ಚಕ್ಷಸಾ ದೀಧ್ಯಾನಾಃ ।
ಶುಚಿಂ ಸೋಮಂ ಶುಚಿಪಾ ಪಾತಮಸ್ಮೇ ಇಂದ್ರವಾಯೂ ಸದತಂ ಬರ್ಹಿರೇದಂ ॥ ೪ ॥

॥ ಪದಪಾಠಃ ॥

ಯಾವತ್ । ತರಃ । ತನ್ವಃ । ಯಾವತ್ । ಓಜಃ । ಯಾವತ್ । ನರಃ । ಚಕ್ಷಸಾ । ದೀಧ್ಯಾನಾಃ ।
ಶುಚಿಂ । ಸೋಮಂ । ಶುಚಿಽಪಾ । ಪಾತಂ । ಅಸ್ಮೇ ಇತಿ । ಇಂದ್ರವಾಯೂ ಇತಿ । ಸದತಂ । ಬರ್ಹಿಃ ।
ಆ । ಇದಂ ॥ ೪ ॥

॥ ಸಾಯಣಭಾಷ್ಯಂ ॥

ದ್ವಿತೀಯೇ ಛಂದೋಮೇ ಪ್ರಉಗಶಸ್ತ್ರ ಐಂದ್ರವಾಯವತೃಚಸ್ಯ ಯಾವತ್ತರ ಇತ್ಯಾದಿಕೇ ದ್ವೇ ಋಚೌ । ಸೂತ್ರಂ ತು ಪೂರ್ವಮೇವೋದಾಹೃತಂ ।

ಹೇ ಇಂದ್ರಾವಾಯೂ ಯುವಯೋಸ್ತನ್ವಃ ಶರೀರಸ್ಯ ತರೋ ವೇಗೋ ಯಾವದಸ್ತಿ ಯಾವಚ್ಚೌಜೋ ಬಲಂ ಯಾವಚ್ಚ ನರಃ ಕರ್ಮಣಾಂ ನೇತಾರ ಋತ್ವಿಜಶ್ಚಕ್ಷಸಾ ಜ್ಞಾನೇನ ದೀಧ್ಯಾನಾ ದೀಪ್ಯಮಾನಾ ಭವಂತಿ ತಸ್ಯ ಸರ್ವಸ್ಯಾನುರೂಪಂ ಶುಚಿಪಾ ಶುಚೇಃ ಸೋಮಸ್ಯ ಪಾತಾರಾವಿಂದ್ರವಾಯೂ ಶುಚಿಂ ಶುದ್ಧಂ ಸೋಮಮಸ್ಮೇ ಅಸ್ಮದೀಯಂ ಪಾತಂ । ಪಿಬತಂ । ಇದಂ ವೇದ್ಯಾಂ ಸ್ತೀರ್ಣಂ ಬರ್ಹಿಶ್ಚಾ ಸದತಂ । ಪಾನಾರ್ಥಮಾಸೀದತಂ । ಬರ್ಹಿಷ್ಯುಪವಿಶತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಶುಚಿಪಾ—ಶುದ್ಧವಾದ ಸೋಮವನ್ನು ಪಾನಮಾಡತಕ್ಕ । ಇಂದ್ರವಾಯೂ - ಎಲೈ ಇಂದ್ರ ಮತ್ತು ವಾಯುದೇವತೆಗಳೇ । ತನ್ವಃ—ನಿಮ್ಮ ಶರೀರದ । ತರಃ—ವೇಗವು । ಯಾವತ್—ಎಲ್ಲಿಯವರೆಗಿದೆಯೋ । ಯಾವತ್—ಎಷ್ಟು ಮಟ್ಟಿಗೆ । ಓಜಃ—ನಿಮ್ಮ ಬಲವಿದೆಯೋ । ಯಾವತ್—ಎಷ್ಟುಮಟ್ಟಿಗೆ । ನರಃ—ಕರ್ಮನೇತೃಗಳಾದ ಋತ್ವಿಕ್ಕುಗಳು । ಚಕ್ಷಸಾ—ಜ್ಞಾನದಿಂದ । ದೀಧ್ಯಾನಾಃ—ಪ್ರಕಾಶಿತರಾಗಿರುವರೋ (ಇವೆಲ್ಲಕ್ಕೂ ಅನುಗುಣವಾಗಿ ) ಶುಚಿಂ—ಶುದ್ಧವಾದುದೂ । ಅಸ್ಮೇ—ನಮ್ಮಿಂದ ಅರ್ಪಿತವಾದುದೂ ಆದ । ಸೋಮಂ—ಸೋಮರಸವನ್ನು । ಪಾತಂ--ಪಾನಮಾಡಿರಿ । ಇದಂ ಬರ್ಹಿಃ—ಇಲ್ಲಿ ವಿಸ್ತೃತವಾಗಿ ಹರಡಿರುವ ದರ್ಭಾಸನದ ಮೇಲೆ । ಆ ಸದತಂ--ಕುಳಿತುಕೊಳ್ಳಿರಿ-

॥ ಭಾವಾರ್ಥ ॥

ಶುದ್ಧವಾದ ಸೋಮವನ್ನು ಪಾನಮಾಡತಕ್ಕ ಎಲೈ ಇಂದ್ರ ಮತ್ತು ವಾಯುದೇವತೆಗಳೇ, ನಿಮ್ಮ ಶರೀರದ ವೇಗವೂ ಮತ್ತು ಬಲವೂ ಎಲ್ಲಿಯವರೆಗಿದೆಯೋ, ಕರ್ಮನೇತೃಗಳಾದ ಋತ್ವಿಕ್ಕುಗಳು ತಮ್ಮ ಜ್ಞಾನದಿಂದ ಎಷ್ಟು ಮಟ್ಟಿಗೆ ಪ್ರಕಾಶಿತರಾಗಿರುವರೋ ಇವೆಲ್ಲಕ್ಕೂ ಅನುಗುಣವಾಗಿ ಶುದ್ಧವಾದುದೂ, ನಮ್ಮಿಂದ ಅರ್ಪಿತವಾದುದೂ ಆದ ಸೋಮರಸವನ್ನು ಪಾನಮಾಡಿರಿ. ಇಲ್ಲಿ ವಿಸ್ತೃತವಾಗಿ ಹರಡಿರುವ ದರ್ಭಾಸನದ ಮೇಲೆ ಕುಳಿತುಕೊಳ್ಳಿರಿ.

## English Translation

As much as is your rapidity of body, as much as is your vigour, as much as the leaders (of rites) are illuminated by wisdom, (to such extent),

drinkers of the pure (beverage) Indra and Vayu, drink this our pure Soma, and sit down upon this sacred grass.

॥ ವಿಶೇಷವಿಷಯಗಳು ॥

ದ್ವಿತೀಯ ಛಂದೋಮದ ಪ್ರಉಗಶಸ್ತ್ರಮಂತ್ರಗಳಲ್ಲಿ ಯಾವತ್ತರಃ ಎಂದು ಮೊದಲಾಗುವ ಎರಡು ಋಕ್ಕುಗಳನ್ನು ಐಂದ್ರವಾಯುವ್ಯತೃಚದ ಮೊದಲಿನ ಎರಡು ಋಕ್ಕುಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ ಹೇಳಿರುವುದನ್ನು ಹಿಂದೆಯೇ ತಿಳಿಸಲಾಗಿದೆ.

॥ ಸಂಹಿತಾಪಾಠಃ ॥

ನಿಯುವಾನಾ ನಿಯುತಃ ಸ್ಪಾರ್ಹವೀರಾ ಇಂದ್ರವಾಯೂ ಸರಥಂ ಯಾತಮರ್ವಾಕ್ ।
ಇದಂ ಹಿ ವಾಂ ಪ್ರಭೃತಂ ಮಧ್ವೋ ಅಗ್ರಮಧ ಪ್ರೀಣಾನಾ ವಿ ಮುಮುಕ್ತಮಸ್ಮೇ ॥ ೫ ॥

॥ ಪದಪಾಠಃ ॥

ನಿಽಯುವಾನಾ । ನಿಽಯುತಃ । ಸ್ಪಾರ್ಹಽವೀರಾ । ಇಂದ್ರವಾಯೂ ಇತಿ । ಸಽರಥಂ । ಯಾತಂ । ಅರ್ವಾಕ್ ।
ಇದಂ । ಹಿ । ವಾಂ । ಪ್ರಽಭೃತಂ । ಮಧ್ವಃ । ಅಗ್ರಂ । ಅಧ । ಪ್ರೀಣಾನಾ । ವಿ । ಮುಮುಕ್ತಂ । ಅಸ್ಮೇ ಇತಿ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರವಾಯೂ ಸ್ಪಾರ್ಹವೀರಾ ಸ್ಪೃಹಣೀಯಸ್ತೋತೃಕಾನ್ನಿಯುತ ಅಶ್ವೀಯಾನಶ್ವಾನ್ ಸರಥಮುಭಯೋಃ ಸಮಾನಮೇಕಂ ರಥಂ ನಿಯುವಾನಾ ನಿಮಿಶ್ರಯಂತೌ ಯುವಾಮರ್ವಾಗಸ್ಮದಭಿಮುಖಂ ಯಾತಂ । ಗಚ್ಛತಂ । ಇದಂ ಹೀದಂ ಖಲು ಮಧ್ವೋ ಮಧುರಸ್ಯ ಸೋಮಸ್ಯಾಗ್ರಂ ಗ್ರಹೇಷ್ವಾದ್ಯಮೈಂದ್ರವಾಯವಾಖ್ಯಂ ಗ್ರಹಂ ವಾಂ ಯುವಯೋರರ್ಥಂ ಪ್ರಭೃತಂ ಪ್ರಕರ್ಷೇಣ ಹೃತಂ ಹೋಮಾರ್ಥಮುತ್ತರವೇದಿಂ ಪ್ರತಿ ನೀತಂ । ಅಧಾಥ ತಾದೃಶಸ್ಯ ಸೋಮಸ್ಯ ಪಾನಾನಂತರಂ ಪ್ರೀಣಾನಾ ಪ್ರೀಯಮಾಣೌ ಯುವಾಮಸ್ಮೇ ಅಸ್ಮಾನ್ ವಿ ಮುಮುಕ್ತಂ । ಪಾಪಾದ್ವಿಮೋಚಯತಂ ॥

॥ ಪ್ರತಿಪದಾರ್ಥ ॥

**ಇಂದ್ರವಾಯೂ**—ಎಲೈ ಇಂದ್ರ ಮತ್ತು ವಾಯುದೇವತೆಗಳೇ । **ಸ್ವಾರ್ಹವೀರಾಃ**—ಸ್ತೋತೃಗಳಿಂದ ಅಪೇಕ್ಷಿತವಾದವೂ । **ನಿಯುತಃ**—ನಿಯುತ್ಸಂಜ್ಞಕವೂ ಆದ ನಿಮ್ಮ ಅಶ್ವಗಳನ್ನು **ಸರಥಂ**—ನಿಮ್ಮಿಬ್ಬರಿಗೂ ಸಮಾನವಾದ ಒಂದೇ ರಥಕ್ಕೆ । **ನಿಯುವಾನಾ**—ಯೋಜಿಸಿದವರಾಗಿ । **ಅರ್ವಾಕ್**—ನಮಗಭಿಮುಖವಾಗಿ । **ಯಾತಂ**—ಬನ್ನಿರಿ । **ಅಗ್ರಂ**—ಎಲ್ಲರಿಗಿಂತಲೂ ನಿಮಗೇ ಮೊದಲು ಅರ್ಪಿತವಾಗುವ ಗ್ರಹಾತ್ಮಕವಾದುದೂ । **ಮಧ್ವಃ**—ಮಧುರವಾದುದೂ ಆದ ಸೋಮದ । **ಇದಂ ಹಿ**—ಈ ರಸವು । **ವಾಂ**—ನಿಮಗಾಗಿ । **ಪ್ರಭೃತಂ**—ಉತ್ತರವೇದಿಗೆ ಉತ್ಕೃಷ್ಟವಾಗಿ ಒಯ್ಯಲ್ಪಟ್ಟಿದೆ । **ಅಧ**—ಈ ಸೋಮಪಾನದ ಫಲವಾಗಿ । **ಪ್ರೀಣಾನಾ**—ತೃಪ್ತಿಯನ್ನು ಹೊಂದಿದ ನೀವು । **ಅಸ್ಮೇ**—ನಮ್ಮನ್ನು । **ವಿ ಮುಮುಕ್ತಂ**—ಪಾಪದಿಂದ ಬಿಡುಗಡೆ ಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುದೇವತೆಗಳೇ, ಸ್ತೋತೃಗಳಿಂದ ಅಪೇಕ್ಷಿತವಾದವೂ, ನಿಯುತ್ಸಂಜ್ಞಕವೂ ಆದ ನಿಮ್ಮ ಅಶ್ವಗಳನ್ನು ನಿಮ್ಮಿಬ್ಬರಿಗೂ ಸಮಾನವಾದ ಒಂದೇ ರಥಕ್ಕೆ ಯೋಜಿಸಿದವರಾಗಿ ನಮಗಭಿಮುಖವಾಗಿ ಬನ್ನಿರಿ. ಎಲ್ಲರಿಗಿಂತಲೂ ನಿಮಗೇ ಮೊದಲು ಅರ್ಪಿತವಾಗುವ ಗ್ರಹಾತ್ಮಕವಾದುದೂ ಮಧುರವಾದುದೂ ಆದ ಸೋಮದ ಈ ರಸವು ನಿಮಗೆ ಅರ್ಪಿತವಾಗಲು ಉತ್ತರವೇದಿಗೆ ಉತ್ಕೃಷ್ಟವಾಗಿ ಒಯ್ಯಲ್ಪಟ್ಟಿದೆ. ಈ ಸೋಮಪಾನದ ಫಲವಾಗಿ ತೃಪ್ತಿಯನ್ನು ಹೊಂದಿದ ನೀವು ನಮ್ಮನ್ನು ಪಾಪದಿಂದ ಬಿಡುಗಡೆ ಮಾಡಿರಿ.

## English Translation

Harnessing the Niyuts, whom the devout (worshippers) desire to your common car, come, Indra and Vayu, hither: this the first (cup) of the sweet beverage is prepared for you; and then, delighted (by the draught), liberate us (from sin).

॥ ಸಂಹಿತಾಪಾಠಃ ॥

ಯಾ ವಾಂ ಶತಂ ನಿಯುತೋ ಯಾಃ ಸಹಸ್ರಮಿಂದ್ರವಾಯೂ ವಿಶ್ವವಾರಾಃ
ಸಚಂತೇ ।
ಆಭಿರ್ಯಾತಂ ಸುವಿದತ್ರಾಭಿರರ್ವಾಕ್ಪಾತಂ ನರಾ ಪ್ರತಿಭೃತಸ್ಯ ಮಧ್ವಃ ॥

॥ ಪದಪಾಠಃ ॥

ಯಾಃ । ವಾಂ । ಶತಂ । ನಿಽಯುತಃ । ಯಾಃ । ಸಹಸ್ರಂ । ಇಂದ್ರವಾಯೂ ಇತಿ । ವಿಶ್ವಽವಾರಾಃ ।
ಸಚಂತೇ ।

ಆ । ಆಭಿಃ । ಯಾತಂ । ಸುಽವಿದತ್ರಾಭಿಃ । ಅರ್ವಾಕ್ । ಪಾತಂ । ನರಾ । ಪ್ರತಿಽಭೃತಸ್ಯ । ಮಧ್ವಃ ॥೬॥

॥ ಸಾಯಣಭಾಷ್ಯಂ ॥

ಪ್ರಥಮೇ ಛಂದೋಮೇ ಪ್ರಉಗಶಸ್ತ್ರ ಐಂದ್ರವಾಯವತೃಚಸ್ಯ ಯಾ ವಾಂ ಶತಮಿತಿ ತೃತೀಯಾ । ಸೂತ್ರಿತಂ ಚ । ಯಾ ವಾಂ ಶತಂ ನಿಯುತೋ ಯಾಃ ಸಹಸ್ರಮಿತ್ಯೇಕಪಾತಿನ್ಯಃ । ಆ. ೮-೯ । ಇತಿ ॥

ಹೇ ಇಂದ್ರವಾಯೂ ಯಾ ನಿಯುತಃ ಶತಂ ಶತಸಂಖ್ಯಾಕಾಃ ಸತ್ಯೋ ವಾಂ ಯುವಾಂ ಸಚಂತೇ ಸೇವಂತೇ । ಯಾಶ್ಚ ವಿಶ್ವವಾರಾ ವಿಶ್ವೈರ್ವರಣೀಯಾ ನಿಯುತಃ ಸಹಸ್ರಂ ಸಹಸ್ರಸಂಖ್ಯಾಕಾಃ ಸತ್ಯೋ ಯುವಾಂ ಸಚಂತೇ । ಸುವಿದತ್ರಾಭಿಃ ಶೋಭನಧನಪ್ರದಾಭಿರಾಭಿರ್ನಿಯುದ್ಭಿರರ್ವಾಗಸ್ಮದಭಿಮುಖಮಾ ಯಾತಂ । ಆಗಚ್ಛತಂ । ಹೇ ನರಾ ನೇತಾರೌ ಪ್ರತಿಭೃತಸ್ಯೋತ್ತರವೇದಿಂ ಪ್ರತಿ ನೀತಸ್ಯ ಮಧ್ವೋ ಮಧುರಸ್ಯ ಸೋಮಸ್ಯ । ದ್ವಿತೀಯಾರ್ಥೇ ಷಷ್ಠೀ । ಈದೃಶಂ ಸೋಮಂ ಪಾತಂ । ಪಿಬತಂ ॥

॥ ಪ್ರತಿಪದಾರ್ಥ ॥

ಇಂದ್ರವಾಯೂ-ಎಲೈ ಇಂದ್ರ ಮತ್ತು ವಾಯುದೇವತೆಗಳೇ । **ಯಾಃ ನಿಯುತಃ**—ಯಾವ ನಿಯುತ್ಸಂಜ್ಞಕಗಳಾದ ಅಶ್ವಗಳು । **ವಾಂ**—ನಿಮ್ಮನ್ನು । **ಶತಂ**-ಶತಸಂಖ್ಯಾಕವಾಗಿ । **ಸಚಂತೇ**-ಸೇವಿಸುವುವೋ । **ವಿಶ್ವವಾರಾಃ**-ಸಮಸ್ತರಿಂದಲೂ ಅಪೇಕ್ಷಿತವಾದ । **ಯಾಃ**—ಯಾವ ಅಶ್ವಗಳು । **ಸಹಸ್ರಂ**—ಸಹಸ್ರಸಂಖ್ಯಾಕವಾಗಿ ನಿಮ್ಮನ್ನು ಸೇವಿಸುವುವೋ । **ಸುವಿದತ್ರಾಭಿಃ**—ಉತ್ತಮವಾದ ಸಂಪತ್ಪ್ರದವಾದ । **ಆಭಿಃ**—ಅಂತಹ ನಿಯುತ್ತುಗಳೊಡನೆ । **ಅರ್ವಾಕ್**-- ನಮಗಭಿಮುಖವಾಗಿ । **ಆ ಯಾತಂ**—ದಯಮಾಡಿರಿ । **ನರಾ**—ನೇತೃಗಳಾದ ಎಲೈ ಇಂದ್ರವಾಯುಗಳೇ । **ಪ್ರತಿಭೃತಸ್ಯ**—ಉತ್ತರವೇದಿಗೆ ಒಯ್ಯಲ್ಪಟ್ಟುದೂ । **ಮಧ್ವಃ**—ಮಧುರವಾದುದೂ ಆದ ಸೋಮವನ್ನು । **ಪಾತಂ**—ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುದೇವತೆಗಳೇ, ಯಾವ ನಿಯುತ್ಸಂಜ್ಞಕಗಳಾದ ಅಶ್ವಗಳು ನಿಮ್ಮನ್ನು ಶತಸಂಖ್ಯಾಕವಾಗಿ ಸೇವಿಸುವುವೋ, ಸಮಸ್ತರಿಂದಲೂ ಅಪೇಕ್ಷಿತಗಳಾದ ಯಾವ ಅದೇ ಅಶ್ವಗಳು ಸಹಸ್ರಸಂಖ್ಯಾಕಗಳಾಗಿ ಸೇವಿಸುವುವೋ ಉತ್ತಮವಾದ ಸಂಪತ್ಪ್ರದವಾದ ಅಂತಹ ನಿಯುತ್ತುಗಳೊಡನೆ ನಮ್ಮ ಯಜ್ಞಕ್ಕಭಿಮುಖವಾಗಿ ದಯಮಾಡಿರಿ. ನೇತೃಗಳಾದ ಎಲೈ ಇಂದ್ರವಾಯುಗಳೇ, ಉತ್ತರವೇದಿಗೆ ಒಯ್ಯಲ್ಪಟ್ಟುದೂ, ಮಧುರವಾದುದೂ ಆದ ಸೋಮವನ್ನು ಪಾನಮಾಡಿರಿ.

## English Translation

Come to our presence, Indra and Vayu, with those munificent Niyut steeds, who, the desired of all, wait upon you both by hundreds and thousands: drink, leaders (of rites), of the sweet beverage placed near (the altar).

॥ ವಿಶೇಷವಿಷಯಗಳು ॥

ಪ್ರಥಮಛಂದೋಮದ ಪ್ರಉಗಶಸ್ತ್ರಮಂತ್ರಗಳಲ್ಲಿ **ಯಾ ವಾಂ ಶತಂ** ಎಂಬ ಈ ಋಕ್ಕನ್ನು ಐಂದ್ರವಾಯವತೃಚದ ಮೂರನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ–ಯಾ ವಾಂ ಶತಂ ನಿಯುತೋ **ಯಾಃ ಸಹಸ್ರಮಿತ್ಯೇಕಪಾತಿನ್ಯಃ** ಎಂಬ ಸೂತ್ರದಿಂದ (ಆ. ೮-೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಅರ್ವಂತೋ ನ ಶ್ರವಸೋ ಭಿಕ್ಷಮಾಣಾ ಇಂದ್ರವಾಯೂ ಸುಷ್ಟುತಿಭಿರ್ವಸಿಷ್ಠಾಃ ।
ವಾಜಯಂತಃ ಸ್ವವಸೇ ಹುವೇಮ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥೭॥

॥ ಪದಪಾಠಃ ॥

ಅರ್ವಂತಃ । ನ । ಶ್ರವಸಃ । ಭಿಕ್ಷಮಾಣಾಃ । ಇಂದ್ರವಾಯೂ ಇತಿ । ಸುಸ್ತುತಿಽಭಿಃ । ವಸಿಷ್ಠಾಃ ।
ವಾಜಽಯಂತಃ । ಸು । ಅವಸೇ । ಹುವೇಮ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥ ೭ ॥

॥ ಸಾಯಣಭಾಷ್ಯಂ ॥

**ವ್ಯಾಖ್ಯಾತೇಯಂ । ಅಕ್ಷರಾರ್ಥಸ್ತು । ಅಶ್ವಾ ಇವ ಹವಿಷಾಂ ವೋಢಾರೋಽನ್ನಂ ಯಾಚಮಾನಾ ಬಲಂ ಕಾಮಯಮಾನಾ ವಸಿಷ್ಠಾ ವಯಂ ಶೋಭನರಕ್ಷಣಾಯ ಶೋಭನೈಃ ಸ್ತೋತ್ರೈರಿಂದ್ರವಾಯೂ ಅಹ್ವಯೇಮಹೀತಿ ॥**

॥ ಪ್ರತಿಪದಾರ್ಥ ॥

**ಶ್ರವಸಃ**—ಅನ್ನವನ್ನು । **ಭಿಕ್ಷಮಾಣಾಃ**—ಯಾಚಿಸುವವರೂ । **ವಾಜಯಂತಃ**—ಶಕ್ತಿಯನ್ನಿಚ್ಛಿಸುವವರೂ । **ವಸಿಷ್ಠಾಃ**—ವಸಿಷ್ಠವಂಶದವರೂ ಆದ ನಾವು । **ಅರ್ವಂತೋ ನ**—ಅಶ್ವಗಳು ಭಾರವನ್ನು ವಹಿಸುವಂತೆ ನಾವೂ ಹವಿಸ್ಸನ್ನು ವಹಿಸಿಕೊಂಡವರಾಗಿ । **ಸ್ವವಸೇ**—ಉತ್ತಮವಾದ ರಕ್ಷಣೆಗಾಗಿ । **ಸುಷ್ಟುತಿಭಿಃ**—ಉತ್ತಮವಾದ ಸ್ತುತಿಗಳಿಂದ । **ಇಂದ್ರವಾಯೂ**—ಇಂದ್ರ ಮತ್ತು ವಾಯುದೇವತೆಗಳನ್ನು । **ಹುವೇಮ**–ಪ್ರಾರ್ಥಿಸಿ ಕರೆಯುತ್ತೇವೆ. (ಎಲೈ ಇಂದ್ರಾದಿದೇವತೆಗಳೇ) । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ । **ಸ್ವಸ್ತಿಭಿಃ**–ಕಲ್ಯಾಣಗಳಿಂದ । **ಪಾತ**— ರಕ್ಷಿಸಿರಿ.

॥ ಭಾವಾರ್ಥ ॥

ಅನ್ನವನ್ನು ಯಾಚಿಸುವವರೂ, ಶಕ್ತಿಯನ್ನಿಚ್ಛಿಸುವವರೂ ವಸಿಷ್ಠವಂಶದವರೂ ಆದ ನಾವು ಅಶ್ವಗಳು ಭಾರವನ್ನು ವಹಿಸುವಂತೆ ನಾವೂ ಹವಿಸ್ಸನ್ನು ವಹಿಸಿಕೊಂಡವರಾಗಿ ಉತ್ತಮವಾದ ರಕ್ಷಣೆಗಾಗಿ ಉತ್ತಮವಾದ ಸ್ತುತಿ

ಗಳಿಂದ ಇಂದ್ರ ಮತ್ತು ವಾಯುದೇವತೆಗಳನ್ನು ಪ್ರಾರ್ಥಿಸಿ ಕರೆಯುತ್ತೇವೆ. ಎಲೈ ಇಂದ್ರಾದಿದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

We, Vasishthas, (bearing oblations) like horses (bearing burdens), soliciting food, desiring strength, invoke with praises Indra and Vayu for our sure defence: ever cherish us with blessings.



## ತೊಂಭತ್ತೆರಡನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಆ ವಾಯೋ ಇತಿ ಪಂಚರ್ಚಂ ತೃತೀಯಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ವಾಯವ್ಯಂ । ಅನುಕ್ರಾಂತಂ ಚ । ಆ ವಾಯೋ ಪಂಚೇತಿ ॥ ಶುನಾಸೀರೀಯೇ ಪರ್ವಣಿ ವಾಯೋರ್ನಿಯುತ್ವತೋ ಯಾಗಸ್ಯಾ ವಾಯೋ ಇತ್ಯನುವಾಕ್ಯಾ । ಸೂತ್ರಿತಂ ಚ । ಆ ವಾಯೋ ಭೂಷ ಶುಚಿಪಾ ಉಪ ನಃ ಪ್ರ ಯಾಭಿರ್ಯಾಸಿ ದಾಶ್ವಾಂಸಮಚ್ಛ । ಆ. ೨-೨೦ । ಇತಿ ॥ ನಿಯುತ್ವದ್ವಾಯುದೇವತಾಕೇ ಪಶಾವಪ್ಯೇವ ವಪಾಯಾ ಅನುವಾಕ್ಯಾ । ಆ. ೩-೮ ॥ ಪ್ರಥಮೇ ಛಂದೋಮೇ ಪ್ರಉಗಶಸ್ತ್ರೇ ವಾಯವ್ಯತೃಚಸ್ಯೈಷೈವಾದ್ಯಾ । ಸೂತ್ರಿತಂ ಚ । ಸಮುದ್ರಾದೂರ್ಮಿರಿತ್ಯಾಜ್ಯಮಾ ವಾಯೋ ಭೂಷ ಶುಚಿಪಾಃ । ಆ. ೮-೯ । ಇತಿ ॥**

ಅನುವಾದವು—**ಆ ವಾಯೋ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ವಾಯುವು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಆ ವಾಯೋ ಪಂಚ** ಎಂದು ಹೇಳಿರುವುದು ಶುನಾಸೀರೀಯವೆಂಬ ಪರ್ವಕಾಲದಲ್ಲಿ **ನಿಯುತ್ವಾನ್ ವಾಯುಃ** ಎಂಬ ದೇವತೆಯನ್ನುದ್ದೇಶಿಸಿ ಮಾಡುವ ಯಾಗದಲ್ಲಿ **ಆ ವಾಯೋ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಆ ವಾಯೋ ಭೂಷ ಶುಚಿಪಾ ಉಪ ನಃ ಪ್ರ ಯಾಭಿರ್ಯಾಸಿ ದಾಶ್ವಾಂಸಮಚ್ಛ** ಎಂಬ ಸೂತ್ರದಿಂದ (ಆ. ೨-೨೦) ವಿವೃತವಾಗಿರುವುದು. ಮತ್ತು ನಿಯುತ್ವದ್ವಾಯುವನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ಈ ಋಕ್ಕನ್ನು ವಪಾಹೋಮದ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕು. (ಆ. ೩-೮) ಮತ್ತು ಪ್ರಥಮಛಂದೋಮದ ಪ್ರಉಗಶಸ್ತ್ರಮಂತ್ರಗಳಲ್ಲಿ ಈ ಋಕ್ಕನ್ನು ವಾಯವ್ಯತೃಚದ ಮೊದಲನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸಮುದ್ರಾದೂರ್ಮಿರಿತ್ಯಾಜ್ಯಮಾ ವಾಯೋ ಭೂಷ ಶುಚಿಪಾಃ** ಎಂಬ ಸೂತ್ರದಿಂದ (ಆ. ೮-೯) ವಿವೃತವಾಗಿರುವುದು

## ಸೂಕ್ತ—೯೨

ಮಂಡಲ—೭ ॥ ಅನುವಾಕ—೬ ॥ ಸೂಕ್ತ—೯೨ ॥
ಅಷ್ಟಕ —೫ ॥ ಅಧ್ಯಾಯ—೬ ॥ ವರ್ಗ—೧೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೫
ಋಷಿಃ—ವಸಿಷ್ಠಃ ॥
ದೇವತಾ—೧, ೩-೫ ವಾಯುಃ । ೨ ಇಂದ್ರವಾಯೂ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಆ ವಾಯೋ ಭೂಷ ಶುಚಿಪಾ ಉಪ ನಃ ಸಹಸ್ರಂ ತೇ ನಿಯುತೋ ವಿಶ್ವವಾರ ।
ಉಪೋ ತೇ ಅಂಧೋ ಮದ್ಯಮಯಾಮಿ ಯಸ್ಯ ದೇವ ದಧಿಷೇ ಪೂರ್ವಪೇಯಂ ॥ ೧ ॥

॥ ಪದಪಾಠಃ ॥

ಆ । ವಾಯೋ ಇತಿ । ಭೂಷ । ಶುಚಿಽಪಾಃ । ಉಪ । ನಃ । ಸಹಸ್ರಂ । ತೇ । ನಿಽಯುತಃ । ವಿಶ್ವಽವಾರ ।
ಉಪೋ ಇತಿ । ತೇ । ಅಂಧಃ । ಮದ್ಯಂ । ಅಯಾಮಿ । ಯಸ್ಯ । ದೇವ । ದಧಿಷೇ । ಪೂರ್ವಽಪೇಯಂ ॥

॥ ಸಾಯಣಭಾಷ್ಯಂ ॥

ಹೇ ಶುಚಿಪಾಃ ಶುಚೇಃ ಶುದ್ಧಸ್ಯ ಸೋಮಸ್ಯ ಪಾತರ್ವಾಯೋ ನೋಽಸ್ಮಾಕಮುಪ ಸಮೀಪ ಆ ಭೂಷ । ಆಗಚ್ಛ ॥ ಭೂ ಪ್ರಾಪ್ತಾವಿತ್ಯಸ್ಯೈತದ್ರೂಪಂ ॥ ಹೇ ವಿಶ್ವವಾರ ವಿಶ್ವೈರ್ವರಣೀಯ ತೇ ತವ ವಾಹನಭೂತಾ ನಿಯುತೋ ವಡವಾಃ ಸಹಸ್ರಂ ಸಹಸ್ರಸಂಖ್ಯಾಕಾ ವಿದ್ಯಂತೇ ॥ ಯತ ಏವಮತಃ ಶೀಘ್ರಮಾಗಚ್ಛ । ತೇ ತವ ಮದ್ಯಂ ಮದಕರಂ ಸೋಮಲಕ್ಷಣಮಂಧೋಽನ್ನಮುಪೋ ಉಪ ಉ ಉಪಾಯಾಮಿ । ಉಪಯತಂ ಪಾತ್ರೇ ಗೃಹೀತಮಾಸೀತ್ । ಹೇ ದೇವ ವಾಯೋ ಯಸ್ಯ ಸೋಮಸ್ಯ ಪೂರ್ವಪೇಯಂ ಪ್ರಥಮಪಾನಂ ದಧಿಷೇ ದಧಾಸಿ ಧಾರಯಸಿ । ಐಂದ್ರವಾಯವಗ್ರಹೇ ಪ್ರಥಮೋ ವಷಟ್ಕಾರೋ ಕೇವಲಾಯ ವಾಯವೇ ಹೂಯತೇ ದ್ವಿತೀಯಸ್ತ್ವಿಂದ್ರವಾಯುಭ್ಯಾಮಿತಿ ವಾಯೋಃ ಪ್ರಥಮಪಾನಂ । ತಾದೃಶಮಂಧ ಉಪಾಯಾಮೀತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಶುಚಿಪಾಃ**—ಶುದ್ಧವಾದ ಸೋಮವನ್ನು ಪಾನಮಾಡತಕ್ಕ । **ವಾಯೋ**—ಎಲೈ ವಾಯುವೇ । **ನಃ**—ನಮಗೆ । **ಉಪ**—ಸಮೀಪದಲ್ಲಿ । **ಆ ಭೂಷ**—ಬಂದು ಕುಳಿತುಕೊ । **ವಿಶ್ವವಾರ**—ಎಲ್ಲರಿಗೂ ಅಪೇಕ್ಷಿತನಾದ ಎಲೈ ವಾಯುವೇ । **ತೇ**—ನಿನ್ನ ವಾಹನಗಳಾದ। **ನಿಯುತಃ**—ಅಶ್ವಗಳು । **ಸಹಸ್ರಂ**-ಸಹಸ್ರಸಂಖ್ಯಾಕವಾಗಿವೆ। **ದೇವ**—ದೇವತಾತ್ಮನಾದ ಎಲೈ ವಾಯುವೇ । **ಯಸ್ಯ**—ಯಾವ ಸೋಮಕ್ಕೆ । **ಪೂರ್ವಪೇಯಂ**-ಇತರ ದೇವತೆಗಳಿಗಿಂತಲೂ ಪ್ರಥಮತಃ ಪಾನವನ್ನು । **ದಧಿಷೇ**—ನೀನು ಹೊಂದುವೆಯೋ ಅಂತಹ । **ಮದ್ಯಂ**—ಮದಕರವಾದ । **ಅಂಧಃ**—ಸೋಮರೂಪವಾದ ಅನ್ನವನ್ನು । **ತೇ**—ನಿನಗೆ । **ಉಪೋ ಅಯಾಮಿ**—ಸಮೀಪಕ್ಕೆ ತಂದು ಅರ್ಪಿಸುತ್ತೇನೆ.

॥ ಭಾವಾರ್ಥ ॥

ಶುದ್ಧವಾದ ಸೋಮವನ್ನು ಪಾನಮಾಡತಕ್ಕ ಎಲೈ ವಾಯುವೇ, ನಮ್ಮ ಸಮೀಪದಲ್ಲಿ ಬಂದು ಕುಳಿತುಕೊ. ಎಲ್ಲರಿಗೂ ಅಪೇಕ್ಷಿತನಾದ ಎಲೈ ವಾಯುವೇ, ನಿನ್ನ ವಾಹನಗಳಾದ ಅಶ್ವಗಳು ಸಹಸ್ರಸಂಖ್ಯಾಕವಾಗಿವೆ ದೇವತಾತ್ಮನಾದ ಎಲೈ ವಾಯುವೇ, ಯಾವ ಸೋಮಕ್ಕೆ ಇತರ ದೇವತೆಗಳಿಗಿಂತಲೂ ಮೊದಲೇ ನೀನು ಪಾನವನ್ನು ಹೊಂದುವೆಯೋ ಅಂತಹ ಮಧುಕಾರಕವಾದುದೂ, ಸೋಮರೂಪದ್ದೂ ಆದ ಅನ್ನವನ್ನು ನಿನಗೆ ಸಮೀಪಕ್ಕೆ ತಂದು ಅರ್ಪಿಸುತ್ತೇನೆ.

## English Translation

Drinker of the pure (Soma), Vayu, come to us as your Niyuts are thousands: oh, you who are desired of all, I offer you, the exhilarating (sacrificial) food, of which you, deity, have the prior drinking

॥ ಸಂಹಿತಾಪಾಠಃ ॥

ಪ್ರ ಸೋತಾ ಜೀರೋ ಅಧ್ವರೇಷ್ವಸ್ಥಾತ್ಸೋಮಮಿಂದ್ರಾಯ ವಾಯವೇ
ಪಿಬಧ್ಯೈ ।
ಪ್ರ ಯದ್ವಾಂ ಮಧ್ವೋ ಅಗ್ರಿಯಂ ಭರಂತ್ಯಧ್ವರ್ಯವೋ ದೇವಯಂತಃ
ಶಚೀಭಿಃ ॥ ೨ ॥

॥ ಪದಪಾಠಃ ॥

ಪ್ರ । ಸೋತಾ । ಜೀರಃ । ಅಧ್ವರೇಷು । ಅಸ್ಥಾತ್ । ಸೋಮಂ । ಇಂದ್ರಾಯ । ವಾಯವೇ ।
ಪಿಬಧ್ಯೈ ।
ಪ್ರ । ಯತ್ । ವಾಂ । ಮಧ್ವಃ । ಅಗ್ರಿಯಂ । ಭರಂತಿ । ಅಧ್ವರ್ಯವಃ । ದೇವಯಂತಃ । ಶಚೀಭಿಃ ॥

॥ ಸಾಯಣಭಾಷ್ಯಂ ॥

ಪ್ರಥಮೇ ಛಂದೋಮೇ ಪ್ರಉಗಶಸ್ತ್ರ ಐಂದ್ರವಾಯವತೃಚಸ್ಯ ಪ್ರ ಸೋತೇತ್ಯಾದ್ಯಾ । ಸೂತ್ರಿತಂ ಚ । ಪ್ರ ಸೋತಾ ಜೀರೋ ಅಧ್ವರೇಷ್ವಸ್ಥಾದ್ಯೇ ವಾಯವ ಇಂದ್ರವಾದನಾಸಃ । ಆ. ೮-೯ । ಇತಿ ॥

ಜೀರಃ ಕ್ಷಿಪ್ರಕಾರೀ ಸೋತಾಭಿಷೋತಾಧ್ವರ್ಯುರಿಂದ್ರಾಯ ವಾಯವೇ ಚ ಪಿಬಧ್ಯೈ ಪಾನಾರ್ಥಮಧ್ವರೇಷು ಯಾಗೇಷು ಸೋಮಂ ಪ್ರಾಸ್ಥಾತ್ । ಪ್ರಾತಿಷ್ಠಿಪತ್ । ಪುರಸ್ತಾದುತ್ತರವೇದಿಂ ಪ್ರಾಪಿತವಾನ್ । ಹೇ ಇಂದ್ರವಾಯೂ ಯದ್ಯೇಷು ಯಜ್ಞೇಷು ಮಧ್ವಃ ಸೋಮಸ್ಯಾಗ್ರಿಯಮಗ್ರಭವಂ ಪ್ರಥಮಭಾಗಂ ದೇವಯಂತೋ ದೇವಕಾಮಾ ಅಧ್ವರ್ಯವಃ ಶಚೀಭಿಃ ಕರ್ಮಭಿರಭಿಷವಾದಿಲಕ್ಷಣೈರ್ವಾಂ ಯುವಯೋರರ್ಥಂ ಪ್ರ ಭರಂತಿ ಪ್ರಕರ್ಷೇಣ ಭರಂತಿ ಸಂಪಾದಯಂತಿ । ತೇಷ್ವಧ್ವರೇಷ್ವಿತ್ಯನ್ವಯಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರ ಮತ್ತು ವಾಯುದೇವತೆಗಳೇ) ಯತ್—ಯಾವ ಯಜ್ಞಗಳಲ್ಲಿ । ಮಧ್ವಃ—ಸೋಮರಸದ । ಅಗ್ರಿಯಂ—ಪ್ರಥಮಭಾಗವನ್ನು । ದೇವಯಂತಃ—ದೇವತೆಗಳ ಸಹಾಯವನ್ನಿಚ್ಛಿಸುವ । ಅಧ್ವರ್ಯವಃ—ಅಧ್ವರ್ಯುಗಳು । ಶಚೀಭಿಃ—ತಮ್ಮ ಅಭಿಷವಾದಿ ಕರ್ಮಗಳಿಂದ । ವಾಂ—ನಿಮ್ಮನ್ನುದ್ದೇಶಿಸಿ । ಪ್ರ ಭರಂತಿ—ಅತಿಶಯವಾಗಿ ಸಂಪಾದಿಸುವರೋ (ಅಂತಹ) । ಅಧ್ವರೇಷು—ಯಜ್ಞಗಳಲ್ಲಿ । ಜೀರಃ—ಕರ್ಮಕುಶಲನೂ । ಸೋತಾ—ಅಭಿಷವಾದಿ ಕರ್ಮಕರ್ತನೂ ಆದ ಅಧ್ವರ್ಯುವು । ಇಂದ್ರಾಯ—ಇಂದ್ರನಿಗೂ । ವಾಯವೇ—ವಾಯುವಿಗೂ । ಪಿಬಧ್ಯೈ—ಪಾನಾರ್ಥವಾಗಿ । ಸೋಮಂ—ಸೋಮರಸವನ್ನು । ಪ್ರ ಅಸ್ಥಾತ್—ತಂದು ಸಿದ್ಧಪಡಿಸಿದ್ದಾನೆ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವಾಯುದೇವತೆಗಳೇ ಯಾವ ಯಜ್ಞಗಳಲ್ಲಿ ಸೋಮರಸದ ಪ್ರಥಮಭಾಗವನ್ನು ದೇವತೆಗಳ ಸಹಾಯವನ್ನಿಚ್ಛಿಸುವ ಅಧ್ವರ್ಯುಗಳು ತಮ್ಮ ಅಭಿಷವಾದಿ ಕರ್ಮಗಳಿಂದ ನಿಮ್ಮನ್ನುದ್ದೇಶಿಸಿ ಅತಿಶಯವಾಗಿ ಸಂಪಾದಿಸುವರೋ ಅಂತಹ ಯಜ್ಞಗಳಲ್ಲಿ ಕರ್ಮಕುಶಲನೂ ಅಭಿಷವಾದಿ ಕರ್ಮಕರ್ತನೂ ಆದ ಅಧ್ವರ್ಯುವು ಇಂದ್ರನಿಗೂ ವಾಯುವಿಗೂ ಪಾನಾರ್ಥವಾಗಿ ಸೋಮರಸವನ್ನು ತಂದು ಸಿದ್ಧಪಡಿಸಿದ್ದಾನೆ.

## English translation

The prompt effuser of the libation offers the Soma to Indra and to Vayu to drink at the sacrifices, at which devout priests, according to their functions, bring to you two the first (portion) of the Soma.

॥ ವಿಶೇಷವಿಷಯಗಳು ॥

ಪ್ರಥಮ ಛಂದೋಮದ ಪ್ರಉಗಶಸ್ತ್ರಮಂತ್ರಗಳಲ್ಲಿ ಪ್ರ ಸೋತಾ ಎಂಬ ಈ ಋಕ್ಕನ್ನು ಐಂದ್ರವಾಯವತೃಚದ ಮೊದಲನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಪ್ರ ಸೋತಾ ಜೀರೋ ಅಧ್ವರೇಷ್ವಸ್ಥಾದ್ಯೇ ವಾಯವ ಇಂದ್ರವಾದನಾಸಃ—ಎಂಬ ಸೂತ್ರದಿಂದ (ಆ. ೮-೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಪ್ರ ಯಾಭಿರ್ಯಾಸಿ ದಾಶ್ವಾಂಸಮಚ್ಛಾ ನಿಯುದ್ಭಿರ್ವಾಯವಿಷ್ಟಯೇ ದುರೋಣೇ ।
ನಿ ನೋ ರಯಿಂ ಸುಭೋಜಸಂ ಯುವಸ್ವ ನಿ ವೀರಂ ಗವ್ಯಮಶ್ವ್ಯಂ ಚ ರಾಧಃ ॥ ೨ ॥

॥ ಪದಪಾಠಃ ॥

ಪ್ರ । ಯಾಭಿಃ । ಯಾಸಿ । ದಾಶ್ವಾಂಸಂ । ಅಚ್ಛ । ನಿಯುತ್ಽಭಿಃ । ವಾಯೋ ಇತಿ । ಇಷ್ಟಯೇ । ದುರೋಣೇ ।
ನಿ । ನಃ । ರಯಿಂ । ಸುಽಭೋಜಸಂ । ಯುವಸ್ವ । ನಿ । ವೀರಂ । ಗವ್ಯಂ । ಅಶ್ವ್ಯಂ । ಚ । ರಾಧಃ ॥ ೨ ॥

॥ ಸಾಯಣಭಾಷ್ಯಂ ॥

ಶುನಾಸೀರೀಯೇ ಪರ್ವಣಿ ನಿಯುತ್ವದ್ವಾಯೋರ್ಯಾಗಸ್ಯ ಪ್ರ ಯಾಭಿರಿತಿ ಯಾಜ್ಯಾ । ಸೂತ್ರಿತಂ ಚ । ಪ್ರ ಯಾಭಿರ್ಯಾಸಿ ದಾಶ್ವಾಂಸಮಚ್ಛ ಸ ತ್ವಂ ನೋ ದೇವ ಮನಸಾ । ಆ. ೨.೨೦ । ಇತಿ ॥ ತಸ್ಮಿನ್ನೇವ ಪಶಾವೇಷೈವ ಪುರೋಡಾಶಸ್ಯಾನುವಾಕ್ಯಾ । ಸೂತ್ರಿತಂ ಚ । ಪ್ರ ಯಾಭಿರ್ಯಾಸಿ ದಾಶ್ವಾಂಸಮಚ್ಛಾ ನೋ ನಿಯುದ್ಭಿಃ ಶತಿನೀಭಿಃ । ಆ. ೩-೮ । ಇತಿ ॥ ಪ್ರಥಮೇ ಛಂದೋಮೇ ಪ್ರಉಗಶಸ್ತ್ರ ಏಷೈವ ವಾಯವ್ಯತೃಚಸ್ಯ ದ್ವಿತೀಯಾ । ಸೂತ್ರಿತಂ ಚ । ಆ ವಾಯೋ ಭೂಷ ಶುಚಿಪಾ ಉಪ ನಃ ಪ್ರ ಯಾಭಿರ್ಯಾಸಿ ದಾಶ್ವಾಂಸಮಚ್ಛಾ । ಆ ೮-೯ । ಇತಿ ॥

ಹೇ ವಾಯೋ ದುರೋಣೇ ಯಜ್ಞಗೃಹೇ ಸ್ಥಿತಂ ದಾಶ್ವಾಂಸಂ ಹವಿಷಾಂ ದಾತಾರಂ ಯಜಮಾನಮಿಷ್ಟಯೇ ಯಾಗಾಯ ಯಾಭಿರ್ನಿಯುದ್ಭಿರ್ವಡವಾಭಿರಚ್ಛ ಯಾಸಿ ಅಭಿಗಚ್ಛಸಿ ತಾಭಿರಸ್ಮಾನ್ಪ್ರತ್ಯಾಗಚ್ಛೇತಿ ಶೇಷಃ । ಆಗತ್ಯ ಚ ನೋಽಸ್ಮಭ್ಯಂ ಸುಭೋಜಸಂ ಶೋಭನಾನ್ನಯುಕ್ತಂ ರಯಿಂ ಧನಂ ನಿ ಯುವಸ್ವ । ನಿತರಾಂ ಮಿಶ್ರಯ ಪ್ರಯಚ್ಛ । ತಥಾ ವೀರಂ ಪುತ್ರಂ ಗವ್ಯಂ ಗೋಸಂಘಮಶ್ವ್ಯಮಶ್ವಸಂಘಮೇತದುಭಯಾತ್ಮಕಂ ರಾಧೋ ಧನಂ ಚ ನಿ ಯುವಸ್ವ । ಪ್ರಯಚ್ಛ ॥

॥ ಪ್ರತಿಪದಾರ್ಥ ॥

ವಾಯೋ—ಎಲೈ ವಾಯುವೇ । ದುರೋಣೇ—ಯಜ್ಞಗೃಹದಲ್ಲಿ ಸಿದ್ಧನಾಗಿರುವವನೂ । ದಾಶ್ವಾಂಸಂ ಅಚ್ಛ—ಹವಿಸ್ಸನ್ನರ್ಪಿಸುವವನೂ ಆದ ಯಜಮಾನನಿಗಭಿಮುಖವಾಗಿ । ಇಷ್ಟಯೇ—ಯಜ್ಞಾರ್ಥವಾಗಿ । ಯಾಭಿಃ

**ನಿಯುದ್ಭಿಃ**—ಯಾವ ನಿನ್ನ ಅಶ್ವಗಳೊಡನೆ । **ಪ್ರ ಯಾಸಿ**—ಹೋಗುವೆಯೋ (ಅದೇ ಅಶ್ವಗಳೊಡನೆ ನಮ್ಮ ಯಜ್ಞಕ್ಕೂ ದಯಮಾಡು) । **ನಃ**—ನಮಗೆ । **ಸುಭೋಜಸಂ**—ಉತ್ತಮವಾದ ಅನ್ನದೊಡನೆ ಕೂಡಿದ । **ರಯಿಂ**—ಧನವನ್ನು । **ನಿ ಯುವಸ್ವ**—ಪೂರ್ಣವಾಗಿ ಒದಗಿಸು । **ವೀರಂ**—ಶಕ್ತಿಯುತರಾದ ಪುತ್ರರನ್ನೂ । **ಗವ್ಯಂ**—ಗೋಸಂಘವನ್ನೂ । **ಅಶ್ವ್ಯಂ**—ಅಶ್ವಸಂಘವನ್ನೂ । **ರಾಧಃ ಚ**—ಧನವನ್ನೂ । **ನಿ (ಯುವಸ್ವ)**—ನಮಗೆ ತಂದೊದಗಿಸು.

॥ ಭಾವಾರ್ಥ ॥

ಎಲೈ ವಾಯುವೇ, ಯಜ್ಞಗೃಹದಲ್ಲಿ ನಿನ್ನ ಪೂಜೆಗೆ ಸಿದ್ಧನಾಗಿರುವವನೂ ಹವಿಸ್ಸನ್ನರ್ಪಿಸುವವನೂ ಆದ ಯಜಮಾನನಿಗಭಿಮುಖವಾಗಿ ಯಜ್ಞವನ್ನು ಸಾರ್ಥಕಗೊಳಿಸಲು ಯಾವ ನಿನ್ನ ಅಶ್ವಗಳೊಡನೆ ಹೋಗುವೆಯೋ ಅದೇ ಅಶ್ವಗಳೊಡನೆ ನಮ್ಮ ಯಜ್ಞಕ್ಕೂ ದಯಮಾಡು. ನಮಗೆ ಉತ್ತಮವಾದ ಅನ್ನದೊಡನೆ ಕೂಡಿದ ಧನವನ್ನು ಪೂರ್ಣವಾಗಿ ಒದಗಿಸು. ಶಕ್ತಿಯುತರಾದ ಪುತ್ರರನ್ನೂ, ಗೋಸಂಘವನ್ನೂ, ಅಶ್ವಸಂಘವನ್ನೂ, ಧನವನ್ನೂ ನಮಗೆ ತಂದೊದಗಿಸು.

## English Translation

With those Niyut steeds with which you repair, Vayu, to the donor (of the libation), waiting in his hall to offer sacrifice, (come to us), and bestow upon us enjoyable riches, bestow male progeny, and wealth, comprehending cattle, and horses

॥ ವಿಶೇಷವಿಷಯಗಳು ॥

ಶುನಾಸೀರಸಂಬಂಧವಾದ ಪರ್ವದಲ್ಲಿ ನಿಯುತ್ವದ್ವಾಯುವನ್ನುದ್ದೇಶಿಸಿ ಮಾಡುವ ಯಾಗದಲ್ಲಿ **ಪ್ರ ಯಾಭಿಃ** ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರ ಯಾಭಿರ್ಯಾಸಿ ದಾಶ್ವಾಂಸಮಚ್ಛ ಸ ತ್ವಂ ನೋ ದೇವ ಮನಸಾ** ಎಂಬ ಸೂತ್ರದಿಂದ (ಆ. ೨-೨೦) ವಿವೃತವಾಗಿರುವುದು. ಇದೇ ನಿಯುತ್ವದ್ವಾಯುದೇವತಾಕವಾದ ಪಶುಯಾಗದಲ್ಲಿ ಈ ಋಕ್ಕನ್ನು ಪುರೋಡಾಶಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರ ಯಾಭಿರ್ಯಾಸಿ ದಾಶ್ವಾಂಸಮಚ್ಛಾ ನೋ ನಿಯುದ್ಭಿಃ ಶತಿನೀಭಿಃ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು. ಮತ್ತು ಪ್ರಥಮಛಂದೋಮದ ಪ್ರಉಗಶಸ್ತ್ರಮಂತ್ರಗಳಲ್ಲಿ ಈ ಋಕ್ಕನ್ನು ವಾಯವ್ಯತೃಚದಲ್ಲಿ ಎರಡನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಆ ವಾಯೋ ಭೂಷ ಶುಚಿಪಾ ಉಪ ನಃ ಪ್ರ ಯಾಭಿರ್ಯಾಸಿ ದಾಶ್ವಾಂಸಮಚ್ಛ** ಎಂಬ ಸೂತ್ರದಿಂದ (ಆ. ೮-೯) ವಿವೃತವಾಗಿರುವುದು

॥ ಸಂಹಿತಾಪಾಠಃ ॥

**ಯೇ ವಾಯವ ಇಂದ್ರಮಾದನಾಸ ಆದೇವಾಸೋ ನಿತೋಶನಾಸೋ ಅರ್ಯಃ ।**

ಘ್ನಂತೋ ವೃತ್ರಾಣಿ ಸೂರಿಭಿಃ ಷ್ಯಾಮ ಸಾಸಹ್ವಾಂಸೋ ಯುಧಾ ನೃಭಿರಮಿತ್ರಾನ್ ॥ ೪ ॥

॥ ಪದಪಾಠಃ ॥

ಯೇ । ವಾಯವೇ । ಇಂದ್ರಽಮಾದನಾಸಃ । ಆಽದೇವಾಸಃ । ನಿಽತೋಶನಾಸಃ । ಅರ್ಯಃ ।
ಘ್ನಂತಃ । ವೃತ್ರಾಣಿ । ಸೂರಿಽಭಿಃ । ಸ್ಯಾಮ । ಸಸಹ್ವಾಂಸಃ । ಯುಧಾ । ನೃಽಭಿಃ । ಅಮಿತ್ರಾನ್ ॥ ೪ ॥

॥ ಸಾಯಣಭಾಷ್ಯಂ ॥

ಪ್ರಥಮೇ ಛಂದೋಮೇ ಪ್ರಉಗಶಸ್ತ್ರ ಐಂದ್ರವಾಯವತೃಚಸ್ಯ ಯೇ ವಾಯವ ಇಂದ್ರೇತಿ ದ್ವಿತೀಯಾ । ಸೂತ್ರಿತಂ ಚ ಯೇ ವಾಯವ ಇಂದ್ರಮಾದನಾಸೋ ಯಾ ವಾಂ ಶತಂ ನಿಯುತೋ ಯಾಃ ಸಹಸ್ರಂ । ಆ. ೮-೯ । ಇತಿ ॥

ಯೇ ಸೂರಯಃ ಸ್ತೋತಾರ ಇಂದ್ರಮಾದನಾಸಃ ಸ್ತೋತ್ರೈರಿಂದ್ರಸ್ಯ ತರ್ಪಯಿತಾರಸ್ತಥಾ ವಾಯವೇ ವಾಯೋಶ್ಚ ಮಾದನಾಸ್ತರ್ಪಕಾ ಭವಂತಿ । ಯೇ ಚಾದೇವಾಸೋ ಜಾಗತ್ಯೈರುಪೇತಾ ಅತ ಏವಾರ್ಯೋಽರೇಃ ಶತ್ರೋರ್ನಿತೋಶನಾಸೋ ನಿಹಂತಾರಃ । ತೈರಸ್ಮದೀಯೈಃ ಸೂರಿಭಿಃ ಸ್ತೋತೃಭಿರ್ವೃತ್ರಾಣಿ ಶತ್ರೂನ್ ಘ್ನಂತೋ ಹಿಂಸಂತಃ ಸ್ಯಾಮ ಭವೇಮ । ಕಿಂ ಕುರ್ವಂತಃ । ಅಮಿತ್ರಾಞ್ಛತ್ರುಭಟಾನ್ನೃಭಿರಸ್ಮದೀಯೈಃ ಪುರುಷೈರ್ಯುಧಾ ಯುದ್ಧೇಭಿಃ ಸಸಹ್ವಾಂಸೋಽಭಿಭವಂತಃ ।

॥ ಪ್ರತಿಪದಾರ್ಥ ॥

**ಯೇ**—ಯಾವ ಸ್ತೋತೃಗಳು । **ಇಂದ್ರಮಾದನಾಸಃ**—ತಮ್ಮ ಸ್ತುತಿಗಳಿಂದ ಇಂದ್ರನಿಗೆ ತೃಪ್ತಿಯನ್ನು ಉಂಟುಮಾಡುವರೋ । **ವಾಯವೇ**—ವಾಯುವಿಗೂ ತೃಪ್ತಿಯನ್ನುಂಟುಮಾಡುವರೋ । (**ಯೇ**—ಯಾರು) । **ಆದೇವಾಸಃ**—ದೇವತೆಗಳನ್ನು ಪ್ರಶಂಸಿಸುವ ಸ್ತುತಿಯುಕ್ತರಾಗಿ । **ಅರ್ಯಃ**—ಶತ್ರುವಿನ । **ನಿತೋಶನಾಸಃ**—ನಾಶಕರಾಗಲು ಸಮರ್ಥರೋ । **ಸೂರಿಭಿಃ**—(ಅಂತಹ) ಸ್ತೋತೃಗಳೊಡನೆ ಕೂಡಿದ ನಾವು । **ಅಮಿತ್ರಾನ್**—ಶತ್ರುಭಟರನ್ನು । **ನೃಭಿಃ**—ನಮ್ಮ ವೀರಪುರುಷರ ಸಹಾಯದಿಂದ । **ಯುಧಾ**—ಯುದ್ಧಗಳಲ್ಲಿ । **ಸಸಹ್ವಾಂಸಃ**—ಸೋಲಿಸುತ್ತಲೂ । **ವೃತ್ರಾಣಿ**—ಶತ್ರುಗಳನ್ನೆಲ್ಲಾ । **ಘ್ನಂತಃ**—ಹಿಂಸಿಸುತ್ತಲೂ । **ಸ್ಯಾಮ**—ಇರುವಂತಾಗಲಿ.

॥ ಭಾವಾರ್ಥ ॥

ಯಾವ ಸ್ತೋತೃಗಳು ತಮ್ಮ ಸ್ತುತಿಗಳಿಂದ ಇಂದ್ರನಿಗೂ ವಾಯುವಿಗೂ ತೃಪ್ತಿಯನ್ನುಂಟುಮಾಡುವರೋ ಯಾರು ದೇವತೆಗಳನ್ನು ಪ್ರಶಂಸಿಸುವ ಸ್ತುತಿಯುಕ್ತರಾಗಿ ಶತ್ರುವಿನ ನಾಶಕರಾಗಲು ಸಮರ್ಥರೋ ಅಂತಹ ಸ್ತೋತೃಗಳೊಡನೆ ಕೂಡಿದ ನಾವು ನಮ್ಮ ವೀರಪುರುಷರ ಸಹಾಯದಿಂದ ಯುದ್ಧಗಳಲ್ಲಿ ಶತ್ರುಭಟರನ್ನು ಸೋಲಿಸುತ್ತಲೂ ಶತ್ರುಗಳನ್ನು ಹಿಂಸಿಸುತ್ತಲೂ ಇರುವಂತಾಗಲಿ.

## English Translation

Overcoming our enemies in war by our warriors, may we be the slayers of foes, through the pious (worshippers) who are the exhilarators of Indra and Vayu, the reciters of divine hymns, the destroyers of the adversary.

॥ ವಿಶೇಷವಿಷಯಗಳು ॥

ಪ್ರಥಮಛಂದೋಮದ ಪ್ರಉಗಶಸ್ತ್ರಮಂತ್ರಗಳ ಪಠನಕಾಲದಲ್ಲಿ—ಯೇ ವಾಯವ ಇಂದ್ರ ಎಂಬ ಈ ಋಕ್ಕನ್ನು ಐಂದ್ರವಾಯವತೃಚದ ಎರಡನೆಯ ಋಕ್ಕಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಯೇ ವಾಯವ ಇಂದ್ರಮಾದನಾಸೋ ಯಾ ವಾಂ ಶತಂ ನಿಯುತೋ ಯಾಃ ಸಹಸ್ರಂ ಎಂಬ ಸೂತ್ರದಿಂದ (ಆ. ೮.೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಆ ನೋ ನಿಯುದ್ಭಿಃ ಶತಿನೀಭಿರಧ್ವರಂ ಸಹಸ್ರಿಣೀಭಿರುಪ ಯಾಹಿ ಯಜ್ಞಂ ।
ವಾಯೋ ಅಸ್ಮಿನ್ತ್ಸವನೇ ಮಾದಯಸ್ವ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೫ ॥

॥ ಪದಪಾಠಃ ॥

ಆ । ನಃ । ನಿಯುತ್ಽಭಿಃ । ಶತಿನೀಭಿಃ । ಅಧ್ವರಂ । ಸಹಸ್ರಿಣೀಭಿಃ । ಉಪ । ಯಾಹಿ । ಯಜ್ಞಂ ।
ವಾಯೋ ಇತಿ । ಅಸ್ಮಿನ್ । ಸವನೇ । ಮಾದಯಸ್ವ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥

॥ ಸಾಯಣಭಾಷ್ಯಂ ॥

ನಿಯುತ್ವದ್ವಾಯುದೇವತಾಕೇ ಪಶಾವಾ ನೋ ನಿಯುದ್ಭಿರಿತಿ ಹವಿಷೋಽನುವಾಕ್ಯಾ । ಸೂತ್ರಿತಂ ಚ । ಆ ನೋ ನಿಯುದ್ಭಿಃ ಶತಿನೀಭಿರಧ್ವರಂ ಪೀವೋಅನ್ನಾ ರಯಿವೃಧಃ ಸುಮೇಧಾಃ । ಆ. ೩-೮ । ಇತಿ ॥ ಪ್ರಥಮೇ ಛಂದೋಮೇ ಪ್ರಉಗಶಸ್ತ್ರೇ ವಾಯವ್ಯತೃಚಸ್ಯೈಷೈವ ತೃತೀಯಾ । ಸೂತ್ರಿತಂ ಚ । ಆ ನೋ ನಿಯುದ್ಭಿಃ ಶತಿನೀಭಿರಧ್ವರಂ ಪ್ರ ಸೋತಾ ಜೀರೋ ಅಧ್ವರೇಷ್ವಸ್ಥಾತ್ । ಆ. ೮-೯ । ಇತಿ ॥

ಹೇ ವಾಯೋ ನೋಽಸ್ಮಾಕಮಧ್ವರಂ ಹಿಂಸಾರಹಿತಂ ಯಜ್ಞಂ ಶತಿನೀಭಿಃ ಶತಸಂಖ್ಯಾವತೀಭಿಃ ಸಹಸ್ರಿಣೀಭಿಃ ಸಹಸ್ರಸಂಖ್ಯಾವತೀಭಿಶ್ಚ ನಿಯುದ್ಭಿರ್ವಡವಾಭಿರುಪಾ ಯಾಹಿ । ಉಪಾಗಚ್ಛ ತದನಂತರಮಸ್ಮಿನ್ ಸವನೇ ಪ್ರಾತಃಸವನೇ ಮಾದಯಸ್ವ । ಸೋಮೇನ ತೃಪ್ಯಸ್ವ । ಅನ್ಯದ್ಗತಂ ॥

॥ ಪ್ರತಿಪದಾರ್ಥ ॥

**ವಾಯೋ**—ಎಲೈ ವಾಯುವೇ । **ನಃ** - ನಮ್ಮ । **ಅಧ್ವರಂ**—ಹಿಂಸಾರಹಿತವಾದ । **ಯಜ್ಞಂ**—ಯಜ್ಞಕ್ಕೆ । **ಶತಿನೀಭಿಃ** –ಶತಸಂಖ್ಯಾಕವಾದವೂ । **ಸಹಸ್ರಿಣೀಭಿಃ**—ಸಹಸ್ರಸಂಖ್ಯಾಕವಾದವೂ ಆದ । **ನಿಯುದ್ಭಿಃ**–ಅಶ್ವಗಳೊಡನೆ । **ಉಪ ಆ ಯಾಹಿ**—ದಯಮಾಡು । **ಅಸ್ಮಿನ್ ಸವನೇ**—ಈ ಪ್ರಾತಃಸವನದಲ್ಲಿ । **ಮಾದಯಸ್ವ**–ಸೋಮರಸದ ಪಾನದಿಂದ ಹರ್ಷಿಸು (ಎಲೈ ವಾಯ್ವಾದಿದೇವತೆಗಳೇ) । **ಯೂಯಂ**—ನೀವು । **ನಃ**—ನಮ್ಮನ್ನು **ಸದಾ** -ಯಾವಾಗಲೂ । **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ

॥ ಭಾವಾರ್ಥ ॥

ಎಲೈ ವಾಯುವೇ, ನಮ್ಮ ಹಿಂಸಾರಹಿತವಾದ ಯಜ್ಞಕ್ಕೆ ಶತಸಂಖ್ಯಾಕವಾದವೂ ಸಹಸ್ರಸಂಖ್ಯಾಕವಾದವೂ ಆದ ಅಶ್ವಗಳೊಡನೆ ದಯಮಾಡು. ಈ ಪ್ರಾತಃಸವನದಲ್ಲಿ ಸೋಮರಸದ ಪಾನದಿಂದ ಹರ್ಷಿಸು. ಎಲೈ ವಾಯ್ವಾದಿ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

Come, Vayu, to our imperishable sacrifice, with hundreds and thousands of Niyut steeds, and be exhilarated at this ceremony: you (gods) ever cherish us with blessings.

॥ ವಿಶೇಷವಿಷಯಗಳು ॥

ನಿಯುತ್ವದ್ವಾಯುದೇವತಾಕವಾದ ಪಶುಯಾಗದಲ್ಲಿ—ಆ ನೋ ನಿಯುದ್ಭಿಃ ಎಂಬ ಈ ಋಕ್ಕನ್ನು ಹವಿರ್ಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಆ ನೋ ನಿಯುದ್ಭಿಃ ಶತಿನೀಭಿರಧ್ವರಂ ಪೀವೋಅನ್ನಾಂ ರಯಿವೃಧಃ ಸುಮೇಧಾಃ** ಎಂಬ ಸೂತ್ರದಿಂದ (ಅ. ೩-೮) ವಿವೃತವಾಗಿರುವುದು. ಮತ್ತು ಪ್ರಥಮಛಂದೋಮದ ಪ್ರಉಗಶಸ್ತ್ರಮಂತ್ರಪಠನದಲ್ಲಿ ಈ ಋಕ್ಕನ್ನು ವಾಯವ್ಯತೃಚದ ಎರಡನೆಯ ಋಕ್ಕಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಆ ನೋ ನಿಯುದ್ಭಿಃ ಶತಿನೀಭಿರಧ್ವರಂ ಪ್ರ ಸೋತಾ ಜೀರೋ ಅಧ್ವರೇಷ್ವಸ್ಥಾತ್** ಎಂಬ ಸೂತ್ರದಿಂದ (ಅ. ೮-೯) ವಿವೃತವಾಗಿರುವುದು.



## ತೊಂಭತ್ತಮೂರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಶುಚಿಂ ನ್ವಿತ್ಯಷ್ಟರ್ಚಂ ಚತುರ್ಥಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಮೈಂದ್ರಾಗ್ನಂ । ಅನು. ಕ್ರಮ್ಯತೇ ಹಿ । ಶುಚಿಂ ನ್ವಷ್ಟಾವೈಂದ್ರಾಗ್ನಂ ತ್ವಿತಿ ॥ ಗತಃ ಸೂಕ್ತವಿನಿಯೋಗಃ ॥ ಐಂದ್ರಾಗ್ನಸ್ಯ ಪಶೋರ್ವಪಾಯಾಃ ಶುಚಿಮಿತ್ಯೇಷಾ ಯಾಜ್ಯಾ । ಸೂತ್ರಿತಂ ಚ । ಶುಚಿಂ ನು ಸ್ತೋಮಂ ನವಜಾತ- ಮದ್ಯ ಗೀರ್ಭಿರ್ವಿಪ್ರಃ ಪ್ರಮತಿಮಿಚ್ಛಮಾನಃ । ಆ ೩.೭ ಇತಿ ॥

ಅನುವಾದವು— ಶುಚಿಂ ನು ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಇಂದ್ರಾಗ್ನಿಗಳು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— ಶುಚಿಂ ನ್ವಷ್ಟಾವೈಂದ್ರಾಗ್ನಂ ತು ಎಂದು ಹೇಳಿರುವುದು. ಸೂಕ್ತದ ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಇಂದ್ರಾಗ್ನಿಗಳನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ಶುಚಿಂ ಎಂಬ ಈ ಋಕ್ಕನ್ನು ವಪಾಹೋಮದ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ — ಶುಚಿಂ ನು ಸ್ತೋಮಂ ನವಜಾತಮದ್ಯ ಗೀರ್ಭಿರ್ವಿಪ್ರಃ ಪ್ರಮತಿಮಿಚ್ಛಮಾನಃ ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು.

### ಸೂಕ್ತ— ೯೩

ಮಂಡಲ— ೭ ॥ ಅನುವಾಕ— ೬ ॥ ಸೂಕ್ತ— ೯೩ ॥
ಅಷ್ಟಕ— ೫ ॥ ಅಧ್ಯಾಯ— ೬ ॥ ವರ್ಗ— ೧೫, ೧೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ— ೮ ॥
ಋಷಿಃ— ವಸಿಷ್ಠಃ ॥
ದೇವತಾ— ಇಂದ್ರಾಗ್ನೀ ॥
ಛಂದಃ— ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಶುಚಿಂ ನು ಸ್ತೋಮಂ ನವಜಾತಮದ್ಯೇಂದ್ರಾಗ್ನೀ ವೃತ್ರಹಣಾ ಜುಷೇಥಾಂ।
ಉಭಾ ಹಿ ವಾಂ ಸುಹವಾ ಜೋಹವೀಮಿ ತಾ ವಾಜಂ ಸದ್ಯ ಉಶತೇ
ಧೇಷ್ಠಾ ॥ ೧ ॥

॥ ಪದಪಾಠಃ ॥

ಶುಚಿಂ । ನು । ಸ್ತೋಮಂ । ನವಽಜಾತಂ । ಅದ್ಯ । ಇಂದ್ರಾಗ್ನೀ ಇತಿ । ವೃತ್ರಽಹನಾ । ಜುಷೇಥಾಂ ।
ಉಭಾ । ಹಿ । ವಾಂ । ಸುಽಹವಾ । ಜೋಹವೀಮಿ । ತಾ । ವಾಜಂ । ಸದ್ಯಃ । ಉಶತೇ । ಧೇಷ್ಠಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ವೃತ್ರಹಣಾ ವೃತ್ರಾಣಾಂ ಶತ್ರೂಣಾಂ ಹಂತಾರಾವಿಂದ್ರಾಗ್ನೀ ಶುಚಿಂ ಶುದ್ಧಂ ನಿರವದ್ಯಂ ನವಜಾತಮಿದಾನೀಮುತ್ಪನ್ನಂ ಸ್ತೋಮಮಸ್ಮದೀಯಂ ಸ್ತೋತ್ರಮದ್ಯಾಸ್ಮಿನ್ಕಾಲೇ ನು ಕ್ಷಿಪ್ರಂ ಜುಷೇಥಾಂ । ಸೇವೇಥಾಂ । ಹಿ ಯಸ್ಮಾತ್ಸುಹವಾ ಸುಖಮಾಹ್ವಾತುಂ ಶಕ್ಯಾವುಭೌಭಾ ವಾಂ ಯುವಾಂ ಜೋಹವೀಮಿ ಪುನಃಪುನರಾಹ್ವಯಾಮಿ । ಅತ ಆಗತ್ಯ ಸೇವೇಥಾಮಿತ್ಯರ್ಥಃ । ಕಿಂಚ ತಾ ತೌ ತಥಾವಿಧೌ ಯುವಾಮುಶತೇ ಕಾಮಯಮಾನಾಯ ಯಜಮಾನಾಯ ವಾಜಮನ್ನಂ ಬಲಂ ವಾ ಸದ್ಯಸ್ತದಾನೀಮೇವ ಶೀಘ್ರಂ ಧೇಷ್ಠಾ ದಾತೃತಮೌ ಭವತಂ ॥

॥ ಪ್ರತಿಪದಾರ್ಥ ॥

ವೃತ್ರಹಣಾ—ಶತ್ರುನಾಶಕರಾದ । ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿ ದೇವತೆಗಳೇ । ಹಿ—ಯಾವ ಕಾರಣದಿಂದ । ಸುಹವಾ—ಆಹ್ವಾನಕ್ಕೆ ಸುಲಭವಾಗಿ ಪಾತ್ರರೂ । ಉಭಾ—ಜೊತೆಯಲ್ಲಿರುವವರೂ ಆದ । ವಾಂ—ನಿಮ್ಮಿಬ್ಬರನ್ನೂ । ಜೋಹವೀಮಿ—ನಾನು ಪ್ರಾರ್ಥಿಸಿ ಕರೆಯುವೆನೋ (ಆ ನಿಮಿತ್ತವಾಗಿ) । ಶುಚಿಂ—ನಿರ್ಮಲವಾದುದೂ । ನವಜಾತಂ—ನೂತನವಾಗಿ ನಿರ್ಮಿತವಾದುದೂ ಆದ । ಸ್ತೋಮಂ—ನಮ್ಮ ಸ್ತೋತ್ರವನ್ನು । ಅದ್ಯ—ಈ ಯಾಗಕಾಲದಲ್ಲಿ । ನು—ಕ್ಷಿಪ್ರವಾಗಿ । ಜುಷೇಥಾಂ—ಸೇವಿಸಿರಿ । ತಾ—ನೀವಿಬ್ಬರೂ । ಉಶತೇ—ನಿಮ್ಮ ಸಾನ್ನಿಧ್ಯವನ್ನಪೇಕ್ಷಿಸುವ ಯಜಮಾನನಿಗೆ । ವಾಜಂ—ಅನ್ನವನ್ನು । ಸದ್ಯಃ—ಒಡನೆಯೇ । ಧೇಷ್ಠಾ—ಕೊಡುವವರಾಗಿ.

॥ ಭಾವಾರ್ಥ ॥

ಶತ್ರುನಾಶಕರಾದ ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ಯಾವ ಕಾರಣದಿಂದ ಆಹ್ವಾನಕ್ಕೆ ಸುಲಭವಾದ ಪಾತ್ರರೂ, ಜೊತೆಯಲ್ಲಿರುವವರೂ ಆದ ನಿಮ್ಮಿಬ್ಬರನ್ನೂ ನಾನು ಪ್ರಾರ್ಥಿಸಿ ಕರೆಯುವೆನೋ ಆ ನಿಮಿತ್ತವಾಗಿ ನಿರ್ಮಲವಾದುದೂ ನೂತನವಾಗಿ ನಿರ್ಮಿತವಾದುದೂ ಆದ ನಮ್ಮ ಸ್ತೋತ್ರವನ್ನು ಈ ಯಾಗಕಾಲದಲ್ಲಿ ಕ್ಷಿಪ್ರವಾಗಿ ಸೇವಿಸಿರಿ. ನೀವಿಬ್ಬರೂ ನಿಮ್ಮ ಸಾನಿಧ್ಯವನ್ನಪೇಕ್ಷಿಸುವ ಯಜಮಾನನಿಗೆ ಒಡನೆಯೇ ಅನ್ನವನ್ನು ಕೊಡುವವರಾಗಿ

## English Translation

Slayers of enemies, Indra and Agni, be pleased to-day by this pious and newly recited praise: repeatedly we invoke you both, who are worthy of invocation; you are the chief bestowers of food promptly upon him who solicits (it of you).

॥ ಸಂಹಿತಾಪಾಠಃ ॥

ತಾ ಸಾನಸೀ ಶವಸಾನಾ ಹಿ ಭೂತಂ ಸಾಕಂವೃಧಾ ಶವಸಾ ಶೂಶುವಾಂಸಾ।
ಕ್ಷಯಂತೌ ರಾಯೋ ಯವಸಸ್ಯ ಭೂರೇಃ ಪೃಂಕ್ತಂ ವಾಜಸ್ಯ ಸ್ಥವಿರಸ್ಯ
ಘೃಷ್ವೇಃ ॥ ೨ ॥

॥ ಪದಪಾಠಃ ॥

ತಾ । ಸಾನಸೀ ಇತಿ । ಶವಸಾನಾ । ಹಿ । ಭೂತಂ । ಸಾಕಂऽವೃಧಾ । ಶವಸಾ । ಶೂಶುऽವಾಂಸಾ ।

ಕ್ಷಯಂತೌ । ರಾಯಃ । ಯವಸಸ್ಯ । ಭೂರೇಃ । ಪೃಂಕ್ತಂ । ವಾಜಸ್ಯ । ಸ್ಥವಿರಸ್ಯ । ಘೃಷ್ವೇಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ತಾ ತೌ ತಾದೃಶೌ ಸಾನಸೀ ಸರ್ವೈಃ ಸಂಭಜನೀಯೌ ಯುವಾಂ ಶವಸಾನಾ । ಶವೋ ಬಲಂ । ತದ್ವದಾಚರಂತೌ ಹಿ ಖಲು ಭೂತಂ । ಬಲಮಿವ ಶತ್ರೂಣಾಂ ಭಂಜಕಾವಾಸ್ತಾಮಿತ್ಯರ್ಥಃ । ಕೀದೃಶೌ ಸಂತೌ । ಸಾಕಂವೃಧಾ ಸಹ ಪ್ರವೃದ್ಧೌ ಶವಸಾ ಬಲೇನ ಶೂಶುವಾಂಸಾ ವರ್ಧಮಾನೌ ತಥಾ ರಾಯೋ ಧನಸ್ಯ ಭೂರೇರ್ಬಹುಲಸ್ಯ ಯವಸಸ್ಯಾನ್ನಸ್ಯ ಕ್ಷಯಂತಾವೀಶ್ವರೌ । ಏವಂವಿಧೌ ಯುವಂ ಯುವಾಂ ಸ್ಥವಿರಸ್ಯ ಸ್ಥೂಲಸ್ಯ ಘೃಷ್ವೇಃ ಶತ್ರೂಣಾಂ ಘರ್ಷಕಸ್ಯ ವಾಜಸ್ಯಾನ್ನಸ್ಯ ॥ ಕ್ರಿಯಾಗ್ರಹಣಮಪಿ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ॥ಈದೃಶಮನ್ನಂ ಪೃಂಕ್ತಂ। ಸಂಯೋಜಯತಂ । ಅಸ್ಮಭ್ಯಂ ಪ್ರಯಚ್ಛತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಗ್ನಿಗಳೇ) ತಾ—ಪ್ರಸಿದ್ಧರೂ । ಸಾನಸೀ—ಸಕಲರಿಂದಲೂ ಪೂಜಿತರೂ ಆದ ನೀವು । ಶವಸಾನಾ—ವೀರ್ಯಕರ್ಮವುಳ್ಳವರಾಗಿಯೂ । ಸಾಕಂವೃಧಾ—ಒಟ್ಟಿಗೆ ಬೆಳೆಯುವವರಾಗಿಯೂ । ಶವಸಾ—ಬಲದೊಡನೆ । ಶೂಶುವಾಂಸಾ ವೃದ್ಧಿಯನ್ನು ಹೊಂದುವವರಾಗಿಯೂ । ರಾಯಃ- ಧನಕ್ಕೂ । ಭೂರೇಃ—ಪ್ರಭೂತವಾದ । ಯವಸಸ್ಯ—ಅನ್ನಕ್ಕೂ । ಕ್ಷಯಂತೌ—ಪ್ರಭುಗಳಾಗಿಯೂ । ಭೂತಂ ಹಿ—ಇರುತ್ತೀರಲ್ಲವೇ (ಇಂತಹ ಮಾಹಾತ್ಮ್ಯವುಳ್ಳ ನೀವು) ಸ್ಥವಿರಸ್ಯ—ಪುಷ್ಕಲವಾದುದೂ । ಘೃಷ್ವೇಃ—ಶತ್ರುಮರ್ದನಕ್ಕೆ ಅರ್ಹವಾದುದೂ ಆದ । ವಾಜಸ್ಯ - ಅನ್ನಕ್ಕೆ (ಅನ್ನವನ್ನು) । ಪೃಂಕ್ತಂ—ಕೊಡುವವರಾಗಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಪ್ರಸಿದ್ಧರೂ ಸಕಲರಿಂದಲೂ ಪೂಜಿತರೂ ಆದ ನೀವು ವೀರ್ಯಕರ್ಮವುಳ್ಳವರಾಗಿಯೂ ಒಟ್ಟಿಗೆ ಬೆಳೆಯುವವರಾಗಿಯೂ ಬಲದೊಡನೆ ವೃದ್ಧಿಯನ್ನು ಹೊಂದುವವರಾಗಿಯೂ ಧನಕ್ಕೂ ಪ್ರಭೂತವಾದ ಅನ್ನಕ್ಕೂ ಈಶ್ವರರಾಗಿಯೂ ಇರುವುದು ಪ್ರಸಿದ್ಧವಾಗಿದೆ ಇಂತಹ ಮಾಹಾತ್ಮ್ಯವುಳ್ಳ ನೀವು ಪುಷ್ಕಲವಾದುದೂ ಶತ್ರುಮರ್ದನಕ್ಕೆ ಅರ್ಹವಾದುದೂ ಆದ ಅನ್ನವನ್ನು ನಮಗೆ ಕೊಡುವವರಾಗಿರಿ.

## English Translation

You two are desired of all, the demolishers of (hostile) strength, augmenting together, increasing in vigour, lords of the wealth of corn : grant us substantial invigorating food.

॥ ಸಂಹಿತಾಪಾಠಃ ॥

ಉಪೋ᳚ ಹ ಯದ್ವಿದಥಂ᳚ ವಾಜಿನೋ ಗುರ್ಧೀಭಿರ್ವಿಪ್ರಾಃ᳚ ಪ್ರಮತಿಮಿಚ್ಛ-
ಮಾ᳚ನಾಃ ।
ಅರ್ವಂ᳚ತೋ ನ ಕಾಷ್ಠಾಂ᳚ ನಕ್ಷಮಾ᳚ಣಾ ಇಂದ್ರಾಗ್ನೀ ಜೋಹು᳚ವತೋ
ನರಸ್ತೇ ॥ ೩ ॥

॥ ಪದಪಾಠಃ ॥

ಉಪೋ ಇತಿ । ಹ । ಯತ್ । ವಿದಥಂ । ವಾಜಿನಃ । ಗುಃ । ಧೀಭಿಃ । ವಿಪ್ರಾಃ । ಪ್ರಮತಿಂ । ಇಚ್ಛಮಾನಾಃ ।
ಅರ್ವಂತಃ । ನ । ಕಾಷ್ಠಾಂ । ನಕ್ಷಮಾಣಾಃ । ಇಂದ್ರಾಗ್ನೀ ಇತಿ । ಜೋಹುವತಃ । ನರಃ । ತೇ ॥ ೩ ॥

॥ ಸಾಯಣಭಾಷ್ಯಂ ॥

ವಾಜಿನೋ ಹವಿಷ್ಮಂತೋ ವಿಪ್ರಾ ಮೇಧಾವಿನಃ ಪ್ರಮತಿಂ ಪ್ರಕೃಷ್ಟಾಂ ಮತಿಮಿಂದ್ರಾಗ್ನ್ಯೋರನುಗ್ರಹಬುದ್ಧಿಮಿಚ್ಛಮಾನಾ ಆತ್ಮನ ಇಚ್ಛಂತೋ ಯದ್ಯೇ ಯಜಮಾನಾ ವಿದಥಂ । ವಿದಂತಿ ಜಾನಂತಿ ದೇವಾಂಸ್ತತ್ರ ಯುಷ್ಮವ್ಯಕ್ತೇನೇತಿ ವಿದಥೋ ಯಜ್ಞಃ । ತಂ ಧೀಭಿಃ ಕರ್ಮಭಿರ್ಬುದ್ಧಿಭಿರ್ವೋಪೋ ಗುಃ ಉಪಗಚ್ಛಂತಿ । ಉ ಇತಿ ಪೂರಕಃ । ತೇ ನರಃ ಕರ್ಮಣಾಂ ನೇತಾರೋ ಜನಾ ಅರ್ವಂತೋ ನ ಕಾಷ್ಠಾಂ ಯಥಾಶ್ವಾಃ ಶೀಘ್ರಂ ಯುದ್ಧಭೂಮಿಂ ವ್ಯಾಪ್ನುವಂತಿ ತಥಾ ನಕ್ಷಮಾಣಾ ಐಂದ್ರಾಗ್ನಾನಿ ಕರ್ಮಾಣಿ ವ್ಯಾಪ್ನುವಂತ ಇಂದ್ರಾಗ್ನೀ ಇಂದ್ರಮಗ್ನಿಂ ಚ ಜೋಹುವತಃ ಪುನಃ ಪುನರಾಹ್ವಯಂತೋ ಭವಂತಿ ॥

॥ ಪ್ರತಿಪದಾರ್ಥ ॥

**ವಾಜಿನಃ**- ಹವಿಷ್ಮಂತರೂ । **ವಿಪ್ರಾಃ**—ಮೇಧಾವಿಗಳೂ । **ಪ್ರಮತಿಂ**—ಉತ್ಕೃಷ್ಟವಾದ ಬುದ್ಧಿಯನ್ನು । **ಇಚ್ಛಮಾನಾಃ**—ಅಪೇಕ್ಷಿಸುವವರೂ ಆದ । **ಯತ್ ಹ**—ಯಾವ ಯಜಮಾನರು । **ಧೀಭಿಃ**—ತಮ್ಮ ಕರ್ಮಗಳಿಂದ । **ವಿದಥಂ**—ಯಜ್ಞವನ್ನು । **ಉಪೋ ಗುಃ**—ಸಮೀಪಿಸುವರೋ । **ತೇ ನರಃ**—ಕರ್ಮನೇತೃಗಳಾದ ಅದೇ ಯಜಮಾನರು । **ಕಾಷ್ಠಾಂ**—ಯುದ್ಧರಂಗವನ್ನು ಪ್ರವೇಶಿಸುವ । **ಅರ್ವಂತೋ ನ**— ಶ್ವಗಳಂತೆ । **ನಕ್ಷಮಾಣಾಃ**—ಕರ್ಮದಲ್ಲಿ ತಲ್ಲೀನರಾಗಿ । **ಇಂದ್ರಾಗ್ನೀ**—ಇಂದ್ರ ಮತ್ತು ಅಗ್ನಿದೇವತೆಗಳನ್ನು **ಜೋಹುವತಃ**—ಪದೇ ಪದೇ ಕರೆಯುತ್ತಾರೆ.

॥ ಭಾವಾರ್ಥ ॥

ಹವಿಷ್ಮಂತರೂ ಮೇಧಾವಿಗಳೂ, ಉತ್ಕೃಷ್ಟವಾದ ಬುದ್ಧಿಯನ್ನು ಅಪೇಕ್ಷಿಸುವವರೂ ಆದ ಯಾವ ಯಜಮಾನರು ತಮ್ಮ ಕರ್ಮಗಳಿಂದ ಯಜ್ಞವನ್ನು ಸಮೀಪಿಸುವರೋ ಕರ್ಮನೇತೃಗಳಿಂದ ಅದೇ ಯಜಮಾನರು

ಯುದ್ಧರಂಗದಲ್ಲಿ ಪ್ರವೇಶಿಸುವ ಅಶ್ವಗಳಂತೆ ಕರ್ಮದಲ್ಲಿ ತಲ್ಲೀನರಾಗಿ ಇಂದ್ರ ಮತ್ತು ಅಗ್ನಿದೇವತೆಗಳನ್ನು ಪದೇ ಪದೇ ಕರೆಯುತ್ತಾರೆ.

## English Translaiion

Those sage offerers of oblations, who desiring your favour, celebrate he sacrifice with holy rites, hasten to worship you, like horses to battle 'epeatedly invoking Indra and Agni.

॥ ಸಂಹಿತಾಪಾಠಃ ॥

ಗೀರ್ಭಿರ್ವಿಪ್ರಃ ಪ್ರಮತಿಮಿಚ್ಛಮಾನ ಈಟ್ಟೇ ರಯಿಂ ಯಶಸಂ ಪೂರ್ವ-
ಭಾಜಂ ।
ಇಂದ್ರಾಗ್ನೀ ವೃತ್ರಹಣಾ ಸುವಜ್ರಾ ಪ್ರ ನೋ ನವ್ಯೇಭಿಸ್ತಿರತಂ ದೇಷ್ಣೈಃ ॥

॥ ಪದಪಾಠಃ ॥

ೀಃಽಭಿಃ । ವಿಪ್ರಃ । ಪ್ರಽಮತಿಂ । ಇಚ್ಛಮಾನಃ । ಈಟ್ಟೇ । ರಯಿಂ । ಯಶಸಂ । ಪೂರ್ವಽಭಾಜಂ ।
ಇಂದ್ರಾಗ್ನೀ ಇತಿ । ವೃತ್ರಽಹನಾ । ಸುಽವಜ್ರಾ । ಪ್ರ । ನಃ । ನವ್ಯೇಭಿಃ । ತಿರತಂ । ದೇಷ್ಣೈಃ ॥ ೪ ॥

॥ ಸಾಯಣಭಾಷ್ಯಂ ॥

ಅಮಾವಾಸ್ಯಾಯಾಮೈಂದ್ರಾಗ್ನಸ್ಯ ಹವಿಷೋ ಗೀರ್ಭಿರಿತ್ಯೇಷಾ ಯಾಜ್ಯಾ । ಸೂತ್ರಿತಂ ಚ । ಂದ್ರಾಗ್ನೀ ಅವಸಾ ಗತಂ ಗೀರ್ಭಿರ್ವಿಪ್ರಃ ಪ್ರಮತಿಮಿಚ್ಛಮಾನಃ । ಆ. ೧.೬ । ಇತಿ ॥ ಐಂದ್ರಾಗ್ನೇ ದಶಾ ಪುರೋಡಾಶಸ್ಯೈಷೈವ ಯಾಜ್ಯಾ । ಸೂತ್ರಂ ತೂದಾಹೃತಂ ॥

ಹೇ ಇಂದ್ರಾಗ್ನೀ ಪ್ರಮತಿಂ ಯುವಯೋರನುಗ್ರಹಬುದ್ಧಿಮಿಚ್ಛಮಾನ ಇಚ್ಛನ್ ವಿಪ್ರೋ ಮೇಧಾವೀ ವಸಿಷ್ಠೋ ಯಶಸಂ ಯಶಸಾ ಯುಕ್ತಂ ಪೂರ್ವಭಾಜಂ ಪೂರ್ವಮೇವ ಸಂಭಜನೀಯಂ ರಯಿಂ ಧನಮುದ್ದಿಶ್ಯ ಗೀರ್ಭಿಃ ಸ್ತುತಿಭಿರೀಟ್ಟೇ । ಯುವಾಂ ಸ್ತೌತಿ । ಹೇ ವೃತ್ರಹಣಾ ವೃತ್ರಸ್ಯ ಹಂತಾರೌ, ಸುವಜ್ರಾ ಶೋಭನಾಯುಧಾವಿಂದ್ರಾಗ್ನೀ ನವ್ಯೇಭಿರ್ನವತರೈಃ ಪ್ರಶಸ್ತೈರ್ದೇಷ್ಣೈರ್ದಾತವ್ಯೈರ್ಧ-ನೈರ್ನೋಽಸ್ಮಾನ್ ಪ್ರ ತಿರತಂ । ಪ್ರವರ್ಧಯತಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಗ್ನಿಗಳೇ) ಪ್ರಮತಿಂ—ನಿಮ್ಮ ಅನುಗ್ರಹಾತ್ಮಕವಾದ ಬುದ್ಧಿಯನ್ನು । ಇಚ್ಛಮಾನಃ–ಅಪೇಕ್ಷಿಸಿ । ಿಪ್ರಃ—ಮೇಧಾವಿಯಾದ ವಸಿಷ್ಠನು । ಯಶಸಂ—ಯಶೋಯುಕ್ತವಾದುದೂ । ಪೂರ್ವಭಾಜಂ—ಹಿಂದೆಲ್ಲಾ

ಪೂಜ್ಯವಾದುದೂ ಆದ । **ರಯಿಂ**—ಧನದ ನಿಮಿತ್ತವಾಗಿ । **ಗೀರ್ಭಿಃ**—ಸ್ತುತಿಗಳಿಂದ । **ಈಟ್ಟೇ**—ನಿಮ್ಮನ್ನು ಸ್ತುತಿಸುತ್ತಾನೆ । **ವೃತ್ರಹಣಾ**—ಶತ್ರುನಾಶಕರಾದವರೂ । **ಸುವಜ್ರಾ**—ಉತ್ತಮವಾದ ವಜ್ರಾಯುಧವುಳ್ಳವರೂ ಆದ । **ಇಂದ್ರಾಗ್ನೀ**—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । **ನವ್ಯೇಭಿಃ**—ಪ್ರಶಸ್ಯವಾದವೂ । **ದೇಷ್ಣೈಃ**—ದಾನಾರ್ಹವಾದವೂ ಆದ ಧನಗಳಿಂದ । **ನಃ**— ನಮ್ಮನ್ನು । **ಪ್ರ ತಿರತಂ**—ಪ್ರವೃದ್ಧರಾಗುವಂತೆ ಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ನಿಮ್ಮ ಅನುಗ್ರಹಬುದ್ಧಿಯನ್ನು ಅಪೇಕ್ಷಿಸಿ ಮೇಧಾವಿಯಾದ ವಸಿಷ್ಠನು ಯಶೋಯುಕ್ತವಾದುದೂ ಹಿಂದೆಲ್ಲ ಪೂಜ್ಯವಾದುದೂ ಆದ ಧನದ ನಿಮಿತ್ತವಾಗಿ ಸ್ತುತಿಗಳಿಂದ ನಿಮ್ಮನ್ನು ಪ್ರಾರ್ಥಿಸುತ್ತಾನೆ. ಶತ್ರುನಾಶಕರೂ, ಉತ್ತಮವಾದ ವಜ್ರಾಯುಧವುಳ್ಳವರೂ ಆದ ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ಪ್ರಶಸ್ಯವಾದವೂ ದಾನಾರ್ಹವಾದವೂ ಆದ ಧನಗಳಿಂದ ನಮ್ಮನ್ನು ಪ್ರವೃದ್ಧರಾಗುವಂತೆ ಮಾಡಿರಿ.

## English Translation

The pious sage, desiring your favour, glorifies you with praises for the sake of formerly enjoyed riches, accompanied by celebrity: Indra and Agni, slayers of Vritra, bearers of the thunderbolt, exalt us with precious donations

ವಿಶೇಷವಿಷಯಗಳು ॥

ಅಮಾವಾಸ್ಯೇಷ್ಟಿಯಲ್ಲಿ (ದರ್ಶ) ಇಂದ್ರಾಗ್ನಿಗಳನ್ನುದ್ದೇಶಿಸಿ ಹವಿಸ್ಸನ್ನು ಹೋಮಮಾಡುವಾಗ **ಗೀರ್ಭಿರ್ವಿಪ್ರಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಇಂದ್ರಾಗ್ನೀ ಅವಸಾಗತಂ ಗೀರ್ಭಿರ್ವಿಪ್ರಃ ಪ್ರಮತಿಮಿಚ್ಛಮಾನಃ** ಎಂಬ ಸೂತ್ರದಿಂದ (ಆ. ೧-೬) ವಿವೃತವಾಗಿರುವುದು. ಇಂದ್ರಾಗ್ನಿಗಳನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿಯೂ ಸಹ ಪುರೋಡಾಶಹೋಮದಲ್ಲಿ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಸೂತ್ರದಲ್ಲಿ ಹೇಳಿರುವುದನ್ನು ಹಿಂದೆಯೇ ಉದಾಹರಿಸಲಾಗಿದೆ.

॥ ಸಂಹಿತಾಪಾಠಃ ॥

**ಸಂ ಯನ್ಮಹೀ ಮಿಥತೀ ಸ್ಪರ್ಧಮಾನೇ ತನೂರುಚಾ ಶೂರಸಾತಾ ಯತೈತೇ।**
**ಅದೇವಯುಂ ವಿದಥೇ ದೇವಯುಭಿಃ ಸತ್ರಾ ಹತಂ ಸೋಮಸುತಾ ಜನೇನ॥**

॥ ಪದಪಾಠಃ ॥

**ಸಂ । ಯತ್ । ಮಹೀ ಇತಿ । ಮಿಥತೀ ಇತಿ । ಸ್ಪರ್ಧಮಾನೇ ಇತಿ । ತನೂऽರುಚಾ । ಶೂರऽಸಾತಾ । ಯತೈತೇ ಇತಿ ।**

ಅದೇವ್ಯಯುಂ । ವಿದಥೇ । ದೇವಯುಽಭಿಃ । ಸತ್ರಾ । ಹತಂ । ಸೋಮಸುತಾ । ಜನೇನ । ೫ ॥

॥ ಸಾಯಣಭಾಷ್ಯಂ ॥

ಮಹೀ ಮಹತ್ಯೌ ಮಿಥತೀ ಪರಸ್ಪರಂ ಹಿಂಸಂತ್ಯೌ । ಯದ್ವಾ । ಮೇಥತಿರಾಕ್ರೋಶಕರ್ಮಾ । ಪರಸ್ಪರಮಾಕ್ರೋಶಂತ್ಯೌ । ಸ್ಪರ್ಧಮಾನೇ ಸ್ಪರ್ಧಾಂ ಕುರ್ವಂತ್ಯೌ ತನೂರುಚಾ.... .... .... ....ಹತಂ । ಹಿಂಸ್ತಂ । ತಥಾ ಸೋಮಸುತಾ ಸೋಮಮಭಿಷುಣ್ವತಾ ಜನೇನ ಯಜಮಾನಸಂಘೇನಾಸೋಮಸುತಂ ಜನಂ ಹಿಂಸ್ತಂ ॥

॥ ಪ್ರತಿಪದಾರ್ಥ ॥

ಶೂರಸಾತಾ—ಯುದ್ಧದಲ್ಲಿ । ಮಹೀ—ಬೃಹತ್ಸ್ವರೂಪವುಳ್ಳವೂ । ಮಿಥತೀ—ಪರಸ್ಪರವಾಗಿ ಹಿಂಸಿಸುತ್ತಾ । ಸ್ಪರ್ಧಮಾನೇ—ಸ್ಪರ್ಧಿಸುವುವೂ ಆದ ಎರಡು ಸೇನೆಗಳು । ತನೂರುಚಾ—ತಮ್ಮ ಶರೀರಕಾಂತಿಗಳಿಂದ। ಯತ್—ಯಾವ ರೀತಿ । ಸಂ ಯತ್ಯೈತೇ—ಹೋರಾಡಿ ನಾಶಕಾರಕವಾಗುವುವೋ (ಅದೇ ರೀತಿಯಲ್ಲಿ) । ವಿದಥೇ-ಯಜ್ಞಭೂಮಿಯಲ್ಲಿ । ಅದೇವಯುಂ ದೇವತೆಗಳನ್ನು ಪೂಜಿಸದ ಕರ್ಮಭ್ರಷ್ಟನನ್ನು । ದೇವಯುಭಿಃ—ದೇವಪೂಜಕರಿಂದಲೂ । ಸತ್ರಾ—ಯಜ್ಞದಲ್ಲಿ । ಸೋಮಸುತಾ—ಸೋಮವನ್ನು ಹಿಂಡಿ ಅರ್ಪಿಸುವ । ಜನೇನ - ಯಜಮಾನರ ಮೂಲಕವಾಗಿಯೂ । ಹತಂ—ನಾಶಮಾಡಿರಿ.

॥ ಭಾವಾರ್ಥ ॥

ಯುದ್ಧದಲ್ಲಿ ಬೃಹತ್ಸ್ವರೂಪವುಳ್ಳವೂ, ಪರಸ್ಪರವಾಗಿ ಹಿಂಸಿಸುತ್ತಾ ಸ್ಪರ್ಧಿಸುವುವೂ ಆದ ಎರಡು ಸೇನೆಗಳು ತಮ್ಮ ಶರೀರಕಾಂತಿಗಳಿಂದ ಯಾವ ರೀತಿ ಹೋರಾಡಿ ನಾಶಕಾರಕವಾಗುವುವೋ ಅದೇ ರೀತಿಯಲ್ಲಿ ಯಜ್ಞಭೂಮಿಯಲ್ಲಿ ದೇವತೆಗಳನ್ನು ಪೂಜಿಸದ ಕರ್ಮಭ್ರಷ್ಟನನ್ನು ದೇವಪೂಜಕರಿಂದಲೂ ಯಜ್ಞದಲ್ಲಿ ಸೋಮವನ್ನು ಹಿಂಡಿ ಅರ್ಪಿಸುವ ಯಜಮಾನರ ಮೂಲಕವೂ ನಾಶಮಾಡಿರಿ.

## English Translation

As two large, mutually defiant (armies), emulous in corporal vigour, may contend in war, so you destroy, by the devout, those who are not devoted to the gods in sacrifices, and, by the man who presents libations, (him who does not offer).

॥ ಸಂಹಿತಾಪಾಠಃ ॥

ಇಮಾಮು ಷು ಸೋಮಸುತಿಮುಪ ನ ಏಂದ್ರಾಗ್ನೀ ಸೌಮನಸಾಯ ಯಾತಂ ।

ನೂ ಚಿದ್ಧಿ ಪರಿಮಮ್ನಾಥೇ ಅಸ್ಮಾನಾ ವಾಂ ಶಶ್ವದ್ಭಿರ್ವವೃತೀಯ ವಾಜೈಃ॥

॥ ಪದಪಾಠಃ ॥

ಇಮಾಂ । ಊಂ ಇತಿ । ಸು । ಸೋಮಽಸುತಿಂ । ಉಪ । ನಃ । ಆ । ಇಂದ್ರಾಗ್ನೀ ಇತಿ । ಸೌಮನಸಾಯ । ಯಾತಂ ।

ನು । ಚಿತ್ । ಹಿ । ಪರಿಮಮ್ನಾಥೇ ಇತಿ ಪರಿಽಮಮ್ನಾಥೇ । ಅಸ್ಮಾನ್ । ಆ । ವಾಂ । ಶಶ್ವತ್ಽಭಿಃ । ವವೃತೀಯ । ವಾಜೈಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಇಮಾಮು ಇಮಾಮೇವ ನೋಽಸ್ಮದೀಯಾಂ ಸೋಮಸುತಿಂ ಸೋಮಾಭಿಷವಕ್ರಿಯಾಂ ಸೌಮನಸಾಯ ಸುಮನಸೋ ಭಾವಾಯ ಸು ಸುಷ್ಠೂಪಾ ಯಾತಂ । ಉಪಾಗಚ್ಛತಂ । ಅಪಿ ಚ ಯುವಾಮಸ್ಮಾನ್ ಪರಿತ್ಯಜ್ಯ ನೂ ಚಿನ್ನೈವ ಮಮ್ನಾಥೇ । ಅನ್ಯಾನ್ನ ಮನ್ಯೇಥೇ । ಅಸ್ಮಾನೇವ ಸರ್ವದಾ ಬುಧ್ಯೇಥೇ । ಹಿ ಯಸ್ಮಾದೇವಂ ತಸ್ಮಾದ್ವಾಂ ಯುವಾಂ ಶಶ್ವದ್ಭಿರ್ಬಹುಭಿರ್ವಾಜೈರನ್ನೈರ್ಹವಿರ್ಲಕ್ಷಣೈರಾ ವವೃತೀಯ । ಆವರ್ತಯಾಮಿ ॥

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । ನಃ—ನಮ್ಮ । ಸೋಮಸುತಿಂ—ಸೋಮಾಭಿಷವ (ಹಿಂಡುವ) ಕ್ರಿಯೆಯನ್ನು । ಸೌಮನಸಾಯ—ಅನುಗ್ರಹಿಸಲು । ಇಮಾಂ ಉ—ನಮ್ಮ ಇದೇ ಯಜ್ಞಕ್ಕೆ । ಸು—ಅತಿಶಯವಾಗಿ । ಉಪ ಆ ಯಾತಂ—ದಯಮಾಡಿರಿ । ಯುವಾಂ—ನೀವಿಬ್ಬರೂ । ಅಸ್ಮಾನ್—ನಮ್ಮನ್ನು ಪರಿತ್ಯಜಿಸಿ । ನೂ ಚಿತ್—ಯಾವಾಗಲೂ । ಪರಿಮಮ್ನಾಥೇ—ಇತರರನ್ನು ಗೌರವಿಸಿಯೇ ಇಲ್ಲ । ಹಿ—ಆದುದರಿಂದಲೇ । ವಾಂ—ನಿಮ್ಮನ್ನು । ಶಶ್ವದ್ಭಿಃ—ಪ್ರಭೂತಗಳಾದ । ವಾಜೈಃ—ಹವಿಸ್ಸುಗಳಿಂದ । ಆ ವವೃತೀಯ—ಕರೆಯುತ್ತೇನೆ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ನಮ್ಮ ಸೋಮಾಭಿಷವಕ್ರಿಯೆಯನ್ನು ಅನುಗ್ರಹಿಸಲು ನಮ್ಮ ಇದೇ ಯಜ್ಞಕ್ಕೆ ಅತಿಶಯವಾಗಿ ದಯಮಾಡಿರಿ. ನೀವಿಬ್ಬರೂ ನಮ್ಮನ್ನು ಪರಿತ್ಯಜಿಸಿ ಯಾವಾಗಲೂ ಇತರರನ್ನು ಗೌರವಿಸಿಯೇ ಇಲ್ಲ. ಆದುದರಿಂದಲೇ ನಿಮ್ಮನ್ನು ಪ್ರಭೂತಗಳಾದ ಹವಿಸ್ಸುಗಳಿಂದ ಕರೆಯುತ್ತೇನೆ.

## English Translatian

Come with gracious minds, Indra and Agn , to this our Soma libation : you are never regardless of us, therefore I propitiate you with constant (sacrificial) viands.

॥ ಸಂಹಿತಾಪಾಠಃ ॥

ಸೋ ಅ॑ಗ್ನ ಏ॒ನಾ ನಮ॑ಸಾ॒ ಸಮಿ॑ದ್ಧೋ॒ಽಚ್ಛಾ ಮಿ॒ತ್ರಂ ವರು॑ಣ॒ಮಿಂದ್ರಂ॑ ವೋಚೇಃ ।
ಯತ್ಸೀ॒ಮಾಗ॑ಶ್ಚಕೃ॒ಮಾ ತತ್ಸು ಮೃ॑ಳ॒ ತದ॑ರ್ಯ॒ಮಾದಿ॑ತಿಃ ಶಿಶ್ರಥಂತು ॥ ೭ ॥

॥ ಪದಪಾಠಃ ॥

ಸಃ । ಅ॒ಗ್ನೇ॒ । ಏ॒ನಾ । ನಮ॑ಸಾ । ಸಮ್ಽಇ॑ದ್ಧಃ । ಅಚ್ಛ॑ । ಮಿ॒ತ್ರಂ । ವರು॑ಣಂ । ಇಂದ್ರಂ॑ । ವೋ॒ಚೇಃ ।
ಯತ್ । ಸೀ॒ಂ । ಆಗಃ॑ । ಚ॒ಕೃ॒ಮ । ತತ್ । ಸು । ಮೃ॒ಳ॒ । ತತ್ । ಅ॒ರ್ಯ॒ಮಾ । ಅದಿ॑ತಿಃ । ಶಿ॒ಶ್ರ॒ಥಂ॒ತು॒ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸ ತ್ವಮೇನ್ಯೇನೇನ ನಮಸಾನ್ನೇನಾಸ್ಮದೀಯೇನ ಹವಿಷಾ ಸಮಿದ್ಧಃ ಸಂದೀಪ್ತಃ ಸನ್ಮಿತ್ರಂ ವರುಣಮಿಂದ್ರಂ ಚಾಚ್ಛ ವೋಚೇಃ । ಅಭಿಬ್ರೂಯಾಃ । ಅಯಮಸ್ಮದೀಯೋ ರಕ್ಷಣೀಯ ಇತಿ ಕಥಯ । ವಯಂ ಯದಾಗೋಽಪರಾಧಂ । ಸೀಮಿತಿ ಪರಿಗ್ರಹಾರ್ಥೀಯಃ । ಸೀಂ ಸರ್ವತೋ ವಾಙ್ಮನಃ-ಕಾಯೈಶ್ಚಕೃಮ ಕೃತವಂತೋ ವಯಂ ತತ್ತಸ್ಮಾದಾಗಸಃ ಸು ಮೃಳ । ಅಸ್ಮಾನ್ ಸುಷ್ಠು ರಕ್ಷ । ತಚ್ಚಾ-ಗೋಽರ್ಯಮಾದಿತಿರ್ಮಿತ್ರಾದಯಶ್ಚ ಶಿಶ್ರಥಂತು । ಅಸ್ಮತ್ತೋ ವಿಯೋಜಯಂತು ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಸಃ**—ಪ್ರಸಿದ್ಧನಾದ ನೀನು । **ಏನಾ ನಮಸಾ**—ಈಗ ಅರ್ಪಿತವಾಗುವ ಹವಿಸ್ಸಿನಿಂದ । **ಸಮಿದ್ಧಃ**- ಪ್ರಜ್ವಲಿತನಾಗಿ । **ಮಿತ್ರಂ**—ಮಿತ್ರನಲ್ಲಿಯೂ । **ವರುಣಂ**—ವರುಣನಲ್ಲಿಯೂ । **ಇಂದ್ರಂ**—ಇಂದ್ರನಲ್ಲಿಯೂ । **ಅಚ್ಛ**—ನಮ್ಮ ಪರವಾಗಿ । **ವೋಚೇಃ**—ಪ್ರಶಂಸಾವಾಕ್ಯಗಳನ್ನು ಹೇಳು । **ವಯಂ**—ನಾವು । **ಸೀಂ**—ಕಾಯ, ವಾಕ್ ಮತ್ತು ಮನಸ್ಸು ಎಂಬ ಈ ಎಲ್ಲಾ ಸಾಧನಗಳಿಂದಲೂ । **ಯತ್ ಆಗಃ**—ಯಾವ ಅಪರಾಧವನ್ನು । **ಚಕೃಮ**—ಮಾಡಿದ್ದೇವೆಯೋ । **ತತ್**—ಆ ಎಲ್ಲಾ ಪಾಪಗಳಿಂದಲೂ । **ಸು ಮೃಳ**—ಪೂರ್ಣವಾಗಿ ರಕ್ಷಿಸು । **ಅರ್ಯಮಾ**—ಅರ್ಯಮನೂ । **ಅದಿತಿಃ**—ಅದಿತಿಯೂ । **ತತ್**—ಅದೇ ಪಾಪವನ್ನು । **ಶಿಶ್ರಥಂತು**—ಪೂರ್ಣವಾಗಿ ನಾಶಮಾಡಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಪ್ರಸಿದ್ಧನಾದ ನೀನು ಈಗ ಅರ್ಪಿತವಾಗುವ ಹವಿಸ್ಸಿನಿಂದ ಪ್ರಜ್ವಲಿತನಾಗಿ ಮಿತ್ರನಲ್ಲಿಯೂ ವರುಣನಲ್ಲಿಯೂ ಇಂದ್ರನಲ್ಲಿಯೂ ನಮ್ಮ ಪರವಾಗಿ ಪ್ರಶಂಸಾವಾಕ್ಯಗಳನ್ನು ಹೇಳು. ನಾವು ಕಾಯ, ವಾಕ್ ಮತ್ತು ಮನಸ್ಸು ಎಂಬ ಈ ಎಲ್ಲಾ ಸಾಧನಗಳಿಂದಲೂ ಯಾವ ಯಾವ ಅಪರಾಧವನ್ನು ಮಾಡಿದ್ದೇವೆಯೋ ಆ ಎಲ್ಲಾ ಪಾಪಗಳಿಂದಲೂ ನಮ್ಮನ್ನು ಪೂರ್ಣವಾಗಿ ರಕ್ಷಿಸು. ಅರ್ಯಮನೂ, ಅದಿತಿಯೂ ಅದೇ ಪಾಪವನ್ನು ಪೂರ್ಣವಾಗಿ ನಾಶಮಾಡಲಿ.

## English Translation

Kindled, Agni, by this adoration, you recommend us to Mitra, Varuna and Indra : whatever sin we may have committed, you expiate, and may Aryaman, Aditi (and Mitra) remove it (from us).

॥ ಸಂಹಿತಾಪಾಠಃ ॥

ಏತಾ ಅಗ್ನ ಆಶುಷಾಣಾಸ ಇಷ್ಟೀರ್ಯುವೋಃ ಸಚಾಭ್ಯಶ್ಯಾಮ ವಾಜಾನ್ ।
ಮೇಂದ್ರೋ ನೋ ವಿಷ್ಣುರ್ಮರುತಃ ಪರಿ ಖ್ಯನ್ಯೂಯಂ ಪಾತ ಸ್ವಸ್ತಿಭಿಃ
ಸದಾ ನಃ ॥ ೮ ॥

॥ ಪದಪಾಠಃ ॥

ಏತಾಃ । ಅಗ್ನೇ । ಆಶುಷಾಣಾಸಃ । ಇಷ್ಟೀಃ । ಯುವೋಃ । ಸಚಾ । ಅಭಿ । ಅಶ್ಯಾಮ । ವಾಜಾನ್ ।
ಮಾ । ಇಂದ್ರಃ । ನಃ । ವಿಷ್ಣುಃ । ಮರುತಃ । ಪರಿ । ಖ್ಯನ್ । ಯೂಯಂ । ಪಾತ । ಸ್ವಸ್ತಿಽಭಿಃ ।
ಸದಾ । ನಃ । ೮ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ । ಉಪಲಕ್ಷಣಮೇತತ್ । ಹೇ ಇಂದ್ರಾಗ್ನೀ ಏತಾ ಇಷ್ಟೀರಿಮಾನ್ಯಜ್ಞಾನಾಶುಷಾಣಾಸ ಆಶು ಶೀಘ್ರಂ ಸಂಭಜಮಾನಾ ವಯಂ ಯುವೋರ್ಯುವಯೋಃ ಸ್ವಭೂತಾನ್ವಾಜಾನನ್ನಾನಿ ಸಚಾ ಸಹ ಯುಗಪದೇವಾಭ್ಯಶ್ಯಾಮ । ಅಭಿಪ್ರಾಪ್ನುಯಾಮ । ಅಪಿ ಚೇಂದ್ರೋ ವಿಷ್ಣುರ್ಮರುತಶ್ಚ ನೋಽಸ್ಮಾನ್ ಮಾ ಪರಿ ಖ್ಯನ್ । ಅಸ್ಮಾನ್ಪರಿತ್ಯಜ್ಯಾನ್ಯಾನ್ ಮಾ ದ್ರಾಕ್ಷುಃ । ಸರ್ವದಾಸ್ಮಾನೇವ ಪಶ್ಯಂತು । ಅನ್ಯದ್ಗತಂ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಇಂದ್ರಾಗ್ನಿಗಳೇ । ಏತಾಃ ಇಷ್ಟೀಃ—ಈ ಯಜ್ಞಗಳನ್ನು । ಆಶುಷಾಣಾಸಃ—ಶೀಘ್ರವಾಗಿ ನೆರವೇರಿಸುವ ನಾವು । ಯುವೋಃ—ನಿಮ್ಮಿಂದ ಅನುಗೃಹೀತವಾಗುವ । ವಾಜಾನ್—ಅನ್ನಗಳನ್ನು । ಸಚಾ—ಒಟ್ಟಿಗೆ । ಅಭ್ಯಶ್ಯಾಮ—ಅನುಭವಿಸುವಂತಾಗಲಿ । ಇಂದ್ರಃ—ಇಂದ್ರನೂ । ವಿಷ್ಣುಃ—ವಿಷ್ಣುವೂ । ಮರುತಃ—ಮರುತ್ತುಗಳೂ । ನಃ—ನಮ್ಮನ್ನು । ಮಾ ಪರಿ ಖ್ಯನ್—ಪರಿತ್ಯಜಿಸದಿರಲಿ (ಎಲೈ ಇಂದ್ರಾದಿ ದೇವತೆಗಳೇ) । ಯೂಯಂ—ನೀವು । ನಃ—ನಮ್ಮನ್ನು । ಸದಾ—ಯಾವಾಗಲೂ । ಸ್ವಸ್ತಿಭಿಃ—ಕಲ್ಯಾಣಗಳಿಂದ । ಪಾತ—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಈ ಯಜ್ಞಗಳನ್ನು ಶೀಘ್ರವಾಗಿ ನೆರವೇರಿಸುವ ನಾವು ನಿಮ್ಮಿಂದ ಅನುಗೃಹೀತವಾಗುವ

ಅನ್ನಗಳನ್ನು ಒಟ್ಟಿಗೆ ಅನುಭವಿಸುವಂತಾಗಲಿ. ಇಂದ್ರನೂ, ವಿಷ್ಣುವೂ, ಮರುತ್ತುಗಳೂ ನಮ್ಮನ್ನು ಪರಿತ್ಯಜಿಸದಿರಲಿ. ಎಲೈ ಇಂದ್ರಾದಿದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

Diligently celebrating these rites, may we, Agni (and Indra), at once arrive at your food : let not Indra, Vishnu, the Maruts, abandon us; and you (gods) ever cherish us with blessings,



# ತೊಂಭತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಇಯಂ ವಾಮಿತಿ ದ್ವಾದಶರ್ಚಂ ಪಂಚಮಂ ಸೂಕ್ತಂ ವಸಿಷ್ಠಸ್ಯಾರ್ಷಮೈಂದ್ರಾಗ್ನಂ। ದ್ವಾದಶ್ಯನು- ಷ್ಟುಪ್ ಶಿಷ್ಟಾ ಗಾಯತ್ರ್ಯಃ। ತಥಾ ಚಾನುಕ್ರಾಂತಂ । ಇಯಂ ವಾಂ ದ್ವಾದಶ ಗಾಯತ್ರಮಂತ್ಯಾ- ನುಷ್ಟುಬಿತಿ ॥ ಜ್ಯೋತಿಷ್ಟೋಮೇ ಪ್ರಾತಃಸವನೇಽಚ್ಛಾವಾಕಶಸ್ತ್ರ ಆದಿತೋ ನವರ್ಚಃ ಶಸ್ಯಂತೇ । ಸೂತ್ರ್ಯತೇ ಹಿ । ಇಯಂ ವಾಮಸ್ಯ ಮನ್ಮನ ಇತಿ ನವ । ಆ ೫.೧೦ । ಇತಿ ॥ ಅಭಿಪ್ಲವಿಕೇಷೂಕ್ಥ್ಯೇಷು ಸ್ತೋಮೇಷು ವೃದ್ಧಾವಚ್ಛಾವಾಕಸ್ಯ ಪ್ರಾತಃಸವನ ಇದ ಸೂಕ್ತಮಾವಾಪಾರ್ಥಮುತ್ತಮಾವರ್ಜಂ । ಸೂತ್ರಿತಂ ಚ । ಇಯಂ ವಾಮಸ್ಯ ಮನ್ಮನ ಇತ್ಯೇಕಾದಶ । ಆ. ೭-೫ । ಇತಿ ॥ ಚಾತುರ್ವಿಂಶಿಕೇಽಹನಿ ಪ್ರಾತಃಸವನೇ ತಸ್ಯೈವಾದ್ಯಸ್ತೃಚಃ । ಸೂತ್ರಿತಂ ಚ । ಇಯಂ ವಾಮಸ್ಯ ಮನ್ಮನ ಇಂದ್ರಾಗ್ನೀ ಯುವಾ- ಮಿಮೇ ॥ ಆ. ೭-೨ । ಇತಿ ॥

ಅನುವಾದವು—ಇಯಂ ವಾಂ ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು, ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಇಂದ್ರಾಗ್ನಿಗಳು ದೇವತೆಯು; ಈ ಸೂಕ್ತದ ಹನ್ನೆರಡನೆಯ ಋಕ್ಕು ಅನುಷ್ಟುಪ್‌ಛಂದಸ್ಕವು; ಉಳಿದ ಋಕ್ಕುಗಳು ಗಾಯತ್ರೀಛಂದಸ್ಕವು. ಅನುಕ್ರಮಣಿಕೆಯಲ್ಲಿ—ಇಯಂ ವಾಂ ದ್ವಾದಶ ಗಾಯತ್ರಮಂತ್ಯಾನುಷ್ಟುಪ್ ಎಂದು ಹೇಳಿರುವುದು. ಜ್ಯೋತಿಷ್ಟೋಮಯಾಗದಲ್ಲಿ ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲಿನ ಒಂಭತ್ತು ಋಕ್ಕುಗಳು ಪಠಿಸಲ್ಪಡುವವು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ—ಇಯಂ ವಾಮಸ್ಯ ಮನ್ಮನ ಇತಿ ನವ ಎಂಬ ಸೂತ್ರದಿಂದ (ಆ ೫-೧೦) ವಿವೃತವಾಗಿರುವುದು. ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ಸ್ತೋಮಗಳನ್ನು ವೃದ್ಧಿಪಡಿಸುವಾಗ ಅಚ್ಛಾವಾಕನೆಂಬ ಋತ್ವಿಜನು ಪ್ರಾತಸ್ಸವನಕಾಲದಲ್ಲಿ ಈ ಸೂಕ್ತವನ್ನು—ಕೊನೆಯ ಋಕ್ಕನ್ನು ಬಿಟ್ಟು—ಆವಾಪಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಇಯಂ ವಾಮಸ್ಯ ಮನ್ಮನ ಇತ್ಯೇಕಾದಶ ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು. ಮತ್ತು ಯಾಗದ ಚಾತುರ್ವಿಂಶಕವೆಂಬ ದಿನದ ಪ್ರಾತಃಸವನಕಾಲದಲ್ಲಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಪಠಿಸ

ಬೇಕೆಂದು ಆಶ್ವಲಾಯನಶ್ರೌತಸೂತ್ರದ— ಇಯಂ ವಾಮಸ್ಯ ಮನ್ಮನ ಇಂದ್ರಾಗ್ನೀ ಯುವಾಮಿಮೇ ಎಂಬ ಸೂತ್ರದಿಂದ (ಆ. ೭-೨) ವಿವೃತವಾಗಿರುವುದು.

## ಸೂಕ್ತ—೯೪

ಮಂಡಲ—೭ । ಅನುವಾಕ—೬ । ಸೂಕ್ತ—೯೪ ।
ಅಷ್ಟಕ—೫ । ಅಧ್ಯಾಯ—೬ । ವರ್ಗ—೧೭, ೧೮ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ।
ಋಷಿಃ—ವಸಿಷ್ಠಃ ।
ದೇವತಾ—ಇಂದ್ರಾಗ್ನೀ ॥
ಛಂದಃ—೧-೧೧, ಗಾಯತ್ರೀ । ೧೨ ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಇಯಂ ವಾಮಸ್ಯ ಮನ್ಮನ ಇಂದ್ರಾಗ್ನೀ ಪೂರ್ವ್ಯಸ್ತುತಿಃ ।
ಅಭ್ರಾದ್ವೃಷ್ಟಿರಿವಾಜನಿ ॥ ೧ ॥

॥ ಪದಪಾಠಃ ॥

ಇಯಂ । ವಾಂ । ಅಸ್ಯ । ಮನ್ಮನಃ । ಇಂದ್ರಾಗ್ನೀ ಇತಿ । ಪೂರ್ವ್ಯಽಸ್ತುತಿಃ ।
ಅಭ್ರಾತ್ । ವೃಷ್ಟಿಃಽಇವ । ಅಜನಿ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಇಯಂ ಪೂರ್ವ್ಯಸ್ತುತಿಃ ಪೂರ್ವ್ಯಾ ಮುಖ್ಯಾ ಸ್ತುತಿರಸ್ಯ ಮನ್ಮನಃ ಸ್ತೋತು-ರಸ್ಮಾದ್ವಸಿಷ್ಠಾದ್ವಾಂ ಯುವಾಭ್ಯಾಂ ಯುವಯೋರರ್ಥಮಭ್ರಾನ್ಮೇಘಾದ್ವೃಷ್ಟಿರಿವ ಬಹ್ವೀ ಸತ್ಯಜನಿ । ಪ್ರಾದುರ್ಭೂತಾ । ತಾಂ ಶೃಣುತಮಿತ್ಯುತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । ಅಭ್ರಾತ್—ವೃಷ್ಟಿಕಾರಕವಾದ ಮೇಘದಿಂದ । ವೃಷ್ಟಿಃ ಇವ—ಮಳೆಯು ಪ್ರವಾಹರೂಪದಲ್ಲಿ ಸುರಿಯುವಂತೆ । ಮನ್ಮನಃ—ಧ್ಯಾನಾತ್ಮಕವಾದ ಸ್ತುತಿಯನ್ನು ನಿರ್ಮಿಸುವ । ಅಸ್ಯ—ಈ ವಸಿಷ್ಠನ ಮುಖದಿಂದ । ಇಯಂ ಪೂರ್ವ್ಯಸ್ತುತಿಃ—ಅತಿಮುಖ್ಯವಾದ ಈ ಸ್ತುತಿಯು । ವಾಂ—ನಿಮ್ಮ ಪ್ರಶಂಸೆಗಾಗಿ । ಅಜನಿ—ನಿರ್ಮಿತವಾಗಿದೆ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ವೃಷ್ಟಿಕಾರಕವಾದ ಮೇಘದಿಂದ ಮಳೆಯು ಪ್ರವಾಹರೂಪದಲ್ಲಿ

ಸುರಿಯುವಂತೆ ಧ್ಯಾನಾತ್ಮಕವಾದ ಸ್ತುತಿಯನ್ನು ನಿರ್ಮಿಸುವ ಈ ವಸಿಷ್ಠನ ಮುಖದಿಂದ ಅತಿ ಮುಖ್ಯವಾದ ಈ ಸ್ತುತಿಯು ನಿಮ್ಮ ಪ್ರಶಂಸೆಗಾಗಿ ನಿರ್ಮಿತವಾಗಿದೆ.

English Translation

This chief praise, Indra and Agni, proceeds (copiously) from me your worshipper, like rain from a cloud.

॥ ಸಂಹಿತಾಪಾಠಃ ॥

ಶೃಣುತಂ ಜರಿತುರ್ಹವಮಿಂದ್ರಾಗ್ನೀ ವನತಂ ಗಿರಃ ।
ಈಶಾನಾ ಪಿಪ್ಯತಂ ಧಿಯಃ ॥ ೨ ॥

॥ ಪದಪಾಠಃ ॥

ಶೃಣುತಂ । ಜರಿತುಃ । ಹವಂ । ಇಂದ್ರಾಗ್ನೀ ಇತಿ । ವನತಂ । ಗಿರಃ ।
ಈಶಾನಾ । ಪಿಪ್ಯತಂ । ಧಿಯಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಜರಿತುಃ ಸ್ತೋತುರ್ಹವಮಾಹ್ವಾನಂ ಯುವಾಂ ಶೃಣುತಂ । ಶ್ರುತ್ವಾ ಚ ಗಿರಸ್ತದೀಯಾಃ ಸ್ತುತೀರ್ವನತಂ । ಸಂಭಜತಂ । ತಥೇಶಾನೇಶ್ವರೌ ಯುವಾಂ ಧಿಯೋಽನುಷ್ಠಿತಾನಿ ಕರ್ಮಾಣಿ ಪಿಪ್ಯತಂ । ತತ್ಸಿಧ್ಯೈಃ ಫಲೈಃ ಪೂರಯತಂ ॥

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । ಜರಿತುಃ—ಸ್ತುತಿಕರ್ತನಾದ ಈ ವಸಿಷ್ಠನ । ಹವಂ—ಆಹ್ವಾನವನ್ನು । ಶೃಣುತಂ—ಕೇಳಿರಿ । ಗಿರಃ—ಅವನ ಸ್ತುತಿವಾಕ್ಯನ್ನು । ವನತಂ—ಗೌರವಿಸಿರಿ । ಈಶಾನಾ—ಪ್ರಭುಗಳಾದ ನೀವು । ಧಿಯಃ—ಅವನ ಕರ್ಮಗಳನ್ನು । ಪಿಪ್ಯತಂ—ಫಲಗಳಿಂದ ಸನ್ಮಾನಿಸಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ಸ್ತುತಿಕರ್ತನಾದ ಈ ವಸಿಷ್ಠನ ಆಹ್ವಾನವನ್ನು ಕೇಳಿರಿ. ಅವನ ಸ್ತುತಿವಾಕ್ಯನ್ನು ಗೌರವಿಸಿರಿ. ಪ್ರಭುಗಳಾದ ನೀವು ಅವನ ಕರ್ಮಗಳನ್ನು ಸತ್ಫಲಗಳಿಂದ ಸನ್ಮಾನಿಸಿರಿ.

English Translation

Hear, Indra and Agni, the invocation of the worshipper; accept his adoration; recompense, lords, his pious acts.

॥ ಸಂಹಿತಾಪಾಠಃ ॥

ಮಾ ಪಾಪತ್ವಾಯ ನೋ ನರೇಂದ್ರಾಗ್ನೀ ಮಾಭಿಶಸ್ತಯೇ ।
ಮಾ ನೋ ರೀರಧತಂ ನಿದೇ ॥ ೩ ॥

॥ ಪದಪಾಠಃ ॥

ಮಾ । ಪಾಪ‌ಽತ್ವಾಯ । ನಃ । ನರಾ । ಇಂದ್ರಾಗ್ನೀ ಇತಿ । ಮಾ । ಅಭಿಽಶಸ್ತಯೇ ।
ಮಾ । ನಃ । ರೀರಧತಂ । ನಿದೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರಾವಿಂದ್ರಾಗ್ನೀ ನೋಽಸ್ಮಾನ್ ಪಾಪತ್ವಾಯ ಹೀನಭಾವಾಯ ಮಾ ರೀರಧತಂ। ತಥಾಭಿಶಸ್ತಯೇ ಶತ್ರುಭಿಃ ಕೃತಾಯಾಭಿಶಂಸನಾಯ ಮಾ ರೀರಧತಂ । ತಥಾ ನಿದೇ ನಿಂದಕಾಯ ಜನಾಯ ನೋಽಸ್ಮಾನ್ ಮಾ ರೀರಧತಂ । ಮಾ ವಶೀಕುರುತಂ ॥

॥ ಪ್ರತಿಪದಾರ್ಥ ॥

ನರಾ—ನೇತೃಗಳಾದ । ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । ನಃ—ನಮ್ಮನ್ನು । ಪಾಪತ್ವಾಯ—ತುಚ್ಛವಾದ ಪಾಪಾದಿಗಳಿಗೆ । ಮಾ ರೀರಧತಂ—ವಶಮಾಡಬೇಡಿರಿ । ಅಭಿಶಸ್ತಯೇ—ಶತ್ರುವಿನ ದ್ರೋಹಕ್ರಿಯೆಗಳಿಗೆ । ಮಾ (ರೀರಧತಂ)—ಬಿಟ್ಟುಕೊಡಬೇಡಿರಿ । ನಃ—ನಮ್ಮನ್ನು । ನಿದೇ—ದೂಷಿಸುವ ಜನರಿಗೆ । ಮಾ (ರೀರಧತಂ)—ವಶಮಾಡಬೇಡಿರಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ನಮ್ಮನ್ನು ತುಚ್ಛವಾದ ಪಾಪಾದಿಗಳಿಗೆ ವಶಮಾಡಬೇಡಿರಿ. ಶತ್ರುವಿನ ದ್ರೋಹಕ್ರಿಯೆಗಳಿಗೆ ಬಿಟ್ಟುಕೊಡಬೇಡಿರಿ. ನಮ್ಮನ್ನು ದೂಷಿಸುವ ಜನರ ಕೈಗೆ ಸಿಕ್ಕಿ ನರಳುವಂತೆ ಮಾಡಬೇಡಿರಿ.

## English Translation

Leaders of (rites), Indra and Agni, subject us not to wickedness, nor to calumny, nor to the reviler.

॥ ಸಂಹಿತಾಪಾಠಃ ॥

ಇಂದ್ರೇ ಅಗ್ನಾ ನಮೋ ಬೃಹತ್ಸುವೃಕ್ತಿಮೇರಯಾಮಹೇ ।

ಧಿಯಾ ಧೇನಾ ಅವಸ್ಯವಃ ॥ ೪ ॥

॥ ಪದಪಾಠಃ ॥

ಇಂದ್ರೇ । ಅಗ್ನಾ । ನಮಃ । ಬೃಹತ್ । ಸುಽವೃಕ್ತಿಂ । ಆ । ಈರಯಾಮಹೇ ।

ಧಿಯಾ । ಧೇನಾಃ । ಅವಸ್ಯವಃ ॥ ೪ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇಽಹನಿ ಪ್ರಾತಃಸವನೇಽಚ್ಛಾವಾಕಸ್ಯೇಂದ್ರೇ ಅಗ್ನೇತ್ಯಯಂ ಷಡಹಸ್ತೋತ್ರಿಯಸಂಜ್ಞಕಸ್ತೃಚಃ । ಸೂತ್ರಿತಂ ಚ । ಇಂದ್ರೇ ಅಗ್ನಾ ನಮೋ ಬೃಹತ್ತಾ ಹುವೇ ಯುಯೋರಿದಂ । ಆ. ೭-೨ । ಇತಿ ॥

ಅವಸ್ಯವೋ ರಕ್ಷಣಕಾಮಾ ವಯಮಿಂದ್ರೇ ದೇವೇಽಗ್ನಾಗ್ನೌ ಚ ಬೃಹದ್ಬೃಂಹಣಂ ವರ್ಧಕಂ ನಮೋ ಹವಿರ್ಲಕ್ಷಣಮನ್ನಂ ಸುವೃಕ್ತಿಂ ಸುಪ್ರವೃತ್ತಾಂ ಸ್ತುತಿಂ ಚೇರಯಾಮಹೇ । ಅಭಿಪ್ರೇರಯಾಮಃ । ತಥಾ ಧಿಯಾ ಕರ್ಮಣಾ ಯುಕ್ತಾ ಧೇನಾಃ । ವಾಙ್ನಾಮೈತತ್ । ಅಪ್ರಗೀತಾಃ ಸ್ತುತಿವಾಚಶ್ಚಾಭಿಪ್ರೇರಯಾಮಃ ॥

॥ ಪ್ರತಿಪದಾರ್ಥ ॥

ಅವಸ್ಯವಃ—ರಕ್ಷಣೆಯನ್ನು ಅಪೇಕ್ಷಿಸುವ ನಾವು । ಇಂದ್ರೇ—ದೇವತಾತ್ಮನಾದ ಇಂದ್ರನನ್ನುದ್ದೇಶಿಸಿಯೂ । ಅಗ್ನಾ—ಅಗ್ನಿಯನ್ನುದ್ದೇಶಿಸಿಯೂ । ಬೃಹತ್—ಅವರ ವರ್ಧಕವಾದ । ನಮಃ—ಹವಿಸ್ಸಿನ ರೂಪದ ಅನ್ನವನ್ನೂ । ಸುವೃಕ್ತಿ—ಉತ್ತಮವಾದ ಸ್ತುತಿಯನ್ನೂ । ಆ ಈರಯಾಮಹೇ—ಅರ್ಪಿಸುತ್ತೇವೆ । ಧಿಯಾ—ಕರ್ಮದಿಂದ ಕೂಡಿಕೊಂಡು । ಧೇನಾಃ—ಅತ್ಯುತ್ತಮವಾದ ಸ್ತುತಿವಾಕ್ಯಗಳನ್ನೂ ಅರ್ಪಿಸುತ್ತೇವೆ.

॥ ಭಾವಾರ್ಥ ॥

ರಕ್ಷಣೆಯನ್ನು ಅಪೇಕ್ಷಿಸುವ ನಾವು ದೇವತಾತ್ಮನಾದ ಇಂದ್ರನನ್ನುದ್ದೇಶಿಸಿಯೂ, ಅಗ್ನಿಯನ್ನುದ್ದೇಶಿಸಿಯೂ ಅವರ ವರ್ಧಕವಾದ ಹವಿಸ್ಸಿನ ರೂಪದ ಅನ್ನವನ್ನೂ ಉತ್ತಮವಾದ ಸ್ತುತಿಯನ್ನೂ ಅರ್ಪಿಸುತ್ತೇವೆ ಕರ್ಮದಿಂದ ಕೂಡಿಕೊಂಡು ಅತ್ಯುತ್ತಮವಾದ ಸ್ತುತಿವಾಕ್ಯಗಳನ್ನೂ ಅರ್ಪಿಸುತ್ತೇವೆ.

English Translation

Desiring protection, we offer copious oblations and praise to Indra and Agni, and prayers with holy rites.

॥ ವಿಶೇಷವಿಷಯಗಳು ॥

ಯಾಗದ ಚಾತುರ್ವಿಂಶಿಕವೆಂಬ ದಿನದ ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಇಂದ್ರೇ

ಅಗ್ನಾ ಎಂಬ ಈ ಋಕ್ಕನ್ನು ಷಡಹಸ್ತೋತ್ರಿಯವೆಂಬ ತೃಚವನ್ನಾನಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ ಇಂದ್ರೇ ಅಗ್ನಾ ನಮೋ ಬೃಹತ್ತ್ವಾ ಹುವೇ ಯಯೋರಿದಂ ಎಂಬ ಸೂತ್ರದಿಂದ (ಅ. ೬-೨) ವಿವೃತವಾಗಿರುವುದು

॥ ಸಂಹಿತಾಪಾಠಃ ॥

ತಾ ಹಿ ಶಶ್ವಂತ ಈಳತ ಇತ್ಥಾ ವಿಪ್ರಾಸ ಊತಯೇ ।
ಸಬಾಧೋ ವಾಜಸಾತಯೇ ॥ ೫ ॥

॥ ಪದಪಾಠಃ ॥

ತಾ । ಹಿ । ಶಶ್ವಂತಃ । ಈಳತೇ । ಇತ್ಥಾ । ವಿಪ್ರಾಸಃ । ಊತಯೇ ।
ಸಽಬಾಧಃ । ವಾಜಽಸಾತಯೇ ॥ ೫ ॥

॥ ಸಾಯಣಭಾಷ್ಯಂ ॥

ತಾ ಹಿ ತೌ ಖಲ್ವಿಂದ್ರಾಗ್ನೀ ಶಶ್ವಂತೋ ಬಹವೋ ವಿಪ್ರಾಸೋ ಮೇಧಾವಿನೋ ಜನಾ ಊತಯೇ ರಕ್ಷಣಾಯೇತ್ಥಂ ಇತ್ಥಮನೇನ ಪ್ರಕಾರೇಣೇಳತೇ । ಸ್ತುವಂತಿ । ತಥಾ ಸಬಾಧಃ ಸಮಾನಂ ಬಾಧಮಾನಾಃ ಪರಸ್ಪರಂ ಬಾಧ್ಯಮಾನಾ ಜನಾ ವಾಜಸಾತಯೇಽನ್ನಲಾಭಾಯ ತಾವೇವೇಂದ್ರಾಗ್ನೀ ಈಳತೇ । ಸ್ತುವಂತಿ। ಯದ್ವಾ । ವಾಜಸಾತಿರಿತಿ ಸಂಗ್ರಾಮನಾಮ । ಸಂಗ್ರಾಮಾರ್ಥಂ ॥

॥ ಪ್ರತಿಪದಾರ್ಥ ॥

ಇತ್ಥಾ—ಇದೇ ರೀತಿಯಲ್ಲಿ । ವಿಪ್ರಾಸಃ—ಮೇಧಾವಿಗಳಾದ ಯಜಮಾನರು । ಶಶ್ವಂತಃ—ಅನೇಕ ಸಂಖ್ಯೆಗಳಲ್ಲಿ । ಊತಯೇ—ತಮ್ಮ ರಕ್ಷಣಾರ್ಥವಾಗಿ । ತಾ ಹಿ—ಪ್ರಸಿದ್ಧರಾದ ಆ ಇಂದ್ರಾಗ್ನಿಗಳನ್ನೇ । ಈಳತೇ—ಸ್ತುತಿಸುತ್ತಾರೆ । ಸಬಾಧಃ—ಒಂದೇ ರೀತಿಯ ಕ್ಷುದಾದಿ ಬಾಧೆಗಳನ್ನನುಭವಿಸುವ ಜನರೂ ಸಹ । ವಾಜಸಾತಯೇ—ಅನ್ನಲಾಭಾರ್ಥವಾಗಿ (ಇವರನ್ನೇ ಸ್ತುತಿಸುತ್ತಾರೆ).

॥ ಭಾವಾರ್ಥ ॥

ನಾವು ಪ್ರಶಂಸಿಸುವ ರೀತಿಯಲ್ಲೇ ಮೇಧಾವಿಗಳಾದ ಯಜಮಾನರು ಅನೇಕ ಸಂಖ್ಯೆಗಳಲ್ಲಿ ತಮ್ಮ ರಕ್ಷಣಾರ್ಥವಾಗಿ ಪ್ರಸಿದ್ಧರಾದ ಆ ಇಂದ್ರಾಗ್ನಿಗಳನ್ನೇ ಸ್ತುತಿಸುತ್ತಾರೆ ಒಂದೇ ರೀತಿಯ ಕ್ಷುದಾದಿಬಾಧೆಗಳನ್ನನುಭವಿಸುವ ಜನರೂ ಸಹ ಅನ್ನಲಾಭಾರ್ಥವಾಗಿ ಇವರನ್ನೇ ಸ್ತುತಿಸುತ್ತಾರೆ.

## English Translation

Many are the sages who propitiate (Indra and Agni) in this manner for (their) protection, mutually striving for the acquirement of food.

॥ ಸಂಹಿತಾಪಾಠಃ ॥

ತಾ ವಾಂ ಗೀರ್ಭಿರ್ವಿಪನ್ಯವಃ ಪ್ರಯಸ್ವಂತೋ ಹವಾಮಹೇ ।
ಮೇಧಸಾತಾ ಸನಿಷ್ಯವಃ ॥ ೬ ॥

॥ ಪದಪಾಠಃ ॥

ತಾ । ವಾಂ । ಗೀಃऽಭಿಃ । ವಿಪನ್ಯವಃ । ಪ್ರಯಸ್ವಂತಃ । ಹವಾಮಹೇ ।
ಮೇಧऽಸಾತಾ । ಸನಿಷ್ಯವಃ ॥ ೬ ॥

॥ ಸಾಯಣಭಾಷ್ಯಂ ॥

ವಿಪನ್ಯವಃ ಸ್ತೋತ್ರಮಿಚ್ಛಂತಃ ಪ್ರಯಸ್ವಂತೋ ಹವಿರ್ಲಕ್ಷಣೇನಾನ್ನೇನೋಪೇತಾಃ ಸನಿಷ್ಯವಃ ಸನಿ ಧನಮಾತ್ಮನ ಇಚ್ಛಂತೋ ವಯಂ ಮೇಧಸಾತಾ ಮೇಧಾನಾಂ ಯಾಗಾನಾಂ ಸಾತೌ ಸಂಭಜನೇ ನಿಮಿತ್ತಭೂತೇ ಸತಿ ಹೇ ಇಂದ್ರಾಗ್ನೀ ತಾ ತೌ ವಾಂ ಯುವಾಂ ಗೀರ್ಭಿಃ ಸ್ತುತಿಭಿರ್ಹವಾಮಹೇ । ಆಹ್ವಯಾಮಹೇ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಗ್ನಿಗಳೇ) ವಿಪನ್ಯವಃ—ಸ್ತುತಿಗಳನ್ನು ಅರ್ಪಿಸಲಿಚ್ಛಿಸುವವರೂ । ಪ್ರಯಸ್ವಂತಃ—ಹವಿಸ್ಸಿನ ರೂಪದ ಅನ್ನದೊಡನೆ ಕೂಡಿದವರೂ । ಸನಿಷ್ಯವಃ—ಧನಾಪೇಕ್ಷಿಗಳೂ ಆದ ನಾವು । ಮೇಧಸಾತಾ—ಈ ಯಾಗ ನಿರ್ವಹಣದ ಕಾಲದಲ್ಲಿ । ತಾ ವಾಂ—ಪ್ರಸಿದ್ಧರಾದ ನಿಮ್ಮನ್ನೇ । ಗೀರ್ಭಿಃ—ಸ್ತುತಿಗಳಿಂದ । ಹವಾಮಹೇ—ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಸ್ತುತಿಗಳನ್ನರ್ಪಿಸಲಿಚ್ಛಿಸುವವರೂ, ಹವಿಸ್ಸಿನ ರೂಪದ ಅನ್ನದೊಡನೆ ಕೂಡಿದವರೂ ಧನಾಪೇಕ್ಷಿಗಳೂ ಆದ ನಾವು ಈ ಯಾಗನಿರ್ವಹಣಕಾಲದಲ್ಲಿ ಪ್ರಸಿದ್ಧರಾದ ನಿಮ್ಮನ್ನೇ ಸ್ತುತಿಗಳಿಂದ ಕರೆಯುತ್ತೇವೆ.

## Englisn Translation

Eager to offer praise, bearing (sacrificial) food, desirous of wealth we invoke you, Indra and Agni, with praises, in the celebration of holy, acts.

॥ ಸಂಹಿತಾಪಾಠಃ ॥

ಇಂದ್ರಾಗ್ನೀ ಅವಸಾ ಗತಮಸ್ಮಭ್ಯಂ ಚರ್ಷಣೀಸಹಾ ।
ಮಾ ನೋ ದುಃಶಂಸ ಈಶತ ॥ ೭ ॥

॥ ಪದಪಾಠಃ ॥

ಇಂದ್ರಾಗ್ನೀ ಇತಿ । ಅವಸಾ । ಆ । ಗತಂ । ಅಸ್ಮಭ್ಯಂ । ಚರ್ಷಣಿಽಸಹಾ ।

ಮಾ । ನಃ । ದುಃಽಶಂಸಃ । ಈಶತ ॥ ೬ ॥

॥ ಸಾಯಣಭಾಷ್ಯಂ ॥

ಅಮಾವಾಸ್ಯಾಯಾಮೈಂದ್ರಾಗ್ನಸ್ಯ ಹವಿಷ ಇಂದ್ರಾಗ್ನೀ ಅವಸೇತ್ಯನುವಾಕ್ಯಾ । ಸೂತ್ರಿತಂ ಚ । ಇಂದ್ರಾಗ್ನೀ ಅವಸಾ ಗತಂ ಗೀರ್ಭಿರ್ವಿಪ್ರಃ ಪ್ರಮತಿಮಿಚ್ಛಮಾನಃ । ಆ. ೧-೬ । ಇತಿ ॥

ಹೇ ಚರ್ಷಣೀಸಹಾ ಚರ್ಷಣೀನಾಂ ಮನುಷ್ಯಾಣಾಂ ಶತ್ರುಭೂತಾನಾಮಭಿಭವಿತಾರೌ ಹೇ ಇಂದ್ರಾಗ್ನೀ ಅಸ್ಮಭ್ಯಂ ಸ್ತೋತೃಭ್ಯೋ ದೇಯೇನಾವಸಾನ್ನೇನ ಸಹಾ ಗತಂ । ಆಗಚ್ಛತಂ । ದುಃಶಂಸೋ ದುಷ್ಟಾಭಿಶಂಸನಃ ಪಾರುಷ್ಯವಾದೀ ಶತ್ರುರ್ನೋಽಸ್ಮಾನ್ಮೇಶತ । ಈಶಿಷ್ಟ । ಅಸ್ಮಾನ್ಬಾಧಿತುಂ ಮಾ ಶಕ್ನೋತು ॥

॥ ಪ್ರತಿಪದಾರ್ಥ ॥

ಚರ್ಷಣೀಸಹಾ—ಶತ್ರುಜನರನ್ನು ಸೋಲಿಸುವ ಶಕ್ತಿಯುಳ್ಳ । ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿಗಳೇ । ಅಸ್ಮಭ್ಯಂ—ನಮಗೆ ಕೊಡಲು ಯೋಗ್ಯವಾದ । ಅವಸಾ—ಅನ್ನದೊಡನೆ । ಆ ಗತಂ—ದಯಮಾಡಿರಿ । ದುಃಶಂಸಃ—ದ್ರೋಹಾತ್ಮಕವಾದ ಅಭಿಪ್ರಾಯವುಳ್ಳ ಶತ್ರುಗಳು । ನಃ—ನಮ್ಮ ಮೇಲೆ । ಮಾ ಈಶತ—ಪ್ರಭುತ್ವವನ್ನು ಮಾಡದಿರಲಿ

॥ ಭಾವಾರ್ಥ ॥

ಶತ್ರುಜನರನ್ನು ಸೋಲಿಸುವ ಶಕ್ತಿಯುಳ್ಳ ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ನಮಗೆ ಕೊಡಲು ಯೋಗ್ಯವಾದ ಅನ್ನದೊಡನೆ ದಯಮಾಡಿರಿ. ದ್ರೋಹಾತ್ಮಕವಾದ ಅಭಿಪ್ರಾಯವುಳ್ಳ ಶತ್ರುಗಳು ನಮ್ಮ ಮೇಲೆ ಪ್ರಭುತ್ವವನ್ನು ಮಾಡದಿರುವ ತಾಗಲಿ.

## English Translation

Overcomers of (hostile) men, Indra and Agni, come with food (to be bestowed) upon us : let not the malevolent have power over us.

॥ ವಿಶೇಷವಿಷಯಗಳು ॥

ಅಮಾವಾಸ್ಯ (ದರ್ಶ) ಯಾಗದಲ್ಲಿ ಇಂದ್ರಾಗ್ನಿಗಳನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ ಇಂದ್ರಾಗ್ನೀ ಅವಸಾ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ ಇಂದ್ರಾಗ್ನೀ ಅವಸಾ ಗತಂ ಗೀರ್ಭಿರ್ವಿಪ್ರಃ ಪ್ರಮತಿಮಿಚ್ಛಮಾನಃ—ಎಂಬ ಸೂತ್ರದಿಂದ (ಆ. ೧-೬) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಮಾ ಕಸ್ಯ ನೋ ಅರರುಷೋ ಧೂರ್ತಿಃ ಪ್ರಣಙ್ಮರ್ತ್ಯಸ್ಯ ।

ಇಂದ್ರಾಗ್ನೀ ಶರ್ಮ ಯಚ್ಛತಂ ॥ ೮ ॥

॥ ಪದಪಾಠಃ ॥

ಮಾ । ಕಸ್ಯ । ನಃ । ಅರರುಷಃ । ಧೂರ್ತಿಃ । ಪ್ರಣಕ್ । ಮರ್ತ್ಯಸ್ಯ ।

ಇಂದ್ರಾಗ್ನೀ । ಶರ್ಮ । ಯಚ್ಛತಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಕಸ್ಯ ಕಸ್ಯಚಿದಪ್ಯರರುಷೋಽರೇರ್ಮರ್ತ್ಯಸ್ಯ ಮನುಷ್ಯಸ್ಯ ಸಂಬಂಧಿನೀ ಧೂರ್ತಿರ್ಹಿಂಸಾ ನೋಽಸ್ಮಾನ್ಮಾ ಪ್ರಣಕ್ । ಮಾ ಪ್ರಾಪ್ನೋತು । ಶರ್ಮ ಸುಖಂ ಚಾಸ್ಮಭ್ಯಂ ಯಚ್ಛತಂ । ದತ್ತಂ ॥

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿಗಳೇ । ಅರರುಷಃ—ಶತ್ರುಭೂತನಾದ । ಕಸ್ಯ (ಚಿತ್) ಮರ್ತ್ಯಸ್ಯ—ಯಾವ ಮಾನವನಿಂದಾಗಲಿ ಪ್ರೇರಿತವಾದ । ಧೂರ್ತಿಃ—ಹಿಂಸೆಯು । ನಃ—ನಮ್ಮನ್ನು । ಮಾ ಪ್ರಣಕ್—ಸಮೀಪಿಸದೆ ಇರಲಿ । ಶರ್ಮ—ಸುಖವನ್ನು । ಯಚ್ಛತಂ—ಕೊಡಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ಶತ್ರುರೂಪಿಯಾದ ಯಾವ ಮಾನವನಿಂದಾಗಲಿ ಪ್ರೇರಿತವಾದ ಹಿಂಸೆಯು ನಮ್ಮನ್ನು ಸಮೀಪಿಸದೆ ಇರಲಿ. ನಮಗೆ ಸುಖವನ್ನು ಕೊಡಿರಿ.

## English Translation

Let not the malice of any hostile mortal reach us; grant us Indra and Agni, felicity.

॥ ಸಂಹಿತಾಪಾಠಃ ॥

ಗೋಮದ್ಧಿರಣ್ಯವದ್ವಸು ಯದ್ವಾಮಶ್ವಾವದೀಮಹೇ ।

ಇಂದ್ರಾಗ್ನೀ ತದ್ವನೇಮಹಿ ॥ ೯ ॥

॥ ಪದಪಾಠಃ ॥

ಗೋऽಮತ್ । ಹಿರಣ್ಯऽವತ್ । ವಸು । ಯತ್ । ವಾಂ । ಅಶ್ವऽವತ್ । ಈಮಹೇ ।
ಇಂದ್ರಾಗ್ನೀ ಇತಿ । ತತ್ । ವನೇಮಹಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಗೋಮದ್ಭಿರ್ಗೋಭಿರ್ಯುಕ್ತಂ ಹಿರಣ್ಯವದ್ಭಿರಣ್ಯೈಃ ಸುವರ್ಣೈರ್ಯುಕ್ತಮಶ್ವಾವದಶ್ವೈರಶ್ವೋಪೇತಂ ಯದ್ವಸು ವಾಂ ಯುವಾಮೀಮಹೇ ಯಾಚಾಮಹೇ ತದ್ವಸು ಯುವಯೋಃ ಪ್ರಸಾದಾದ್ವಯಂ ವನೇಮಹಿ । ಸಂಭಜೇಮಹಿ ॥

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । ಗೋಮತ್—ಗೋವುಗಳಿಂದ ಕೂಡಿರುದೂ । ಹಿರಣ್ಯವತ್—ಸುವರ್ಣಯುಕ್ತವಾದುದೂ । ಅಶ್ವಾವತ್—ಅಶ್ವಯುಕ್ತವಾದುದೂ ಆದ । ಯತ್ ವಸು—ಯಾವ ಧನವನ್ನು । ವಾಂ—ನಿಮ್ಮಿಂದ । ಈಮಹೇ—ಯಾಚಿಸುವೆವೋ । ತತ್—ಅದೇ ಧನವನ್ನು । ವನೇಮಹಿ—ನಿಮ್ಮಿಂದ ನಾವು ಪಡೆಯುವಂತಾಗಲಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ಗೋವುಗಳಿಂದ ಕೂಡಿದುದೂ, ಸುವರ್ಣಯುಕ್ತವಾದುದೂ, ಅಶ್ವಯುಕ್ತವಾದುದೂ ಆದ ಯಾವ ಧನವನ್ನು ನಿಮ್ಮಿಂದ ಯಾಚಿಸುವೆವೋ ಅದೇ ಧನವನ್ನು ನಿಮ್ಮಿಂದ ನಾವು ಪಡೆಯುವಂತಾಗಲಿ.

## English Translation

We solicit you both for wealth, comprising cattle, gold and horses: may we obtain it of you, Indra and Agni.

॥ ಸಂಹಿತಾಪಾಠಃ ॥

ಯತ್ಸೋಮ ಆ ಸುತೇ ನರ ಇಂದ್ರಾಗ್ನೀ ಅಜೋಹವುಃ ।
ಸಪ್ತೀವಂತಾ ಸಪರ್ಯವಃ ॥ ೧೦ ॥

॥ ಪದಪಾಠಃ ॥

ಯತ್ । ಸೋಮೇ । ಆ । ಸುತೇ । ನರಃ । ಇಂದ್ರಾಗ್ನೀ ಇತಿ । ಅಜೋಹವುಃ ।
ಸಪ್ತಿऽವಂತಾ । ಸಪರ್ಯವಃ ॥ ೧೦ ॥

॥ ಸಾಯಣಭಾಷ್ಯಂ ॥

**ಚಾತುರ್ವಿಂಶಿಕೇಽಹನಿ ಪ್ರಾತಃಸವನೇಽಚ್ಛಾವಾಕಶಸ್ತ್ರೇ ಯತ್ಸೋಮ ಆ ಸುತ ಇತ್ಯಾರಂಭಣೀಯಾಹರ್ಗಣೇಷು ಚ ದ್ವಿತೀಯಾದಿಷ್ವಹಃಸ್ವೇಷಾ ಪಾತ್ರೇಸವನೇ ತೇನೈವ ಶಂಸನೀಯಾ । ಸೂತ್ರಿತಂ ಚ । ಯತ್ಸೋಮ ಆ ಸುತೇ ನರ ಇತ್ಯಾರಂಭಣೀಯಾಃ ಶಸ್ತ್ವಾ । ಆ. ೭-೨ । ಇತಿ ॥**

**ಸೋಮೇ ಸುತೇಽಭಿಷುತೇ ಸತಿ ನರಃ ಕರ್ಮಣಾಂ ನೇತಾರ ಋತ್ವಿಜಃ ಸಪರ್ಯವಃ ಪರಿಚರಣಕಾಮಾಃ ಸಂತಃ ಸಪ್ತೀವಂತಾ ಪ್ರಶಸ್ತಾಶ್ವಾನಿಂದ್ರಾಗ್ನೀ ಇಂದ್ರಮಗ್ನಿಂ ಚ ಯದ್ಯದಾಜೋಹವುಃ ಅಭಿಹ್ವಯಂತೇ ತದಾ ಯುವಾಮಾಗಚ್ಛತಮಿತಿ ಶೇಷಃ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಗ್ನಿಗಳೇ) **ಸೋಮೇ**—ಸೋಮರಸವು । **ಸುತೇ** ಹಿಂಡಲ್ಪಟ್ಟಾಗ । **ನರಃ**—ಕರ್ಮನೇತೃಗಳಾದ ಋತ್ವಿಕ್ಕುಗಳು । **ಸಪರ್ಯವಃ**—ನಿಮ್ಮ ಪೂಜಾನಿರತರಾಗಿ । **ಸಪ್ತೀವಂತಾ**—ಉತ್ತಮವಾದ ಅಶ್ವಯುಕ್ತರೂ । **ಇಂದ್ರಾಗ್ನೀ**—ಇಂದ್ರಾಗ್ನಿರೂಪರೂ ಆದ ನಿಮ್ಮನ್ನು । **ಯತ್**—ಯಾವಾಗ । **ಆ ಅಜೋಹವುಃ**—ಪ್ರಾರ್ಥಿಸಿ ಕರೆಯುವರೋ (ಆಗ ನಮ್ಮ ಯಜ್ಞಕ್ಕೆ ಬನ್ನಿರಿ).

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ ಸೋಮರಸವು ಹಿಂಡಲ್ಪಟ್ಟಾಗ ಕರ್ಮನೇತೃಗಳಾದ ಋತ್ವಿಕ್ಕುಗಳು ನಿಮ್ಮ ಪೂಜಾನಿರತರಾಗಿ ಉತ್ತಮವಾದ ಅಶ್ವಯುಕ್ತರೂ ಇಂದ್ರಾಗ್ನಿರೂಪರೂ ಆದ ನಿಮ್ಮನ್ನು ಪ್ರಾರ್ಥಿಸಿ ಕರೆದೊಡನೆಯೇ ನಮ್ಮ ಯಜ್ಞಕ್ಕೆ ದಯಮಾಡಿರಿ.

## English Translation

When adoring leaders (of rites), invoke you two, lords of horses, on the Soma being offered, (come hither).

॥ ವಿಶೇಷವಿಷಯಗಳು ॥

ಯಾಗದ ಚಾತುರ್ವಿಂಶಿಕವೆಂಬ ದಿನದ ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು **ಯತ್ಸೋಮ ಆ ಸುತೇ** ಎಂಬ ಈ ಋಕ್ಕಿನಿಂದ ಶಸ್ತ್ರಮಂತ್ರಗಳನ್ನು ಪ್ರಾರಂಭಿಸಬೇಕು. ಮತ್ತು ಅಹರ್ಗಣವೆಂಬ ಯಾಗದಲ್ಲಿ ಎರಡನೆಯ ದಿನ ಮೊದಲಾಗಿ ಮುಂದಿನ ದಿನಗಳಲ್ಲಿ ಪ್ರಾತಸ್ಸವನಕಾಲದಲ್ಲಿ ಆ ಋತ್ವಿಜನೇ ಈ ಋಕ್ಕನ್ನು ಪಠಿಸಬೇಕು. ಈ ವಿಷಯದಲ್ಲಿ—**ಯತ್ಸೋಮ ಆ ಸುತೇ ನರ ಇತ್ಯಾರಂಭಣೀಯಾಃ ಶಸ್ತ್ವಾ** ಎಂಬ ಆಶ್ವಲಾಯನ ಶ್ರೌತಸೂತ್ರದ (ಆ. ೭-೨) ನಿರ್ದೇಶವಿರುವುದು.

॥ ಸಂಹಿತಾಪಾಠಃ ॥

ಉಕ್ಥೇಭಿರ್ವೃತ್ರಹಂತಮಾ ಯಾ ಮಂದಾನಾ ಚಿದಾ ಗಿರಾ ।
ಆಂಗೂಷೈರಾವಿವಾಸತಃ ॥ ೧೧ ॥

॥ ಪದಪಾಠಃ ॥

ಉಕ್ಥೇಭಿಃ । ವೃತ್ರಹನ್ऽತಮಾ । ಯಾ । ಮಂದಾನಾ । ಚಿತ್ । ಆ । ಗಿರಾ ।

ಆಂಗೂಷೈಃ । ಆऽವಿವಾಸತಃ ॥ ೧೧ ॥

॥ ಸಾಯಣಭಾಷ್ಯಂ ॥

ವೃತ್ರಹಂತಮಾ ವೃತ್ರಾಣಾಮಾವರಕಾಣಾಂ ಹಂತೃತಮೌ ಮಂದಾನಾ ಮೋದಮಾನೌ ಯಾ ಯಾವಿಂದ್ರಾಗ್ನೀ ಉಕ್ಥೇಭಿಃ ಶಸ್ತ್ರೈರ್ಗಿರಾ ಚ ಸ್ತುತ್ಯಾ ಚಾವಿವಾಸತಃ ಪರಿಚರ್ಯೇತೇ ॥ ವ್ಯತ್ಯಯೇನ ಕರ್ಮಣಿ ಕರ್ತೃಪ್ರತ್ಯಯಃ ॥ ಆಂಗೂಷೈರಾಘೋಷೈರನ್ಯೈಶ್ಚ ಸ್ತೋತ್ರೈರ್ಯಾವಾವಿವಾಸತಃ ಪರಿಚರ್ಯೇತೇ ತೌ ಯುವಾಮಾಗಚ್ಛತಮಿತಿ ಶೇಷಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಗ್ನಿಗಳೇ) **ವೃತ್ರಹಂತಮಾ**—ಶತ್ರುಗಳನ್ನು ಪೂರ್ಣವಾಗಿ ನಾಶಮಾಡತಕ್ಕವರೂ । **ಮಂದಾನಾ**—ಸೋಮಪಾನದಿಂದ ಹರ್ಷಿತರಾಗುವವರೂ ಆದ । **ಯಾ**—ಯಾವ ನೀವು । **ಉಕ್ಥೇಭಿಃ**—ಶಸ್ತ್ರಮಂತ್ರಗಳಿಂದಲೂ । **ಗಿರಾ ಚಿತ್**—ಸ್ತುತಿಗಳಿಂದಲೂ । **ಆಂಗೂಷೈಃ**—ನಾದಾತ್ಮಕವಾದ ಸ್ತೋತ್ರಗಳಿಂದಲೂ (ಘೋಷರೂಪವಾದ) । **ಆವಿವಾಸತಃ**—ಪೂಜಿಸಲ್ಪಡುವಿರೋ (ಅಂತಹ ನೀವು ದಯಮಾಡಿರಿ)

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಶತ್ರುಗಳನ್ನು ಪೂರ್ಣವಾಗಿ ನಾಶಮಾಡತಕ್ಕವರೂ, ಸೋಮಪಾನದಿಂದ ಹರ್ಷಿತರಾಗುವವರೂ ಆದ ಯಾವ ನೀವು ಶಸ್ತ್ರಮಂತ್ರಗಳಿಂದಲೂ, ಸ್ತುತಿಗಳಿಂದಲೂ ಮತ್ತು ಘೋಷರೂಪವಾದ ಸ್ತೋತ್ರಗಳಿಂದಲೂ ಪೂಜಿಸಲ್ಪಡುವಿರೋ ಅಂತಹ ನೀವು ದಯಮಾಡಿರಿ.

## English Translation

Utter destroyers of Vritra, exhilarated ( by the Soma ), you who are worshipped with prayers and hymns and songs, (come hither).

॥ ಸಂಹಿತಾಪಾಠಃ ॥

ತಾವಿದ್ದುಃಶಂಸಂ ಮರ್ತ್ಯಂ ದುರ್ವಿದ್ವಾಂಸಂ ರಕ್ಷಸ್ವಿನಂ ।

ಆಭೋಗಂ ಹನ್ಮನಾ ಹತಮುದಧಿಂ ಹನ್ಮನಾ ಹತಂ ॥ ೧೨ ॥

॥ ಪದಪಾಠಃ ॥

ತೌ । ಇತ್ । ದುಃಶಂಸಂ । ಮರ್ತ್ಯಂ । ದುಃऽವಿದ್ವಾಂಸಂ । ರಕ್ಷಸ್ವಿನಂ ।

ಅಽಭೋಗಂ । ಹನ್ಮನಾ । ಹತಂ । ಉದಽಧಿಂ । ಹನ್ಮನಾ । ಹತಂ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ತೌ ಯುವಾಂ ದುಃಶಂಸಂ ದುಷ್ಟಾಭಿಶಂಸನಂ ದುರ್ವಿದ್ವಾಂಸಂ ದುರ್ವಿಜ್ಞಾನಂ ರಕ್ಷಸ್ವಿನಂ ಬಲವಂತಮಾಭೋಗಮಾಹೃತ್ಯಾಸ್ಮತ್ತೋಽಪಹೃತ್ಯ ಭೋಕ್ತಾರಂ ಮರ್ತ್ಯಂ ಮನುಷ್ಯಂ ಶತ್ರುಂ ಹನ್ಮನಾ ಹನನಸಾಧನೇನಾಯುಧೇನ ಹತಂ । ಹಿಂಸ್ತಂ । ಉಕ್ತಮೇವಾರ್ಥಂ ದೃಷ್ಟಾಂತೇನ ದೃಢಯತಿ । ಉದಧಿಂ । ಉಪೋ್ತಪಮೇತತ್ । ಉದಧಾನಂ ಕುಂಭಮಿವ । ಯಥಾ ಕುಂಭೋಽನಾಯಾಸೇನ ಭಿದ್ಯತ ಏವಮನಾಯಾಸೇನೈವ ಶತ್ರುಮಾಯುಧೇನ ಯುವಾಂ ಹಿಂಸ್ತಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಗ್ನಿಗಳೇ) **ತೌ ಇತ್**—ಪ್ರಸಿದ್ಧರಾದ ನೀವು । **ದುಃಶಂಸಂ**—ದುಷ್ಟಬುದ್ಧಿಯುಳ್ಳವನೂ । **ದುರ್ವಿದ್ವಾಂಸಂ**—ತಪ್ಪು ತಿಳಿವಳಿಕೆಯುಳ್ಳವನೂ । **ರಕ್ಷಸ್ವಿನಂ**— ಅತಿಶಯವಾದ ಶಕ್ತಿಯುತನೂ । **ಆಭೋಗಂ**—ನಮ್ಮ ಸಂಪತ್ತನ್ನು ಕಸಿದು ಭೋಗವನ್ನನುಭವಿಸುವವನೂ ಆದ । **ಮರ್ತ್ಯಂ** -ಮಾನವನಾದ ಶತ್ರುವನ್ನು । **ಉದಧಿಂ**—ಕುಂಭವನ್ನು ಸುಲಭವಾಗಿ । **ಹನ್ಮನಾ ಇವ**—ದೊಣ್ಣೆಯಿಂದ ಒಡೆದುಹಾಕುವಂತೆ । **ಹನ್ಮನಾ**—ಕೊಲ್ಲಲು ಯೋಗ್ಯವಾದ ಆಯುಧದಿಂದ । **ಹತಂ**—ನಾಶಮಾಡಿರಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಪ್ರಸಿದ್ಧರಾದ ನೀವು ದುಷ್ಟಬುದ್ಧಿಯುಳ್ಳವನೂ, ತಪ್ಪು ತಿಳಿವಳಿಕೆಯುಳ್ಳವನೂ ಅತಿಶಯವಾದ ಶಕ್ತಿಯುತನೂ, ನಮ್ಮ ಸಂಪತ್ತನ್ನು ಕಸಿದುಕೊಂಡು ತಾನು ಭೋಗವನ್ನನುಭವಿಸುವವನೂ ಆದ ಮಾನವನಾದ ಶತ್ರುವನ್ನು ದೊಣ್ಣೆಯಿಂದ ಮಣ್ಣಿನ ಮಡಕೆಯನ್ನು ಸುಲಭವಾಗಿ ಒಡೆಯುವಂತೆ ಕೊಲ್ಲಲು ಯೋಗ್ಯವಾದ ಆಯುಧದಿಂದ ನಾಶಮಾಡಿರಿ.

## English Translation

Destroy with your fatal (weapons) the mortal who is malignant, ignorant, strong, rapacious: destroy him like a water-jar, with your weapons.



## ತೊಂಭತ್ತೈದನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಪ್ರ ಕ್ಷೋದಸೇತಿ ಷಡೃಚಂ ಷಷ್ಠಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ ಸರಸ್ವತೀದೇವತಾಕಂ। ತೃತೀಯಾ ತು ಸರಸ್ವದ್ದೇವತಾಕಾ । ಅನುಕ್ರಮ್ಯತೇ ಚ । ಪ್ರ ಕ್ಷೋದಸಾ· ಷಟ್ ಸಾರಸ್ವತಂ ತು

ತೃತೀಯಾ ಸರಸ್ವತ ಇತಿ ॥ ಗತಃ ಸೂಕ್ತವಿನಿಯೋಗಃ ॥ ಪ್ರಥಮೇ ಛಂದೋಮೇ ಪ್ರಉಗಶಸ್ತ್ರೇ ಪ್ರ ಕ್ಷೋದಸಾ ಧಾಯಸಾ ಸಸ್ರ ಏಷೇತಿ ಪ್ರಉಗಂ । ಆ. ೮ ೯ । ಇತಿ ॥ ಸಾರಸ್ವತೇ ಪಶೌ ಪ್ರ ಕ್ಷೋದಸೇತಿ ವಪಾಯಾ ಯಾಜ್ಯಾ । ಸೂತ್ರಿತಂ ಚ । ಪ್ರ ಕ್ಷೋದಸಾ ಧಾಯಸಾ ಸಸ್ರ ಏಷಾ ಪಾವೀರವೀ ಕನ್ಯಾ ಚಿತ್ರಾಯುಃ । ಆ. ೩-೭ । ಇತಿ ॥

ಅನುವಾದವು—**ಪ್ರ ಕ್ಷೋದಸಾ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಸರಸ್ವತಿಯು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಆದರೆ ಈ ಸೂಕ್ತದ ಮೂರನೆಯ ಋಕ್ಕು ಮಾತ್ರ **ಸರಸ್ವಾನ್** ಎಂಬ ದೇವತಾಪರವಾದುದು. ಅನುಕ್ರಮಣಿಕೆಯಲ್ಲಿ—**ಪ್ರ ಕ್ಷೋದಸಾ ಷಟ್ ಸಾರಸ್ವತಂ ತು ತೃತೀಯಾ ಸರಸ್ವತೇ** ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ. ಪ್ರಥಮಛಂದೋಮದ ಪ್ರಉಗಶಸ್ತ್ರಮಂತ್ರಪಠನಕಾಲದಲ್ಲಿ—**ಪ್ರ ಕ್ಷೋದಸಾ** ಎಂಬ ೯ ಋಕ್ಕನ್ನು ಪ್ರಉಗಶಸ್ತ್ರಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ಕ್ಷೋದಸಾ ಧಾಯಸಾ ಸಸ್ರ ಏಷೇತಿ ಪ್ರಉಗಂ** ಎಂಬ ಸೂತ್ರದಿಂದ (ಆ. ೮-೯) ವಿವೃತವಾಗಿರುವುದು. ಸರಸ್ವತೀದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿಯೂ ವಪೆ **ಪ್ರ ಕ್ಷೋದಸಾ** ಎಂಬ ಈ ಋಕ್ಕನ್ನು ವಪಾಹೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ಕ್ಷೋದಸಾ ಧಾಯಸಾ ಸಸ್ರ ಏಷಾ ಪಾವೀರವೀ ಕನ್ಯಾ ಚಿತ್ರಾಯುಃ** ಎಂಬ ಸೂತ್ರದಿಂದ (ಆ ೩-೭) ವಿವೃತವಾಗಿರುವುದು.

## ಸೂಕ್ತ—೯೫

ಮಂಡಲ -೭ ॥ ಅನುವಾಕ—೬ ॥ ಸೂಕ್ತ—೯೫ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ -೧೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ -೬ ॥
ಋಷಿಃ -ವಸಿಷ್ಠಃ ॥
ದೇವತಾ—೧, ೨, ೪-೬ ಸರಸ್ವತೀ । ೩ ಸರಸ್ವಾನ್ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ಕ್ಷೋದಸಾ ಧಾಯಸಾ ಸಸ್ರ ಏಷಾ ಸರಸ್ವತೀ ಧರುಣಮಾಯಸೀ ಪೂಃ ।
ಪ್ರಬಾಬಧಾನಾ ರಥ್ಯೇವ ಯಾತಿ ವಿಶ್ವಾ ಅಪೋ ಮಹಿನಾ ಸಿಂಧುರನ್ಯಾಃ ॥

॥ ಪದಪಾಠಃ ॥

ಪ್ರ । ಕ್ಷೋದಸಾ । ಧಾಯಸಾ । ಸಸ್ರೇ । ಏಷಾ । ಸರಸ್ವತೀ । ಧರುಣಂ । ಆಯಸೀ । ಪೂಃ ।
ಪ್ರಽಬಾಬಧಾನಾ । ರಥ್ಯಾಽಇವ । ಯಾತಿ । ವಿಶ್ವಾಃ । ಅಪಃ । ಮಹಿನಾ । ಸಿಂಧುಃ । ಅನ್ಯಾಃ ॥ ೧ ॥

। ಸಾಯಣಭಾಷ್ಯಂ ।

ಸರಸ್ವತ್ಯಾ ಏಷಾ ನದೀವನ್ನಿಗಮಾ । ಏಷಾ ದೃಶ್ಯಮಾನಾ ನದೀರೂಪಾ ಸರಸ್ವತ್ಯಾಯಸ್ಯಯಸಾ ನಿರ್ಮಿತಾ ಪೂಃ ಪುರೀವ ಧರುಣಂ ॥ ಲಿಂಗವ್ಯತ್ಯಯಃ ॥ ಧರುಣಾ ಧಾರಯಿತ್ರೀ ಧಾಯಸಾ ಧಾರಕೇಣ ಕ್ಷೋದಸೋದಕೇನ ಪ್ರ ಸಸ್ರೇ । ಪ್ರಧಾವತಿ । ಶೀಘ್ರಂ ಗಚ್ಛತಿ । ಸಿಂಧುಃ ಸ್ಯಂದನಶೀಲಾ ನದೀರೂಪಾ ಸಾನ್ಯಾ ವಿಶ್ವಾಃ ಸರ್ವಾ ಅಪ ಅಪಗಾ ಮಹಿನಾ ಮಹಿಮ್ನಾ ಪ್ರಬಾಬಧಾನಾ ಭೃಶಂ ಬಾಧಮಾನಾ ರಥ್ಯೇವ ಪ್ರತೋಲೀವ ವಿಸ್ತೀರ್ಣಾ ಸತೀ ಯಾತಿ । ಗಚ್ಛತಿ । ಯದ್ವಾ । ರಥ್ಯೇವ ರಥಿನೇವ ಯಥಾ ರಥೀ ರಥೇನ ಮಾರ್ಗಸ್ಥಂ ತರುಗುಲ್ಮಾದಿಕಂ ಚೂರ್ಣೀಕೃತ್ಯ ಗಚ್ಛತಿ ತದ್ವತ್ ಸ್ವಕೀಯೇನ ವೇಗೇನ ಸರ್ವಂ ಸಂಹಿಂಸತೀ ಗಚ್ಛತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಏಷಾ ಸರಸ್ವತೀ—ನದೀರೂಪದಲ್ಲಿ ಗೋಚರಳಾಗಿರುವ ಈ ಸರಸ್ವತಿಯು । ಆಯಸೀ—ಉಕ್ಕಿನಿಂದ ನಿರ್ಮಿತವಾದ । ಪೂಃ—ಪಟ್ಟಣದಂತೆ । ಧರುಣಂ— ದೃಢತೆಯನ್ನು ಹೊಂದಿ । ಧಾಯಸಾ—ಧಾರಕವಾದ । ಕ್ಷೋದಸಾ – ಉದಕದೊಡನೆ । ಪ್ರ ಸಸ್ರೇ—ಪ್ರವಹಿಸುತ್ತಾಳೆ । ಸಿಂಧುಃ—ಪ್ರವಾಹಯುಕ್ತಳಾದ ಈ ದೇವಿಯು । ವಿಶ್ವಾಃ— ಸಮಸ್ತವಾದ । ಅನ್ಯಾ ಅಪಃ—ಉಳಿದ ಪ್ರವಾಹೋದಕಗಳನ್ನೆಲ್ಲಾ । ಮಹಿನಾ—ತನ್ನ ಮಹಿಮೆಯಿಂದ । ಪ್ರಬಾಬಧಾನಾ—ತನ್ನಲ್ಲಿಯೇ ಅಡಗಿಸಿ ಸ್ವಾಧೀನಪಡಿಸಿಕೊಂಡು । ರಥ್ಯೇವ—ರಥವನ್ನು ಹೊಡೆಯುವವನು ತನ್ನ ಮಾರ್ಗದ ಆತಂಕಗಳನ್ನೆಲ್ಲಾ ದಾಟಿ ವೇಗವಾಗಿ ಮುಂದೆ ಸರಿಯುವಂತೆ । ಯಾತಿ—ಇವಳು ವೇಗವಾಗಿ ಮುಂದಕ್ಕೆ ಸರಿಯುತ್ತಾಳೆ.

॥ ಭಾವಾರ್ಥ ॥

ನದೀರೂಪದಲ್ಲಿ ಗೋಚರಳಾಗಿರುವ ಈ ಸರಸ್ವತಿಯು ಉಕ್ಕಿನಿಂದ ನಿರ್ಮಿತವಾದ ಪಟ್ಟಣದಂತೆ ದೃಢತೆಯನ್ನು ಹೊಂದಿ ಧಾರಕವಾದ ಉದಕಗಳೊಡನೆ ಪ್ರವಹಿಸುತ್ತಾಳೆ. ಪ್ರವಾಹಯುಕ್ತಳಾದ ಈ ದೇವಿಯು ಉಳಿದ ಸಮಸ್ತವಾದ ಪ್ರವಾಹೋದಕಗಳನ್ನೆಲ್ಲಾ ತನ್ನ ಮಹಿಮೆಯಿಂದ ತನ್ನಲ್ಲಿಯೇ ಅಡಗಿಸಿ ಸ್ವಾಧೀನಪಡಿಸಿಕೊಂಡು ರಥವನ್ನು ಹೊಡೆಯುವವನು ತನ್ನ ಮಾರ್ಗದ ಆತಂಕಗಳನ್ನೆಲ್ಲಾ ದಾಟಿ ವೇಗವಾಗಿ ಮುಂದೆ ಸರಿಯುವಂತೆ ಇವಳೂ ವೇಗವಾಗಿ ಮುಂದಕ್ಕೆ ಸರಿಯುತ್ತಾಳೆ.

## English Translation

This Saraswati, firm as a city made of iron, flows rapidly with all sustaining water, sweeping away in its might all other waters, as a charioteer (clears the road.)

॥ ಸಂಹಿತಾಪಾಠಃ ॥

ಏಕಾಚೇತತ್ಸರಸ್ವತೀ ನದೀನಾಂ ಶುಚಿರ್ಯತೀ ಗಿರಿಭ್ಯ ಆ ಸಮುದ್ರಾತ್ ।
ರಾಯಶ್ಚೇತಂತೀ ಭುವನಸ್ಯ ಭೂರೇರ್ಘೃತಂ ಪಯೋ ದುದುಹೇ ನಾಹುಷಾಯ ॥ ೨ ॥

॥ ಪದಪಾಠಃ ॥

ಏಕಾ । ಅಚೇತತ್ । ಸರಸ್ವತೀ । ನದೀನಾಂ । ಶುಚಿಃ । ಯತೀ । ಗಿರಿಽಭ್ಯಃ । ಆ । ಸಮುದ್ರಾತ್ ।
ರಾಯಃ । ಚೇತಂತೀ । ಭುವನಸ್ಯ । ಭೂರೇಃ । ಘೃತಂ । ಪಯಃ । ದುದುಹೇ । ನಾಹುಷಾಯ ॥ ೨ ॥

॥ ಸಾಯಣಭಾಷ್ಯಂ ॥

ಸಾರಸ್ವತ ಏವ ಪಶೌ ವಪಾಯಾ ಏಕಾಚೇತದಿತ್ಯನುವಾಕ್ಯಾ । ಸೂತ್ರಿತಂ ಚ । ಏಕಾಚೇತತ್ಸರಸ್ವತೀ ನದೀನಾಮುತ ಸ್ಯಾ ನಃ ಸರಸ್ವತೀ ಜುಷಾಣಾ । ಆ. ೩-೮ । ಇತಿ ॥

ಸಹಸ್ರವತ್ಸರೇಣ ಕ್ರತುನಾ ಯಕ್ಷ್ಯಮಾಣೋ ನಾಹುಷೋ ನಾಮ ರಾಜಾ ಸರಸ್ವತೀಂ ನದೀಂ ಪ್ರಾರ್ಥಯಾಮಾಸ ಸಾ ಚ ತಸ್ಮೈ ಸಹಸ್ರಸಂವತ್ಸರಪರ್ಯಾಪ್ತಂ ಪಯೋ ಘೃತಂ ಚ ಪ್ರದದೌ । ಅಯಮರ್ಥೋಽತ್ರ ಪ್ರತಿಪಾದ್ಯತೇ । ನದೀನಾಮನ್ಯಾಸಾಂ ಮಧ್ಯೇ ಶುಚಿಃ ಶುದ್ಧಾ ಗಿರಿಭ್ಯಃ ಸಕಾಶಾದಾ ಸಮುದ್ರಾತ್ಸಮುದ್ರಪರ್ಯಂತಂ ಯತೀ ಗಚ್ಛಂತ್ಯೇಕಾ ಸರಸ್ವತೀ ನದ್ಯಚೇತತ್ । ನಾಹುಷಸ್ಯ ಪ್ರಾರ್ಥನಾಮಜ್ಞಾಸೀತ್ । ತಥಾ ಭುವನಸ್ಯ ಭೂತಜಾತಸ್ಯ ಭೂರೇರ್ಬಹುಲಸ್ಯ ರಾಯೋ ಧನಾನಿ ಚೇತಂತೀ ಪ್ರಜ್ಞಾಪಯಂತೀ ಪ್ರಯಚ್ಛಂತೀ ನಾಹುಷಾಯ ರಾಜ್ಞೇ ಘೃತಂ ಪಯಶ್ಚ ಸಹಸ್ರಸಂವತ್ಸರಕ್ರತೋಃ ಪರ್ಯಾಪ್ತಂ ದುದುಹೇ । ದುಗ್ಧವತೀ । ದತ್ತವತೀ ॥

॥ ಪ್ರತಿಪದಾರ್ಥ ॥

**ನದೀನಾಂ**—ಇತರ ನದಿಗಳ ಮಧ್ಯದಲ್ಲಿ । **ಶುಚಿಃ**—ಪರಿಶುದ್ಧಳೂ । **ಗಿರಿಭ್ಯಃ**—ಪರ್ವತಗಳಿಂದ ಆರಂಭಿಸಿ **ಆ ಸಮುದ್ರಾತ್**—ಸಮುದ್ರಪರ್ಯಂತವಾಗಿ । **ಯತೀ**—ಸಂಚರಿಸುವವಳೂ (ಪ್ರವಹಿಸುವವಳೂ) । **ಏಕಾ**—ಮುಖ್ಯಳೂ ಆದ । **ಸರಸ್ವತೀ**—ಸರಸ್ವತಿಯು । **ಅಚೇತತ್**—ನಹುಷನ ಪ್ರಾರ್ಥನೆಯನ್ನು ಅರಿತಳು । **ಭುವನಸ್ಯ**—ಸಕಲ ಭೂತಜಾತಗಳಿಗೂ । **ಭೂತೀಃ**—ಪ್ರಭೂತವಾದ । **ರಾಯಃ**—ಧನಗಳನ್ನು । **ಚೇತಂತೀ**—ಕೊಡುತ್ತಾ । **ನಾಹುಷಾಯ**—ರಾಜನಾದ ನಹುಷನಿಗೆ । **ಘೃತಂ**—ಘೃತವನ್ನೂ । **ಪಯಃ**—ಕ್ಷೀರವನ್ನೂ । **ದುದುಹೇ**—(ಸಹಸ್ರವರ್ಷಗಳಿಗಾಗುವಷ್ಟು) ಕರೆದಳು.

॥ ಭಾವಾರ್ಥ ॥

ಇತರ ನದಿಗಳ ಮಧ್ಯದಲ್ಲೆಲ್ಲಾ ಪರಿಶುದ್ಧಳೂ, ಪರ್ವತಗಳಿಂದ ಆರಂಭಿಸಿ ಸಮುದ್ರಪರ್ಯಂತವಾಗಿ ಪ್ರವಹಿಸುವವಳೂ, ಮುಖ್ಯಳೂ ಆದ ಸರಸ್ವತಿಯು ನಹುಷನ ಪ್ರಾರ್ಥನೆಯನ್ನರಿತಳು. ಸಕಲ ಭೂತಜಾತಗಳಿಗೂ ಪ್ರಭೂತವಾದ ಧನಗಳನ್ನು ಕೊಡುತ್ತಾ ರಾಜನಾದ ನಹುಷನಿಗೆ ಘೃತವನ್ನೂ, ಕ್ಷೀರವನ್ನೂ ಸಹ ಸಹಸ್ರವರ್ಷಗಳಿಗಾಗುವಷ್ಟು ಕರೆದಳು.

## English Translation

Saraswati, chief and purest of rivers, flowing from the mountains to

to the ocean, understood the request of Nahusha, and distributing riches among the many existing beings, milked for him butter and water.

॥ ವಿಶೇಷವಿಷಯಗಳು ॥

ಸಾರಸ್ವತಪಶುಯಾಗದಲ್ಲಿ **ಏಕಾಚೇತತ್** ಎಂಬ ಈ ಋಕ್ಕನ್ನು ವಪಾಹೋಮದ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಏಕಾ ಚೇತತ್ಸರಸ್ವತೀ ನದೀನಾಮುತ ಸ್ಯಾ ನಃ ಸರಸ್ವತೀ ಜುಷಾಣಾ** ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಸ ವಾವೃಧೇ ನರ್ಯೋ ಯೋಷಣಾಸು ವೃಷಾ ಶಿಶುರ್ವೃಷಭೋ ಯಜ್ಞಿಯಾಸು ।
ಸ ವಾಜಿನಂ ಮಘವದ್ಭ್ಯೋ ದಧಾತಿ ವಿ ಸಾತಯೇ ತನ್ವಂ ಮಾಮೃಜೀತ ॥

॥ ಪದಪಾಠಃ ॥

ಸಃ । ವವೃಧೇ । ನರ್ಯಃ । ಯೋಷಣಾಸು । ವೃಷಾ । ಶಿಶುಃ । ವೃಷಭಃ । ಯಜ್ಞಿಯಾಸು ।
ಸಃ । ವಾಜಿನಂ । ಮಘವತ್ಽಭ್ಯಃ । ದಧಾತಿ । ವಿ । ಸಾತಯೇ । ತನ್ವಂ । ಮಮೃಜೀತ ॥ ೩ ॥

॥ ಸಾಯಣಭಾಷ್ಯಂ ॥

**ಸರಸ್ವದ್ದೇವತಾಕೇ ಪಶೌ ಸ ವಾವೃಧ ಇತಿ ಪುರೋಡಾಶಸ್ಯ ಯಾಜ್ಯಾ । ಸೂತ್ರಿತಂ ಚ । ಸ ವಾವೃಧೇ ನರ್ಯೋ ಯೋಷಣಾಸು ಯಸ್ಯ ವ್ರತಂ ಪಶವೋ ಯಂತಿ ಸರ್ವೇ । ಆ. ೩-೮ । ಇತಿ ॥**

**ಮಧ್ಯಸ್ಥಾನೋ ವಾಯುಃ ಸರಸ್ವಾನ್ । ನರ್ಯೋ ನೃಭ್ಯೋ ಹಿತೋ ವೃಷಾ ಸೇಚನಸಮರ್ಥಃ ಶಿಶುರಲ್ಪಃ ಪ್ರಾದುರ್ಭಾವಸಮಯೇಽಲ್ಪತಯಾ ದೃಶ್ಯಮಾನೋ ವೃಷಭೋ ವರ್ಷಿತಾ ಏವಂಭೂತಃ ಸ ಸರಸ್ವಾನ್ ಯಜ್ಞಿಯಾಸು ಯಜ್ಞಾರ್ಹಾಸು ಯೋಷಣಾಸು ಯೋಷಿತ್ಸ್ವಾತ್ಮನಃ ಕಲತ್ರಭೂತಾಸು ಮಧ್ಯಮಸ್ಥಾನಾಸ್ವಪ್ಸು ಮಧ್ಯೇ ವವೃಧೇ । ವರ್ಧತೇ । ಸ ತಾದೃಶಃ ಸರಸ್ವಾನ್ ಮಘವದ್ಭ್ಯೋ ಹವಿಷ್ಮದ್ಭ್ಯೋ ಯಜಮಾನೇಭ್ಯೋ ವಾಜಿನಂ ಬಲಿನಂ ಪುತ್ರಂ ದಧಾತಿ । ದದಾತಿ । ತಥಾ ಸಾತಯೇ ಲಾಭಾರ್ಥಂ ತನ್ವಂ ತೇಷಾಂ ಶರೀರಂ ವಿ ಮಾಮೃಜೀತ । ವಿಮಾರ್ಷ್ಟಿ । ಲಾಭಾರ್ಥಂ ಸಂಸ್ಕರೋತೀತ್ಯರ್ಥಃ । ಯದ್ಯಪ್ಯೇಷಾ ಸರಸ್ವತಃ ಸ್ತುತಿಃ ತಥಾಪಿ ಸರಸ್ವತ್ಯಾಃ ಪ್ರೀಣನಾರ್ಥಂ ತತ್ಸವನಮಿತಿ ಛಾಂದೋಮಿಕೇ ಸಾರಸ್ವತೇ ತೃಚೇಽಸ್ಯಾ ಉಕ್ತೋ ವಿನಿಯೋಗೋ ನ ವಿರುಧ್ಯತೇ ॥**

॥ ಪ್ರತಿಪದಾರ್ಥ ॥

**ನರ್ಯಃ**—ಮಾನವರಿಗೆಲ್ಲಾ ಹಿತಕಾರಿಯೂ | **ವೃಷಾ**—ವೃಷ್ಟಿಕಾರಕನೂ | **ವೃಷಭಃ**—ಸೇಚನಸಾಮರ್ಥ್ಯವುಳ್ಳವನೂ ಆದ | **ಸಃ**—ಸರಸ್ವದ್ದೇವತೆಯು (ವಾಯುವು) | **ಶಿಶುಃ**—ಆರಂಭಕಾಲದಲ್ಲಿ ಅಲ್ಪಶಕ್ತಿಯುಳ್ಳವನಾಗಿದ್ದರೂ | **ಯಜ್ಞಿಯಾಸು** ಯಜ್ಞಾರ್ಹರಾದ | **ಯೋಷಣಾಸು**—ತನ್ನ ಪತ್ನೀರೂಪವಾದ ವೃಷ್ಟ್ಯುದಕಗಳ ನಡುವೆ | **ವವೃಧೇ**—ವೃದ್ಧಿಯನ್ನು ಹೊಂದುತ್ತಾನೆ | **ಸಃ**—ಅದೇ ಸರಸ್ವದ್ದೇವತೆಯು | **ಮಘವದ್ಭ್ಯಃ**—ಹವಿಸ್ಸನ್ನು ಹೊಂದಿರುವ ಯಜಮಾನರಿಗೆ | **ವಾಜಿನಂ**—ಶಕ್ತಿಯುತನಾದ ಪುತ್ರನನ್ನು | **ದಧಾತಿ**—ಕೊಡುತ್ತಾನೆ | **ಸಾತಯೇ**—ತನ್ನ ದಾನವನ್ನು ಹೊಂದಲು ಅರ್ಹರಾಗುವುದಕ್ಕಾಗಿ | **ತನ್ವಂ**—ಅವರ ಶರೀರಗಳನ್ನು | **ನಿ ಮಾಮೃಜೀತ**—ಸಂಸ್ಕರಿಸುತ್ತಾನೆ.

॥ ಭಾವಾರ್ಥ ॥

ಮಾನವರಿಗೆಲ್ಲಾ ಹಿತಕಾರಿಯೂ, ವೃಷ್ಟಿಕಾರಕನೂ, ಸೇಚನ ಸಾಮರ್ಥ್ಯವುಳ್ಳವನೂ ಆದ ವಾಯುವು (ಸರಸ್ವದ್ದೇವತೆಯು) ಆರಂಭಕಾಲದಲ್ಲಿ ಅಲ್ಪಶಕ್ತಿಯುಳ್ಳವನಾಗಿದ್ದರೂ ಯಜ್ಞಾರ್ಹರಾದವರೂ ತನ್ನ ಪತ್ನೀರೂಪರೂ ಆದ ವೃಷ್ಟ್ಯುದಕಗಳ ನಡುವೆ ವೃದ್ಧಿಯನ್ನು ಹೊಂದುತ್ತಾನೆ. ಅದೇ ಸರಸ್ವದ್ದೇವತೆಯು ಹವಿಸ್ಸನ್ನು ಹೊಂದಿರುವ ಯಜಮಾನನಿಗೆ ಶಕ್ತಿಯುತರಾದ ಪುತ್ರರನ್ನು ಕೊಡುತ್ತಾನೆ. ಅವರು ತನ್ನ ದಾನಕ್ಕೆ ಅರ್ಹರಾಗುವಂತೆ ಅವರ ಶರೀರಗಳನ್ನು ಸಂಸ್ಕರಿಸುತ್ತಾನೆ.

## English Translation

The showerer Saraswat, the friend of man, a showerer (of benefits), even whilst yet a child, (continually increases among his adorable wives (the rains) : he bestows upon the affluent (worshippers) a vigorous son ; he purifies their persons (to fit them) for the reception (of his bounties).

॥ ವಿಶೇಷವಿಷಯಗಳು ॥

ಸರಸ್ವದ್ದೇವತಾಕವಾದ ಪಶುಯಾಗದಲ್ಲಿ ಪುರೋಡಾಶಹೋಮಮಾಡುವಾಗ **ಸ ವಾವೃಧೇ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸ ವಾವೃಧೇ ನರ್ಯೋ ಯೋಷಣಾಸು ಯಸ್ಯ ವ್ರತಂ ಪಶವೋ ಯಂತಿ ಸರ್ವೇ** ಎಂಬ ಸೂತ್ರದಿಂದ (ಆ. ೩-೮) ವಿಸ್ತೃತವಾಗಿರುವುದು.

॥ ಸಂಹಿತಾಪಾಠಃ ॥

ಉತ ಸ್ಯಾ ನಃ ಸರಸ್ವತೀ ಜುಷಾಣೋಪ ಶ್ರವತ್ಸುಭಗಾ ಯಜ್ಞೇ ಅಸ್ಮಿನ್ ।
ಮಿತಜ್ಞುಭಿರ್ನಮಸ್ಯೈರಿಯಾನಾ ರಾಯಾ ಯುಜಾ ಚಿದುತ್ತರಾ ಸಖಿಭ್ಯಃ॥

॥ ಪದಪಾಠಃ ॥

ಉತ । ಸ್ಯಾ । ನಃ । ಸರಸ್ವತೀ । ಜುಷಾಣಾ । ಉಪ । ಶ್ರವತ್ । ಸುऽಭಗಾ । ಯಜ್ಞೇ । ಅಸ್ಮಿನ್ ।

ಮಿತಜ್ಞುऽಭಿಃ । ನಮಸ್ಯೈ । ಇಯಾನಾ । ರಾಯಾ । ಯುಜಾ । ಚಿತ್ । ಉತ್ऽತರಾ । ಸಖಿऽಭ್ಯಃ ॥

॥ ಸಾಯಣಭಾಷ್ಯಂ ॥

ದಶರಾತ್ರೇऽಷ್ಟಮೇऽಹನಿ ಪ್ರಉಗ ಉತ ಸ್ಯಾ ನ ಇತಿ ಸಾರಸ್ವತಃ ಸಪ್ತಮಸ್ತೃಚಃ । ಸೂತ್ರಿತಂ ಚ । ಉತ ಸ್ಯಾ ನಃ ಸರಸ್ವತೀ ಜುಷಾಣೇತಿ ಪ್ರಉಗಂ । ಆ. ೮-೧೦ । ಇತಿ ॥ ಸಾರಸ್ವತೇ ಪಶೌ ಪುರೋಡಾಶಸ್ಯೋತ ಸ್ಯಾ ನ ಇತ್ಯನುವಾಕ್ಯಾ । ಸೂತ್ರಿತಂ ಚ । ಉತಸ್ಯಾ ನಃ ಸರಸ್ವತೀ ಜುಷಾಣಾ ಸರಸ್ವತ್ಯಭಿ ನೋ ನೇಷಿ ವಸ್ಯಃ । ಆ. ೩-೭ । ಇತಿ ॥

ಉತಾಪಿ ಚ ಜುಷಾಣಾ ಪ್ರೀಯಮಾಣಾ ಸುಭಗಾ ಶೋಭನಧನಾ ಸ್ಯಾ ಸಾ ಸರಸ್ವತೀ ನೋऽಸ್ಮಾಕಮಸ್ಮಿನ್ಯಜ್ಞ ಉಪ ಶ್ರವತ್ । ಅಸ್ಮದೀಯಾಃ ಸ್ತುತೀರುಪಶೃಣೋತು । ಕೀದೃಶೀ ಸಾ । ಮಿತಜ್ಞುಭಿಃ ಪ್ರಹ್ವೀಭೂತಜಾನುಭಿರ್ನಮಸ್ಯೈರ್ನಮಸ್ಕಾರ್ಯೈರ್ದೇವೈರಿಯಾನೋಪಗಮ್ಯಮಾನಾ । ಚಿಚ್ಛಬ್ದಶ್ಚಾರ್ಥೇ ಯುಜಾ ನಿತ್ಯಯುಕ್ತೇನ ರಾಯಾ ಧನೇನ ಚ ಸಂಗತಾ ಸಖಿಭ್ಯ ಉತ್ತರೋತ್ಕೃಷ್ಟತರಾ । ಈದೃಶ್ಯಸ್ಮದೀಯಾಃ ಸ್ತುತೀರುಪಶೃಣೋತ್ವಿತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಮಿತಜ್ಞುಭಿಃ** – ಮೊಣಕಾಲನ್ನೂರಿದವರೂ । **ನಮಸ್ಯೈಃ**—ವಿನಯದಿಂದ ನಮಸ್ಕರಿಸುವವರೂ ಆದ ಸ್ತುತಿಕರ್ತರಿಂದ । **ಇಯಾನಾ** – ಪ್ರಾರ್ಥಿಸಲ್ಪಟ್ಟವಳೂ । **ಯುಜಾ**—ತನ್ನೊಂದಿಗೆ ನಿತ್ಯಸಂಬದ್ಧವಾದ । **ರಾಯಾ ಚಿತ್**—ಧನದಿಂದಲೇ । **ಸಖಿಭ್ಯಃ**—ತನ್ನ ಮಿತ್ರರಿಗೆ । **ಉತ್ತರಾ**—ಉತ್ಕೃಷ್ಟವಾಗಿ ದಾನಮಾಡುವವಳೂ । **ಉತ**-ಮತ್ತು । **ಜುಷಾಣಾ**—ನಮ್ಮ ಪೂಜೆಯನ್ನು ಸೇವಿಸುವವಳೂ । **ಸುಭಗಾ**—ಉತ್ತಮವಾದ ಸಂಪತ್ತುಳ್ಳವಳೂ । **ಸ್ಯಾ**—ಪ್ರಸಿದ್ಧಳೂ ಆದ । **ಸರಸ್ವತೀ**—ಸರಸ್ವತೀದೇವಿಯು । **ನಃ**—ನಮ್ಮ । **ಅಸ್ಮಿನ್ ಯಜ್ಞೇ**—ಈ ಯಜ್ಞದಲ್ಲಿ। **ಉಪ ಶ್ರವತ್**--ನಮ್ಮ ಸ್ತುತಿಯನ್ನು ಕೇಳಲಿ.

॥ ಭಾವಾರ್ಥ ॥

ಮೊಣಕಾಲನ್ನೂರಿ ವಿನಯದಿಂದ ನಮಸ್ಕರಿಸುವ ಸ್ತುತಿಕರ್ತರಿಂದ ಪ್ರಾರ್ಥಿಸಲ್ಪಟ್ಟವಳೂ, ತನ್ನೊಂದಿಗೆ ನಿತ್ಯಸಂಬದ್ಧವಾದ ಧನದಿಂದಲೇ ತನ್ನ ಮಿತ್ರರಿಗೆಲ್ಲಾ ಉತ್ಕೃಷ್ಟವಾಗಿ ದಾನಮಾಡುವವಳೂ ಮತ್ತು ನಮ್ಮ ಪೂಜೆಯನ್ನು ಸೇವಿಸುವವಳೂ ಉತ್ತಮವಾದ ಸಂಪತ್ತುಳ್ಳವಳೂ ಪ್ರಸಿದ್ಧಳೂ ಆದ ಸರಸ್ವತೀದೇವಿಯು ನಮ್ಮ ಈ ಯಜ್ಞದಲ್ಲಿ ನಮ್ಮ ಸ್ತುತಿಯನ್ನು ಕೇಳಲಿ.

## English Translation

May the auspicious and gracious Saraswati hear (our praises) at this

sacrifice, approached as she is with reverence and with bended knees, and most liberal to her friends with the riches she possesses.

॥ ವಿಶೇಷವಿಷಯಗಳು ॥

ದಶರಾತ್ರವೆಂಬ ಯಾಗದ ಎಂಟನೆಯ ದಿನಸದಲ್ಲಿ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸುವಾಗ **ಉತ ಸ್ಯಾ ನಃ** ಎಂದು ಮೊದಲಾಗುವ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಸರಸ್ವದ್ದೇವತಾಕವಾದ ಏಳನೆಯ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಉತ ಸ್ಯಾ ನಃ ಸರಸ್ವತೀ ಜುಷಾಣೇತಿ ಪ್ರಉಗಂ** ಎಂಬ ಸೂತ್ರದಿಂದ (ಆ ೮-೧೦) ವಿಸ್ಪತವಾಗಿರುವುದು. ಮತ್ತು ಸರಸ್ವತೀದೇವತಾಕವಾದ ಪಶುಯಾಗದಲ್ಲಿಯೂ ಪಶು ಪುರೋಡಾಶಯೋಗದಲ್ಲಿ **ಉತ ಸ್ಯಾ ನಃ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಉತ ಸ್ಯಾ ನಃ ಸರಸ್ವತೀ ಜುಷಾಣಾ ಸರಸ್ವತ್ಯಭಿ ನೋ ನೇಷಿ ವಸ್ಯಃ** ಎಂಬ ಸೂತ್ರದಿಂದ (ಆ. ೩-೭) ವಿಸ್ಪತವಾಗಿರುವುದು.

॥ ಸಂಹಿತಾಪಾಠಃ ॥

ಇಮಾ ಜುಹ್ವಾನಾ ಯುಷ್ಮದಾ ನಮೋಭಿಃ ಪ್ರತಿ ಸ್ತೋಮಂ ಸರಸ್ವತಿ ಜುಷಸ್ವ ।
ತವ ಶರ್ಮನ್ಪ್ರಿಯತಮೇ ದಧಾನಾ ಉಪ ಸ್ಥೇಯಾಮ ಶರಣಂ ನ ವೃಕ್ಷಂ॥

॥ ಪದಪಾಠಃ ॥

ಇಮಾ । ಜುಹ್ವಾನಾಃ । ಯುಷ್ಮತ್ । ಆ । ನಮಃಽಭಿಃ । ಪ್ರತಿ । ಸ್ತೋಮಂ । ಸರಸ್ವತಿ । ಜುಷಸ್ವ ।
ತವ । ಶರ್ಮನ್ । ಪ್ರಿಯಽತಮೇ । ದಧಾನಾಃ । ಉಪ । ಸ್ಥೇಯಾಮ । ಶರಣಂ । ನ । ವೃಕ್ಷಂ ॥ ೫ ॥

॥ ಸಾಯಣಭಾಷ್ಯಂ ॥

ಪವಿತ್ರೇಷ್ಟ್ಯಾಂ ಸಾರಸ್ವತಸ್ಯ ಹವಿಷ ಇಮಾ ಜುಹ್ವಾನಾ ಇತಿ ಯಾಜ್ಯಾ । ಸೂತ್ರಿತಂ ಚ । ಇಮಾ ಜುಹ್ವಾನಾ ಯುಷ್ಮದಾ ನಮೋಭಿರ್ದಧಿಕ್ರಾವ್ಣೋ ಅಕಾರಿಷಂ । ಆ. ೨-೧೨ । ಇತಿ ॥

ಹೇ ಸರಸ್ವತಿ ಇಮೇಮಾನ್ಯಸ್ಮದೀಯಾನಿ ಹವೀಂಷಿ ಜುಹ್ವಾನಾಸ್ತುಭ್ಯಂ ಜುಹ್ವತೋ ವಯಂ ನಮೋಭಿಸ್ತ್ವದ್ವಿಷಯೈರ್ನಮಸ್ಕಾರೈರ್ಯುಷ್ಮತ್ತ್ವತ್ಸಕಾಶಾದಾ ॥ ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ ॥ ಆದದೀಮಹಿ ಧನಾನೀತಿ ಶೇಷಃ । ಸ್ತೋಮಂ ಚಾಸ್ಮದೀಯಂ ಸ್ತೋತ್ರಂ ಪ್ರತಿ ಜುಷಸ್ವ ಪ್ರತಿಸೇವಸ್ವ। ವಯಂ ಚ ಪ್ರಿಯತಮೇಽತಿಶಯೇನ ಪ್ರಿಯೇ ತವ ತ್ವದೀಯೇ ಶರ್ಮಞ್ಶರ್ಮಣಿ ಸುಖೇ ದಧಾನಾ ನಿಧೀಯಮಾನಾಃ ಸಂತಃ ಶರಣಂ ನ ವೃಕ್ಷಮಾಶ್ರಯಭೂತಂ ವೃಕ್ಷಮಿವೋಪ ಸ್ಥೇಯಾಮ । ತ್ವಾಮುಪತಿಷ್ಠೇಮ । ಸಂಗಚ್ಛೇಮಹಿ ॥

॥ ಪ್ರತಿಪದಾರ್ಥ ॥

**ಸರಸ್ವತಿ**—ಎಲೈ ಸರಸ್ವತೀದೇವಿಯೇ । **ಇಮಾ**—ಈ ಹವಿಸ್ಸುಗಳನ್ನು । **ಜುಹ್ವಾನಾಃ**—ಆಹುತಿರೂಪದಲ್ಲಿ ಅರ್ಪಿಸುತ್ತಾ । **ನಮೋಭಿಃ**—ನಮಸ್ಕಾರಗಳಿಂದ ನಿನ್ನನ್ನು ಸೇವಿಸಿ । **ಯುಷ್ಮತ್**—ನಿನ್ನಿಂದ । **ಆ (ದದೀಮಹಿ)**-ಸಂಪತ್ತನ್ನು ಹೊಂದುವಂತಾಗಲಿ । **ಸ್ತೋಮಂ**—ನಮ್ಮ ಸ್ತೋತ್ರವನ್ನು । **ಪ್ರತಿ ಜುಷಸ್ವ**—ಸೇವಿಸು । **ವಯಂ ಚ**—ನಾವೂ ಸಹ । **ಪ್ರಿಯತಮೇ**—ಅತ್ಯಂತ ಹಿತಕಾರಿಯಾದುದೂ । **ತವ**—ನಿನ್ನಿಂದ ದತ್ತವಾದುದೂ ಆದ । **ಶರ್ಮನ್**—ಸುಖದಲ್ಲಿ । **ದಧಾನಾಃ**—ಸ್ಥಾಪಿತರಾಗಿ । **ಶರಣಂ**—ಲತೆಗೆ ಆಶ್ರಯವಾದ । **ವೃಕ್ಷಂ ನ**—ವೃಕ್ಷದಂತೆ ದೃಢವಾದ ಆಶ್ರಯವನ್ನು ಕೊಡುವ ನಿನ್ನನ್ನೇ । **ಉಪ ಸ್ಥೇಯಾಮ**—ಆಶ್ರಯಿಸಿ ನಿಲ್ಲುವೆವು,

॥ ಭಾವಾರ್ಥ ॥

ಎಲೈ ಸರಸ್ವತೀದೇವಿಯೇ, ಈ ಹವಿಸ್ಸುಗಳನ್ನು ಆಹುತಿರೂಪದಲ್ಲಿ ಅರ್ಪಿಸುತ್ತಾ ನಮಸ್ಕಾರಗಳಿಂದ ನಿನ್ನನ್ನು ಸೇವಿಸಿ ನಿನ್ನಿಂದ ನಾವು ಸಂಪತ್ತನ್ನು ಹೊಂದುವಂತಾಗಲಿ. ನೀನು ನಮ್ಮ ಸ್ತೋತ್ರವನ್ನು ಸೇವಿಸು. ನಾವೂ ಸಪ ಅತ್ಯಂತ ಹಿತಕಾರಿಯಾದುದೂ ನಿನ್ನಿಂದ ದತ್ತವಾದುದೂ ಆದ ಸುಖದಲ್ಲಿ ಸ್ಥಾಪಿತರಾಗಿ ಲತೆಗೆ ಆಶ್ರಯವಾದ ವೃಕ್ಷದಂತೆ ದೃಢವಾದ ಆಶ್ರಯವನ್ನು ಕೊಡುವ ನಿನ್ನನ್ನೇ ಆಶ್ರಯಿಸಿ ನಿಲ್ಲುವೆವು.

## English Translatian

Presenting to you, Saraswati, these oblations with reverence (may we receive from you affluence): be gratified by our praise, and may we, being retained in your dearest felicity, ever recline upon you, as on a sheltering tree.

॥ ವಿಶೇಷವಿಷಯಗಳು ॥

ಪವಿತ್ರೇಷ್ಟಿಯಲ್ಲಿ ಸರಸ್ವತೀದೇವತಾಕವಾದ ಹವಿರ್ಹೋಮದಲ್ಲಿ **ಇಮಾ ಜುಹ್ವಾನಾಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಇಮಾ ಜುಹ್ವಾನಾ ಯುಷ್ಮದಾ ನಮೋ-ಭಿರ್ದಧಿಕ್ರಾವ್ಣೋ ಅಕಾರಿಷಂ** ಎಂಬ ಸೂತ್ರದಿಂದ (ಆ. ೨-೧೨) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಅಯಮು ತೇ ಸರಸ್ವತಿ ವಸಿಷ್ಠೋ ದ್ವಾರಾವೃತಸ್ಯ ಸುಭಗೇ ವ್ಯಾವಃ ।**

**ವರ್ಧ ಶುಭ್ರೇ ಸ್ತುವತೇ ರಾಸಿ ವಾಜಾನ್ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೬ ॥**

|| ಪದಪಾಠಃ ||

ಅಯಂ । ಊಂ ಇತಿ । ತೇ । ಸರಸ್ವತಿ । ವಸಿಷ್ಠಃ । ದ್ವಾರೌ । ಋತಸ್ಯ । ಸುಽಭಗೇ । ವಿ । ಅವರಿತ್ಯಾವಃ ।
ವರ್ಧ । ಶುಭ್ರೇ । ಸ್ತುವತೇ । ರಾಸಿ । ವಾಜಾನ್ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ||

|| ಸಾಯಣಭಾಷ್ಯಂ ||

ಹೇ ಸುಭಗೇ ಶೋಭನಧನೇ ಸರಸ್ವತಿ ಅಯಂ ವಸಿಷ್ಠಸ್ತೇ ತ್ವಾಂ ಯಂತುಋರ್ತಸ್ಯ ಯಜ್ಞಸ್ಯ ಸಂಬಂಧಿನ್ಯೌ ದ್ವಾರೌ ಪೂರ್ವಾಪರೇ ವ್ಯಾವಃ । ವಿವೃಣೋತಿ । ಉ ಇತಿ ಪೂರಕಃ । ಹೇ ಶುಭ್ರೇ ಶುಭ್ರವರ್ಣೇ ದೇವಿ ವರ್ಧ । ವರ್ಧಸ್ವ । ತಥಾ ಸ್ತುವತೇ ಸ್ತೋತ್ರಂ ಕುರ್ವತೇ ವಸಿಷ್ಠಾಯ ವಾಜಾನನ್ನಾನಿ ರಾಸಿ । ಪ್ರದೇಹಿ । ಅನ್ಯದ್ಗತಂ ||

|| ಪ್ರತಿಪದಾರ್ಥ ||

**ಸುಭಗೇ** - ಉತ್ತಮವಾದ ಧನವುಳ್ಳ । **ಸರಸ್ವತಿ**—ಎಲೈ ಸರಸ್ವತೀದೇವಿಯೇ । **ಅಯಂ ವಸಿಷ್ಠಃ**—ಈ ವಸಿಷ್ಠನು । **ತೇ**—ನಿನ್ನ ಸಂಚಾರಕ್ಕಾಗಿ । **ಋತಸ್ಯ**—ಯಜ್ಞದ । **ದ್ವಾರೌ**—ಪೂರ್ವಾಪರರೂಪವಾದ ಎರಡು ಬಾಗಿಲುಗಳನ್ನೂ । **ವ್ಯಾವ ಉ**—ತೆರೆದೇ ಇದ್ದಾನೆ । **ಶುಭ್ರೇ**—ಶುಭ್ರವರ್ಣವುಳ್ಳ ಎಲೈ ದೇವಿಯೇ । **ವರ್ಧ**—ವೃದ್ಧಿಯನ್ನು ಹೊಂದು । **ಸ್ತುವತೇ**—ಸ್ತುತಿಕರ್ತನಾದ ವಸಿಷ್ಠನಿಗೆ । **ವಾಜಾನ್**—ಅನ್ನಗಳನ್ನು । **ರಾಸಿ**—ಕೊಡು (ಎಲೈ ಸರಸ್ವತ್ಯಾದಿ ದೇವತೆಗಳೇ) । **ಯೂಯಂ**—ನೀವು । **ನಃ**—ನಮ್ಮನ್ನು । **ಸದಾ**—ಯಾವಾಗಲೂ ; **ಸ್ವಸ್ತಿಭಿಃ**—ಕಲ್ಯಾಣಗಳಿಂದ । **ಪಾತ**—ರಕ್ಷಿಸಿರಿ.

|| ಭಾವಾರ್ಥ ||

ಉತ್ತಮವಾದ ಧನವುಳ್ಳ ಎಲೈ ಸರಸ್ವತೀದೇವಿಯೇ, ಈ ವಸಿಷ್ಠನು ನಿನ್ನ ಆಗಮನಕ್ಕಾಗಿ ಯಜ್ಞದ ಪೂರ್ವಾಪರರೂಪವಾದ ಎರಡು ಬಾಗಿಲುಗಳನ್ನೂ ತೆರೆದೇ ಇದ್ದಾನೆ. ಶುಭ್ರವರ್ಣವುಳ್ಳ ಎಲೈ ದೇವಿಯೇ, ನೀನು ವೃದ್ಧಿಯನ್ನು ಹೊಂದು. ಸ್ತುತಿಕರ್ತನಾದ ವಸಿಷ್ಠನಿಗೆ ಅನ್ನಗಳನ್ನು ಕೊಡು, ಎಲೈ ಸರಸ್ವತ್ಯಾದಿ ದೇವತೆಗಳೇ, ನೀವು ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ,

## English Translation

Auspicious Saraswati, for you Vasishtha has set open the two doors (the east and west) of sacrifice : white complexioned (goddess), be magnified ; bestow food on him who glorifies you : and do you (gods) ever cherish us with blessings.



## ತೊಂಭತ್ತಾರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಬೃಹದು ಗಾಯಿಷ ಇತಿ ಷಡೃಚಂ ಸಪ್ತಮಂ ಸೂಕ್ತಂ ವಸಿಷ್ಠಸ್ಯಾರ್ಷಂ। ಆದ್ಯಾ ಬೃಹತೀ ದ್ವಿತೀಯಾ ಸತೋಬೃಹತೀ ತೃತೀಯಾ ಪ್ರಸ್ತಾರಪಂಕ್ತಿಃ ಶಿಷ್ಟಾಸ್ತಿಸ್ರೋ ಗಾಯತ್ರ್ಯಃ । ಆದ್ಯಸ್ತೃಚಃ ಸರಸ್ವತೀದೇವತಾಕೋಽಂತ್ಯಶ್ಚ ಸರಸ್ವದ್ದೇವತಾಕಃ । ತಥಾ ಚಾನುಕ್ರಾಂತಂ । ಬೃಹದು ಪ್ರಗಾಥಃ ಪ್ರಸ್ತಾರಪಂಕ್ತಿಃ ಪರಾಸ್ತಿಸ್ರೋ ಗಾಯತ್ರ್ಯಃ ಸರಸ್ವತ ಇತಿ ॥ ಪಂಚಮೇಽಹನಿ ಪ್ರಉಗಶಸ್ತ್ರ ಆದ್ಯಃ ಪ್ರಗಾಥಃ ಸಾರಸ್ವತಸ್ತೃಚಃ । ಸೂತ್ರಿತಂ ಚ । ಬೃಹದು ಗಾಯಿಷ ಇತಿ ಬಾರ್ಹತಂ ಪ್ರಉಗಂ ಪ್ರಗಾಥಾನೀಕೇ । ಆ ೭-೧೨ । ಇತಿ ॥**

ಅನುವಾದವು—**ಬೃಹದು ಗಾಯಿಷೇ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು. ಈ ಸೂಕ್ತದ ಮೊದಲನೆಯ ಋಕ್ಕು ಬೃಹತೀಛಂದಸ್ಕವು. ಎರಡನೆಯದು ಸತೋಬೃಹತೀಛಂದಸ್ಕವು. ಮೂರನೆಯದು ಪ್ರಸ್ತಾರಪಂಕ್ತಿ ಎಂಬ ಛಂದಸ್ಸಿನದು. ಉಳಿದ ಮೂರು ಋಕ್ಕುಗಳೂ ಗಾಯತ್ರೀಛಂದಸ್ಕವು. ಮೊದಲನೆಯ ಮೂರು ಋಕ್ಕುಗಳು ಸರಸ್ವತೀ ದೇವತಾಕವು. ಅನುಕ್ರಮಣಿಕೆಯಲ್ಲಿ—**ಬೃಹದು ಪ್ರಗಾಥಃ ಪ್ರಸ್ತಾರಪಂಕ್ತಿಃ ಪರಾಸ್ತಿಸ್ರೋ ಗಾಯತ್ರ್ಯಃ ಸರಸ್ವತೇ** ಎಂದು ಹೇಳಿರುವುದು. ಯಜ್ಞದ ಐದನೆಯ ದಿವಸ ಪ್ರಉಗಶಸ್ತ್ರಮಂತ್ರಗಳಲ್ಲಿ ಮೊದಲನೆಯ ಮೂರು ಋಕ್ಕುಗಳನ್ನು ಸಾರಸ್ವತತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಬೃಹದು ಗಾಯಿಷ ಇತಿ ಬಾರ್ಹತಂ ಪ್ರಉಗಂ ಪ್ರಗಾಥಾನೀಕೇ** ಎಂಬ ಸೂತ್ರದಿಂದ (ಆ. ೭-೧೨) ವಿವೃತವಾಗಿರುವುದು.

### ಸೂಕ್ತ—೯೬

ಮಂಡಲ—೭ ॥ ಅನುವಾಕ—೬ ॥ ಸೂಕ್ತ—೯೬ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೨೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ವಸಿಷ್ಠಃ ॥
ದೇವತಾ—೧-೩ ಸರಸ್ವತೀ । ೪-೬ ಸರಸ್ವಾನ್ ॥
ಛಂದಃ—೧ ಬೃಹತೀ । ೨ ಸತೋಬೃಹತೀ । ೩ ಪ್ರಸ್ತಾರಪಂಕ್ತಿಃ । ೪-೬ ಗಾಯತ್ರೀ ॥

॥ ಸಂಹಿತಾಪಾಠಃ ॥

ಬೃಹದು ಗಾಯಿಷೇ ವಚೋಽಸುರ್ಯಾ ನದೀನಾಂ ।
ಸರಸ್ವತೀಮಿನ್ಮಹಯಾ ಸುವೃಕ್ತಿಭಿಃ ಸ್ತೋಮೈರ್ವಸಿಷ್ಠ ರೋದಸೀ ॥ ೧ ॥

॥ ಪದಪಾಠಃ ॥

ಬೃಹತ್ । ಊಂ ಇತಿ । ಗಾಯಿಷೇ । ವಚಃ । ಅಸುರ್ಯಾ । ನದೀನಾಂ ।

ಸರಸ್ವತೀಂ । ಇತ್ । ಮಹಯ । ಸುವೃಕ್ತಿಽಭಿಃ । ಸ್ತೋಮೈಃ । ವಸಿಷ್ಠ । ರೋದಸೀ ಇತಿ ॥ ೧ ॥

॥ ಸಾಯಣಭಾಷ್ಯಂ ॥

ಅನಯರ್ಷಿರಾತ್ಮಾನಂ ಸಂಬೋಧ್ಯ ಸರಸ್ವತ್ಯಾಃ ಸ್ತುತೌ ಪ್ರೇರಯತಿ। ಹೇ ವಸಿಷ್ಠ ತ್ವಂ ಬೃಹದು ಬೃಹದೇವ ಮಹದೇವ ವಚಃ ಸ್ತೋತ್ರಂ ಗಾಯಿಷೇ । ಗಾಯಸಿ । ಕಿಮರ್ಥಂ । ನದೀನಾಂ ಮಧ್ಯೇಽಸುರ್ಯಾ ॥ ಅಸುರಶಬ್ದಾಚ್ಚತುರ್ಥ್ಯೇಕವಚನಸ್ಯ ಡ್ಯಾದೇಶಃ ॥ ಅಸುರಾಯ್ಯೈ ಬಲವತ್ಯೈ ನದೀರೂಪಾಯ್ಯೈ ಸರಸ್ವತ್ಯೈ । ಅಸ್ಯಾಃ ಪ್ರೀಣನಾರ್ಥಮಿತ್ಯರ್ಥಃ । ತಥಾ ರೋದಸೀ ದ್ಯಾವಾಪೃಥಿವ್ಯೋಃ ಸ್ಥಿತಾಂ ದಿವಿ ದೇವತಾರೂಪೇಣ ಭೂಮ್ಯಾಂ ವಾಗ್ರೂಪೇಣ ನಿವಸಂತೀಂ ಸರಸ್ವತೀಮಿತ್ ಸ್ವರಸ್ವತೀಮೇವ ಸುವೃಕ್ತಿಭಿಃ ಸುಷ್ಠು ದೋಷವರ್ಜಿತೈಃ ಸ್ತೋಮೈಃ ಸ್ತೋತ್ರೈರ್ಮಹಯ । ಪೂಜಯ । ಸರ್ವದಾ ಸರಸ್ವತೀಮೇವ ಸ್ತುಹಿ ನಾನ್ಯಾಂ ದೇವತಾಮಿತಿ ಭಾವಃ ॥

॥ ಪ್ರತಿಪದಾರ್ಥ ॥

**ವಸಿಷ್ಠ**—ಎಲೈ ವಸಿಷ್ಠನೇ । **ನದೀನಾಂ**—ನದಿಗಳ ಮಧ್ಯದಲ್ಲೆಲ್ಲಾ । **ಅಸುರ್ಯಾ**—ಅತ್ಯಂತ ಶಕ್ತಿಯುತಳಾದ ಸರಸ್ವತಿಯು ತೃಪ್ತ್ಯರ್ಥವಾಗಿ । **ಬೃಹದು**—ಮಹಚ್ಛಕ್ತಿಯುಳ್ಳ । **ವಚಃ**—ಸ್ತೋತ್ರವನ್ನು । **ಗಾಯಿಷೇ**—ಪಠಿಸುತ್ತೀಯೆ । **ರೋದಸೀ**—ದ್ಯಾವಾಪೃಥಿವಿಗಳೆರಡರಲ್ಲೂ ವ್ಯಾಪಿಸಿರುವ । **ಸರಸ್ವತೀಂ ಇತ್**—ಸರಸ್ವತೀದೇವಿಯನ್ನೇ । **ಸುವೃಕ್ತಿಭಿಃ**—ಉತ್ತಮವಾಗಿ ನಿರ್ಮಿತವಾದ । **ಸ್ತೋಮೈಃ**—ಸ್ತೋತ್ರಗಳಿಂದ । **ಮಹಯ**—ಪೂಜಿಸು

॥ ಭಾವಾರ್ಥ ॥

ಎಲೈ ವಸಿಷ್ಠನೇ, ನದಿಗಳ ಮಧ್ಯದಲ್ಲೆಲ್ಲಾ ಅತ್ಯಂತ ಶಕ್ತಿಯುತಳಾದ ಸರಸ್ವತಿಯು ತೃಪ್ತ್ಯರ್ಥವಾಗಿ ಮಹಚ್ಛಕ್ತಿಯುಳ್ಳ ಸ್ತೋತ್ರವನ್ನು ಪಠಿಸು ದ್ಯಾವಾಪೃಥಿವಿಗಳೆರಡರಲ್ಲೂ ವ್ಯಾಪಿಸಿರುವ ಸರಸ್ವತೀದೇವಿಯನ್ನೇ ಉತ್ತಮವಾಗಿ ನಿರ್ಮಿತವಾದ ಸ್ತೋತ್ರಗಳಿಂದ ಪೂಜಿಸು.

## English Translation

You chant, Vasishtha, a powerful hymn to her who is the most mighty of rivers · worship, Vasishtha, with well-selected praises, Saraswathi who is both in heaven and earth.

॥ ಸಂಹಿತಾಪಾಠಃ ॥

ಉಭೇ ಯತ್ತೇ ಮಹಿನಾ ಶುಭ್ರೇ ಅಂಧಸೀ ಅಧಿಕ್ಷಿಯಂತಿ ಪೂರವಃ ।
ಸಾ ನೋ ಬೋಧ್ಯವಿತ್ರೀ ಮರುತ್ಸಖಾ ಚೋದ ರಾಧೋ ಮಘೋನಾಂ ॥

॥ ಪದಪಾಠಃ ॥

ಉಭೇ ಇತಿ । ಯತ್ । ತೇ । ಮಹಿನಾ । ಶುಭ್ರೇ । ಅಂಧಸೀ ಇತಿ । ಅಧಿऽಕ್ಷಿಯಂತಿ । ಪೂರವಃ ।
ಸಾ । ನಃ । ಬೋಧಿ । ಅವಿತ್ರೀ । ಮರುತ್ऽಸಖಾ । ಚೋದ । ರಾಧಃ । ಮಘೋನಾಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಶುಭ್ರೇ ಶುಭ್ರವರ್ಣೇ ಸರಸ್ವತಿ ಯದ್ಯಸ್ಯಾಸ್ತೇ ತವ ಮಹಿನಾ ಮಹಿಮ್ನೋಭೇ ಅಂಧಸೀ ಉಭಯವಿಧಂ ದಿವ್ಯಂ ಪಾರ್ಥಿವಂ ಚಾಗ್ನಿಂ ಗ್ರಾಮ್ಯಮಾರಣ್ಯಂ ವಾ ಪೂರವಃ ಪೂರಯಿತವ್ಯಾ ಮನುಷ್ಯಾ ಅಧಿಕ್ಷಿಯಂತಿ ಅಧಿಗಚ್ಛಂತಿ ಸಾ ತ್ವಮವಿತ್ರೀ ರಕ್ಷಿತ್ರೀ ಸತೀ ನೋऽಸ್ಮಾನ್ಬೋಧಿ । ಬುಧ್ಯಸ್ವ । ಅಪಿ ಚ ಮರುತ್ಸಖಾ । ಮರುತೋ ಮಾಧ್ಯಮಿಕಾ ದೇವಗಣಾಃ । ತೇ ಸಖಾಯೋ ಯಸ್ಯಾ ಮಾಧ್ಯಮಿಕಾಯಾ ವಾಚಸ್ತಾದೃಶೀ ತ್ವಂ ಮಘೋನಾಂ ಹವಿರ್ಲಕ್ಷಣಧನೋಪೇತಾನಾಮಸ್ಮಾಕಂ ರಾಧೋ ಧನಂ ಚೋದ ಪ್ರೇರಯ ॥

॥ ಪ್ರತಿಪದಾರ್ಥ ॥

**ಶುಭ್ರೇ**—ಶುಭ್ರವರ್ಣಳಾದ ಎಲೈ ಸರಸ್ವತಿಯೇ । **ಯತ್ ತೇ**—ಯಾವ ನಿನ್ನ । **ಮಹಿನಾ**—ಮಾಹಾತ್ಮ್ಯದಿಂದ । **ಪೂರವಃ**—ಮಾನವರು । **ಉಭೇ ಅಂಧಸೀ**—ದಿವ್ಯ ಮತ್ತು ಪಾರ್ಥಿವ ಎಂಬ ಎರಡು ಲೋಕಗಳಿಗೂ ಸೇರಿದ ಅಗ್ನಿಯನ್ನು । **ಅಧಿಕ್ಷಿಯಂತಿ**—ಪಡೆಯುವರೋ । **ಸಾ**—ಅಂತಹ ನೀನು । **ಅವಿತ್ರೀ**—ನಮ್ಮ ರಕ್ಷಕಳಾಗಿದ್ದುಕೊಂಡು । **ನಃ**—ನಮ್ಮನ್ನು । **ಬೋಧಿ**—ತಿಳಿ । **ಮರುತ್ಸಖಾ**—ಮಾಧ್ಯಮಿಕಸ್ಥಾನದ ದೇವಗಣಕ್ಕೆ ಸಖಿಯಾದ ನೀನು । **ಮಘೋನಾಂ**—ಹವಿಸ್ಸಿನ ರೂಪದ ಅನ್ನವನ್ನು ಹೊಂದಿರುವ ನಮಗೆ । **ರಾಧಃ**—ಧನವನ್ನು । **ಚೋದ**—ಒದಗಿಸು.

॥ ಭಾವಾರ್ಥ ॥

ಶುಭ್ರವರ್ಣವುಳ್ಳವಳಾದ ಎಲೈ ಸರಸ್ವತಿಯೇ, ಯಾವ ನಿನ್ನ ಮಾಹಾತ್ಮ್ಯದಿಂದ ಮಾನವರು ದಿವ್ಯ ಮತ್ತು ಪಾರ್ಥಿವ ಎಂಬ ಎರಡು ಲೋಕಗಳಿಗೂ ಸೇರಿದ ಅಗ್ನಿಯನ್ನು ಪಡೆಯುವರೋ ಅಂತಹ ನೀನು ನಮ್ಮ ರಕ್ಷಕಳಾಗಿದ್ದುಕೊಂಡು ನಮ್ಮನ್ನು ತಿಳಿದು ಅನುಗ್ರಹಿಸು. ಮಾಧ್ಯಮಿಕಸ್ಥಾನದ ದೇವಗಣಕ್ಕೆ ಸಖಿಯಾದ ನೀನು ಹವಿಸ್ಸಿನ ರೂಪದ ಅನ್ನವನ್ನು ನಿನಗಾಗಿ ಸಿದ್ಧಪಡಿಸಿಕೊಂಡು ನಿಂತಿರುವ ನಮಗೆ ಧನವನ್ನು ಒದಗಿಸು

## English Translation

Beautiful Saraswati, inasmuch as by your might men obtain both kinds of food, you, our protectress, regard us; you, the friend of the Maruts, bestow riches upon those who are affluent (in oblations).

॥ ಸಂಹಿತಾಪಾಠಃ ॥

ಭದ್ರಮಿದ್ಭದ್ರಾ ಕೃಣವತ್ಸರಸ್ವತ್ಯಕವಾರೀ ಚೇತತಿ ವಾಜಿನೀವತೀ ।
ಗೃಣಾನಾ ಜಮದಗ್ನಿವತ್ಸ್ತುವಾನಾ ಚ ವಸಿಷ್ಠವತ್ ॥ ೩ ॥

॥ ಪದಪಾಠಃ ॥

ಭದ್ರಂ । ಇತ್ । ಭದ್ರಾ । ಕೃಣವತ್ । ಸರಸ್ವತೀ । ಅಕವಽಅರೀ । ಚೇತತಿ । ವಾಜಿನೀಽವತೀ ।
ಗೃಣಾನಾ । ಜಮದಗ್ನಿಽವತ್ । ಸ್ತುವಾನಾ । ಚ । ವಸಿಷ್ಠಽವತ್ ॥ ೩ ॥

॥ ಸಾಯಣಭಾಷ್ಯಂ ॥

ಭದ್ರಾ ಕಲ್ಯಾಣೀ ಭಜನೀಯಾ ವಾ ಸರಸ್ವತೀ ಭದ್ರಮಿದ್ಭದ್ರಮೇವ ಕಲ್ಯಾಣಮೇವ ಕೃಣವತ್। ಅಸ್ಮಾಕಂ ಕರೋತು । ತಥಾಽಕವಾರ್ಯಕುತ್ಸಿತಗಮನಾ ವಾಜಿನೀವತ್ಯನ್ನವತೀ ಚೇತತಿ । ಚೇತಯತು । ಅಸ್ಮಾನ್ ಪ್ರಜ್ಞಾಪಯತು । ಯದ್ವಾ । ಮದೀಯಂ ಸ್ತೋತ್ರಂ ಚೇತತಿ । ಜಾನಾತು । ತಥಾ ಜಮದಗ್ನಿವಜ್ಜಮದಗ್ನಿನರ್ಷಿಣೇವ ಮಯಾ ಗೃಣಾನಾ ಸ್ತೂಯಮಾನಾ ವಸಿಷ್ಠವತ್ ॥ ಅರ್ಹಾರ್ಥೇ ವತಿಪ್ರತ್ಯಯಃ ॥ ವಸಿಷ್ಠಾರ್ಹಂ ವಸಿಷ್ಠಸ್ಯಾನುರೂಪಂ ಸ್ತುವಾನಾ ಸ್ತೂಯಮಾನಾ ಚ ಭವ ॥

॥ ಪ್ರತಿಪದಾರ್ಥ ॥

**ಭದ್ರಾ**—ಕಲ್ಯಾಣಾತ್ಮಕಳಾದ। **ಸರಸ್ವತೀ**—ಸರಸ್ವತೀದೇವಿಯು। **ಭದ್ರಮಿತ್**—ನಮಗೆ ಕಲ್ಯಾಣವನ್ನೇ। **ಕೃಣವತ್**—ಉಂಟುಮಾಡಲಿ। **ಅಕವಾರೀ**—ಪ್ರಶಸ್ತವಾದ ಗಮನವುಳ್ಳವಳೂ **ವಾಜಿನೀವತೀ**—ಅನ್ನಯುಕ್ತಳೂ ಆದ ಸರಸ್ವತಿಯು । **ಚೇತತಿ**—ನಮ್ಮ ಪ್ರಾರ್ಥನೆಯನ್ನು ಅರಿಯಲಿ । **ಜಮದಗ್ನಿವತ್**—ಜಮದಗ್ನಿಯು ಸ್ತುತಿಸಿದಂತೆಯೇ । **ಗೃಣಾನಾ** ನನ್ನಿಂದಲೂ ಸ್ತುತಿಸಲ್ಪಡುವವಳಾಗಿ । **ವಸಿಷ್ಠವತ್**—ವಸಿಷ್ಠನ ಭಕ್ತಿಗೆ ಅನುಗುಣವಾಗಿ **ಸ್ತುವಾನಾ ಚ**—ಪ್ರಶಂಸಿಸಲ್ಪಡಲಿ.

॥ ಭಾವಾರ್ಥ ॥

ಕಲ್ಯಾಣಾತ್ಮಕಳಾದ ಸರಸ್ವತೀದೇವಿಯು ನಮಗೆ ಕಲ್ಯಾಣವನ್ನೇ ಉಂಟುಮಾಡಲಿ ಪ್ರಶಸ್ತವಾದ ಗಮನವುಳ್ಳವಳೂ ಅನ್ನಯುಕ್ತಳೂ ಆದ ಸರಸ್ವತಿಯು ನಮ್ಮ ಪ್ರಾರ್ಥನೆಯನ್ನರಿಯಲಿ. ಜಮದಗ್ನಿಯು ಸ್ತುತಿಸಿದಂತೆಯೇ ನನ್ನಿಂದಲೂ ಸ್ತುತಿಸಲ್ಪಡುವವಳಾಗಿ ವಸಿಷ್ಠನ ಭಕ್ತಿಗೆ ಅನುಗುಣವಾಗಿ ಪ್ರಶಂಸಿಸಲ್ಪಡಲಿ.

## English translation

May the auspicious Saraswati bestow auspicious fortune upon us: may the faultless-moving food-conferring (goddess) think of us; glorified (as you have been) by Jamadagni, (be now) glorified by Vasishtha.

॥ ಸಂಹಿತಾಪಾಠಃ ॥

ಜನೀಯಂತೋ ನ್ವಗ್ರವಃ ಪುತ್ರೀಯಂತಃ ಸುದಾನವಃ ।
ಸರಸ್ವಂತಂ ಹವಾಮಹೇ ॥ ೪ ॥

॥ ಪದಪಾಠಃ ॥

ಜನಿऽಯಂತಃ । ನು । ಅಗ್ರವಃ । ಪುತ್ರಿऽಯಂತಃ । ಸುऽದಾನವಃ ।
ಸರಸ್ವಂತಂ । ಹವಾಮಹೇ ॥ ೪ ॥

॥ ಸಾಯಣಭಾಷ್ಯಂ ॥

ಸರಸ್ವದ್ದೇವತಾಕೇ ಪಶೌ ಜನೀಯಂತ ಇತಿ ತಿಸ್ರಃ ಪುರೋಡಾಶಹವಿಷಾಂ ಕ್ರಮೇಣಾನುವಾಕ್ಯಾಃ । ಸೂತ್ರಿತಂ ಚ । ಜನೀಯಂತೋ ನ್ವಗ್ರವ ಇತಿ ತಿಸ್ರೋ ದಿವ್ಯಂ ಸುಪರ್ಣಂ ವಾಯಸಂ ಬೃಹಂತಂ । ಆ. ೩.೮ । ಇತಿ ॥

ಜನೀಯಂತಃ । ಜಾಯಂತ ಅಸ್ಯಾಮಪತ್ಯಾನೀತಿ ಜನಯೋ ಜಾಯಾಃ । ತಾ ಇಚ್ಛಂತಃ ಪುತ್ರೀಯಂತಃ ಪುತ್ರಾನಾತ್ಮನ ಇಚ್ಛಮಾನಾಃ ಸುದಾನವಃ ಶೋಭನದಾನಾ ಅಗ್ರವ ಉಪಗಂತಾರೋ ವಯಂ ಸ್ವದ್ಯ ಸರಸ್ವಂತಂ ದೇವಂ ಹವಾಮಹೇ । ಆಹ್ವಯಾಮಹೇ ವಾ ॥

॥ ಪ್ರತಿಪದಾರ್ಥ ॥

ಜನೀಯಂತಃ—ಪತ್ನಿಯರನ್ನು ಅಪೇಕ್ಷಿಸುವವರೂ । ಪುತ್ರೀಯಂತಃ—ಪುತ್ರರನ್ನು ಅಪೇಕ್ಷಿಸುವವರೂ । ಸುದಾನವಃ—ಉತ್ತಮವಾದ ದಾನವುಳ್ಳವರೂ ಆದ ನಾವು । ನು—ಈಗ । ಸರಸ್ವಂತಂ—ಸರಸ್ವದ್ದೇವನನ್ನು । ಅಗ್ರವಃ—ಸಮೀಪಿಸುವವರಾಗಿ । ಹವಾಮಹೇ—ಅವನನ್ನು ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಪತ್ನಿಯರನ್ನು ಅಪೇಕ್ಷಿಸುವವರೂ, ಪುತ್ರರನ್ನು ಅಪೇಕ್ಷಿಸುವವರೂ, ಉತ್ತಮವಾದ ದಾನವುಳ್ಳವರೂ ಆದ ನಾವು ಈಗ ಸರಸ್ವದ್ದೇವನನ್ನು ಸಮೀಪಿಸುವವರಾಗಿ ಅವನನ್ನು ಪ್ರಾರ್ಥಿಸಿ ಕರೆಯುತ್ತೇವೆ.

## English Translation

Desiring wives, desiring sons, liberal of donations, we, approaching him, now worship Saraswat.

॥ ವಿಶೇಷವಿಷಯಗಳು ॥

ಸರಸ್ವದ್ದೇವತಾಕವಾದ ಪಶುಯಾಗದಲ್ಲಿ **ಜನೀಯಂತಃ** ಎಂದು ಮೊದಲಾಗುವ ಈ ಸೂಕ್ತದ ೪, ೫, ೬ ನೇ ಋಕ್ಕುಗಳನ್ನು ಪಶು, ಪುರೋಡಾಶ, ಹವಿಸ್ಸುಗಳನ್ನು ಹೋಮಮಾಡುವಾಗ ಕ್ರಮವಾಗಿ ಅನುವಾಕ್ಯಾಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಜನೀಯಂತೋ ನ್ವಗ್ರವ ಇತಿ ತಿಸ್ರೋ ದಿವ್ಯಂ ಸುಪರ್ಣಂ ವಾಯಸಂ ಬೃಹಂತಂ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಯೇ ತೇ ಸರಸ್ವ ಊರ್ಮಯೋ ಮಧುಮಂತೋ ಘೃತಶ್ಚುತಃ ।**
**ತೇಭಿರ್ನೋಽವಿತಾ ಭವ ॥ ೫ ॥**

॥ ಪದಪಾಠಃ ॥

**ಯೇ । ತೇ । ಸರಸ್ವಃ । ಊರ್ಮಯಃ । ಮಧುಽಮಂತಃ । ಘೃತಽಶ್ಚುತಃ ।**
**ತೇಭಿಃ । ನಃ । ಅವಿತಾ । ಭವ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಸರಸ್ವಃ ಸರಸ್ವನ್ ದೇವ ತೇ ತ್ವದೀಯಾ ಯ ಊರ್ಮಯೋ ಜಲಸಂಘಾ ಮಧುಮಂತೋ ರಸವಂತೋ ಘೃತಶ್ಚುತೋ ಘೃತಸ್ಯ ವೃಷ್ಟ್ಯುದಕಸ್ಯ ಕ್ಷಾರಿಣೋ ಭವಂತಿ ತೇಭಿಸ್ತೈರೂರ್ಮಿಭಿರ್ನೋಽಸ್ಮಾಕಮವಿತಾ ರಕ್ಷಿತಾ ಭವ ॥**

॥ ಪ್ರತಿಪದಾರ್ಥ ॥

**ಸರಸ್ವಃ**—ಎಲೈ ಸರಸ್ವದ್ದೇವನೇ । **ತೇ**—ನಿನ್ನ । **ಯೇ ಊರ್ಮಯಃ**—ಯಾವ ಜಲಸಂಘಗಳು । **ಮಧುಮಂತಃ**—ಮಧುರವಾದ ರಸಯುಕ್ತವಾಗಿಯೂ । **ಘೃತಶ್ಚುತಃ**—ಘೃತವನ್ನು ಸ್ರವಿಸುವವಾಗಿಯೂ ಇರುವುವೋ । **ತೇಭಿಃ** ಆ ಜಲಸಂಘಗಳೊಡನೆ । **ನಃ**—ನಮ್ಮ । **ಅವಿತಾ**—ರಕ್ಷಕನಾಗಿ । **ಭವ**—ಆಗಿರು.

॥ ಭಾವಾರ್ಥ ॥

ಎಲೈ ಸರಸ್ವದ್ದೇವನೇ, ನಿನ್ನ ಯಾವ ಜಲಸಂಘಗಳು ಮಧುರವಾದ ರಸಯುಕ್ತವಾಗಿಯೂ, ಘೃತವನ್ನು ಸ್ರವಿಸುವವಾಗಿಯೂ ಇರುವುವೋ ಆ ಜಲಸಂಘಗಳ ಮೂಲಕವಾಗಿ ನಮ್ಮ ರಕ್ಷಕನಾಗಿರು.

## Englisn Translation

With those your waves, Saraswat, which are sweet-tasted, the distributors of water, be our protector.

॥ ವಿಶೇಷವಿಷಯಗಳು ॥

**ಸರಸ್ವಾನ್**—ಈ ಶಬ್ದವನ್ನು ವಿವರಿಸುವಾಗ ಯಾಸ್ಕರು ಇದೇ ಋಕ್ಕನ್ನು ಉದಾಹರಣೆಯಾಗಿ ತೆಗೆದುಕೊಂಡು ವಿವರಿಸಿರುವರು.

**ಸರಸ್ವಾನ್ । ಸರಸ್ವಾನ್ ವ್ಯಾಖ್ಯಾತಃ । ತಸ್ಯೈಷಾ ಭವತಿ । ಯೇ ತೇ ಸರಸ್ವ ಊರ್ಮಯೋ ಮಧುಮಂತೋ ಘೃತಶ್ಚುತಃ । ತೇಭಿರ್ನೋಽವಿತಾ ಭವ । ಇತಿ ಸಾ ನಿಗದವ್ಯಾಖ್ಯಾತಾ ॥**
(ನಿ. ೧೦-೨೪)

ಸರಸ್ವಾನ್ ಶಬ್ದದ ವ್ಯುತ್ಪತ್ತಿಯು ಸರಸ್ವತೀಶಬ್ದದಂತೆಯೇ ಇದೆ. ಲಿಂಗವ್ಯತ್ಯಯಮಾತ್ರ ಇದೆ. ಸರಸ್ವತೀಶಬ್ದಕ್ಕೆ ಯಾಸ್ಕರು—ಸರಸ್ವತೀ ಸರ ಇತ್ಯುದಕನಾಮ ಸರ್ತೇಸ್ತದ್ವತೀ (ನಿ. ೯-೨೬) ಎಂದು ನಿರ್ವಚನವನ್ನು ಹೇಳಿದಾರೆ. ಸರಃ ಎಂದರೆ ಉದಕವು. ಉದಕವುಳ್ಳದ್ದು (ನದಿಯು) ಸರಸ್ವತಿಯು ಅಥವಾ **ಸರ್ತೇಸ್ತದ್ವತೀ ಸೃ ಗತೌ** ಸರಿಯುವುದು (ಹರಿಯುವುದು) ಎಂಬರ್ಥವುಳ್ಳ ಸೃಧಾತುವಿನಿಂದ ಸರಃ ಎಂಬ ಶಬ್ದವು ನಿಷ್ಪನ್ನವಾಗಬಹುದು ಹರಿಯುವ ನೀರು ಎಂದರ್ಥವು. ಅಂತಹ ಹರಿಯುವ ನೀರಿನಿಂದ ಕೂಡಿರುವ (ನದಿಗೆ) ಸರಸ್ವತೀ ಎಂದು ಹೆಸರು. ಸರಸ್ವತೀಶಬ್ದದ ರೂಪನಿಷ್ಪತ್ತಿಯೇ ಸರಸ್ವಾನ್ ಶಬ್ದಕ್ಕೆ ಅನ್ವಯಿಸುವುದು ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಪೀಪಿವಾಂಸಂ ಸರಸ್ವತಃ ಸ್ತನಂ ಯೋ ವಿಶ್ವದರ್ಶತಃ ।
ಭಕ್ಷೀಮಹಿ ಪ್ರಜಾಮಿಷಂ ॥ ೬ ॥

॥ ಪದಪಾಠಃ ॥

ಪೀಪಿಽವಾಂಸಂ । ಸರಸ್ವತಃ । ಸ್ತನಂ । ಯಃ । ವಿಶ್ವಽದರ್ಶತಃ ।
ಭಕ್ಷೀಮಹಿ । ಪ್ರಽಜಾಂ । ಇಷಂ ॥ ೬ ॥

॥ ಸಾಯಣಭಾಷ್ಯಂ ॥

ಅನ್ವಾರಂಭಣೀಯಾಯಾಂ ಸರಸ್ವತೋ ಯಾಗಸ್ಯ ಪೀಪಿವಾಂಸಮಿತ್ಯನುವಾಕ್ಯಾ । ಸೂತ್ರಿತಂ ಚ । ಪೀಪಿವಾಂಸಂ ಸರಸ್ವತೋ ದಿವ್ಯಂ ಸುಪರ್ಣಂ ವಾಯಸಂ ಬೃಹಂತಂ । ಆ. ೨-೮ । ಇತಿ ॥

**ಪೀಪಿವಾಂಸಂ ಪ್ರವೃದ್ಧಂ ಸರಸ್ವತೋ ದೇವಸ್ಯ ಸ್ತನಂ ಶಬ್ದಾಯಮಾನಂ ಸ್ತನವದ್ರಸಾಧಾರಂ ವಾ ಮೇಘಂ ಭಕ್ಷೀಮಹಿ ಭಜೇಮಹಿ । ಪ್ರಾಪ್ನುಯಾಮ । ಯೋ ವಿಶ್ವದರ್ಶತೋ ವಿಶ್ವೈಃ ಸರ್ವೈ-ರ್ದರ್ಶತೋ ಭವತಿ ದೃಶ್ಯಮಾನೋ ಭವತಿ । ತಂ ಸ್ತನಂ ಮೇಘಮಿತ್ಯರ್ಥಃ । ತಥಾ ಪ್ರಜಾಂ ಪುತ್ರಾದಿ-ರೂಪಾಮಿಷಮನ್ನಂ ಚ ಸರಸ್ವತಃ ಪ್ರಸಾದಾದ್ಭಕ್ಷೀಮಹಿ ॥**

॥ ಪ್ರತಿಪದಾರ್ಥ ॥

**ಸರಸ್ವತಃ**—ಸರಸ್ವದ್ದೇವನ । **ಸ್ತನಂ**—ಸ್ತನದಂತೆ ರಸಾಶ್ರಯನೂ । **ಪೀಪಿವಾಂಸಂ**—ಪ್ರವೃದ್ಧಮಾನನೂ (ಮತ್ತು) । **ಯಃ**—ಯಾರು । **ವಿಶ್ವದರ್ಶತಃ**—ಸಕಲರಿಗೂ ಗೋಚರನೋ ಅಂತಹ ಮೇಘನನ್ನು । **ಭಕ್ಷೀಮಹಿ**—ನಾವು ಆಶ್ರಯಿಸೋಣ । **ಪ್ರಜಾಂ**—ಪುತ್ರಾದಿಗಳನ್ನೂ । **ಇಷಂ**—ಅನ್ನವನ್ನೂ ಹೊಂದೋಣ.

॥ ಭಾವಾರ್ಥ ॥

ಸರಸ್ವದ್ದೇವನ ಸ್ತನರೂಪವಾಗಿ ವೃಷ್ಟಿರೂಪವಾದ ರಸಾಶ್ರಯನೂ, ಪ್ರವೃದ್ಧಮಾನನೂ ಮತ್ತು ಸಕಲರಿಗೂ ಗೋಚರನೂ ಆದ ಮೇಘನನ್ನು ನಾವು ಆಶ್ರಯಿಸಿ ಅವನ ಅನುಗ್ರಹದಿಂದ ಪುತ್ರಾದಿಗಳನ್ನೂ ಅನ್ನವನ್ನೂ ಹೊಂದೋಣ.

## English Translation

May we recline upon the protuberant breast of Saraswat, which is visible to all, that we may possess progeny and food

|| ವಿಶೇಷವಿಷಯಗಳು ||

ಅನ್ವಾರಂಭಣೀಯೇಷ್ಟಿಯಲ್ಲಿ ಸರಸ್ವದ್ದೇವತಾಕವಾದ ಯಾಗದಲ್ಲಿ **ಪೀಪಿವಾಂಸಂ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪೀಪಿವಾಂಸಂ ಸರಸ್ವತೋ ದಿವ್ಯ ಸುಪರ್ಣಂ ವಾಯಸಂ ಬೃಹಂತಂ** ಎಂಬ ಸೂತ್ರದಿಂದ (ಆ ೨-೮) ವಿಸ್ತೃತವಾಗಿರುವುದು



# ತೊಂಭತ್ತೇಳನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಯಜ್ಞೇ ದಿವ ಇತಿ ದಶರ್ಚಮಷ್ಟಮಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ । ಪ್ರಥಮೈಂದ್ರೀ ತೃತೀಯಾನವಮ್ಯೋರಿಂದ್ರಾಬ್ರಹ್ಮಣಸ್ಪತೀ ದೇವತಾ ದಶಮ್ಯಾ ಇಂದ್ರಾಬೃಹಸ್ಪತೀ ಶಿಷ್ಟಾನಾಂ ತು ಬೃಹಸ್ಪತಿಃ । ತಥಾ ಚಾನುಕ್ರಾಂತಂ। ಯಜ್ಞೇ ದಶೈಂದ್ರ್ಯಾದಿ ಬಾರ್ಹಸ್ಪತ್ಯಮಂತ್ಯೈಂದ್ರೀ ಚ ತೃತೀಯಾ-ನವಮ್ಯಾವೈಂದ್ರಾಬ್ರಾಹ್ಮಣಸ್ಪತ್ಯೇ ಇತಿ ॥ ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಸ್ತೋತ್ರಿಯಾನುರೂಪಾ ಬ್ರಾಹ್ಮಣಾಚ್ಛಂಸಿನ ಇದಮುತ್ತರಂ ಚ ಸೂಕ್ತಮಾವಾಪಾರ್ಥಂ । ಸೂತ್ರಿತಂ ಚ । ಯಜ್ಞೇ ದಿವಃ । ಆ. ೬-೯ । ಇತಿ ॥**

ಅನುವಾದವು—**ಯಜ್ಞೇ ದಿವಃ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು ; ಈ ಸೂಕ್ತದ ಮೊದಲನೆಯ ಋಕ್ಕಿಗೆ ಇಂದ್ರನು ದೇವತೆಯು , ಮೂರು ಮತ್ತು ಒಂಭತ್ತನೆಯ ಋಕ್ಕುಗಳಿಗೆ ಇಂದ್ರಾಬ್ರಹ್ಮಣಸ್ಪತಿಗಳು ದೇವತೆಯು ; ಹತ್ತನೆಯ ಋಕ್ಕಿಗೆ ಇಂದ್ರಾಬೃಹಸ್ಪತಿಗಳು ದೇವತೆಯು ; ಉಳಿದ ಋಕ್ಕುಗಳಿಗೆ ಬೃಹಸ್ಪತಿಯು ದೇವತೆಯು. ಅನುಕ್ರಮಣಿಕೆಯಲ್ಲಿ—**ಯಜ್ಞೇ ದಶೈಂದ್ರ್ಯಾದಿ ಬಾರ್ಹಸ್ಪತ್ಯಮಂತ್ಯೈಂದ್ರೀ ಚ ತೃತೀಯಾನವಮ್ಯಾವೈಂದ್ರಾಬ್ರಾಹ್ಮಣಸ್ಪತ್ಯೌ** ಎಂದು ಹೇಳಿರುವುದು. ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ತೃತೀಯಸವನಕಾಲದಲ್ಲಿ ಸ್ತೋಮವೃದ್ಧಿಗಾಗಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಈ ಸೂಕ್ತವನ್ನೂ ಇದರ ಮುಂದಿನ ಸೂಕ್ತವನ್ನೂ ಆವಾಪಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯಜ್ಞೇ ದಿವಃ** ಎಂಬ ಸೂತ್ರದಿಂದ ( ಆ. ೬-೯ ) ವಿವೃತವಾಗಿರುವುದು.

## ಸೂಕ್ತ—೯೭

ಮಂಡಲ—೭ ॥ ಅನುವಾಕ—೬ ॥ ಸೂಕ್ತ—೯೭ ॥
ಅಷ್ಟಕ—೫ ॥ ಅಧ್ಯಾಯ—೬ ॥ ವರ್ಗ—೨೧, ೨೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦
ಋಷಿಃ—ವಸಿಷ್ಠಃ ॥
ದೇವತಾ—೧ ಇಂದ್ರಃ । ೨, ೪-೮ ಬೃಹಸ್ಪತಿಃ । ೩, ೯ ಇಂದ್ರಾಬ್ರಹ್ಮಣಸ್ಪತೀ ।
೧೦ ಇಂದ್ರಾಬೃಹಸ್ಪತೀ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಯಜ್ಞೇ ದಿವೋ ನೃಷದನೇ ಪೃಥಿವ್ಯಾ ನರೋ ಯತ್ರ ದೇವಯವೋ ಮದಂತಿ ।
ಇಂದ್ರಾಯ ಯತ್ರ ಸವನಾನಿ ಸುನ್ವೇ ಗಮನ್ಮದಾಯ ಪ್ರಥಮಂ ವಯಶ್ಚ ॥

॥ ಪದಪಾಠಃ ॥

ಯಜ್ಞೇ । ದಿವಃ । ನೃಽಸದನೇ । ಪೃಥಿವ್ಯಾಃ । ನರಃ । ಯತ್ರ । ದೇವಽಯವಃ । ಮದಂತಿ ।
ಇಂದ್ರಾಯ । ಯತ್ರ । ಸವನಾನಿ । ಸುನ್ವೇ । ಗಮತ್ । ಮದಾಯ । ಪ್ರಥಮಂ । ವಯಃ । ಚ ॥ ೧ ॥

॥ ಸಾಯಣಭಾಷ್ಯಂ ॥

ಯತ್ರ ಯಸ್ಮಿನ್ಯಜ್ಞೇ ದೇವಯವೋ ದೇವಾನ್ಕಾಮಯಮಾನಾ ನರೋ ನೇತಾರ ಋತ್ವಿಜೋ ಮದಂತಿ ಹೃಷ್ಯಂತಿ ಯತ್ರ ಯಸ್ಮಿಂಶ್ಚ ಸವನಾನ್ಯಭಿಷೋತವ್ಯಾಃ ಸೋಮಾ ಇಂದ್ರಾಯೇಂದ್ರಾರ್ಥಂ

ಸುನ್ವೇ ಅಭಿಷೂಯಂತೇ ಪೃಥಿವ್ಯಾಃ ಸಂಬಂಧಿನಿ ನೃಷದನೇ ನೃಣಾಂ ನೇತೄಣಾಂ ಸದನಭೂತೇ ತಸ್ಮಿನ್ಯಜ್ಞೇ ಪ್ರಥಮಂ ಸರ್ವೇಭ್ಯೋ ದೇವೇಭ್ಯಃ ಪೂರ್ವಂ ದಿವೋ ದ್ಯುಲೋಕಾದ್ಗಮತ್ । ಆಗಚ್ಛತು । ಕಿಮರ್ಥಂ । ಮದಾಯ ಮದಾರ್ಥಂ । ಸೋಮಂ ಪಾತುಮಿತ್ಯರ್ಥಃ । ತಥಾ ವಯಶ್ಚ ಗಂತಾರಸ್ತದೀಯಾ ಅಶ್ವಾಶ್ಚ ಗಮತ್ । ಆಗಚ್ಛಂತು ॥

॥ ಪ್ರತಿಪದಾರ್ಥ ॥

**ಯತ್ರ**—ಯಾವ ಯಜ್ಞದಲ್ಲಿ । **ದೇವಯವಃ**—ದೇವತೆಗಳ ಅನುಗ್ರಹಾಪೇಕ್ಷಿಗಳಾದ । **ನರಃ**—ಋತ್ವಿಕ್ಕುಗಳು । **ಮದಂತಿ**—ಹರ್ಷಿಸುವರೋ । **ಯತ್ರ**—ಯಾವ ಯಜ್ಞದಲ್ಲಿ । **ಸವನಾನಿ**—ಸೋಮರಸಗಳು । **ಇಂದ್ರಾಯ**—ಇಂದ್ರಾರ್ಥವಾಗಿ । **ಸುನ್ವೇ**—ಹಿಂಡಲ್ಪಡುವುವೋ (ಯಾವುದು) । **ಪೃಥಿವ್ಯಾಃ**—ಪೃಥ್ವಿಗೆ ಸೇರಿದ **ನೃಷದನೇ**—ಯಜಮಾನರಿಗೆ ಸದನಭೂತವಾಗಿರುವುದೋ ಅಂತಹ । **ಯಜ್ಞೇ**—ಯಜ್ಞದಲ್ಲಿ । **ಪ್ರಥಮಂ**—ಇತರ ದೇವತೆಗಳಿಗಿಂತಲೂ ಇಂದ್ರನೇ ಪೂರ್ವಭಾವಿಯಾಗಿ । **ದಿವಃ**—ದ್ಯುಲೋಕದಿಂದ । **ಮದಾಯ**—ಸೋಮಪಾನದ ಹರ್ಷಾರ್ಥವಾಗಿ । **ಗಮತ್**—ಬರಲಿ । **ವಯಶ್ಚ**—ಅವನ ಅಶ್ವಗಳೂ ಬರಲಿ.

॥ ಭಾವಾರ್ಥ ॥

ಯಾವ ಯಜ್ಞದಲ್ಲಿ ದೇವತೆಗಳ ಅನುಗ್ರಹಾಪೇಕ್ಷಿಗಳಾದ ಋತ್ವಿಕ್ಕುಗಳು ಹರ್ಷಿಸುವರೋ, ಯಾವ ಯಜ್ಞದಲ್ಲಿ ಸೋಮರಸಗಳು ಇಂದ್ರಾರ್ಥವಾಗಿ ಹಿಂಡಲ್ಪಡುವುವೋ, ಯಾವುದು ಪೃಥ್ವಿಗೆ ಸೇರಿದ ಯಜಮಾನರಿಗೆ ಸದನಭೂತವಾಗಿರುವುದೋ ಅಂತಹ ಯಜ್ಞದಲ್ಲಿ ಇತರ ದೇವತೆಗಳಿಗಿಂತಲೂ ಇಂದ್ರನೇ ಪೂರ್ವಭಾವಿಯಾಗಿ ದ್ಯುಲೋಕದಿಂದ ಸೋಮಪಾನದ ಹರ್ಷವನ್ನನುಭವಿಸಲು ಬರಲಿ, ಅವನ ಅಶ್ವಗಳನ್ನೂ ಕರೆತರಲಿ.

English Translation

At the sacrifice in the dwellings of men upon earth, where the devout leaders of (rites) rejoice, where the libations to Indra are poured out, there may he descend before (other gods) from heaven for his exhilaration: (may his) swift (horses approach).

॥ ಸಂಹಿತಾಪಾಠಃ ॥

ಆ ದೈವ್ಯಾ ವೃಣೀಮಹೇಽವಾಂಸಿ ಬೃಹಸ್ಪತಿರ್ನೋ ಮಹ ಆ ಸಖಾಯಃ ।
ಯಥಾ ಭವೇಮ ಮೀಳ್ಹುಷೇ ಅನಾಗಾ ಯೋ ನೋ ದಾತಾ ಪರಾವತಃ ಪಿತೇವ ॥ ೨ ॥

॥ ಪದಪಾಠಃ ॥

ಆ । ದೈವ್ಯಾ । ವೃಣೀಮಹೇ । ಅವಾಂಸಿ । ಬೃಹಸ್ಪತಿಃ । ನಃ । ಮಹೇ । ಆ । ಸಖಾಯಃ ।

ಯಥಾ । ಭವೇಮ । ಮೀಳ್ಹುಷೇ । ಅನಾಗಾಃ । ಯಃ । ನಃ । ದಾತಾ । ಪರಾಽವತಃ । ಪಿತಾಽಇವ ॥

॥ ಸಾಯಣಭಾಷ್ಯಂ ॥

ಹೇ ಸಖಾಯಃ ಸಮಾನಖ್ಯಾನಾಃ ಸ್ತೋತಾರಃ ವಯಂ ದೈವ್ಯಾ ದೈವ್ಯಾನಿ ದೇವಸಂಬಂಧೀನ್ಯವಾಂಸಿ ರಕ್ಷಣಾನ್ಯಾ ವೃಣೀಮಹೇ । ಅಭಿಭಜಾಮಹೇ । ಪ್ರಾರ್ಥಯಾಮಹೇ । ನೋಽಸ್ಮಾಕಂ ಹವಿರ್ಬೃಹಸ್ಪತಿರ್ಬೃಹತಾಂ ಪಾಲಯಿತಾ ದೇವ ಆ ಮಹೇ । ಮಹತಿರ್ದಾನಾರ್ಥಃ । ಆ ಮಹತೇ । ಆದತ್ತೇ ॥ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥ ಯೋ ಬೃಹಸ್ಪತಿಃ ಪರಾವತೋ ದೂರದೇಶಾದ್ಧನಾನ್ಯಾಹೃತ್ಯ ಪುತ್ರೇಭ್ಯಃ ಪಿತೇವ ನೋಽಸ್ಮಭ್ಯಂ ದಾತಾ ಭವತಿ ತಸ್ಮೈ ಮೀಳ್ಹುಷೇ ಸೇಕ್ತ್ರೇ ಬೃಹಸ್ಪತಯೇಽನಾಗಾ ಅನಾಗಸ ಅನಪರಾಧಾ ಯಥಾ ವಯಂ ಭವೇಮ ಹೇ ಸಖಾಯಃ ತಥಾ ಯೂಯಂ ಪರಿಚರತೇತಿ ಶೇಷಃ ॥

॥ ಪ್ರತಿಪದಾರ್ಥ ॥

**ಸಖಾಯಃ**—ಎಲೈ ಮಿತ್ರರೇ । **ದೈವ್ಯಾ**—ದೇವಸಂಬಂಧಿಯಾದ । **ಅವಾಂಸಿ**—ರಕ್ಷಣೆಗಳನ್ನು । **ಆ ವೃಣೀಮಹೆ**—ನಾವು ಪ್ರಾರ್ಥಿಸೋಣ । **ನಃ**—ನಮ್ಮ ಹವಿಸ್ಸನ್ನು । **ಬೃಹಸ್ಪತಿಃ**—ಬೃಹಸ್ಪತಿಯು । **ಆ ಮಹೇ**—ಸ್ವೀಕರಿಸುತ್ತಾನೆ । **ಪರಾವತಃ**—ಅತ್ಯಂತ ದೂರದೇಶದಿಂದ ಸಂಪಾದಿಸಿಕೊಂಡುಬಂದ ಧನವನ್ನು । **ಪಿತೇವ**—ತಂದೆಯು ತನ್ನ ಪುತ್ರರಿಗೆ ಕೊಡುವಂತೆ । **ಯಃ**—ಯಾವ ಬೃಹಸ್ಪತಿಯು । **ನಃ**—ನಮಗೆ । **ದಾತಾ**—ದಾತೃವಾಗಿರುವನೋ । **ಮೀಳ್ಹುಷೇ**—ಕಾಮವರ್ಷಕನಾದ ಅಂತಹ ಬೃಹಸ್ಪತಿಯ ವಿಷಯದಲ್ಲಿ । **ಯಥಾ**-ಯಾವ ರೀತಿ । **ಅನಾಗಾಃ**—ಪಾಪರಹಿತರಾಗಿ । **ಭವೇಮ**—ನಾವು ಇರುವೆವೋ ಆ ರೀತಿ (ಅವನನ್ನು ಪೂಜಿಸೋಣ.)

॥ ಭಾವಾರ್ಥ ॥

ಎಲೈ ಮಿತ್ರರೇ, ನಾವು ಬೃಹಸ್ಪತಿಯಿಂದ ದೇವಸಂಬಂಧಿಯಾದ ರಕ್ಷಣೆಗಳನ್ನು ಅಪೇಕ್ಷಿಸೋಣ. ಬೃಹಸ್ಪತಿಯು ನಮ್ಮ ಹವಿಸ್ಸನ್ನು ಸ್ವೀಕರಿಸುತ್ತಾನೆ. ಅತ್ಯಂತ ದೂರದೇಶದಿಂದ ಸಂಪಾದಿಸಿಕೊಂಡುಬಂದ ಧನವನ್ನು ತಂದೆಯು ತನ್ನ ಪುತ್ರರಿಗೆ ಕೊಡುವಂತೆ ಯಾವ ಬೃಹಸ್ಪತಿಯು ನಮಗೆ ದಾತೃವಾಗಿರುವನೋ ಕಾಮವರ್ಷಕನಾದ ಅಂತಹ ಬೃಹಸ್ಪತಿಯ ವಿಷಯದಲ್ಲಿ ಯಾವರೀತಿ ನಾವು ಪಾಪರಹಿತರಾಗಿರುವೆವೋ ಆ ರೀತಿ ಅವನನ್ನು ಪೂಜಿಸೋಣ

## English Translation

Let us solicit, friends, divine protections, for Brihaspati accepts our (oblations) : so may we be without offence towards that showerer (of benefits) who is our benefactor from afar, as a father (of a son).

॥ ಸಂಹಿತಾಪಾಠಃ ॥

ತಮು ಜ್ಯೇಷ್ಠಂ ನಮಸಾ ಹವಿರ್ಭಿಃ ಸುಶೇವಂ ಬ್ರಹ್ಮಣಸ್ಪತಿಂ ಗೃಣೀಷೇ ।
ಇಂದ್ರಂ ಶ್ಲೋಕೋ ಮಹಿ ದೈವ್ಯಃ ಸಿಷಕ್ತು ಯೋ ಬ್ರಹ್ಮಣೋ ದೇವ-
ಕೃತಸ್ಯ ರಾಜಾ ॥ ೩ ॥

॥ ಪದಪಾಠಃ ॥

ತಂ । ಊಂ ಇತಿ । ಜ್ಯೇಷ್ಠಂ । ನಮಸಾ । ಹವಿಃಽಭಿಃ । ಸುಽಶೇವಂ । ಬ್ರಹ್ಮಣಃ । ಪತಿಂ । ಗೃಣೀಷೇ ।
ಇಂದ್ರಂ । ಶ್ಲೋಕಃ । ಮಹಿ । ದೈವ್ಯಃ । ಸಿಸಕ್ತು । ಯಃ । ಬ್ರಹ್ಮಣಃ । ದೇವಽಕೃತಸ್ಯ । ರಾಜಾ ॥ ೩ ॥

॥ ಸಾಯಣಭಾಷ್ಯಂ ॥

ಜ್ಯೇಷ್ಠಂ ಪ್ರಶಸ್ಯತಮಂ ಸುಶೇವಂ ಸುಸುಖಂ ಬ್ರಹ್ಮಣೋ ಮಂತ್ರಸ್ಯ ಪತಿಂ ಪಾಲಯಿತಾರಮೇತತ್ಸಂಜ್ಞಂ ತಮು ತಮೇವ ದೇವಂ ನಮಸಾ ನಮಸ್ಕಾರೇಣ ಹವಿರ್ಭಿಶ್ಚರುಪುರೋಡಾಶಾದಿಭಿಶ್ಚ ಸಾರ್ಧಂ ಗೃಣೀಷೇ । ಗೃಣೇ । ಸ್ತುವೇ । ಅಪಿ ಚ ಮಹಿ ಮಹಾಂತಮಿಂದ್ರಂ ದೈವ್ಯೋ ದೇವಾರ್ಹಃ ಶ್ಲೋಕೋಽಸ್ಮದೀಯಃ ಸ್ತಾವಕೋ ಮಂತ್ರಃ ಸಿಷಕ್ತು । ಸೇವತಾಂ । ಬ್ರಹ್ಮಣೋಽನ್ನಸ್ಯ ಮಂತ್ರಸ್ಯ ವಾ ದೇವಕೃತಸ್ಯ ದೇವೈಃ ಸ್ತೋತೃಭಿಃ ಕೃತಸ್ಯ ಯ ಇಂದ್ರೋ ಬ್ರಹ್ಮಣಸ್ಪತಿರ್ವಾ ರಾಜೇಶ್ವರೋ ಭವತಿ । ತಮಿಂದ್ರಂ ತಂ ಬ್ರಹ್ಮಣಸ್ಪತಿಮಿತಿ ಸಂಬಂಧಃ ॥

॥ ಪ್ರತಿಪದಾರ್ಥ ॥

ಜ್ಯೇಷ್ಠಂ—ಅತ್ಯಂತ ಪ್ರಶಸ್ಯನೂ । ಸುಶೇವಂ—ಉತ್ತಮವಾದ ಸುಖಕಾರಕನೂ । ಬ್ರಹ್ಮಣಃ—ಮಂತ್ರಗಳಿಗೆ । ಪತಿಂ—ಒಡೆಯನೂ ಆದ । ತಮು—ಅದೇ ಬೃಹಸ್ಪತಿಯನ್ನು । ನಮಸಾ-ನಮಸ್ಕಾರಗಳಿಂದಲೂ । ಹವಿರ್ಭಿಃ—ಹವಿಸ್ಸುಗಳಿಂದಲೂ । ಗೃಣೀಷೇ—ಸ್ತುತಿಸುತ್ತೇನೆ । ಯಃ—ಯಾವ ಇಂದ್ರನು । ದೇವಕೃತಸ್ಯ—ಸ್ತೋತೃಗಳಿಂದ ನಿರ್ಮಿತವಾದ । ಬ್ರಹ್ಮಣಃ—ಮಂತ್ರಗಳಿಗೆ । ರಾಜಾ—ಪ್ರಭುವಾಗಿರುವನೋ ಅಂತಹ । ಮಹಿ—ಮಹಾತ್ಮನಾದ । ಇಂದ್ರಂ—ಇಂದ್ರನನ್ನು । ದೈವ್ಯಃ—ದೇವತೆಗಳನ್ನು ಪೂಜಿಸಲು ಯೋಗ್ಯವಾದ । ಶ್ಲೋಕಃ—ನನ್ನ ಸ್ತುತಿಯು । ಸಿಷಕ್ತು—ಸೇವಿಸಲಿ.

॥ ಭಾವಾರ್ಥ ॥

ಅತ್ಯಂತ ಪ್ರಶಸ್ಯನೂ, ಉತ್ತಮವಾದ ಸುಖಕಾರಕನೂ, ಮಂತ್ರಗಳಿಗೆ ಒಡೆಯನೂ ಆದ ಅದೇ ಬೃಹಸ್ಪತಿಯನ್ನು ನಮಸ್ಕಾರಗಳಿಂದಲೂ, ಹವಿಸ್ಸುಗಳೊಡನೆಯೂ ಸ್ತುತಿಸುತ್ತೇನೆ. ಯಾವ ಇಂದ್ರನು ಸ್ತೋತೃಗಳಿಂದ

ನಿರ್ಮಿತವಾದ ಮಂತ್ರಗಳಿಗೆ ಪ್ರಭುವಾಗಿರುವದೋ ಅಂತಹ ಮಹಾತ್ಮನಾದ ಇಂದ್ರನನ್ನು ದೇವತಾಪೂಜೆಗೆ ಯೋಗ್ಯವಾದ ನನ್ನ ಸ್ತುತಿಯು ಸೇವಿಸಲಿ.

## English Translation

I glorify with homage and with oblations that most excellent and beneficent Brahmanaspati: may my praise, worthy of the deity, attain to the mighty Indra, who is the lord of the prayers offered by the devout.

॥ ಸಂಹಿತಾಪಾಠಃ ॥

ಸ ಆ ನೋ ಯೋನಿಂ ಸದತು ಪ್ರೇಷ್ಠೋ ಬೃಹಸ್ಪತಿರ್ವಿಶ್ವವಾರೋ ಯೋ ಅಸ್ತಿ ।
ಕಾಮೋ ರಾಯಃ ಸುವೀರ್ಯಸ್ಯ ತಂ ದಾತ್ಪರ್ಷನ್ನೋ ಅತಿ ಸಶ್ಚತೋ ಅರಿಷ್ಟಾನ್ ॥ ೪ ॥

॥ ಪದಪಾಠಃ ॥

ಸಃ । ಆ । ನಃ । ಯೋನಿಂ । ಸದತು । ಪ್ರೇಷ್ಠಃ । ಬೃಹಸ್ಪತಿಃ । ವಿಶ್ವಽವಾರಃ । ಯಃ । ಅಸ್ತಿ ।
ಕಾಮಃ । ರಾಯಃ । ಸುಽವೀರ್ಯಸ್ಯ । ತಂ । ದಾತ್ । ಪರ್ಷತ್ । ನಃ । ಅತಿ । ಸಶ್ಚತಃ । ಅರಿಷ್ಟಾನ್ ॥

॥ ಸಾಯಣಭಾಷ್ಯಂ ॥

ಪ್ರೇಷ್ಠಃ ಪ್ರಿಯತಮಃ ಸ ಬೃಹಸ್ಪತಿರ್ನೋಽಸ್ಮಾಕಂ ಯೋನಿಂ ಸ್ಥಾನಂ ವೇದಿಲಕ್ಷಣಮಾ ಸದತು । ಆಸೀದತು । ಆಗತ್ಯೋಪವಿಶತು । ಯೋ ಬೃಹಸ್ಪತಿರ್ವಿಶ್ವವಾರೋ ವಿಶ್ವೈರ್ವರಣೀಯೋಽಸ್ತಿ ಭವತಿ । ಅಪಿ ಚ ರಾಯೋ ಧನಸ್ಯ ಸುವೀರ್ಯಸ್ಯ ಶೋಭನವೀರ್ಯಸ್ಯ ಚ ಯಃ ಕಾಮೋಽಸ್ಮಾಕಮಭಿಲಾಷೋಽಸ್ತಿ ತಂ ಕಾಮಮಸ್ಮಭ್ಯಂ ದಾತ್ । ದದಾತು । ಕಾಮ್ಯಮಾನಂ ಪ್ರಯಚ್ಛತ್ವಿತ್ಯರ್ಥಃ । ತಥಾ ಸಶ್ಚತ ಉಪದ್ರವೈಃ ಸಂಸಕ್ತಾನ್ನೋಽಸ್ಮಾನರಿಷ್ಟಾನಹಿಂಸಿತಾನ್ ಕೃತ್ವಾತಿ ಪರ್ಷತ್ । ಅತಿಪಾರಯತಿ ಶತ್ರೂನ್ ॥

॥ ಪ್ರತಿಪದಾರ್ಥ ॥

ಯಃ—ಯಾವ ಬೃಹಸ್ಪತಿಯು । ವಿಶ್ವವಾರಃ—ಎಲ್ಲರಿಂದಲೂ ಅಪೇಕ್ಷಿತನಾಗಿ । ಅಸ್ತಿ—ಆಗಿರುವನೋ । ಪ್ರೇಷ್ಠಃ—ಅತ್ಯಂತ ಪ್ರೀತಿಪಾತ್ರನಾದ । ಸಃ—ಆದೇ । ಬೃಹಸ್ಪತಿಃ—ಬೃಹಸ್ಪತಿದೇವನು । ನಃ—ನಮ್ಮ ।

**ಯೋನಿಂ**—ಯಜ್ಞವೇದಿಯಲ್ಲಿ । **ಆ ಸದತು**—ಬಂದು ಕುಳಿತುಕೊಳ್ಳಲಿ । **ಸುವೀರ್ಯಸ್ಯ**—ಉತ್ತಮವಾದ ಶಕ್ತಿಯುಳ್ಳ । **ರಾಯಃ**—ಧನಕ್ಕೆ । **(ಯಃ) ಕಾಮಃ**—ಯಾವ ನಮ್ಮ ಅಭಿಲಾಷೆಯಿದೆಯೋ । **ತಂ**—ಆ ಅಭಿಲಾಷೆಯನ್ನು । **ದಾತ್**—ಪೂರೈಸಲಿ । **ಸಶ್ಚತಃ**—ಅನೇಕ ಉಪದ್ರವಗಳಿಂದ ಕೂಡಿದ । **ನಃ**—ನಮ್ಮನ್ನು । **ಅರಿಷ್ಟಾನ್**—ಅಹಿಂಸಿತರನ್ನಾಗಿ ಮಾಡಿ । **ಅತಿ ಪರ್ಷತ್**—ಶತ್ರುಗಳ ಹಿಡಿತದಿಂದ ದಾಟಿಸಲಿ.

॥ ಭಾವಾರ್ಥ ॥

ಯಾವ ಬೃಹಸ್ಪತಿಯು ಎಲ್ಲರಿಗೂ ಬೇಕಾದವನಾಗಿ ಆಗಿರುವನೋ ಅತ್ಯಂತ ಪ್ರಿಯತಮನಾದ ಆದೇ ಬೃಹಸ್ಪತಿದೇವನು ನಮ್ಮ ಯಜ್ಞವೇದಿಯಲ್ಲಿ ಬಂದು ಕುಳಿತುಕೊಳ್ಳಲಿ. ಉತ್ತಮವಾದ ಶಕ್ತಿಯುಳ್ಳ ಧನಕ್ಕೆ ನಮ್ಮ ಯಾವ ಅಭಿಲಾಷೆಯಿದೆಯೋ ಆ ಅಭಿಲಾಷೆಯನ್ನು ಪೂರೈಸಲಿ. ಅನೇಕ ಉಪದ್ರವಗಳಿಂದ ಕೂಡಿದ ನಮ್ಮನ್ನು ಅಹಿಂಸಿತರನ್ನಾಗಿ ಮಾಡಿ ಶತ್ರುಗಳ ಹಿಡಿತದಿಂದ ದಾಟಿಸಲಿ.

## English Translation

May that best beloved Brihaspati, who is the desired of all, sit down in our hall of sacrifice: may he gratify our desire of riches and of male posterity, transporting us, (at present) embarrassed, uninjured beyond (the assaults of enemies).

॥ ಸಂಹಿತಾಪಾಠಃ ॥

ತಮಾ ನೋ ಅರ್ಕಮಮೃತಾಯ ಜುಷ್ಟಮಿಮೇ ಧಾಸುರಮೃತಾಸಃ ಪುರಾಜಾಃ ।

ಶುಚಿಕ್ರಂದಂ ಯಜತಂ ಪಸ್ತ್ಯಾನಾಂ ಬೃಹಸ್ಪತಿಮನರ್ವಾಣಂ ಹುವೇಮ ॥

॥ ಪದಪಾಠಃ ॥

ತಂ । ಆ । ನಃ । ಅರ್ಕಂ । ಅಮೃತಾಯ । ಜುಷ್ಟಂ । ಇಮೇ । ಧಾಸುಃ । ಅಮೃತಾಸಃ । ಪುರಾऽಜಾಃ ।

ಶುಚಿऽಕ್ರಂದಂ । ಯಜತಂ । ಪಸ್ತ್ಯಾನಾಂ । ಬೃಹಸ್ಪತಿಂ । ಅನರ್ವಾಣಂ । ಹುವೇಮ ॥ ೫ ॥

॥ ಸಾಯಣಭಾಷ್ಯಂ ॥

ತಂ ಸರ್ವತ್ರ ಭೋಕ್ತೃತ್ವತಯಾ ಪ್ರಸಿದ್ಧಮಮೃತಾಯಾಮರಣತ್ವಾಯ ಜೀವನಾಯ ಜುಷ್ಟಂ ಪರ್ಯಾಪ್ತಮರ್ಕಮರ್ಚನಸಾಧನಮನ್ನಂ ಪುರಾಜಾಃ ಪುರಾ ಜಾತಾ ಇಮೇऽಮೃತಾಸೋऽಮರಣಾ

ದೇವಾ ಬೃಹಸ್ಪತೇರಾಜ್ಞಯಾ ನೋಽಸ್ಮಭ್ಯಮಾ ಧಾಸುಃ । ಪ್ರದದ್ಯುಃ । ವಯಂ ಚ ಶುಚಿಕ್ರಂದಂ ಶುದ್ಧಸ್ತೋತ್ರಂ ಪಸ್ತ್ಯಾನಾಂ । ಪಸ್ತ್ಯಮಿತಿ ಗೃಹನಾಮ । ತೇನ ತದ್ವಂತೋ ಲಕ್ಷ್ಯಂತೇ । ಗೃಹಿಣಾಂ ಯಜತಂ ಯಷ್ಟವ್ಯಮನರ್ವಾಣಮಪ್ರತ್ಯೃತಂ ಕೇನಾಪ್ಯಪ್ರತಿಗತಂ ಬೃಹಸ್ಪತಿಂ ಬೃಹತಾಂ ಪಾಲಕಂ ದೇವಂ ಹುವೇಮ । ಆಹ್ವಯಾಮ । ಸ್ತುಯೇಮ ವಾ ॥

॥ ಪ್ರತಿಪದಾರ್ಥ ॥

ತಂ—ಭೋಗಸಾಧನವೆಂದು ಪ್ರಸಿದ್ಧವಾದುದೂ । ಅಮೃತಾಯ—ನಿತ್ಯವಾದ ಜೀವನಕ್ಕೆ । ಜುಷ್ಟಂ—ಪರ್ಯಾಪ್ತವಾದುದೂ । ಅರ್ಕಂ—ಪೂಜ್ಯವಾದುದೂ ಆದ ಅನ್ನವನ್ನು । ಪುರಾಜಾಃ—ಪುರಾತನರಾದವರೂ । ಇಮೇ ಅಮೃತಾಸಃ—ಮರಣಧರ್ಮರಹಿತರೂ ಆದ ದೇವತೆಗಳು । ನಃ—ನಮಗೆ । ಆ ಧಾಸುಃ—(ಬೃಹಸ್ಪತಿಯ) ಆಜ್ಞಾನುಸಾರವಾಗಿ) ಕೊಡಲಿ। ಶುಚಿಕ್ರಂದಂ—ಶುದ್ಧವಾದ ಸ್ತುತಿಗೆ ಪಾತ್ರನೂ। ಪಸ್ತ್ಯಾನಾಂ—ಗೃಹಸ್ಥರಿಗೆಲ್ಲಾ। ಯಜತಂ—ಪೂಜ್ಯನೂ । ಅನರ್ವಾಣಂ—ಅಪ್ರತಿಹತನೂ ಆದ। ಬೃಹಸ್ಪತಿಂ—ಬೃಹಸ್ಪತಿಯನ್ನು । ಹುವೇಮ-ಸ್ತುತಿಸೋಣ.

॥ ಭಾವಾರ್ಥ ॥

ಭೋಗಸಾಧನವೆಂದು ಲೋಕದಲ್ಲಿ ಪ್ರಸಿದ್ಧವಾದುದೂ, ನಿತ್ಯವಾದ (ಶಾಶ್ವತವಾದ) ಜೀವನಕ್ಕೆ ಪರ್ಯಾಪ್ತವಾದುದೂ, ಪೂಜ್ಯವಾದುದೂ ಆದ ಅನ್ನವನ್ನು ಪುರಾತನರೂ, ಮರಣಧರ್ಮರಹಿತರೂ ಆದ ದೇವತೆಗಳು ನಮಗೆ ಬೃಹಸ್ಪತಿಯ ಆಜ್ಞಾನುಸಾರವಾಗಿ ಕೊಡಲಿ ಶುದ್ಧವಾದ ಸ್ತುತಿಗೆ ಪಾತ್ರನೂ, ಗೃಹಸ್ಥರಿಗೆಲ್ಲಾ ಪೂಜ್ಯನೂ, ಅಪ್ರತಿಹತನೂ ಆದ ಬೃಹಸ್ಪತಿಯನ್ನು ನಾವು ಸ್ತುತಿಸೋಣ.

## English Translation

May the first-born immortals (by his command) bestow upon us the food that is necessary for existence: let us invoke the unresisted Brihaspati, to whom pure praises are addressed, the adored of householders.

॥ ಸಂಹಿತಾಪಾಠಃ ॥

ತಂ ಶಗ್ಮಾಸೋ ಅರುಷಾಸೋ ಅಶ್ವಾ ಬೃಹಸ್ಪತಿಂ ಸಹವಾಹೋ ವಹಂತಿ ।
ಸಹಶ್ಚಿದ್ಯಸ್ಯ ನೀಲವತ್ಸಧಸ್ಥಂ ನಭೋ ನ ರೂಪಮರುಷಂ ವಸಾನಾಃ ॥ ೬ ॥

॥ ಪದಪಾಠಃ ॥

ತಂ । ಶಗ್ಮಾಸಃ । ಅರುಷಾಸಃ । ಅಶ್ವಾಃ । ಬೃಹಸ್ಪತಿಂ । ಸಹಽವಾಹಃ । ವಹಂತಿ ।
ಸಹಃ । ಚಿತ್ । ಯಸ್ಯ । ನೀಲಽವತ್ । ಸಧಽಸ್ಥಂ । ನಭಃ । ನ । ರೂಪಂ । ಅರುಷಂ । ವಸಾನಾಃ ॥೬॥

॥ ಸಾಯಣಭಾಷ್ಯಂ ॥

ಶಗ್ಮಾಸಃ ಶಗ್ಮಾಃ ಸುಖಕರಾಃ ಶಕ್ತಾ ವಾರುಷಾಸ ಆರೋಚಮಾನಾಃ ಸಹವಾಹಃ ಸಂಹತ್ಯ ವಾಹಕಾ ಅಶ್ವಾಸ್ತಂ ಬೃಹಸ್ಪತಿಂ ವಹಂತಿ । ವಹಂತು । ಯಸ್ಯ ಬೃಹಸ್ಪತೇಃ ಸಹಶ್ಚಿದ್ಬಲಂ ಚ ಭವತಿ । ನೀಲವತ್ । ನೀಲಂ ನಿಲಯೋ ನಿವಾಸಃ । ತದ್ಯುಕ್ತಂ ಸಧಸ್ಥಂ ಸಹಸ್ಥಾನಂ ಚ ಯಸ್ಯ । ತಂ ಬೃಹಸ್ಪತಿಮಿತ್ಯನ್ವಯಃ । ಕೀದೃಶಾ ಅಶ್ವಾಃ । ನಭೋ ನಾದಿತ್ಯಮಿವಾರುಷಮಾರೋಚಮಾನಂ ರೂಪಂ ವಸಾನಾ ಧಾರಯಂತಃ ॥

॥ ಪ್ರತಿಪದಾರ್ಥ ॥

ನಭೋ ನ—ಆದಿತ್ಯನಂತೆ । ಅರುಷಂ—ಆಕರ್ಷಕವಾದ । ರೂಪಂ—ರೂಪವನ್ನು । ವಸಾನಾಃ—ಹೊಂದಿರುವುವೂ । ಶಗ್ಮಾಸಃ—ಸುಖಕಾರಕವೂ । ಅರುಷಾಸಃ—ಹೊಂಬಣ್ಣವುಳ್ಳವೂ । ಸಹವಾಹಃ—ಒಟ್ಟಿಗೆ ವಹಿಸುವುವೂ ಆದ । ಅಶ್ವಾಃ—ಅಶ್ವಗಳು । ಯಸ್ಯ—ಯಾವ ಬೃಹಸ್ಪತಿಯು । ಸಹಶ್ಚಿತ್—ಬಲವೆಲ್ಲವೂ । ನೀಲವತ್—ನಿವಾಸಸ್ಥಾನದ ಶಕ್ತಿಯಂತೆ । ಸಧಸ್ಥಂ—ಒಟ್ಟಿಗೆ ಸೇರಿಕೊಂಡಿರುವುವೋ । ತಂ—ಅಂತಹ । ಬೃಹಸ್ಪತಿಂ—ಬೃಹಸ್ಪತಿಯನ್ನು । ವಹಂತಿ—ವಹಿಸಿಕೊಂಡು ಬರಲಿ.

॥ ಭಾವಾರ್ಥ ॥

ಆದಿತ್ಯನಂತೆ ಆಕರ್ಷಕವಾದ ರೂಪವನ್ನು ಹೊಂದಿರುವುವೂ ಸುಖಕಾರಕವೂ ಹೊಂಬಣ್ಣವುಳ್ಳವೂ, ಒಟ್ಟಿಗೆ ವಹಿಸುವುವೂ ಆದ ಅಶ್ವಗಳು ಯಾವ ಬೃಹಸ್ಪತಿಯು ಬಲವೆಲ್ಲವೂ ನಿವಾಸಸ್ಥಾನದ ಒಟ್ಟು ಶಕ್ತಿಯಂತೆ ಒಟ್ಟಿಗೆ ಸೇರಿಕೊಂಡಿರುವುವೋ ಅಂತಹ ಬೃಹಸ್ಪತಿಯನ್ನು ವಹಿಸಿಕೊಂಡು ಬರಲಿ.

English Translation

May his powerful brilliant horses, wearing a lustrous form like (that of) the sun, acting together, bring (hither) that Brihaspati, in whom strength abides like that of a substantial mansion.

॥ ಸಂಹಿತಾಪಾಠಃ ॥

ಸ ಹಿ ಶುಚಿಃ ಶತಪತ್ರಃ ಸ ಶುಂಧ್ಯುರ್ಹಿರಣ್ಯವಾಶೀರಿಷಿರಃ ಸ್ವರ್ಷಾಃ ।
ಬೃಹಸ್ಪತಿಃ ಸ ಸ್ವಾವೇಶ ಋಷ್ವಃ ಪುರೂ ಸಖಿಭ್ಯ ಆಸುತಿಂ ಕರಿಷ್ಠಃ ॥ ೭ ॥

॥ ಪದಪಾಠಃ ॥

ಸಃ । ಹಿ । ಶುಚಿಃ । ಶತಽಪತ್ರಃ । ಸಃ । ಶುಂಧ್ಯುಃ । ಹಿರಣ್ಯಽವಾಶೀಃ । ಇಷಿರಃ । ಸ್ವಃಽಸಾಃ ।
ಬೃಹಸ್ಪತಿಃ । ಸಃ । ಸುಽಆವೇಶಃ । ಋಷ್ವಃ । ಪುರು । ಸಖಿಽಭ್ಯಃ । ಆಽಸುತಿಂ । ಕರಿಷ್ಠಃ ॥ ೭ ॥

॥ ಸಾಯಣಭಾಷ್ಯಂ ॥

ಸ ಹಿ ಸ ಖಲು ಬೃಹಸ್ಪತಿಃ ಶುಚಿಃ ಶುದ್ಧಃ ಶತಪತ್ರಃ ಬಹುವಿಧವಾಹನಃ । ಸ ಏವ ಶುಂಧ್ಯುಃ । ಸರ್ವೇಷಾಂ ಶೋಧಯಿತಾ ಹಿರಣ್ಯವಾಶೀಃ । ವಾಶೀತಿ ವಾಙ್ನಾಮ । ಹಿತರಮಣೀಯವಾಕ್ । ಯದ್ವಾ । ವಾಶೀಭಿಸ್ತಕ್ಷತಾಶ್ಮನ್ಮಯೀಭಿಃ । ಋ. ೧೦-೧೦೧-೧೦ । ಇತಿ ನಿಗಮಾದ್ವಾಶ್ಯಾಯುಧಂ । ಸ್ವರ್ಣಮಯಾಯುಧಃ । ಇಷಿರೋ ಗಂತಾಭ್ಯೇಷಣೀಯೋ ವಾ ಸ್ವರ್ಷಾಃ ಸ್ವರ್ಗಸ್ಯ ಸಂಭಕ್ತಾ । ಯದ್ವಾ । ಸರಣಶೀಲಸ್ಯೋದಕಸ್ಯ ಸನಿತಾ ದಾತಾ । ಸ ಏವ ಬೃಹಸ್ಪತಿಃ ಸ್ವಾವೇಶಃ ಸುನಿವಾಸ ಋಷ್ವೋ ದರ್ಶನೀಯಃ । ಈದೃಶೋ ದೇವಃ ಸಖಿಭ್ಯಃ ಸ್ತೋತೃಭ್ಯಃ ಪುರು ಬಹುಲಮಾಸುತಿಮನ್ನಂ ಕರಿಷ್ಠಃ ಕರ್ತೃತಮೋ ದಾತೃತಮೋ ಭವತಿ ॥

॥ ಪ್ರತಿಪದಾರ್ಥ ॥

**ಸ ಹಿ**—ಅದೇ ಬೃಹಸ್ಪತಿಯು । **ಶುಚಿಃ**—ಶುದ್ಧನೂ । **ಶತಪತ್ರಃ**—ಅನೇಕ ವಿಧವಾದ ವಾಹನವುಳ್ಳವನೂ ಆಗಿದ್ದಾನೆ । **ಸಃ**—ಅವನೇ । **ಶುಂಧ್ಯುಃ**—ಶುದ್ಧಿಕಾರಕನೂ । **ಹಿರಣ್ಯವಾಶೀಃ**—ಸುವರ್ಣಮಯವಾದ ಆಯುಧವುಳ್ಳವನೂ । **ಇಷಿರಃ**—ಅಪೇಕ್ಷಿತನೂ । **ಸ್ವರ್ಷಾಃ**—ಉತ್ತಮವಾದ ಉದಕಪ್ರದನೂ ಆಗಿದ್ದಾನೆ । **ಸ್ವಾವೇಶಃ**—ಉತ್ತಮವಾದ ನಿವಾಸಸ್ಥಾನವುಳ್ಳವನೂ । **ಋಷ್ವಃ**—ದರ್ಶನೀಯನೂ ಆದ । **ಸಃ ಬೃಹಸ್ಪತಿಃ**—ಅದೇ ಬೃಹಸ್ಪತಿಯು **ಸಖಿಭ್ಯಃ**—ಮಿತ್ರಭೂತರಾದ ಸ್ತೋತೃಗಳಿಗೆ । **ಪುರು**—ಅತ್ಯಧಿಕವಾದ । **ಆಸುತಿಂ**—ಅನ್ನವನ್ನು । **ಕರಿಷ್ಠಃ**—ಕೊಡುವವನಾಗಿದ್ದಾನೆ.

॥ ಭಾವಾರ್ಥ ॥

ಪೂಜ್ಯನಾದ ಅದೇ ಬೃಹಸ್ಪತಿಯು ಶುದ್ಧನೂ ಅನೇಕವಿಧವಾದ ವಾಹನವುಳ್ಳವನೂ ಆಗಿದ್ದಾನೆ. ಅವನೇ ಶುದ್ಧಿಕಾರಕನೂ, ಸುವರ್ಣಮಯವಾದ ಆಯುಧವುಳ್ಳವನೂ ಆಗಿದ್ದಾನೆ. ಅಪೇಕ್ಷಿತನೂ, ಉತ್ತಮವಾದ ಉದಕಪ್ರದನೂ ಉತ್ತಮವಾದ ನಿವಾಸಸ್ಥಾನವುಳ್ಳವನೂ, ದರ್ಶನೀಯನೂ ಆದ ಅದೇ ಬೃಹಸ್ಪತಿಯು ಮಿತ್ರಭೂತರಾದ ಸ್ತೋತೃಗಳಿಗೆ ಅತ್ಯಧಿಕವಾದ ಅನ್ನವನ್ನು ಕೊಡುವವನಾಗಿದ್ದಾನೆ.

## English Translation

He verily is pure, borne by numerous conveyances, he is the purifier, armed with golden weapons, the object of desire, the enjoyer of heaven: he, Brihaspati, is well domiciled, of goodly aspect, a most bountiful giver of ample food to his friends.

॥ ಸಂಹಿತಾಪಾಠಃ ॥

ದೇವೀ ದೇವಸ್ಯ ರೋದಸೀ ಜನಿತ್ರೀ ಬೃಹಸ್ಪತಿಂ ವಾವೃಧತುರ್ಮಹಿತ್ವಾ ।

ದಕ್ಷಾಯ್ಯಾಯ ದಕ್ಷತಾ ಸಖಾಯಃ ಕರದ್ಬ್ರಹ್ಮಣೇ ಸುತರಾ ಸುಗಾಧಾ ॥

॥ ಪದಪಾಠಃ ॥

ದೇವೀ ಇತಿ । ದೇವಸ್ಯ । ರೋದಸೀ ಇತಿ । ಜನಿತ್ರೀ ಇತಿ । ಬೃಹಸ್ಪತಿಂ । ವವೃಧತುಃ । ಮಹಿಽತ್ವಾ । ದಕ್ಷಾಯ್ಯಾಯ । ದಕ್ಷತ । ಸಖಾಯಃ । ಕರತ್ । ಬ್ರಹ್ಮಣೇ । ಸುಽತರಾ । ಸುಽಗಾಧಾ ॥ ೮ ॥

॥ ಸಾಯಣಭಾಷ್ಯಂ ॥

ದೇವೀ ದೇವ್ಯೌ ದಾನಾದಿಗುಣಯುಕ್ತೇ ದೇವಸ್ಯ ಬೃಹಸ್ಪತೇರ್ಜನಿತ್ರೀ ಜನಯಿತ್ರ್ಯೌ ರೋದಸೀ ದ್ಯಾವಾಪೃಥಿವ್ಯೌ ಮಹಿತ್ವಾ ಮಹತ್ತ್ವೇನ ಯುಕ್ತಂ ಬೃಹಸ್ಪತಿಂ ವವೃಧತುಃ । ವರ್ಧಯಾಮಾಸತುಃ । ಹೇ ಸಖಾಯಃ ಯೂಯಮಪಿ ದಕ್ಷಾಯ್ಯಾಯ ವರ್ಧನೀಯಾಯ । ದ್ವಿತೀಯಾರ್ಥೇ ಚತುರ್ಥೀ । ವರ್ಧನೀಯಂ ತಂ ಬೃಹಸ್ಪತಿಂ ದಕ್ಷತ । ವರ್ಧಯತ । ಸ ಚ ಬೃಹಸ್ಪತಿರ್ಬ್ರಹ್ಮಣೇ ಬೃಂಹಿತಾಯ ಪ್ರಭೂತಾಯಾನ್ನಾಯ ತದರ್ಥಂ ಸುತರಾ ಸುತರಣಾನಿ ಸುಖೇನ ತರಣೀಯಾನಿ ಸುಗಾಧಾ ಸುಖೇನಾವಗಾಹನೀಯಾನ್ಯುದಕಾನಿ ಕರತ್ । ಕರೋತು ॥

॥ ಪ್ರತಿಪದಾರ್ಥ ॥

ದೇವೀ— ದೇವತಾತ್ಮರೂ । ದೇವಸ್ಯ—ಬೃಹಸ್ಪತಿಗೆ । ಜನಿತ್ರೀ—ಉತ್ಪಾದಕಿಯರೂ ಆದ । ರೋದಸೀ—ದ್ಯಾವಾಪೃಥಿವಿಗಳು । ಮಹಿತ್ವಾ—ತಮ್ಮ ಮಾಹಾತ್ಮ್ಯದಿಂದ । ಬೃಹಸ್ಪತಿಂ—ಬೃಹಸ್ಪತಿಯನ್ನು । ವವೃಧತುಃ—ಬೆಳಸಿದರು । ಸಖಾಯಃ—ಎಲೈ ಮಿತ್ರರೇ । ದಕ್ಷಾಯ್ಯಾಯ—ವೃದ್ಧಿಯನ್ನು ಹೊಂದುವ ಬೃಹಸ್ಪತಿಯನ್ನು । ದಕ್ಷತ— ನೀವು ಬೆಳಸಿರಿ (ಅದೇ ಬೃಹಸ್ಪತಿಯು,) ಬ್ರಹ್ಮಣೇ—ಪುಷ್ಕಲವಾದ ಅನ್ನಕ್ಕಾಗಿ । ಸುತರಾ—ಸುಖವಾಗಿ ದಾಟಬಹುದಾದುದೂ । ಸುಗಾಧಾ—ಅದಕ್ಕೆ ತಕ್ಕ ಆಳವುಳ್ಳದ್ದೂ ಆದ ಉದಕಗಳನ್ನು । ಕರತ್—ಉತ್ಪನ್ನಮಾಡಲಿ

॥ ಭಾವಾರ್ಥ ॥

ದೇವತಾತ್ಮರೂ ಬೃಹಸ್ಪತಿಗೆ ಉತ್ಪಾದಕಿಯರೂ ಆದ ದ್ಯಾವಾಪೃಥಿವಿಗಳು ತಮ್ಮ ಮಾಹಾತ್ಮ್ಯದಿಂದ ಬೃಹಸ್ಪತಿಯನ್ನು ಬೆಳಸಿದರು ಎಲೈ ಮಿತ್ರರೇ, ವೃದ್ಧಿಯನ್ನು ಹೊಂದುವ ಬೃಹಸ್ಪತಿಯನ್ನು ನೀವೂ ಬೆಳಸಿರಿ. ಅದೇ ಬೃಹಸ್ಪತಿಯು ಪುಷ್ಕಲವಾದ ಅನ್ನಕ್ಕಾಗಿ ಸುಖವಾಗಿ ದಾಟಬಹುದಾದುದೂ, ಅದಕ್ಕೆ ತಕ್ಕ ಆಳವುಳ್ಳದ್ದೂ ಆದ ಉದಕಗಳನ್ನು ಉತ್ಪನ್ನಮಾಡಲಿ

## English Translation

the divine heaven and earth, the generatrices of the deity, have, by their might, given growth to Brihaspati : magnify, friends, the magnifiable and may he render (the waters) easy to be crossed and forded for (the attainment of) food.

## English Translation

I offer, Vishnu, the oblation placed before you with the exclamation Vashat; be pleased, Sipivishta, with my offering: may my laudatory hymns magnify you: and you (gods) ever cherish us with blessings.

## ॥ ವಿಶೇಷವಿಷಯಗಳು ॥

**ವಷಟ್ ಕೃಣೋಮಿ—ವಷಟ್ಕಾರೇಣ ಹವಿರ್ಹಾವಯಾಮಿ ।** ವಷಟ್ಕಾರಪೂರ್ವಕವಾಗಿ ಮಂತ್ರವನ್ನು ಪಠಿಸಿ ಅಗ್ನಿಯಲ್ಲಿ ಹವಿಸ್ಸನ್ನರ್ಪಿಸುತ್ತೇನೆ. ಇಲ್ಲಿ ವಷಟ್ಕಾರವೆಂದರೇನು? ಇದನ್ನು ಏತಕ್ಕಾಗಿ ಪಠಿಸಬೇಕು? ಇದರ ಸ್ವರೂಪ ಮತ್ತು ಸಂಕೇತಗಳೇನು ಇತ್ಯಾದಿ ವಿಷಯಗಳನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುವುದು ಅವಶ್ಯಕವಾಗಿದೆ. ಯಜ್ಞಾದಿಗಳಲ್ಲಿ ನಾನಾ ದೇವತೆಗಳಿಗೆ ಹವಿಸ್ಸನ್ನರ್ಪಿಸಬೇಕಾದರೆ—ಆ ದೇವತೆಗಳು ನಮಗೆ ಪ್ರತ್ಯಕ್ಷವಾಗಿ ಕಾಣಿಸುವುದಿಲ್ಲವಾದ್ದರಿಂದ—ಆಯಾ ದೇವತೆಗಳನ್ನುದ್ದೇಶಿಸಿ ಆ ದೇವತಾಕವಾದ ಮಂತ್ರಗಳನ್ನು ಪಠಿಸಿ ಅಗ್ನಿಯಲ್ಲಿ ಹೋಮ ಮಾಡುವರು. ಆರೀತಿ ಹೋಮ-ಮಾಡುವಾಗ ಮಂತ್ರದ ಕೊನೆಯಲ್ಲಿ **ಸ್ವಾಹಾ** ಅಥವಾ **ವೌಷಟ್** ಎಂಬ ಶಬ್ದವನ್ನು ಸೇರಿಸಿ ಪಠಿಸುತ್ತಾ ಹೋಮಮಾಡುವರು. ಹೋಮ-ಮಾಡುವುದಕ್ಕೆ ಪೂರ್ವಭಾವಿಯಾಗಿ ಕೆಲವು ನಿಯಮಗಳನ್ನನುಸರಿಸಬೇಕಾಗಿರುವುದು. ಹವಿಸ್ಸನ್ನರ್ಪಿಸಬೇಕಾಗಿರುವ ದೇವತೆಯನ್ನು ಮೊದಲು ದೇವತಾಕವಾದ ಸ್ತೋತ್ರಾದಿಗಳಿಂದ ಗುಣವರ್ಣನೆ ಮಾಡುವ ಮಂತ್ರಗಳನ್ನು ಪಠಿಸುವರು. ಈ ಗುಣವರ್ಣನೆ ಮಾಡುವ ಮಂತ್ರಗಳಿಗೆ ಶಸ್ತ್ರಮಂತ್ರ ಮತ್ತು ನಿವಿತ್ ಮಂತ್ರಗಳೆಂದು ಹೆಸರು. ನಿವಿನ್ಮಂತ್ರದಲ್ಲಿ ಆ ದೇವತೆಯ ವಿಶೇಷ ಗುಣವರ್ಣನೆ ಇರುವುದರಿಂದ ನಿವಿನ್ಮಂತ್ರವನ್ನು ಶಸ್ತ್ರಮಂತ್ರಗಳ ಮಧ್ಯದಲ್ಲಿ ಸೇರಿಸಿ ಪಠಿಸುವರು. ಈರೀತಿ ಉದ್ದಿಷ್ಟಗುಣವರ್ಣನೆಯಾದ ನಂತರ ಮತ್ತೊಂದು ಮಂತ್ರದಿಂದ ದೇವತೆಯನ್ನು ಯಜ್ಞಭೂಮಿಗೆ ಬರಬೇಕೆಂದು ಹೋತೃವೆಂಬ ಋತ್ವಿಜನು ಆಹ್ವಾನಮಾಡುವನು. ಈ ಆಹ್ವಾನಮಂತ್ರಕ್ಕೆ **ಅನುವಾಕ್ಯಾ** ಅಥವಾ **ಪುರೋಽನುವಾಕ್ಯಾ** ಮಂತ್ರವೆಂದು ಹೆಸರು. ಅನಂತರ ದೇವತೆಯು ಆಹ್ವಾನವನ್ನು ಮನ್ನಿಸಿ ಯಜ್ಞಭೂಮಿಗೆ ಬಂದು ಬರ್ಹಿಃ ಎಂಬ ದರ್ಭಾಸನದ ಮೇಲೆ ಕುಳಿತುಕೊಂಡಿರುವನೆಂದು ಭಾವಿಸಿ ಮತ್ತೊಂದು ಮಂತ್ರದಿಂದ ಅಧ್ವರ್ಯುವೆಂಬ ಋತ್ವಿಜನು ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡುವನು. ಹೋಮಮಾಡುವ ಈ ಮಂತ್ರಕ್ಕೆ **ಯಾಜ್ಯಾ** ಎಂದು ಹೆಸರು. ಈ ಯಾಜ್ಯಾಮಂತ್ರದ ಕೊನೆಯಲ್ಲಿಯೇ ಸ್ವಾಹಾ ಅಥವಾ ವೌಷಟ್ ಎಂಬ ಶಬ್ದವನ್ನು ಸೇರಿಸಿ ಹೋಮಮಾಡುವರು. ಇದನ್ನು ಸ್ಪಷ್ಟಪಡಿಸುವುದಕ್ಕಾಗಿ ಒಂದು ಉದಾಹರಣೆಯನ್ನು ಕೊಡುವೆವು. ಪ್ರಕೃತ ವಿಷ್ಣುವನ್ನೇ ಉದ್ದೇಶಿಸಿ ಹೋಮಮಾಡಬೇಕಾದ ಸಂದರ್ಭದಲ್ಲಿ ವಿಷ್ಣುದೇವತಾಕವಾದ **ನೂ ಮರ್ತೋ ದಯತೇ** (ಈ ಮಂಡಲದ ನೂರನೇ ಸೂಕ್ತ) ಎಂಬ ಸೂಕ್ತವನ್ನು ಅಚ್ಛಾವಾಕನೆಂಬ ಋತ್ವಿಜನು ಶಸ್ತ್ರಮಂತ್ರಗಳಿಗಾಗಿ ಪಠಿಸುವನು. ಈ ಮಂತ್ರಗಳ ಮಧ್ಯದಲ್ಲಿ ವಿಷ್ಣುವಿನ ಗುಣಗಾನವನ್ನು ಮಾಡುವ ಕೆಲವು ಮಂತ್ರಗಳನ್ನು ಎಂದರೆ **ಪ್ರ ತತ್ತೇ ಅದ್ಯ** ಎಂದು ಮೊದಲಾಗುವ (ಋ. ಸಂ. ೭-೧೦೦-೫ ರಿಂದ ೭-೧೦೦-೭ ರ ವರೆಗಿನ) ಮೂರು ಋಕ್ಕುಗಳನ್ನು ನಿವಿನ್ಮಂತ್ರಗಳನ್ನಾಗಿ ಸೇರಿಸಿ ಪಠಿಸುವನು. ಅನಂತರ ವಿಷ್ಣುವನ್ನು ಆಹ್ವಾನಮಾಡುವುದಕ್ಕಾಗಿ—

**ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ ।**
**ಉದಸ್ತಭ್ನಾ ನಾಕಮೃಷ್ವಂ ಬೃಹಂತಂ ದಾಧರ್ಥ ಪ್ರಾಚೀಂ ಕಕುಭಂ ಪೃಥಿವ್ಯಾಃ ॥**

(ಋ. ಸಂ. ೭-೯೯-೨)

ಎಂಬ ಋಕ್ಕನ್ನು ಪಶುಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಪಠಿಸಿ ವಿಷ್ಣುದೇವತೆಯನ್ನು ಹೋತೃವು ಆಹ್ವಾನ ಮಾಡುವನು. ಅನಂತರ,

> ತ್ರಿರ್ದೇವಃ ಪೃಥಿವೀಮೇಷ ಏತಾಂ ವಿ ಚಕ್ರಮೇ ಶತರ್ಚಸಂ ಮಹಿತ್ವಾ ।
> ಪ್ರ ವಿಷ್ಣುರಸ್ತು ತವಸಸ್ತವೀಯಾನ್ತ್ವೇಷಂ ಹ್ಯಸ್ಯ ಸ್ಥವಿರಸ್ಯ ನಾಮ ॥
>
> (ಋ. ಸಂ. ೭-೧೦೦-೩)

ಎಂಬ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸುವನು. ಈ ಮಂತ್ರದ ಕೊನೆಯಲ್ಲಿ ಇರುವ ಸ್ಥವಿರಸ್ಯ ನಾಮ ಎಂಬ ಶಬ್ದಗಳನಂತರ ವೌಷಟ್ ಎಂಬ ಶಬ್ದವನ್ನು ಸೇರಿಸಿ ಸ್ಥವಿರಸ್ಯ ನಾಮ ವೌಷಟ್ ಎಂದು ಪಠಿಸುತ್ತಾ ಪಶುವಿನ ವಪಾ ಎಂಬ ಅವಯವವನ್ನು ಅಗ್ನಿಯಲ್ಲಿ ಹೋಮಮಾಡುವನು. ಪ್ರತಿದೇವತೆಯನ್ನೂ ಉದ್ದೇಶಿಸಿ ಹೋಮಮಾಡು ವಾಗಲೂ ಈ ಕ್ರಮವನ್ನನುಸರಿಸಬೇಕು. ಆದರೆ ಪ್ರತಿದೇವತೆಗೂ ಮಂತ್ರಗಳು ಬೇರೆಬೇರೆ. ಇದಲ್ಲದೆ ಹೋಮ ದ್ರವ್ಯವು ಆಜ್ಯ, ಹವಿಸ್ಸು, ಪುರೋಡಾಶ, ವಪಾ ಇತ್ಯಾದಿ ಅನೇಕವಿಧವಾಗಿರುವುದು. ಇದಕ್ಕನುಸಾರವಾಗಿ ಮಂತ್ರಗಳೂ ಬೇರೆಬೇರೆಯಾಗಿರುವವು. ಮೇಲೆ ಕೊಟ್ಟಿರುವ ಉದಾಹರಣೆಯಲ್ಲಿರುವ ಮಂತ್ರಗಳು ವಪಾಹೋಮಕ್ಕೆ ಮಾತ್ರ ಸಂಬಂಧಪಟ್ಟಿರುವ ಮಂತ್ರಗಳಾಗಿವೆ. ಇದರಂತೆ ಪುರೋಡಾಶಹೋಮಕ್ಕೂ ಹವಿಸ್ಸಿನ ಹೋಮಕ್ಕೂ ಪ್ರತ್ಯೇಕ ಮಂತ್ರ ಗಳಿರುವವು. ಮತ್ತು ಬೇರೆ ಬೇರೆ ಯಜ್ಞಗಳಲ್ಲಿಯೂ ಬೇರೆ ಬೇರೆ ಮಂತ್ರಗಳನ್ನು ಉಪಯೋಗಿಸಬೇಕಾಗಿರುವುದು

ಇನ್ನು ವಷಟ್ಕಾರದ ಸ್ವರೂಪ ಮತ್ತು ಸಂಕೇತವೇನು ? ಇದನ್ನು ಮಂತ್ರದ ಕೊನೆಯಲ್ಲಿ ಏತಕ್ಕಾಗಿ ಉಪಯೋಗಿಸಬೇಕು ಎಂಬ ವಿಷಯವನ್ನು ಪರೀಶಿಲಿಸಬೇಕಾಗಿರುವುದು. ಈ ವಿಷಯವಲ್ಲಿ ಐತರೇಯಬ್ರಾಹ್ಮಣದಲ್ಲ ಹೇಳಿರುವ ವಿಸ್ತಾರವಾದ ವಿವರಣೆಯನ್ನೇ ಇಲ್ಲಿ ವಿವರಿಸಲಾಗಿದೆ.—

> ದೇವಪಾತ್ರಂ ವಾ ಏತದ್ಯದ್ವಷಟ್ಕಾರೋ ವಷಟ್ಕರೋತಿ ದೇವಪಾತ್ರೇಣೈವ ತದ್ದೇವತಾಸ್ತ-ರ್ಪಯತಿ ॥
>
> (ಐ. ಬ್ರಾ ೧೧-೫)

ಈಗ ವಷಟ್ಕಾರ ಮತ್ತು ಅನುವಷಟ್ಕಾರಗಳ ಸ್ವರೂಪವನ್ನು ವಿವರಿಸಲಾಗುವುದು. ಹೋಮಮಾಡುವಾಗ ಮಂತ್ರಾಂತ್ಯದಲ್ಲಿ ವೌಷಟ್ ಎಂದು ಪಠಿಸುವ ಶಬ್ದಕ್ಕೆ ವಷಟ್ಕಾರವೆಂದು ಹೆಸರು. ದೇವತೆಗಳಿಗೆ ಹವಿಸ್ಸನ್ನು ಭಕ್ಷಣಾರ್ಥವಾಗಿ ಅರ್ಪಿಸುವಾಗ ಲೋಕವ್ಯವಹಾರದಲ್ಲಿ ರೂಢಿಯಾಗಿರುವಂತೆ ಒಂದು ಪಾತ್ರೆ ಅಥವಾ ತಟ್ಟೆಯಲ್ಲಿ ಇಟ್ಟು ಅರ್ಪಿಸಬೇಕಷ್ಟೆ. ಪಾತ್ರೆಯಲ್ಲಿಟ್ಟು ಅರ್ಪಿಸುವುದರಿಂದ ಅದನ್ನು ಭಕ್ಷಿಸಲು ಅನುಕೂಲವಾಗುವುದು. ಯಜ್ಞದಲ್ಲಿ ದೇವತೆಗಳು ಹವಿಸ್ಸನ್ನು ಭಕ್ಷಿಸುವಾಗ ಅವರು ಅಪ್ರತ್ಯಕ್ಷವಾಗಿರುವುದರಿಂದ ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡುವುದರ ಮೂಲಕ ದೇವತೆಗಳಿಗೆ ಹವಿಸ್ಸು ಅರ್ಪಿತವಾಗುವುದು ಎಂದರೆ ತನ್ನಲ್ಲಿ ದೇವತೆಗಳನು ದ್ದೇಶಿಸಿ ಹೋಮಮಾಡಿದ ಹವಿಸ್ಸನ್ನು ಅಗ್ನಿಯು ದೇವತೆಗಳಿಗೆ ತಲಪಿಸುವನು ಹೋಮಮಾಡುವಾಗ ಹವಿಸ್ಸನ್ನಿಡುವ ಪಾತ್ರೆಯನ್ನು ದೇವತೆಗಳ ಮುಂದೆ ಇಡುವುದು ಹೇಗೆ ? ಇದು ಸಾಧ್ಯವಿಲ್ಲ. ಆದ್ದರಿಂದ ಪಾತ್ರೆಗೆ ಬದಲಾಗಿ ಮಂತ್ರವನ್ನೇ ಪಠಿಸಿ ಅದನ್ನೇ ಪಾತ್ರೆಯೆಂದು ಭಾವಿಸಲಾಗಿರುವುದು. ವೌಷಟ್ ಎಂಬ ಮಂತ್ರವೇ ಈ ಪಾತ್ರೆಯು. ಮಂತ್ರಾಂತ್ಯದಲ್ಲಿ ವೌಷಟ್ ಎಂದು ಉಚ್ಚರಿಸಿದರೆ ಮಂತ್ರಪೂರ್ವಕವಾಗಿ ಅರ್ಪಿಸುವ ಹವಿಸ್ಸನ್ನು ಭಕ್ಷಿಸಲು ಅನುಕೂಲ

ವಾಗುವಂತೆ ಪಾತ್ರೆಯಲ್ಲಿಟ್ಟು ಅರ್ಪಿಸಿದಂತಾಗುವುದು. ಆದ್ದರಿಂದ **ವೌಷಟ್** ಎಂಬ ಶಬ್ದವು ದೇವತೆಗಳಿಗೆ ಪಾನ ಸಾಧನವಾದ ಪಾತ್ರೆಯು. ಈ ಕಾರಣಕ್ಕಾಗಿ ಎಂದರೆ ದೇವತೆಗಳಿಗೆ ಪಾತ್ರೆಯಲ್ಲಿಟ್ಟು ಹವಿಸ್ಸನ್ನು ಅರ್ಪಿಸಿ ತೃಪ್ತಿಪಡಿಸುವುದಕ್ಕಾಗಿಯೇ ಹೋತೃವು ಮಂತ್ರಾಂತ್ಯದಲ್ಲಿ **ವೌಷಟ್** ಎಂಬ ಶಬ್ದವನ್ನು ಸೇರಿಸಿ ಪಠಿಸಿ ಹೋಮಮಾಡುವನು. ಇದೇ ವಷಟ್ಕಾರದ ಶಬ್ದಾರ್ಥವು. ಇನ್ನು ಅನುವಷಟ್ಕಾರದ ಅರ್ಥವನ್ನು ವಿವರಿಸುವರು—

**ಅನುವಷಟ್ಕರೋತಿ ತದ್ಯಥಾಽದೋಽಶ್ವಾನ್ವಾ ಗಾ ವಾ ಪುನರಭ್ಯಾಕಾರಂ ತರ್ಪಯಂತ್ಯೇವ-ಮೇವೈತದ್ದೇವತಾಃ ಪುನರಭ್ಯಾಕಾರಂ ತರ್ಪಯಂತಿ ಯದನುವಷಟ್ಕರೋತಿ ...... ...... ......** ||

(ಐ. ಬ್ರಾ. ೧೧ ೫)

ಲೋಕವ್ಯವಹಾರದಲ್ಲಿ ಜನರು ಅಶ್ವಗಳಿಗೂ, ಗೋವುಗಳಿಗೂ ಇತರ ಪ್ರಾಣಿಗಳಿಗೂ ಹುಲ್ಲು ಮೊದಲಾದ ಆಹಾರವನ್ನು ಅವುಗಳ ಮುಂದಿಟ್ಟು ತಿನ್ನುವಂತೆ ಪ್ರಿಯಶಬ್ದಗಳಿಂದ ಲಾಲಿಸುವಂತೆ ದೇವತೆಗಳಿಗೆ ಅಗ್ನಿಯ ಮೂಲಕವೇ ಹವಿಸ್ಸನ್ನು ಅರ್ಪಿಸಬೇಕಾಗಿರುವುದರಿಂದ—

**ಅಗ್ನೇ ವೀಹಿ ಪುರೋಳಾಶಮಾಹುತಂ ತಿರೋಅಹ್ನ್ಯಂ |**
**ಸಹಸಃ ಸೂನುರಸ್ಯಧ್ವರೇ ಹಿತಃ ||**

(ಋ. ಸಂ. ೩-೨೮-೩)

ಅಥವಾ—

**ಅಗ್ನೇ ವೀಹಿ ಹವಿಷಾ ಯಕ್ಷಿ ದೇವಾನ್ತ್ಸ್ವಧ್ವರಾ ಕೃಣುಹಿ ಜಾತವೇದಃ |**

(ಋ. ಸಂ. ೭-೧೭-೩)

ಎಂಬ ಋಕ್ಕನ್ನು ಪಠಿಸಬೇಕು; ಎಲೈ ಅಗ್ನಿಯೇ, ಈ ಹವಿಸ್ಸನ್ನು ಅಥವಾ ಪುರೋಡಾಶವನ್ನು ಭಕ್ಷಿಸು ಅಥವಾ ಈ ಸೋಮರಸವನ್ನು ಪಾನಮಾಡು. ನಿನ್ನಲ್ಲಿ ಹೋಮಮೂಲಕವಾಗಿ ಅರ್ಪಿಸುವ ಈ ಹವಿಸ್ಸನ್ನು ದೇವತೆಗಳಿಗೆ ತಲುಪಿಸು ಎಂಬರ್ಥವಿರುವ ಈ ಋಕ್ಕನ್ನು ದೇವತೆಗಳ ಪ್ರೀತ್ಯರ್ಥವಾಗಿ ಪಠಿಸಬೇಕು. ಇದಕ್ಕೆ ಅನುವಷಟ್ಕಾರವೆಂದು ಹೆಸರು

**ವಜ್ರೋ ವಾ ಏಷ ಯದ್ವಷಟ್ಕಾರೋ ಯಂ ದ್ವಿಷ್ಯಾತ್ತಂ ಧ್ಯಾಯೇದ್ವಷಟ್ಕರಿಷ್ಯಂಸ್ತಸ್ಮಿನ್ನೇವ ತಂ ವಜ್ರಮಾಸ್ಥಾಪಯತಿ |**

(ಐ. ಬ್ರಾ. ೧೧-೬)

ವಷಟ್ಕಾರವು ವಜ್ರಾಯುಧವಂತಿರುವ ಒಂದು ಪ್ರಬಲವಾದ ಆಯುಧವು. ಯಜ್ಞಮಾಡುವ ಯಜಮಾನನಿಗೆ ಶತ್ರು ವಿದ್ದು ಅವನನ್ನು ನಾಶಮಾಡಬೇಕೆಂಬ ಮನಸ್ಸಿದ್ದರೆ ಈ ವಷಟ್ಕಾರದಿಂದ ಆಹುತಿಯನ್ನರ್ಪಿಸುವಾಗ ಆ ಶತ್ರುವು ನಾಶವಾಗಲಿ ಎಂದು ಮನಸ್ಸಿನಲ್ಲಿ ಧ್ಯಾನಿಸುತ್ತಾ ಹೋಮಮಾಡಿದರೆ ವಷಟ್ಕಾರವು ಆ ಶತ್ರುವನ್ನು ವಜ್ರಾಯುಧದ ಪ್ರಹಾರದಂತೆ ಅವನನ್ನು ಪ್ರಹರಿಸಿ ಸಂಹರಿಸುವುದು.

**ಷಳಿತಿ ವಷಟ್ಕರೋತಿ ಷಡ್ವಾ ಋತವಃ ಋತೂನೇವ ತತ್ಕಲ್ಪಯತ್ಯೃತೂನ್ಪ್ರತಿಷ್ಠಾಪಯತ್ಯೃ-ತೂನ್ಪ್ರತಿತಿಷ್ಠತ ಇದಂ ಸರ್ವಮನು ಪ್ರತಿತಿಷ್ಠತಿ ಯದಿದಂ ಕಿಂಚ ||**

**ವೌಷಟ್** ಎಂಬ ಶಬ್ದದಲ್ಲಿ **ಷಟ್** ಎಂಬ ಪದವಿರುವುದಷ್ಟೆ. ಇಲ್ಲಿ ಷಟ್ ಎಂದರೆ ಆರು ಋತುಗಳು ಎಂದರ್ಥವು.

ಎಂದು ವರ್ಷದಲ್ಲಿ ಆರು ಋತುಗಳಿರುವವು. ಆದ್ದರಿಂದ ವಷಟ್ಕಾರದಿಂದ ಹವಿಸ್ಸನ್ನರ್ಪಿಸಿದರೆ ಅವನು ಆರು ಋತು ಗಳನ್ನು ತೃಪ್ತಿಪಡಿಸಿದಂತಾಗುವುದು. ಇಷ್ಟೇ ಅಲ್ಲ, ಎಲ್ಲವನ್ನೂ ತೃಪ್ತಿಪಡಿಸಿದಂತಾಗುವುದರಿಂದ ಅವನು ಸಮಸ್ತ ಕಾರ್ಯಗಳಲ್ಲಿಯೂ ಜಯಶೀಲನಾಗುವನು. ಈ ವಿಷಯವನ್ನೇ ಮುಂದಿನ ವಾಕ್ಯದಲ್ಲಿ ವಿಸ್ತಾರವಾಗಿ ವಿವರಿಸುವರು.

ಪ್ರತಿತಿಷ್ಠತಿ ಯ ಏವಂ ವೇದ ತದು ಹ ಸ್ಮಾಹ ಹಿರಣ್ಯದನ್ಬೈದ ಏತಾನಿ ವಾ ಏತೇನ ಷಟ್ ಪ್ರತಿಷ್ಠಾಪಯತಿ ದ್ಯೌರಂತರಿಕ್ಷೇ ಪ್ರತಿಷ್ಠಿತಾನ್ತರಿಕ್ಷಂ ಪೃಥಿವ್ಯಾಂ ಪೃಥಿವ್ಯಪ್ಸ್ವಾಪಃ ಸತ್ಯೇ ಸತ್ಯಂ ಬ್ರಹ್ಮಣಿ ಬ್ರಹ್ಮ ತಪಸೀತ್ಯೇತಾ ಏವ ತತ್ಪ್ರತಿಷ್ಠಾಃ ಪ್ರತಿತಿಷ್ಠಂತೀರಿದಂ ಸರ್ವಮನು ಪ್ರತಿತಿಷ್ಠತಿ ಯದಿದಂ ಕಿಂಚ ಪ್ರತಿತಿಷ್ಠತಿ ಯ ಏವಂ ವೇದ........ ॥

(ಐ. ಬ್ರಾ. ೧೧.೬)

ಸುವರ್ಣಮಯವಾದ ದಂತಪಂಕ್ತಿಗಳುಳ್ಳ ಬಿದಋಷಿಯ ಪುತ್ರನು ಈ ವಿಷಯದಲ್ಲಿ ಈ ರೀತಿ ಹೇಳಿರುವನು—ಸ್ವರ್ಗ ಲೋಕವೇ ಮೊದಲಾದ ಬ್ರಹ್ಮದವರೆಗಿನ ಆರುಸ್ಥಾನಗಳನ್ನು ವಷಟ್ಕಾರದಿಂದ ಹೋತೃವು ಪ್ರತಿಷ್ಠಿಸಿದಂತಾಗುವುದು. ಎಂದರೆ, ಸ್ವರ್ಗದ ಕೆಳಭಾಗದಲ್ಲಿ ಅಂತರಿಕ್ಷವಿರುವುದರಿಂದ ಅಂತರಿಕ್ಷದ ಮೇಲೆ ಸ್ವರ್ಗವಿದ್ದಂತಾಯಿತು. ಹಾಗೆಯೇ ಅಂತರಿಕ್ಷವು ಪೃಥಿವಿಯ ಮೇಲೆಯೂ, ಪೃಥಿವಿಯು ಕೆಳಭಾಗದಲ್ಲಿರುವ ನೀರಿನ ಮೇಲೆಯೂ, ನೀರು ಸತ್ಯದಮೇಲೆಯೂ ಪ್ರತಿಷ್ಠಿತವಾಗಿದೆ. ಜನರು ಸತ್ಯವಾದಿಗಳಾಗಿದ್ದಲ್ಲಿ ಕಾಲಕಾಲಕ್ಕೆ ಮಳೆಯಾಗುವುದು ಸಂಭವವು. ಆದ್ದರಿಂದ ಸತ್ಯದಲ್ಲಿ ನೀರು ಪ್ರತಿಷ್ಠಿತವಾಗಿದೆ ಎಂದು ಹೇಳಿದೆ ಆ ಸತ್ಯವು ಬ್ರಹ್ಮನಲ್ಲಿ (ವೇದದಲ್ಲಿ)ಯೂ ಬ್ರಹ್ಮವು ವಷಟ್ಕಾರ ಮಂತ್ರರೂಪವಾದ ತಪಸ್ಸಿನಲ್ಲಿಯೂ ಪ್ರತಿಷ್ಠಿತವಾಗಿದೆ. ಆದ್ದರಿಂದ ವಷಟ್ಕಾರದಲ್ಲಿ ಸಮಸ್ತ ಜಗತ್ತೂ ನೆಲೆಸಿರುವುದೆಂದು ತಿಳಿಯಬೇಕು. ಈ ವಿಷಯವನ್ನು ಯಾವ ಪುರುಷನು ತಿಳಿದಿರುವನೋ ಅವನು ಸರ್ವವನ್ನೂ ಜಯಿಸಿದಂತಾಗುವುದು.

ವಷಟ್ಕಾರಗಳಲ್ಲಿ ಮೂರು ಪ್ರಭೇದಗಳಿರುವವು, ಅವುಗಳ ಸ್ವರೂಪವನ್ನು ವಿವರಿಸುವರು.—

ತ್ರಯೋ ವೈ ವಷಟ್ಕಾರಾ ವಜ್ರೋ ಧಾಮಚ್ಛದ್ರಿಕ್ತಃ ।

(ಐ. ಬ್ರಾ. ೧೧.೭)

ವಷಟ್ಕಾರಗಳಲ್ಲಿ ವಜ್ರ, ಧಾಮಚ್ಛತ್, ರಿಕ್ತ ಎಂದು ಮೂರು ವಿಧವು.

ಸ ಯಮೇವೋಚ್ಚೈರ್ಬಲಿ ವಷಟ್ಕರೋತಿ ಸ ವಜ್ರಃ । ತಂ ತಂ ಪ್ರಹರತಿ ದ್ವಿಷತೇ ಭ್ರಾತೃ- ವ್ಯಾಯ ವಧಂ ಯೋಽಸ್ಯ ಸ್ತೃತ್ಯಸ್ತಸ್ಮೈ ಸ್ತರ್ತವೇ ತಸ್ಮಾತ್ಸ ಭ್ರಾತೃವ್ಯವತಾ ವಷಟ್ಕೃತ್ಯಃ ॥

ಈ ವಷಟ್ಕಾರವನ್ನು ಹೋತೃವು ಘಟ್ಟಿಯಾದ ಧ್ವನಿಯಲ್ಲಿ ಉಚ್ಚರಿಸುವುದರಿಂದ ಇದಕ್ಕೆ ವಜ್ರವೆಂಬ ಹೆಸರು ಬಂದಿರುವುದು. ಯಜ್ಞಮಾಡುವ ಯಜಮಾನನು ಯಾವಾಗ ತನಗೆ ಶತ್ರುಗಳಾದವರನ್ನು ಸಂಹಾರಮಾಡಬೇಕೆಂದು ಅಪೇಕ್ಷಿಸುವನೋ ಆಗ ಈ ವಷಟ್ಕಾರವನ್ನು ಪ್ರಯೋಗಿಸುವುದರಿಂದ ಅದು ವಜ್ರಾಯುಧರೂಪದಿಂದ ಯಜಮಾನನ ಶತ್ರುವನ್ನು ಪ್ರಹರಿಸಿ ನಾಶಮಾಡುವುದು. ಆದುದರಿಂದ ಶತ್ರುನಾಶವನ್ನು ಅಪೇಕ್ಷಿಸುವ ಯಜಮಾನನು ವಜ್ರರೂಪ ವಾದ ಈ ವಷಟ್ಕಾರವನ್ನು ಉಪಯೋಗಿಸಬೇಕು.

ಅಥ ಯಃ ಸಮಃ ಸಂತತೋಽನಿರ್ಹಾಣರ್ಚಃ ಸ ಧಾಮಚ್ಛತ್ । ತಂ ತಂ ಪ್ರಜಾಶ್ಚ ಪಶವ- ಶ್ಚಾನೂಪತಿಷ್ಠಂತೇ ತಸ್ಮಾತ್ಸ ಪ್ರಜಾಕಾಮೇನ ಪಶುಕಾಮೇನ ವಷಟ್ಕೃತ್ಯಃ ॥

ಇಲ್ಲಿ ವಷಟ್ಕಾರವನ್ನು ಉಚ್ಚರಿಸುವ ವಿಧಾನದಲ್ಲಿ ವಿವರಣೆಯು ಅವಶ್ಯಕವು. ಯಾಜ್ಯಾಮಂತ್ರದ ಕೊನೆಯಲ್ಲಿ ವೌಷಟ್ ಎಂಬ ಶಬ್ದವನ್ನು ಸೇರಿಸಿ ಪಠಿಸಬೇಕೆಂದು ಹಿಂದೆಯೇ ತಿಳಿಸಲಾಗಿದೆಯಷ್ಟೆ. ಈ ಸಂದರ್ಭದಲ್ಲಿ ವೌಷಟ್ ಎಂಬ ವಷಟ್ಕಾರವನ್ನು ಉಚ್ಚರಿಸುವುದರಲ್ಲಿ ವಜ್ರ, ಧಾಮಚ್ಛತ್, ರಿಕ್ತ ಎಂಬ ವಷಟ್ಕಾರದ ಮೂರು ಪ್ರಭೇದಗಳಿಗನುಸಾರ ವಾಗಿ ಮೂರು ವಿಧವಾಗಿ ಉಚ್ಚರಿಸಬೇಕಾಗಿರುವುದು. ವಜ್ರವೆಂಬ ವಷಟ್ಕಾರವನ್ನು ಉಪಯೋಗಿಸುವಾಗ ಯಾಜ್ಯಾ ಮಂತ್ರವನ್ನು ಸಾಧಾರಣ ಧ್ವನಿಯಿಂದ ಉಚ್ಚರಿಸುತ್ತಾ ಕೊನೆಯಲ್ಲಿ ವೌಷಟ್ ಎಂಬುದನ್ನು ಘಟ್ಟಿಯಾದ ಧ್ವನಿಯಲ್ಲಿ ಉಚ್ಚರಿಸಬೇಕು ಮತ್ತು ಯಾಜ್ಯಾಮಂತ್ರದ ಕೊನೆಯ ಅಕ್ಷರಕ್ಕೆ ಓಂಕಾರವನ್ನು ಸೇರಿಸಿ ಎಂದರೆ ಕೊನೆಯ ಅಕ್ಷರ ವನ್ನು ಓಂಕಾರಸ್ವರೂಪದಿಂದ ಕೂಡಿರುವಂತೆ ಉಚ್ಚರಿಸಿ ಅನಂತರ ವೌಷಟ್ ಎಂಬುದನ್ನು ಘಟ್ಟಿಯಾದ ಧ್ವನಿಯಿಂದ ಉಚ್ಚರಿಸಬೇಕು. ಹಿಂದೆ ಉದಾಹರಣೆಯಾಗಿ ಕೊಟ್ಟಿರುವ.—

> ತ್ರಿರ್ದೇವಃ ಪೃಥಿವೀಮೇಷ ಏತಾಂ ವಿ ಚಕ್ರಮೇ ಶತರ್ಚಸಂ ಮಹಿತ್ವಾ ।
> ಪ್ರ ವಿಷ್ಣುರಸ್ತು ತವಸಸ್ತವೀಯಾನ್ತ್ವೇಷಂ ಹ್ಯಸ್ಯ ಸ್ಥವಿರಸ್ಯ ನಾಮ ॥

ಎಂಬ ಋಕ್ಕಿನಲ್ಲಿ ಕೊನೆಯ ಭಾಗವು **ಸ್ಥವಿರಸ್ಯ ನಾಮ** ಎಂದಿರುವುದು. ಇದಕ್ಕೆ ಓಂಕಾರವನ್ನು ಸೇರಿಸಿದರೆ **ಸ್ಥವಿರಸ್ಯ ನಾಮೋಂ** ಎಂದಾಗುವುದು. ಈ ರೀತಿ ಈ ಋಕ್ಕನ್ನು **ಸ್ಥವಿರಸ್ಯ ನಾಮೋಂ** ಎಂದು ಸಮಧ್ವನಿಯಿಂದ ಉಚ್ಚರಿಸಿ ಅನಂತರ **ವೌಷಟ್** ಎಂಬ ಶಬ್ದವನ್ನು ಘಟ್ಟಿಯಾದ ಧ್ವನಿಯಿಂದ ಉಚ್ಚರಿಸಬೇಕು. ಈ ಕ್ರಮವು ವಜ್ರವೆಂಬ ವಷ ಟ್ಕಾರವನ್ನು ಉಚ್ಚರಿಸುವ ವಿಧಾನವು. ಈಗ ಧಾಮಚ್ಛತ್ ಎಂಬ ವಷಟ್ಕಾರವನ್ನು ಉಚ್ಚರಿಸಬೇಕಾದರೆ ಯಾಜ್ಯಾ ಮಂತ್ರವನ್ನು ಯಾವ ವ್ಯತ್ಯಾಸವೂ ಇಲ್ಲದಂತೆ ಎಂದರೆ **ಸ್ಥವಿರಸ್ಯ ನಾಮ** ಎಂದು ಮಾತ್ರ ಉಚ್ಚರಿಸಿ (ಕೊನೆಯಲ್ಲಿ ಓಂಕಾರವಿಲ್ಲದೆ) ಅನಂತರ ವೌಷಟ್ ಎಂಬ ಶಬ್ದವನ್ನು ಪಠಿಸಬೇಕು. ಇದು ಧಾಮಚ್ಛತ್ ಎಂಬ ವಷಟ್ಕಾರವನ್ನು ಉಚ್ಚರಿಸುವ ಕ್ರಮವು ಪ್ರಜೆಗಳನ್ನೂ, ಪಶುಗಳನ್ನೂ ಅಪೇಕ್ಷಿಸುವ ಯಜಮಾನನು ಈ ವಿಧವಾದ ಧಾಮಚ್ಛತ್ ಎಂಬ ವಷಟ್ಕಾರವಿಧಾನದಿಂದ ಹೋಮಮಾಡಬೇಕು.

> ಅಥ ಯೇನೈವ ಷಳವರಾಧ್ನೋತಿ ಸ ರಿಕ್ತಃ । ರಿಣಕ್ತ್ಯಾತ್ಮಾನಂ ರಿಣಕ್ತಿ ಯಜಮಾನಂ ಪಾಪೀ- ಯಾನ್ವಷಟ್ಕರ್ತಾ ಭವತಿ ಪಾಪೀಯಾನ್ಯಸ್ಮೈ ವಷಟ್ಕರೋತಿ ತಸ್ಮಾತ್ತಸ್ಯಾಶಾಂ ನೇಯಾತ್

ವೌಷಟ್ ಶಬ್ದವನ್ನು ಉಚ್ಚರಿಸುವಾಗ ಷಟ್ ಎಂಬ ಪದವನ್ನು ಮೆಲ್ಲಗೆ ಅಲ್ಪಧ್ವನಿಯಿಂದ ಉಚ್ಚರಿಸಿದರೆ ಆ ವಷಟ್ಕಾ ರವು ರಿಕ್ತವೆನಿಸುವುದು ರಿಕ್ತವೆಂದರೆ ಇಲ್ಲದಿರುವುದು ಎಂದರ್ಥವು. ಆದ್ದರಿಂದ ಈ ರಿಕ್ತವಷಟ್ಕಾರದಿಂದ ಹೋಮ ಮಾಡಿದರೆ ಯಜ್ಞಮಾಡುವ ಯಜಮಾನನಿಗೆ ಏನೂ ಇಲ್ಲದ ರಿಕ್ತದೆಶೆಯುಂಟಾಗುವುದಲ್ಲದೆ ಪಾಪವು ಸಂಭವಿಸುವುದು. ಹೋಮವನ್ನು ಮಾಡಿಸುವ ಋತ್ವಿಜನೂ ಪಾಪಿಷ್ಠನೇ ಆಗುವನು. ಆದ್ದರಿಂದ ಶ್ರೇಯಸ್ಸನ್ನು ಬಯಸುವ ಯಜ ಮಾನನಾಗಲಿ, ಋತ್ವಿಜನಾಗಲಿ ಈ ರಿಕ್ತವಷಟ್ಕಾರವನ್ನು ಯಾವಾಗಲೂ ಉಪಯೋಗಿಸಬಾರದು.

> ಕಿಂ ಸ ಯಜಮಾನಸ್ಯ ಪಾಪಭದ್ರಮಾದ್ರಿಯೇತೇತಿ ಹ ಸ್ಮಾಹ ಯೋಽಸ್ಯ ಹೋತಾ ಸ್ಯಾದಿತ್ಯ- ತ್ರೈವೈನಂ ಯಥಾ ಕಾಮಯೇತ ತಥಾ ಕುರ್ಯಾತ್ । ಯಂ ಕಾಮಯೇತ ಯಥೈವಾನೀ- ಜಾನೋಽಭೂತ್ತಥೈವೇಜಾನಃ ಸ್ಯಾದಿತಿ ಯಥೈವಾಸ್ಯ ಋಚಂ ಬ್ರೂಯಾತ್ತಥೈವಾಸ್ಯ ವಷಟ್ಕುರ್ಯಾತ್ಸದೃಶಮೇವೈನಂ ತತ್ಕರೋತಿ ॥

ಯಜ್ಞದಲ್ಲಿ ಮುಖ್ಯಪಾತ್ರವನ್ನು ವಹಿಸುವ ಹೋತೃವೆಂಬ ಋತ್ವಿಜನು ಯಜ್ಞಮಾಡುವ ಯಜಮಾನನಿಗೆ ಶುಭವನ್ನಾಗಲಿ ಅಶುಭವನ್ನಾಗಲಿ ಮಾಡಬೇಕೆಂದು ಇಷ್ಟಪಟ್ಟರೆ ಅದರಂತೆ ಮಾಡಬಹುದು. ಹೋತೃವು ಯಾವರೀತಿ ಇಷ್ಟಪಟ್ಟರೆ ಆರೀತಿ ಮಾಡಬಹುದು. ಹೇಗೆಂದರೆ ಯಜಮಾನನಿಗೆ ಯಜ್ಞಮಾಡಿದ್ದಕ್ಕೆ ಸರಿಯಾದ ಫಲವು ಲಭಿಸಬಾರದೆಂದು ಹೋತೃವಿಗೆ ಇಷ್ಟವಿದ್ದರೆ ಆಗ ಹೋತೃವು ಯಾಜ್ಯಾಮಂತ್ರವನ್ನು ಸಾಧಾರಣರೀತಿಯಲ್ಲಿ ಉಚ್ಚರಿಸಿ ವಷಟ್ಕಾರವನ್ನು ಘಟ್ಟಿಯಾಗಿ ಉಚ್ಚರಿಸುವುದಕ್ಕೆ ಬದಲಾಗಿ ಯಾಜ್ಯಾ ಮತ್ತು ವಷಟ್ಕಾರಮಂತ್ರಗಳನ್ನು ಸಮನಾದ ಒಂದೇ ಧ್ವನಿಯಿಂದ ಉಚ್ಚರಿಸಿದರೆ ಯಜಮಾನನಿಗೆ ಯಜ್ಞಮಾಡಿದ ಫಲವು ಲಭಿಸುವುದಿಲ್ಲ.

**ಯಂ ಕಾಮಯೇತ ಪಾಪೀಯಾನ್ತ್ಸ್ಯಾದಿತ್ಯುಚ್ಚೈಸ್ತರಾಮಸ್ಯ ಋಚಮುಕ್ತ್ವಾ ಶನೈಸ್ತರಾಂ ವಷಟ್ಕುರ್ಯಾತ್ಪಾಪೀಯಾಂಸಮೇವೈನಂ ತತ್ಕರೋತಿ**

ಯಜಮಾನನಿಗೆ ಯಜ್ಞಫಲವು ಲಭಿಸದೆ ಪಾಪವು ಮಾತ್ರ ಸಂಭವಿಸಬೇಕೆಂದು ಹೋತೃವಿನ ಇಷ್ಟವಾದರೆ ಆಗ ಅವನು ಯಾಜ್ಯಾಮಂತ್ರದ ಋಕ್ಕನ್ನು ಘಟ್ಟಿಯಾದ ಧ್ವನಿಯಲ್ಲಿಯೂ ವಷಟ್ಕಾರವನ್ನು ಮೆತ್ತನೆಯ ಧ್ವನಿಯಲ್ಲಿಯೂ ಪಠಿಸಬೇಕು. ಹೀಗೆ ಮಾಡಿದರೆ ಯಜಮಾನನಿಗೆ ಪಾಪವು ಸಂಭವಿಸುವುದು.

**ಯಂ ಕಾಮಯೇತ ಶ್ರೇಯಾನ್ತ್ಸ್ಯಾದಿತಿ ಶನೈಸ್ತರಾಮಸ್ಯ ಋಚಮುಕ್ತ್ವೋಚ್ಚೈಸ್ತರಾಂ ವಷಟ್ಕುರ್ಯಾಚ್ಛ್ರಿಯ ಏವೈನಂ ತಚ್ಛ್ರಿಯಮಾದಧಾತಿ ।**

ಹಾಗಲ್ಲವೆ ಯಜಮಾನನಿಗೆ ಶ್ರೇಯಸ್ಸುಂಟಾಗಬೇಕೆಂದು ಹೋತೃವು ಬಯಸಿದಲ್ಲಿ ಆಗ ಯಾಜ್ಯಾಮಂತ್ರವನ್ನು ಮೆತ್ತನೆಯ ಧ್ವನಿಯಲ್ಲಿಯೂ ವಷಟ್ಕಾರವನ್ನು ಘಟ್ಟಿಯಾದಧ್ವನಿಯಲ್ಲಿಯೂ ಉಚ್ಚರಿಸಬೇಕು. ಹೀಗೆ ಮಾಡಿದರೆ ಯಜಮಾನನಿಗೆ ಶ್ರೇಯಸ್ಸುಂಟಾಗುವುದು,

**ಸಂತತಮೃಚಾ ವಷಟ್ಕೃತ್ಯಂ ಸಂತತ್ಯೈ । ಸಂಧೀಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥**

(ಐ. ಬ್ರಾ. ೧೧-೭)

ಯಾಜ್ಯಾಮಂತ್ರವನ್ನೂ ವಷಟ್ಕಾರವನ್ನೂ ಉಚ್ಚರಿಸುವಾಗ ಮುಖ್ಯವಾದ ಒಂದು ವಿಷಯವನ್ನು ಗಮನಿಸಬೇಕು. ಯಾಜ್ಯಾಮಂತ್ರವನ್ನು ಕೊನೆಯವರೆಗೂ ಉಚ್ಚರಿಸಿ ಅನಂತರ ಸ್ವಲ್ಪವಿರಾಮವಾದಮೇಲೆ ವಷಟ್ಕಾರವನ್ನು ಉಚ್ಚರಿಸಕೂಡದು. ವಷಟ್ಕಾರವನ್ನು ಯಾಜ್ಯಾಮಂತ್ರದ ಒಂದು (ಕೊನೆಯ) ಭಾಗವೆಂದೇ ಭಾವಿಸಿ ಋಕ್ಕಿನ ಪ್ರಾರಂಭದಿಂದ ವೌಷಟ್ ಎನ್ನುವವರೆಗೂ ಮಧ್ಯೆ ಎಲ್ಲಿಯೂ ಸ್ವಲ್ಪವೂ ನಿಲ್ಲಿಸದೆ ಸಂತತಧಾರಾಕಾರವಾಗಿ ಉಚ್ಚರಿಸಬೇಕು. ಈ ವಿಷಯವನ್ನು ತಿಳಿದಿರುವವನು ಪ್ರಜೆಗಳನ್ನೂ ಪಶುಸಂಪತ್ತನ್ನೂ ಪಡೆದು ಸುಖಿಸುವನು.

ಹೋತೃವು ವಷಟ್ಕಾರವನ್ನು ಪಠಿಸುವಾಗ ಅನುಸರಿಸಬೇಕಾದ ಕೆಲವು ನಿಯಮಗಳಿರುವವು. ಅವುಗಳನ್ನು ತಪ್ಪದೆ ಪಾಲಿಸಬೇಕು. ಇಲ್ಲದಿದ್ದರೆ ಹರಿತವಾದ ಆಯುಧಪ್ರಯೋಗದಿಂದ ಅಪಾಯವು ಸಂಭವಿಸುವಂತೆ ವಷಟ್ಕಾರ ಪ್ರಯೋಗದಿಂದ ಅನಿಷ್ಟವು ಸಂಭವಿಸುವುದು—

**ಯಸ್ಯೈ ದೇವತಾಯೈ ಹವಿರ್ಗೃಹೀತಂ ಸ್ಯಾತ್ತಾಂ ಧ್ಯಾಯೇದ್ವಷಟ್ಕರಿಷ್ಯನ್ಸಾಕ್ಷಾದೇವ ತದ್ದೇವತಾಂ ಪ್ರೀಣಾತಿ ಪ್ರತ್ಯಕ್ಷಾದ್ದೇವತಾಂ ಯಜತಿ ॥**

(ಐ. ಬ್ರಾ. ೧೧-೮)

ಹೋತೃವು ಯಾವ ದೇವತೆಯನ್ನುದ್ದೇಶಿಸಿ ವಷಟ್ಕಾರದಿಂದ ಹೋಮಮಾಡುವನೋ ಆ ದೇವತೆಯನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಮಂತ್ರೋಚ್ಚಾರಣೆಮಾಡಿ ವಷಟ್ಕಾರದಿಂದ ಹೋಮಮಾಡಬೇಕು. ಹೀಗೆ ಮಾಡಿದರೆ ದೇವತೆಯನು ಪ್ರತ್ಯಕ್ಷವಾಗುವಂತೆ ಸಾಕ್ಷಾತ್ಕರಿಸಿ ತೃಪ್ತಿಪಡಿಸಿದಂತಾಗುವುದು. ದೇವತೆಗಳನ್ನು ಪ್ರತ್ಯಕ್ಷವಾಗಿ ನೋಡುವುದು ಎಂದರೆ ಸಾಕ್ಷಾತ್ಕರಿಸುವುದು ಸಾಧ್ಯವೇ ಎಂದರೆ, ಪ್ರತ್ಯಕ್ಷವಾಗಿ ಕಣ್ಣುಗಳಿಂದ ನೋಡುವುದು ಸಾಧ್ಯವಿಲ್ಲ. ಆದರೆ ಮನಸ್ಸಿನಲ್ಲಿ ಧ್ಯಾನಿಸುವುದರಿಂದ ಆ ದೇವತೆಯು ತನ್ನ ಎದುರಿಗೆ ಪ್ರತ್ಯಕ್ಷವಾಗಿರುವಂತೆ ಮನಸ್ಸಿನಲ್ಲಿ ಭಾವಿಸಬಹುದು. ಇದನ್ನೇ ಪ್ರತ್ಯಕ್ಷವೆಂದು ಹೇಳಬಹುದು.

**ವಜ್ರೋ ವೈ ವಷಟ್ಕಾರಃ ಸ ಏಷ ಪ್ರಹೃತೋಽಶಾಂತೋ ದೀದಾಯ ತಸ್ಯ ಹೈತಸ್ಯ ನ ಸರ್ವ ಇವ ಶಾಂತಿಂ ವೇದ ನ ಪ್ರತಿಷ್ಠಾಂ ತಸ್ಮಾದ್ಧಾಪ್ಯೇತರ್ಹಿ ಭೂಯಾನಿವ ಮೃತ್ಯುಸ್ತಸ್ಯ ಹೈಷೈವ ಶಾಂತಿರೇಷಾ ಪ್ರತಿಷ್ಠಾ ವಾಗಿತ್ಯೇವ ತಸ್ಮಾದ್ವಷಟ್ಕೃತ್ಯ ವಾಗಿತ್ಯನುಮಂತ್ರಯೇತ ಸ ಏನಂ ಶಾಂತೋ ನ ಹಿನಸ್ತಿ ॥**

ವಷಟ್ಕಾರವು ವಜ್ರಾಯುಧದಂತೆ ತೀಕ್ಷ್ಣವಾದುದೆಂದೂ ಅದನ್ನು ಸರಿಯಾಗಿ ಉಪಯೋಗಿಸದಿದ್ದರೆ ಹಾನಿಯು ತಟ್ಟುವುದೆಂದೂ ಹಿಂದೆಯೇ ಹೇಳಿದೆಯಷ್ಟೆ. ಇದರ ಉಪಯೋಗವನ್ನು ಎಲ್ಲರೂ ತಿಳಿದಿರುವುದಿಲ್ಲ. ಇದರ ಕ್ರಮವನ್ನು ತಿಳಿಯದೆ ಮನಸ್ವಿಯಾಗಿ ಉಪಯೋಗಿಸುವುದರಿಂದ ಯುದ್ಧಗಳಲ್ಲಿ ಅನೇಕರು ಮೃತ್ಯುವಶರಾಗುವಂತೆ ಇಲ್ಲಿಯೂ ವಷಟ್ಕಾರಮಂತ್ರದ ಅಪಪ್ರಯೋಗದಿಂದ ಅನೇಕರಿಗೆ ಹಾನಿಯು ತಟ್ಟಬಹುದು. ಆದುದರಿಂದ ಇದರ ಶಾಂತ್ಯರ್ಥವಾಗಿ ವಾಗೋಜಃ ಎಂಬ ಮಂತ್ರವನ್ನು ಪಠಿಸಬೇಕು. ಈ ಮಂತ್ರವನ್ನು ಉಚ್ಚರಿಸುವುದರಿಂದ ವಷಟ್ಕಾರದ ಅಪಪ್ರಯೋಗದಿಂದುಂಟಾಗಬಹುದಾದ ಅನಿಷ್ಟವು ಪರಿಹಾರವಾಗುವುದು. ಅನಿಷ್ಟಪರಿಹಾರಕ್ಕೆ ಇದಲ್ಲದೆ ಬೇರೆ ಉಪಾಯವಿಲ್ಲ. ಆದ್ದರಿಂದ ಯಜ್ಞಮಾಡುವಕಾಲದಲ್ಲಿ ಪ್ರತಿಯೊಂದುಸಲ ವಷಟ್ಕಾರಾನಂತರದಲ್ಲಿಯೂ ವಾಗೋಜಃ ಎಂಬ ಮಂತ್ರವನ್ನು ಉಚ್ಚರಿಸಬೇಕು. ಹೀಗೆ ಮಾಡುತ್ತಿದ್ದರೆ ವಜ್ರಸಮಾನವಾದ ವಷಟ್ಕಾರದಿಂದ ಯಾವ ಕೆಡಕೂ ಆಗುವುದಿಲ್ಲ. ಈ ರೀತಿ ಹೇಳುವುದು ಕೆಲವರ ಮತವು. ಇನ್ನು ಕೆಲವರು ಬೇರೆ ವಿಧವಾಗಿ ಹೇಳುವರು.

**ವಷಟ್ಕಾರ ಮಾ ಮಾಂ ಪ್ರಮೃಕ್ಷೋ ಮಾಹಂ ತ್ವಾಂ ಪ್ರಮೃಕ್ಷಂ ಬೃಹತಾ ಮನ ಉಪಹ್ವಯೇ ವ್ಯಾನೇನ ಶರೀರಂ ಪ್ರತಿಷ್ಠಾಸಿ ಪ್ರತಿಷ್ಠಾಂ ಗಚ್ಛ ಪ್ರತಿಷ್ಠಾಂ ಮಾ ಗಮಯೇತಿ ವಷಟ್ಕಾರಮನುಮಂತ್ರಯೇತ ॥**

ಯಜ್ಞಮಾಡುವ ಯಜಮಾನನು ಅನುಮಂತ್ರಣ (ಶಾಂತಿ) ವನ್ನು ಕುರಿತು ಈ ರೀತಿ ಹೇಳಬೇಕು—ಎಲೈ ವಷಟ್ಕಾರವೇ, ನೀನು ಯಜ್ಞಮಾಡುತ್ತಿರುವ ನನ್ನನ್ನು ಆಚೆಗೆ ತಳ್ಳಿ ನಾಶಮಾಡಬೇಡ, ನಾನೂ ನಿನ್ನನ್ನು ನೂಕುವುದಿಲ್ಲ- ನಾನು ಈ ಮಹಾಯಜ್ಞಕರ್ಮದಿಂದ ನಿನ್ನ ಮನಸ್ಸನ್ನು ಒಲಿಸಿಕೊಳ್ಳುತ್ತೇನೆ. ವ್ಯಾನಾದಿವಾಯುಗಳಿಂದ ನಿನ್ನ ಶರೀರವನ್ನು ವ್ಯಾಪಿಸಿ ನಿನ್ನೊಡನೆ ಸಹಕರಿಸುತ್ತೇನೆ. ನೀನು ಸಮಸ್ತ ಪ್ರಾಣಿಸಮೂಹಕ್ಕೂ ಆಶ್ರಯಭೂತನಾಗಿರುವೆ. ಆದ್ದರಿಂದ ನೀನು ನಿನ್ನ ಶ್ರೇಷ್ಠವಾದ ಸ್ವಸ್ಥಾನಕ್ಕೆ ತೆರಳು. ನಾನೂ ಸಹ ನನ್ನ ಸ್ವಸ್ಥಾನಕ್ಕೆ ಹೋಗುವಂತೆ ಅನುಗ್ರಹಿಸು ಎಂದು ಯಜಮಾನನು ಪ್ರಾರ್ಥಿಸಬೇಕು.

**ತದು ಹ ಸ್ಮಾಹ ದೀರ್ಘಮೇತತ್ಸದಪ್ರಭ್ವೋಜಃ ಸಹ ಓಜಃ । ಇತ್ಯೇವ ವಷಟ್ಕಾರಮನುಮಂತ್ರ-**

**ಯೇತ । ಓಜಶ್ಚ ಹ ವೈ ಸಹಶ್ಚ ವಷಟ್ಕಾರಸ್ಯ ಪ್ರಿಯತಮೇ ತನ್ವೌ ಪ್ರಿಯೇಣೈವೈನಂ ತದ್ಧಾಮ್ನಾ ಸಮರ್ಧಯತಿ ಪ್ರಿಯೇಣ ಧಾಮ್ನಾ ಸಮೃಧ್ಯತೇ ಯ ಏವಂ ವೇದ ॥**

ಬ್ರಹ್ಮವಾದಿಗಳಾದ ಕೆಲವರು, ಈ ಮಂತ್ರವು ಬಹುದೀರ್ಘವಾಗಿರುವುದು ಆದ್ದರಿಂದ ಇದನ್ನು ಪಠಿಸುವುದು ತುಂಬಾ ಶ್ರಮವು. ಅದಲ್ಲದೆ ಇದು ವಜ್ರರೂಪವಾದ ವಷಟ್ಕಾರವನ್ನು ಶಮನಗೊಳಿಸುವುದೋ ಇಲ್ಲವೋ ? ಆದ್ದರಿಂದ ಚಿಕ್ಕದಾಗಿಯೂ ವಷಟ್ಕಾರವನ್ನು ಶಮನಗೊಳಿಸುವುದೂ ಆದ ಓಜಃ ಸಹ ಓಜಃ ಎಂಬ ಮಂತ್ರವನ್ನು ಪಠಿಸಬಹುದು. ಈ ಮಂತ್ರದಲ್ಲಿ ಮೂರು ಶಬ್ದಗಳು ಮಾತ್ರ ಇರುವವು, ಓಜಃ ಎಂದರೆ ಸಾಮರ್ಥ್ಯವು ಸಹಃ ಎಂದರೆ ಬಲವು ಇವೆರಡೂ ವಷಟ್ಕಾರದ ಪ್ರಿಯಶರೀರಗಳೆಂದು ಹೇಳಲ್ಪಡುವವು. ಹೀಗೆ ವಷಟ್ಕಾರಕ್ಕೆ ಪ್ರೀತಿಪಾತ್ರವಾದ ಶರೀರಗಳನ್ನು ಉಚ್ಚರಿಸುವುದರಿಂದ ವಷಟ್ಕಾರಕ್ಕೆ ಮಂತ್ರನ್ಯೂನತೆ ಮೊದಲಾದವುಗಳಿಂದ ಸಂಭವಿಸುವ ಕೋಪಾದಿಗಳು ಶಮನವಾಗಿ ಯಜಮಾನನಿಗೆ ಹಿತವನ್ನುಂಟುಮಾಡುವುದು. ಮಂತ್ರದಲ್ಲಿರುವ ಮೂರನೇ ಪದವಾದ ಓಜಃ ಎಂಬ ಶಬ್ದವು ಆದರಾರ್ಥವಾಗಿ ಪುನಃಪ್ರಯುಕ್ತವಾಗಿದೆ. 'ಇದಕ್ಕೆ ಪ್ರತ್ಯೇಕ ಅರ್ಥವೇನೂ ಇರುವುದಿಲ್ಲ. ಈ ವಿಷಯವನ್ನು ಯಾವ ಪುರುಷನು ಅರಿತಿರುವನೋ ಅವನಿಗೆ ವಷಟ್ಕಾರವು ಸಮೃದ್ಧಿಯನ್ನುಂಟುಮಾಡುವುದು.

**ವಾಕ್ಚ ವೈ ಪ್ರಾಣಾಪಾನೌ ಚ ವಷಟ್ಕಾರಸ್ತ ಏತೇ ವಷಟ್ಕೃತೇ ವಷಟ್ಕೃತೇ ವ್ಯುತ್ಕ್ರಾಮಂತಿ ತಾನನುಮಂತ್ರಯೇತ ವಾಗೋಜಃ ಸಹ ಓಜೋ ಮಯಿ ಪ್ರಾಣಾಪಾನಾವಿತ್ಯಾತ್ಮನ್ಯೇವ ತದ್ಧೋತಾ ವಾಚಂ ಚ ಪ್ರಾಣಾಪಾನೌ ಚ ಪ್ರತಿಷ್ಠಾಪಯತಿ ಸರ್ವಾಯುಃ ಸರ್ವಾಯುತ್ವಾಯ ಸರ್ವಮಾಯುರೇತಿ ಯ ಏವಂ ವೇದ ॥**

(ಐ.ಬ್ರಾ. ೧೧-೮)

ವಾಕ್ಕು, ಪ್ರಾಣ (ಉಚ್ಛ್ವಾಸ), ಅಪಾನ (ನಿಃಶ್ವಾಸಃ) ಎಂಬಿವೇ ವಷಟ್ಕಾರದ ಸ್ವರೂಪವು. ಹೋತೃವು ಮಂತ್ರಾಂತ್ಯದಲ್ಲಿ ವಷಟ್ಕಾರವನ್ನು ಉಚ್ಚರಿಸಿದಾಗಲೆಲ್ಲಾ ಈ ವಾಕ್ಕು ಪ್ರಾಣ ಅಪಾನಗಳು ಹೋತೃವಿನ ಶರೀರದಿಂದ ಹೊರಕ್ಕೆ ಹೊರಟುಹೋಗುವವು. ಹಾಗೆ ಆಗದಿರುವುದಕ್ಕಾಗಿಯೇ ಇವುಗಳನ್ನು ಅನುಮಂತ್ರಣದಲ್ಲಿ ಸೇರಿಸಬೇಕು. ವಾಗೋಜಃ ಸಹ ಓಜೋ ಮಯಿ ಪ್ರಾಣಾಪಾನೌ ಎಂಬುದೇ ಆ ಅನುಮಂತ್ರಣವು. ಇದರ ಅರ್ಥವು–ಸಾಮರ್ಥ್ಯ ಮತ್ತು ಬಲಗಳೆಂಬ ಎರಡು ಪ್ರಿಯಶರೀರಾತ್ಮಕವಾದ ಎಲೈ ವಷಟ್ಕಾರವೇ, ನಿನ್ನ ಅನುಗ್ರಹದಿಂದ ಸಾಮರ್ಥ್ಯ ಮತ್ತು ಬಲಗಳು ನನ್ನಲ್ಲಿ ನೆಲಸಿರಲಿ. ಮತ್ತು ವಾಕ್, ಪ್ರಾಣ, ಅಪಾನಗಳೂ ಸಹ ನನ್ನ ಶರೀರದಿಂದ ಹೊರಟು ಹೋಗದೆ ನನ್ನಲ್ಲಿ ಸ್ಥಿರವಾಗಿರಲಿ ಎಂಬ ಅರ್ಥವುಳ್ಳ ಈ ಮಂತ್ರವನ್ನು ಪಠಿಸುವುದರಿಂದ ಹೋತೃವು ವಾಕ್ಪ್ರಾಣಾಪಾನಗಳನ್ನು ಹೊರಕ್ಕೆ ಹೋಗದಂತೆ ತಡೆದು ತನ್ನಲ್ಲಿ ನಿಲ್ಲಿಸಿರಲು ಸಮರ್ಥನಾಗುವನು. ಮತ್ತು ಈ ಕಾರಣದಿಂದ ತನಗೆ ನಿರ್ದಿಷ್ಟವಾದ (ನೂರುವರ್ಷಗಳವರೆಗೆ) ಪೂರ್ಣಾಯುಸ್ಸನ್ನು ಪಡೆಯುವನು. ಈ ವಿಷಯವನ್ನು ಅರಿತಿರುವ ಪುರುಷನೂ ಸಹ ಪೂರ್ಣಾಯುಸ್ಸನ್ನು ಪಡೆದು ಸುಖಿಸುವನು.

**ಸ್ವಸ್ತಿಭಿಃ**—ಸ್ವಸ್ತಿ ಎಂಬ ಪದವು **ಅವಿನಾಶೋ ಯಥಾ ಭವತಿ ತಥಾ ।** ನಾಶವಾಗದೆ ಇರುವ ಹಾಗೆ, ಯಾವ ಅಪಾಯವೂ ಇಲ್ಲದೆ ಒಂದೇ ಸಮನಾಗಿ ಉತ್ತಮವಾದ ರೀತಿಯಿಂದ ಇರುವ ಹಾಗೆ ಎಂದು ಕ್ರಿಯಾವಿಶೇಷಣವೆಂದು ಸಾಯಣರು ಅರ್ಥವನ್ನು ಹೇಳಿರುವರು. ಸ್ವಸ್ತಿ ಎಂಬ ಪದವು ( ನಿ. ೩-೨೧ ) **ಸ್ವಸ್ತೀತ್ಯವಿನಾಶಿನಾಮ ಅಸ್ತಿರಭಿಪೂಜಿತಃ ಸು ಅಸ್ತೀತಿ ।** ಅವಿನಾಶಿ (ನಾಶವನ್ನು ಹೊಂದದೆ ಇರುವ) ಎಂದು ಅರ್ಥವುಳ್ಳದ್ದಾಗಿರುವುದು.

ಸು+ಅಸ್ತಿ ಎಂದು ಎರಡು ಪದಗಳು ಸೇರಿರುವ ಈ ಶಬ್ದದಲ್ಲಿ ಅಸ್ತಿ ಎಂಬುವುದು ಪೂಜಾರ್ಥವಾಗಿ ಇರುವುದು ಎಂದು ನಿರುಕ್ತಕಾರರಿಂದ ವಿವೃತವಾಗಿರುವುದು. ಈ ಶಬ್ದವು ಇದೇ ಅರ್ಥದಲ್ಲಿ ಅನೇಕ ಕಡೆಗಳಲ್ಲಿ ಪ್ರಯುಕ್ತವಾಗಿರುತ್ತದೆ—

**ಸ ನಃ ಪಿತೇವ ಸೂನವೇಽಗ್ನೇ ಸೂಪಾಯನೋ ಭವ । ಸ ಚ ಸ್ವಾ ನಃ ಸ್ವಸ್ತಯೇ ॥**

(ಋ. ಸಂ. ೧-೧-೯)

ಇಲ್ಲಿ ಸ್ವಸ್ತಯೇ ಎಂದರೆ ನಮ್ಮ ಕ್ಷೇಮಕ್ಕಾಗಿ ಎಂದು ಅರ್ಥ. ಮತ್ತು **ಪಥ್ಯಾ ಸ್ವಸ್ತಿಃ ಪಂಥಾ ಅಂತರಿಕ್ಷಂ ತನ್ನಿವಾಸಾತ್ ।** (ನಿ. ೧೧-೪೫) ಎಂದು ಸ್ವಸ್ತಿ ಪದವನ್ನು ಹೇಳಿ—

**ಸ್ವಸ್ತಿರಿದ್ಧಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತ್ಯಭಿ ಯಾ ವಾಮಮೇತಿ ।**
**ಸಾ ನೋ ಅಮಾ ಸೋ ಅರಣೇ ನಿ ಪಾತು ಸ್ವಾವೇಶಾ ಭವತು ದೇವಗೋಪಾ ॥**

(ಋ. ಸಂ. ೧೦-೬೩-೧೬)

ಎಂಬ ಈ ಋಕ್ಕನ್ನು ಉದಹರಿಸಿ—

**ಸ್ವಸ್ತಿರೇವ ಹಿ ಪ್ರಪಥೇ ಶ್ರೇಷ್ಠಾ ರೇಕ್ಣಸ್ವತೀ ಧನವತ್ಯಭ್ಯೇತಿ ಯಾ ವಸೂನಿ ವನನೀಯಾನಿ ಸಾ ನೋಽಮಾ ಗೃಹೇ ಸಾ ನಿರಮಣೇ ಸಾ ನಿರ್ಗಮನೇ ಪಾತು ಸ್ವಾವೇಶಾಭವತು ದೇವೀ ಗೋಪ್ತ್ರೀ ದೇವಾನ್ ಗೋಪಾಯತ್ವಿತಿ ದೇವಾ ಏನಾಂ ಗೋಪಾಯಂತ್ವಿತಿ ವಾ ॥** (ನಿ. ೧೧-೪೫)

ಎಂದು ಸ್ವಸ್ತಿಯ ಮಹಿಮೆಯನ್ನು ವ್ಯಾಖ್ಯಾನಮಾಡಿ ವಿವರಿಸಿರುವರು. ಸ್ವಸ್ತಿ ಎಂಬುವುದು ಅಂತರಿಕ್ಷದಲ್ಲಿ ಇರುವುದು. ಎಲ್ಲಾ ದೇವತೆಗಳಿಗಿಂತಲೂ ಪ್ರಶಸ್ತವಾಗಿರುವುದು. ಧನವತಿಯಾಗಿರುವುದು. ಉಪಕಗಳನ್ನು ವರ್ಷಿಸುವುದು. ಅರಣ್ಯದಲ್ಲಿ ವಾಸಮಾಡುವವನಿಗೂ, ಗೃಹದಲ್ಲಿ ವಾಸಮಾಡುವವನಿಗೂ, ಕೂಡ ಅರಣ್ಯದಲ್ಲಿಯೂ ಗೃಹದ ಒಳಗೂ ಹೊರಗೂ ಕೂಡ ರಕ್ಷಣೆಯನ್ನು ಉಂಟುಮಾಡಲಿ. ಪ್ರಕಾಶಿಸುತ್ತಿರುವ ಈ ದೇವಿಯು ದೇವತೆಗಳನ್ನೂ, ದೇವತೆಗಳು ಈ ದೇವಿಯನ್ನೂ ಹವಿಸ್ಸುಗಳ ಅರ್ಪಣೆಯಿಂದ ರಕ್ಷಿಸಲಿ. ಅಥವಾ ಹವಿಸ್ಸುಗಳನ್ನು ಅರ್ಪಿಸುವ ನಮ್ಮನ್ನು ಈ ದೇವಿಯು ರಕ್ಷಿಸಲಿ. ದ್ಯುಸ್ಥಾನದಲ್ಲಿ ಇರುವ ರಶ್ಮಿಗಳು ಈ ದೇವಿಯನ್ನು ರಕ್ಷಿಸಲಿ ಎಂದು ವ್ಯಾಖ್ಯಾನಮಾಡಿರುವರು. ಸ್ಕಂದಸ್ವಾಮಿಗಳು—

**ಸ್ವಸ್ತಿ ಅಂತರ್ಣೀತ ಮತ್ವರ್ಥೋಽತ್ರ ಸ್ವಸ್ತಿಶಬ್ದಃ ಸ್ವಸ್ತಿಮಂತಂ ಅವಿನಷ್ಟಂ ಜೀವಂತಮಿತ್ಯರ್ಥಃ॥**

ಸ್ವಸ್ತಿ ಎಂಬ ಶಬ್ದವು ಪ್ರೇರಣಾರ್ಥದಲ್ಲಿ ಇಲ್ಲಿ ಉಪಯುಕ್ತವಾಗಿರುವುದರಿಂದ ಅತ್ರಿಋಷಿಯನ್ನು ಜೀವಂತನನ್ನಾಗಿರುವ ಹಾಗೆ ಅಶ್ವಿನೀದೇವತೆಗಳು ರಕ್ಷಿಸಿದರು. ಎಂದು ಅರ್ಥವನ್ನು ವಿವರಿಸಿ ಕುತ್ಸನೂ ಹೀಗೆ ಹೇಳಿರುವನು ಎಂದು,

**ಯಾಭಿಃ ಶುಚಂತಿಂ ಧನಸಾಂ ಸುಷಂಸದಂ ತಪ್ತಂ ಘರ್ಮಮೋಮ್ಯಾವಂತಮತ್ರಯೇ ।**
**ಯಾಭಿಃ ಪೃಶ್ನಿಗುಂ ಪುರುಕುತ್ಸಮಾವತಂ ತಾಭಿರೂ ಷು ಊತಿಭಿರಶ್ವಿನಾ ಗತಂ ॥**

(ಋ. ಸಂ. ೧-೧೧೨-೭)

ಎಂಬ ಈ ಋಕ್ಕನ್ನು ಉದಹರಿಸಿರುವರು.

ಇಲ್ಲಿಗೆ ನೂರನೆಯ ಸೂಕ್ತವು ಮುಗಿದುದು

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಋಕ್ಸಂಹಿತಾಭಾಷ್ಯೇ ಪಂಚಮಾಷ್ಟಕೇ ಷಷ್ಠೋಽಧ್ಯಾಯಃ ಸಮಾಪ್ತಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲ-
ಸಾಮ್ರಾಜ್ಯಧುರಂಧರೇಣ ಸಾಯಣಾಮಾತ್ಯೇನ ವಿರಚಿತೇ ಮಾಧವೀಯೇ
ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪಂಚಮಾಷ್ಟಕೇ
ಷಷ್ಠೋಽಧ್ಯಾಯಃ ಸಮಾಪ್ತಃ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪಂಚಮಾಷ್ಟಕದಲ್ಲಿ
ಆರನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀಃ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ



## ಅಥ ಪಂಚಮಾಷ್ಟಕೇ ಸಪ್ತಮೋಽಧ್ಯಾಯಃ

ಐದನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು.

---

## ಏಳನೆಯ ಮಂಡಲದಲ್ಲಿ ನೂರೊಂದನೆಯ ಸೂಕ್ತವು.

। ಸಾಯಣಭಾಷ್ಯಂ ।

ಅಥ ಸಪ್ತಮೋ ವ್ಯಾಖ್ಯಾಯತೇ । ಸಪ್ತಮಮಂಡಲಸ್ಯ ಷಷ್ಠೇಽನುವಾಕ ಏಕಾದಶ ಸೂಕ್ತಾನಿ ವ್ಯಾಖ್ಯಾತಾನಿ । ತಿಸ್ರೋ ವಾಚ ಇತಿ ಷಡೃಚಂ ದ್ವಾದಶಂ ಸೂಕ್ತಂ । ಅತ್ರಾನುಕ್ರಮ್ಯತೇ । ತಿಸ್ರಃ ಷಟ್ ಪಾರ್ಜನ್ಯಂ ತ್ವಿತಿ । ಏತೇ ಕುಮಾರ ಆಗ್ನೇಯೋಽಪಶ್ಯದ್ವಸಿಷ್ಠ ಏವ ವೇತಿ ವಕ್ಷ್ಯಮಾಣತ್ವಾದಗ್ನಿಪುತ್ರಃ ಕುಮಾರ ಋಷಿರ್ವಸಿಷ್ಠೋ ವಾ । ಅನುಕ್ತತ್ವಾತ್ತ್ರಿಷ್ಟುಪ್ । ಇದಮುತ್ತರಂ ಚ ಪರ್ಜನ್ಯದೇವತ್ಯಂ ॥ ಅತ್ರ ಶೌನಕಃ । ಅಸ್ಯದಷ್ಟಂ ವಿಗಾಹ್ಯಾಪಃ ಪ್ರಾಙ್ಮುಖಃ ಪ್ರಯತಃ ಶುಚಿಃ । ಸೂಕ್ತಾಭ್ಯಾಂ ತಿಸ್ರ

**ಆದಿತ್ಯಮುಪತಿಷ್ಠೇತ ಭಾಸ್ಕರಂ । ಅನಶ್ನನ್ನೈತಜ್ಜಪ್ತವ್ಯಂ ವೃಷ್ಟಿಕಾಮೇನ ಯತ್ನತಃ । ಪಂಚರಾತ್ರೇಽಪ್ಯತಿಕ್ರಾಂತೇ ಮಹತೀಂ ವೃಷ್ಟಿಮಾಪ್ನುಯಾತ್ । ಋಗ್ವಿ. ೨-೩೦ । ಇತಿ ॥**

ಅನುವಾದವು—ಈಗ ಐದನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯದ ವ್ಯಾಖ್ಯಾನವು ಪ್ರಾರಂಭಿಸಲ್ಪಡುವುದು. ಏಳನೆಯ ಮಂಡಲದ ಆರನೆಯ ಅನುವಾಕದಲ್ಲಿ ಹನ್ನೊಂದು ಸೂಕ್ತಗಳನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಿದ್ದಾಯಿತು. ಈಗ ಹನ್ನೆರಡನೆಯ ಸೂಕ್ತವಾದ **ತಿಸ್ರೋ ವಾಚಃ** ಎಂಬ ಸೂಕ್ತವನ್ನು ಪ್ರಾರಂಭಿಸುವೆವು. ಈ ಸೂಕ್ತದಲ್ಲಿ ಆರು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ತಿಸ್ರಃ ಷಟ್ ಪಾರ್ಜನ್ಯಂ ತು** ಎಂದು ಹೇಳಿರುವುದು. ಈ ಸೂಕ್ತಕ್ಕೆ ಕುಮಾರ ಆಗ್ನೇಯನು ಅಥವಾ ವಸಿಷ್ಠನು ಋಷಿಯು. ಎಂದರೆ ಈ ಸೂಕ್ತದ್ರಷ್ಟೃವಾದ ಋಷಿಯು ಅಗ್ನಿಪುತ್ರನಾದ ಕುಮಾರಋಷಿಯಾಗಬಹುದು ಅಥವಾ ವಸಿಷ್ಠನೂ ಆಗಬಹುದು. ತ್ರಿಷ್ಟುಪ್ ಛಂದಸ್ಸು. ಈ ಸೂಕ್ತಕ್ಕೂ ಇದರ ಮುಂದಿನ ಸೂಕ್ತಕ್ಕೂ ಪರ್ಜನ್ಯನು ದೇವತೆಯು ಈ ಸೂಕ್ತದ ವಿನಿಯೋಗವಿಚಾರದಲ್ಲಿ ಶೌನಕ ಮಹರ್ಷಿಯು ಋಗ್ವಿಧಾನವೆಂಬ ಗ್ರಂಥದಲ್ಲಿ ಈರೀತಿ ಹೇಳಿರುವರು—ಯಾವುದಾದರೂ ಜಲಾಶಯದ ನೀರಿನಲ್ಲಿ ಕಂಠದವರೆಗೂ ನೀರಿರುವ ಸ್ಥಳದಲ್ಲಿ ಪೂರ್ವಾಭಿಮುಖನಾಗಿ ನಿಂತುಕೊಂಡು ಶುಚಿರ್ಭೂತನಾಗಿ **ತಿಸ್ರೋ ವಾಚಃ** ಎಂಬ ಈ ಸೂಕ್ತವನ್ನೂ ಪರ್ಜನ್ಯಾಯ ಎಂಬ ಇದರ ಮುಂದಿನ ಸೂಕ್ತವನ್ನೂ ಪಠಿಸುತ್ತಾ ಸೂರ್ಯನನ್ನು ಸ್ತುತಿಸಬೇಕು. ಹೀಗೆ ಜಪಮಾಡುವಾಗ ಏನನ್ನೂ ತಿನ್ನದೆ ಉಪವಾಸದಿಂದಿದ್ದು ಐದು ರಾತ್ರಿಗಳವರೆಗೆ ಜಪಮಾಡಬೇಕು. ಹೀಗೆ ಮಾಡಿದರೆ ಬಹಳವಾದ ವೃಷ್ಟಿಯುಂಟಾಗುವುದು (ಋಗ್ವಿಧಾನ ೨-೩೬, ೩೭).

## ಸೂಕ್ತ—೧೦೧

ಮಂಡಲ—೭ ॥ ಅನುವಾಕ—೬ ॥ ಸೂಕ್ತ—೧೦೧ ॥
ಅಷ್ಟಕ—೫ ॥ ಅಧ್ಯಾಯ—೭ ॥ ವರ್ಗ—೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬
ಋಷಿಃ—ವಸಿಷ್ಠಃ ಕುಮಾರೋ ವಾಗ್ನೇಯಃ ।
ದೇವತಾ—ಪರ್ಜನ್ಯಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

**ತಿಸ್ರೋ ವಾಚಃ ಪ್ರ ವದ ಜ್ಯೋತಿರಗ್ರಾ ಯಾ ಏತದ್ದುಹ್ರೇ ಮಧುದೋಘಮೂಧಃ ।**

**ಸ ವತ್ಸಂ ಕೃಣ್ವನ್ಗರ್ಭಮೋಷಧೀನಾಂ ಸದ್ಯೋ ಜಾತೋ ವೃಷಭೋ ರೋರವೀತಿ ॥ ೧ ॥**

॥ ಪದಪಾಠಃ ॥

ತಿಸ್ರಃ । ವಾಚಃ । ಪ್ರ । ವದ । ಜ್ಯೋತಿಃಽಅಗ್ರಾಃ । ಯಾಃ । ಏತತ್ । ದುಹ್ರೇ । ಮಧುಽದೋಘಂ ।
ಊಧಃ ।

ಸಃ । ವತ್ಸಂ । ಕೃಣ್ವನ್ । ಗರ್ಭಂ । ಓಷಧೀನಾಂ । ಸದ್ಯಃ । ಜಾತಃ । ವೃಷಭಃ । ರೋರವೀತಿ ॥ ೧ ॥

॥ ಸಾಯಣಭಾಷ್ಯಂ ॥

ಋಷಿರಾತ್ಮಾನಂ ಸ್ತುತೌ ಪ್ರೇರಯತಿ । ಹೇ ಋಷೇ ತಿಸ್ರಸ್ತ್ರಿವಿಧಾ ಋಗ್ಯಜುಸ್ಸಾಮಾತ್ಮಿಕಾಃ ಸ್ತುತಿರೂಪಾ ವಾಚಃ ಪ್ರ ವದ । ಪ್ರಬ್ರೂಹಿ । ಕೀದೃಶ್ಯೋ ವಾಚಃ । ಜ್ಯೋತಿರಗ್ರಾಃ । ಜ್ಯೋತಿರ್ದ್ಯೋತಮಾನಃ ಪ್ರಣವೋಽಗ್ರೇ ಪ್ರಮುಖೋ ಯಾಸಾಂ ತಾದೃಶೀಃ । ಯಾ ವಾಚೋ ಮಧುದೋಘಂ ಮಧುನ ಉದಕಸ್ಯ ದೋಹಕಂ ವೃಷ್ಟ್ಯುದಕಸ್ಯ ಕರ್ತಾರಮೇತನ್ನಭಸಿ ದೃಶ್ಯಮಾನಮೂಧ ಉದ್ಧತಂ ಮೇಘಂ । ಯದ್ವಾ । ಲುಪ್ತೋಪಮಮೇತತ್ । ಊಧ ಇವ ಪಯಸ ಆಶ್ರಯಭೂತಂ ಮೇಘಂ ದುಹ್ರೇ ದುಹತೇ ॥ ದುಹೇರ್ಲಟಿ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಬಾಹುಲಕೋ ರುಟ್ ॥ ಸ್ತೋತ್ರೈಃ ಪ್ರೀತೋ ಹಿ ಪರ್ಜನ್ಯೋ ಮೇಘೈರ್ವರ್ಷಯತಿ । ಅತೋ ವಾಚ ಏವ ದುಹಂತೀತ್ಯುಪಚರ್ಯತೇ । ಯದ್ವಾ ॥ ವದೇತಿ ವ್ಯತ್ಯಯೇನ ಮಧ್ಯಮಃ ॥ ತಿಸ್ರ ಇತಿ ದ್ರುತವಿಲಂಬಿತಮಧ್ಯಮಭೇದೇನ ತ್ರಿವಿಧಾ ಜ್ಯೋತಿರಗ್ರಾ ವಿದ್ಯುತ್ಪ್ರಮುಖಾ ವಾಚಃ ಪ್ರವದೇತೇತಿ । ಯಾ ಗರ್ಜಿತಲಕ್ಷಣಾ ವಾಚೋ ವೃಷ್ಟಿಪ್ರದಮೇತಂ ಮೇಘಂ ದುಹ್ರೇ ಉದಕಾನಿ ದುಹಂತಿ । ಏವಂಭೂತಃ ಸ ಚ ಪರ್ಜನ್ಯೋ ವತ್ಸಂ ಸಹ ನಿವಸಂತಂ ವೈದ್ಯುತಾಗ್ನಿಂ ಕೃಣ್ವನ್ ಪ್ರಾದುಷ್ಕುರ್ವನ್ ತಮೇವೌಷಧೀನಾಂ ವ್ರೀಹ್ಯಾದೀನಾಂ ಚ ಗರ್ಭಂ ಕುರ್ವನ್ ಸದ್ಯಃ ಶೀಘ್ರಂ ಜಾತಃ ಪ್ರಾದುರ್ಭೂತೋ ವೃಷಭೋ ವರ್ಷಿತಾ ಸನ್ರೋರವೀತಿ । ಭೃಶಂ ಶಬ್ದಾಯತೇ ॥

॥ ಪ್ರತಿಪದಾರ್ಥ ॥

(ಎಲೈ ಋಷಿಯೇ) ಯಾಃ—ಯಾವ ವಾಕ್ಕುಗಳು । ಮಧುದೋಘಂ—ವೃಷ್ಟಿಕಾರಕವಾದುದೂ । ಏತತ್—ಅಂತರಿಕ್ಷದಲ್ಲಿ ಗೋಚರವಾಗಿರುವುದೂ ಆದ । ಊಧಃ—ಮೇಘವನ್ನು । ದುಹ್ರೇ—ಕರೆಯುವುವೋ ಅಂತಹ । ತಿಸ್ರಃ—ಋಗ್ಯಜುಸ್ಸಾಮಾತ್ಮಿಕವಾದ ಮೂರುಬಗೆಯವೂ । ಜ್ಯೋತಿರಗ್ರಾಃ—ಪ್ರಭಾಯುತವಾದ ಪ್ರಣವವೇ ಮುಖಭಾಗವಾಗಿ ಉಳ್ಳವೂ ಆದ । ವಾಚಃ—ವೇದವಾಕ್ಕುಗಳನ್ನು । ಪ್ರ ವದ—ಪಠಿಸು । ಸಃ—ಪರ್ಜನ್ಯನು । ವತ್ಸಂ—ತನ್ನ ಜೊತೆಯಲ್ಲಿಯೇ ಇರತಕ್ಕ ವೈದ್ಯುತಾಗ್ನಿಯನ್ನು । ಕೃಣ್ವನ್—ಉತ್ಪನ್ನಮಾಡುತ್ತಲೂ । ಓಷಧೀನಾಂ—ಓಷಧ್ಯಾದಿಗಳ । ಗರ್ಭಂ—ಗರ್ಭವನ್ನುಂಟುಮಾಡುತ್ತಲೂ । ಸದ್ಯಃ—ಒಡನೆಯೇ । ಜಾತಃ—ಉತ್ಪನ್ನನಾಗಿಯೂ । ವೃಷಭಃ—ವೃಷ್ಟಿಕಾರಕನಾಗಿಯೂ । ರೋರವೀತಿ—ಶಬ್ದವನ್ನುಂಟುಮಾಡುತ್ತಾನೆ.

॥ ಭಾವಾರ್ಥ ॥

ಎಲೈ ಋಷಿಯೇ, ವೃಷ್ಟಿಕಾರಕವಾದುದೂ, ಅಂತರಿಕ್ಷದಲ್ಲಿ ಗೋಚರವಾಗಿರುವುದೂ ಆದ ಮೇಘವನ್ನು ಯಾವ ವಾಕ್ಕುಗಳು ಕರೆಯುವುವೋ ಅಂತಹವೂ, ಪ್ರಭಾಯುತವಾದ ಪ್ರಣವವೇ ಮುಖಭಾಗವಾಗಿ ಉಳ್ಳವೂ

ಋಗ್ಯಜುಸ್ಸಾಮಾತ್ಮಕವಾದ ಮೂರು ಬಗೆಯುಳ್ಳವೂ ಆದ ವೇದಮಂತ್ರಗಳನ್ನು ಪಠಿಸು. ಪರ್ಜನ್ಯನು ತನ್ನ ಜೊತೆಯಲ್ಲಿಯೇ ಇರತಕ್ಕ ವೈದ್ಯುತಾಗ್ನಿಯನ್ನು ಉತ್ಪನ್ನಮಾಡುತ್ತಲೂ ಓಷಧ್ಯಾದಿಗಳ ಗರ್ಭವನ್ನುಂಟುಮಾಡುತ್ತಲೂ, ಒಡನೆಯೇ ಉತ್ಪನ್ನನಾಗಿಯೂ, ವೃಷ್ಟಿಕಾರಕನಾಗಿಯೂ ಶಬ್ದವನ್ನುಂಟುಮಾಡುತ್ತಾನೆ (ಸಿಡಿಲುರೂಪದಿಂದ ಘರ್ಜಿಸುತ್ತಾನೆ).

## English Translation

Recite the three sacred texts, proceded by light, which milk the water-yielding udder; for he, the showerer, (thereby) becoming quickly manifest, loudly roars, engendering the (lightning) infant, the embryo of the plants.

। ಸಂಹಿತಾಪಾಠಃ ।

ಯೋ ವರ್ಧನ ಓಷಧೀನಾಂ ಯೋ ಅಪಾಂ ಯೋ ವಿಶ್ವಸ್ಯ ಜಗತೋ ದೇವ
ಈಶೇ ।
ಸ ತ್ರಿಧಾತು ಶರಣಂ ಶರ್ಮ ಯಂಸತ್ತ್ರಿವರ್ತು ಜ್ಯೋತಿಃ ಸ್ವಭಿಷ್ಟ್ಯಸ್ಮೇ ॥

॥ ಪದಪಾಠಃ ॥

ಯಃ । ವರ್ಧನಃ । ಓಷಧೀನಾಂ । ಯಃ । ಅಪಾಂ । ಯಃ । ವಿಶ್ವಸ್ಯ । ಜಗತಃ । ದೇವಃ । ಈಶೇ ।

ಸಃ । ತ್ರಿಽಧಾತು । ಶರಣಂ । ಶರ್ಮ । ಯಂಸತ್ । ತ್ರಿಽವರ್ತು । ಜ್ಯೋತಿಃ । ಸುಽಅಭಿಷ್ಟಿ । ಅಸ್ಮೇ ಇತಿ ॥

। ಸಾಯಣಭಾಷ್ಯಂ ।

ಯಃ ಪರ್ಜನ್ಯ ಓಷಧೀನಾಂ ವರ್ಧನೋ ವರ್ಧಯಿತಾ । ಯಶ್ಚಾಪಾಮುದಕಾನಾಂ ವರ್ಧಕಃ । ಯಶ್ಚ ದೇವೋ ದ್ಯೋತಮಾನಃ ಪರ್ಜನ್ಯೋ ವಿಶ್ವಸ್ಯ ಸರ್ವಸ್ಯ ಜಗತ ಈಶೇ ಈಷ್ಟೇ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಅಧೀಗರ್ಥೇತಿ । ಪಾ. ೨-೩-೫೨ । ಕರ್ಮಣಿ ಶೇಷತ್ವೇನ ವಿವಕ್ಷಿತೇ ಷಷ್ಠೀ । ಅನುದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ ॥ ಸ ಪರ್ಜನ್ಯಸ್ತ್ರಿಧಾತು ತ್ರಿಭೂಮಿಕಂ ಶರಣಂ ಗೃಹಂ ಶರ್ಮ ಸುಖಂ ಚ ಯಂಸತ್ । ಯಚ್ಛತು । ಅಸ್ಮಭ್ಯಂ ದದಾತ್ವಿತ್ಯರ್ಥಃ ॥ ಯಮೇರ್ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ । ಇತಶ್ಚ ಲೋಪ ಇತೀಕಾರಲೋಪಃ ॥ ತಥಾ ತ್ರಿವರ್ತು ತ್ರಿಷ್ವೃತುಷ್ವತಿಶಯೇನ ವರ್ತಮಾನಂ । ಶ್ರೂಯತೇ ಹಿ । ತ್ರೀಣಿ ವಾ ಆದಿತ್ಯಸ್ಯ ತೇಜಾಂಸಿ ವಸಂತಾ ಪ್ರಾತರ್ಗ್ರೀಷ್ಮೇ ಮಧ್ಯಂದಿನೇ ಶರದ್ಯಪರಾಹ್ಣೇ । ತೈ. ಸಂ. ೨-೧-೨-೫ । ಇತಿ ॥ ಏವಂವಿಧಂ ಸ್ವಭಿಷ್ಟಿ ಸ್ವಭ್ಯೇಷಣಾ ಜ್ಯೋತಿಸ್ತೇಜಶ್ಚಾಸ್ಮೇ ಅಸ್ಮಭ್ಯಂ ಪ್ರಯಚ್ಛತು ॥

॥ ಪ್ರತಿಪದಾರ್ಥ ॥

ಯಃ—ಯಾವ ಪರ್ಜನ್ಯನು । ಓಷಧೀನಾಂ—ಓಷಧಿಗಳಿಗೆ । ವರ್ಧನಃ—ವೃದ್ಧಿಕಾರಕನೋ । ಯಃ—ಯಾರು । ಅಪಾಂ—ಉದಕಗಳಿಗೆ ವೃದ್ಧಿಕಾರಕನೋ । ದೇವಃ—ದೇವತಾತ್ಮನಾದ । ಯಃ—ಯಾರು । ವಿಶ್ವಸ್ಯ—ಸಮಸ್ತವಾದ । ಜಗತಃ—ಜಗತ್ತಿಗೂ । ಈಶೇ—ಪ್ರಭುವಾಗಿದ್ದಾನೆಯೋ । ಸಃ—ಅದೇ ಪರ್ಜನ್ಯನು । ತ್ರಿಧಾತು—ಮೂರು ಅಂತಸ್ತುಗಳಿರುವ । ಶರಣಂ—ಗೃಹವನ್ನೂ । ಶರ್ಮ—ಸುಖವನ್ನೂ । ಯಂಸತ್—ಕೊಡಲಿ । ತ್ರಿವರ್ತು—ವಸಂತಾದಿ ಮೂರು ಋತುಗಳಲ್ಲಿಯೂ ಇರತಕ್ಕವೂ । ಸ್ವಭಿಷ್ಟಿ—ನಮ್ಮಿಂದ ಅಪೇಕ್ಷಿತವಾದುದೂ ಆದ । ಜ್ಯೋತಿಃ—ಆದಿತ್ಯನ ತೇಜಸ್ಸನ್ನು । ಅಸ್ಮೇ—ನಮಗೆ ಕೊಡಲಿ.

॥ ಭಾವಾರ್ಥ ॥

ಯಾವ ಪರ್ಜನ್ಯನು ಓಷಧಿಗಳಿಗೆ ವೃದ್ಧಿಕಾರಕನೋ, ಯಾರು ಉದಕಗಳಿಗೆ ವೃದ್ಧಿಕಾರಕನೋ, ದೇವತಾತ್ಮನಾದ ಯಾರು ಸಮಸ್ತವಾದ ಜಗತ್ತಿಗೂ ಪ್ರಭುವಾಗಿದ್ದಾನೆಯೋ ಅದೇ ಪರ್ಜನ್ಯನು ಮೂರು ಅಂತಸ್ತುಗಳಿರುವ ಗೃಹವನ್ನೂ ಸುಖವನ್ನೂ ಕೊಡಲಿ. ವಸಂತಾದಿ ಮೂರು ಋತುಗಳಲ್ಲಿಯೂ ಇರತಕ್ಕವೂ ನಮ್ಮಿಂದ ಅಪೇಕ್ಷಿತವಾದವೂ ಆದ ಆದಿತ್ಯನ ತೇಜಸ್ಸನ್ನೂ ಅನುಗ್ರಹಿಸಲಿ.

## English translation

May he who is the augmenter of plants, the increaser of the waters, who rules divine over the whole earth, bestow upon us a three-storied dwelling and felicity : may he grant us the desired light (of the sun) at the three (bright) seasons.

॥ ಸಂಹಿತಾಪಾಠಃ ॥

ಸ್ತರೀರು ತ್ವದ್ಭವತಿ ಸೂತ ಉ ತ್ವದ್ಯಥಾವಶಂ ತನ್ವಂ ಚಕ್ರ ಏಷಃ ।
ಪಿತುಃ ಪಯಃ ಪ್ರತಿ ಗೃಭ್ಣಾತಿ ಮಾತಾ ತೇನ ಪಿತಾ ವರ್ಧತೇ ತೇನ ಪುತ್ರಃ ॥

॥ ಪದಪಾಠಃ ॥

ಸ್ತರೀಃ । ಊಂ ಇತಿ । ತ್ವತ್ । ಭವತಿ । ಸೂತೇ । ಊಂ ಇತಿ । ತ್ವತ್ । ಯಥಾವಶಂ । ತನ್ವಂ । ಚಕ್ರೇ । ಏಷಃ ।

ಪಿತುಃ । ಪಯಃ । ಪ್ರತಿ । ಗೃಭ್ಣಾತಿ । ಮಾತಾ । ತೇನ । ಪಿತಾ । ವರ್ಧತೇ । ತೇನ । ಪುತ್ರಃ ॥ ೩ ॥

। ಸಾಯಣಭಾಷ್ಯಂ ।

ತ್ವದಿತಿ ತಕಾರಾಂತೋಽನ್ಯಶಬ್ದಪರ್ಯಾಯೋಽನುದಾತ್ತಃ ಸರ್ವನಾಮಸು ಪಠಿತಃ ॥ ಅಸ್ಯ ಪರ್ಜನ್ಯಸ್ಯ ತ್ವದನ್ಯದ್ರೂಪಂ ಸ್ತರೀರ್ನಿವೃತ್ತಪ್ರಸವಾ ಗೌಃ ಸಾ ಯಥಾ ನ ದೋಗ್ಧ್ರೀ ತದ್ವದ್ವರ್ಷಕಂ ನ ಭವತಿ । ಉ ಇತಿ ಪೂರಕಃ । ದ್ವಿತೀಯ ಉಶಬ್ದಶ್ಚಾರ್ಥೇ । ತ್ವದನ್ಯಚ್ಚ ರೂಪಂ ಸೂತೇ । ಧೇನುವತ್ಪ್ರಸೂತೇ । ಉದಕಾನಿ ಪ್ರವರ್ಷತಿ । ಏಷ ಪರ್ಜನ್ಯಸ್ತನ್ವಂ ಸ್ವಕೀಯಂ ಶರೀರಂ ಯಥಾವಶಂ ಯಥಾಕಾಮಂ ಸ್ತರೀತ್ವೇನ ಧೇನುತ್ವೇನ ಚ ಚಕ್ರೇ । ಕರೋತಿ । ಅಪಿ ಚ ಪಿತುರ್ದಿವಃ ಸಕಾಶಾತ್ಪಯೋ ವೃಷ್ಟ್ಯುದಕಂ ಮಾತಾ ಪೃಥಿವೀ ಪ್ರತಿ ಗೃಭ್ಣಾತಿ । ಪ್ರತಿಗೃಹ್ಣಾತಿ ॥ ಹೃಗ್ರಹೋರ್ಭ ಇತಿ ಭತ್ವಂ ॥ ಪ್ರತಿಗೃಹೀತೇನ ತೇನ ಹವಿರಾತ್ಮನಾ ಪರಿಣತೇನ ಪಿತಾ ದ್ಯುಲೋಕೋ ವರ್ಧತೇ । ತೇನೈವೋದಕೇನ ಪುತ್ರಃ ಪೃಥಿವ್ಯಾಂ ಭವಃ ಪ್ರಾಣಿಸಂಘೋಽಪಿ ವರ್ಧತೇ ॥

। ಪ್ರತಿಪದಾರ್ಥ ।

(ಅಸ್ಯ—ಈ ಪರ್ಜನ್ಯನ) । ತ್ವತ್—ಒಂದು ವಿಧವಾದ ರೂಪವು । ಸ್ತರೀಃ—ಬಂಜೆಯಾದ ಗೋವಿನಂತೆ। (ನ) ಭವತಿ—ಉದಕವರ್ಷಕವಾಗಿರುವುದಿಲ್ಲ । ತ್ವತ್—ಇನ್ನೊಂದು ರೂಪವು । ಸೂತೇ—ಉದಕವರ್ಷವನ್ನುಂಟು ಮಾಡುತ್ತದೆ । ಏಷಃ—ಇದೇ ಪರ್ಜನ್ಯನು । ತನ್ವಂ—ತನ್ನ ಶರೀರವನ್ನು । ಯಥಾವಶಂ—ತನ್ನಿಷ್ಟಬಂದಂತೆ । ಚಕ್ರೇ—ಮಾಡುತ್ತಾನೆ । ಪಿತುಃ—ಪಿತೃರೂಪಿಯಾದ ದ್ಯುಲೋಕದಿಂದ । ಮಾತಾ—ಪೃಥ್ವಿಯು । ಪಯಃ—ವೃಷ್ಟ್ಯುದಕವನ್ನು । ಪ್ರತಿಗೃಭ್ಣಾತಿ—ಸ್ವೀಕರಿಸುತ್ತದೆ । ತೇನ—ಹವಿಸ್ಸಿನ ರೂಪದಲ್ಲಿ ಪರಿಣಾಮಿತವಾದ ಅದೇ ಉದಕದಿಂದ । ಪಿತಾ—ದ್ಯುಲೋಕವು । ವರ್ಧತೇ—ವೃದ್ಧಿಯನ್ನು ಹೊಂದುತ್ತದೆ । ತೇನ—ಇದೇ ಉವಕದಿಂದ (ವೃಷ್ಟ್ಯುದಕದಿಂದ) । ಪುತ್ರಃ—ಪೃಥ್ವಿಯಲ್ಲಿ ಉತ್ಪನ್ನವಾದ ಸಕಲ ಪ್ರಾಣಿಗಳೂ ಬೆಳೆಯುತ್ತವೆ.

। ಭಾವಾರ್ಥ ।

ಈ ಪರ್ಜನ್ಯನ ಒಂದು ವಿಧವಾದ ರೂಪವು ಬಂಜೆಯಾದ ಗೋವಿನಂತೆ ವೃಷ್ಟಿಯನ್ನು ಸುರಿಸುವುದಿಲ್ಲ. ಇನ್ನೊಂದು ರೂಪವು ಉದಕವರ್ಷವನ್ನುಂಟುಮಾಡುತ್ತದೆ. ಇದೇ ಪರ್ಜನ್ಯನು ತನ್ನ ಶರೀರವನ್ನು ತನ್ನಿಷ್ಟಬಂದಂತೆ ಮಾಡುತ್ತಾನೆ. ಪಿತೃರೂಪಿಯಾದ ದ್ಯುಲೋಕದಿಂದ ಪೃಥ್ವಿಯು ವೃಷ್ಟ್ಯುದಕವನ್ನು ಸ್ವೀಕರಿಸುತ್ತದೆ. ಹವಿಸ್ಸಿನ ರೂಪದಲ್ಲಿ ಪರಿಣಮಿತವಾದ ಅದೇ ಉದಕದಿಂದ ದ್ಯುಲೋಕವು ವೃದ್ಧಿಯನ್ನು ಹೊಂದುತ್ತದೆ. ಅದೇ ವೃಷ್ಟ್ಯುದಕದಿಂದ ಪೃಥ್ವಿಯಲ್ಲಿ ಉತ್ಪನ್ನವಾದ ಸಕಲಪ್ರಾಣಿಗೂ ಬೆಳೆಯುತ್ತವೆ.

## English Translation

One form of Parjanya is like a barren cow, the other produces offspring, he takes whichever form he pleases: the mother receives the milk from the father, thence the father, thence the son is nourished.

। ಸಂಹಿತಾಪಾಠಃ ।

ಯಸ್ಮಿನ್ವಿಶ್ವಾನಿ ಭುವನಾನಿ ತಸ್ಥುಸ್ತಿಸ್ರೋ ದ್ಯಾವಸ್ತ್ರೇಧಾ ಸಸ್ರುರಾಪಃ ।

ತ್ರಯಃ ಕೋಶಾಸ ಉಪಸೇಚನಾಸೋ ಮಧ್ವಃ ಶ್ಚೋತಂತ್ಯಭಿತೋ ವಿರಪ್ಶಂ ॥ ೪ ॥

॥ ಪದಪಾಠಃ ॥

ಯಸ್ಮಿನ್ । ವಿಶ್ವಾನಿ । ಭುವನಾನಿ । ತಸ್ಥುः । ತಿಸ್ರः । ದ್ಯಾವः । ತ್ರೇಧಾ । ಸಸ್ರುः । ಆಪः ।

ತ್ರಯः । ಕೋಶಾಸः । ಉಪऽಸೇಚನಾಸः । ಮಧ್ವः । ಶ್ಚೋತಂತಿ । ಅಭಿತः । ವಿऽರಪ್ಶಂ ॥ ೪ ॥

॥ ಸಾಯಣಭಾಷ್ಯಂ ॥

ಯಸ್ಮಿನ್ಪರ್ಜನ್ಯೇ ವಿಶ್ವಾನಿ ಭುವನಾನಿ ಸರ್ವಾಣಿ ಭೂತಜಾತಾನಿ ತಸ್ಥುः ತಿಷ್ಠಂತಿ । ಯದಧೀನವೃತ್ತೀನಿ ಭವಂತೀತ್ಯರ್ಥः । ಯಸ್ಮಿಂಶ್ಚ ದ್ಯಾವೋ ದ್ಯುಪ್ರಭೃತಯೋ ಲೋಕಾ ಅವತಿಷ್ಠಂತೇ। ಯಸ್ಮಾಚ್ಚಾಪಸ್ತ್ರೇಧಾ ಸಸ್ರುः ಪ್ರಾಚ್ಯः ಪ್ರತೀಚ್ಯೋऽವಾಚ್ಯಶ್ಚ ಸತ್ಯೋ ನಿರ್ಗಚ್ಛಂತಿ । ಉಪಸೇಚನಾಸ ಉಪಸೇಕ್ತಾರಸ್ತ್ರಯः ಪೌರಸ್ತ್ಯः ಪ್ರತೀಚ್ಯ ಉದೀಚ್ಯಶ್ಚೇತಿ ತ್ರಿಪ್ರಕಾರಾः ಕೋಶಾಸೋ ಮೇಘಾ ವಿರಪ್ಶಂ ಮಹಾಂತಂ ಪರ್ಜನ್ಯಮಭಿತः ಪರಿತೋ ಮಧ್ವः ॥ ಕರ್ಮಣಿ ಷಷ್ಠೀ ॥ ಮಧೂದಕಂ ಶ್ಚೋತಂತಿ । ಕ್ಷಾರಯಂತಿ । ವರ್ಷಂತಿ ॥

॥ ಪ್ರತಿಪದಾರ್ಥ ॥

ಯಸ್ಮಿನ್—ಯಾವ ಆದೇ ಪರ್ಜನ್ಯನಲ್ಲಿ । ವಿಶ್ವಾನಿ—ಸಮಸ್ತವಾದ । ಭುವನಾನಿ—ಭೂತಜಾತಗಳೂ। ತಸ್ಥುः—ಆಶ್ರಯವನ್ನು ಹೊಂದಿವೆ । ತಿಸ್ರः ದ್ಯಾವः—ದ್ಯುಪ್ರಭೃತಿಯಾದ ಮೂರು ಲೋಕಗಳೂ ಸ್ಥಿತಿಯನ್ನು ಪಡೆದಿವೆ। ಆಪः—ಉದಕಗಳು। ತ್ರೇಧಾ—ಮೂರು ಬಗೆಯಾಗಿ। ಸಸ್ರುः—ಪ್ರವಹಿಸುತ್ತವೆ । ಉಪಸೇಚನಾಸः—ವೃಷ್ಟಿಯನ್ನು ಸುರಿಸತಕ್ಕ । ತ್ರಯः—ಪೂರ್ವ, ಪಶ್ಚಿಮ ಮತ್ತು ಉತ್ತರದಿಕ್ಕುಗಳಲ್ಲಿರುವ ಮೂರು ವಿಧವಾದ । ಕೋಶಾಸः—ಮೇಘಗಳೂ । ವಿರಪ್ಶಂ—ಮಹಾತ್ಮನಾದ ಪರ್ಜನ್ಯನನ್ನು । ಅಭಿತः—ಸುತ್ತುವರಿದು । ಮಧ್ವः—ವೃಷ್ಟ್ಯುದಕವನ್ನು । ಶ್ಚೋತಂತಿ—ಸುರಿಸುತ್ತವೆ.

॥ ಭಾವಾರ್ಥ ॥

ಪ್ರಸಿದ್ಧನಾದ ಪರ್ಜನ್ಯನಲ್ಲಿ ಸಮಸ್ತಭೂತಜಾತಗಳೂ ಆಶ್ರಯವನ್ನು ಹೊಂದಿವೆ. ದ್ಯುಪ್ರಭೃತಿಯಾದಮೂರು ಲೋಕಗಳೂ ಸ್ಥಿತಿಯನ್ನು ಪಡೆದಿವೆ. ಉದಕಗಳು ಇವನಿಂದಲೇ ಹೊರಟು ಮೂರು ಬಗೆಯಾಗಿ ಪೂರ್ವ, ಪಶ್ಚಿಮ, ದಕ್ಷಿಣ) ಪ್ರವಹಿಸುತ್ತವೆ. ವೃಷ್ಟಿಯನ್ನು ಸುರಿಸತಕ್ಕ ಪೂರ್ವ, ಪಶ್ಚಿಮ ।ಮತ್ತು ಉತ್ತರದಿಕ್ಕುಗಳಲ್ಲಿರುವ ಮೂರು ವಿಧವಾದ ಮೇಘಗಳೂ ಸಹ ಮಹಾತ್ಮನಾದ ಪರ್ಜನ್ಯನನ್ನು ಸುತ್ತುವರಿದು ವೃಷ್ಟ್ಯುದಕವನ್ನು ಸುರಿಸುತ್ತವೆ.

## English Translation

In whom all beings exist : the three worlds abide : from whom the waters flow in three directions (east, west, and south) : the three water-

shedding masses of clouds (east, west, and north), pour the waters round the mighty (Parjanya).

॥ ಸಂಹಿತಾಪಾಠಃ ॥

ಇದಂ ವಚಃ ಪರ್ಜನ್ಯಾಯ ಸ್ವರಾಜೇ ಹೃದೋ ಅಸ್ತ್ವಂತರಂ ತಜ್ಜು-
ಜೋಷತ್ ।
ಮಯೋಭುವೋ ವೃಷ್ಟಯಃ ಸಂತ್ವಸ್ಮೇ ಸುಪಿಪ್ಪಲಾ ಓಷಧೀರ್ದೇವ-
ಗೋಪಾಃ ॥ ೫ ॥

॥ ಪದಪಾಠಃ ॥

ಇದಂ । ವಚಃ । ಪರ್ಜನ್ಯಾಯ । ಸ್ವಽರಾಜೇ । ಹೃದಃ । ಅಸ್ತು । ಅಂತರಂ । ತತ್ । ಜುಜೋಷತ್ ।
ಮಯಃಽಭುವಃ । ವೃಷ್ಟಯಃ । ಸಂತು । ಅಸ್ಮೇ ಇತಿ । ಸುಽಪಿಪ್ಪಲಾಃ । ಓಷಧೀಃ । ದೇವಽಗೋಪಾಃ ॥

॥ ಸಾಯಣಭಾಷ್ಯಂ ॥

ಇದಂ ವಚೋ ವಚನಂ ಸ್ತೋತ್ರಂ ಸ್ವರಾಜೇ ಸ್ವಾಯತ್ತದೀಪ್ತಯೇ ಪರ್ಜನ್ಯಾಯ ಕ್ರಿಯತೇ । ಏತಚ್ಚ ಹೃದಸ್ತದೀಯಸ್ಯ ಹೃದಯಸ್ಯಾಂತರಮಂತರ್ಗತಮಸ್ತು । ಸ ಚ ತತ್ಸ್ತೋತ್ರಂ ಜುಜೋಷತ್ । ಸೇವತಾಂ ॥ ಜುಷೀ ಪ್ರೀತಿಸೇವನಯೋಃ । ಲೇಟ್ಯಡಾಗಮಶ್ಛಾಂದಸಃ । ಶಪಃ ಶ್ಲುಃ ॥ ಮಯೋಭುವಃ ಸುಖಸ್ಯ ಭಾವಯಿತ್ರ್ಯೋ ವೃಷ್ಟಯೋಽಸ್ಮೇ ಅಸ್ಮಾಕಂ ತತ್ಪ್ರಸಾದಾತ್ಸಂತು । ಭವಂತು । ತಥಾ ದೇವ-ಗೋಪಾ ದೇವಃ ಪರ್ಜನ್ಯೋ ಗೋಪಾಯಿತಾ ರಕ್ಷಿತಾ ಯಾಸಾಂ ತಥಾವಿಧಾ ಓಷಧೀರೋಷಧಯಶ್ಚ ಸುಪಿಪ್ಪಲಾಃ ಸುಫಲಾ ಅಸ್ಮಾಕಂ ಭವಂತು ॥

॥ ಪ್ರತಿಪದಾರ್ಥ ॥

ಇದಂ ವಚಃ—ಇಲ್ಲಿ ಪಠಿತವಾದ ಸ್ತುತಿರೂಪವಾದ ವಾಕ್ಯ । ಸ್ವರಾಜೇ—ಸ್ವಾಯತ್ತವಾದ ಪ್ರಭಾಯುತನಾದ । ಪರ್ಜನ್ಯಾಯ—ಪರ್ಜನ್ಯನಿಗೆ ಅರ್ಪಿತವಾಗಿ । ಹೃದಃ—ಹೃದಯದ । ಅಂತರಂ—ಅಂತರಾಳವನ್ನು । ಅಸ್ತು—ಪ್ರವೇಶಿಸಲಿ । ತತ್—ಆ ಸ್ತುತಿಯು । ಜುಜೋಷತ್—ಅವನನ್ನು ಸೇವಿಸಲಿ । ಮಯೋಭುವಃ—ಸುಖಸಾಧಕವಾದ । ವೃಷ್ಟಯಃ—ವೃಷ್ಟಿಗಳು । ಅಸ್ಮೇ—ನಮಗೆ ಹಿತವನ್ನುಂಟುಮಾಡುವವರಾಗಿ । ಸಂತು—ಆಗಿರಲಿ । ದೇವಗೋಪಾಃ—ದೇವತಾತ್ಮನಾದ ಪರ್ಜನ್ಯನಿಂದ ರಕ್ಷಿತವಾದ । ಓಷಧೀಃ—ಓಷಧಿಗಳು । ಸುಪಿಪ್ಪಲಾಃ—ಸತ್ಫಲದಾಯಕವಾಗಿ ಆಗಲಿ

॥ ಭಾವಾರ್ಥ ॥

ಈ ಸನ್ನಿವೇಶದಲ್ಲಿ ಪಠಿತವಾದ ಸ್ತುತಿರೂಪವಾದ ವಾಕ್ಯು ಸ್ವಾಯತ್ತಪ್ರಭಾಯುತನಾದ ಪರ್ಜನ್ಯನಿಗೆ ಅರ್ಪಿತವಾಗಿ ಅವನ ಹೃದಯದ ಅಂತರಾಳವನ್ನು ಪ್ರವೇಶಿಸಲಿ. ಮತ್ತು ಅವನನ್ನು ಸೇವಿಸಲಿ. ಅವನು ಇದರಿಂದ ತೃಪ್ತಿಯನ್ನು ಹೊಂದಲಿ. ಸುಖಸಾಧಕವಾದ ವೃಷ್ಟಿಗಳು ನಮಗೆ ಹಿತವನ್ನುಂಟುಮಾಡಲಿ. ದೇವತಾತ್ಮನಾದ ಪರ್ಜನ್ಯನಿಂದ ರಕ್ಷಿತವಾದ ಓಷಧಿಗಳು ನಮಗೆ ಸತ್ಫಲದಾಯಕವಾಗಿ ಆಗಲಿ.

## English Translation

**This praise is addressed to the self-irradiating Parjanya: may it be placed in his heart; may he be gratified by it; may the joy-diffusing rains be ours; may the plants cherished by the deity be fruitful.**

॥ ಸಂಹಿತಾಪಾಠಃ ॥

ಸ ರೇತೋಧಾ ವೃಷಭಃ ಶಶ್ವತೀನಾಂ ತಸ್ಮಿನ್ನಾತ್ಮಾ ಜಗತಸ್ತಸ್ಥುಷಶ್ಚ ।
ತನ್ಮ ಋತಂ ಪಾತು ಶತಶಾರದಾಯ ಯೂಯಂ ಪಾತ ಸ್ವಸ್ತಿಭಿಃ ಸದಾ ನಃ ॥ ೬ ॥

॥ ಪದಪಾಠಃ ॥

ಸಃ । ರೇತಃಽಧಾಃ । ವೃಷಭಃ । ಶಶ್ವತೀನಾಂ । ತಸ್ಮಿನ್ । ಆತ್ಮಾ । ಜಗತಃ । ತಸ್ಥುಷಃ । ಚ ।
ತತ್ । ಮಾ । ಋತಂ । ಪಾತು । ಶತಽಶಾರದಾಯ । ಯೂಯಂ । ಪಾತ । ಸ್ವಸ್ತಿಽಭಿಃ । ಸದಾ । ನಃ ॥

॥ ಸಾಯಣಭಾಷ್ಯಂ ॥

ಸ ಪರ್ಜನ್ಯಃ ಶಶ್ವತೀನಾಂ ಬಹ್ವೀನಾಮೋಷಧೀನಾಂ ರೇತೋಧಾ ರೇತಸ ಉದಕಸ್ಯ ಬೀಜಭೂತಸ್ಯ ಧಾತಾ ವಿನಿಧಾತಾ ಭವತಿ । ವೃಷಭ ಇತ್ಯುಪಮಾ । ಯಥಾ ಕಶ್ಚಿದ್ವೃಷಭೋ ಬಹ್ವೀನಾಂ ಗವಾಂ ಗರ್ಭಸ್ಯಾಧಾತಾ ಭವತಿ ತದ್ವತ್ । ಅತಸ್ತಸ್ಮಿನ್ ಪರ್ಜನ್ಯೇ ಜಗತೋ ಜಂಗಮಸ್ಯ ತಸ್ಥುಷಃ ಸ್ಥಾವರಸ್ಯ ಚಾತ್ಮಾ ದೇಹೋ ವರ್ತತೇ। ತತ್ಪರ್ಜನ್ಯೇನ ದತ್ತಮೃತಮುದಕಂ ಮಾ ಮಾಂ ಶತಶಾರದಾಯ ಶತಸಂವತ್ಸರಜೀವನಾರ್ಥಂ ಪಾತು। ರಕ್ಷತು ॥ ಮಾಶಬ್ದಸ್ಯ ಋತ್ಯಕ ಇತಿ ಪ್ರಕೃತಿಭಾವೋ ಹ್ರಸ್ವತ್ವಂ ಚ॥ ಅನ್ಯದ್ಗತಂ ॥

॥ ಪ್ರತಿಪದಾರ್ಥ ॥

ವೃಷಭಃ—ಒಂದೇ ವೃಷಭವು ಅನೇಕ ಗೋವುಗಳಿಗೆ ರೇತಸ್ಸನ್ನು ಸುರಿಸುವಂತೆ। ಸಃ—ಅದೇ ಪರ್ಜನ್ಯನು ಶಶ್ವತೀನಾಂ—ಅನೇಕವಿಧವಾದ ಓಷಧಿಗಳಿಗೆ। ರೇತೋಧಾಃ—ರೇತಸ್ಸನ್ನು ಸುರಿಸುವವನಾಗಿರುತ್ತಾನೆ । ತಸ್ಮಿನ್-

ಅದೇ ಪರ್ಜನ್ಯನಲ್ಲಿ | ಜಗತಃ—ಜಂಗಮಾತ್ಮಕವಾದುದೂ | ತಸ್ಥುಷಃ ಚ—ಸ್ಥಾವರಾತ್ಮಕವಾದುದೂ ಆದ ಸಕಲ ಲೋಕದ | ಆತ್ಮಾ—ಸತ್ವಾತ್ಮಕವಾದ ದೇಹವಿರುತ್ತದೆ | ತತ್—ಆ ಪರ್ಜನ್ಯನಿಂದ ದತ್ತವಾದ | ಋತಂ—ಉದಕವು | ಮಾ—ನನ್ನನ್ನು | ಶತಶಾರದಾಯ—ನೂರುಸಂವತ್ಸರಗಳ ಪರ್ಯಂತ ಜೀವಿಸುವುದಕ್ಕಾಗಿ | ಪಾತು—ರಕ್ಷಿಸಲಿ (ಎಲೈ ಪರ್ಜನ್ಯಾದಿ ದೇವತೆಗಳೇ) | ಯೂಯಂ—ನೀವೆಲ್ಲರೂ | ನಃ—ನಮ್ಮನ್ನು | ಸದಾ—ಯಾವಾಗಲೂ | ಸ್ವಸ್ತಿಭಿಃ—ಕಲ್ಯಾಣಗಳಿಂದ | ಪಾತ—ರಕ್ಷಿಸಿರಿ.

। ಭಾವಾರ್ಥ ।

ಒಂದೇ ವೃಷಭವು ಅನೇಕ ಗೋವುಗಳಿಗೆ ರೇತಸ್ಸನ್ನು ಸುರಿಸುವಂತೆ ಅದೇ ಪರ್ಜನ್ಯನೊಬ್ಬನೇ ಅನೇಕ ವಿಧವಾದ ಓಷಧಿಗಳಿಗೆ ರೇತಸ್ಸನ್ನು ಸುರಿಸುವವನಾಗಿರುತ್ತಾನೆ. ಅದೇ ಪರ್ಜನ್ಯನಲ್ಲಿ ಜಂಗಮಾತ್ಮಕವಾದುದೂ, ಸ್ಥಾವರಾತ್ಮಕವಾದುದೂ ಆದ ಸಕಲಲೋಕದ ಸತ್ವಾತ್ಮಕವಾದ ದೇಹವೂ ಅಡಗಿರುತ್ತದೆ. ಆ ಪರ್ಜನ್ಯನಿಂದ ದತ್ತವಾದ ಉದಕಗಳು ನನ್ನನ್ನು ಶತಸಂವತ್ಸರದ ಪರ್ಯಂತ ಜೀವಿಸುವುದಕ್ಕಾಗಿ ರಕ್ಷಿಸಲಿ. ಎಲೈ ಪರ್ಜನ್ಯಾದಿದೇವತೆಗಳೇ, ನೀವೆಲ್ಲರೂ ನಮ್ಮನ್ನು ಯಾವಾಗಲೂ ಕಲ್ಯಾಣಗಳಿಂದ ರಕ್ಷಿಸಿರಿ.

## English Translation

May he, the bull, be the impregnator of the perpetual plants, for in him is the vitality of both the fixed and moveable (world): may the rain sent by him preserve me for a hundred years: and you (gods) ever cherish us with blessings.



## ನೂರ ಎರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಪರ್ಜನ್ಯಾಯೇತಿ ತೃಚಂ ತ್ರಯೋದಶಂ ಸೂಕ್ತಂ | ಪೂರ್ವವದೃಷಿದೇವತೇ | ತಥಾ ಚಾನು-ಕ್ರಾಂತಂ | ಪರ್ಜನ್ಯಾಯ ತೃಚಂ ಗಾಯತ್ರಮಿತಿ || ವೈಶ್ವಾನರಪಾರ್ಜನ್ಯಾಯಾಮನ್ವಾರಂಭಣೀಯಾ-ಯಾಂ ಪಾರ್ಜನ್ಯಸ್ಯ ಚರೋಃ ಪರ್ಜನ್ಯಾಯೇತ್ಯನುವಾಕ್ಯಾ | ಸೂತ್ರ್ಯತೇ ಹಿ | ಪರ್ಜನ್ಯಾಯ ಪ್ರ ಗಾಯತ ಪ್ರ ವಾತಾ ವಾಂತಿ ಪತಯಂತಿ ವಿದ್ಯುತಃ | ಆ. ೨-೧೫ || ಇತಿ ||

ಅನುವಾದವು—ಪರ್ಜನ್ಯಾಯ ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿಂದಿನ ಸೂಕ್ತಕ್ಕೆ ಹೇಳಿದಂತೆಯೇ ಋಷಿಗಳೂ, ದೇವತೆಯೂ ಇರುವುದು ಗಾಯತ್ರೀ ಛಂದಸ್ಸು, ಅನುಕ್ರಮಣಿಕೆಯಲ್ಲಿ—ಪರ್ಜನ್ಯಾಯ ತೃಚಂ ಗಾಯತ್ರಂ ಎಂದು ಹೇಳಿರುವುದು. ಅನ್ವಾರಂಭಣೀಯೇಷ್ಟಿಯಲ್ಲಿ ವೈಶ್ವಾನರ ಮತ್ತು ಪರ್ಜನ್ಯದೇವತೆಗಳನ್ನುದ್ದೇಶಿಸಿ ಮಾಡುವ

ಚರುಹೋಮದಲ್ಲಿ ಪರ್ಜನ್ಯಾಯ ಎಂಬ ಈ ಋಕ್ಕನ್ನು ಪರ್ಜನ್ಯದೇವತೆಯ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಪರ್ಜನ್ಯಾಯ ಪ್ರ ಗಾಯತ ಪ್ರ ವಾತಾ ವಾಂತಿ ಪತಯಂತಿ ವಿದ್ಯುತಃ ಎಂಬಸೂತ್ರದಿಂದ (ಆ. ೨-೧೫) ವಿನ್ಯತವಾಗಿರುವುದು.

## ಸೂಕ್ತ—೧೦೨

ಮಂಡಲ—೭ ॥ ಅನುವಾಕ—೬ ॥ ಸೂಕ್ತ—೧೦೨ ।
ಅಷ್ಟಕ—೫ ॥ ಅಧ್ಯಾಯ—೭ ॥ ವರ್ಗ—೨ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ।
ಋಷಿಃ—ವಸಿಷ್ಠಃ ಕುಮಾರೋ ವಾಗ್ನೇಯೋ ॥
ದೇವತಾ—ಪರ್ಜನ್ಯಃ ॥
ಛಂದಃ—ತ್ರಿಷ್ಟುಪ್ ।

॥ ಸಂಹಿತಾಪಾಠಃ ॥

ಪರ್ಜನ್ಯಾಯ ಪ್ರ ಗಾಯತ ದಿವಸ್ಪುತ್ರಾಯ ಮೀಳ್ಹುಷೇ ।
ಸ ನೋ ಯವಸಮಿಚ್ಛತು ॥ ೧ ॥

॥ ಪದಪಾಠಃ ॥

ಪರ್ಜನ್ಯಾಯ । ಪ್ರ । ಗಾಯತ । ದಿವಃ । ಪುತ್ರಾಯ । ಮೀಳ್ಹುಷೇ ।
ಸಃ । ನಃ । ಯವಸಂ । ಇಚ್ಛತು ॥ ೧ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಾರಃ ಪರ್ಜನ್ಯಾಯ ದೇವಾಯ ಪ್ರ ಗಾಯತ । ಪ್ರಕರ್ಷೇಣ ಸ್ತೋತ್ರಮುಚ್ಚಾರಯತ । ಕೀದೃಶಾಯ । ದಿವೋಽನ್ತರಿಕ್ಷಸ್ಯ ಪುತ್ರಾಯ । ತತ್ರ ಹಿ ಪರ್ಜನ್ಯಃ ಪ್ರಾದುರ್ಭವತಿ । ಮೀಳ್ಹುಷೇ ಸೇಕ್ತ್ರೇ । ಸ ತಾದೃಶಃ ಪರ್ಜನ್ಯೋ ನೋಽಸ್ಮಭ್ಯಂ ಯವಸಮೋಷಧ್ಯಾದಿಲಕ್ಷಣಮನ್ನಂ ದಾತುಮಿಚ್ಛತು ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಗಳೇ) ದಿವಃ—ಅಂತರಿಕ್ಷಕ್ಕೆ । ಪುತ್ರಾಯ—ಪುತ್ರರೂಪನೂ । ಮೀಳ್ಹುಷೇ—ವೃಷ್ಟಿಸೇಚಕನೂ ಆದ । ಪರ್ಜನ್ಯಾಯ—ಪರ್ಜನ್ಯನನ್ನು ಉದ್ದೇಶಿಸಿ । ಪ್ರ ಗಾಯತ—ಉತ್ತಮವಾದ ಸ್ತುತಿಯನ್ನು ಗಾನಮಾಡಿರಿ । ಸಃ—ಅದೇ ಪರ್ಜನ್ಯನು । ನಃ—ನಮಗೆ । ಯವಸಂ-ಓಷಧ್ಯಾದಿರೂಪವಾದ ಅನ್ನವನ್ನು ಕೊಡಲು। ಇಚ್ಛತು—ಇಚ್ಛಿಸಲಿ.

। ಭಾವಾರ್ಥ ।

ಎಲೈ ಸ್ತೋತೃಗಳೇ, ಅಂತರಿಕ್ಷಕ್ಕೆ ಪುತ್ರರೂಪನೂ, ವೃಷ್ಟಿಸೇಚಕನೂ ಆದ ಪರ್ಜನ್ಯನನ್ನು ಪ್ರಶಂಸಿಸಿರಿ. ಉತ್ತಮವಾದ ಸ್ತುತಿಯನ್ನು ಗಾನಮಾಡಿ ಪಠಿಸಿರಿ. ಅದೇ ಪರ್ಜನ್ಯನು ನಮಗೆ ಓಷಧ್ಯಾದಿರೂಪವಾದ ಅನ್ನವನ್ನು ಕೊಡಲು ಇಚ್ಛಿಸಲಿ.

English Translation

Sing aloud to the son of heaven, Parjanya, the sender of rain: may he be pleased (to grant) us food

। ಸಂಹಿತಾಪಾಠಃ ।

ಯೋ ಗರ್ಭಮೋಷಧೀನಾಂ ಗವಾಂ ಕೃಣೋತ್ಯರ್ವತಾಂ ।
ಪರ್ಜನ್ಯಃ ಪುರುಷೀಣಾಂ ॥ ೨ ॥

। ಪದಪಾಠಃ ।

ಯಃ । ಗರ್ಭಂ । ಓಷಧೀನಾಂ । ಗವಾಂ । ಕೃಣೋತಿ । ಅರ್ವತಾಂ ।
ಪರ್ಜನ್ಯಃ । ಪುರುಷೀಣಾಂ ॥ ೨ ॥

॥ ಸಾಯಣಭಾಷ್ಯಂ ॥

ಯಃ ಪರ್ಜನ್ಯ ಓಷಧೀನಾಂ ವ್ರೀಹ್ಯಾದೀನಾಂ ಗವಾಮರ್ವತಾಮರ್ವತೀನಾಂ ಪುರುಷೀಣಾಂ ನಾರೀಣಾಂ ಚ ಯಃ ಪರ್ಜನ್ಯೋ ಗರ್ಭಂ ಪ್ರಸೂತಿಹೇತು ಬೀಜಮುದಕರೂಪಂ ಕೃಣೋತಿ ಕರೋತಿ ತಸ್ಮೈ ಪರ್ಜನ್ಯಾಯೇತ್ಯುತ್ತರತ್ರ ಸಂಬಂಧಃ ॥

। ಪ್ರತಿಪದಾರ್ಥ ।

ಯಃ—ಯಾವ । ಪರ್ಜನ್ಯಃ—ಪರ್ಜನ್ಯನು । ಓಷಧೀನಾಂ—ಓಷಧಿಗಳಿಗೂ । ಗವಾಂ—ಗೋವುಗಳಿಗೂ । ಅರ್ವತಾಂ—ಅಶ್ವಗಳಿಗೂ । ಪುರುಷೀಣಾಂ—ಸ್ತ್ರೀಯರಿಗೂ । ಗರ್ಭಂ—ಗರ್ಭರೂಪವಾದ ಉದಕವನ್ನು । ಕೃಣೋತಿ—ಉತ್ಪನ್ನಮಾಡುವನೋ (ಅಂತಹ ಪರ್ಜನ್ಯನನ್ನು ಸ್ತುತಿಸು).

॥ ಭಾವಾರ್ಥ ॥

ಯಾವ ಪರ್ಜನ್ಯನು ಓಷಧಿಗಳಿಗೂ, ಗೋವುಗಳಿಗೂ, ಅಶ್ವಗಳಿಗೂ, ಸ್ತ್ರೀಯರಿಗೂ ಗರ್ಭರೂಪವಾದ ಉದಕವನ್ನು ಉತ್ಪನ್ನಮಾಡುವನೋ ಅಂತಹ ಪರ್ಜನ್ಯನನ್ನು ಸ್ತುತಿಸು.

English Translation

He who is the cause of the impregnation of plants, of cows, of mares, of women.

॥ ಸಂಹಿತಾಪಾಠಃ ॥

ತಸ್ಮಾ ಇದಾಸ್ಯೇ ಹವಿರ್ಜುಹೋತಾ ಮಧುಮತ್ತಮಂ ।

ಇಳಾಂ ನಃ ಸಂಯತಂ ಕರತ್ ॥ ೩ ॥

॥ ಪದಪಾಠಃ ॥

ತಸ್ಮೈ । ಇತ್ । ಆಸ್ಯೇ । ಹವಿಃ । ಜುಹೋತ । ಮಧುಮತ್ಽತಮಂ ।

ಇಳಾಂ । ನಃ । ಸಂಽಯತಂ । ಕರತ್ ॥ ೩ ॥

॥ ಸಾಯಣಭಾಷ್ಯಂ ॥

ತಸ್ಮಾ ಇತ್ತಸ್ಮಾ ಏವ ಪರ್ಜನ್ಯಾಯಾಸ್ಯೇ ದೇವಾನಾಮಾಸ್ಯಭೂತೇಽಗ್ನೌ ಮಧುಮತ್ತಮಂ ರಸವತ್ತಮಂ ಹವಿರ್ಜುಹೋತ । ಜುಹುತ ಹೇ ಋತ್ವಿಜಃ । ಸ ಚ ಪರ್ಜನ್ಯೋ ನೋಽಸ್ಮಭ್ಯಮಿಳಾಮನ್ನಂ ಸಂಯತಂ ಸಮ್ಯಗ್ನಿಯತಂ ಯಥಾ ಭವತಿ ತಥಾ ಕರತ್ । ಕರೋತು । ದದಾತ್ವಿತಿ ಯಾವತ್ ॥

॥ ಪ್ರತಿಪದಾರ್ಥ ॥

ತಸ್ಮಾ ಇತ್—ಅದೇ ಪರ್ಜನ್ಯನನ್ನು ಉದ್ದೇಶಿಸಿಯೇ । ಆಸ್ಯೇ—ದೇವತೆಗಳಿಗೆಲ್ಲಾ ಮುಖರೂಪನಾದ ಅಗ್ನಿಯಲ್ಲಿ । ಮಧುಮತ್ತಮಂ—ಅತ್ಯಂತ ಮಧುರವಾದ ರಸವುಳ್ಳ । ಹವಿಃ—ಹವಿಸ್ಸನ್ನು । ಜುಹೋತ—ಅರ್ಪಿಸಿರಿ । ಸಃ—ಅದೇ ಪರ್ಜನ್ಯನು । ನಃ—ನಮಗೆ । ಇಳಾಂ—ಅನ್ನವನ್ನು । ಸಂಯತಂ—ನಮ್ಮ ನಿಯಮನದಲ್ಲಿ ಪುಷ್ಕಲವಾಗಿರುವಂತೆ । ಕರತ್—ಮಾಡಲಿ.

॥ ಭಾವಾರ್ಥ ॥

ಎಲೈ ಸ್ತೋತೃಗಳೇ, ಅದೇ ಪರ್ಜನ್ಯನನ್ನುದ್ದೇಶಿಸಿಯೇ, ದೇವತೆಗಳಿಗೆಲ್ಲಾ ಮುಖರೂಪನಾದ ಅಗ್ನಿಯಲ್ಲಿ ಅತ್ಯಂತ ಮಧುರವಾದ ರಸವುಳ್ಳ ಹವಿಸ್ಸನ್ನು ಅರ್ಪಿಸಿರಿ. ಆ ಪರ್ಜನ್ಯನು ಆ ಅನ್ನವನ್ನು ನಮಗೆ ಪುಷ್ಕಲವಾಗಿರುವಂತೆ ಮಾಡಲಿ.

## English Translation

Offer verily to him by the mouth (of the gods, Agni,) the most savoury oblation, so that he may yield us food unfailingly.



# ನೂರಮೂರನೆಯ ಸೂಕ್ತವು.

## ಪೀ ಠಿ ಕೆ .

ವಸಿಷ್ಠೋ ವರ್ಷಕಾಮಃ ಪರ್ಜನ್ಯಂ ತುಷ್ಟಾವ । ತಂ ಮಂಡೂಕಾ ಅನ್ವಮೋದಂತ । ಸ ಮಂಡೂಕಾನನುಮೋದಮಾನಾನ್ ದೃಷ್ಟ್ವಾ ತುಷ್ಟಾವ ॥

(ನಿ. ೯–೬)

ವಸಿಷ್ಠಋಷಿಯು ಒಂದಾನೊಂದು ಕಾಲದಲ್ಲಿ ವೃಷ್ಟಿಯನ್ನಪೇಕ್ಷಿಸಿ ( ಮಳೆ ಬರಬೇಕೆಂಬ ಅಪೇಕ್ಷೆಯಿಂದ ) ಪರ್ಜನ್ಯದೇವತೆಯನ್ನು ಸ್ತುತಿಸಿದನು. ಋಷಿಯು ಈ ರೀತಿ ಸ್ತುತಿಸುವುದನ್ನು ಮಂಡೂಕಗಳು (ಕಪ್ಪೆಗಳು) ಅನುಮೋದಿಸಿದವು. ಅವು ಪರ್ಜನ್ಯನ ವಿಷಯದಲ್ಲಿ ತಾನು ಮಾಡುವ ಪ್ರಾರ್ಥನೆಯನ್ನು ಅನುಮೋದಿಸುತ್ತಿರುವುದನ್ನು ಕಂಡು ಅವುಗಳನ್ನೂ (ಮಂಡೂಕಗಳನ್ನು) ಸ್ತುತಿಸಿದನು. ಆ ವಿಷಯದ ಪ್ರಶಂಸೆಯನ್ನೇ ಈ ಸೂಕ್ತದಲ್ಲಿ ಹೇಳಲಾಗಿದೆ.

ಮಂಡೂಕಾಃ ಎಂಬ ಶಬ್ದಕ್ಕೆ ರೂಪನಿಷ್ಪತ್ತಿಯನ್ನೂ ನಿರ್ವಚನವನ್ನೂ ಯಾಸ್ಕರು ಈ ರೀತಿ ಹೇಳಿರುವರು–

ಮಂಡೂಕಾ ಮಜ್ಜೂಕಾ ಮಜ್ಜನಾತ್ ಮದತೇರ್ವಾ ಮೋದತಿಕರ್ಮಣಃ ಮಂದತೇರ್ವಾ ತೃಪ್ತಿಕರ್ಮಣಃ । ಮಂಡಯತೇರಿತಿ ವೈಯಾಕರಣಾಃ । ಮಂಡ ಏಷಾಮೋಕ ಇತಿ ವಾ ಮಂಡೋ ಮದೇರ್ವಾ ಮುದೇರ್ವಾ ॥

(ನಿ. ೯ ೫)

ಮಂಡೂಕಾಃ ಮಜ್ಜೂಕಾಃ ಎಂಬ ಶಬ್ದಗಳು ಒಂದೇ ಅರ್ಥವನ್ನು ಸೂಚಿಸುವ ಪರ್ಯಾಯಪದಗಳು. ಮಜ್ಜನಾತ್ ಏಕೆಂದರೆ ಕಪ್ಪೆಗಳು ಯಾವಾಗಲೂ ನೀರಿನಲ್ಲಿ ಮುಳುಗಿರುವುದರಿಂದ ಅಥವಾ ಮುಳುಗುತ್ತಿರುವುದರಿಂದ ಅವುಗಳಿಗೆ ಮಜ್ಜೂಕಾಃ ಎಂದು ಹೆಸರು ಬಂದಿದೆ. ಅಥವಾ ಸಂತೋಷಿಸು ಎಂಬರ್ಥವುಳ್ಳ ಮದ್ ಎಂಬ ಧಾತುವಿನಿಂದಲಾಗಲಿ, ತೃಪ್ತಿಯಿಂದಿರು ಎಂಬರ್ಥವುಳ್ಳ ಮಂದ್ ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಏಕೆಂದರೆ ಕಪ್ಪೆಗಳು ನೀರಿನಲ್ಲಿ ಸಂತೋಷದಿಂದಲೂ ತೃಪ್ತಿಯಿಂದಲೂ ವಾಸಿಸುವವು. ಅಥವಾ ಮಂಡೂಕಶಬ್ದವು ಅಲಂಕರಿಸು ಎಂಬರ್ಥವುಳ್ಳ ಮಂಡ್ ಎಂಬ ಧಾತುವಿನಿಂದ ನಿಷ್ಪನ್ನವಾಗಬಹುದೆಂದು ವ್ಯಾಕರಣಶಾಸ್ತ್ರಜ್ಞರ ಅಭಿಮತವು. ಏಕೆಂದರೆ ಕಪ್ಪೆಗಳ ಶರೀರವು ನಾನಾವಿಧವರ್ಣಗಳಿಂದ ಅಲಂಕೃತವಾಗಿ ನಿರ್ಮಿಸಲ್ಪಟ್ಟಿರುವವು ಎಂದು ಅವರ ವಾದವು. ಅಥವಾ ಮಂಡೇ ಎಂದರೆ ನೀರಿನಲ್ಲಿ, ಓಕಃ—ಅವುಗಳ ವಾಸವು. ಆದ್ದರಿಂದ ಅವುಗಳಿಗೆ ಮಂಡೂಕಾಃ ಎಂದು ಹೆಸರು ಬಂದಿರಬಹುದು ಅಥವಾ ಮಂಡ (ನೀರು) ಎಂಬ ಶಬ್ದವು ಹರ್ಷಿಸು ಎಂಬರ್ಥವುಳ್ಳ ಮದ್ ಎಂಬ ಧಾತುವಿನಿಂದಲಾಗಲಿ, ಸಂತೋಷದಿಂದಿರು ಎಂಬರ್ಥವುಳ್ಳ ಮುದ್ ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಿದೆ. ಅಂತಹ ಉದಕದಲ್ಲಿ ಸಂತೋಷದಿಂದಿರುವುದರಿಂದ ಕಪ್ಪೆಗಳಿಗೆ ಮಂಡೂಕಾಃ ಎಂಬ ಹೆಸರು ಬಂದಿರುವುದೆಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಾಯಣಭಾಷ್ಯಂ ॥

ಸಂವತ್ಸರಮಿತಿ ದಶರ್ಚಂ ಚತುರ್ದಶಂ ಸೂಕ್ತಂ ವಸಿಷ್ಠಸ್ಯಾರ್ಷಂ ತ್ರೈಷ್ಟುಭಂ । ಆದ್ಯಾ ತ್ವನುಷ್ಟುಪ್। ಮಂಡೂಕಾ ದೇವತಾ । ತಥಾ ಚಾನುಕ್ರಾಂತಂ । ಸಂವತ್ಸರಂ ದಶ ಪರ್ಜನ್ಯಸ್ತುತಿಃ ಸಂಸ್ತೃಷ್ಟಾನ್ಮಂಡೂಕಾಂಸ್ತುಷ್ಟಾವಾದ್ಯಾನುಷ್ಟುಬಿತಿ ॥ ವೃಷ್ಟಿಕಾಮೇನೈತತ್ಸೂಕ್ತಂ ಜಪ್ಯಂ ॥

ಅನುವಾದವು—ಸಂವತ್ಸರಂ ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಮಂಡೂಕಗಳು (ಕಪ್ಪೆಗಳು) ದೇವತೆಯು; ತ್ರಿಷ್ಟುಪ್ ಛಂದಸ್ಸು. ಮೊದಲನೆಯ ಋಕ್ಕು ಮಾತ್ರ ಅನುಷ್ಟುಪ್ ಛಂದಸ್ಕವು. ಅನುಕ್ರಮಣಿಕೆಯಲ್ಲಿ—ಸಂವತ್ಸರಂ ದಶ ಪರ್ಜನ್ಯಸ್ತುತಿಃ ಸಂಸ್ತೃಷ್ಟಾನ್ಮಂಡೂಕಾಂಸ್ತುಷ್ಟಾವಾದ್ಯಾನುಷ್ಟುಪ್ ಎಂದು ಹೇಳಿರುವುದು. ವೃಷ್ಟಿಯಾಗಬೇಕೆಂದು ಅಪೇಕ್ಷಿಸುವವರು ಈ ಸೂಕ್ತವನ್ನು ಜಪಮಾಡಬೇಕು.



## ಸೂಕ್ತ—೧೦೩

ಮಂಡಲ—೭ ॥ ಅನುವಾಕ—೬ ॥ ಸೂಕ್ತ— ೧೦೩॥
ಅಷ್ಟಕ—೫ ॥ ಅಧ್ಯಾಯ—೭ ॥ ವರ್ಗ—೩, ೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
ಋಷಿಃ—ವಸಿಷ್ಠಃ ॥
ದೇವತಾ—ಮಂಡೂಕಾಃ ॥
ಛಂದಃ—೧ ಅನುಷ್ಟುಪ್ । ೨-೧೦ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಸಂವತ್ಸರಂ ಶಶಯಾನಾ ಬ್ರಾಹ್ಮಣಾ ವ್ರತಚಾರಿಣಃ ।
ವಾಚಂ ಪರ್ಜನ್ಯಜಿನ್ವಿತಾಂ ಪ್ರ ಮಂಡೂಕಾ ಅವಾದಿಷುಃ ॥ ೧ ॥

॥ ಪದಪಾಠಃ ॥

ಸಂವತ್ಸರಂ । ಶಶಯಾನಾಃ । ಬ್ರಾಹ್ಮಣಾಃ । ವ್ರತಽಚಾರಿಣಃ ।
ವಾಚಂ । ಪರ್ಜನ್ಯಽಜಿನ್ವಿತಾಂ । ಪ್ರ । ಮಂಡೂಕಾಃ । ಅವಾದಿಷುಃ ॥ ೧ ॥

। ಸಾಯಣಭಾಷ್ಯಂ ।

ಅತ್ರ ನಿರುಕ್ತಂ । ವಸಿಷ್ಠೋ ವರ್ಷಕಾಮಃ ಪರ್ಜನ್ಯಂ ತುಷ್ಟಾವ । ತಂ ಮಂಡೂಕಾ ಅನ್ವಮೋದಂತ ಸ ಮಂಡೂಕಾನನುಮೋದಮಾನಾನ್ ದೃಷ್ಟ್ವಾ ತುಷ್ಟಾವ । ನಿ. ೯.೬ । ಇತಿ । ಮಂಡೂಕಾ ಮಜ್ಜೂಕಾ ಮಜ್ಜನಾನ್ಮದತೇರ್ವಾ ಮೋದತಿಕರ್ಮಣೋ ಮಂದತೇರ್ವಾ ತೃಪ್ತಿಕರ್ಮಣೋ ಮಂಡಯತೇರಿತಿ ವೈಯಾಕರಣಾ ಮಂಡ ಏಷಾಮೋಕ ಇತಿ ವಾ ಮಂಡೋ ಮದೇರ್ವಾ ಮುದೇರ್ವಾ ತೇಷಾಮೇಷಾ ಭವತಿ । ನಿ. ೯-೫ ॥ ಇತಿ ॥ ವ್ರತಚಾರಿಣೋ ವ್ರತಂ ಸಂವತ್ಸರಸತ್ರಾತ್ಮಕಂ ಕರ್ಮಾಚರಂತೋ ಬ್ರಾಹ್ಮಣಾಃ । ಲುಪ್ತೋಪಮಮೇತತ್ । ಏವಂಭೂತಾ ಬ್ರಾಹ್ಮಣಾ ಇವ ಸಂವತ್ಸರಂ ಶರತ್ಪ್ರಭೃತ್ಯಾ ವರ್ಷರ್ತೋರೇಕಂ ಸಂವತ್ಸರಂ ಶಶಯಾನಾಃ ಶಿಶ್ಯಾನಾ ವರ್ಷಣಾರ್ಥಂ ತಪಶ್ಚರಂತ ಇವ ಬಿಲ ಏವ ಸಂತ ಏತೇ ಮಂಡೂಕಾಃ ಪರ್ಜನ್ಯಜಿನ್ವಿತಾಂ ಪರ್ಜನ್ಯೇನ ಪ್ರೀತಾಂ ಯಯಾ ವಾಚಾ ಪರ್ಜನ್ಯಃ ಪ್ರೀತೋ ಭವತಿ ತಾದೃಶೀಂ ವಾಚಂ ಪ್ರಾವಾದಿಷುಃ । ಪ್ರವದಂತಿ ॥

॥ ಪ್ರತಿಪದಾರ್ಥ ॥

ವ್ರತಚಾರಿಣಃ—ಸಂವತ್ಸರ ಸತ್ರಾತ್ಮಕವಾದ ವ್ರತವನ್ನಾಚರಿಸುವ । ಬ್ರಾಹ್ಮಣಾಃ—ಬ್ರಾಹ್ಮಣರಂತೆ । ಸಂವತ್ಸರಂ—ಸಂವತ್ಸರದ ಪರ್ಯಂತ (ಶರತ್ಕಾಲದಿಂದ ವರ್ಷಾಕಾಲದವರೆಗೂ) । ಶಶಯಾನಾಃ—ಮೌನದಿಂದ ತಪಸ್ಸನ್ನಾಚರಿಸುತ್ತಿದ್ದುವೋ ಎಂಬಂತಿದ್ದ । ಮಂಡೂಕಾಃ—ಕಪ್ಪೆಗಳು । ಪರ್ಜನ್ಯಜಿನ್ವತಾಂ—ಪರ್ಜನ್ಯನಿಗೆ ತೃಪ್ತಿಕಾರಕವಾದ । ವಾಚಂ—ವಾಕ್ಕನ್ನು । ಪ್ರ ಅವಾದಿಷುಃ—ಉಚ್ಚರಿಸುತ್ತವೆ.

। ಭಾವಾರ್ಥ ।

ಸಂವತ್ಸರಸತ್ರಾತ್ಮಕವಾದ ವ್ರತವನ್ನಾಚರಿಸುವ ಬ್ರಾಹ್ಮಣರಂತೆ ಸಂವತ್ಸರದ ಪರ್ಯಂತ ಎಂದರೆ ಶರತ್ಕಾಲದಿಂದ ವರ್ಷಾಕಾಲದವರೆಗೆ ತಪಸ್ಸನ್ನಾಚರಿಸುತ್ತಿದ್ದವೋ ಎಂಬಂತೆ ಮೌನದಿಂದಿದ್ದ ಕಪ್ಪೆಗಳು ಪರ್ಜನ್ಯನಿಗೆ ತೃಪ್ತಿಕಾರಕವಾದ ವಾಕ್ಕನ್ನು ಉಚ್ಚರಿಸುತ್ತವೆ.

## English Translation

The frogs, like Brahmans, observant of their vows, practising penance throughout the year, utter aloud praises agreeable to Parjanya.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

> ಸಂವತ್ಸರಂ ಶಿಶ್ಯಾನಾ ಬ್ರಾಹ್ಮಣಾ ವ್ರತಚಾರಿಣೋಽಬ್ರುವಾಣಾಃ । ಅಪಿ ವೋಪಮಾರ್ಥೇ ಸ್ಯಾದ್ಬ್ರಾಹ್ಮಣಾ ಇವ ವ್ರತಚಾರಿಣ ಇತಿ । ವಾಚಂ ಪರ್ಜನ್ಯಪ್ರೀತಾಂ ಪ್ರಾವಾದಿಷುರ್ಮಂಡೂಕಾಃ ॥
>
> (ನಿ. ೯-೬)

ಈ ಋಕ್ಕಿಗೆ ಯಾಸ್ಕರ ವಿವರಣೆಯು ಎರಡು ವಿಧವಾಗಿದೆ. ಒಂದು ವರ್ಷದವರೆಗೆ ಮಾಡಲ್ಪಡುವ ಸತ್ರಾದಿ ಯಾಗಗಳಲ್ಲಿ ಬ್ರಾಹ್ಮಣರು ಒಂದು ವರ್ಷದವರೆಗೆ ಎಂದರೆ ಶರತ್ಕಾಲದಿಂದ ವರ್ಷಾಕಾಲದವರೆಗೆ ಮೌನದಿಂದಿರುವುದೇ

ಮೊದಲಾದ ವ್ರತನಿಯಮಗಳನ್ನು ಪಾಲಿಸುತ್ತಾ ಇದ್ದು ವರ್ಷಾಕಾಲ ಪ್ರಾರಂಭವಾದ ಕೂಡಲೆ ವ್ರತಸಮಾಪ್ತಿಯಿಂದ ಪರ್ಜನ್ಯದೇವತೆಯನ್ನು ತೃಪ್ತಿಪಡಿಸುವ ಸ್ತೋತ್ರರೂಪವಾದ ಮಂತ್ರಗಳನ್ನು ಸಂತೋಷದಿಂದ ಪಠಿಸುವರು ಎಂದು ಒಂದು ವಿಧವಾದ ಅರ್ಥವು. ಅಥವಾ ಇಲ್ಲಿ ವ್ರತಚಾರಿಗಳಾದ ಬ್ರಾಹ್ಮಣರ ದೃಷ್ಟಾಂತವನ್ನೇ ತೆಗೆದುಕೊಂಡು ಮಂಡೂಕಗಳು ಶಬ್ದಮಾಡಿದವು ಎಂಬ ಅರ್ಥವು ನಿರ್ದಿಷ್ಟವಾಗಿರಬಹುದು. ಈ ಸಂದರ್ಭದಲ್ಲಿ—ಒಂದು ಸಂವತ್ಸರದ ವರೆಗೆ ಎಂದರೆ ಶರತ್ಕಾಲದಿಂದ ವರ್ಷಾಕಾಲದವರೆಗೆ ಮೌನದಿಂದಿರುತ್ತಾ ಯಾಗಾದಿಗಳನ್ನು ಮಾಡಿ ಕೊನೆಯಲ್ಲಿ ಮೌನವನ್ನು ಬಿಟ್ಟು ಪರ್ಜನ್ಯದೇವತೆಯನ್ನು ಮಂತ್ರಗಳಿಂದ ಸ್ತುತಿಸುವಾಗ ಬ್ರಾಹ್ಮಣರು ಯಾವರೀತಿ ಘಟ್ಟಿಯಾಗಿ ಧ್ವನಿಗೈಯುವರೋ ಅದೇ ರೀತಿಯಾಗಿ ಮಂಡೂಕಗಳು (ಕಪ್ಪೆಗಳು) ಭೂಮಿಯ ಮೇಲೆ ಇರುವ ನೀರೆಲ್ಲಾ ಒಣಗಿ ಹೋಗಿರುವ ಕಾರಣ ಪುನಃ ವರ್ಷಕಾಲ (ಮಳೆಗಾಲ) ಬರುವವರೆಗೂ ಕಲ್ಲಿನ ಸಂದಿಗೊಂದಿಗಳಲ್ಲಿ ಯಾರಿಗೂ ಕಾಣ ದಂತೆಯೂ ಯಾವವಿಧವಾದ ಶಬ್ದವನ್ನು ಮಾಡದಂತೆಯೂ ಮೌನದಿಂದ ವಾಸವಾಗಿದ್ದು ಮಳೆ ಬಂದಕೂಡಲೇ ಅತ್ಯಂತ ಸಂತೋಷದಿಂದ ಘಟ್ಟಿಯಾಗಿ ಶಬ್ದಮಾಡಲು ಪ್ರಾರಂಭಿಸುವವು. ಮಂಡೂಕಗಳ ಈ ಶಬ್ದವು ವ್ರತಾಂತ್ಯದಲ್ಲಿ ಮೌನವ್ರತವನ್ನು ಸಮಾಪ್ತಿಗೊಳಿಸಿ ಬಳಿಕ ಪರ್ಜನ್ಯವನ್ನು ಸ್ತುತಿಸುವಾಗ ವೇದಘೋಷಮಾಡುವ ಬ್ರಾಹ್ಮಣರ ವೇದ ಮಂತ್ರಗಳ ಧ್ವನಿಯಂತೆ ಇರುವವು. ಎಂದರೆ ಮಂಡೂಕಗಳು ಸಂತೋಷದಿಂದ ಪರ್ಜನ್ಯನನ್ನು ತೃಪ್ತಿಗೊಳಿಸುವುದ ಕ್ಕಾಗಿ ಘಟ್ಟಿಯಾಗಿ ಶಬ್ದಮಾಡುತ್ತಿರುವವು ಎಂಬ ಇನ್ನೊಂದು ವಿಧವಾದ ಅರ್ಥವೂ ಸಾಧ್ಯವೆಂದು ಯಾಸ್ಕರು ವಿವರಿಸಿರುವರು.

॥ ಸಂಹಿತಾಪಾಠಃ ॥

ದಿವ್ಯಾ ಆಪೋ ಅಭಿ ಯದೇನಮಾಯನ್ದೃತಿಂ ನ ಶುಷ್ಕಂ ಸರಸೀ ಶಯಾನಂ।
ಗವಾಮಹ ನ ಮಾಯುರ್ವತ್ಸಿನೀನಾಂ ಮಂಡೂಕಾನಾಂ ವಗ್ನುರತ್ರಾ ಸಮೇತಿ ॥ ೨ ॥

॥ ಪದಪಾಠಃ ॥

ದಿವ್ಯಾಃ । ಆಪಃ । ಅಭಿ । ಯತ್ । ಏನಂ । ಆಯನ್ । ದೃತಿಂ । ನ । ಶುಷ್ಕಂ । ಸರಸೀ ಇತಿ । ಶಯಾನಂ ।
ಗವಾಂ । ಅಹ । ನ । ಮಾಯುಃ । ವತ್ಸಿನೀನಾಂ । ಮಂಡೂಕಾನಾಂ । ವಗ್ನುಃ । ಅತ್ರ । ಸಂ । ಏತಿ ॥

॥ ಸಾಯಣಭಾಷ್ಯಂ ॥

ದಿವ್ಯಾ ದಿವಿ ಭವಾ ಆಪೋ ದೃತಿಂ ನ ದೃತಿಮಿವ ಶುಷ್ಕಂ ನೀರಸಂ ಸರಸೀ ॥ ಮಹತ್ಸರಃ ಸರಸೀ । ಗೌರಾದಿಲಕ್ಷಣೋ ಜೀಷ್ । ಸರಸ್ಯಾಂ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಈದೂತೌ ಚ ಸಪ್ತ-ಮ್ಯರ್ಥ ಇತಿ ಪ್ರಗೃಹ್ಯಸಂಜ್ಞಾ ॥ ಮಹತಿ ಸರಸಿ ನಿರ್ಜಲೇ ಘರ್ಮಕಾಲೇ ಶಯಾನಂ ನಿವಸಂತಮೇನಂ

ಮಂಡೂಕಗಣಂ ಯದ್ಯದಾಯನ್ ಅಭಿಗಚ್ಛಂತಿ ತದಾತ್ರಾಸ್ಮಿನ್ವರ್ಷಣೇ ಪರ್ಜನ್ಯೇ ವಾ ಸತಿ ವತ್ಸಿನೀನಾಂ ವತ್ಸೈರ್ಯುಕ್ತಾನಾಂ ಗವಾಂ ನ ಮಾಯುರ್ಗವಾಂ ಶಬ್ದ ಇವ ಮಂಡೂಕಾನಾಂ ವಗ್ನುಃ ಶಬ್ದಃ ಸಮೇತಿ । ಸಂಗಚ್ಛತೇ । ಯಥಾ ವತ್ಸೈಃ ಸಂಗತಾಸು ಗೋಷು ಮಹಾನ್ ಘೋಷೋ ಜಾಯತೇ ತದ್ವದ್ವೃಷ್ಟೇ ಪರ್ಜನ್ಯೇ ಮಹಾನ್ ಕಲಕಲಶಬ್ದೋ ಜಾಯತ ಇತ್ಯರ್ಥಃ । ಅಹೇತಿ ಪೂರಕಃ ॥

॥ ಪ್ರತಿಪದಾರ್ಥ ॥

ದೃತಿಂ ನ—ನೀರಸವಾದ ಚರ್ಮಚೀಲವು ಹರಡಿದಂತೆ । ಶುಷ್ಕಂ—(ಬೇಸಿಗೆಯ ಫಲವಾಗಿ) ಜಲರಹಿತವಾದ । ಸರಸೀ—ದೊಡ್ಡ ಸರೋವರದಲ್ಲಿ । ಶಯಾನಂ—ಸುಪ್ತವಾಗಿರತಕ್ಕ । ಏನಂ ಅಭಿ—ಈ ಮಂಡೂಕ (ಕಪ್ಪೆ) ಗಣದ ಮೇಲೆ । ಯತ್—ಯಾವಾಗ । ದಿವ್ಯಾಃ—ದ್ಯುಲೋಕೋತ್ಪನ್ನವಾದ । ಆಪಃ—ವೃಷ್ಟ್ಯುದಕಗಳು । ಆಯನ್—ಬಂದು ಬೀಳುವುವೋ । ಅತ್ರ—ಈ ವೃಷ್ಟಿಕಾಲದಲ್ಲಿ । ವತ್ಸಿನೀನಾಂ—ಕರುಗಳೊಡನೆ ಸೇರಿಕೊಂಡ । ಗವಾಂ ಮಾಯುಃ ನ—ಗೋವುಗಳ ಮರ್ಮರಶಬ್ದದಂತೆ । ಮಂಡೂಕಾನಾಂ-ಕಪ್ಪೆಗಳ । ವಗ್ನುಃ—ಶಬ್ದವು । (ಅಹ) ಸಮೇತಿ—ಒಟ್ಟಿಗೆ ಹೊರಡುತ್ತದೆ.

॥ ಭಾವಾರ್ಥ ॥

ನೀರಸವಾದ ಚರ್ಮಚೀಲವು ಹರಡಿದಂತೆ ಬೇಸಿಗೆಯ ಫಲವಾಗಿ ಜಲರಹಿತವಾಗಿ ಶುಷ್ಕವಾದ ದೊಡ್ಡ ಸರೋವರದಲ್ಲಿ ಸುಪ್ತವಾಗಿದ್ದ ಈ ಮಂಡೂಕಗಣದ ಮೇಲೆ ದ್ಯುಲೋಕೋತ್ಪನ್ನವಾದ ವೃಷ್ಟ್ಯುದಕಗಳು ಯಾವಾಗ ಬಂದು ಬೀಳುವುವೋ ಅಂತಹ ವೃಷ್ಟಿಕಾಲದಲ್ಲಿ ಕರುಗಳೊಡನೆ ಸೇರಿಕೊಂಡ ಗೋವುಗಳ ಮರ್ಮರಶಬ್ದದಂತೆ ಕಪ್ಪೆಗಳ ಶಬ್ದವು ಒಟ್ಟಿಗೆ ಹೊರಡುತ್ತದೆ.

English Translation

When the waters of the sky fall upon (the troop of frogs) sleeping in the (exhausted) lake like a dry waterskin; then rises together the croaking of the frogs, like the bellowing of cows when joined by their calves.

॥ ಸಂಹಿತಾಪಾಠಃ ॥

ಯದೀಮೇನಾಁ ಉಶತೋ ಅಭ್ಯವರ್ಷೀತ್ತೃಷ್ಯಾವತಃ ಪ್ರಾವೃಷ್ಯಾ-
ಗತಾಯಾಂ ।
ಅಖ್ಖಲೀಕೃತ್ಯಾ ಪಿತರಂನ ಪುತ್ರೋ ಅನ್ಯೋ ಅನ್ಯಮುಪ ವದಂತಮೇತಿ॥೩॥

॥ ಪದಪಾಠಃ ॥

ಯತ್ । ಈಂ । ಏನಾನ್ । ಉಶತಃ । ಅಭಿ । ಅವರ್ಷೀತ್ । ತೃಷ್ಯಾऽವತಃ । ಪ್ರಾವೃಷಿ ।
ಆऽಗತಾಯಾಂ ।

ಅಖ್ಖಲೀಕೃತ್ಯ । ಪಿತರಂ । ನ । ಪುತ್ರಃ । ಅನ್ಯಃ । ಅನ್ಯಂ । ಉಪ । ವದಂತಂ । ಏತಿ ॥ ೩ ॥

। ಸಾಯಣಭಾಷ್ಯಂ ।

ಉಶತಃ ಕಾಮಯಮಾನಾಂಸ್ತೃಷ್ಯಾವತಸ್ತೃಷ್ಣಾವತ ಏನಾನ್ಮಂಡೂಕಾನ್ ಪ್ರಾವೃಷಿ ವರ್ಷಕಾಲಾಗತಾಯಾಮಾಗತೇ ಸತಿ ಯದ್ಯದಾಭ್ಯವರ್ಷೀತ್ ಪರ್ಜನ್ಯೋ ಜಲೈರಭಿಷಿಂಚತಿ । ಈಮಿತಿ ಪೂರಣಃ। ತದಾನೀಮಖ್ಖಲೀಕೃತ್ಯ । ಅಖ್ಖಲ ಇತಿ ಶಬ್ದಾನುಕರಣಂ । ಅಖ್ಖಲಶಬ್ದಂ ಕೃತ್ವಾ ಪುತ್ರಃ ಪಿತರಂ ನ ಪಿತರಮಿವಾನ್ಯೋ ಮಂಡೂಕೋ ವದಂತಂ ಶಬ್ದಯಂತಮನ್ಯಂ ಮಂಡೂಕಮುಪೈತಿ । ಪ್ರಾಪ್ನೋತಿ ॥

। ಪ್ರತಿಪದಾರ್ಥ ।

ಉಶತಃ—ವೃಷ್ಟಿಯನ್ನಪೇಕ್ಷಿಸುವುವೂ । ತೃಷ್ಯಾವತಃ—ಬೇಸಿಗೆಯಲ್ಲೆಲ್ಲಾ ಉದಕಾರ್ಥವಾದ ದಾಹವನ್ನು ಹೊಂದಿದ್ದವೂ ಆದ । ಏನಾನ್—ಈ ಮಂಡೂಕಗಳ ಮೇಲೆ । ಪ್ರಾವೃಷಿ—ವರ್ಷಾಕಾಲವು । ಆಗತಾಯಾಂ—ಪ್ರಾರಂಭವಾದಾಗ । ಯತ್—ಯಾವಾಗ । ಅಭ್ಯವರ್ಷೀತ್—ಪರ್ಜನ್ಯನು ವೃಷ್ಟಿಯನ್ನು ಸುರಿಸುವನೋ (ಆಗ)। ಅಖ್ಖಲೀಕೃತ್ಯ—ತೊದಲುಮಾತುಗಳನ್ನಾಡುತ್ತಾ । ಪುತ್ರಃ—ಎಳೆಯ ಮಗುವು । ಪಿತರಂ ನ—ತಂದೆಯನ್ನು ಸಮೀಪಿಸುವಂತೆ । ಅನ್ಯಃ—ಒಂದು ಮಂಡೂಕವು । ವದಂತಂ—ಶಬ್ದಮಾಡುತ್ತಿರುವ । ಅನ್ಯಂ—ಮತ್ತೊಂದನ್ನು। ಉಪ ಏತಿ—ಸಮೀಪಿಸುತ್ತದೆ.

॥ ಭಾವಾರ್ಥ ॥

ವೃಷ್ಟಿಯನ್ನಪೇಕ್ಷಿಸುವುವೂ, ಬೇಸಿಗೆಯಲ್ಲೆಲ್ಲಾ ಉದಕಾರ್ಥವಾದ ದಾಹವನ್ನು ಹೊಂದಿದ್ದವೂ ಆದ ಈ ಮಂಡೂಕಗಳ ಮೇಲೆ ವರ್ಷಾಕಾಲವು ಪ್ರಾರಂಭವಾದಾಗ ಯಾವಾಗ ಪರ್ಜನ್ಯನು ವೃಷ್ಟಿಯನ್ನು ಸುರಿಸುವನೋ ಆಗ ತೊದಲುಮಾತುಗಳನ್ನಾಡುತ್ತಾ ಎಳೆಯ ಮಗುವು ತಂದೆಯನ್ನು ಸಮೀಪಿಸುವಂತೆ ಒಂದು ಮಂಡೂಕವು ಶಬ್ದ ಮಾಡುತ್ತಿರುವ ಮತ್ತೊಂದು ಮಂಡೂಕವನ್ನು ಸಮೀಪಿಸುತ್ತದೆ.

## English Translation

When the rainy season has arrived, and (Parjanya) has sent the rain upon them, thirsty and longing (for its coming), then one frog meets another croaking (his congratulations) as a child (calls to) its father with inarticulate ejaculations.

।। ಸಂಹಿತಾಪಾಠಃ ।

ಅನ್ಯೋ ಅನ್ಯಮನು ಗೃಭ್ಣಾತ್ಯೇನೋರಪಾಂ ಪ್ರಸರ್ಗೇ ಯದಮಂದಿ-
ಷಾತಾಂ ।

ಮಂಡೂಕೋ ಯದಭಿವೃಷ್ಟಃ ಕನಿಷ್ಕನ್ಪೃಶ್ನಿಃ ಸಂಪೃಂಕ್ತೇ ಹರಿತೇನ

ವಾಚಂ ॥ ೪ ॥

॥ ಪದಪಾಠಃ ॥

ಅನ್ಯಃ । ಅನ್ಯಂ । ಅನು । ಗೃಭ್ಣಾತಿ । ಏನೋಃ । ಅಪಾಂ । ಪ್ರಽಸರ್ಗೇ । ಯತ್ । ಅಮಂದಿಷಾತಾಂ । ಮಂಡೂಕಃ । ಯತ್ । ಅಭಿಽವೃಷ್ಟಃ । ಕನಿಸ್ಕನ್ । ಪೃಶ್ನಿಃ । ಸಂಽಪೃಂಕ್ತೇ । ಹರಿತೇನ । ವಾಚಂ ॥೪॥

॥ ಸಾಯಣಭಾಷ್ಯಂ ॥

ಏನೋರೇನಯೋರ್ದ್ವಯೋರ್ಮಂಡೂಕಯೋರನ್ಯೋ ಮಂಡೂಕೋಽನ್ಯಂ ಮಂಡೂಕಮನುಗಮ್ಯ ಗೃಭ್ಣಾತಿ । ಗೃಹ್ಣಾತಿ । ಅಪಾಮುದಕಾನಾಂ ಪ್ರಸರ್ಗೇ ಪ್ರಸರ್ಜನೇ ವರ್ಷಣೇ ಸತಿ ಯದ್ಯದಾಮಂದಿಷಾತಾಂ ಹೃಷ್ಟಾವಭೂತಾಂ । ಯದ್ಯದಾ ಚಾಭಿವೃಷ್ಟಃ ಪರ್ಜನ್ಯೇನಾಭಿಷಿಕ್ತಃ ಕನಿಷ್ಕನ್ ॥ ಸ್ಕಂದತೇರ್ಯಙ್ಲುಗಂತಸ್ಯ ರೂಪಂ॥ಭೃಶಂ ಸ್ಕಂದನ್ನುತ್ಪ್ಲವಂ ಕುರ್ವನ್ ಪೃಶ್ನಿಃ ಪೃಶ್ನಿವರ್ಣೋ ಮಂಡೂಕೋ ಹರಿತೇನ ಹರಿತವರ್ಣೇನಾನ್ಯೇನ ಮಂಡೂಕೇನ ವಾಚಂ ಸಂಪೃಕ್ತೇ ಸಂಯೋಜಯತಿ ಉಭಾವಪ್ಯೇಕವಿಧಂ ಶಬ್ದಂ ಕುರ್ವಾತೇ । ತದಾನೀಮನ್ಯೋಽನ್ಯಮನು ಗೃಭ್ಣಾತೀತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಅಪಾಂ**—ಉದಕಗಳ । **ಪ್ರಸರ್ಗೇ**—ವರ್ಷಣವಾದಾಗ । **ಯತ್**—ಯಾವಾಗ । **ಅಮಂದಿಷಾತಾಂ**—ಒಟ್ಟಿಗೆ ಸೇರಿರುವ ಈ ಎರಡು ಮಂಡೂಕಗಳೂ ಸಂತೋಷವನ್ನು ಸೂಚಿಸುವುವೋ (ಮತ್ತು) । **ಯತ್**—ಯಾವಾಗ। **ಅಭಿವೃಷ್ಟಃ**—ವೃಷ್ಟಿಯಿಂದ ತೊಯ್ಯಲ್ಪಟ್ಟಿದ್ದೂ । **ಕನಿಷ್ಕನ್**—ಶಬ್ದಮಾಡುತ್ತಿರುವುದೂ' **ಪೃಶ್ನಿಃ**—ಪೃಶ್ನಿ ವರ್ಣವುಳ್ಳದ್ದೂ ಆದ ಒಂದು ಮಂಡೂಕವು । **ಹರಿತೇನ**—ಹರಿತವರ್ಣವುಳ್ಳ ಇನ್ನೊಂದು ಮಂಡೂಕದೊಡನೆ (ಅದರ ಶಬ್ದದೊಡನೆ) । **ವಾಚಂ ಸಂಪೃಂಕ್ತೇ**—ಶಬ್ದರೂಪವಾದ ವಾಕ್ಕನ್ನು ಸೇರಿಸುವುದೋ (ಆಗ) । **ಏನೋಃ**—ಈ ಎರಡು ಮಂಡೂಕಗಳಲ್ಲಿ । **ಅನ್ಯಃ ಮಂಡೂಕಃ**—ಒಂದು ಕಪ್ಪೆಯು । **ಅನ್ಯಂ**—ಇನ್ನೊಂದನ್ನು । **ಅನು ಗೃಭ್ಣಾತಿ**—ಅಭಿನಂದಿಸುತ್ತದೆ.

॥ ಭಾವಾರ್ಥ ॥

ವೃಷ್ಟಿವರ್ಷಣವಾದ ಕಾಲದಲ್ಲಿ ಯಾವಾಗ ಒಟ್ಟಿಗೆ ಸೇರಿರುವ ಈ ಎರಡು ಮಂಡೂಕಗಳೂ ಸಂತೋಷವನ್ನು ಸೂಚಿಸುವುವೋ ಮತ್ತು ಯಾವಾಗ ವೃಷ್ಟಿಯಿಂದ ತೊಯ್ಯಲ್ಪಟ್ಟಿದ್ದೂ, ಶಬ್ದಮಾಡುತ್ತಿರುವುದೂ, ನಾನಾವಿಧವರ್ಣವುಳ್ಳದ್ದೂ ಆದ ಒಂದು ಮಂಡೂಕವು ಹರಿತವರ್ಣವುಳ್ಳ ಇನ್ನೊಂದರ ಶಬ್ದದೊಡನೆ ತನ್ನ ಶಬ್ದವನ್ನು ಸೇರಿಸುವುದೋ ಆಗ ಈ ಎರಡು ಮಂಡೂಕಗಳಲ್ಲಿ ಒಂದು ಇನ್ನೊಂದನ್ನು ಅಭಿನಂದಿಸುತ್ತದೆ.

## English Translation

One of these two congratulates the other as they are both delighting in the forthcoming of rain; the speckled frog, leaping up repeatedly when moistened (by the shower), joins greetings with the green one.

॥ ಸಂಹಿತಾಪಾಠಃ ॥

ಯದೇಷಾಮನ್ಯೋ ಅನ್ಯಸ್ಯ ವಾಚಂ ಶಾಕ್ತಸ್ಯೇವ ವದತಿ ಶಿಕ್ಷಮಾಣಃ ।
ಸರ್ವಂ ತದೇಷಾಂ ಸಮೃಧೇವ ಪರ್ವ ಯತ್ಸುವಾಚೋ ವದಥನಾಧ್ಯಪ್ಸು ॥

। ಪದಪಾಠಃ ।

ಯತ್ । ಏಷಾಂ । ಅನ್ಯಃ । ಅನ್ಯಸ್ಯ । ವಾಚಂ । ಶಾಕ್ತಸ್ಯಽಇವ । ವದತಿ । ಶಿಕ್ಷಮಾಣಃ ।
ಸರ್ವಂ । ತತ್ । ಏಷಾಂ । ಸಮೃಧಾಽಇವ । ಪರ್ವ । ಯತ್ । ಸುಽವಾಚಃ । ವದಥನ । ಅಧಿ । ಅಪ್ಽಸು ॥ ೫ ॥

। ಸಾಯಣಭಾಷ್ಯಂ ।

ಹೇ ಮಂಡೂಕಾಃ ಯದ್ಯದೈಷಾಂ ಯುಷ್ಮಾಕಂ ಮಧ್ಯೇಽನ್ಯೋ ಮಂಡೂಕೋಽನ್ಯಸ್ಯ ಮಂಡೂಕಸ್ಯ ವಾಚಂ ವದತಿ ಅನುವದತಿ ಅನುಕರೋತಿ ಶಿಕ್ಷಮಾಣಃ ಶಿಕ್ಷ್ಯಮಾಣಃ ಶಿಷ್ಯಃ ಶಾಕ್ತಸ್ಯೇವ ಶಕ್ತಿಮತಃ ಶಿಕ್ಷಕಸ್ಯ ವಾಚಂ ಯಥಾನುವದತಿ ತದ್ವತ್ । ಯದ್ಯದಾ ಚ ಸುವಾಚಃ ಶೋಭನವಾಚೋ ಯೂಯಂ ಸರ್ವೇಽಪ್ಸು ವೃಷ್ಟ್ಯುದಕೇಷ್ವಧ್ಯುಪರಿ ಪ್ಲವಂತೋ ವದಥನ ವದತ ಶಬ್ದಂ ಕುರುತ । ತತ್ತದೈಷಾಂ ಯುಷ್ಮಾಕಂ ಸರ್ವಂ ಪರ್ವ ಪರುಷ್ಮಚ್ಛರೀರಂ ಸಮೃಧೇವ ಸಮೃದ್ಧಮೇವಾವಿಕಲಾವಯವಮೇವ ಭವತಿ । ಇವಶಬ್ದೋಽವಧಾರಣೇ । ಘರ್ಮಕಾಲೇ ಮೃದ್ಭಾವಮಾಪನ್ನಾ ಮಂಡೂಕಾಃ ಪುನರ್ವರ್ಷಣೇ ಸತ್ಯವಿಕಲಾಂಗಾಃ ಪ್ರಾದುರ್ಭವಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಮಂಡೂಕಗಳೇ) ಶಿಕ್ಷಮಾಣಃ—ಪಾಠವನ್ನು ಕಲಿಯುವ ಶಿಷ್ಯನು । ಶಾಕ್ತಸ್ಯೇವ—ಗುರುವಿನ ಮಾತನ್ನು ಯಾವ ರೀತಿ ಅನುಕರಿಸುವನೋ ಹಾಗೆ । ಯತ್—ಯಾವಾಗ । ಏಷಾಂ—ನಿಮ್ಮ ನಡುವೆ । ಅನ್ಯಃ—ಒಂದು ಮಂಡೂಕವು । ಅನ್ಯಸ್ಯ—ಇನ್ನೊಂದು ಮಂಡೂಕದ । ವಾಚಂ—ಶಬ್ದವನ್ನು । ವದತಿ—ಅನುಕರಿಸುವುದೋ (ಮತ್ತು) । ಯತ್—ಯಾವಾಗ । ಸುವಾಚಃ—ಉತ್ತಮವಾದ ಶಬ್ದವನ್ನು ಮಾಡುವ ನೀವೆಲ್ಲಾ । ಅಪ್ಸು ಅಧಿ—ವೃಷ್ಟ್ಯುದಕಗಳಲ್ಲಿ ತೇಲುತ್ತಾ । ವದಥನ—ಶಬ್ದವನ್ನುಂಟುಮಾಡುವಿರೋ । ತತ್—ಆಗ ।

ವಿಷಾಂ—ನಿಮ್ಮ । ಸರ್ವಂ ಪರ್ವ—ಸಮಸ್ತಶರೀರವೂ । ಸಮೃಧೇವ—ವೃದ್ಧಿಯನ್ನು ಹೊಂದಿದವೋ ಎಂಬಂತಿರುತ್ತದೆ.

। ಭಾವಾರ್ಥ ।

ಎಲೈ ಮಂಡೂಕಗಳೇ, ಪಾಠವನ್ನು ಕಲಿಯುವ ಶಿಷ್ಯನು ಗುರುವಿನ ಮಾತನ್ನು ಯಾವ ರೀತಿ ಅನುಕರಿಸುವನೋ ಹಾಗೆ ಯಾವಾಗ ನಿಮ್ಮ ನಡುವೆ ಒಂದು ಮಂಡೂಕವು ಇನ್ನೊಂದು ಮಂಡೂಕದ ಶಬ್ದವನ್ನು ಅನುಕರಿಸುವುದೋ ಮತ್ತು ಯಾವಾಗ ಉತ್ತಮವಾದ ಶಬ್ದವನ್ನು ಮಾಡುವ ನೀವೆಲ್ಲಾ ವೃಷ್ಟ್ಯುದಕಗಳಲ್ಲಿ ತೇಲುತ್ತಾ ಶಬ್ದವನ್ನುಂಟುಮಾಡುವಿರೋ ಆಗ ನಿಮ್ಮ ಸಮಸ್ತಶರೀರವೂ ವೃದ್ಧಿಯನ್ನು ಹೊಂದಿದವೋ ಎಂಬಂತಿರುತ್ತದೆ.

## English Translation

When one of you imitates the croaking of another as a learner (imitates) his teacher, when, loud crying, you converse (leaping) upon the waters, then the entire body is as it were developed.

। ಸಂಹಿತಾಪಾಠಃ ।

ಗೋಮಾಯುರೇಕೋ ಅಜಮಾಯುರೇಕಃ ಪೃಶ್ನಿರೇಕೋ ಹರಿತ ಏಕ ಏಷಾಂ ।
ಸಮಾನಂ ನಾಮ ಬಿಭ್ರತೋ ವಿರೂಪಾಃ ಪುರುತ್ರಾ ವಾಚಂ ಪಿಪಿಶುರ್ವದಂತಃ ॥ ೬ ॥

। ಪದಪಾಠಃ ।

ಗೋಽಮಾಯುಃ । ಏಕಃ । ಅಜಽಮಾಯುಃ । ಏಕಃ । ಪೃಶ್ನಿಃ । ಏಕಃ । ಹರಿತಃ । ಏಕಃ । ಏಷಾಂ ।
ಸಮಾನಂ । ನಾಮ । ಬಿಭ್ರತಃ । ವಿಽರೂಪಾಃ । ಪುರುಽತ್ರಾ । ವಾಚಂ । ಪಿಪಿಶುಃ । ವದಂತಃ ॥ ೬ ॥

॥ ಸಾಯಣಭಾಷ್ಯಂ ॥

ಏಷಾಂ ಮಂಡೂಕಾನಾಂ ಮಧ್ಯ ಏಕೋ ಮಂಡೂಕೋ ಗೋಮಾಯುರ್ಗೋರ್ಮಾಯುರಿವ ಮಾಯುಃ ಶಬ್ದೋ ಯಸ್ಯ ತಾದೃಶೋ ಭವತಿ । ಏಕೋಽನ್ಯೋ ಮಂಡೂಕೋಽಜಮಾಯುರಜಸ್ಯ ಮಾಯುರಿವ ಮಾಯುರ್ಯಸ್ಯ ತಾದೃಶೋ ಭವತಿ । ಏಕಃ ಪೃಶ್ನಿಃ ಪೃಶ್ನಿವರ್ಣಃ । ಏಕೋಽಪರೋ ಹರಿತೋ ಹರಿತವರ್ಣಃ । ಏವಂ ವಿರೂಪಾ ನಾನಾರೂಪಾ ಅಪಿ ಸಮಾನಮೇಕಂ ಮಂಡೂಕಾ ಇತಿ

ನಾಮ ಬಿಭ್ರತೋ ಧಾರಯಂತಃ ಪುರುತ್ರಾ ಬಹುಷು ದೇಶೇಷು ವಾಚಂ ವದಂತಃ ಶಬ್ದಂ ಕುರ್ವಂತಃ ಪಿಪಿಶುಃ । ಅವಯವೀಭವಂತಿ । ಪ್ರಾದುರ್ಭವಂತಿ ॥ ಪಿಶ ಅವಯವೇ । ಪುರುಶಬ್ದಾದ್ದೇವಮನುಷ್ಯೇತ್ಯಾದಿನಾ ತ್ರಾಪ್ರತ್ಯಯಃ ॥

। ಪ್ರತಿಪದಾರ್ಥ ।

ಏಷಾಂ—ಈ ಮಂಡೂಕಗಳ ಮಧ್ಯದಲ್ಲಿ । ಏಕಃ—ಒಂದು । ಗೋಮಾಯುಃ—ಗೋವಿನ ಶಬ್ದದಂತೆ ಶಬ್ದಮಾಡುವುದಾಗಿರುತ್ತದೆ । ಏಕಃ—ಇನ್ನೊಂದು । ಅಜಮಾಯುಃ—ಆಡಿನ ಶಬ್ದವನ್ನನುಕರಿಸುವುದಾಗಿದೆ । ಏಕಃ—ಮತ್ತೊಂದು । ಪೃಶ್ನಿಃ-ಬಹುವರ್ಣವುಳ್ಳದ್ದಾಗಿದೆ । ಏಕಃ-ಇನ್ನೊಂದು । ಹರಿತಃ-ಹಸಿರುವರ್ಣವುಳ್ಳದ್ದಾಗಿದೆ । ವಿರೂಪಾಃ—ಈ ರೀತಿ ಬೇರೆ ಬೇರೆ ರೂಪವನ್ನು ಹೊಂದಿದ್ದರೂ ಸಹ। ಸಮಾನಂ ನಾಮ—ಮಂಡೂಕವೆಂಬ ಒಂದೇ ಹೆಸರನ್ನು । ಬಿಭ್ರತಃ—ಧರಿಸಿಕೊಂಡವಾಗಿ । ಪುರುತ್ರಾ—ಅನೇಕ ಪ್ರದೇಶಗಳಲ್ಲಿ । ವಾಚಂ ವದಂತಃ—ಶಬ್ದವನ್ನು ಮಾಡುತ್ತಾ । ಪಿಪಿಶುಃ—ಕಾಣಿಸಿಕೊಳ್ಳುತ್ತವೆ.

। ಭಾವಾರ್ಥ ।

ಈ ಮಂಡೂಕಗಳ ಮಧ್ಯದಲ್ಲಿ ಒಂದು ಗೋವಿನ ಶಬ್ದದಂತೆ ಶಬ್ದಮಾಡುತ್ತದೆ. ಇನ್ನೊಂದು ಆಡಿನ ಶಬ್ದವನ್ನನುಕರಿಸುತ್ತದೆ. ಒಂದು ಅನೇಕವರ್ಣವುಳ್ಳದ್ದಾಗಿರುತ್ತದೆ. ಇನ್ನೊಂದು ಹಸಿರುವರ್ಣವುಳ್ಳದ್ದಾಗಿದೆ. ಈ ರೀತಿ ಬೇರೆ ಬೇರೆ ರೂಪವನ್ನು ಹೊಂದಿದ್ದರೂ ಸಹ ಮಂಡೂಕವೆಂಬ ಒಂದೇ ಹೆಸರನ್ನು ಧರಿಸಿಕೊಂಡವಾಗಿ ಅನೇಕ ಪ್ರದೇಶಗಳಲ್ಲಿ ಶಬ್ದವನ್ನು ಮಾಡುತ್ತಾ ಕಾಣಿಸಿಕೊಳ್ಳುತ್ತವೆ.

## Englisn Translation

One frog has the bellowing of a cow, another the bleating of a goat; one of them speckled, one is green; designated by a common appellation, they are of various colours, and, croaking, show themselves in numerous places.

। ಸಂಹಿತಾಪಾಠಃ ।

ಬ್ರಾಹ್ಮಣಾಸೋ ಅತಿರಾತ್ರೇ ನ ಸೋಮೇ ಸರೋ ನ ಪೂರ್ಣಮಭಿತೋ ವದಂತಃ ।
ಸಂವತ್ಸರಸ್ಯ ತದಹಃ ಪರಿ ಷ್ಠ ಯನ್ಮಂಡೂಕಾಃ ಪ್ರಾವೃಷೀಣಂ ಬಭೂವ ॥

। ಪದಪಾಠಃ ।

ಬ್ರಾಹ್ಮಣಾಸಃ । ಅತಿऽರಾತ್ರೇ । ನ। ಸೋಮೇ । ಸರಃ । ನ । ಪೂರ್ಣಂ । ಅಭಿತಃ । ವದಂತಃ ।

ಸಂವತ್ಸರಸ್ಯ । ತತ್ । ಅಹಃ । ಪರಿ । ಸ್ಥ । ಯತ್ । ಮಂಡೂಕಾಃ । ಪ್ರಾವೃಷೀಣಂ । ಬಭೂವ ॥

। ಸಾಯಣಭಾಷ್ಯಂ ।

ರಾತ್ರಿಮತೀತ್ಯ ವರ್ತತ ಇತ್ಯತಿರಾತ್ರಃ । ಅತಿರಾತ್ರೇ ನ ಸೋಮೇ । ಯಥಾತಿರಾತ್ರಾಖ್ಯೇ ಸೋಮಯಾಗೇ ಬ್ರಾಹ್ಮಣಾಸೋ ಬ್ರಾಹ್ಮಣಾ ರಾತ್ರೌ ಸ್ತುತಶಸ್ತ್ರಾಣಿ ಪರ್ಯಾಯೇಣ ಶಂಸಂತಿ ಹೇ ಮಂಡೂಕಾಃ । ದ್ವಿತೀಯೋ ನಶಬ್ದಃ ಸಂಪ್ರತ್ಯರ್ಥೇ । ನ ಸಂಪ್ರತಿ ಪೂರ್ಣಂ ಸರೋಽಭಿತಃ ಸರ್ವತೋ ವದಂತೋ ರಾತ್ರೌ ಶಬ್ದಂ ಕುರ್ವಾಣಾ ಯೂಯಂ ತದಹಸ್ತದ್ದಿನಂ ಪರಿ ಷ್ಠ । ಪರಿತಃ ಸರ್ವತೋ ಭವಥ । ಯದಹಃ ಪ್ರಾವೃಷೀಣಂ ಪ್ರಾವೃಷೇಣ್ಯಂ ಪ್ರಾವೃಷಿ ಭವಂ ಬಭೂವ ತಸ್ಮಿನ್ನಹನಿ ಸರ್ವತೋ ವರ್ತಮಾನಾ ಭವಥೇತ್ಯರ್ಥಃ ॥

। ಪ್ರತಿಪದಾರ್ಥ ।

ಮಂಡೂಕಾಃ—ಎಲೈ ಮಂಡೂಕಗಳೇ । ಬ್ರಾಹ್ಮಣಾಸಃ—ಬ್ರಾಹ್ಮಣರು । ಅತಿರಾತ್ರೇ—ಅತಿರಾತ್ರ ಸಂಜ್ಞಕವಾದ । ಸೋಮೇ ನ—ಸೋಮಯಾಗದಲ್ಲಿ ಶಸ್ತ್ರಮಂತ್ರಗಳನ್ನು ಪರ್ಯಾಯರೂಪದಲ್ಲಿ ಪಠಿಸುತ್ತಾ ಶಬ್ದ ಮಾಡುವಂತೆ । ನ—ಈಗ । ಯತ್—ಯಾವ ಅಹಸ್ಸು । ಸಂವತ್ಸರಸ್ಯ—ಸಂವತ್ಸರದ । ಪ್ರಾವೃಷೀಣಂ—ಮಳೆ ಗಾಲಕ್ಕೆ।ಬಭೂವ—ಸೇರಿರುವುದೋ । ತದಹಃ—ಆ ದಿನಗಳಲ್ಲಿ । ಪೂರ್ಣಂ ಸರಃ—ನೀರಿನಿಂದ ತುಂಬಿದ ಸರಸ್ಸಿನ । ಅಭಿತಃ—ಸುತ್ತಲೂ । ವದಂತಃ—ಶಬ್ದಮಾಡುತ್ತಾ । ಪರಿ ಷ್ಠ—ಸುತ್ತಲೂ ತುಂಬಿಕೊಂಡಿದ್ದೀರಿ.

। ಭಾವಾರ್ಥ ।

ಎಲೈ ಮಂಡೂಕಗಳೇ, ಅತಿರಾತ್ರಸಂಜ್ಞಕವಾದ ಸೋಮಯಾಗದಲ್ಲಿ ಬ್ರಾಹ್ಮಣರು ಶಸ್ತ್ರಮಂತ್ರಗಳನ್ನು ಪರ್ಯಾಯರೂಪದಲ್ಲಿ ಪಠಿಸುತ್ತಾ ಶಬ್ದಮಾಡುವಂತೆ ಮಳೆಗಾಲದ ಈ ದಿನಗಳಲ್ಲಿ ನೀರಿನಿಂದ ತುಂಬಿದ ಸರೋವರದ ಸುತ್ತಲೂ ಶಬ್ದಮಾಡುತ್ತಾ ಸುತ್ತಲೂ ತುಂಬಿಕೊಂಡಿದ್ದೀರಿ.

English Translation

Like Brahmans at the Soma libation, at the Atiratra sacrifice, you are now croaking around the replenished lake (throughout the night), for on that day of the year you frogs are everywhere about, when it is the day of the setting in of the rains.

। ಸಂಹಿತಾಪಾಠಃ ।

ಬ್ರಾಹ್ಮಣಾಸಃ ಸೋಮಿನೋ ವಾಚಮಕ್ರತ ಬ್ರಹ್ಮ ಕೃಣ್ವಂತಃ ಪರಿವತ್ಸ-
ರೀಣಂ ।

ಅಧ್ವರ್ಯವೋ ಘರ್ಮಿಣಃ ಸಿಷ್ವಿದಾನಾ ಆವಿರ್ಭವಂತಿ ಗುಹ್ಯಾ ನ ಕೇ
ಚಿತ್ ॥ ೮ ॥

। ಪದಪಾಠಃ ।

ಬ್ರಾಹ್ಮಣಾಸಃ । ಸೋಮಿನಃ । ವಾಚಂ । ಅಕ್ರತ । ಬ್ರಹ್ಮ । ಕೃಣ್ವಂತಃ । ಪರಿವತ್ಸರೀಣಂ ।
ಅಧ್ವರ್ಯವಃ । ಘರ್ಮಿಣಃ । ಸಿಸ್ವಿದಾನಾಃ । ಆವಿಃ । ಭವಂತಿ । ಗುಹ್ಯಾಃ । ನ । ಕೇ । ಚಿತ್ ॥ ೮ ॥

॥ ಸಾಯಣಭಾಷ್ಯಂ ॥

ಸೋಮಿನಃ ಸೋಮಯುಕ್ತಾಃ ಪರಿವತ್ಸರೀಣಾಂ ಸಾಂವತ್ಸರಿಕಂ ಗವಾಮಯನಿಕಂ ಬ್ರಹ್ಮ ಸ್ತೋತ್ರಶಸ್ತ್ರಾತ್ಮಕಂ ಕೃಣ್ವಂತಃ ಕುರ್ವಂತೋ ಬ್ರಾಹ್ಮಣಾಸಃ । ಲುಪ್ತೋಪಮಮೇತತ್ । ಬ್ರಾಹ್ಮಣಾ ಇವ ವಾಚಂ ಶಬ್ದಮಕ್ರತ । ಅಕೃಷತೇಮೇ ಮಂಡೂಕಾಃ । ಅಪಿ ಚ ಘರ್ಮಿಣೋ ಘರ್ಮೇಣ ಪ್ರವರ್ಗ್ಯೇಣ ಚರಂತೋಽಧ್ವರ್ಯವೋಽಧ್ವರಸ್ಯ ನೇತಾರ ಋತ್ವಿಜ ಇವ ಸಿಷ್ವಿದಾನಾಃ ಸ್ವಿದ್ಯದ್ಗಾತ್ರಾ ಗುಹ್ಯಾ ಘರ್ಮಕಾಲೇ ಬಿಲೇಽಭಿಗೂಢಾಃ ಕೇ ಚಿತ್ ಕೇಚನ ಮಂಡೂಕಾ ನ ಸಂಪ್ರತಿ ವೃಷ್ಟೌ ಸತ್ಯಾಮಾವಿರ್ಭವಂತಿ । ಜಾಯಂತೇ ॥

। ಪ್ರತಿಪದಾರ್ಥ ।

ಸೋಮಿನಃ -- ಸೋಮಯುಕ್ತರೂ । ಪರಿವತ್ಸರೀಣಂ—ಗವಾಮಯನಸಂಬಂಧವಾದ । ಬ್ರಹ್ಮ—ಶಸ್ತ್ರಮಂತ್ರಗಳನ್ನು । ಕೃಣ್ವಂತಃ-ಪಠಿಸುವವರೂ ಆದ । ಬ್ರಾಹ್ಮಣಾಸಃ- ಬ್ರಾಹ್ಮಣರಂತೆ । ವಾಚಂ—ಶಬ್ದವನ್ನು । ಅಕ್ರತ—ಈ ಮಂಡೂಕಗಳು ಮಾಡುತ್ತವೆ । ಘರ್ಮಿಣಃ—ಪ್ರವರ್ಗ್ಯಯಾಗದಲ್ಲಿ ಓಡಾಡುವ । ಅಧ್ವರ್ಯವಃ—ಅಧ್ವರ್ಯುಗಳಂತೆ । ಸಿಷ್ವಿದಾನಾಃ—ಬೆವರನ್ನು ಸುರಿಸಿಕೊಂಡು (ಶ್ರಮವನ್ನು ಹೊಂದಿದ ದೇಹವುಳ್ಳವಾಗಿ । ಗುಹ್ಯಾಃ—ಬೇಸಿಗೆಯಲ್ಲಿ ಬಿಲದಲ್ಲಿ ಅಡಗಿಕೊಂಡು । ಕೇ ಚಿತ್—ಕೆಲವು ಮಂಡೂಕಗಳು । ನ—ಈ ವರ್ಷಾ ಕಾಲದಲ್ಲಿ । ಆವಿರ್ಭವಂತಿ—ಹೊರಗೆ ಕಾಣಿಸಿಕೊಳ್ಳುತ್ತವೆ.

॥ ಭಾವಾರ್ಥ ॥

ಸೋಮಯುಕ್ತರೂ, ಗವಾಮಯನಸಂಬಂಧವಾದ ಶಸ್ತ್ರಮಂತ್ರಗಳನ್ನು ಪಠಿಸುವವರೂ ಆದ ಬ್ರಾಹ್ಮಣರಂತೆ ಈ ಮಂಡೂಕಗಳು ಶಬ್ದವನ್ನು ಮಾಡುತ್ತವೆ. ಪ್ರವರ್ಗ್ಯಯಾಗದಲ್ಲಿ ಓಡಾಡುವ ಅಧ್ವರ್ಯುಗಳಂತೆ ಬೆವರನ್ನು ಸುರಿಸಿ ಶ್ರಮವನ್ನು ಹೊಂದಿದ ದೇಹವುಳ್ಳವಾಗಿ ಬೇಸಿಗೆಯಲ್ಲಿ ಬಿಲದಲ್ಲಿ ಅಡಗಿಕೊಂಡಿರುವ ಮಂಡೂಕಗಳಲ್ಲಿ ಕೆಲವು ಈ ವರ್ಷಾಕಾಲದಲ್ಲಿ ಹೊರಕ್ಕೆ ಬಂದು ಕಾಣಿಸಿಕೊಳ್ಳುತ್ತವೆ.

## English Translatian

They utter a loud cry, Like Brahmans when bearing the Soma

libation, and reciting the perennial prayer : like ministrant priests with the gharma offering, they hid (in the hot weather) perspiring (in their holes), but now some of them appear.

। ಸಂಹಿತಾಪಾಠಃ ॥

ದೇವಹಿ॑ತಿಂ ಜುಗುಪುರ್ದ್ವಾ॒ದಶಸ್ಯ॑ ಋ॒ತುಂ ನರೋ॒ ನ ಪ್ರ ಮಿ॑ನಂತ್ಯೇ॒ತೇ ।
ಸಂ॒ವ॒ತ್ಸ॒ರೇ ಪ್ರಾವೃಷ್ಯಾಗ॑ತಾಯಾಂ ತ॒ಪ್ತಾ ಘ॒ರ್ಮಾ ಅ॑ಶ್ನುವತೇ ವಿ॒ಸ॒ರ್ಗಂ ॥

। ಪದಪಾಠಃ ।

ದೇ॒ವಽಹಿ॑ತಿಂ । ಜು॒ಗು॒ಪುಃ॒ । ದ್ವಾ॒ದ॒ಶಸ್ಯ॑ । ಋ॒ತುಂ । ನರಃ॑ । ನ । ಪ್ರ । ಮಿ॒ನಂ॒ತಿ॒ । ಏ॒ತೇ ।
ಸಂ॒ವ॒ತ್ಸ॒ರೇ । ಪ್ರಾ॒ವೃಷಿ॑ । ಆಽಗ॑ತಾಯಾಂ । ತ॒ಪ್ತಾಃ । ಘ॒ರ್ಮಾಃ । ಅ॒ಶ್ನು॒ವ॒ತೇ॒ । ವಿ॒ಽಸ॒ರ್ಗಂ ॥ ೯ ॥

। ಸಾಯಣಭಾಷ್ಯಂ ।

ನರೋ ನೇತಾರ ಏತೇ ಮಂಡೂಕಾ ದೇವಹಿತಿಂ ದೇವೈಃ ಕೃತಂ ವಿಧಾನಮಸ್ಮತ್ಕರ್ತೃಕಂ ಧರ್ಮ ಇತ್ಯೇವಂರೂಪಂ ಜುಗುಪುಃ । ಗೋಪಾಯಂತಿ । ಕಾಲೇ ಕಾಲೇ ರಕ್ಷಂತಿ । ಅತ ಏವ ದ್ವಾದಶಸ್ಯ ದ್ವಾದಶಮಾಸಾತ್ಮಕಸ್ಯ ಸಂವತ್ಸರಸ್ಯರ್ತುಂ ತಂ ತಂ ವಸಂತಾದಿಕಂ ನ ಪ್ರ ಮಿನಂತಿ । ನ ಹಿಂಸಂತಿ । ಪರ್ಜನ್ಯಸ್ತುತೇರನುಮೋದನೇನ ತತ್ತತ್ಕಾಲೇ ವೃಷ್ಟಿಹೇತವೋ ಭವಂತೀತ್ಯರ್ಥಃ । ಸಂವತ್ಸರೇ ಸಂಪೂರ್ಣೇ ಪ್ರಾವೃಷಿ ವರ್ಷಕಾಲ ಆಗತಾಯಾಮಾಗತೇ ಸತಿ ಘರ್ಮಾಃ ಪೂರ್ವಂ ಘರ್ಮಕಾಲೇ ವರ್ತಮಾನಾಸ್ತಪ್ತಾಸ್ತಾಪೇನ ಪೀಡಿತಾಃ ಸಂಪ್ರತಿ ವಿಸರ್ಗಂ ವಿಸರ್ಜನಂ ಬಿಲಾನ್ಮೋಚನಮಶ್ನುವತೇ। ಪ್ರಾಪ್ನುವಂತಿ॥

। ಪ್ರತಿಪದಾರ್ಥ ।

ನರಃ—ನೇತೃಗಳಾದ । ಏತೇ—ಈ ಮಂಡೂಕಗಳು । ದೇವಹಿತಿಂ—ದೇವಸಂಕಲ್ಪಿತರಾದ ಋತ್ವಾದಿ ಧರ್ಮಗಳನ್ನು । ಜುಗುಪುಃ—ರಕ್ಷಿಸುತ್ತವೆ । ದ್ವಾದಶಸ್ಯ—ಹನ್ನೆರಡು ಮಾಸಗಳುಳ್ಳ ಸಂವತ್ಸರದ । ಋತುಂ—ನಿಯಮವನ್ನು । ನ ಪ್ರ ಮಿನಂತಿ—ಉಲ್ಲಂಘಿಸುವುದಿಲ್ಲ । ಸಂವತ್ಸರೇ—ಸಂವತ್ಸರದ ಭ್ರಮಣವು ಪೂರ್ಣವಾಗಿ । ಪ್ರಾವೃಷಿ—ಮಳೆಗಾಲವು । ಆಗತಾಯಾಂ—ಆರಂಭವಾದಾಗ । ಘರ್ಮಾಃ—ಇದಕ್ಕೆ ಹಿಂದೆ ಬೇಸಿಗೆಯಲ್ಲಿದ್ದು । ತಪ್ತಾಃ—ಆ ಬಿಸಿಲಿನಿಂದ ಪೀಡಿತವಾಗಿ (ಈಗ) । ವಿಸರ್ಗಂ—ತಾಪದಿಂದ ಬಿಡುಗಡೆಯನ್ನು । ಅಶ್ನುವತೇ—ಹೊಂದುತ್ತವೆ.

। ಭಾವಾರ್ಥ ।

ನೇತೃಗಳಾದ ಈ ಮಂಡೂಕಗಳು ದೇವಸಂಕಲ್ಪಿತವಾದ ಋತ್ವಾದಿಧರ್ಮಗಳನ್ನು ರಕ್ಷಿಸುತ್ತವೆ. ಹನ್ನೆರಡು ಮಾಸಗಳುಳ್ಳ ಸಂವತ್ಸರದ ಋತುನಿಯಮಗಳನ್ನು ಉಲ್ಲಂಘಿಸುವುದಿಲ್ಲ. ಸಂವತ್ಸರದ ಭ್ರಮಣವು ಪೂರ್ಣವಾಗಿ

ಮಳೆಗಾಲವು ಪುನಃ ಆರಂಭವಾದಾಗ ಇದಕ್ಕೆ ಹಿಂದೆ ಬೇಸಿಗೆಯ ಬಿಸಿಲಿನಿಂದ ಪೀಡಿತವಾದ ಮಂಡೂಕಗಳು ಈಗ ತಾಪದಿಂದ ಬಿಡುಗಡೆಯನ್ನು ಹೊಂದುತ್ತವೆ.

## English Translation

These leaders of rites observe the institutes of the gods, and disregard not the (appropriate) season of the twelvemonth; as the year revolves, and the rains return, then, scorched and heated, they obtain freedom (from their hiding-places).

। ಸಂಹಿತಾಪಾಠಃ ।

ಗೋಮಾಯುರದಾದಜಮಾಯುರದಾತ್ಪೃಶ್ನಿರದಾದ್ಧರಿತೋ ನೋ ವಸೂನಿ।
ಗವಾಂ ಮಂಡೂಕಾ ದದತಃ ಶತಾನಿ ಸಹಸ್ರಸಾವೇ ಪ್ರ ತಿರಂತ ಆಯುಃ ॥

। ಪದಪಾಠಃ ।

ಗೋಽಮಾಯುಃ । ಅದಾತ್ । ಅಜಽಮಾಯುಃ । ಅದಾತ್ । ಪೃಶ್ನಿಃ । ಅದಾತ್ । ಹರಿತಃ । ನಃ । ವಸೂನಿ ।
ಗವಾಂ । ಮಂಡೂಕಾಃ । ದದತಃ । ಶತಾನಿ । ಸಹಸ್ರಽಸಾವೇ । ಪ್ರ । ತಿರಂತೇ । ಆಯುಃ ॥ ೧೦ ॥

। ಸಾಯಣಭಾಷ್ಯಂ ।

ಗೋಮಾಯುರ್ಗೋರಿವ ಮಾಯುಃ ಶಬ್ದೋ ಯಸ್ಯ ತಾದೃಶೋ ಮಂಡೂಕೋ ವಸೂನಿ ಧನಾನಿ ನೋಽಸ್ಮಭ್ಯಮದಾತ್ । ದದಾತು । ಅಜಮಾಯುಶ್ಚಾದಾತ್ । ದದಾತು । ಹರಿತೋ ಹರಿತವರ್ಣಶ್ಚಾದಾತ್ । ದದಾತು । ಪೃಶ್ನಿಃ ಪೃಶ್ನಿವರ್ಣಶ್ಚಾದಾತ್ । ದದಾತು । ತಥಾ ಸಹಸ್ರಸಾವೇ ಸಹಸ್ರಸಂಖ್ಯಾಕಾ ಓಷಧಯಃ ಸೂಯಂತ ಉತ್ಪದ್ಯಂತ ಇತಿ ವರ್ಷರ್ತುಃ। ಸಹಸ್ರಸಾವಃ । ತಸ್ಮಿನ್ ಸತಿ ಸರ್ವೇ ಮಂಡೂಕಾ ಗವಾಂ ಶತಾನ್ಯಪರಿಮಿತಾ ಗಾ ದದತೋಽಸ್ಮಭ್ಯಂ ಪ್ರಯಚ್ಛಂತ ಆಯುರ್ಜೀವನಂ ಪ್ರ ತಿರಂತೇ । ಪ್ರವರ್ಧಯಂತು ॥

। ಪ್ರತಿಪದಾರ್ಥ ।

**ಗೋಮಾಯುಃ**—ಗೋವಿನ ಶಬ್ದದಂತೆ ಶಬ್ದಮಾಡತಕ್ಕ ಮಂಡೂಕವು । **ನಃ**—ನಮಗೆ । **ವಸೂನಿ**—ಧನಗಳನ್ನು । **ಅದಾತ್** – ಕೊಡಲಿ । **ಅಜಮಾಯುಃ**—ಅಜದ ಶಬ್ದದಂತೆ ಶಬ್ದಮಾಡತಕ್ಕ ಮಂಡೂಕವೂ । **ಅದಾತ್**—ನಮಗೆ ಧನಗಳನ್ನು ಕೊಡಲಿ । **ಪೃಶ್ನಿಃ**—ವರ್ಣವೈವಿಧ್ಯವನ್ನು ಹೊಂದಿರುವ ಮಂಡೂಕವೂ । **ಹರಿತಃ**–

ಹಸಿರುವರ್ಣವುಳ್ಳ ಮಂಡೂಕವು । ಅದಾತ್—ನಮಗೆ ಧನಗಳನ್ನು ಒದಗಿಸಲಿ । ಸಹಸ್ರಸಾವೇ—ಸಹಸ್ರಾರು ಓಷಧ್ಯಾದಿಗಳನ್ನು ಉತ್ಪನ್ನಮಾಡತಕ್ಕ ಮಳೆಗಾಲದಲ್ಲಿ । ಮಂಡೂಕಾಃ—ಮಂಡೂಕಗಳು । ಗವಾಂ—ಗೋವುಗಳ । ಶತಾನಿ—ಶತಸಂಖ್ಯೆಯನ್ನು । ದದತಃ—ಕೊಡುತ್ತಾ । ಆಯುಃ—ನಮ್ಮ ಆಯುಸ್ಸನ್ನು । ಪ್ರ ತಿರಂತೇ—ಬೆಳೆಸಲಿ.

। ಭಾವಾರ್ಥ ।

ಗೋವಿನ ಶಬ್ದದಂತೆ ಶಬ್ದಮಾಡತಕ್ಕ ಮಂಡೂಕವೂ, ಅಜದ ಶಬ್ದದಂತೆ ಶಬ್ದಮಾಡತಕ್ಕ ಮಂಡೂಕವೂ ನಮಗೆ ಧನಗಳನ್ನು ತುಂಬಿಕೊಡಲಿ. ವರ್ಣವೈವಿಧ್ಯವನ್ನು ಹೊಂದಿರುವ ಮಂಡೂಕವೂ, ಹಸಿರುವರ್ಣವುಳ್ಳ ಮಂಡೂಕವೂ ನಮಗೆ ಧನಗಳನ್ನು ಒದಗಿಸಲಿ. ಸಹಸ್ರಾರು ವಿಧವಾದ ಓಷಧ್ಯಾದಿಗಳನ್ನು ಉತ್ಪನ್ನಮಾಡತಕ್ಕ ಮಳೆಗಾಲದಲ್ಲಿ ಮಂಡೂಕಗಳು ಶತಸಂಖ್ಯಾಕವಾದ ಗೋವುಗಳನ್ನು ಕೊಡುತ್ತಾ ನಮ್ಮ ಆಯುಸ್ಸನ್ನು ಬೆಳೆಸಲಿ.

## English Translation

May the cow-toned, the goat-toned, the speckled, the green (frog, severally) grant us riches ! May the frogs in the fertilizing (season of the rain), bestowing upon us hundreds of cows, prolong (our) lives !

। ವಿಶೇಷವಿಷಯಗಳು ।

ಈ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರವು—

ಉಪಪ್ಲವದ ಮಂಡೂಕಿ ವರ್ಷಮಾ ವದ ತಾದುರಿ ।

ಮಧ್ಯೇ ಹ್ರದಸ್ಯ ಪ್ಲವಸ್ವ ನಿಗೃಹ್ಯ ಚತುರಃ ಪದಃ ॥

ಈ ಪರಿಶಿಷ್ಟಮಂತ್ರಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

ಉಪ ಪ್ರವದ ಮಂಡೂಕಿ ವರ್ಷ ಮಾ ವದ ತಾದುರಿ । ಮಧ್ಯೇ ಹ್ರದಸ್ಯ ಪ್ಲವಸ್ವ ವಿಗೃಹ್ಯ ಚತುರಃ ಪದಃ । ಇತಿ ಸಾ ನಿಗದವ್ಯಾಖ್ಯಾತಾ ॥ (ನಿ. ೯-೭)

ಎಲೈ ಮಂಡೂಕವೇ (ಕಪ್ಪೆಯೇ) ನನ್ನ ಸಮೀಪಕ್ಕೆ ಬಾ ಮತ್ತು ನೀರಿನಲ್ಲಿ ಈಜುತ್ತಾ ಇದ್ದು ಮಳೆಬರುವಂತೆ ಪ್ರಾರ್ಥಿಸು. ಈ ಸರೋವರದ ಮಧ್ಯದಲ್ಲಿ ನಿನ್ನ ನಾಲ್ಕು ಕಾಲುಗಳನ್ನು ಪ್ರಸರಿಸಿ (ಅಗಲಿಸಿ) ಈಜುತ್ತಾ ಇರು. ಎಂದು ಈ ಮಂತ್ರದ ಮುಖ್ಯಾಭಿಪ್ರಾಯವು.



# ನೂರ ನಾಲ್ಕನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಇಂದ್ರಾಸೋಮೇತಿ ಪಂಚವಿಂಶತ್ಯೃಚಂ ಪಂಚದಶಂ ಸೂಕ್ತಂ ವಸಿಷ್ಠಸ್ಯಾರ್ಷಂ । ಆದ್ಯಾಃ ಷಡ್ಜಗತ್ಯಃ ಸಪ್ತಮೀ ಜಗತೀ ತ್ರಿಷ್ಟುಬ್ವಾಷ್ಟಾದಶ್ಯೇಕವಿಂಶೀತ್ರಯೋವಿಂಶ್ಯೌ ಜಗತ್ಯೋsನ್ತ್ಯಾ ಪ್ರತಿ ಚಕ್ಷ್ವೇತ್ಯನುಷ್ಟುಪ್ ಶಿಷ್ಟಾಶ್ಚತುರ್ದಶ ತ್ರಿಷ್ಟುಭಃ । ನವಮೀದ್ವಾದಶೀತ್ರಯೋದಶ್ಯಃ ಸೋಮದೇವತ್ಯಾ ಏಕಾದಶೀ ದೇವದೇವತ್ಯಾ ಷ್ಪವಿಂಶೋಡಶ್ಯಾವಿಂದ್ರದೇವತಾಕೇ ಸಪ್ತದಶೀ ಗ್ರಾವದೇವತ್ಯಾಷ್ಟಾದಶೀ ಮರುದ್ದೇವತಾಕಾ ದಶಮೀಚತುರ್ದಶ್ಯಾವಗ್ನಿದೇವತಾಕೇ ಪ್ರ ವರ್ತಯೇತ್ಯಾದ್ಯಾಃ ಪಂಚರ್ಚ ಇಂದ್ರದೇವತಾಕಾಃ । ಮಾ ನೋ ರಕ್ಷ ಇತಿ ತ್ರಯೋವಿಂಶ್ಯಾಃ ಪೂರ್ವೋsರ್ಧರ್ಚೋ ವಸಿಷ್ಠಸ್ಯ ಪ್ರಾರ್ಥನಾಪರಃ । ಅತಸ್ತದ್ದೇವತಾಕಃ । ಉತ್ತರೋsರ್ಧರ್ಚಃ ಪೃಥಿವ್ಯಂತರಿಕ್ಷದೇವತ್ಯಃ । ಶಿಷ್ಟಾನಾಂ ರಕ್ಷೋಹಣಾವಿಂದ್ರಾಸೋಮೌ ದೇವತಾ । ತಥಾ ಚಾನುಕ್ರಾಂತಂ । ಇಂದ್ರಾಸೋಮಾ ಪಂಚಾಧಿಕೈಂದ್ರಾಸೋಮಂ ರಾಕ್ಷೋಘ್ನಂ ಶಾಪಾಭಿಶಾಪಪ್ರಾಯಂ ಷಟ್ ಸಪ್ತ ವಾದ್ಯಾ ಜಗತ್ಯ ಏಕವಿಂಶೀತ್ರಯೋವಿಂಶ್ಯೌ ಚಾಷ್ಟಾದಶೀ ಮಾರುತೀ ಚ ದಶಮೀಚತುರ್ದಶ್ಯಾವಾಗ್ನೇಯ್ಯೌ ದೈವ್ಯೇಕಾದಶ್ಯಂತ್ಯಾನುಷ್ಟುಮ್ನವಮೀ ದ್ವಾದಶೀ ತ್ರಯೋದಶೀ ಸೌಮ್ಯಃ ಸಪ್ತದಶೀ ಗ್ರಾವ್ಣ್ಯಃ ಷ್ಪವಿಂಶೋಳಶ್ಯಾವೈಂದ್ರ್ಯೌ ಪ್ರ ವರ್ತಯೇತಿ ಪಂಚೈಂದ್ರ್ಯೋ ಮಾ ನೋ ರಕ್ಷ ಇತ್ಯೃಷೇರಾತ್ಮನ ಆಶೀರುತ್ತರೋsರ್ಧರ್ಚಃ ಪೃಥಿವ್ಯಂತರಿಕ್ಷದೇವತ ಇತಿ ॥ ಅತ್ರ ಬೃಹದ್ದೇವತಾಯಾಮನುಕ್ರಮ್ಯತೇ । ಸಂವತ್ಸರಂ ತು ಮಂಡೂಕಾನ್ಯೈಂದ್ರಾಸೋಮಂ ಪರಂ ತು ಯತ್ । ಋಷಿರ್ದದರ್ಶ ರಕ್ಷೋಘ್ನಂ ಪುತ್ರಶೋಕಪರಿಪ್ಲುತಃ । ಹತೇ ಪುತ್ರಶತೇ ಕ್ರುದ್ಧಃ ಸೌದಾಸೈರ್ದುಃಖಿತಸ್ತದಾ । ಬೃ. ೬-೮೩೭-೮೪೩ । ಇತಿ ॥ ಅತೋ ರಕ್ಷೋನಿಬರ್ಹಣಾರ್ಥಮೇತತ್ಸೂಕ್ತಂ ಜಾಪ್ಯಂ ॥

ಅನುವಾದವು–**ಇಂದ್ರಾಸೋಮಾ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಇಪ್ಪತ್ತೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಸಿಷ್ಠನು ಋಷಿಯು; ಈ ಸೂಕ್ತದ ಮೊದಲ ಆರು ಋಕ್ಕುಗಳು ಜಗತೀಛಂದಸ್ಕವು; ಏಳನೆಯದು ಜಗತೀ ಅಥವಾ ತ್ರಿಷ್ಟುಪ್ ಛಂದಸ್ಕವು; ಹದಿನೆಂಟು, ಇಪ್ಪತ್ತೊಂದು, ಇಪ್ಪತ್ತಮೂರನೆಯ ಋಕ್ಕುಗಳು ಜಗತೀಛಂದಸ್ಕವು; **ಪ್ರತಿ ಚಕ್ಷ್ವ** ಎಂಬ ಸೂಕ್ತದ ಕೊನೆಯ ಋಕ್ಕು ಅನುಷ್ಟುಪ್ ಛಂದಸ್ಕವು. ಉಳಿದ ಹದಿನಾಲ್ಕು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಈ ಸೂಕ್ತದ ಒಂಭತ್ತು, ಹನ್ನೆರಡು, ಹದಿಮೂರನೆಯ ಋಕ್ಕುಗಳು ಸೋಮದೇವತಾಕವು. ಹನ್ನೊಂದನೆಯ ಋಕ್ಕಿಗೆ ದೇವತೆಗಳು ದೇವತೆಯು; ಎಂಟು, ಹದಿನಾರನೆಯ ಋಕ್ಕುಗಳಿಗೆ ಇಂದ್ರನು ದೇವತೆಯು; ಹದಿನೇಳನೆಯ ಋಕ್ಕಿಗೆ ಗ್ರಾವಾಣಃ ಎಂಬ ಸೋಮಲತೆಯನ್ನು ಜಜ್ಜುವ ಕಲ್ಲುಗಳು ದೇವತೆಯು; ಹದಿನೆಂಟನೆಯ ಋಕ್ಕಿಗೆ ಮರುತ್ತುಗಳು ದೇವತೆಯು; ಹತ್ತು, ಹದಿನಾಲ್ಕನೆಯ ಋಕ್ಕುಗಳಿಗೆ ಅಗ್ನಿಯು ದೇವತೆಯು; **ಪ್ರ ವರ್ತಯ** ಎಂದು ಮೊದಲಾಗುವ ಐದು ಋಕ್ಕುಗಳಿಗೆ (೧೯—೨೨, ೨೪) ಇಂದ್ರನು ದೇವತೆಯು; **ಮಾ ನೋ ರಕ್ಷ** ಎಂಬ ಇಪ್ಪತ್ತಮೂರನೆಯ ಋಕ್ಕಿನ ಪೂರ್ವಾರ್ಧದಲ್ಲಿ ವಸಿಷ್ಠನ ಪ್ರಾರ್ಥನೆಯು ಇರುವುದರಿಂದ ಆ ಅರ್ಧ ಋಕ್ಕಿಗೆ ವಸಿಷ್ಠನೇ ದೇವತೆಯು; ಉತ್ತರಾರ್ಧಕ್ಕೆ ಪೃಥಿವ್ಯಂತರಿಕ್ಷಗಳು ದೇವತೆಯು; ಉಳಿದ ಋಕ್ಕುಗಳಿಗೆ **ಇಂದ್ರಾಸೋಮೌ ರಕ್ಷೋಹಣೌ** ಎಂಬುವರು ದೇವತೆಗಳು. ಅನುಕ್ರಮಣಿಕೆಯಲ್ಲಿ—**ಇಂದ್ರಾ**–

ಸೋಮಾ ಪಂಚಾಧಿಕ್ಯೆಂದ್ರಾಸೋಮಂ-ರಾಕ್ಷೋಘ್ನಂ ಶಾಪಾಭಿಶಾಪಪ್ರಾಯಂ ಷಟ್ ಸಪ್ತ ವಾದ್ಯಾ ಜಗತ್ಯ ಏಕವಿಂಶೀ ತ್ರಯೋವಿಂಶ್ಯಾ ಚಾಷ್ಟಾದಶೀ ಮಾರುತೀ ಚ ದಶಮೀಚತುರ್ದಶ್ಯಾವಾಗ್ನೇಯ್ಯಾ ದ್ವೈವ್ಯೈಕಾದಶ್ಯಂತ್ಯಾನುಷ್ಟುಮ್ನವಮೀ ದ್ವಾದಶೀ ತ್ರಯೋದಶೀ ಸೌಮ್ಯಃ ಸಪ್ತದಶೀ ಗ್ರಾವ್ಣ್ಯಷ್ಟಮೀಷೋಳಶ್ಯಾವ್ಯೆಂದ್ರ್ಯಃ ಪ್ರ ವರ್ತಯೇತಿ ಪಂಚ್ಯೆಂದ್ರ್ಯಃ ಮಾ ನೋ ರಕ್ಷ ಇತ್ಯಸ್ಯಾಃ ಪೇರಾತ್ಮನ ಆಶೀರುತ್ತರೋಽರ್ಧರ್ಚಃ ಪೃಥಿವ್ಯಂತರಿಕ್ಷದೇವತಃ ಎಂದು ಹೇಳಿರುವುದು. ಶೌನಕೋಕ್ತವಾದ ಬೃಹದ್ದೇವತಾ ಎಂಬ ಗ್ರಂಥದಲ್ಲಿ ಈ ಸೂಕ್ತದ ವಿಷಯವಾಗಿ ಈರೀತಿ ಹೇಳಿರುವುದು—ವಸಿಷ್ಠಋಷಿಯ ನೂರುಮಂದಿ ಪುತ್ರರು ಸುದಾಸನ ಪುತ್ರರಿಂದ ಸಂಹರಿಸಲ್ಪಡಲಾಗ ವಸಿಷ್ಠಋಷಿಯು ಕೋಪದಿಂದಲೂ, ದುಃಖದಿಂದಲೂ, ಪುತ್ರಶೋಕದಿಂದಲೂ ಕೂಡಿ ಸಂವತ್ಸರಂ ಎಂಬ ಸೂಕ್ತವನ್ನೂ ರಕ್ಷೋಘ್ನಸೂಕ್ತವಾದ ಇಂದ್ರಾಸೋಮಾ ಎಂಬ ಈ ಸೂಕ್ತವನ್ನೂ ದಿವ್ಯದೃಷ್ಟಿಯಿಂದ ನೋಡಿ ತಿಳಿದನು. ಎಂದರೆ ಈ ಸೂಕ್ತಗಳು ವಸಿಷ್ಠಋಷಿಗೆ ಗೋಚರಿಸಿದವು. ಈ ಸೂಕ್ತಗಳಿಗೆ ಸೂಕ್ತದ್ರಷ್ಟೃವಾದ ಋಷಿಯಾದನು. ಆದುದರಿಂದ ರಕ್ಷೋಬಾಧೆಯಿಂದ ಪರಿಹಾರವನ್ನಪೇಕ್ಷಿಸುವವರು ಈ ಸೂಕ್ತವನ್ನು ಜಪಮಾಡಬೇಕು.

## ಸೂಕ್ತ—೧೦೪

ಮಂಡಲ—೭ । ಅನುವಾಕ—೬ । ಸೂಕ್ತ—೧೦೪ ।
ಅಷ್ಟಕ—೫ । ಅಧ್ಯಾಯ—೭ । ವರ್ಗ—೫, ೬, ೭, ೮, ೯।
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೫ ।
ಋಷಿಃ—ವಸಿಷ್ಠಃ ।
ದೇವತಾ—೧-೭, ೧೫, ೨೫. ಇಂದ್ರಾಸೋಮೌ ರಕ್ಷೋಹಣೌ । ೮, ೧೬, ೧೯-೨೨, ೨೪. ಇಂದ್ರಃ । ೯, ೧೨, ೧೩. ಸೋಮಃ । ೧೦, ೧೪. ಅಗ್ನಿಃ । ೧೧. ದೇವಾಃ । ೧೭. ಗ್ರಾವಾಣಃ । ೧೮. ಮರುತಃ । ೨೩ರಲ್ಲಿ ಪೂರ್ವಾರ್ಧ ವಸಿಷ್ಠಃ । ೨೩ರಲ್ಲಿ ಉತ್ತರಾರ್ಧ. ಪೃಥಿವ್ಯಂತರಿಕ್ಷೇ ।
ಛಂದಃ—೧-೬, ೧೮, ೨೧, ೨೩. ಜಗತೀ । ೭. ತ್ರಿಷ್ಟುಪ್ ಜಗತೀ ವಾ । ೮-೧೭, ೧೯, ೨೦, ೨೨,೨೪. ತ್ರಿಷ್ಟುಪ್ । ೨೫. ಅನುಷ್ಟುಪ್ ।

॥ ಸಂಹಿತಾಪಾಠಃ ॥

ಇಂದ್ರಾಸೋಮಾ ತಪತಂ ರಕ್ಷ ಉಬ್ಜತಂ ನ್ಯರ್ಪಯತಂ ವೃಷಣಾ ತಮೋವೃಧಃ ।
ಪರಾ ಶೃಣೀತಮಚಿತೋ ನ್ಯೋಷತಂ ಹತಂ ನುದೇಥಾಂ ನಿ ಶಿಶೀತಮತ್ರಿಣಃ ॥ ೧ ॥

। ಪದಪಾಠಃ ।

ಇಂದ್ರಾಸೋಮಾ । ತಪತಂ । ರಕ್ಷಃ । ಉಬ್ಜತಂ । ನಿ । ಅರ್ಪಯತಂ । ವೃಷಣಾ । ತಮಃಽವೃಧಃ ।

ಪರಾ । ಶೃಣೀತಂ । ಅಚಿತಃ । ನಿ । ಓಷತಂ । ಹತಂ । ನುದೇಥಾಂ । ನಿ । ಶಿಶೀತಂ । ಅತ್ರಿಣಃ ॥ ೧ ॥

। ಸಾಯಣಭಾಷ್ಯಂ ।

ಹೇ ಇಂದ್ರಾಸೋಮಾ । ಇಂದ್ರಶ್ಚ ಸೋಮಶ್ಚೇಂದ್ರಾಸೋಮೌ ॥ ದೇವತಾದ್ವಂದ್ವೇ ಚೇತಿ ಪೂರ್ವಪದಸ್ಯಾನಙ್ । ಆಮಂತ್ರಿತಾದ್ಯುದಾತ್ತತ್ವಂ ॥ ರಕ್ಷೋ ರಕ್ಷಾಂಸಿ । ಜಾತಾವೇಕವಚನಂ ॥ ಯುವಾಂ ತಪತಂ । ಸಂತಾಪಯತಂ ॥ ಆಮಂತ್ರಿತಂ ಪೂರ್ವಮವಿದ್ಯಮಾನವದಿತ್ಯವಿದ್ಯಮಾನವತ್ತ್ವಾತ್ ತಪತಮಿತಿ ತಿಙಂತಸ್ಯ ನಿಘಾತಾಭಾವಃ ॥ ತಥೋಬ್ಜತಂ । ಹಿಂಸ್ತಂ ॥ ಉಬ್ಜತಿರ್ಹಿಂಸಾಕರ್ಮಾ । ತಿಙಃ ಪರತ್ವಾನ್ನಿಘಾತಾಭಾವಃ ॥ ಹೇ ವೃಷಣಾ ವೃಷಣೌ ಕಾಮಾನಾಂ ವರ್ಷಿತಾರೌ ನ್ಯರ್ಪಯತಂ । ರಕ್ಷಾಂಸಿ ನೀಚೈಸ್ತ್ವಂ ಪ್ರಾಪಯತಂ । ತಮೋವೃಧಸ್ತಮಸಾವರಕೇಣಾಂಧಕಾರೇಣ ಮಾಯಾರೂಪೇಣ ವರ್ಧಮಾನಾನ್ ತಮಸಿ ರಾತ್ರೌ ವರ್ಧಮಾನಾನ್ವಾಚಿತೋ ಜ್ಞಾನರಹಿತಾನ್ಮೂಢಾನ್ರಾಕ್ಷಸಾನ್ ಪರಾ ಶೃಣೀತಂ । ಪರಾಙ್ಮುಖಾ ಯಥಾ ಭವಂತಿ ತಥಾ ಹಿಂಸ್ತಂ । ತಥಾ ನ್ಯೋಷತಂ । ನಿತರಾಂ ದಹತಂ ॥ ಉಷ ದಾಹೇ ॥ ಹತಂ । ತಾನ್ಮಾರಯತಂ । ನುದೇಥಾಂ । ಅಸ್ಮತ್ತೋ ಹತಾನ್ಸ್ತಾನ್ ಪ್ರೇರಯೇಥಾಂ । ಅತ್ರಿಣೋಽದನಶೀಲಾಂಸ್ತಾನ್ರಾಕ್ಷಸಾನ್ನಿ ಶಿಶೀತಂ । ನಿತರಾಂ ತನೂಕುರುತಂ ॥

। ಪ್ರತಿಪದಾರ್ಥ ।

ಇಂದ್ರಾಸೋಮಾ—ಎಲೈ ಇಂದ್ರಾ ಮತ್ತು ಸೋಮದೇವತೆಗಳೇ । ರಕ್ಷಃ—ರಾಕ್ಷಸರನ್ನು । ತಪತಂ—ದಹಿಸಿರಿ । ಉಬ್ಜತಂ—ಹಿಂಸಿಸಿರಿ । ವೃಷಣಾ—ಕಾಮವರ್ಷಕರಾದ ಎಲೈ ಇಂದ್ರಾಸೋಮರೇ । ತಮೋವೃಧಃ—ರಾತ್ರಿಯ ಕತ್ತಲಯಲ್ಲಿ ಬೆಳೆಯುವ ಅಸುರರನ್ನು । ನ್ಯರ್ಪಯಂತಂ—ಅಧೋಭಾಗಕ್ಕೆ ತಳ್ಳಿರಿ । ಅಚಿತಃ—ಕರ್ತವ್ಯಜ್ಞಾನವಿಲ್ಲದ ಮೂಢರನ್ನು । ಪರಾ ಶೃಣೀತಂ—ಹಿಂತಿರುಗಿ ಓಡುವಂತೆ ಹಿಂಸಿಸಿರಿ । ನ್ಯೋಷತಂ—ಪೂರ್ಣವಾಗಿ ದಹಿಸಿರಿ । ಹತಂ—ನಾಶಮಾಡಿರಿ । ನುದೇಥಾಂ—ನಮ್ಮಿಂದ ದೂರಕ್ಕೆ ಓಡಿಸಿರಿ । ಅತ್ರಿಣಃ—ಸರ್ವಭಕ್ಷಕರಾದ ರಾಕ್ಷಸರನ್ನು । ನಿ ಶಿಶೀತಂ—ಪೂರ್ಣವಾಗಿ ನಾಶಮಾಡಿರಿ.

। ಭಾವಾರ್ಥ ।

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ರಾಕ್ಷಸರನ್ನು ದಹಿಸಿರಿ, ಹಿಂಸಿಸಿರಿ. ಕಾಮವರ್ಷಕರಾದ ಎಲೈ ಇಂದ್ರಾಸೋಮರೇ, ರಾತ್ರಿಯ ಕಗ್ಗತ್ತಲೆಯಲ್ಲಿ ಬೆಳೆಯುವ ಅಸುರರನ್ನು ಅಧೋಭಾಗಕ್ಕೆ ತಳ್ಳಿರಿ. ಕರ್ತವ್ಯಜ್ಞಾನವಿಲ್ಲದ ಮೂಢರನ್ನು ಹಿಂತಿರುಗಿ ಓಡುವಂತೆ ಹಿಂಸಿಸಿರಿ. ಅವರನ್ನು ಪೂರ್ಣವಾಗಿ ದಹಿಸಿರಿ, ನಾಶಮಾಡಿರಿ. ನಮ್ಮಿಂದ ದೂರಕ್ಕೆ ಓಡಿಸಿರಿ. ಸರ್ವಭಕ್ಷಕರಾದ ರಾಕ್ಷಸರನ್ನು ಪೂರ್ಣವಾಗಿ ನಾಶಮಾಡಿರಿ.

## English Translation

Indra and Soma, afflict, destroy the Rakshasas; showerers (of benefits) cast down those who delight in darkness; put to flight the stupid

(spirits); consume, slay, drive away, utterly exterminate the cannibals.

। ಸಂಹಿತಾಪಾಠಃ ।

ಇಂದ್ರಾ॑ಸೋಮಾ॒ ಸಮ॒ಘಶಂ॑ಸಮ॒ಭ್ಯ೧॒॑ಘಂ ತಪು॒ರ್ಯ॑ಯಸ್ತು ಚ॒ರುರ॑-
ಗ್ನಿ॒ವಾಁ ಇ॑ವ ।

ಬ್ರ॒ಹ್ಮ॒ದ್ವಿಷೇ॑ ಕ್ರ॒ವ್ಯಾದೇ॑ ಘೋ॒ರಚ॑ಕ್ಷಸೇ॒ ದ್ವೇಷೋ॑ ಧತ್ತಮನ॒ವಾ॒ಯಂ
ಕಿ॑ಮೀ॒ದಿನೇ॑ ॥ ೨ ॥

। ಪದಪಾಠಃ ।

ಇಂದ್ರಾ॑ಸೋಮಾ । ಸಂ । ಅ॒ಘಽಶಂ॑ಸಂ । ಅ॒ಭಿ । ಅ॒ಘಂ । ತಪುಃ॑ । ಯ॒ಯ॒ಸ್ತು॒ । ಚ॒ರುಃ । ಅ॒ಗ್ನಿ॒-
ವಾನ್ಽಇ॑ವ ।

ಬ್ರ॒ಹ್ಮ॒ಽದ್ವಿಷೇ॑ । ಕ್ರ॒ವ್ಯ॒ಽಅದೇ॑ । ಘೋ॒ರಽಚ॑ಕ್ಷಸೇ । ದ್ವೇಷಃ॑ । ಧ॒ತ್ತ॒ಂ । ಅ॒ನ॒ವಾ॒ಯಂ । ಕಿ॒ಮೀ॒ದಿನೇ॑ ॥

। ಸಾಯಣಭಾಷ್ಯಂ ।

ಹೇ ಇಂದ್ರಾಸೋಮೌ ಅಘಶಂಸಮಘಸ್ಯಾನರ್ಥಸ್ಯ ಶಂಸಿತಾರಮಘಮಾಗತ್ಯ ಹಂತಾರಂ ರಾಕ್ಷಸಂ ಸಂ ಸಹೈವ । ಅಭೀತಿ ಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ । ಅಭಿಭವತಂ । ಸ ಚ ತಪುರ್ಯುವಯೋ-ಸ್ತೇಜಸಾ ತಪ್ಯಮಾನೋ ರಾಕ್ಷಸೋಽಗ್ನಿವಾನಿವಾಗ್ನಿಯುಕ್ತೋಽಗ್ನೌ ಪ್ರಕ್ಷಿಪ್ತಶ್ಚರುರಿವ ಯಯಸ್ತು ॥ ಯಸು ಪ್ರಯತ್ನೇ । ಕೇವಲೋಽಪ್ಯಯಮಾಙ್ಪೂರ್ವಾರ್ಥೇ ದ್ರಷ್ಟವ್ಯಃ ॥ ಆಯಸ್ಯತು । ಆಯಾಸಂ ಪ್ರಾಪ್ನೋತು । ಉಪಕ್ಷೀಯತಾಮಿತ್ಯರ್ಥಃ । ಅಪಿ ಚ ಬ್ರಹ್ಮದ್ವಿಷೇ ಬ್ರಾಹ್ಮಣೇಭ್ಯೋಽಸ್ಮಭ್ಯಂ ದ್ವೇಷ್ಟ್ರೇ ಕ್ರವ್ಯಾದೇ ಕ್ರವ್ಯಂ ಮಾಂಸಂ ಭಕ್ಷಯಿತ್ರೇ ಘೋರಚಕ್ಷಸೇ ಘೋರದರ್ಶನಾಯ ಪರುಷಭಾಷಿಣೇ ವಾ ಕಿಮೀದಿನೇ ಕಿಮಿದಾನೀಮಿತಿ ಚರತೇ ಪಿಶುನಾಯ ದ್ವೇಷೋ ದ್ವೇಷ್ಯಭಾವಮನವಾಯಮವ್ಯವಾಯ-ಮನವಯವಂ ನೈರಂತರ್ಯೇಣ ಯಥಾ ಭವತಿ ತಥಾ ಧತ್ತಂ । ದತ್ತಂ ॥

। ಪ್ರತಿಪದಾರ್ಥ ।

ಇಂದ್ರಾಸೋಮಾ—ಎಲೈ ಇಂದ್ರ ಮತ್ತು ಸೋಮದೇವತೆಗಳೇ । ಅಘಶಂಸಂ—ಕೇಡನ್ನು ಬಯಸುವವನೂ । ಅಘಂ—ಪಾಪಕೃತ್ಯವನ್ನು ಮಾಡುವವನೂ ಆದ ಅಸುರನನ್ನು । ಸಂ—ಒಟ್ಟಿಗೆ । ಅಭಿ—ಮೇಲೆಬಿದ್ದು ಸೋಲಿಸಿರಿ । ತಪುಃ—ನಿಮ್ಮಿಂದ ದಹಿಸಲ್ಪಟ್ಟ ಅಸುರನು । ಅಗ್ನಿವಾನ್ ಚರುಃ ಇವ—ಅಗ್ನಿಯಲ್ಲಿ ಅರ್ಪಿತವಾದ

ಆಹುತಿಯಂತೆ । ಯಯಸ್ತು—ಪೂರ್ಣವಾಗಿ ದಗ್ಧವಾಗಲಿ (ನಾಶವಾಗಲಿ) । ಬ್ರಹ್ಮದ್ವಿಷೇ—ಬ್ರಾಹ್ಮಣರನ್ನು ದ್ವೇಷಿಸುವ ಅಸುರನಮೇಲೂ । ಕ್ರವ್ಯಾದೇ—ಮಾಂಸಭಕ್ಷಕನಮೇಲೂ । ಘೋರಚಕ್ಷಸೇ—ವಿಕಾರವಾದ ರೂಪ ಮತ್ತು ವೃತ್ತಿಯುಳ್ಳವನಮೇಲೂ । ಕಿಮೀದಿನೇ—ಯಾವಾಗಲೂ ವಂಚನೆಯನ್ನು ಯೋಜಿಸುತ್ತಿರುವವನ ಮೇಲೂ। ಅನವಾಯಂ—ನಿರಂತರವಾದ । ದ್ವೇಷಃ—ದ್ವೇಷಭಾವವನ್ನು । ಧತ್ತಂ—ಹೊಂದಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ಕೇಡನ್ನು ಬಯಸುವವನೂ, ಪಾಪಕೃತ್ಯವನ್ನು ಮಾಡುವವನೂ ಆದ ಅಸುರಸಂಘವನ್ನೆಲ್ಲಾ ಒಟ್ಟಿಗೆ ಮೇಲೆಬಿದ್ದು ಸೋಲಿಸಿರಿ. ನಿಮ್ಮಿಂದ ದಹಿಸಲ್ಪಟ್ಟ ಅಸುರನು ಅಗ್ನಿಯಲ್ಲಿ ಅರ್ಪಿತವಾದ ಆಹುತಿಯಂತೆ ಪೂರ್ಣವಾಗಿ ದಗ್ಧವಾಗಲಿ. ಬ್ರಾಹ್ಮಣರನ್ನು ದ್ವೇಷಿಸುವ ಅಸುರನಮೇಲೂ ಮಾಂಸ ಭಕ್ಷಕನಮೇಲೂ ವಿಕಾರವಾದ ರೂಪ ಮತ್ತು ವೃತ್ತಿಯುಳ್ಳವನಮೇಲೂ ಮತ್ತು ಯಾವಾಗಲೂ ವಂಚನೆಯನ್ನೇ ಯೋಚಿಸುತ್ತಿರುವವನಮೇಲೂ ಶಾಶ್ವತವಾದ ದ್ವೇಷವನ್ನು ಬೆಳೆಸಿರಿ.

## English Translation

Indra and Soma, fall upon the destructive (Rakshasa) and the performer of unprofitable acts, so that, consumed (by your wrath), he may perish like the offering cast into the fire: retain implacable hatred to the hater of Brahmans, the cannibal, the hideous, the vile (Rakshasa).

॥ ಸಂಹಿತಾಪಾಠಃ ॥

ಇಂದ್ರಾಸೋಮಾ ದುಷ್ಕೃತೋ ವವ್ರೇ ಅಂತರನಾರಂಭಣೇ ತಮಸಿ ಪ್ರ
ವಿಧ್ಯತಂ ।
ಯಥಾ ನಾತಃ ಪುನರೇಕಶ್ಚನೋದಯತ್ತದ್ವಾಮಸ್ತು ಸಹಸೇ ಮನ್ಯು-
ಮಚ್ಛವಃ ॥ ೩ ॥

॥ ಪದಪಾಠಃ ॥

ಇಂದ್ರಾಸೋಮಾ । ದುಃಽಕೃತಃ । ವವ್ರೇ । ಅಂತಃ । ಅನಾರಂಭಣೇ । ತಮಸಿ । ಪ್ರ । ವಿಧ್ಯತಂ ।
ಯಥಾ । ನ । ಅತಃ । ಪುನಃ । ಏಕಃ । ಚನ । ಉತ್ಽಅಯತ್ । ತತ್ । ವಾಂ । ಅಸ್ತು । ಸಹಸೇ ।
ಮನ್ಯುಽಮತ್ । ಶವಃ ॥ ೩ ॥

। ಸಾಯಣಭಾಷ್ಯಂ ।

ಹೇ ಇಂದ್ರಾಸೋಮೌ ದುಷ್ಕೃತೋ ದುಷ್ಕರ್ಮಕಾರಿಣೋ ರಾಕ್ಷಸಾನ್ ವವ್ರೇ ವಾರಕೇಽನ್ತ-ರ್ಮಧ್ಯೇಽನಾರಂಭಣ ಆಲಂಬನರಹಿತೇ ತಮಸ್ಯಂಧಕಾರೇ ಪ್ರ ವಿಧ್ಯತಂ । ಪ್ರವೇಶ್ಯ ತಾಡ-ಯತಂ । ಯಥಾ ಯೇನ ಪ್ರಕಾರೇಣೈಷಾಂ ಮಧ್ಯ ಏಕಶ್ಚನೈಕೋಽಪಿ ರಾಕ್ಷಸೋಽತೋಽಸ್ಮಾತ್ತಮಸಃ ಪುನರ್ನೋದಯತ್ ಉದ್ಗಚ್ಛೇತ್ । ತಥಾ ವಿಧ್ಯತಮಿತ್ಯರ್ಥಃ ॥ ಏತೇರ್ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಗುಣಾಯಾದೇಶೌ ॥ ತತ್ಪ್ರಸಿದ್ಧಂ ಮನ್ಯುಮತ್ಕ್ರೋಧಯುಕ್ತಂ ವಾಂ ಯುವಯೋಃ ಶವೋ ಬಲಂ ಸಹಸೇ ರಕ್ಷಸಾಮಭಿಭವನಾಯಾಸ್ತು । ಭವತು ॥

। ಪ್ರತಿಪದಾರ್ಥ ।

ಇಂದ್ರಾಸೋಮಾ—ಎಲೈ ಇಂದ್ರ ಮತ್ತು ಸೋಮದೇವತೆಗಳೇ । ಯಥಾ—ಯಾವ ರೀತಿ । ಏಕಶ್ಚನ-ಅವರಲ್ಲಿ ಒಬ್ಬನಾದರೂ । ಅತಃ—ಆ ಅಂಧಕಾರಪ್ರದೇಶದಿಂದ । ಪುನಃ—ತಿರುಗಿಯೂ । ನ ಉದಯತ್—ಎದ್ದು ಬರಲು ಸಾಧ್ಯವಾಗುವುದಿಲ್ಲವೋ ಆ ರೀತಿ । ದುಷ್ಕೃತಃ—ದುಷ್ಕರ್ಮಕಾರಿಗಳನ್ನು । ವವ್ರೇ—ತಡೆಗಳಿಂದ ವ್ಯಾಪ್ಯತವಾದುದೂ । ಅನಾರಂಭಣೇ--ಬಿಡಿಸಿಕೊಳ್ಳಲಾಗದೇ ಇರತಕ್ಕದ್ದೂ । ತಮಸಿ—ಅಂಧಕಾರಾವೃತವಾದುದೂ ಆದ । ಅಂತಃ—ಪಾತಾಳದಂತಿರುವ ಆಳವಾದ ಪ್ರದೇಶದಲ್ಲಿ । ಪ್ರ ವಿಧ್ಯತಂ—ತಳ್ಳಿ ಅವರನ್ನು ಹಿಂಸಿಸಿರಿ । ತತ್—ಪ್ರಸಿದ್ಧವಾದುದೂ । ಮನ್ಯುಮತ್—ಕ್ರೋಧಯುಕ್ತವಾದುದೂ ಆದ । ವಾಂ—ನಿಮ್ಮ । ಶವಃ—ಶಕ್ತಿಯು । ಸಹಸೇ—ಆ ಅಸುರರನ್ನು ಸೋಲಿಸುವ ಶಕ್ತಿಯುಳ್ಳದ್ದಾಗಿ । ಅಸ್ತು—ಆಗಿರಲಿ.

। ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ಯಾವ ರೀತಿ ದುಷ್ಕರ್ಮಕಾರಿಗಳಲ್ಲಿ ಒಬ್ಬನಾದರೂ ಅಂಧಕಾರಾವೃತವಾದ ಆಳದ ಪ್ರದೇಶದಿಂದ ಎದ್ದು ಹಿಂತಿರುಗಲಾರನೋ ಅದೇ ರೀತಿ ಆ ದುಷ್ಕರ್ಮಕಾರಿಗಳನ್ನು ತಡೆಗಳಿಂದ ವ್ಯಾಪ್ಯತವಾದುದೂ, ಬಿಡಿಸಿಕೊಳ್ಳಲಾಗದೇ ಇರತಕ್ಕದ್ದೂ, ಅಂಧಕಾರಾವೃತವಾದುದೂ ಆದ ಪಾತಾಳದಂತಿರುವ ಆಳವಾದ ಪ್ರದೇಶದಲ್ಲಿ ತಳ್ಳಿ ಅವರನ್ನು ಹಿಂಸಿಸಿರಿ. ಪ್ರಸಿದ್ಧವಾದುದೂ, ಕ್ರೋಧಯುಕ್ತವಾದುದೂ ಆದ ನಿಮ್ಮ ಶಕ್ತಿಯು ಆ ಅಸುರರನ್ನು ಸೋಲಿಸುವ ಶಕ್ತಿಯುಳ್ಳದ್ದಾಗಿರಲಿ.

## English Translation

Indra and Soma, chastise the malignant (Rakshasas), having plunged them in surrounding and inextricable darkness, so that not one of them may again issue from it: so may your wrathful might be triumphant over them.

। ಸಂಹಿತಾಪಾಠಃ ।

ಇಂದ್ರಾಸೋಮಾ ವರ್ತಯತಂ ದಿವೋ ವಧಂ ಸಂ ಪೃಥಿವ್ಯಾ ಅಘಶಂ-

ಸಾಯ ತರ್ಹಣಂ ।

ಉತ್ತಕ್ಷತಂ ಸ್ವರ್ಯ೧ಂಪರ್ವತೇಭ್ಯೋ ಯೇನ ರಕ್ಷೋ ವಾವೃಧಾನಂ
ನಿಜೂರ್ವಥಃ ॥ ೪ ॥

॥ ಪದಪಾಠಃ ॥

ಇಂದ್ರಾಸೋಮಾ । ವರ್ತಯತಂ । ದಿವಃ । ವಧಂ । ಸಂ । ಪೃಥಿವ್ಯಾಃ । ಅಘऽಶಂಸಾಯ । ತರ್ಹಣಂ । ಉತ್ । ತಕ್ಷತಂ । ಸ್ವರ್ಯಂ । ಪರ್ವತೇಭ್ಯಃ । ಯೇನ । ರಕ್ಷಃ । ವವೃಧಾನಂ । ನಿऽಜೂರ್ವಥಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಸೋಮೌ ದಿವೋಽಂತರಿಕ್ಷಾತ್ ದ್ಯುಲೋಕಾದ್ವಾ ವಧಂ ಹನನಸಾಧನಮಾಯುಧಂ ಸಂ ವರ್ತಯತಂ । ಉತ್ಪಾದಯತಂ । ಪೃಥಿವ್ಯಾ ಅಸ್ಮಾದಪಿ ಲೋಕಾತ್ತರ್ಹಣಂ ಹಿಂಸಕಮಾಯುಧಮಘಶಂಸಾಯಾಘಶಂಸಮನರ್ಥಸ್ಯಾಶಂಸಕಂ ರಾಕ್ಷಸಂ ಹಂತುಮುತ್ಪಾದಯತಂ । ತಥಾ ಪರ್ವತೇಭ್ಯಃ ಪರ್ವವದ್ಭ್ಯೋ ಮೇಘೇಭ್ಯಃ ಸಕಾಶಾತ್ಸ್ವರ್ಯಂ ॥ ಸ್ವೃ ಶಬ್ದೋಪತಾಪಯೋಃ ॥ ಉಪತಾಪಕಮಶನಿಮುತ್ತಕ್ಷತಂ । ಉದ್ಧೃತಂ ಕುರುತಂ । ಯೇನಾಶನಿನಾ ವಾವೃಧಾನಂ ವರ್ಧಮಾನಂ ಪ್ರವೃದ್ಧಂ ವಾ ರಕ್ಷೋ ರಾಕ್ಷಸಂ ನಿಜೂರ್ವಥಃ ನಿಹಥಃ । ಜುರ್ವೀ ಹಿಂಸಾಯಾಂ ॥ ತಮಶನಿಮುತ್ತಕ್ಷತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರಾಸೋಮಾ—ಎಲೈ ಇಂದ್ರ ಮತ್ತು ಸೋಮದೇವತೆಗಳೇ । ಅಘಶಂಸಾಯ—ನಮಗೆ ಕೇಡನ್ನು ಬಯಸುವ ರಾಕ್ಷಸನಮೇಲೆ । ದಿವಃ—ಅಂತರಿಕ್ಷದಿಂದ । ವಧಂ—ವಧಸಾಧನವಾದ ಆಯುಧವನ್ನು । ಸಂ ವರ್ತಯತಂ—ಎಸೆಯಿರಿ । ಪೃಥಿವ್ಯಾಃ—ಪೃಥ್ವಿಯಿಂದಲೂ । ತರ್ಹಣಂ—ಹಿಂಸಾಕಾರಕವಾದ ಆಯುಧವನ್ನು ಅವನ ಮೇಲೆಸೆಯಿರಿ । ವಾವೃಧಾನಂ—ವೃದ್ಧಿಯನ್ನು ಹೊಂದತಕ್ಕ । ರಕ್ಷಃ—ರಾಕ್ಷಸನನ್ನು । ಯೇನ—ಯಾವ ವಜ್ರಾಯುಧದಿಂದ । ನಿಜೂರ್ವಥಃ—ನಾಶಪಡಿಸುವಿರೋ ಅಂತಹ । ಸ್ವರ್ಯಂ—ದಹಿಸುವ ವಜ್ರಾಯುಧವನ್ನು । ಪರ್ವತೇಭ್ಯಃ—ಮೇಘಪ್ರದೇಶಗಳಿಂದ (ಆಕಾಶದಿಂದ) । ಉತ್ತಕ್ಷತಂ—ಪ್ರಯೋಗಿಸಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ನಮಗೆ ಕೇಡನ್ನು ಬಯಸುವ ರಾಕ್ಷಸನ ಮೇಲೆ ಅಂತರಿಕ್ಷದಿಂದ ವಧಸಾಧನವಾದ ಆಯುಧವನ್ನು ಪ್ರಯೋಗಿಸಿರಿ. ಪೃಥ್ವಿಯಿಂದಲೂ ಹಿಂಸಾಕಾರಕವಾದ ಆಯುಧವನ್ನು ಅವನ ಮೇಲೆ ಪ್ರಯೋಗಿಸಿರಿ. ವೃದ್ಧಿಯನ್ನು ಹೊಂದತಕ್ಕ ಅಸುರನನ್ನು ಯಾವ ವಜ್ರಾಯುಧದಿಂದ ನಾಶಪಡಿಸುವಿರೋ ಅಂತಹ ದಹಿಸುವ ವಜ್ರಾಯುಧವನ್ನು ಮೇಘಪ್ರದೇಶಗಳಿಂದ ಅವನ ಮೇಲೆ ಪ್ರಯೋಗಿಸಿರಿ.

## English Translation

Indra and Soma display from heaven your fatal (weapon), the

extirpator from earth of the malignant (Rakshasas): put forth from the clouds the consuming (thunderbolt), wherewith you slay the increasing Rakshas race.

। ಸಂಹಿತಾಪಾಠಃ ।

ಇಂದ್ರಾಸೋಮಾ ವರ್ತಯತಂ ದಿವಸ್ಪರ್ಯಗ್ನಿತಪ್ತೇಭಿರ್ಯುವಮಶ್ಮ-
ಹನ್ಮಭಿಃ ।
ತಪುರ್ವಧೇಭಿರಜರೇಭಿರತ್ರಿಣೋ ನಿ ಪರ್ಶಾನೇ ವಿಧ್ಯತಂ ಯಂತು
ನಿಸ್ವರಂ ॥ ೫ ॥

। ಪದಪಾಠಃ ॥

ಇಂದ್ರಾಸೋಮಾ । ವರ್ತಯತಂ । ದಿವಃ । ಪರಿ । ಅಗ್ನಿಽತಪ್ತೇಭಿಃ । ಯುವಂ । ಅಶ್ಮಹನ್ಮಽಭಿಃ ।

ತಪುಃಽವಧೇಭಿಃ । ಅಜರೇಭಿಃ । ಅತ್ರಿಣಃ । ನಿ । ಪರ್ಶಾನೇ । ವಿಧ್ಯತಂ । ಯಂತು । ನಿಽಸ್ವರಂ ॥ ೫ ॥

। ಸಾಯಣಭಾಷ್ಯಂ ।

ಹೇ ಇಂದ್ರಾಸೋಮೌ ದಿವೋಽಂತರಿಕ್ಷಾತ್ಪರಿತಃ ಸರ್ವತೋ ವರ್ತಯತಂ । ಆಯುಧಾನಿ ಪ್ರೇರಯತಂ । ಯುವಂ ತೌ ಯುವಾಮಗ್ನಿತಪ್ತೇಭಿರಗ್ನಿನಾ ಸಂತಪ್ತೈಸ್ತಪುರ್ವಧೇಭಿಸ್ತಾಪಕಪ್ರಹಾರೈರಜರೇಭಿರ್ಜರಾರಹಿತೈರ್ದೃಢೈರಶ್ಮಹನ್ಮಭಿರಶ್ಮಸಾರಭೂತಸ್ಯಾಯಸೋ ವಿಕಾರೈರ್ಹನನಸಾಧನೈಸ್ತೈರಾಯುಧೈರತ್ರಿಣೋ ರಾಕ್ಷಸಸ್ಯ ಪರ್ಶಾನೇ ಪಾರ್ಶ್ವಸ್ಥಾನೇ ನಿ ವಿಧ್ಯತಂ । ನಿಹತಂ । ತೇ ಚ ರಾಕ್ಷಸಾ ನಿಃಸ್ವರಂ ನಿಃಶಬ್ದಂ ಯಂತು । ಅಪಯಂತು । ನಿರ್ಗಚ್ಛಂತು ॥

। ಪ್ರತಿಪದಾರ್ಥ ।

ಇಂದ್ರಾಸೋಮಾ—ಎಲೈ ಇಂದ್ರ ಮತ್ತು ಸೋಮದೇವತೆಗಳೇ । ದಿವಃ—ಅಂತರಿಕ್ಷದಿಂದ । ಪರಿ—ಎಲ್ಲಾ ಕಡೆಗಳಲ್ಲಿಯೂ । ವರ್ತಯತಂ—ನಿಮ್ಮ ಆಯುಧಗಳನ್ನು ಪ್ರಯೋಗಿಸಿರಿ । ಯುವಂ—ನೀವಿಬ್ಬರೂ । ಅಗ್ನಿತಪ್ತೇಭಿಃ–ಅಗ್ನಿಯೊಡಗೂಡಿ ದಾಹಾತ್ಮಕವಾಗಿರುವುವೂ । ತಪುರ್ವಧೇಭಿಃ–ಶತ್ರುಗಳನ್ನು ದಹಿಸಿ ನಾಶಮಾಡತಕ್ಕವೂ । ಅಜರೇಭಿಃ—ದೃಢವಾದವೂ । ಅಶ್ಮಹನ್ಮಭಿಃ—ವಜ್ರಾಯುಧದಂತೆ ಕಠಿನವಾಗಿದ್ದು ನಾಶಕಾರಕವಾಗಿರುವುವೂ ಆದ ಆಯುಧಗಳಿಂದ । ಅತ್ರಿಣಃ—ಸರ್ವಭಕ್ಷಕನಾದ ರಾಕ್ಷಸನ । ಪರ್ಶಾನೇ—ಪಾರ್ಶ್ವಪ್ರದೇಶದಲ್ಲಿ । ನಿ ವಿಧ್ಯತಂ—ಹೊಡೆಯಿರಿ । ತೇ—ಆ ರಾಕ್ಷಸರು । ನಿಃ ಸ್ವರಂ—ಶಬ್ದವಿಲ್ಲದೇ । ಯಂತು—ಓಡಿಹೋಗಲಿ.

। ಭಾವಾರ್ಥ ।

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ಅಂತರಿಕ್ಷದಿಂದ ಶತ್ರುಗಳಮೇಲೆ ಸರ್ವತ್ರ ನಿಮ್ಮ ಆಯುಧಗಳನ್ನು

ಪ್ರಯೋಗಿಸಿರಿ. ನೀವಿಬ್ಬರೂ ಸಹ ಅಗ್ನಿಯೊಡಗೂಡಿ ದಾಹಾತ್ಮಕವಾಗಿರುವುವೂ, ಶತ್ರುಗಳನ್ನು ದಹಿಸಿ ನಾಶಮಾಡ ತಕ್ಕವೂ, ದೃಢವಾದವೂ, ವಜ್ರಾಯುಧದಂತೆ ಕಠಿನವಾದವೂ, ನಾಶಕಾರಕವೂ ಆದ ಆಯುಧಗಳಿಂದ ಸರ್ವಭಕ್ಷಕನಾದ ರಾಕ್ಷಸನ ಪಾರ್ಶ್ವಪ್ರದೇಶದಲ್ಲಿ ಹೊಡೆಯಿರಿ. ಆ ರಾಕ್ಷಸರು ಶಬ್ದಮಾಡದೇ ಓಡಿಹೋಗಲಿ.

## English Translation

Indra and Soma, scatter around (your weapons) from the sky pierce their sides with fiery scorching adamantine (weapons), so that they may depart without a sound.

॥ ಸಂಹಿತಾಪಾಠಃ ॥

ಇಂದ್ರಾಸೋಮಾ ಪರಿ ವಾಂ ಭೂತು ವಿಶ್ವತ ಇಯಂ ಮತಿಃ ಕಕ್ಷ್ಯಾಶ್ವೇವ ವಾಜಿನಾ ।
ಯಾಂ ವಾಂ ಹೋತ್ರಾಂ ಪರಿಹಿನೋಮಿ ಮೇಧಯೇಮಾ ಬ್ರಹ್ಮಾಣಿ ನೃಪತೀವ ಜಿನ್ವತಂ ॥ ೬ ॥

॥ ಪದಪಾಠಃ ॥

ಇಂದ್ರಾಸೋಮಾ । ಪರಿ । ವಾಂ । ಭೂತು । ವಿಶ್ವತಃ । ಇಯಂ । ಮತಿಃ । ಕಕ್ಷ್ಯಾ । ಅಶ್ವಾಽಇವ । ವಾಜಿನಾ ।
ಯಾಂ । ವಾಂ । ಹೋತ್ರಾಂ । ಪರಿಽಹಿನೋಮಿ । ಮೇಧಯಾ । ಇಮಾ । ಬ್ರಹ್ಮಾಣಿ । ನೃಪತೀ ಇವೇತಿ ನೃಪತೀಽಇವ । ಜಿನ್ವತಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಸೋಮೌ ಇಯಮಸ್ಮಾಭಿಃ ಕ್ರಿಯಮಾಣಾ ಮತಿರ್ಮನನೀಯಾ ಸ್ತುತಿರ್ವಾಜಿನಾ ವಾಜಿನೌ ಬಲವಂತೌ ವಾಂ ಯುವಾಂ ವಿಶ್ವತಃ ಸರ್ವತಃ ಪರಿ ಭೂತು । ಪರಿಗೃಹ್ಣಾತು । ವ್ಯಾಪ್ನೋತು ವಾ । ತತ್ರ ದೃಷ್ಟಾಂತಃ । ಕಕ್ಷ್ಯಾ ಕಕ್ಷ್ಯಬಂಧನೀ ರಜ್ಜುರಶ್ವೇವ ಯಥಾಶ್ವಂ ಪರಿಗೃಹ್ಣಾತಿ ತದ್ವತ್ । ಯಾಂ ಹೋತ್ರಾಂ ವಾಚಂ ವಾಂ ಯುವಾಭ್ಯಾಂ ಮೇಧಯಾ ಪರಿಹಿನೋಮಿ ಪ್ರೇರಯಾಮಿ । ಸೇಯಂ ।

ಮತಿರಿತಿ ಸಂಬಂಧಃ । ಅಪಿ ಚೇಮೇಮಾನ್ಯಸ್ಮಾಭಿಃ ಕೃತಾನಿ ಬ್ರಹ್ಮಾಣಿ ಸ್ತೋತ್ರಾಣಿ .... .... .... ಯಥಾ ಧನೈಃ ಪೂರಯಂತಿ ತಥಾ ಜಿನ್ವತಂ । ಫಲೈಃ ಪೂರಯತಂ ॥

॥ ಪ್ರತಿಪದಾರ್ಥ ॥

ಇಂದ್ರಾಸೋಮಾ—ಎಲೈ ಇಂದ್ರ ಮತ್ತು ಸೋಮದೇವತೆಗಳೇ । ಯಾಂ ಹೋತ್ರಾಂ—ಯಾವ ಸ್ತುತಿ ವಾಕ್ಯನ್ನು । ವಾಂ—ನಿಮ್ಮಿಬ್ಬರನ್ನೂ ಉದ್ದೇಶಿಸಿ। ಮೇಧಯಾ—ಉತ್ತಮವಾದ ಮನಃಶಕ್ತಿಯಿಂದ (ಭಕ್ತಿಯಿಂದ)। ಪರಿಹಿನೋಮಿ—ಅರ್ಪಿಸುವೆನೋ । ಇಯಂ—ನಮ್ಮಿಂದ ನಿರ್ಮಿತವಾಗಿರುವುದೂ । ಮತಿಃ—ಮನನಾತ್ಮಕ ವಾಗಿರುವುದೂ ಆದ ಸ್ತುತಿಯು । ವಾಜಿನಾ—ಶಕ್ತಿಯುತರಾದ । ವಾಂ—ನಿಮ್ಮನ್ನು । ಕಕ್ಷ್ಯಾ—ಸುತ್ತುಪಟ್ಟಿಯು ಅಶ್ವಮಿವ—ಅಶ್ವದ ದೇಹವನ್ನು ಸುತ್ತಲೂ ವ್ಯಾಪಿಸುವಂತೆ । ವಿಶ್ವತಃ—ಸರ್ವತ್ರ । ಪರಿಭೂತು—ವ್ಯಾಪಿಸಲಿ । ಇಮಾ ಬ್ರಹ್ಮಾಣಿ—ನಮ್ಮ ಈ ಸ್ತೋತ್ರಗಳನ್ನು । ನೃಪತೀ ಇವ—ಇಬ್ಬರು ರಾಜರು ಸ್ತುತಿಕರ್ತರನ್ನು ಧನಗಳಿಂದ ತುಂಬುವಂತೆ। ಜಿನ್ವತಂ–ಪ್ರಭುಗಳಾಗಿರುವ ನೀವೂ ಸಹ ಈ ಸ್ತುತಿಗಳಿಂದ ತೃಪ್ತರಾಗಿ ಇವನ್ನು ಫಲಗಳಿಂದ ತುಂಬಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ನಿಮ್ಮಿಬ್ಬರನ್ನೂ ಉದ್ದೇಶಿಸಿ ಯಾವ ಸ್ತುತಿವಾಕ್ಯವನ್ನು ಉತ್ತಮವಾದ ಭಕ್ತಿಯಿಂದ ಅರ್ಪಿಸುವೆನೋ ನಮ್ಮಿಂದ ನಿರ್ಮಿತವಾದುದೂ, ಧ್ಯಾನಾತ್ಮಕವಾದುದೂ ಆದ ಅಂತಹ ಸ್ತುತಿಯು ಶಕ್ತಿಯುತರಾದ ನಿಮ್ಮನ್ನು ಸುತ್ತುಪಟ್ಟಿಯು ಅಶ್ವದ ದೇಹವನ್ನು ಸುತ್ತಲೂ ವ್ಯಾಪಿಸುವಂತೆ ನಿಮ್ಮನ್ನು ಸರ್ವ ವ್ಯಾಪಿಸಲಿ. ರಾಜರು ಸ್ತುತಿಕರ್ತರನ್ನು ಧನಗಳಿಂದ ತುಂಬುವಂತೆ ರಾಜರಾದ ನೀವಿಬ್ಬರೂ ನಮ್ಮ ಸ್ತುತಿಗಳಿಂದ ತೃಪ್ತರಾಗಿ ಅವನ್ನು ಫಲಗಳಿಂದ ತುಂಬಿರಿ

## English Translation

May this praise invest you, Indra and Soma, who are mighty, on every side, as a girth (encompasses) a horse,—that praise which I offer to you both with pure devotion: you ,like two kings, accept this my homage.

॥ ಸಂಹಿತಾಪಾಠಃ ॥

ಪ್ರತಿ ಸ್ಮರೇಥಾಂ ತುಜಯದ್ಭಿರೇವೈರ್ಹತಂ ದ್ರುಹೋ ರಕ್ಷಸೋ ಭಂಗುರಾವತಃ ।
ಇಂದ್ರಾಸೋಮಾ ದುಷ್ಕೃತೇ ಮಾ ಸುಗಂ ಭೂದ್ಯೋ ನಃ ಕದಾ ಚಿದಭಿದಾಸತಿ ದ್ರುಹಾ ॥ ೭ ॥

॥ ಪದಪಾಠಃ ॥

ಪ್ರತಿ । ಸ್ಮರೇಥಾಂ । ತುಜಯತ್ಽಭಿಃ । ಏವೈಃ । ಹತಂ । ದ್ರುಹಃ । ರಕ್ಷಸಃ । ಭಂಗುರಽವತಃ ।
ಇಂದ್ರಾಸೋಮಾ । ದುಃಽಕೃತೇ । ಮಾ । ಸುಽಗಂ । ಭೂತ್ । ಯಃ । ನಃ । ಕದಾ । ಚಿತ್ ।
ಅಭಿಽದಾಸತಿ । ದ್ರುಹಾ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಸೋಮೌ ತುಜಯದ್ಭಿಸ್ತ್ವರಮಾಣೈರೇವೈರ್ಗಂತೃಭಿರಶ್ವೈಃ ಪ್ರತಿ ಸ್ಮರೇಥಾಂ । ಅಭಿಗಚ್ಛತಂ ॥ ಉಪಸರ್ಗವಶೇನ ಸ್ಮರತಿರತ್ರಾರ್ಥಾಂತರೇ ವರ್ತತೇ । ಯಥಾ ಪ್ರಸ್ಮರಣಾ ಪ್ರಸ್ಥಾನಮಿತಿ ॥ ಅಭಿಗತ್ಯ ಚ ದ್ರುಹೋ ದೋಗ್ಧ್ರೂನ್ ಭಂಗುರಾವತೋ ಭಂಜನಕರ್ಮವತೋ ರಕ್ಷಸೋ ರಾಕ್ಷಸಾನ್ ಹತಂ । ಹಿಂಸ್ತಂ । ಹೇ ಇಂದ್ರಾಸೋಮೌ ದುಷ್ಕೃತೇ ಪಾಪಕಾರಿಣೇ ರಾಕ್ಷಸಾಯ ಸುಗಂ ಸುಖಂ ಮಾ ಭೂತ್ । ಮಾ ಭವತು । ದ್ರುಹಾ ದ್ರೋಹೇಣ ಯುಕ್ತೋ ಯೋ ನೋಽಸ್ಮಾನ್ ಕದಾ ಚಿದಪ್ಯಭಿದಾಸತಿ ಅಭಿಹಂತಿ ತಸ್ಮೈ ದುಷ್ಕೃತ ಇತ್ಯನ್ವಯಃ ॥

॥ ಪ್ರತಿಪದಾರ್ಥ ॥

ಇಂದ್ರಾಸೋಮಾ—ಎಲೈ ಇಂದ್ರ ಮತ್ತು ಸೋಮದೇವತೆಗಳೇ । ತುಜಯದ್ಭಿಃ—ವೇಗಗಾಮಿಗಳಾದ । ಏವೈಃ—ಅಶ್ವಗಳೊಡನೆ । ಪ್ರತಿ ಸ್ಮರೇಥಾಂ—ನಮ್ಮಲ್ಲಿಗೆ ಬನ್ನಿರಿ । ದ್ರುಹಃ—ದ್ರೋಹಿಗಳಾದವರೂ । ಭಂಗುರಾವತಃ—ನಾಶಕಾರಕರೂ ಆದ । ರಕ್ಷಸಃ—ರಾಕ್ಷಸರನ್ನು । ಹತಂ—ನಾಶಮಾಡಿರಿ । ಯಃ—ಯಾವ ಅಸುರನು । ದ್ರುಹಾ—ದ್ರೋಹಬುದ್ಧಿಯಿಂದ । ನಃ—ನಮ್ಮನ್ನು । ಕದಾ ಚಿತ್—ಯಾವಾಗಲಾದರೂ (ಅಥವಾ ಯಾವಾಗಲೂ) ಅಭಿದಾಸತಿ—ಹಿಂಸಿಸುವನೋ । ದುಷ್ಕೃತೇ—ದುಷ್ಕರ್ಮಕಾರಿಯಾದ ಆ ಅಸುರನಿಗೆ । ಸುಗಂ—ಸುಖಜೀವನವು । ಮಾ ಭೂತ್—ಖಂಡಿತವಾಗಿಯೂ ಸಿಕ್ಕದಿರಲಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಸೋಮದೇವತೆಗಳೇ, ವೇಗಗಾಮಿಗಳಾದ ಅಶ್ವಗಳೊಡನೆ ನಮ್ಮಲ್ಲಿಗೆ ಬನ್ನಿರಿ. ದ್ರೋಹಿಗಳೂ, ನಾಶಕಾರಕರೂ ಆದ ರಾಕ್ಷಸರನ್ನು ನಾಶಮಾಡಿರಿ. ಯಾವ ಅಸುರನು ದ್ರೋಹಬುದ್ಧಿಯಿಂದ ನಮ್ಮನ್ನು ಯಾವಾಗಲೂ ಹಿಂಸಿಸುವನೋ ದುಷ್ಕರ್ಮಕಾರಿಯಾದ ಆ ಅಸುರನಿಗೆ ಖಂಡಿತವಾಗಿಯೂ ಸುಖಜೀವನವಿಲ್ಲದಿರಲಿ.

## English Translation

Come with rapid steeds, slay the oppressive mischievous Rakshasas : let there be no happiness, Indra and Soma, to the malignant, who harasses us with his oppression.

॥ ಸಂಹಿತಾಪಾಠಃ ॥

ಯೋ ಮಾ ಪಾಕೇನ ಮನಸಾ ಚರಂತಮಭಿಚಷ್ಟೇ ಅನೃತೇಭಿರ್ವ-
ಚೋಽಭಿಃ ।
ಆಪ ಇವ ಕಾಶಿನಾ ಸಂಗೃಭೀತಾ ಅಸನ್ನಸ್ತ್ವಸತ ಇಂದ್ರ ವಕ್ತಾ ॥ ೮ ॥

॥ ಪದಪಾಠಃ ॥

ಯಃ । ಮಾ । ಪಾಕೇನ । ಮನಸಾ । ಚರಂತಂ । ಅಭಿಽಚಷ್ಟೇ । ಅನೃತೇಭಿಃ । ವಚಃಽಭಿಃ ।
ಆಪಃಽಇವ । ಕಾಶಿನಾ । ಸಂಽಗೃಭೀತಾಃ । ಅಸನ್ । ಅಸ್ತು । ಅಸತಃ । ಇಂದ್ರ । ವಕ್ತಾ ॥ ೮ ॥

॥ ಸಾಯಣಭಾಷ್ಯಂ ॥

ಪಾಕೇನ ಪಕ್ವೇನ ಶುದ್ಧೇನ ಮನಸಾ ಚರಂತಂ ವರ್ತಮಾನಂ ಸತ್ಯವಾದಿನಂ ಯೋ ಮಾಂ ರಾಕ್ಷಸೋಽನೃತೇಭಿರನೃತೈರಸತ್ಯೈರ್ವಚೋಭಿರ್ವಚನೈರಭಿಚಷ್ಟೇ ಅಭಿಶಂಸತಿ ಮಯ್ಯಸತ್ಯವಚನಮಾರೋಪಯತಿ ಹೇ ಇಂದ್ರ ಕಾಶಿನಾ ಮುಷ್ಟಿನಾ ಸಂಗೃಭೀತಾಃ ಸಮ್ಯಗ್ಗೃಹೀತಾ ಆಪ ಇವ ಯಥಾಪೋ ವಿಶೀರ್ಣಾ ಭವಂತಿ ತಥಾಸತೋಽಸತ್ಯಸ್ಯ ವಕ್ತಾ ಸ ರಾಕ್ಷಸೋಽಸನ್ನಸ್ತು । ಅವಿದ್ಯಮಾನೋ ಭವತು । ನಶ್ಯತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಪಾಕೇನ—ಪರಿಪಕ್ವವೂ ಶುದ್ಧವೂ ಆದ । ಮನಸಾ—ಮನಸ್ಸಿನಿಂದ (ಭಕ್ತಿಯಿಂದ) । ಚರಂತಂ—ವ್ಯವಹರಿಸುವ । ಮಾ—ನನ್ನನ್ನು । ಯಃ—ಯಾವ ಅಸುರನು । ಅನೃತೇಭಿಃ—ಅಸತ್ಯಾತ್ಮಕವಾದ । ವಚೋಭಿಃ—ವಾಕ್ಕುಗಳಿಂದ । ಅಭಿಚಷ್ಟೇ—ಮೋಸಮಾಡುವನೋ । ಅಸತಃ ವಕ್ತಾ—ಅಸತ್ಯಭಾಷಿಯಾದ ಅದೇ ಅಸುರನು । ಕಾಶಿನಾ—ಮುಷ್ಟಿಯಿಂದ । ಸಂಗೃಭೀತಾಃ—ಹಿಡಿದಿರುವ । ಆಪ ಇವ—ಉದಕಗಳಂತೆ । ಅಸನ್ನಸ್ತು—ಅಭಾವವನ್ನು ಹೊಂದಲಿ (ಅವನ ಅಸ್ತಿತ್ವವು ನಾಶವಾಗಲಿ).

॥ ಭಾವಾರ್ಥ ॥

ಎಲೈ ಇಂದ್ರನೇ ಪರಿಪಕ್ವವಾದುದೂ, ಪರಿಶುದ್ಧವಾದುದೂ ಆದ ಭಕ್ತಿಯಿಂದ ನಿನ್ನಲ್ಲಿ ವ್ಯವಹರಿಸುವ ನನ್ನನ್ನು ಯಾವ ಅಸುರನು ಅಸತ್ಯಾತ್ಮಕವಾದ ವಾಕ್ಕುಗಳಿಂದ ಮೋಸಮಾಡುವನೋ ಅಸತ್ಯಭಾಷಿಯಾದ ಅದೇ ಅಸುರನು ಮುಷ್ಟಿಯಿಂದ ಹಿಡಿದಿರುವ ಉದಕವು ಸೋರಿಹೋಗುವಂತೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳಲಿ. (ಅವನು ಪೂರ್ಣವಾಗಿ ನಾಶವಾಗಲಿ).

## English translation

May he who with false columnies maligns me behaving with a pure

heart, may such a speaker of falsehood, Indra, cease to be, like water held in the hand.

॥ ಸಂಹಿತಾಪಾಠಃ ॥

ಯೇ ಪಾಕಶಂಸಂ ವಿಹರಂತ ಏವೈರ್ಯೇ ವಾ ಭದ್ರಂ ದೂಷಯಂತಿ ಸ್ವಧಾಭಿಃ ।
ಅಹಯೇ ವಾ ತಾನ್ಪ್ರದದಾತು ಸೋಮ ಆ ವಾ ದಧಾತು ನಿರ್ಋತೇರುಪಸ್ಥೇ ॥ ೯ ॥

॥ ಪದಪಾಠಃ ॥

ಯೇ । ಪಾಕಽಶಂಸಂ । ವಿಽಹರಂತೇ । ಏವೈಃ । ಯೇ । ವಾ । ಭದ್ರಂ । ದೂಷಯಂತಿ । ಸ್ವಧಾಭಿಃ ।
ಅಹಯೇ । ವಾ । ತಾನ್ । ಪ್ರಽದದಾತು । ಸೋಮಃ । ಆ । ವಾ । ದಧಾತು । ನಿಃಽಋತೇಃ । ಉಪಽಸ್ಥೇ ॥ ೯ ॥

॥ ಸಾಯಣಭಾಷ್ಯಂ ॥

ಯೇ ರಾಕ್ಷಸಾಃ ಪಾಕಶಂಸಂ ಪರಿಪಕ್ವವಚನಂ ಸತ್ಯಭಾಷಿಣಂ ಮಾಮೇವೈರೇತವ್ಯೈಃ ಪ್ರಾಪ್ತವ್ಯೈರಾತ್ಮೀಯೈಃ ಕಾಮ್ಯೈರ್ಹೇತುಭೂತೈರ್ವಿಹರಂತೇ ವಿಶೇಷೇಣ ಹರಂತಿ ಉಪಕ್ಷಪಯಂತಿ । ಯಥಾಕಾಮಂ ಪರಿವದಂತೀತ್ಯರ್ಥಃ । ಯೇ ವಾ ಸ್ವಧಾಭಿರ್ಬಲೈರ್ಯುಕ್ತಾ ಭದ್ರಂ ಕಲ್ಯಾಣವರ್ತನಂ ಮಾಂ ದೂಷಯಂತಿ ದುಷ್ಟಂ ಕುರ್ವಂತಿ ತಾನ್ ಸರ್ವಾನ್ ಸೋಮೋಽಹಯೇ ವಾ ಸರ್ಪಾಯ ವಾ ಪ್ರದದಾತು । ನಿರ್ಋತೇಃ ಪಾಪದೇವತಾಯಾ ಉಪಸ್ಥ ಉತ್ಸಂಗೇ ವಾ ಆ ದಧಾತು । ಪ್ರಕ್ಷಿಪತು ॥

॥ ಪ್ರತಿಪದಾರ್ಥ ॥

ಯೇ—ಯಾವ ರಾಕ್ಷಸರು । ಪಾಕಶಂಸಂ—ಪರಿಪಕ್ವಬುದ್ಧಿಯುಳ್ಳ ನನ್ನನ್ನು । ಏವೈಃ—ತಮ್ಮ ಸ್ವೇಚ್ಛಾ ಪ್ರವೃತ್ತಿಗಳಿಂದ । ವಿಹರಂತೇ—ಹಿಂಸಿಸುವರೋ । ಯೇ ವಾ—ಯಾರು ತಾನೇ । ಸ್ವಧಾಭಿಃ—ತಮ್ಮ ಶಕ್ತಿಯೊಡಗೂಡಿದವರಾಗಿ । ಭದ್ರಂ—ಕಲ್ಯಾಣಮಾರ್ಗದಲ್ಲಿರುವ ನನ್ನನ್ನು । ದೂಷಯಂತಿ—ಕೆಟ್ಟಮಾರ್ಗಕ್ಕೆಳೆಯುವರೋ । ತಾನ್—ಆ ಸಮಸ್ತರನ್ನೂ । ಸೋಮಃ—ಸೋಮದೇವನು । ಅಹಯೇ ವಾ—ಸರ್ಪದ ಬಾಯಿಗಾಗಲಿ । ಪ್ರದದಾತು—ಆಹುತಿಯಾಗಿ ಕೊಡಲಿ । ನಿರ್ಋತೇಃ—ನಿರ್ಋತಿಸಂಜ್ಞಕವಾದ ಪಾಪದೇವತೆಯ । ಉಪಸ್ಥೇ ವಾ—ತೊಡೆಯ ಮೇಲಾಗಲಿ । ಆ ದಧಾತು—ಇಡಲಿ.

॥ ಭಾವಾರ್ಥ ॥

ಯಾವ ರಾಕ್ಷಸರು ಪರಿಪಕ್ವಬುದ್ಧಿಯುಳ್ಳ ನನ್ನನ್ನು ತಮ್ಮ ಸ್ವೇಚ್ಛಾಪ್ರವೃತ್ತಿಗಳಿಂದ ಹಿಂಸಿಸುವರೋ, ಯಾರು ತಾನೇ ತಮ್ಮ ಶಕ್ತಿಯೊಡಗೂಡಿದವರಾಗಿ ಕಲ್ಯಾಣಮಾರ್ಗದಲ್ಲಿರುವ ನನ್ನನ್ನು ಕೆಟ್ಟಮಾರ್ಗಕ್ಕೆಳೆಯುವರೋ ಆ ಸಮಸ್ತರನ್ನೂ ಸೋಮದೇವನು ಸರ್ಪದ ಬಾಯಿಗಾದರೂ ದೂಡಲಿ. ಅಥವಾ ನಿರ್ಋತಿಸಂಜ್ಞಕವಾದ ಪಾಪದೇವತೆಯ ತೊಡೆಯಮೇಲಿಟ್ಟು ಆ ಹಿಂಸೆಗಾದರೂ ಒಳಪಡಿಸಲಿ.

## English Translation

May Soma give to the serpent, or toss upon the lap of Nirriti, those who with designing (accusations) persecute me, a speaker of sincerity, and those who by spiteful (calumnies) vilify all that is good in me.

॥ ಸಂಹಿತಾಪಾಠಃ ॥

ಯೋ ನೋ ರಸಂ ದಿಪ್ಸತಿ ಪಿತ್ವೋ ಅಗ್ನೇ ಯೋ ಅಶ್ವಾನಾಂ ಯೋ ಗವಾಂ ಯಸ್ತನೂನಾಂ ।

ರಿಪುಃ ಸ್ತೇನಃ ಸ್ತೇಯಕೃದ್ದಭ್ರಮೇತು ನಿ ಷ ಹೀಯತಾಂ ತನ್ವಾ೩ ತನಾ ಚ ॥ ೧೦ ॥

॥ ಪದಪಾಠಃ ॥

ಯಃ । ನಃ । ರಸಂ । ದಿಪ್ಸತಿ । ಪಿತ್ವಃ । ಅಗ್ನೇ । ಯಃ । ಅಶ್ವಾನಾಂ । ಯಃ । ಗವಾಂ । ಯಃ । ತನೂನಾಂ ।

ರಿಪುಃ । ಸ್ತೇನಃ । ಸ್ತೇಯಽಕೃತ್ । ದಭ್ರಂ । ಏತು । ನಿ । ಸಃ । ಹೀಯತಾಂ । ತನ್ವಾ । ತನಾ । ಚ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯೋ ರಾಕ್ಷಸೋ ನೋಽಸ್ಮಾಕಂ ಪಿತ್ವೋಽನ್ನಸ್ಯ ರಸಂ ಸಾರಂ ದಿಪ್ಸತಿ ಜಿಘಾಂಸತಿ । ಯಶ್ಚಾಶ್ವಾನಾಮಸ್ಮದೀಯಾನಾಂ ರಸಂ ದಿಪ್ಸತಿ । ಯಶ್ಚ ಗವಾಂ ರಸಂ ದಿಪ್ಸತಿ । ಯಶ್ಚ ತನೂನಾಮಸ್ಮದೀಯಾನಾಂ ಶರೀರಾಣಾಂ ರಸಂ ದಿಪ್ಸತಿ । ರಿಪುರ್ಬಾಧಕಃ ಸ್ತೇನಶ್ಚೋರಃ ಸ್ತೇಯಕೃದ್ಧನಸ್ಯಾಪಹರ್ತಾ ಸ ಸರ್ವೋ ಜನೋ ದಭ್ರಂ ಹಿಂಸಾಮೇತು । ಪ್ರಾಪ್ನೋತು । ಅಪಿ ಚ ಸ ಬಾಧಕಸ್ತನ್ವಾ ಸ್ವಕೀಯೇನ ಶರೀರೇಣ ತನಾ ಚ ತನಯೇನ ಚ ನಿ ಹೀಯತಾಂ । ನಿಹೀನೋ ಭವತು ॥

|| ಪ್ರತಿಪದಾರ್ಥ ||

ಅಗ್ನೇ—ಎಲೈ ಅಗ್ನಿಯೇ | ಯಃ—ಯಾವ ಅಸುರನು | ನಃ—ನಮ್ಮ | ಪಿತ್ವಃ—ಅನ್ನದ | ರಸಂ—ಸಾರವನ್ನು | ದಿಪ್ಸತಿ—ಅಪಹರಿಸಿ ನಾಶಪಡಿಸುವನೋ | ಯಃ—ಯಾರು | ಅಶ್ವಾನಾಂ—ನಮ್ಮ ಅಶ್ವಗಳ ಶಕ್ತಿಯನ್ನು ಕುಗ್ಗಿಸುವನೋ | ಯಃ—ಯಾರು | ಗವಾಂ—ನಮ್ಮ ಗೋವುಗಳ ಪೌಷ್ಕಲ್ಯವನ್ನು ಕುಂದಿಸುವನೋ | ಯಃ—ಯಾವ ಅಸುರನು | ತನೂನಾಂ—ನಮ್ಮ ಶರೀರಗಳ ಸೌಂದರ್ಯವನ್ನೂ, ಶಕ್ತಿಯನ್ನೂ ನಾಶಪಡಿಸುವನೋ | ಸಃ—ಅಂತಹ| ರಿಪುಃ—ಹಿಂಸಕನೂ | ಸ್ತೇನಃ—ಚೋರನೂ| ಸ್ತೇಯಕೃತ್—ನಮ್ಮ ಸಂಪತ್ತನ್ನಪಹರಿಸುವವನೂ (ಈ ಎಲ್ಲಾ ಗುಂಪಿನವರೂ) | ದಭ್ರಂ—ಹಿಂಸೆಯನ್ನು | ಏತು—ಅನುಭವಿಸಲಿ | ಸಃ—ಅಂತಹ ಸಮಸ್ತಶತ್ರುವೂ| ತನ್ವಾ—ಶರೀರ ಸೌಂದರ್ಯಾದಿಗಳಿಂದಲೂ | ತನಾ ಚ—ಪುತ್ರಾದಿಗಳಿಂದಲೂ | ನಿ ಹೀಯತಾಂ—ವರ್ಜಿತರಾಗಲಿ.

|| ಭಾವಾರ್ಥ ||

ಎಲೈ ಅಗ್ನಿಯೇ, ಯಾವ ಅಸುರನು ನಮ್ಮ ಅನ್ನದ ಸಾರವನ್ನೆಲ್ಲಾ ಅಪಹರಿಸಿ ನಾಶಪಡಿಸುವನೋ, ಯಾರು ನಮ್ಮ ಅಶ್ವಗಳ ಶಕ್ತಿಯನ್ನೂ ಗೋವುಗಳ ಪೌಷ್ಕಲ್ಯವನ್ನೂ ಕುಗ್ಗಿಸಿ ಕುಂದಿಸುವನೋ, ಯಾರು ನಮ್ಮ ಶರೀರಗಳ ಸೌಂದರ್ಯವನ್ನೂ, ಶಕ್ತಿಯನ್ನೂ ನಾಶಪಡಿಸುವನೋ ಅಂತಹ ಹಿಂಸಕನೂ ಚೋರನೂ, ನಮ್ಮ ಸಂಪತ್ತನ್ನಪಹರಿಸುವವನೂ ಮತ್ತು ಈ ಎಲ್ಲಾ ಗುಂಪಿಗೆ ಸೇರಿದವರೂ ಪೂರ್ಣವಾದ ಹಿಂಸೆಯನ್ನನುಭವಿಸಲಿ. ಅಂತಹ ಸಮಸ್ತ ಶತ್ರುವೂ ಸಹ ಶರೀರ ಸೌಂದರ್ಯಾದಿಗಳಿಂದಲೂ, ಪುತ್ರಾದಿಗಳಿಂದಲೂ ವರ್ಜಿತರಾಗಲಿ.

## English Translation

May he, Agni, who strives to destroy the essence of our food, of our horses, of our cattle, of our bodies—the adversary, the thief, the robber—go to destruction, and be deprived both of person and of progeny.

|| ಸಂಹಿತಾಪಾಠಃ ||

ಪರಃ ಸೋ ಅಸ್ತು ತನ್ವಾ೩ ತನಾ ಚ ತಿಸ್ರಃ ಪೃಥಿವೀರಧೋ ಅಸ್ತು ವಿಶ್ವಾಃ |
ಪ್ರತಿ ಶುಷ್ಯತು ಯಶೋ ಅಸ್ಯ ದೇವಾ ಯೋ ನೋ ದಿವಾ ದಿಪ್ಸತಿ ಯಶ್ಚ ನಕ್ತಂ || ೧೧ ||

|| ಪದಪಾಠಃ ||

ಪರಃ | ಸಃ | ಅಸ್ತು | ತನ್ವಾ | ತನಾ | ಚ | ತಿಸ್ರಃ | ಪೃಥಿವೀಃ | ಅಧಃ | ಅಸ್ತು | ವಿಶ್ವಾಃ |
ಪ್ರತಿ | ಶುಷ್ಯತು | ಯಶಃ | ಅಸ್ಯ | ದೇವಾಃ | ಯಃ | ನಃ | ದಿವಾ | ದಿಪ್ಸತಿ | ಯಃ | ಚ | ನಕ್ತಂ ||

। ಸಾಯಣಭಾಷ್ಯಂ ।

ಸ ರಾಕ್ಷಸಸ್ತನ್ವಾ ತನಾ ಚ ॥ ವ್ಯತ್ಯಯೇನ ತೃತೀಯಾ ॥ ತನ್ವಾಃ ಶರೀರಸ್ಯ ತನಯಸ್ಯ ಚ ಪರಃ ಪರಸ್ತಾದಸ್ತು । ವರ್ತಮಾನೋ ಭವತು । ಉಭಾಭ್ಯಾಂ ವಿಯುಕ್ತೋ ಭವತ್ವಿತ್ಯರ್ಥಃ । ವಿಶ್ವಾ ವ್ಯಾಪ್ತಾಸ್ತಿಸ್ರಃ ಪೃಥಿವೀಸ್ತ್ರೀಲ್ಲೋಕಾನಧೋಽಸ್ತು । ಅಧಸ್ತಾದ್ಭವತು । ಲೋಕತ್ರಯಾದಪಿ ಪ್ರಚ್ಯುತೋ ಭವತ್ವಿತ್ಯರ್ಥಃ । ಹೇ ದೇವಾಃ ಅಸ್ಯ ಶತ್ರೋರ್ಯಶೋಽನ್ನಂ ಕೀರ್ತಿರ್ವಾ ಪ್ರತಿ ಶುಷ್ಯತು । ಯೋ ರಾಕ್ಷಸೋ ನೋಽಸ್ಮಾನ್ದಿವಾಹನಿ ದಿಪ್ಸತಿ ಜಿಘಾಂಸತಿ ಯಶ್ಚ ನಕ್ತಂ ರಾತ್ರೌ ಜಿಘಾಂಸತಿ ಅಸ್ಯೋಭಯವಿಧಸ್ಯ ಯಶಃ ಪ್ರತಿ ಶುಷ್ಯತ್ವಿತಿ ಸಂಬಂಧಃ ॥

॥ ಪ್ರತಿಪದಾರ್ಥ ॥

ಯಃ—ಯಾವ ಅಸುರನು । ನಃ—ನಮ್ಮನ್ನು । ದಿವಾ—ಅಹಸ್ಸಿನಲ್ಲಿಯೂ । ದಿಪ್ಸತಿ—ಹಿಂಸಿಸುವನೋ। ಯಶ್ಚ—ಯಾವನು । ನಕ್ತಂ—ರಾತ್ರಿಕಾಲದಲ್ಲಿಯೂ ಹಿಂಸಿಸುವನೋ । ಸಃ—ಆ ಅಸುರನು । ತನ್ವಾ—ಶರೀರದಿಂದಲೂ । ತನಾ ಚ—ಪುತ್ರಾದಿಗಳಿಂದಲೂ । ಪರಃ ಅಸ್ತು—ವಿಯುಕ್ತನಾಗಿ ಎರಡನ್ನೂ ಕಳೆದುಕೊಳ್ಳಲಿ । ವಿಶ್ವಾಃ—ಸಮಸ್ತವಾದ । ತಿಸ್ರಃ ಪೃಥಿವೀಃ—ಮೂರು ಲೋಕಗಳಿಗಿಂತಲೂ । ಅಧೋ ಅಸ್ತು—ಕೆಳಭಾಗಕ್ಕೆ ಉರುಳಲಿ । ದೇವಾಃ—ಎಲೈ ದೇವತೆಗಳೇ । ಅಸ್ಯ—ಈ ಶತ್ರುವಿನ । ಯಶಃ—ಅನ್ನವು । ಪ್ರತಿ ಶುಷ್ಯತು—ನಾಶವನ್ನು ಹೊಂದಲಿ.

॥ ಭಾವಾರ್ಥ ।

ಯಾವ ಅಸುರನು ನಮ್ಮನ್ನು ಅಹಸ್ಸಿನಲ್ಲಿಯೂ ಹಾಗೆಯೇ ರಾತ್ರಿಯಲ್ಲಿಯೂ ಏಕಪ್ರಕಾರವಾಗಿ ಹಿಂಸಿಸುವನೋ ಆ ಅಸುರನು ತನ್ನ ಶರೀರದಿಂದಲೂ ಪುತ್ರಾದಿಗಳಿಂದಲೂ ವಿಯುಕ್ತನಾಗಿ ಎರಡನ್ನೂ ಕಳೆದುಕೊಳ್ಳಲಿ. ಅವನು ಮೂರು ಲೋಕಗಳಿಗಿಂತಲೂ ಕೆಳಗಿರುವ ಅಂಧಕಾರಪ್ರದೇಶಕ್ಕೆ ಉರುಳಲಿ. ಎಲೈ ದೇವತೆಗಳೇ, ಶತ್ರುವಿನ ಅನ್ನವು ನಾಶವನ್ನು ಹೊಂದಲಿ.

## English Translation

May he be deprived of bodily (existence) and of posterity; may he be cast down below all the three worlds; may his reputation, Gods, be blighted who seeks our destructions by day or by night.

। ಸಂಹಿತಾಪಾಠಃ ।

ಸುವಿಜ್ಞಾನಂ ಚಿಕಿತುಷೇ ಜನಾಯ ಸಚ್ಚಾಸಚ್ಚ ವಚಸೀ ಪಸ್ಪೃಧಾತೇ ।
ತಯೋರ್ಯತ್ಸತ್ಯಂ ಯತರದೃಜೀಯಸ್ತದಿತ್ಸೋಮೋಽವತಿ ಹಂತ್ಯಾಸತ್ ॥

॥ ಪದಪಾಠಃ ॥

ಸುಽವಿಜ್ಞಾನಂ । ಚಿಕಿತುಷೇ । ಜನಾಯ । ಸತ್ । ಚ । ಅಸತ್ । ಚ । ವಚಸೀ ಇತಿ । ಪಸ್ಪೃಧಾತೇ ಇತಿ ।

ತಯೋಃ । ಯತ್ । ಸತ್ಯಂ । ಯತರತ್ । ಋಜೀಯಃ । ತತ್ । ಇತ್ । ಸೋಮಃ । ಅವತಿ । ಹಂತಿ । ಅಸತ್ । ೧೨ ॥

॥ ಸಾಯಣಭಾಷ್ಯಂ ॥

ಪ್ರಾಯೋಣೇಚವಮಾದಿಭಿರ್ಋಗ್ಭೀ ರಾಕ್ಷಸೇನ ಸಹರ್ಷಿಣಾ ಶಪಥಃ ಕ್ರಿಯತೇ । ಅತ್ರ ಕೇಚಿದಾಹುಃ । ಹತ್ವಾ ಪುತ್ರಶತಂ ಪೂರ್ವಂ ವಸಿಷ್ಠಸ್ಯ ಮಹಾತ್ಮನಃ । ವಸಿಷ್ಠಂ ರಾಕ್ಷಸೋಽಸಿ ತ್ವಂ ವಾಸಿಷ್ಠಂ ರೂಪಮಾಸ್ಥಿತಃ ॥ ಅಹಂ ವಸಿಷ್ಠ ಇತ್ಯೇವಂ ಜಿಘಾಂಸೂ ರಾಕ್ಷಸೋಽಬ್ರವೀತ್ । ಅತ್ರೋತ್ತರಾ ಋಚೋ ದೃಷ್ಟಾ ವಸಿಷ್ಠೇನೇತಿ ನಃ ಶ್ರುತಮಿತಿ ॥ ಚಿಕಿತುಷೇ ವಿದುಷೇ ಜನಾಯೇದಂ ಸುವಿಜ್ಞಾನಂ ವಿಜ್ಞಾತುಂ ಸುಶಕಂ ಭವತಿ । ಕಿಂ ತತ್ । ಸಚ್ಚಾಸಚ್ಚ ಸತ್ಯಂ ಚಾಸತ್ಯಂ ಚ । ವಚಸೀ ಸತ್ಯಾಸತ್ಯರೂಪೇ ವಚನೇ ಪಸ್ಪೃಧಾತೇ । ಮಿಥಃ ಸ್ಪರ್ಧೇತೇ । ತಯೋಃ ಸದಸತೋರ್ಮಧ್ಯೇ ಯತ್ಸತ್ಯಂ ಯಥಾರ್ಥಂ ವಚನಂ ಯತರದೃಜೀಯ ಋಜುತಮಮಕುಟಿಲಂ ತದಿತ್ತದೇವಾಕುಟಿಲಂ ಸತ್ಯಭಾಷಣಂ ಸೋಮೋಽವತಿ । ರಕ್ಷತಿ । ಅಸದುಕ್ತವಿಲಕ್ಷಣಮಸತ್ಯಂ ಹಂತಿ । ಹಿನಸ್ತಿ । ಏವಂ ಸತ್ಯಾವಯೋರ್ಮಧ್ಯೇ ಕತರೋಽನೃತಭಾಷೀತಿ ವಿದ್ವದ್ಭಿಃ ಸುವಿಜ್ಞಾನಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಚಿಕಿತುಷೇ**—ವಿವೇಕಜ್ಞಾನವುಳ್ಳ । **ಜನಾಯ**—ಪುರುಷನಿಗೆ । **ಸಚ್ಚ**—ಸತ್ಯವಾವುದು । **ಅಸಚ್ಚ**—ಅಸತ್ಯವಾವುದು ಎಂಬ ವ್ಯತ್ಯಾಸವು । **ಸುವಿಜ್ಞಾನಂ**—ಸುಲಭವಾಗಿ ತಿಳಿವಳಿಕೆಗೆ ಬರುತ್ತದೆ । **ವಚಸೀ**—ಈ ಸತ್ಯಾಸತ್ಯರೂಪವಾದ ಎರಡು ಬಗೆಯ ವಾಕ್ಯಗಳೂ । **ಪಸ್ಪೃಧಾತೇ**—ಸ್ಪರ್ಧೆಯಿಂದ ಹೋರಾಡುವಾಗ । **ತಯೋಃ**—ಅವೆರಡರಲ್ಲೂ । **ಯತ್ ಸತ್ಯಂ**—ಯಾವುದು ಸತ್ಯವಾಕ್ಯೋ । **ಯತರತ್**—ಯಾವುದು । **ಋಜೀಯಃ**—ಪ್ರಾಮಾಣಿಕವಾಗಿರುವುದೋ । **ತದಿತ್**—ಅದನ್ನೇ । **ಸೋಮಃ**—ಸೋಮದೇವನು । **ಅವತಿ**—ರಕ್ಷಿಸುತ್ತಾನೆ । **ಅಸತ್**—ಅಸತ್ಯವಾದ ವಾಕ್ಯವನ್ನು । **ಹಂತಿ**—ನಾಶಪಡಿಸುತ್ತಾನೆ.

॥ ಭಾವಾರ್ಥ ॥

ಸತ್ಯಾಸತ್ಯಗಳಿಗಿರುವ ವ್ಯತ್ಯಾಸವನ್ನರಿತ ವಿವೇಕಜ್ಞಾನಿಗಳಿಗೆ ಸತ್ಯವಾವುದು, ಅಸತ್ಯವಾವುದು ಎಂಬ ವ್ಯತ್ಯಾಸವು ಸುಲಭವಾಗಿ ತಿಳಿವಳಿಕೆಗೆ ಬರುತ್ತದೆ. ಈ ಸತ್ಯಾಸತ್ಯರೂಪವಾದ ಎರಡು ಬಗೆಯ ವಾಕ್ಯಗಳೂ ಸ್ಪರ್ಧೆಯಿಂದ ಹೋರಾಡುವಾಗ ಅವೆರಡರಲ್ಲೂ ಯಾವುದು ಸತ್ಯವಾಕ್ಯೋ, ಯಾವುದು ಪ್ರಾಮಾಣಿಕವಾಗಿರುವುದೋ ಅದನ್ನೇ ಸೋಮದೇವನು ರಕ್ಷಿಸುತ್ತಾನೆ. ಸತ್ಯವಾದ ವಾಕ್ಯವನ್ನು ನಾಶಪಡಿಸುತ್ತಾನೆ.

## English Translation

To the understanding man there is perfect discrimination, the words of truth and falsehood are mutually at variance; of these two, Soma verily cherishes that which is true and right: he destroys the false.

॥ ಸಂಹಿತಾಪಾಠಃ ॥

ನ ವಾ ಉ ಸೋಮೋ ವೃಜಿನಂ ಹಿನೋತಿ ನ ಕ್ಷತ್ರಿಯಂ ಮಿಥುಯಾ ಧಾರಯಂತಂ ।
ಹಂತಿ ರಕ್ಷೋ ಹಂತ್ಯಾಸದ್ವದಂತಮುಭಾವಿಂದ್ರಸ್ಯ ಪ್ರಸಿತೌ ಶಯಾತೇ ॥೧೩॥

॥ ಪದಪಾಠಃ ॥

ನ । ವೈ । ಊಂ ಇತಿ । ಸೋಮಃ । ವೃಜಿನಂ । ಹಿನೋತಿ । ನ । ಕ್ಷತ್ರಿಯಂ । ಮಿಥುಯಾ । ಧಾರಯಂತಂ ।
ಹಂತಿ । ರಕ್ಷಃ । ಹಂತಿ । ಅಸತ್ । ವದಂತಂ । ಉಭೌ । ಇಂದ್ರಸ್ಯ । ಪ್ರऽಸಿತೌ । ಶಯಾತೇ ಇತಿ ॥೧೩॥

॥ ಸಾಯಣಭಾಷ್ಯಂ ॥

ವೃಜಿನಂ ಪಾಪಕಾರಿಣಂ ರಾಕ್ಷಸಂ ಸೋಮೋ ದೇವೋ ನ ವಾ ಉ ನ ಖಲು ಹಿನೋತಿ । ಪ್ರೇರಯತಿ । ಗಚ್ಛ ತ್ವಮಿತಿ ನ ಮುಂಚತಿ । ತಥಾ ಕ್ಷತ್ರಿಯಂ । ಕ್ಷತ್ರಂ ಬಲಂ । ತದ್ವಂತಂ ಮಿಥುಯಾ ಮಿಥ್ಯಾಭೂತಂ ವಚನಂ ಧಾರಯಂತಂ ಬಿಭ್ರತಮಸತ್ಯವಾದಿನಂ ಪುರುಷಂ ನ ಚ ಹಿನೋತಿ । ನ ವಿಸೃಜತಿ । ಅಪಿ ತು ರಕ್ಷೋ ರಾಕ್ಷಸಂ ಹಂತಿ । ಅಸದಸತ್ಯಂ ವದಂತಂ ಚ ಹಂತಿ । ಹಿನಸ್ತಿ । ಉಭೌ ರಾಕ್ಷಸಾನೃತವಾದಿನೌ ತೌ ಸೋಮೇನ ಹತಾವಿಂದ್ರಸ್ಯ ಸಂಬಂಧಿನಿ ಪ್ರಸಿತೌ ಬಂಧನೇ ಶಯಾತೇ । ನಿವಸತಃ । ಯದ್ವಾ । ಇಂದ್ರಸ್ಯೇತಿ ತೃತೀಯಾರ್ಥೇ ಷಷ್ಠೀ । ಇಂದ್ರೇಣೇಶ್ವರೇಣ ಸೋಮೇನ ಪ್ರಸಿತೌ ಬದ್ಧೌ ॥ ಷಿಞ್ ಬಂಧನೇ । ಅಸ್ಮಾತ್ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಸೋಮಃ—ಸೋಮದೇವನು । ವೃಜಿನಂ—ಪಾಪಕಾರಿಯಾದ ಅಸುರನನ್ನು । ನ ವಾ ಉ ಹಿನೋತಿ—ಖಂಡಿತವಾಗಿಯೂ ಬಿಡುಗಡೆಮಾಡುವುದಿಲ್ಲ । ಕ್ಷತ್ರಿಯಂ—ಅವನು ಶಕ್ತಿಯುತನಾಗಿದ್ದರೂ ಸಹ । ಮಿಥುಯಾ—

ಅಸತ್ಯವಾಕ್ಯನ್ನು । ಧಾರಯಂತಂ—ಬೆಳೆಸುವ ಪುರುಷನನ್ನೂ । ನ—ಖಂಡಿತ ಬಿಡುವುದಿಲ್ಲ । ಅಸತ್—ಅಸತ್ಯವನ್ನು । ವದಂತಂ—ಹೇಳುವ ಪುರುಷನನ್ನು । ಹಂತಿ—ಕೊಲ್ಲುತ್ತಾನೆ (ಹಾಗೆಯೇ) । ರಕ್ಷಃ—ರಾಕ್ಷಸನನ್ನೂ । ಹಂತಿ—ಕೊಲ್ಲುತ್ತಾನೆ । ಉಭೌ—ಈ ಎರಡು ವಿಧವಾದ ದುಷ್ಟರೂ ಸಹ । ಇಂದ್ರಸ್ಯ—ಇಂದ್ರನ । ಪ್ರಸಿತೌ—ಬಂಧನದಲ್ಲಿ ಸಿಕ್ಕಿಬಿದ್ದು । ಶಯಾತೇ—ಮಲಗುತ್ತಾರೆ.

। ಭಾವಾರ್ಥ ।

ಸೋಮದೇವನು ಪಾಪಕಾರಿಯಾದ ಅಸುರನನ್ನು ಖಂಡಿತ ಬಿಡುಗಡೆ ಮಾಡುವುದಿಲ್ಲ. ಅಂತಹವನು ಶಕ್ತಿಯುತನಾಗಿದ್ದರೂ ಸಹ ಅಸತ್ಯವಾಕ್ಯನ್ನು ಬೆಳೆಸುವ ಪುರುಷನನ್ನೂ ಖಂಡಿತ ಬಿಡುವುದಿಲ್ಲ. ಅಸತ್ಯವನ್ನು ಹೇಳುವ ಪುರುಷನನ್ನೂ ಹಿಂಸಾಕಾರಿಯಾದ ರಾಕ್ಷಸನನ್ನೂ ಖಂಡಿತ ಕೊಲ್ಲುತ್ತಾನೆ. ಈ ಎರಡು ವಿಧವಾದ ದುಷ್ಟರೂ ಸಹ ಇಂದ್ರನ ಬಂಧನದಲ್ಲಿ ಸಿಕ್ಕಿಬಿದ್ದು ಮಲಗುತ್ತಾರೆ.

## English Translation

Soma instigates not the wicaked ; he instigates not the strong man dealing in falsehood : he destroys the Rakshasa, he destroys the speaker of untruth ; and both remain in the bondage of Indra.

। ಸಂಹಿತಾಪಾಠಃ ।

ಯದಿ ವಾಹಮನೃತದೇವ ಆಸ ಮೋಘಂ ವಾ ದೇವಾँ ಅಪ್ಯೂಹೇ ಅಗ್ನೇ ।
ಕಿಮಸ್ಮಭ್ಯಂ ಜಾತವೇದೋ ಹೃಣೀಷೇ ದ್ರೋಘವಾಚಸ್ತೇ ನಿರ್ಋಥಂ ಸಚಂತಾಂ ॥ ೧೪ ॥

। ಪದಪಾಠಃ ।

ಯದಿ । ವಾ । ಅಹಂ । ಅನೃತऽದೇವಃ । ಆಸ । ಮೋಘಂ । ವಾ । ದೇವಾನ್ । ಅಪಿऽಊಹೇ । ಅಗ್ನೇ ।
ಕಿಂ । ಅಸ್ಮಭ್ಯಂ । ಜಾತऽವೇದಃ । ಹೃಣೀಷೇ । ದ್ರೋಘऽವಾಚಃ । ತೇ । ನಿಃऽಋಥಂ । ಸಚಂತಾಂ ॥

। ಸಾಯಣಭಾಷ್ಯಂ ।

ಯದಿ ವಾಹಮನೃತದೇವೋऽನೃತಾ ಅಸತ್ಯಭೂತಾ ದೇವಾ ಯಸ್ಯ ತಾದೃಶೋ ಯದ್ಯಹಮಾಸ ಅಸ್ಮಿ । ಅಥವಾ ಮೋಘಂ ವಾ ನಿಷ್ಫಲಂ ವಾ ದೇವಾನಪ್ಯೂಹೇ ಉಪಗಚ್ಛಾಮಿ । ಅಹಂ

ಯದ್ಯುಕ್ತರೂಪೋಽಸ್ಮಿ ಹೇ ಅಗ್ನೇ ತರ್ಹಿ ಮಾಂ ಬಾಧಸ್ವ । ನ ಹ್ಯಹಂ ತಥಾವಿಧೋಽಸ್ಮಿ । ಏವಂ ಸತಿ ಹೇ ಜಾತವೇದೋ ಜಾತಾನಾಂ ವೇದಿತರಗ್ನೇ ಅಸ್ಮಭ್ಯಂ ಕಿಂಕಾರಣಂ ಹೃಣೀಷೇ । ಕ್ರುಧ್ಯಸಿ । ತವ ಕ್ರೋಧೋಽಸ್ಮಾಸು ನ ಜಾಯತಾಮಿತ್ಯರ್ಥಃ । ದ್ರೋಘವಾಚೋಽನೃತವಾಚೋ ರಾಕ್ಷಸಾಸ್ತೇ ತವ ನಿರ್ಋಥಂ ॥ ನಿಷ್ಪೂರ್ವೋಽರ್ತಿರ್ಹಿಂಸಾಯಾಂ ವರ್ತತೇ । ನಿರ್ಋಥಂ ನಿಃಶೇಷೇಣಾರ್ತಿಂ ಹಿಂಸಾಂ ಸಚಂತಾಂ । ಸೇವಂತಾಂ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಯದಿ ವಾ—ಒಂದು ವೇಳೆ । ಅಹಂ—ನಾನು । ಅನೃತದೇವಃ—ಅಸತ್ಯಾತ್ಮಕವಾದ ದೇವಪೂಜಕನಾಗಿ । ಆಸ—ಇದ್ದದ್ದೇ ಆದರೆ । ವಾ—ಅಥವಾ । ಮೋಘಂ—ಅಪ್ರಯೋಜಕರಾದ । ದೇವಾನ್—ದೇವತೆಗಳನ್ನು । ಅಪ್ಯೂಹೇ—ಸಮಾಪಿಸಿ ಪ್ರಾರ್ಥಿಸಿದ್ದೇ ಆದರೆ (ಆಗ ನನ್ನನ್ನು ಹಿಂಸಿಸು) (ಈ ಸಂದರ್ಭವಿಲ್ಲದಿರುವಾಗ) । ಜಾತವೇದಃ—ಜಾತವೇದೋರೂಪನಾದ ಎಲೈ ಅಗ್ನಿಯೇ । ಅಸ್ಮಭ್ಯಂ—ನಮ್ಮ ವಿಷಯದಲ್ಲಿ । ಕಿಂ—ಏತಕ್ಕಾಗಿ । ಹೃಣೀಷೇ—ಕೋಪಗೊಳ್ಳುತ್ತೀಯೆ । ದ್ರೋಘವಾಚಃ—ದ್ರೋಹಾತ್ಮಕವಾದ ವಾಕ್ಕುಳ್ಳ ಅಸುರರು ಮಾತ್ರ । ತೇ—ನಿನ್ನ । ನಿರ್ಋಥಂ—ಹಿಂಸೆಯನ್ನು । ಸಚಂತಾಂ—ಅನುಭವಿಸಲಿ.

। ಭಾವಾರ್ಥ ।

ಎಲೈ ಅಗ್ನಿಯೇ, ಒಂದು ವೇಳೆ ನಾನು ಅಸತ್ಯಾತ್ಮಕವಾದ ದೇವತೆಗಳನ್ನು ಪೂಜಿಸುತ್ತಿದ್ದರೆ ಅಥವಾ ಅಪ್ರಯೋಜಕರಾದ ದೇವತೆಗಳನ್ನು ಸಮಾಪಿಸಿ ಪ್ರಾರ್ಥಿಸಿದ್ದೇ ಆದರೆ, ಆ ಸಂದರ್ಭದಲ್ಲಿ ನೀನು ನನ್ನನ್ನು ಹಿಂಸಿಸುವುದು ಉಚಿತವಾಗಿರುತ್ತದೆ. ನಾನು ಆ ರೀತಿ ಮಾಡುತ್ತಿಲ್ಲವಾದುದರಿಂದ, ಜಾತವೇದೋರೂಪನಾದ ಎಲೈ ಅಗ್ನಿಯೇ, ನಮ್ಮ ವಿಷಯದಲ್ಲಿ ಏತಕ್ಕಾಗಿ ಕೋಪಗೊಳ್ಳುತ್ತೀಯೆ? ದ್ರೋಹಾತ್ಮಕವಾದ ವಾಕ್ಕುಳ್ಳ ಅಸುರರು ಮಾತ್ರ ನಿನ್ನ ಹಿಂಸೆಯನ್ನು ಅನುಭವಿಸಲಿ.

## English Translation

If I am one following false gods, if I approach the gods in vain, then Agni (punish me). If (we be not such, then) why, Jatavedas, are you angry with us? let the utterers of falsehood incur your chastisement.

। ಸಂಹಿತಾಪಾಠಃ ।

ಅದ್ಯಾ ಮುರೀಯ ಯದಿ ಯಾತುಧಾನೋ ಅಸ್ಮಿ ಯದಿ ವಾಯುಸ್ತತಪ ಪೂರುಷಸ್ಯ ।
ಅಧಾ ಸ ವೀರೈರ್ದಶಭಿರ್ವಿ ಯೂಯಾ ಯೋ ಮಾ ಮೋಘಂ ಯಾತುಧಾನೇತ್ಯಾಹ ॥ ೧೫ ॥

। ಪದಪಾಠಃ ।

ಅದ್ಯ । ಮುರೀಯ । ಯದಿ । ಯಾತುಽಧಾನಃ । ಅಸ್ಮಿ । ಯದಿ । ವಾ । ಆಯುಃ । ತತಪ । ಪುರುಷಸ್ಯ ।

ಅಧ । ಸಃ । ವೀರೈಃ । ದಶಭಿಃ । ವಿ । ಯೂಯಾಃ । ಯಃ । ಮಾ । ಮೋಘಂ । ಯಾತುಽಧಾನ । ಇತಿ । ಆಹ ॥ ೧೫ ॥

। ಸಾಯಣಭಾಷ್ಯಂ ।

ಇಯಮಪಿ ಶಪಥರೂಪೈವ । ಯದ್ಯಹಂ ವಸಿಷ್ಠೋ ಯಾತುಧಾನೋ ರಾಕ್ಷಸೋಽಸ್ಮಿ ಅದ್ಯಾಸ್ಮಿನ್ನೇವ ದಿನೇ ಮುರೀಯ । ಮ್ರಿಯೇಯ । ಅಪಿ ವಾ ಪುರುಷಸ್ಯ ಮನುಷ್ಯಸ್ಯಾಯುರ್ಜೀವಿತಂ ಯದ್ಯಹಂ ರಾಕ್ಷಸೋ ಭೂತ್ವಾ ತತಪ ಹಿಂಸಿತವಾನಸ್ಮಿ ತರ್ಹ್ಯಪ್ಯಹಮದ್ಯ ಮ್ರಿಯೇಯೇತ್ಯನ್ವಯಃ । ಅಧಾಥೈವಂ ಸ್ಯಾತ್ । ಅಹಂ ವಸಿಷ್ಠಸ್ತ್ವಂ ರಾಕ್ಷಸ ಇತಿ ತರ್ಹಿ ಸ ತ್ವಂ ದಶಭಿರ್ವೀರೈಃ ಪುತ್ರೈಃ । ಉಪಲಕ್ಷಣಮೇತತ್ । ಸರ್ವೈರ್ಬಂಧುಜನೈರ್ವಿ ಯೂಯಾಃ । ವಿಯುಕ್ತೋ ಭವೇಃ । ಯೋ ರಾಕ್ಷಸೋ ಮಾ ಮಾಂ ಮೋಘಂ ಮೃಷೈವ ಹೇ ಯಾತುಧಾನ ಹೇ ರಾಕ್ಷಸೇತಿ ಸಂಬೋಧ್ಯಾಹ ॥

। ಪ್ರತಿಪದಾರ್ಥ ।

**ಯದಿ**—ಒಂದು ವೇಳೆ । **ಅಹಂ**—ನಾನು । **ಯಾತುಧಾನಃ**—ರಾಕ್ಷಸನಾಗಿ । **ಅಸ್ಮಿ**—ಸತ್ಯವಾಗಿಯೂ ಆಗಿದ್ದರೆ । **ಅದ್ಯ**—ಇದೇ ದಿನ । **ಮುರೀಯ**—ಮರಣವನ್ನು ಹೊಂದುವಂತಾಗಲಿ । **ವಾ**—ಅಲ್ಲದೇ । **ಪುರುಷಸ್ಯ**—ಬೇರೊಬ್ಬ ಮಾನವನ । **ಆಯುಃ**—ಜೀವಿತವನ್ನು । **ಯದಿ**—ಒಂದುವೇಳೆ । **ತತಪ**—ನಾನು ಹಿಂಸಿಸಿದ್ದೇ ಆದರೆ । (ಆಗಲೂ ನನಗೆ ಮರಣವು ಸಂಭವಿಸಲಿ) । **ಅಧ**—ಅಥವಾ ನಾನೇ ವಸಿಷ್ಠನಾಗಿ ನೀನೇ ಅಸುರನಾಗಿದ್ದರೆ ಆಗ । **ಯಃ**—ಯಾವ ರಾಕ್ಷಸನು । **ಮಾ**—ನನ್ನನ್ನು । **ಮೋಘಂ**—ಸುಳ್ಳಾಗಿ । **ಯಾತುಧಾನ**—ಎಲೈ ರಾಕ್ಷಸನೇ । **ಇತಿ**—ಎಂಬುದಾಗಿ । **ಆಹ**—ಕರೆದನೋ । **ಸಃ**—ಅಂತಹ ನೀನು । **ದಶಭಿಃ ವೀರೈಃ**—ಹತ್ತು ಮಂದಿ ವೀರ ಪುತ್ರರಿಂದ । **ವಿ ಯೂಯಾಃ**—ವಿಯುಕ್ತನಾಗು.

। ಭಾವಾರ್ಥ ।

ಎಲೈ ರಾಕ್ಷಸನೇ, ಒಂದು ವೇಳೆ ನಾನೇ ರಾಕ್ಷಸನಾಗಿದ್ದರೆ, ಇದೇ ದಿನ ಮರಣವನ್ನು ಹೊಂದುವಂತಾಗಲಿ. ಅಲ್ಲದೇ, ಬೇರೊಬ್ಬ ಮಾನವನ ಜೀವಿತವನ್ನು ನಾನು ಒಂದು ವೇಳೆ ಹಿಂಸಿಸಿದ್ದರೂ ಸಹ ನನಗೆ ಒಡನೆಯೇ ಮರಣವು ಸಂಭವಿಸಲಿ. ಅಲ್ಲದೇ, ಯಥಾರ್ಥವಾಗಿ ನಾನೇ ವಸಿಷ್ಠರಾಗಿ ನೀನೇ ಅಸುರನಾಗಿದ್ದರೆ, ಯಾವ ಕಾರಣದಿಂದ ನೀನು ನನ್ನನ್ನು ಸಂಬೋಧಿಸಿ "ಎಲೈ ರಾಕ್ಷಸನೇ" ಎಂದು ಕರೆದೆಯೋ ಆ ಮೋಸದ ನಿಮಿತ್ತವಾಗಿ ನಿನ್ನ ಹತ್ತುಮಂದಿ ವೀರಪುತ್ರರನ್ನು ಕಳೆದುಕೊ. ಅವರೆಲ್ಲರೂ ಮೃತರಾಗಿ ನೀನು ದುಃಖವನ್ನನುಭವಿಸು.

## English Translation

May I this day die if I am a spirit of ill, or if I have ever injured the life of any man: may you be deprived (Rakshasa) of your ten sons, who have falsely called me by such an appellation.

|| ವಿಶೇಷವಿಷಯಗಳು ||

ಋಗ್ವೇದದ ಋಕ್ಕುಗಳನ್ನು ಅರ್ಥಾನುಸಾರವಾಗಿ ವಿಭಜಿಸುವಾಗ ಯಾಸ್ಕರು ಪರೋಕ್ಷಕೃತ, ಪ್ರತ್ಯಕ್ಷಕೃತ, ಪರೋಕ್ಷಕೃತಃ ಪ್ರತ್ಯಕ್ಷಕೃತಶ್ಚ, ಆಧ್ಯಾತ್ಮಿಕಾ, ಸ್ತುತಿ, ಆಶೀರ್ವಾದ, ಶಪಥ, ಅಭಿಶಾಪ, ಕಸ್ಯಚಿದ್ಭಾವ, ಪರಿದೇವನಾ, ನಿಂದಾ ಇತ್ಯಾದಿ ವಿಷಯಗಳನ್ನೊಳಗೊಂಡ ನಾನಾ ಪ್ರಭೇದಗಳಿರುವುದೆಂದು ಹೇಳಿ ಅವುಗಳನ್ನು ಉದಾಹರಣೆ ಮೂಲಕವಾಗಿ ವಿವರಿಸಿದ್ದಾರೆ. ಹೇಗೆಂದರೆ—

(೧) **ಪರೋಕ್ಷಕೃತ**—ಈ ಋಕ್ಕಿನಲ್ಲಿ ದೇವತೆಯು ತನ್ನ ಎದುರಿಗೆ ಇಲ್ಲದಂತೆ ಎಂದರೆ ತನಗೆ ಕಾಣಿಸದಂತೆ ಪರೋಕ್ಷದಲ್ಲಿರುವನೆಂದು ಭಾವಿಸಿ ಆ ದೇವತೆಯನ್ನು ಸ್ತುತಿಸುವುದು. ಈ ಸಂದರ್ಭದಲ್ಲಿ ಸರ್ವನಾಮ ವಿಭಕ್ತಿಗಳಲ್ಲಿ ಯಾವ ವಿಭಕ್ತಿಯನ್ನಾದರೂ ಉಪಯೋಗಿಸಬಹುದು. ಆದರೆ ಕ್ರಿಯಾಪದವು ಮಾತ್ರ ಪ್ರಥಮಪುರುಷದಲ್ಲಿರಬೇಕು.

ಉದಾ—ಇಂದ್ರೋ ದಿವ ಇಂದ್ರ ಈಶೇ ಪೃಥಿವ್ಯಾಃ || (ಪ್ರಥಮಾವಿಭಕ್ತಿ)
ಇಂದ್ರಮಿದ್ಗಾಥಿನೋ ಬೃಹತ್ || (ದ್ವಿ. ವಿ)
ಇಂದ್ರೇಣೈತೇ ತೃತ್ಸವೋ ವೇವಿಷಾಣಾ || (ತೃ. ವಿ)
ಇಂದ್ರಾಯ ಸಾಮ ಗಾಯತ || (ಚ. ವಿ.)
ನೇಂದ್ರಾದೃತೇ ಪವತೇ ಧಾಮ ಕಿಂಚನ || (ಪಂ. ವಿ.)
ಇಂದ್ರಸ್ಯ ನು ವೀರ್ಯಾಣಿ ಪ್ರವೋಚಂ || (ಷ. ವಿ.)
ಇಂದ್ರೇ ಕಾಮಾ ಅಯಂಸತ || (ಸ. ವಿ.)

ಇಲ್ಲಿ ಏಳು ವಿಭಕ್ತಿಗಳಿಗೂ ಏಳು ಉದಾಹರಣೆಗಳನ್ನು ಕೊಟ್ಟಿದೆ.

(೨) **ಪ್ರತ್ಯಕ್ಷಕೃತ**—ಈ ವಿಧವಾದ ಋಕ್ಕಿನಲ್ಲಿ ಸ್ತುತಿಸಲ್ಪಡುವ ದೇವತೆಯು ಪ್ರತ್ಯಕ್ಷವಾಗಿ ಎಂದರೆ ಎದುರಿಗೆ ನಿಂತಿರುವಂತೆ ಭಾವಿಸಿ ಆ ದೇವತೆಯನ್ನು ಎಲ್ಲಾ ವಿಭಕ್ತಿಗಳಲ್ಲಿಯೂ ಹಿಂದೆ ಹೇಳಿದಂತೆ ಸ್ತುತಿಸಬಹುದು. ಆದರೆ ನೀನು ನಿನ್ನ ಇತ್ಯಾದಿ ಮಧ್ಯಮಪುರುಷ ಸರ್ವನಾಮಪದಗಳನ್ನು ಅದಕ್ಕನುಸಾರವಾದ ಮಧ್ಯಮಪುರುಷ ಕ್ರಿಯಾಪದಗಳನ್ನು ಉಪಯೋಗಿಸಿರಬೇಕು.

ಉದಾ—ತ್ವಮಿಂದ್ರ ಬಲಾದಧಿ ||
ವಿ ನ ಇಂದ್ರ ಮೃಧೋ ಜಹಿ || ಇತ್ಯಾದಿ.

(೩) **ಪ್ರತ್ಯಕ್ಷಕೃತ ಮತ್ತು ಪರೋಕ್ಷಕೃತ**—ಈ ಎರಡು ವಿಧವೂ ಸೇರಿದ ಕೆಲವು ಋಕ್ಕುಗಳಲ್ಲಿ ಸ್ತೋತ್ರಮಾಡುವ ಜನರು ಪ್ರತ್ಯಕ್ಷಕೃತರೆಂದೂ ಸ್ತೋತ್ರಮಾಡಲ್ಪಡುವ ದೇವತೆಗಳು ಪರೋಕ್ಷಕೃತರೆಂದೂ ವ್ಯವಹರಿಸಲ್ಪಡುವರು.

ಉದಾ—ಮಾ ಚಿದನ್ಯದ್ವಿಶಂಸತ ||
ಕಣ್ವಾ ಅಭಿ ಪ್ರ ಗಾಯತ ||
ಉಪ ಪ್ರೇತ ಕುಶಿಕಾಶ್ಚೇತಯಧ್ವಂ || ಇತ್ಯಾದಿ.

(೪) ಆಧ್ಯಾತ್ಮಿಕ—ಸ್ತುತಿಸಲ್ಪಡುವ ದೇವತೆಗಳೇ ತಾವು ಮಾತನಾಡಿದಂತೆ ಉತ್ತಮಪುರುಷ ಪ್ರಯೋಗದಿಂದ ವಾಕ್ಯಗಳನ್ನು ಹೇಳಿರುವುದು.

ಉದಾ—ಅಹಂ ಭುವಂ ವಸುನಃ ಪೂರ್ವ್ಯಸ್ಪತಿಃ ||
ಇತಿ ವಾ ಇತಿ ಮೇ ಮನಃ ||
ಅಹಂ ರುದ್ರೇಭಿರ್ವಸುಭಿಶ್ಚರಾಮಿ || ಇತ್ಯಾದಿ.

(೫) ಸ್ತುತಿ—ದೇವತೆಗಳ ಅಥವಾ ಇತರ ವ್ಯಕ್ತಿಗಳ ಸ್ತುತಿಮಾತ್ರವಿರುವ ಸೂಕ್ತ.

ಉದಾ—ಇಂದ್ರಸ್ಯ ನು ವೀರ್ಯಾಣಿ ಪ್ರ ವೋಚಂ || ಇತ್ಯಾದಿ.

(೬) ಆಶೀಃ—ಆಶೀರ್ವಾದ ಅಥವಾ ಒಳ್ಳೆಯದನ್ನು ಹಾರೈಸುವ ಮಂತ್ರವು.

ಉದಾ—ಸುಚಕ್ಷಾ ಅಹಮಕ್ಷಿಭ್ಯಾಂ || ಇತ್ಯಾದಿ.

(೭) ಶಪಥ ಮತ್ತು ಅಭಿಶಾಪ—ಪ್ರತಿಜ್ಞೆ ಮತ್ತು ಮತ್ತೊಬ್ಬನಿಗೆ ಕೆಡುಕಾಗಲಿ ಎಂದು ಬಯಸಿ ಶಾಪ ಕೊಡುವುದು. ಇವೆರಡಕ್ಕೂ ಪ್ರಕೃತ ಸೂಕ್ತವನ್ನೇ ಉದಾಹರಣೆಯಾಗಿ ಕೊಟ್ಟಿರುವರು.

ಉದಾ—ಅದ್ಯಾ ಮುರೀಯ ಯದಿ ಯಾತುಧಾನೋ ಅಸ್ಮಿ ||
ಅಧಾ ಸ ವೀರೈರ್ದಶಭಿರ್ವಿ ಯೂಯಾಃ || ಇತ್ಯಾದಿ.

(೮) ಕಸ್ಯಚಿದ್ಭಾವ—ಯಾವುದಾದರೂ ಒಂದು ವಿಷಯದ ವರ್ಣನೆ ಅಥವಾ ಪ್ರಸ್ತಾಪವಿರುವುದು.

ಉದಾ—ನ ಮೃತ್ಯುರಾಸೀದಮೃತಂ ನ ತರ್ಹಿ |
ತಮ ಆಸೀತ್ತಮಸಾ ಗೂಳ್ಹಮಗ್ರೇ || ಇತ್ಯಾದಿ.

(೯) ಪರಿದೇವನಾ—ವ್ಯಥೆಪಡುವುದು.

ಉದಾ—ಸುದೇವೋ ಅದ್ಯ ಪ್ರಪತೇದನಾವೃತ್ ||
ನ ವಿಜಾನಾಮಿ ಯದಿ ವೇದಮಸ್ಮಿ || ಇತ್ಯಾದಿ.

(೧೦) ನಿಂದಾ—ನಿಂದಾ ಅಥವಾ ಪ್ರಶಂಸೆ ಇರುವ ಮಂತ್ರ.

ಉದಾ—ಕೇವಲಾಘೋ ಭವತಿ ಕೇವಲಾದೀ ||

ಭೋಜಸ್ಯೇದಂ ಪುಷ್ಕರಿಣೀವ ವೇಶ್ಮ (ಅತ್ರ ದ್ಯೂತನಿಂದಾ ಚ ಕೃಷಿಪ್ರಶಂಸಾ ಚ) ಇತ್ಯಾದಿ. ಮೇಲೆ ಉದಾಹರಣೆಗಾಗಿ ಕೊಟ್ಟಿರುವ ಮಂತ್ರಗಳು ಆಯಾ ಸೂಕ್ತಗಳ ಪ್ರಾರಂಭಮಂತ್ರವು. ಪೂರ್ತಿ

ಋಕ್ಕುಗಳನ್ನು ಋಕ್ಕುಗಳ ವರ್ಣಾನುಕ್ರಮಣಿಕೆಯಲ್ಲಿ (ಋ. ಸಂ. ಭಾಗ ೧ ಪುಟ 717-920 ನ್ನು) ನೋಡಿ ತಿಳಿಯಬೇಕು. ಮೇಲೆ ವಿವರಿಸಿರುವ ಹತ್ತು ವಿಧವಾದ ಮಂತ್ರಗಳಲ್ಲಿ ೭ ನೆಯದಾದ ಶಪಥ ಮತ್ತು ಅಭಿಶಾಪವೆಂಬ ವಿಷಯ) ವಿರುವ ಋಕ್ಕಿನ ಉದಾಹರಣೆಗಾಗಿ ಅದ್ಯಾ ಮುರೀಯ ಯದಿ ಯಾತುಧಾನೋ ಅಸ್ಮಿ (ಋ. ಸಂ. ೭-೧೦೪-೧೫, ಎಂಬ ಈ ಋಕ್ಕನ್ನೇ ಯಾಸ್ಕರು ಉದಾಹರಣೆಗಾಗಿ ಪಠಿಸಿರುವರು.

। ಸಂಹಿತಾಪಾಠಃ ।

ಯೋ ಮಾಯಾತುಂ ಯಾತುಧಾನೇತ್ಯಾಹ ಯೋ ವಾ ರಕ್ಷಾಃ ಶುಚಿರಸ್ಮೀ-
ತ್ಯಾಹ ।
ಇಂದ್ರಸ್ತಂ ಹಂತು ಮಹತಾ ವಧೇನ ವಿಶ್ವಸ್ಯ ಜಂತೋರಧಮಸ್ಪದೀಷ್ಟ ॥

॥ ಪದಪಾಠಃ ॥

ಯಃ । ಮಾ । ಅಯಾತುಂ । ಯಾತುಽಧಾನ । ಇತಿ । ಆಹ । ಯಃ । ವಾ । ರಕ್ಷಾಃ । ಶುಚಿಃ । ಅಸ್ಮಿ ।
ಇತಿ । ಆಹ ।
ಇಂದ್ರಃ । ತಂ । ಹಂತು । ಮಹತಾ । ವಧೇನ । ವಿಶ್ವಸ್ಯ । ಜಂತೋಃ । ಅಧಮಃ । ಪದೀಷ್ಟ ॥ ೧೬ ॥

॥ ಸಾಯಣಭಾಷ್ಯಂ ॥

ಯೋ ರಾಕ್ಷಸೋ ಮಾಮಯಾತುಮರಾಕ್ಷಸಂ ಸಂತಂ ಹೇ ಯಾತುಧಾನ ಹೇ ರಾಕ್ಷಸೇತಿ ಸಂಬೋಧ್ಯಾಹ ಬ್ರೂತೇ ಯೋ ವಾ ಯಶ್ಚ ರಕ್ಷಾ ರಾಕ್ಷಸಃ ಶುಚಿರಸ್ಮಿ ಶುದ್ಧೋ ಭವಾಮಿ ನ ರಾಕ್ಷಸೋಽಸ್ಮೀತ್ಯಾಹ ಬ್ರೂತೇ ತಮುಭಯವಿಧಂ ರಾಕ್ಷಸಮಿಂದ್ರೋ ಮಹತಾ ಪ್ರೌಢೇನ ವಧೇನಾಯುಧೇನ ವಜ್ರೇಣ ಹಂತು । ಹಿನಸ್ತು । ಸ ಚ ವಿಶ್ವಸ್ಯ ಸರ್ವಸ್ಯ ಜಂತೋರ್ಜನಸ್ಯಾಧಮೋ ನಿಕೃಷ್ಟಃ ಸನ್ ಪದೀಷ್ಟ । ಪತತು ॥

॥ ಪ್ರತಿಪದಾರ್ಥ ॥

ಯಃ—ಯಾವ ರಾಕ್ಷಸನು । ಅಯಾತುಂ ಮಾ—ಅಸುರನಲ್ಲದಿರುವ ನನ್ನನ್ನು । ಯಾತುಧಾನ—ಎಲೈ ರಾಕ್ಷಸನೇ । ಇತಿ—ಎಂಬುದಾಗಿ ಸಂಬೋಧಿಸಿ । ಆಹ—ಕರೆಯುವನೋ । ಯೋ ವಾ ರಕ್ಷಾಃ—ಅಥವಾ ಯಾವ ರಾಕ್ಷಸನು । ಶುಚಿಃ ಅಸ್ಮಿ—ನಾನೇ ಶುದ್ಧನಾಗಿದ್ದೇನೆ । ಇತಿ ಆಹ—ಎಂದು ತನ್ನನ್ನೇ ಪ್ರಶಂಸೆಮಾಡಿಕೊಳ್ಳುವನೋ । ತಂ—ಅಂತಹ ರಾಕ್ಷಸನನ್ನು । ಇಂದ್ರಃ—ಇಂದ್ರನು । ಮಹತಾ—ಅತಿಪ್ರಬಲವಾದ । ವಧೇನ—ವಧಸಾಧನವಾದ ಆಯುಧದಿಂದ । ಹಂತು—ನಾಶಪಡಿಸಲಿ । ವಿಶ್ವಸ್ಯ—ಸಮಸ್ತವಾದ । ಜನಸ್ಯ—ಜನಕ್ಕಿಂತಲೂ । ಅಧಮಃ—ನಿಕೃಷ್ಟನಾಗಿ (ಆ ರಾಕ್ಷಸನು) । ಪದೀಷ್ಟ—ಕೆಳಕ್ಕೆ ಉರುಳಿ ಬೀಳಲಿ ।

। ಭಾವಾರ್ಥ ।

ಯಾವ ರಾಕ್ಷಸನು ರಾಕ್ಷಸನಲ್ಲದ ನನ್ನನ್ನು "ಎಲೈ ರಾಕ್ಷಸನೇ" ಎಂದು ಸಂಬೋಧಿಸಿ ಕರೆಯುವನೋ ಅಥವಾ ಯಾವ ರಾಕ್ಷಸನು ತನ್ನನ್ನೇ ನಿರ್ದೇಶಿಸಿ "ನಾನು ಶುದ್ಧನಾಗಿದ್ದೇನೆ" ಎಂದು ಪ್ರಶಂಸಿಸಿಕೊಳ್ಳುವನೋ ಅಂತಹ ರಾಕ್ಷಸನನ್ನು ಇಂದ್ರನು ಅತಿಪ್ರಬಲವಾದುದೂ ವಧಸಾಧನವೂ ಆದ ವಜ್ರಾಯುಧದಿಂದ ನಾಶಪಡಿಸಲಿ. ಆ ರಾಕ್ಷಸನು ಸಮಸ್ತವಾದ ಜನಕ್ಕಿಂತಲೂ ನಿಕೃಷ್ಟನಾಗಿ ಕೆಳಕ್ಕೆ ಉರುಳಿಬೀಳಲಿ

## English Translatian

May Indra slay with his mighty weapon him who calls me the Yatudhana, which I am not,—the Rakshasa, who says (of himself), I am pure: may he, the vilest of all beings, perish.

। ಸಂಹಿತಾಪಾಠಃ ।

ಪ್ರ ಯಾ ಜಿಗಾತಿ ಖರ್ಗಲೇವ ನಕ್ತಮಪ ದ್ರುಹಾ ತನ್ವಂ೧ಗೂಹಮಾನಾ ।
ವವ್ರಾಁ ಅನಂತಾಁ ಅವ ಸಾ ಪದೀಷ್ಟ ಗ್ರಾವಾಣೋ ಘ್ನಂತು ರಕ್ಷಸ
ಉಪಬ್ದೈಃ ॥ ೧೭ ॥

। ಪದಪಾಠಃ ।

ಪ್ರ । ಯಾ । ಜಿಗಾತಿ । ಖರ್ಗಲಾಽಇವ । ನಕ್ತಂ । ಅಪ । ದ್ರುಹಾ । ತನ್ವಂ । ಗೂಹಮಾನಾ ।
ವವ್ರಾನ್ । ಅನಂತಾನ್ । ಅವ । ಸಾ । ಪದೀಷ್ಟ । ಗ್ರಾವಾಣಃ । ಘ್ನಂತು । ರಕ್ಷಸಃ । ಉಪಬ್ದೈಃ ।೧೭॥

॥ ಸಾಯಣಭಾಷ್ಯಂ ॥

ಯಾ ರಾಕ್ಷಸೀ ನಕ್ತಂ ರಾತ್ರೌ ದ್ರುಹಾ ದ್ರೋಹೇಣ ಯುಕ್ತಾ ಖರ್ಗಲೇವೋಲೂಕೀವ ಪ್ರ ಜಿಗಾತಿ ಪ್ರಗಚ್ಛತಿ । ಕಿಂ ಕುರ್ವತೀ । ತನ್ವಂ ಸ್ವಕೀಯಂ ಶರೀರಮಪ ಗೂಹಮಾನಾಪವೃಣ್ವತೀ ಪ್ರಕಾಶಯಂತೀ । ಸಾ ರಾಕ್ಷಸ್ಯನಂತಾನಪರ್ಯಂತಾನ್ವವ್ರಾನ್ ಗರ್ತಾನವ ಪದೀಷ್ಟ । ಅವಾಙ್ಮುಖೀ ಪತತು । ಗ್ರಾವಾಣಃ ಸೋಮಾಭಿಷವಾರ್ಥಾಃ ಪಾಷಾಣಾಶ್ಲ್ಪೋಪಬ್ದೈರಭಿಷವಶಬ್ದೈ ರಕ್ಷಸೋ ರಾಕ್ಷ-ಸಾನ್ ಘ್ನಂತು । ಹಿಂಸಂತು ॥

। ಪ್ರತಿಪದಾರ್ಥ ।

ಯಾ—ಯಾವ ರಾಕ್ಷಸೀಸ್ತ್ರೀಯು । ನಕ್ತಂ—ರಾತ್ರಿವೇಳೆಯಲ್ಲಿ । ದ್ರುಹಾ—ದ್ರೋಹಬುದ್ಧಿಯಿಂದ ಕೂಡಿದವಳಾಗಿಯೂ । ತನ್ವಂ—ತನ್ನ ಶರೀರವನ್ನೆಲ್ಲಾ । ಅಪ ಗೂಹಮಾನಾ—ಬಿಚ್ಚಿತೋರಿಸಿಕೊಳ್ಳುತ್ತಲೂ ।

ಗುಹಾ—ಗೂಬೆಯಂತೆ । ಪ್ರ ಜಿಗಾತಿ—ಸಂಚರಿಸುವಳೋ । ಸಾ—ಆ ರಾಕ್ಷಸಸ್ತ್ರೀಯು । ಅನಂತಾನ್—ತಳವೇ ಇಲ್ಲದಿರುವ (ಅನಂತವಾದ ಆಳವುಳ್ಳ) । ವವ್ರಾನ್—ಕಮರಿಗೆ । ಅವ ಪದೀಷ್ಟ—ತಲೆಕೆಳಕಾಗಿ ಉರುಳಿ ಬೀಳಲಿ । ಗ್ರಾವಾಣಃ—ಸೋಮವನ್ನು ಹಿಂಡತಕ್ಕ ಕಲ್ಲುಗಳು । ಉಪಬ್ದೈಃ—ಸೋಮವನ್ನು ಹಿಂಡುವ ಶಬ್ದಗಳಿಂದ । ರಕ್ಷಸಃ—ರಾಕ್ಷಸರನ್ನು । ಘ್ನಂತು—ಹಿಂಸಿಸಲಿ.

॥ ಭಾವಾರ್ಥ ॥

ಯಾವ ರಾಕ್ಷಸೀಸ್ತ್ರೀಯು ರಾತ್ರಿವೇಳೆಯಲ್ಲಿ ದ್ರೋಹಬುದ್ಧಿಯಿಂದ ಕೂಡಿದವಳಾಗಿಯೂ, ತನ್ನ ಶರೀರವನ್ನೆಲ್ಲಾ ಬಿಚ್ಚಿ ತೋರಿಸಿಕೊಳ್ಳುವವಳಾಗಿಯೂ ( ನಗ್ನಳಾಗಿಯೂ ) ಗೂಬೆಯಂತೆ ಸಂಚರಿಸುವಳೋ ಆ ರಾಕ್ಷಸಸ್ತ್ರೀಯು ತಳವೇ ಇಲ್ಲದಿರುವ (ಅನಂತವಾದ ಆಳವುಳ್ಳ) ಕಮರಿಗೆ ತಲೆಕೆಳಕಾಗಿ ಉರುಳಿ ಬೀಳಲಿ. ಸೋಮವನ್ನು ಹಿಂಡತಕ್ಕ ಕಲ್ಲುಗಳು ಸೋಮವನ್ನು ಹಿಂಡುವ ಶಬ್ದಗಳಿಂದ ರಾಕ್ಷಸರನ್ನು ಹಿಂಸಿಸಲಿ.

## English Translation

May the cruel female fiend who, throwing off the concealment of her person, wanders about at night like an owl, fall headlong down into the unbounded caverns : may the stones that grind the Soma destroy the Rakshasas by their noise.

॥ ಸಂಹಿತಾಪಾಠಃ ॥

ವಿ ತಿಷ್ಠಧ್ವಂ ಮರುತೋ ವಿಕ್ಷ್ವಿ೧ಚ್ಛತ ಗೃಭಾಯತ ರಕ್ಷಸಃ ಸಂ ಪಿನಷ್ಟನ ।
ವಯೋ ಯೇ ಭೂತ್ವೀ ಪತಯಂತಿ ನಕ್ತಭಿರ್ಯೇ ವಾ ರಿಪೋ ದಧಿರೇ
ದೇವೇ ಅಧ್ವರೇ ॥ ೧೮ ॥

॥ ಪದಪಾಠಃ ॥

ವಿ । ತಿಷ್ಠಧ್ವಂ । ಮರುತಃ । ವಿಕ್ಷು । ಇಚ್ಛತ । ಗೃಭಾಯತ । ರಕ್ಷಸಃ । ಸಂ । ಪಿನಷ್ಟನ ।
ವಯಃ । ಯೇ । ಭೂತ್ವೀ । ಪತಯಂತಿ । ನಕ್ತಽಭಿಃ । ಯೇ । ವಾ । ರಿಪಃ । ದಧಿರೇ । ದೇವೇ ।
ಅಧ್ವರೇ ॥ ೧೮ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯೂಯಂ ವಿಕ್ಷು ಪ್ರಜಾಸು ವಿ ತಿಷ್ಠಧ್ವಂ । ವಿವಿಧಂ ತಿಷ್ಠತ । ತತ್ರ ಗೂಢಾನ್ರಾಕ್ಷಸಾನ್ ಹಂತುಮಿಚ್ಛತ । ಅನ್ವಿಚ್ಛತ । ತದನಂತರಂ ರಕ್ಷಸಸ್ತಾನ್ರಾಕ್ಷಸಾನ್ ಗೃಭಾಯತ । ಗೃಹ್ಣೀತ ।

ಗೃಹ್ಣೀತ । ಗೃಹೀತ್ವಾ ಚ ಸಂ ಪಿನಷ್ಟನ । ಚೂರ್ಣಯತ । ಯೇ ರಾಕ್ಷಸಾ ವಯಃ ಪಕ್ಷಿಣೋ ಭೂತ್ವೀ ಭೂತ್ವಾ ನಕ್ತಭಿಃ ರಾತ್ರಿಭಿಃ ರಾತ್ರಿಷು ಪತಯಂತಿ ಆಗಚ್ಛಂತಿ । ಯೇ ವಾ ಯೇ ಚ ದೇವೇ ದೀಪ್ತೇಽಧ್ವರೇ ಯಾಗೇ ರಿಪೋ ಹಿಂಸಾ ದಧಿರೇ ವಿದಧಿರೇ । ತಾನ್ರಾಕ್ಷಸಾನ್ ಸಂ ಪಿನಷ್ಟನೇತ್ಯನ್ವಯಃ ॥

। ಪ್ರತಿಪದಾರ್ಥ ।

ಮರುತಃ—ಎಲೈ ಮರುತ್ತುಗಳೇ । ವಿಕ್ಷು—ಯಜ್ಞಕರ್ತರಾದ ಪ್ರಜೆಗಳ ನಡುವೆ । ವಿ ತಿಷ್ಠಧ್ವಂ—ಸ್ಥಿರವಾಗಿ ನಿಲ್ಲಿರಿ । ಇಚ್ಛತ—(ಅವರನ್ನು ಅಸುರರಿಂದ ರಕ್ಷಿಸಲು) ಇಚ್ಛಿಸಿರಿ । ಯೇ—ಯಾವ ರಾಕ್ಷಸರು । ವಯಃ—ಪಕ್ಷಿಗಳಾಗಿ । ಭೂತ್ವೀ—ರೂಪಾಂತರವನ್ನು ಹೊಂದಿ । ನಕ್ತಭಿಃ—ರಾತ್ರಿಕಾಲಗಳಲ್ಲಿ । ಪತಯಂತಿ—ಹಾರಾಡುವರೋ । ಯೇ ವಾ—ಅಥವಾ ಯಾರು । ದೇವೇ—ಪ್ರಕಾಶಮಾನವಾದ । ಅಧ್ವರೇ—ಯಾಗದಲ್ಲಿ । ರಿಪಃ—ಹಿಂಸೆಗಳನ್ನು । ದಧಿರೇ—ಉಂಟುಮಾಡುವರೋ । ರಕ್ಷಸಃ—ಅಂತಹ ರಾಕ್ಷಸರನ್ನು । ಗೃಭಾಯತ—ಹಿಡಿದುಕೊಳ್ಳಿರಿ । ಸಂ ಪಿನಷ್ಟನ—ಅವರನ್ನು ಪುಡಿಪುಡಿಮಾಡಿರಿ.

। ಭಾವಾರ್ಥ ।

ಎಲೈ ಮರುತ್ತುಗಳೇ, ಯಜ್ಞಕರ್ತರಾದ ಪ್ರಜೆಗಳ ನಡುವೆ ಸ್ಥಿರವಾಗಿ ನಿಂತು ಅವರನ್ನು ಅಸುರರ ಹಾವಳಿಯಿಂದ ಸಂರಕ್ಷಿಸಲಿಚ್ಛಿಸಿರಿ. ಯಾವ ರಾಕ್ಷಸರು ಪಕ್ಷಿಗಳಾಗಿ ರೂಪಾಂತರವನ್ನು ಹೊಂದಿ ರಾತ್ರಿಕಾಲಗಳಲ್ಲಿ ಹಾರಾಡುವರೋ ಅಥವಾ ಯಾರು ಪ್ರಕಾಶಮಾನವಾದ ಯಾಗದಲ್ಲಿ ಹಿಂಸೆಗಳನ್ನುಂಟುಮಾಡುವರೋ ಅಂತಹ ರಾಕ್ಷಸರನ್ನು ಹಿಡಿದು ಅವರನ್ನು ಚೂರ್ಣವಾಗುವಂತೆ ಮಾಡಿರಿ. (ನಾಶಪಡಿಸಿರಿ).

## English Translation

Stay, Maruts, amongst the people, desirous (of protecting them); seize the Rakshasas, grind them to pieces: whether they fly about like birds by night, are whether they have offered obstruction to the sacred sacrifice-

॥ ಸಂಹಿತಾಪಾಠಃ ॥

ಪ್ರ ವರ್ತಯ ದಿವೋ ಅಶ್ಮಾನಮಿಂದ್ರ ಸೋಮಶಿತಂ ಮಘವನ್ತ್ಸಂ ಶಿಶಾಧಿ ।
ಪ್ರಾಕ್ತಾದಪಾಕ್ತಾದಧರಾದುದಕ್ತಾದಭಿ ಜಹಿ ರಕ್ಷಸಃ ಪರ್ವತೇನ ॥ ೧೯ ॥

। ಪದಪಾಠಃ ।

ಪ್ರ । ವರ್ತಯ । ದಿವಃ । ಅಶ್ಮಾನಂ । ಇಂದ್ರ । ಸೋಮಽಶಿತಂ । ಮಘಽವನ್ । ಸಂ । ಶಿಶಾಧಿ ।

ಪ್ರಾಕ್ತಾ॑ತ್ | ಅಪಾ॑ಕ್ತಾತ್ | ಅ॒ಧ॒ರಾತ್ | ಉದ॑ಕ್ತಾತ್ | ಅ॒ಭಿ | ಜ॒ಹಿ॒ | ರ॒ಕ್ಷ॑ಸಃ | ಪರ್ವ॑ತೇನ || ೧೯ ||

। ಸಾಯಣಭಾಷ್ಯಂ ।

ಹೇ ಇಂದ್ರ ದಿವೋಽನ್ತರಿಕ್ಷಾದಶ್ಮಾನಮಶನಿಂ ಪ್ರ ವರ್ತಯ । ಪ್ರೇರಯ ರಾಕ್ಷಸಾನ್ ಹಂತುಂ । ತಥಾ ಸೋಮಶಿತಂ ಸೋಮೇನ ತೀಕ್ಷ್ಣೀಭೂತಂ ಯಜಮಾನಂ ಹೇ ಮಘವನ್ ಧನವನ್ನಿಂದ್ರ ಸಂ ಶಿಶಾಧಿ ॥ ಸಂಸ್ಕುರು । ಅಪಿ ಚ ಪಾಕ್ತಾತ್ ಪ್ರಾಚ್ಯಾ ಅಪಾಕ್ತಾತ್ ಪ್ರತೀಚ್ಯಾ ಅಧರಾದವಾಚ್ಯಾ ಉದಕ್ತಾದುತ್ತರತಃ ಸರ್ವಸ್ಮಾದಪಿ ದಿಗ್ಭಾಗಾದ್ರಕ್ಷಸೋ ರಾಕ್ಷಸಾನ್ ಪರ್ವತೇನ ಪರ್ವವತಾ ವಜ್ರೇಣಾಭಿ ಜಹಿ । ಮಾರಯ ॥

। ಪ್ರತಿಪದಾರ್ಥ ।

**ಇಂದ್ರ**—ಎಲೈ ಇಂದ್ರನೇ । **ದಿವಃ**—ಅಂತರಿಕ್ಷದಿಂದ । **ಅಶ್ಮಾನಂ**—ನಿನ್ನ ವಜ್ರಾಯುಧವನ್ನು (ರಾಕ್ಷಸರ ನಾಶಕ್ಕಾಗಿ) । **ಪ್ರ ವರ್ತಯ**—ಪ್ರಯೋಗಿಸು। **ಮಘವನ್**—ಧನವಂತನಾದ ಎಲೈ ಇಂದ್ರನೇ। **ಸೋಮಶಿತಂ**—ಸೋಮಪಾನದಿಂದ ತೀಕ್ಷ್ಣವಾದ ಬುದ್ಧಿಯುಳ್ಳ ಯಜಮಾನನನ್ನು । **ಸಂ ಶಿಶಾಧಿ**—ಸುಸಂಸ್ಕೃತನನ್ನಾಗಿ ಮಾಡು । **ಪ್ರಾಕ್ತಾತ್**-ಪೂರ್ವದಿಕ್ಕಿನಿಂದಲೂ । **ಅಪಾಕ್ತಾತ್**-ಪಶ್ಚಿಮದಿಕ್ಕಿನಿಂದಲೂ । **ಅಧರಾತ್**-ದಕ್ಷಿಣದಿಕ್ಕಿನಿಂದಲೂ । **ಉದಕ್ತಾತ್**—ಉತ್ತರದಿಕ್ಕಿನಿಂದಲೂ । **ರಕ್ಷಸಃ**—ರಾಕ್ಷಸರನ್ನು । **ಪರ್ವತೇನ**—ವಜ್ರಾಯುಧದಿಂದ । **ಅಭಿ ಜಹಿ**—ನಾಶಪಡಿಸು.

|| ಭಾವಾರ್ಥ ||

ಎಲೈ ಇಂದ್ರನೇ, ರಾಕ್ಷಸರ ನಾಶಕ್ಕಾಗಿ ಅಂತರಿಕ್ಷದಿಂದ ನಿನ್ನ ವಜ್ರಾಯುಧವನ್ನು ಪ್ರಯೋಗಿಸು. ಧನವಂತನಾದ ಎಲೈ ಇಂದ್ರನೇ, ಸೋಮಪಾನದಿಂದ ತೀಕ್ಷ್ಣವಾದ ಬುದ್ಧಿಯುಳ್ಳ ಯಜಮಾನನ್ನು ಸುಸಂಸ್ಕೃತನನ್ನಾಗಿ ಮಾಡು. ಪೂರ್ವದಿಕ್ಕಿನಿಂದಲೂ, ಪಶ್ಚಿಮದಿಕ್ಕಿನಿಂದಲೂ, ದಕ್ಷಿಣದಿಕ್ಕಿನಿಂದಲೂ, ಉತ್ತರದಿಕ್ಕಿನಿಂದಲೂ ರಾಕ್ಷಸರನ್ನು ವಜ್ರಾಯುಧದಿಂದ ನಾಶಪಡಿಸು.

## English Translation

Hurl, Indra, your thunderbolt from heaven; sanctify, Maghavan, (the worshipper) sharpened by the Soma beverage: slay with the thunderbolt the Rakshasas, on the east, on the west, on the south, on the north.

॥ ಸಂಹಿತಾಪಾಠಃ ॥

ಏ॒ತ ಉ॒ ತ್ಯೇ ಪ॑ತಯಂ॒ತಿ ಶ್ವಯಾ॑ತವ॒ ಇಂದ್ರಂ ದಿಪ್ಸಂತಿ ದಿ॒ಪ್ಸವೋಽ-

ದಾ॑ಭ್ಯಂ ।

ಶಿಶೀತೇ ಶಕ್ರಃ ಪಿಶುನೇಭ್ಯೋ ವಧಂ ನೂನಂ ಸೃಜದಶನಿಂ ಯಾತು-
ಮದ್ಭ್ಯಃ ॥ ೨೦ ॥

। ಪದಪಾಠಃ ।

ಏತೇ । ಊಂ ಇತಿ । ತ್ಯೇ । ಪತಯಂತಿ । ಶ್ವऽಯಾತವಃ । ಇಂದ್ರಂ । ದಿಪ್ಸಂತಿ । ದಿಪ್ಸವಃ । ಅದಾಭ್ಯಂ ।
ಶಿಶೀತೇ । ಶಕ್ರಃ । ಪಿಶುನೇಭ್ಯಃ । ವಧಂ । ನೂನಂ । ಸೃಜತ್ । ಅಶನಿಂ । ಯಾತುಮತ್ऽಭ್ಯಃ ॥ ೨೦ ॥

॥ ಸಾಯಣಭಾಷ್ಯಂ ॥

ತ್ಯೇ ತ ಏತೇ ರಾಕ್ಷಸಾಃ ಶ್ವಯಾತವಃ ಶ್ವಭಿಃ ಪರಿಕರಭೂತೈರ್ಹಿಂಸಂತಃ ಶ್ವಭಿಃ ಸಹ ಯಾಂತೋ ವಾ ಪತಯಂತಿ । ಪತಂತಿ । ಯೇ ದಿಪ್ಸವೋ ಜಿಘಾಂಸವಃ ಸಂತೋಽದಾಭ್ಯಮಹಿಂಸ್ಯಮಿಂದ್ರಂ ದಿಪ್ಸಂತಿ ಜಿಘಾಂಸಂತಿ ತೇಭ್ಯಃ ಪಿಶುನೇಭ್ಯಃ ಪಿಶುನಾನ್ ಕಪಟಾನ್ ಹಂತುಂ ಶಕ್ರಃ ಶಕ್ತ ಇಂದ್ರೋ ವಧಮಾಯುಧಮಶನಿರೂಪಂ ಶಿಶೀತೇ । ತೀಕ್ಷ್ಣೀಕರೋತಿ । ಯಾತುಮದ್ಭ್ಯೋ ರಾಕ್ಷಸೇಭ್ಯೋ ನೂನಂ ಕ್ಷಿಪ್ರಮಶನಿಂ ಸೃಜತ್ । ವಿಸೃಜತು ಹನನಾರ್ಥಂ ॥

॥ ಪ್ರತಿಪದಾರ್ಥ ॥

ತ್ಯೇ – ಪ್ರಸಿದ್ಧರಾದ । ಏತೇ ಉ— ಈ ರಾಕ್ಷಸರು । ಶ್ವಯಾತವಃ—ತಮ್ಮ ಅನುಯಾಯಿಗಳಾದ ನಾಯಿಗಳೊಂದಿಗೆ ಸಂಚರಿಸುತ್ತಾ । ಪತಯಂತಿ—ಎದುರುಬೀಳುತ್ತಾರೆ । ದಿಪ್ಸವಃ—ಇಂದ್ರನನ್ನು ಹಿಂಸಿಸಲಿಚ್ಛಿಸಿ । ಅದಾಭ್ಯಂ—ಅಪ್ರತಿಹತನಾದ । ಇಂದ್ರಂ—ಇಂದ್ರನನ್ನು । ದಿಪ್ಸಂತಿ—ಹಿಂಸಿಸಲು ಪ್ರಯತ್ನಿಸುತ್ತಾರೆ । ಪಿಶುನೇಭ್ಯಃ—ವಂಚಕರಾದ ಅವರನ್ನು ನಾಶಪಡಿಸಲು । ಶಕ್ರಃ –ಇಂದ್ರನು । ವಧಂ—ವಧಸಾಧನವಾದ ವಜ್ರಾಯುಧವನ್ನು । ಶಿಶೀತೇ—ಹರಿತಮಾಡಿಕೊಳ್ಳುತ್ತಾನೆ । ನೂನಂ—ಶೀಘ್ರವಾಗಿ । ಯಾತುಮದ್ಭ್ಯಃ—ರಾಕ್ಷಸರ ಮೇಲೆ । ಅಶನಿಂ – ವಜ್ರಾಯುಧವನ್ನು । ಸೃಜತ್—ಪ್ರಯೋಗಿಸಲಿ.

। ಭಾವಾರ್ಥ ।

ಪ್ರಸಿದ್ಧರಾದ ಈ ರಾಕ್ಷಸರು ತಮ್ಮ ಅನುಯಾಯಿಗಳಾದ ನಾಯಿಗಳೊಂದಿಗೆ ಸಂಚರಿಸುತ್ತಾ ಇಂದ್ರನ ಮೇಲೆ ಎದುರುಬೀಳುತ್ತಾರೆ. ಮತ್ತು ಅಪ್ರತಿಹತನಾದ ಇಂದ್ರನನ್ನು ಹಿಂಸಿಸಲಿಚ್ಛಿಸಿ ಅದಕ್ಕೆ ಪ್ರಯತ್ನ ಪಡುತ್ತಾರೆ. ಆದರೆ, ವಂಚಕರಾದ ಅವರನ್ನೇ ನಾಶಪಡಿಸಲು ಇಂದ್ರನು ವಧಸಾಧನವಾದ ವಜ್ರಾಯುಧವನ್ನು ಹರಿತಮಾಡಿಕೊಳ್ಳುತ್ತಾನೆ. ಶೀಘ್ರವಾಗಿ ರಾಕ್ಷಸರ ಮೇಲೆ ವಜ್ರಾಯುಧವನ್ನು ಪ್ರಯೋಗಿಸುತ್ತಾನೆ.

## English Translation

They advance, accompanied by dogs: desirous to destroy him, they

assail the indomitable Indra; Sakra whets his thunderbolt for the miscreants; quickly let him hurl the bolt upon the fiends.

॥ ಸಂಹಿತಾಪಾಠಃ ॥

ಇಂದ್ರೋ॑ ಯಾತೂನಾಮ॑ಭವತ್ಪರಾಶ॒ರೋ ಹ॑ವಿರ್ಮಥೀ॒ನಾಮ॒ಭ್ಯಾ॒೩॑-
ವಿವಾ॑ಸತಾಂ ।
ಅ॒ಭೀದು॑ ಶ॒ಕ್ರಃ ಪ॑ರ॒ಶುರ್ಯಥಾ॒ ವನಂ॒ ಪಾತ್ರೇ॑ವ ಭಿ॒ಂದನ್ತ್ಸ॒ತ ಏ॑ತಿ
ರ॒ಕ್ಷಸಃ॑ ॥ ೨೧ ॥

॥ ಪದಪಾಠಃ ॥

ಇಂದ್ರಃ॑ । ಯಾ॒ತೂ॒ನಾಂ । ಅ॒ಭ॒ವ॒ತ್ । ಪ॒ರಾ॒ಽಶ॒ರಃ । ಹ॒ವಿಃ॒ಽಮಥೀ॑ನಾಂ । ಅ॒ಭಿ । ಆ॒ಽವಿವಾ॑ಸತಾಂ ।
ಅ॒ಭಿ । ಇತ್ । ಊಂ ಇ॑ತಿ । ಶ॒ಕ್ರಃ । ಪ॒ರ॒ಶುಃ । ಯಥಾ॑ । ವನಂ । ಪಾತ್ರಾ॑ಽಇವ । ಭಿಂ॒ದನ್ । ಸ॒ತಃ ।
ಏ॒ತಿ । ರ॒ಕ್ಷಸಃ॑ ॥ ೨೧ ॥

॥ ಸಾಯಣಭಾಷ್ಯಂ ॥

ಯಾತೂನಾಂ ಹಿಂಸಕಾನಾಂ ರಕ್ಷಸಾಮಯಮಿಂದ್ರಃ ಪರಾಶರಃ ಪರಾಶಾತಯಿತಾ ಹಿಂಸಿತಾಭವತ್। ಕೀದೃಶಾನಾಂ। ಹವಿರ್ಮಥೀನಾಂ ಹವೀಂಷಿ ಮಥ್ನತಾಮಭಿಮುಖಮಾವಿವಾಸತಾಮಾಗಚ್ಛತಾಂ। ಅಪಿ ಚಾಯಂ ಶಕ್ರ ಇಂದ್ರೋ ವನಂ ವೃಕ್ಷಜಾತಂ ಪರಶುರ್ಯಥಾ ಭಿಂದನ್ಕುಠಾರ ಇವ ಪಾತ್ರೇವ ಮೃನ್ಮಯಾನಿ ಪಾತ್ರಾಣಿ ಭಿಂದನ್ ಮುದ್ಗರ ಇವ ಚ ಸತಃ। ಪ್ರಾಪ್ತಾನಾಮೃತತ್। ಯದಾಹ ಯಾಸ್ಕಃ। ತಿರಃ ಸತ ಇತಿ ಪ್ರಾಪ್ತಸ್ಯ। ನಿ. ೩-೨೦। ಇತಿ। ಪ್ರಾಪ್ತಾನ್ರಕ್ಷಸೋ ರಾಕ್ಷಸಾನ್ ಭಿಂದನ್ ಹಿಂಸನ್ನಭ್ಯೇತಿ। ಅಭಿಗಚ್ಛತಿ। ಇದು ಪೂರಣೇ ॥

॥ ಪ್ರತಿಪದಾರ್ಥ ॥

ಹವಿರ್ಮಥೀನಾಂ—ಹವಿಸ್ಸನ್ನು ನಾಶಪಡಿಸಲು । ಅಭಿ ಆವಿವಾಸತಾಂ—ಎದುರಾಗಿ ಬರುತ್ತಿರುವ। ಯಾತೂನಾಂ—ರಾಕ್ಷಸರಿಗೆ। ಇಂದ್ರಃ—ಇಂದ್ರನು। ಪರಾಶರಃ—ಹಿಂಸಕನಾಗಿ। ಅಭವತ್—ಆಗಿದ್ದಾನೆ। ವನಂ—ವನವೃಕ್ಷಗಳನ್ನು। ಪರಶುಃ—ಕೊಡಲಿಯು। ಯಥಾ—ಯಾವ ರೀತಿ ಸೀಳುವುದೋ। ಮುದ್ಗರಃ—ಕೊಡತಿಯು। ಪಾತ್ರೇವ—ಮಣ್ಣಿನಿಂದ ಮಾಡಿದ ಮಡಕೆಗಳನ್ನು ಯಾವ ರೀತಿ ಸುಲಭವಾಗಿ ಒಡೆಯುವುದೋ ಅಷ್ಟು ಸುಲಭವಾಗಿ। ಶಕ್ರಃ—ಇಂದ್ರನು। ಸತಃ—ತನ್ನೆದುರು ಬರತಕ್ಕ। ರಕ್ಷಸಃ—ರಾಕ್ಷಸರನ್ನು। ಭಿಂದನ್ ಇತ್-ಸೀಳಿಹಾಕುತ್ತಲೇ। ಅಭ್ಯೇತಿ—ಬರುತ್ತಾನೆ.

॥ ಭಾವಾರ್ಥ ॥

ಹವಿಸ್ಸನ್ನು ನಾಶಪಡಿಸಲು ಬರುತ್ತಿರುವ ರಾಕ್ಷಸರಿಗೆ ಇಂದ್ರನು ಹಿಂಸಕನಾಗಿದ್ದಾನೆ. ವನವೃಕ್ಷಗಳನ್ನು ಕೊಡಲಿಯು ಎಷ್ಟು ಸುಲಭವಾಗಿ ಸೀಳಬಲ್ಲುದೋ, ಕೊಡತಿಯು ಮಣ್ಣಿನಿಂದ ಮಾಡಿದ ಮಡಕೆಯನ್ನು ಎಷ್ಟು ಸುಲಭವಾಗಿ ಒಡೆಯಬಲ್ಲುದೋ, ಅಷ್ಟೇ ಸುಲಭವಾಗಿ ಇಂದ್ರನು ಎದುರುಬೀಳುತ್ತಿರುವ ರಾಕ್ಷಸರೆಲ್ಲರನ್ನೂ ಸೀಳುತ್ತಾ ಬರುತ್ತಾನೆ.

## English Translation

Indra has ever been the discomfiter of the evil spirits coming to obstruct (the rites of) the offerers of oblations: Sakra advances, crushing the present Rakshasas, as a hatchet cuts down (the trees of) a forest, as (a mallet smashes) the earthen vessels.

॥ ವಿಶೇಷವಿಷಯಗಳು ॥

ಪರಾಶರಃ—ಈ ಶಬ್ದಕ್ಕೆ ಯಾಸ್ಕರು ನಿರುಕ್ತವನ್ನು ಹೇಳಿದಾರೆ—

ಪರಾಶರಃ ಪರಾಶೀರ್ಣಸ್ಯ ವಸಿಷ್ಠಸ್ಯ ಸ್ಥವಿರಸ್ಯ ಜಜ್ಞೇ । ಪರಾಶರಃ ಶತಯಾತು-
ರ್ವಸಿಷ್ಠಃ ಇತ್ಯಪಿ ನಿಗಮೋ ಭವತಿ । ಇಂದ್ರೋಽಪಿ ಪರಾಶರ ಉಚ್ಯತೇ ।
ಪರಾ ಶಾತಯಿತಾ ಯಾತೂನಾಂ । ಇಂದ್ರೋ ಯಾತೂನಾಮಭವತ್ಪರಾಶರಃ
ಇತ್ಯಪಿ ನಿಗಮೋ ಭವತಿ ॥

(ನಿ. ೬-೩೦)

ಪರಾಶರ ಎಂದರೆ ವೃದ್ಧನಾಗಿಯೂ, ಜೀರ್ಣವಾದ ಶರೀರವುಳ್ಳವನಾಗಿಯೂ ಇದ್ದ ವಸಿಷ್ಠಋಷಿಯಿಂದ ಉತ್ಪನ್ನನಾದ ಪರಾಶರನೆಂಬ ಒಬ್ಬ ಋಷಿಯು, ಇಂದ್ರನಿಗೂ ಪರಾಶರನೆಂದು ಹೆಸರು. ಏಕೆಂದರೆ ಇತರ ಯಾತುಧಾನರೆಂಬ ರಾಕ್ಷಸರನ್ನು ನಾಶಮಾಡುವವನಾದ್ದರಿಂದ ಇಂದ್ರನಿಗೆ ಪರಾಶರನೆಂಬ ಹೆಸರು ಬರಲು ಕಾರಣವು. ಪರಾಶರಃ ಶತಯಾತುರ್ವಸಿಷ್ಠಃ ಮತ್ತು ಇಂದ್ರೋ ಯಾತೂನಾಮಭವತ್ಪರಾಶರಃ ಎಂಬ ಈ ಎರಡು ಶ್ರುತಿವಾಕ್ಯಗಳೇ ಈ ವಿಷಯದಲ್ಲಿ ಉದಾಹರಣೆಯು.

॥ ಸಂಹಿತಾಪಾಠಃ ॥

ಉಲೂಕಯಾತುಂ ಶುಶುಲೂಕಯಾತುಂ ಜಹಿ ಶ್ವಯಾತುಮುತ ಕೋಕ-
ಯಾತುಂ ।
ಸುಪರ್ಣಯಾತುಮುತ ಗೃಧ್ರಯಾತುಂ ದೃಷದೇವ ಪ್ರ ಮೃಣ ರಕ್ಷ
ಇಂದ್ರ ॥ ೨೨ ॥

॥ ಪದಪಾಠಃ ॥

ಉಲೂಕಽಯಾತುಂ । ಶುಶುಲೂಕಽಯಾತುಂ । ಜಹಿ । ಶ್ವಽಯಾತುಂ । ಉತ । ಕೋಕಽಯಾತುಂ ।
ಸುಪರ್ಣಽಯಾತುಂ । ಉತ । ಗೃಧ್ರಽಯಾತುಂ । ದೃಷದಾಽಇವ । ಪ್ರ । ಮೃಣ । ರಕ್ಷಃ । ಇಂದ್ರ ॥

। ಸಾಯಣಭಾಷ್ಯಂ ।

ಉಲೂಕಯಾತುಂ । ಉಲೂಕೈಃ ಪರಿಕರಭೂತೈಃ ಸಹ ಯಾತಯತಿ ಹಿನಸ್ತೀತಿ ಯಾತಿ ಗಚ್ಛತೀತಿ ವೋಲೂಕಯಾತುಃ । ಯದ್ವಾ । ಉಲೂಕರೂಪೀ ಯಾತೀತ್ಯುಲೂಕಯಾತುಃ । ಹೇ ಇಂದ್ರ ತಾದೃಶಂ ರಾಕ್ಷಸಂ ಜಹಿ । ವಿನಾಶಯ ॥ ತಥಾ ಚ ಬೃಹದ್ದೇವತಾಯಾಮುಕ್ತಂ । ಉಲೂಕಯಾತುಂ ಜಹ್ಯೇತಾನ್ನಾನಾರೂಪಾನ್ನಿಶಾಚರಾನ್ । ಸ್ತ್ರೀಪುಂರೂಪಾಂಶ್ಚ ತಿರ್ಯಂಚೋ ಜಿಘಾಂಸೂನಿಂದ್ರ ನೋ ಜಹೀತಿ । ಬೃ. ೬-೩೪೧ ॥ ಏವಮುತ್ತರತ್ರಾಪಿ ಯೋಜ್ಯಂ । ಶುಶುಲೂಕಯಾತುಂ । ಉಲೂಕಾ ದ್ವಿವಿಧಾಃ ಬೃಹದುಲೂಕಾ ಅಲ್ಪೋಲೂಕಾಶ್ಚೇತಿ । ತತ್ರೋಲೂಕಯಾತುಮಿತಿ ಬೃಹದುಲೂಕಾಭಿಪ್ರಾಯೇಣೋಕ್ತಂ । ಶಿಶುರಲ್ಪ ಉಲೂಕಃ ಶುಶುಲೂಕಃ । ತದ್ರೂಪೇಣ ವರ್ತಮಾನಂ ರಾಕ್ಷಸಂ ಶ್ವಯಾತುಂ ಶ್ವರೂಪೇಣ ವರ್ತಮಾನಂ ರಾಕ್ಷಸಮುತಾಪಿ ಚ ಕೋಕಯಾತುಂ । ಕೋಕಶ್ಚಕ್ರವಾಕಃ । ತದ್ರೂಪೇಣ ವರ್ತಮಾನಂ ರಾಕ್ಷಸಂ ಸುಪರ್ಣಯಾತುಂ । ಸುಪರ್ಣಃ ಶ್ಯೇನಃ । ತದಾಕಾರಂ ಯಾತುಧಾನಮುತಾಪಿ ಚ ಗೃಧ್ರಯಾತುಂ ಗೃಧ್ರರೂಪಂ ಚ ಯಾತುಧಾನಂ । ಏತಾನ್ ಸರ್ವಾನ್ನಾನಾಕಾರಾನ್ ಹೇ ಇಂದ್ರ ಜಹಿ । ಕಿಂ ಬಹುನಾ ದೃಷದೇವ ಪಾಷಾಣೇನೇವ ವಜ್ರೇಣ ರಕ್ಷೋ ರಾಕ್ಷಸಮಾತ್ರಂ ಪ್ರ ಮೃಣ । ಮಾರಯ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಉಲೂಕಯಾತುಂ—ದೊಡ್ಡ ಗೂಬೆಯ ರೂಪದಲ್ಲಿರುವವನೂ । ಶುಶುಲೂಕಯಾತುಂ—ಸಣ್ಣ ಗೂಬೆಯ ರೂಪದಲ್ಲಿರುವನೂ । ಶ್ವಯಾತುಂ—ನಾಯಿಯ ರೂಪದಲ್ಲಿರುವವನೂ । ಉತ—ಮತ್ತು । ಕೋಕಯಾತುಂ—ಚಕ್ರವಾಕಪಕ್ಷಿಯರೂಪದಲ್ಲಿರುವವನೂ । ಸುಪರ್ಣಯಾತುಂ—ಶ್ಯೇನರೂಪದಲ್ಲಿರುವವನೂ । ಉತ—ಮತ್ತು । ಗೃಧ್ರಯಾತುಂ—ಗೃಧ್ರಾಕಾರದಲ್ಲಿರುವವನೂ ಆದ ರಾಕ್ಷಸನನ್ನು । ಜಹಿ—ನಾಶಪಡಿಸು । ದೃಷದೇವ—ವಜ್ರಾಯುಧದಿಂದಲೇ । ರಕ್ಷಃ—ರಾಕ್ಷಸರನ್ನೆಲ್ಲಾ । ಪ್ರ ಮೃಣ—ನಾಶಪಡಿಸು.

। ಭಾವಾರ್ಥ ।

ಎಲೈ ಇಂದ್ರನೇ, ಅಸುರರು ಮೋಸದಿಂದ ನಾನಾ ರೂಪವನ್ನಾಶ್ರಯಿಸುತ್ತಾರೆ. ಅವರು ದೊಡ್ಡಗೂಬೆಯ ರೂಪದಲ್ಲಿರಲಿ, ಅಥವಾ ಸಣ್ಣಗೂಬೆಯ ರೂಪದಲ್ಲಿರಲಿ, ನಾಯಿಯ ರೂಪದಲ್ಲಿರಲಿ ಅಥವಾ ಚಕ್ರವಾಕಪಕ್ಷಿಯ ರೂಪದಲ್ಲಿರಲಿ ಶ್ಯೇನರೂಪದಲ್ಲಿರಲಿ ಅಥವಾ ಗೃಧ್ರಾಕಾರದಲ್ಲಿರಲಿ, ಅಂತಹ ರಾಕ್ಷಸರನ್ನೆಲ್ಲಾ ನಾಶಪಡಿಸು. ಅವರನ್ನೆಲ್ಲಾ ವಜ್ರಾಯುಧದಿಂದಲೇ ನಾಶಪಡಿಸು.

## English Translation

Destroy the evil spirit, whether in the form of an owl, or of an

owlet, of a dog, or of a duck, of a hawk, or of a vulture; slay the Rakshasas, Indra, (with the thunderbolt) as with a stone.

। ಸಂಹಿತಾಪಾಠಃ ।

ಮಾ ನೋ ರಕ್ಷೋ ಅಭಿ ನಡ್ಯಾತುಮಾವತಾಮಪೋಚ್ಛತು ಮಿಥುನಾ ಯಾ ಕಿಮೀದಿನಾ ।

ಪೃಥಿವೀ ನಃ ಪಾರ್ಥಿವಾತ್ಪಾತ್ವಂಹಸೋಽನ್ತರಿಕ್ಷಂ ದಿವ್ಯಾತ್ಪಾತ್ವಸ್ಮಾನ್ ॥

। ಪದಪಾಠಃ ।

ಮಾ । ನಃ । ರಕ್ಷಃ । ಅಭಿ । ನಟ್ । ಯಾತುಽಮಾವತಾಂ । ಅಪ । ಉಚ್ಛತು । ಮಿಥುನಾ । ಯಾ । ಕಿಮೀದಿನಾ ।

ಪೃಥಿವೀ । ನಃ । ಪಾರ್ಥಿವಾತ್ । ಪಾತು । ಅಂಹಸಃ । ಅಂತರಿಕ್ಷಂ । ದಿವ್ಯಾತ್ । ಪಾತು । ಅಸ್ಮಾನ್ ॥

। ಸಾಯಣಭಾಷ್ಯಂ ।

ರಕ್ಷೋ ರಾಕ್ಷಸಜಾತಿರ್ನೋಽಸ್ಮಾನ್ ಮಾಭಿ ನಟ್ । ಮಾಭಿವ್ಯಾಪ್ನೋತು ॥ ನಶತೇರ್ವ್ಯಾಪ್ತಿಕರ್ಮಣೋ ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ನ ಮಾಙ್ಯೋಗ ಇತ್ಯಡಭಾವಃ ॥ ತಥಾ ಯಾತುಮಾವತಾಂ ಯಾತನಾವತಾಂ ರಾಕ್ಷಸಾನಾಂ ಮಿಥುನಾ ಮಿಥುನಾನಿ ಸ್ತ್ರೀಪುಂರೂಪಾಣಿ ಯುಗಲಾನ್ಯಪೋಚ್ಛತು । ಉಷಾ ಅಪಿ ವಿನಾಶಯತು । ಅಪವರ್ಜಯತು । ಯಾ ಯಾನಿ ಮಿಥುನಾನಿ ಕಿಮೀದಿನಾ ಕಿಮೀದಿನಾನಿ ಕಿಮಿದಂ ಕಿಮಿದಮಿತಿ ಜಿಘಾಂಸಯಾ ವರ್ತಮಾನಾನಿ ಭವಂತಿ । ಅಪಿ ಚ ಪೃಥಿವೀ ಪ್ರಥಿತೇಯಂ ಭೂಮಿಶ್ಚ ನೋಽಸ್ಮಾನ್ ಪಾರ್ಥಿವಾತ್ಪೃಥಿವ್ಯಾ ಅಂತರಿಕ್ಷಸ್ಯ ಸಂಬಂಧಿನೋಽಂಹಸಃ । ಪಾಪಾತ್ಪಾತು । ರಕ್ಷತು । ಅಂತರಿಕ್ಷಂ ಚ ದಿವ್ಯಾದ್ದಿವಿ ಭವಾತ್ಪಾಪಾದಸ್ಮಾನ್ ಪಾತು । ರಕ್ಷತು ॥

। ಪ್ರತಿಪದಾರ್ಥ ।

ರಕ್ಷಃ—ರಾಕ್ಷಸಜಾತಿಯು । ನಃ—ನಮ್ಮನ್ನು । ಮಾ ಅಭಿ ನಟ್—ಆಕ್ರಮಿಸದಿರಲಿ (ಪೀಡಿಸದಿರಲಿ) । ಯಾ—ಯಾವ ಮಿಥುನವು (ಸ್ತ್ರೀಪುಂರೂಪವಾದ ಅಸುರರ ಜೋಡಿಯು) । ಕಿಮೀದಿನಾ—ಇದು ಹೇಗೆ, ಇವನನ್ನು ಹೇಗೆ ಕೊಲ್ಲಬೇಕು ಎಂದಿರುತ್ತದೆಯೋ ಅಂತಹ । ಯಾತುಮಾವತಾಂ—ರಾಕ್ಷಸರ । ಮಿಥುನಾ—ಸ್ತ್ರೀಪುರುಷರ ಜೋಡಿಗಳನ್ನು । ಅಪ ಉಚ್ಛತು—ಉಷೋದೇವಿಯು ಹೊಡೆದೋಡಿಸಲಿ । ಪೃಥಿವೀ—ಪೃಥಿವಿಯು । ನಃ—

ನಮ್ಮನ್ನು । ಪಾರ್ಥಿವಾತ್—ಪೃಥ್ವೀಸಂಬಂಧಿಯಾದ । ಅಂಹಸಃ—ಪಾಪದಿಂದ । ಪಾತು—ರಕ್ಷಿಸಲಿ । ಅಂತರಿಕ್ಷಂ—ಅಂತರಿಕ್ಷವು । ದಿವ್ಯಾತ್—ದ್ಯುಲೋಕೋತ್ಪನ್ನವಾದ ಪಾಪದಿಂದ । ಅಸ್ಮಾನ್—ನಮ್ಮನ್ನು । ಪಾತು—ರಕ್ಷಿಸಲಿ.

। ಭಾವಾರ್ಥ ।

ಈ ರಾಕ್ಷಸರ ಸಮೂಹವು ನಮ್ಮನ್ನು ಹಿಂಸಿಸದಿರಲಿ. "ಇದು ಹೇಗೆ, ಇವನನ್ನು ಹೇಗೆ ಕೊಲ್ಲಬೇಕು" ಎಂದು ಯಾವಾಗಲೂ ಕೆಡಕನ್ನೇ ಬಗೆಯುತ್ತಿರುವ ಅಸುರರ ಸ್ತ್ರೀಪುರುಷರ ಜೋಡಿಗಳನ್ನು ಉಷೋದೇವಿಯು ಹೊಡೆದೋಡಿಸಲಿ. ಪೃಥ್ವಿಯು ಪೃಥಿವ್ಯುತ್ಪನ್ನವಾದ ಪಾಪದಿಂದಲೂ, ಅಂತರಿಕ್ಷವು ದ್ಯುಲೋಕೋತ್ಪನ್ನವಾದ ಪಾಪದಿಂದಲೂ ನಮ್ಮನ್ನು ಸಂರಕ್ಷಿಸಲಿ.

## English Translation

Let not the Rakshasas do us harm: let the dawn drive away the pairs of evil spirits, exclaiming "What now is this?" May the earth protect us from terrestrial, the firmament protect us from celestial, wickedness.

। ಸಂಹಿತಾಪಾಠಃ ।

ಇಂದ್ರ ಜಹಿ ಪುಮಾಂಸಂ ಯಾತುಧಾನಮುತ ಸ್ತ್ರಿಯಂ ಮಾಯಯಾ
ಶಾಶದಾನಾಂ ।
ವಿಗ್ರೀವಾಸೋ ಮೂರದೇವಾ ಋದಂತು ಮಾ ತೇ ದೃಶನ್ತ್ಸೂರ್ಯಮು-
ಚ್ಚರಂತಂ ॥ ೨೪ ॥

। ಪದಪಾಠಃ ।

ಇಂದ್ರ । ಜಹಿ । ಪುಮಾಂಸಂ । ಯಾತುऽಧಾನಂ । ಉತ । ಸ್ತ್ರಿಯಂ । ಮಾಯಯಾ । ಶಾಶದಾನಾಂ ।
ವಿऽಗ್ರೀವಾಸಃ । ಮೂರऽದೇವಾಃ । ಋದಂತು । ಮಾ । ತೇ । ದೃಶನ್ । ಸೂರ್ಯಂ । ಉತ್ऽಚರಂತಂ ॥

। ಸಾಯಣಭಾಷ್ಯಂ ।

ಹೇ ಇಂದ್ರ ಪುಮಾಂಸಂ ಪುಂರೂಪಧಾರಿಣಂ ಯಾತುಧಾನಂ ರಾಕ್ಷಸಂ ಜಹಿ । ಮಾರಯ । ಉತಾಪಿ ಚ ಮಾಯಯಾ ವಂಚನಯಾ ಶಾಶದಾನಾಂ ಹಿಂಸಂತೀಂ ಸ್ತ್ರಿಯಂ ರಾಕ್ಷಸೀಂ ಚ ಜಹಿ । ಅಪಿ ಚ ಮೂರದೇವಾ ಮಾರಣಕ್ರೀಡಾ ರಾಕ್ಷಸಾ ವಿಗ್ರೀವಾಸೋ ವಿಚ್ಛಿನ್ನಗ್ರೀವಾಃ ಸಂತ ಋದಂತು ನಶ್ಯಂತು। ತೇ ತಥಾವಿಧಾ ರಾಕ್ಷಸಾ ಉಚ್ಚರಂತಮುದ್ಯಂತಂ ಸೂರ್ಯಮಾದಿತ್ಯಂ ಮಾ ದೃಶನ್ । ಮಾ ದ್ರಾಕ್ಷುಃ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಪುಮಾಂಸಂ—ಪುಂರೂಪಿಯಾದ । ಯಾತುಧಾನಂ—ರಾಕ್ಷಸನನ್ನು । ಜಹಿ—ನಾಶಪಡಿಸು । ಉತ—�ತ್ತು । ಮಾಯಯಾ—ವಂಚನೆಯಿಂದ । ಶಾಶದಾನಾಂ—ಹಿಂಸಿಸುವ । ಸ್ತ್ರಿಯಂ—ರಾಕ್ಷಸಸ್ತ್ರೀಯನ್ನೂ ನಾಶಪಡಿಸು । ಮೂರದೇವಾಃ—ಇತರರನ್ನು ಕೊಲ್ಲುವುದರಿಂದಲೇ ಸಂತೋಷ ಪಡತಕ್ಕ ರಾಕ್ಷಸರು। ವಿಗ್ರೀವಾಸಃ—ಕತ್ತರಿಸಲ್ಪಟ್ಟ ಕತ್ತುಗಳುಳ್ಳವರಾಗಿ । ಋದಂತು—ನಾಶವನ್ನು ಹೊಂದಲಿ । ತೇ—ಅಂತಹ ರಾಕ್ಷಸರು । ಉಚ್ಚರಂತಂ-ಉದಯುವನ್ನು ಹೊಂದುವ । ಸೂರ್ಯಂ-ಸೂರ್ಯನನ್ನು । ಮಾ ದೃಶನ್-ನೋಡದೇ ಇರುವಂತಾಗಲಿ.

। ಭಾವಾರ್ಥ ।

ಎಲೈ ಇಂದ್ರನೇ, ಪುಂರೂಪಿಯಾದ ರಾಕ್ಷಸನನ್ನೂ ಮತ್ತು ಮೋಸದಿಂದ ನಮ್ಮನ್ನು ಹಿಂಸಿಸುವ ರಾಕ್ಷಸ ಸ್ತ್ರೀಯನ್ನೂ ನಾಶಪಡಿಸು. ಇತರರನ್ನು ಕೊಲ್ಲುವುದರಿಂದಲೇ ಸಂತೋಷಪಡತಕ್ಕ ರಾಕ್ಷಸರು ತಮ್ಮ ಶಿರಶ್ಛೇದನವುಳ್ಳವರಾಗಿ ನಾಶವನ್ನು ಹೊಂದಲಿ. ಮತ್ತು ಉದಯಿಸುವ ಸೂರ್ಯನನ್ನೂ ಅವನ ಪ್ರಕಾಶವನ್ನೂ ಪುನಃ ನೋಡದಿರುವಂತಾಗಲಿ.

## English Translation

Slay, Indra, the Yatudhana, whether in the form of a man, or of a woman doing mischief by her deceptions : may those who sport in murder perish decapitated ; let them not behold the rising sun.

। ಸಂಹಿತಾಪಾಠಃ ।

ಪ್ರತಿ ಚಕ್ಷ್ವ ವಿ ಚಕ್ಷ್ವೇಂದ್ರಶ್ಚ ಸೋಮ ಜಾಗೃತಂ ।
ರಕ್ಷೋಭ್ಯೋ ವಧಮಸ್ಯತಮಶನಿಂ ಯಾತುಮದ್ಭ್ಯಃ ॥ ೨೫ ॥

। ಪದಪಾಠಃ ।

ಪ್ರತಿ । ಚಕ್ಷ್ವ । ವಿ । ಚಕ್ಷ್ವ । ಇಂದ್ರಃ । ಚ । ಸೋಮ । ಜಾಗೃತಂ ।
ರಕ್ಷಃऽಭ್ಯಃ । ವಧಂ । ಅಸ್ಯತಂ । ಅಶನಿಂ ಯಾತುಮತ್ऽಭ್ಯಃ ॥ ೨೫ ॥

। ಸಾಯಣಭಾಷ್ಯಂ ।

ಉಪಾಕರಣೋತ್ಸರ್ಜನಯೋರ್ಮಂಡಲಾದ್ಯಂತಹೋಮೇ ಪ್ರತಿ ಚಕ್ಷ್ವೇತ್ಯೇಷಾ । ಸೂತ್ರಿತಂ ಚ । ಯೋ ನಃ ಸ್ವೋ ಅರಣಃ ಪ್ರತಿ ಚಕ್ಷ್ವ । ಆ. ಗೃ. ೩-೫-೭ । ಇತಿ ॥

ಹೇ ಸೋಮ ತ್ವಮಿಂದ್ರಶ್ಚ ಪ್ರತಿ ಚಕ್ಷ್ಟ್ಯಂ । ಪ್ರತ್ಯೇಕಂ ಪಶ್ಯ ರಾಕ್ಷಸಾನ್ । ತಥಾ ವಿ ಚಕ್ಷ್ಟ್ಯಂ । ವಿವಿಧಂ ಪಶ್ಯ । ಯಥಾಸ್ಮಾನ್ನ ಬಾಧೇರನ್ ತಥಾ ಪಶ್ಯೇತ್ಯರ್ಥಃ । ಯುವಾಂ ಚ ಸಂಹಿತೌ ಜಾಗೃತಂ । ಜಾಗರೂಕೌ ರಕ್ಷೋವಧೋದ್ಯುಕ್ತೌ ಭವತಂ । ಯಾತುಮದ್ಭ್ಯಃ ಹಿಂಸಾವದ್ಭ್ಯಃ ರಕ್ಷೋಭ್ಯೋಽ- ಶನಿಮಶನಿರೂಪಂ ವಧಮಾಯುಧಮಸ್ಯತಂ । ಕ್ಷಿಪತಂ ॥

॥ ಪ್ರತಿಪದಾರ್ಥ ॥

ಸೋಮ—ಎಲೈ ಸೋಮದೇವನೇ (ನೀನೂ) । ಇಂದ್ರಶ್ಚ—ಇಂದ್ರನೂ । ಪ್ರತಿ ಚಕ್ಷ್ಟ್ಯಂ—ಪ್ರತ್ಯೇಕವಾಗಿ (ರಾಕ್ಷಸರ ಕೃತ್ಯಗಳನ್ನು) ನೋಡಿರಿ । ವಿ ಚಕ್ಷ್ಟ್ಯಂ—ಅವರ ಕೃತ್ಯಗಳನ್ನು ವಿಮರ್ಶಿಸಿ ನೋಡಿರಿ । ಜಾಗೃತಂ— (ಅವರು ನಮ್ಮನ್ನು ಹಿಂಸಿಸದಂತೆ) ಎಚ್ಚರದಿಂದ ನೋಡಿಕೊಳ್ಳಿರಿ । ಯಾತುಮದ್ಭ್ಯಃ—ಹಿಂಸಾಕಾರಕರಾದ । ರಕ್ಷೋಭ್ಯಃ—ರಾಕ್ಷಸರ ಮೇಲೆ । ಅಶನಿಂ—ವಜ್ರ ರೂಪವಾದ । ವಧಂ—ಆಯುಧವನ್ನು । ಅಸ್ಯತಂ— ಪ್ರಯೋಗಿಸಿರಿ.

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನೂ ಮತ್ತು ಇಂದ್ರನೂ ಸಹ ರಾಕ್ಷಸರ ಕೃತ್ಯಗಳನ್ನು ಪ್ರತ್ಯೇಕವಾಗಿ ವಿಮರ್ಶಿಸಿ ನೋಡಿರಿ. ಅವರು ನಮ್ಮನ್ನು ಹಿಂಸಿಸದೇ ಇರುವಂತೆ ಎಚ್ಚರದಿಂದ ನೋಡಿಕೊಳ್ಳಿರಿ. ಅದೇ ರಾಕ್ಷಸರಮೇಲೆ ವಧಸಾಧನವಾದ ವಜ್ರಾಯುಧವನ್ನು ಪ್ರಯೋಗಿಸಿರಿ.

## English Translation

Soma, you and Indra severally watch (the Rakshasas), be wary, be vigilant; hurl the thunderbolt at the malignant Rakshasas.

॥ ವಿಶೇಷವಿಷಯಗಳು ॥

ಉತ್ಸರ್ಜನ ಮತ್ತು ಉಪಾಕರ್ಮಗಳಲ್ಲಿ ಮಾಡುವ ಪ್ರಧಾನಹೋಮದಲ್ಲಿ ಪ್ರತಿ ಚಕ್ಷ್ವ ಎಂಬ ಈ ಋಕ್ಕನ್ನು ಮಂಡಲಾಂತ್ಯಋಕ್ಕನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—ಯೋ ನಃ ಸ್ವೋ ಅರಣಃ ಪ್ರತಿ ಚಕ್ಷ್ವ ಎಂಬ ಸೂತ್ರದಿಂದ (ಆ. ಗೃ. ಸೂ. ೩-೫-೭) ವಿವೃತವಾಗಿರುವುದು.

ಈ ಮಂಡಲದ ಸೂಕ್ತಗಳ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರಗಳು.—

೩೫ ನೇ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರಗಳು—

ಶಂವತೀಃ ಪಾರಯಂತ್ಯೇತೇ ತಂ ಪೃಚ್ಛಂತಿ ವಚೋ ಯುಜಾ ।
ಅಧ್ವಾರಂ ತಂ ಯಮಾಕೇತುಂ ಯ ಏವೇದಮಿತಿ ಬ್ರವತ್ ॥ ೧ ॥

ಭಾಸಾಕೇತುಂ ಪರಿಸ್ರುತಂ ಭಾರತೀರ್ಬ್ರಹ್ಮವರ್ಧನೀಃ ।
ಸಂಜಾನಾನಾ ಮಹೀ ಮಾತಾ ಯ ಏವೇದಮಿತಿ ಬ್ರವತ್ ॥ ೨ ॥

ಇಂದ್ರಸ್ತ್ವಂ ಕಿರಿ ವಿಭುಂ ಪ್ರಭುಂ ಭಾನುನೇಯಂ ಸರಸ್ವತೀಂ ।
ಯೇನ ಸೂರ್ಯಮರೋಚಯದ್ಯೇನೇಮೇ ರೋದಸೀ ಉಭೇ ॥ ೩ ॥

ಜುಷಸ್ವಾಗ್ನೇ ಅಂಗಿರಃ ಕಾಣ್ವಂ ಮೇಧ್ಯಾತಿಥಿಂ ।
ಮಾ ತ್ವಾ ಸೋಮಸ್ಯ ಬರ್ಬೃಹತ್ ಸುತಸ್ಯ ಮಧುಮತ್ತಮಃ ॥ ೪ ॥

ತ್ವಮಗ್ನೇ ಅಂಗಿರಃ ಕೋಚಸ್ವ ದೇವವೀತಮಃ ।
ಆ ಶಂತಮ ಶಂತಮಾಭಿರಭಿಷ್ಟಿಭಿಃ ಶಾಂತಿಃ ಸ್ವಸ್ತಿಮಕುರ್ವತ ॥ ೫ ॥

ಶಂ ನಃ ಕನಿಕ್ರದತ್ ದೇವಃ ಪರ್ಜನ್ಯೋ ಅಭಿ ವರ್ಷತು ।
ಶಂ ನೋ ದ್ಯಾವಾಪೃಥಿವೀ ಶಂ ಪ್ರಜಾಭ್ಯಃ ಶಂ ನ ಏಧಿ ದ್ವಿಪದೇ ಶಂ ಚತುಷ್ಪದೇ ॥೬॥

೫೫ ನೇ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರಗಳು—

ಸ್ವಪ್ನ ಸ್ವಪ್ನಾಧಿಕರಣೇ ಸರ್ವಂ ನಿ ಷ್ವಾಪಯಾ ಜನಂ ।
ಆಸೂರ್ಯಮನ್ಯಾನ್ತ್ಸ್ವ ಪಯಾವ್ಯುಷಂ ಜಾಗ್ರಿಯಾಮಹಂ ॥ ೧ ॥

ಅಜಗರೋ ನಾಮ ಸರ್ಪಃ ಸರ್ಪಿರವಿಷೋ ಮಹಾನ್ ।
ತಸ್ಮಿನ್ ಹಿ ಸರ್ಪಃ ಸುಧಿತಸ್ತೇನ ತ್ವಾ ಸ್ವಾಪಯಾಮಿ ॥ ೨ ॥

ಸರ್ಪಃ ಸರ್ಪೋ ಅಜಗರಃ ಸರ್ಪಿರವಿಷೋ ಮಹಾನ್ ।
ತಸ್ಯ ಸರ್ಪಾತ್ಸಿಂಧವಸ್ತಸ್ಯ ಗಾಧಮಶೀಮಹಿ ॥ ೩ ॥

ಕಾಳಿಕೋ ನಾಮ ಸರ್ಪೋ ನವನಾಗಸಹಸ್ರಬಳಃ ।
ಯಮುನಹ್ರದೇ ಹ ಸೋ ಜಾತೋ ೩ ಯೋ ನಾರಾಯಣವಾಹನಃ ॥ ೪ ॥

ಯದಿ ಕಾಳಿಕದೂತಸ್ಯ ಯದಿ ಕಾಃಕಾಳಿಕಾದ್ಭಯಾತ್ ।
ಜನ್ಮಭೂಮಿಮತಿಕ್ರಾಂತೋ ನಿರ್ವಿಷೋ ಯಾತಿ ಕಾಳಿಕಃ ॥ ೫ ॥

ಆ ಯಾಹೀಂದ್ರ ಪಥಿಭಿರೀಳಿತೇಭಿರ್ಯಜ್ಞಮಿಮಂ ನೋ ಭಾಗಧೇಯಂ ಜುಷಸ್ವ ।
ತೃಪ್ತಾಂ ಜಹುರ್ಮಾತುಳಸ್ಯೇವ ಯೋಷಾ ಭಾಗಸ್ತೇ ಪೈತೃಷ್ವಸೇಯೀ ವಪಾಮಿವ ॥೬॥

ಯಶಸ್ಕರಂ ಬಲವಂತಂ ಪ್ರಭುತ್ವಂ ತಮೇವ ರಾಜಾಧಿಪತಿರ್ಬಭೂವ ।
ಸಂಕೀರ್ಣನಾಗಾಶ್ವಪತಿರ್ನರಾಣಾಂ ಸುಮಂಗಲ್ಯಂ ಸತತಂ ದೀರ್ಘಮಾಯುಃ ॥ ೭ ॥

ಕರ್ಕೋಟಕೋ ನಾಮ ಸರ್ಪೋ ಯೋ ದೃಷ್ಟೀವಿಷ ಉಚ್ಯತೇ ।
ತಸ್ಯ ಸರ್ಪಸ್ಯ ಸರ್ಪತ್ವಂ ತಸ್ಮೈ ಸರ್ಪ ನಮೋಽಸ್ತು ತೇ ॥ ೮ ॥

ಯೇಽದೋ ರೋಚನೇ ದಿವೋ ಯೇ ವಾ ಸೂರ್ಯಸ್ಯ ರಶ್ಮಿಷು ।
ಯೇಷಾಮಪ್ಸು ಸದಸ್ಕೃತಂ ತೇಭ್ಯಃ ಸರ್ಪೇಭ್ಯೋ ನಮಃ ॥ ೯ ॥

ಯಾ ಇಷವೋ ಯಾತುಧಾನಾನಾಂ ಯೇ ವಾ ವನಸ್ಪತೀನನು ।
ಯೇ ವಾವಟೇಷು ಶೇರತೇ ತೇಭ್ಯಃ ಸರ್ಪೇಭ್ಯೋ ನಮಃ ॥ ೧೦ ॥

ನಮೋ ಅಸ್ತು ಸರ್ಪೇಭ್ಯೋ ಯೇ ಕೇ ಚ ಪೃಥಿವೀಮನು ।
ಯೇ ಅಂತರಿಕ್ಷೇ ಯೇ ದಿವಿ ತೇಭ್ಯಃ ಸರ್ಪೇಭ್ಯೋ ನಮಃ ॥ ೧೧ ॥

ಉಗ್ರಾಯುಧಾಃ ಪ್ರಮತಿನಃ ಪ್ರವೀರಾಃ ಮಾಯಾವಿನೋ ಬಲಿನೋ ಮಿಚ್ಯಮಾನಾಃ ।
ಯೇ ದೇವಾನಸುರಾಃ ಪರಾಭವನ್ ತಾಂಸ್ತ್ವಂ ವಜ್ರೇಣ ಮಘವನ್ನಿವಾರಯ ॥ ೧೨॥

೯೬ ನೇ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರಗಳು—

ಯಸ್ಯ ವ್ರತಂ ಪಶವೋ ಯಂತಿ ಸರ್ವೇ ಯಸ್ಯ ವ್ರತಮುಪತಿಷ್ಠಂತೆ ಆಪಃ ।
ಯಸ್ಯ ವ್ರತೇ ಪುಷ್ಟಿಪತಿರ್ನಿವಿಷ್ಟಸ್ತಂ ಸರಸ್ವಂತಮುವಸೇ ಹುವೇಮ ॥ ೧ ॥

೧೦೩ ನೇ ಸೂಕ್ತದ ಕೊನೆಯಲ್ಲಿ ಪಠಿಸಬೇಕಾದ ಪರಿಶಿಷ್ಟಮಂತ್ರ

ಉಪಪ್ಲವತ ಮಂಡೂಕಿ ವರ್ಷಮಾ ವದ ತಾದುರಿ ।
ಮಧ್ಯೇ ಹ್ರದಸ್ಯ ಪ್ಲವಸ್ಯ ನಿಗೃಹ್ಯ ಚತುರಃ ಪದಃ ॥ ೧ ॥

ಸಪ್ತಮಂ ಮಂಡಲಂ ಸಮಾಪ್ತಂ



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀ ಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲ-
ಸಾಮ್ರಾಜ್ಯಧುರಂಧರೇಣ ಸಾಯಣಾಮಾತ್ಯೇನ ವಿರಚಿತೇ ಮಾಧವೀಯೇ
ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಸಪ್ತಮಮಂಡಲಂ ಸಮಾಪ್ತಂ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯಲ್ಲಿ
ಏಳನೆಯ ಮಂಡಲವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ



## ಅಥಾಷ್ಟಮಂ ಮಂಡಲಂ

## ಎಂಟನೆಯ ಮಂಡಲವು

---

## ಪೀಠಿಕೆ.

---

ಋಗ್ವೇದಸಂಹಿತೆಯಲ್ಲಿರುವ ಒಟ್ಟು ಹತ್ತು ಮಂಡಲಗಳಲ್ಲಿ ಒಂಭತ್ತನೆಯ ಮಂಡಲದ ಸೂಕ್ತಗಳಿಗೆಲ್ಲಾ ಪವಮಾನಃ ಸೋಮಃ ಎಂಬುದೇ ದೇವತೆಯಾಗಿರುವುದು. ಈ ಮಂಡಲದಲ್ಲಿ ಬೇರೆ ದೇವತೆಯ ಸ್ತುತಿಯಿರುವುದಿಲ್ಲ. ಆದರೆ ಉಳಿದ ಒಂಭತ್ತು ಮಂಡಲಗಳಲ್ಲಿ ಸೋಮದೇವತೆಯನ್ನು ಬಿಟ್ಟು ಉಳಿದ ಎಲ್ಲಾ ದೇವತೆಗಳ ಸ್ತುತಿಯೂ ಇದೆ. ಈ ಮಂಡಲಗಳ ಸೂಕ್ತಗಳನ್ನು ವಿಂಗಡಿಸುವಾಗ ಅಗ್ನಿಯನ್ನು ಸ್ತುತಿಸುವ ಸೂಕ್ತಗಳಿಂದಲೇ ಎಲ್ಲಾ ಮಂಡಲಗಳೂ ಪ್ರಾರಂಭವಾಗುವುವು. ಎಂದರೆ ಮೊದಲನೆಯ ಸೂಕ್ತವೂ ಅದರ ಮುಂದಿನ ಕೆಲವು ಸೂಕ್ತಗಳೂ ಅಗ್ನಿಪರವಾಗಿಯೇ ಇರುವವು. ಆದರೆ ಈ ಎಂಟನೆಯ ಮಂಡಲದಲ್ಲಿ ಇದಕ್ಕೆ ವ್ಯತಿರಿಕ್ತವಾಗಿ ಪ್ರಾರಂಭದಲ್ಲಿ ಇಂದ್ರದೇವತಾಕವಾದ

ಸೂಕ್ತದಿಂದಲೇ ಮಂಡಲವು ಪ್ರಾರಂಭವಾಗಿರುವುದು. ಇದು ಈ ಮಂಡಲದ ವೈಶಿಷ್ಟ್ಯವು ಮತ್ತು ಈ ಮಂಡಲದಲ್ಲಿ ೯೯ ಸೂಕ್ತಗಳಾದ ಮೇಲೆ ೧೧ ಸೂಕ್ತಗಳಿಂದ ಕೂಡಿರುವ ವಾಲಖಿಲ್ಯವೆಂಬ ಭಾಗವಿದೆ. ಈ ವಾಲಖಿಲ್ಯಸೂಕ್ತಗಳಲ್ಲಿ ಒಟ್ಟು ೮೦ ಋಕ್ಕುಗಳಿವೆ. ಇವುಗಳನ್ನು ಪರಿಶಿಷ್ಟಮಂತ್ರಗಳೆಂದು ಕೆಲವರು ಭಾವಿಸುವರು. ಈ ಅಭಿಪ್ರಾಯದಿಂದಲೇ ಸಾಯಣಾಚಾರ್ಯರು ಈ ಸೂಕ್ತಗಳಿಗೆ ಭಾಷ್ಯವನ್ನು ಬರೆದಿರುವುದಿಲ್ಲ. ಆದರೆ ಪೂನಾನಗರದ ವೈದಿಕಸಂಶೋಧನ ಮಂಡಲವೆಂಬ Vedic Research Institute ಸಮಿತಿಯಿಂದ ಪ್ರಕಟವಾದ ಋಗ್ವೇದಸಾಯಣಭಾಷ್ಯದಲ್ಲಿ ಈ ವಾಲಖಿಲ್ಯಸೂಕ್ತಗಳಿಗೆ ಭಾಷ್ಯವನ್ನು ಬರೆದಿದಾರೆ. ಆ ಪುಸ್ತಕದ ಸೂಚನೆಯಲ್ಲಿ ಹೇಳಿರುವಂತೆ ಕಾಶಿಯಲ್ಲಿ ಒಬ್ಬ ಪಂಡಿತರ ಬಳಿ ದೊರೆತ ಹಸ್ತಲಿಖಿತಪ್ರತಿಯಲ್ಲಿ ಈ ಸೂಕ್ತಗಳ ಭಾಷ್ಯವಿದ್ದುದನ್ನು ಪರಿಶೋಧಿಸಿ ಪ್ರಕಟಿಸಲಾಗಿದೆ. ಇದನ್ನು ಯಾರು ಬರೆದಿರುವರೆಂಬುದು ಗೊತ್ತಾಗುವುದಿಲ್ಲ ಎಂದು ತಿಳಿಸಿದಾರೆ. ಬೇರೆ ಯಾವ ಭಾಷ್ಯವೂ ದೊರೆಯುವುದಿಲ್ಲವಾದ್ದರಿಂದ ಇದನ್ನೇ ನಾವೂ ಇಲ್ಲಿ ಕೊಟ್ಟಿದೇವೆ. ಐದನೆಯ ಮಂಡಲದಲ್ಲಿರುವಂತೆ ಈ ಮಂಡಲ ದಲ್ಲಿಯೂ ಪ್ರಸಿದ್ಧರೂ, ಸೂಕ್ತದ್ರಷ್ಟೃಗಳೂ ಆದ ಅನೇಕ ಋಷಿಗಳಿದಾರೆ. ಇವರ ವಿಷಯವಾಗಿ ಹೆಚ್ಚು ಸಂಗತಿ ಗಳು ತಿಳಿಯಬರುವುದಿಲ್ಲವಾದ್ದರಿಂದ ಕಣ್ವಋಷಿಯ ಪರಿಚಯವನ್ನು ಮಾತ್ರ ಬರೆದು ಉಳಿದ ಈ ಮಂಡಲದ ಋಷಿ ಗಳಿಂದ ದೃಷ್ಟವಾದ ಸೂಕ್ತ ಮತ್ತು ಋಕ್ಕುಗಳನ್ನು ಮಾತ್ರ ಇಲ್ಲಿ ಕೊಟ್ಟಿದೇವೆ.

## ಕಣ್ವ ಋಷಿಯ ಪರಿಚಯ

ಋಗ್ವೇದಾದಿ ಸಂಹಿತೆಗಳಲ್ಲಿಯೂ ಬ್ರಾಹ್ಮಣಾದಿಗಳಲ್ಲಿಯೂ ಕಣ್ವನ ಹೆಸರು ಅತ್ಯಂತ ಪ್ರಸಿದ್ಧವಾದುದಾಗಿದೆ. **ಯುವಂ ಕಣ್ವಾಯ ನಾಸತ್ಯಾ** (೮-೫-೨೩) ಇತ್ಯಾದಿಯಾಗಿ ಕಣ್ವನಿಗೆ ದೈವಾನುಗ್ರಹವಿದ್ದುದೂ, ಕಣ್ವನ ಮಂತ್ರ ದ್ರಷ್ಟೃತ್ವವೂ ಅನೇಕ ಸಂದರ್ಭಗಳಲ್ಲಿ ಪ್ರಶಂಸಿತವಾಗಿವೆ ಋಕ್ಸಂಹಿತೆಯ ಎಂಟನೆಯ ಮಂಡಲವು ಕಾಣ್ವಮಂಡಲ ವೆಂದೇ ಪ್ರಖ್ಯಾತವಾಗಿದೆ. ಈ ಮಂಡಲಕ್ಕೆ ಈ ಋಷಿಯ ಹೆಸರೇ ಪ್ರಸಿದ್ಧವಾಗಲು ಒಂದು ಐತಿಹಾಸಿಕ ಸನ್ನಿವೇಶವು ಈ ರೀತಿ ತಿಳಿಸಲ್ಪಟ್ಟಿದೆ

> **ಕಣ್ವಶ್ಚೈವ ಪ್ರಗಾಥಶ್ಚ ಘೋರಪುತ್ರೌ ಬಭೂವತುಃ ।**
> **ಗುರುಣಾ ತಾವನುಜ್ಞಾತಾವೂಷತುಃ ಸಹಿತೌ ವನೇ ॥**

(ಬೃ. ದೇ. ೬-೩೫)

**ಕಣ್ವ** ಮತ್ತು **ಪ್ರಗಾಥ** ಎಂಬ ಇಬ್ಬರೂ ಘೋರನೆಂಬ ಋಷಿಯ ಪುತ್ರರು. ಇವರು ಒಟ್ಟಿಗೆ ಒಂದೇ ಗುರುವಿನಲ್ಲಿ ವಿದ್ಯಾಭ್ಯಾಸವನ್ನು ಮಾಡಿ ಮುಗಿಸಿದ ನಂತರ ಗುರುವು ಇವರನ್ನು ಆಶೀರ್ವದಿಸಿ ಕಳುಹಿಸಿಕೊಟ್ಟನು. ಆಗ ಇವರಿಬ್ಬರೂ ಒಟ್ಟಿಗೆ ಒಂದೇ ವನದಲ್ಲಿ ವಾಸಮಾಡುತ್ತಿದ್ದರು.

> **ವಸತೋಸ್ತು ತಯೋಸ್ತತ್ರ ಕಣ್ವಪತ್ನ್ಯಾಃ ಶಿರಃ ಸ್ವಪನ್ ।**
> **ಕೃತ್ವಾ ಕನೀಯಾನ್ ಕಣ್ವಸ್ಯ ಉತ್ಸಂಗೇ ನಾನ್ವಬುಧ್ಯತ ॥ ೩೬ ॥**

ಕಣ್ವ ಮತ್ತು ಪ್ರಗಾಥ ಎಂಬಿಬ್ಬರೂ ಒಟ್ಟಿಗೆ ವನದಲ್ಲಿ ವಾಸಮಾಡುತ್ತಿರುವ ಕಾಲದಲ್ಲಿ ಒಂದು ಸಲ ಚಿಕ್ಕವನಾದ ಪ್ರಗಾಥನು ಕಣ್ವಪತ್ನಿಯ ತೊಡೆಯ ಮೇಲೆ ಮಲಗಿ ನಿದ್ರೆಮಾಡಿಬಿಟ್ಟನು. ಬಹಳಕಾಲ ಇವನಿಗೆ ಎಚ್ಚರವಾಗಲೇ ಇಲ್ಲ. ಆಗ ದೊಡ್ಡವನಾದ ಕಣ್ವನು ಇದನ್ನು ಕಂಡನು.

ಶಪ್ತ್ಕಾಮಸ್ತು ತಂ ಕಣ್ವಃ ಕ್ರುದ್ಧಃ ಪಾಪಾಭಿಶಂಕಯಾ |
ಬೋಧಯಾಮಾಸ ಪಾದೇನ ದಿಧಕ್ಷನ್ನಿವ ತೇಜಸಾ || ೩೭ ||

ಇದನ್ನು ನೋಡಿದಾಗ ಕಣ್ವನಿಗೆ ಪ್ರಗಾಥನ ವಿಷಯದಲ್ಲಿ ಮಹಾಕೋಪವುಂಟಾಯಿತು. ಪ್ರಗಾಥನಲ್ಲಿ ಪಾಪಕರ್ಮ ವನ್ನು ಶಂಕಿಸಿ ಅವನನ್ನು ಶಪಿಸಬೇಕೆಂದು ಸಂಕಲ್ಪಿಸಿದನು. ಆಗ ಕಾಲಿನಿಂದ ಅವನನ್ನು ಒದ್ದು ಎಬ್ಬಿಸಿ ಅವನನ್ನು ಸುಟ್ಟುಬಿಡುವಂತೆ ತನ್ನ ತೇಜಸ್ಸಿನಿಂದ ಕೂಡಿದ ಕ್ರೂರ ದೃಷ್ಟಿಯಿಂದ ಅವನನ್ನು ನೋಡಿದನು.

ವಿದಿತ್ವಾ ತಸ್ಯ ತಂ ಭಾವಂ ಪ್ರಗಾಥಃ ಪ್ರಾಂಜಲಿಸ್ಥಿತಃ |
ಮಾತೃತ್ವೇ ಚ ಪಿತೃತ್ವೇ ಚ|ವರಯಾಮಾಸ ತಾವುಭೌ || ೩೮ ||

ಕಣ್ವನ ಈ ಶಂಕಾಪೂರಿತವೂ, ಕೋಪಪೂರಿತವೂ ಆದ ದೃಷ್ಟಿಯಿಂದ ಅವನ ಮನಸ್ಸಂಕಲ್ಪವನ್ನರಿತ ಪ್ರಗಾಥನು ತನ್ನ ಕೈಜೋಡಿಸಿ ಪ್ರಣಾಮಮಾಡುತ್ತಾ ತನ್ನ ನಿಷ್ಕಲ್ಮಷವಾದ ವ್ಯವಹಾರವನ್ನು ಅವನಿಗೆ ಸೂಚಿಸಿ ಕಣ್ವನೂ ಅವನ ಪತ್ನಿಯೂ ತನಗೆ ತಂದೆತಾಯಿಗಳಂತಿರುವಾಗ ತಾನು ಆ ಪಾಪಕಾರ್ಯಕ್ಕೆಂದೂ ಪ್ರಯತ್ನಿಸಲಾರನೆಂದು ಭಕ್ತಿಪುರಃಸರ ವಾಗಿ ತಿಳಿಸಿದನು

ಸ ಘೌರೋ ವಾಥ ಕಾಣ್ವೋ ವಾ ವಂಶಜೈರ್ಬಹುಭಿಃ ಸಹ |
ದದರ್ಶಾನ್ಯೈ್ಶ್ಚ ಸಹಿತ ಋಷಿರ್ಮಂಡಲಮಷ್ಟಮಂ || ೩೯ ||

ಘೋರಪುತ್ರನೆಂದೂ ಅಥವಾ ಕಣ್ವಪುತ್ರನೆಂದೂ ಪ್ರಸಿದ್ಧನಾದವನೂ ಮಂತ್ರದ್ರಷ್ಟೃವೂ ಆದ ಈ ಋಷಿಯು ಅದೇ ಕಣ್ವವಂಶದ ಇತರ ಋಷಿಗಳೊಡಗೂಡಿ ಋಕ್ಸಂಹಿತೆಯ ಎಂಟನೆಯ ಮಂಡಲದ ನಿರ್ಮಾಪಕನಾದನು ಎಂದು ಬೃಹ ದ್ದೇವತೆಯಲ್ಲಿ ಋಕ್ಸಂಹಿತೆಯ ಎಂಟನೆಯ ಮಂಡಲಕ್ಕೆ ಕಾಣ್ವಮಂಡಲವೆಂಬ ಹೆಸರು ಪ್ರಸಿದ್ಧವಾದ ಸನ್ನಿವೇಶವು ತಿಳಿಸಲ್ಪಟ್ಟಿದೆ.

ಆದರೆ, ಅನೇಕ ಸಂದರ್ಭಗಳಲ್ಲಿ ಕಣ್ವಪದವು ಅಂಕಿತನಾಮವನ್ನು ನಿರ್ದೇಶಿಸುವುದಿಲ್ಲವೆಂದು ತಿಳಿಯುತ್ತದೆ. ಕಣ್ವಶಬ್ದಕ್ಕೆ ಸ್ತುತಿಕರ್ತನೆಂದೂ, ಮೇಧಾವಿಯೆಂದೂ ಸಂದರ್ಭಾನುಸಾರವಾಗಿ ಅರ್ಥಮಾಡಿದ್ದಾರೆ. ಅಂತಹ ಸಂದರ್ಭಗಳಲ್ಲಿ ಕಣ್ವಶಬ್ದಕ್ಕೆ ಕಣ್ವಋಷಿಯೆಂದು ಹೇಳಲಾಗುವುದಿಲ್ಲ. ಉದಾಹರಣೆಗೆ—

ಈಳತೇ ತ್ವಾಮವಸ್ಯವಃ ಕಣ್ವಾಸೋ ವೃಕ್ತಬರ್ಹಿಷಃ | ಹವಿಷ್ಮಂತೋ ಅರಂಕೃತಃ ||
(ಋ. ಸಂ. ೧-೧೪-೫)

ಎಂಬಲ್ಲಿ ಕಣ್ವಶಬ್ದಕ್ಕೆ ಸಾಯಣರು ಈ ರೀತಿ ವಿವರಣೆಯನ್ನು ತಿಳಿಸಿದ್ದಾರೆ. "ಕಣಶಬ್ದಾರ್ಥಃ | ಕಣಂತಿ ಧ್ವನಂತಿ ಸ್ತೋತ್ರಾದಿಪಾಠೇನೇತಿ ಕಣ್ವಾಃ ಋತ್ವಿಜಃ" ಶಬ್ದವೆಂಬ ಅರ್ಥವನ್ನು ಕೊಡತಕ್ಕ ಕಣ್ ಧಾತುವಿನಿಂದ ಕಣ್ವ ಶಬ್ದವು ನಿಷ್ಪನ್ನವಾಗಿದೆ. ಸ್ತುತಿರೂಪವಾದ ಶಬ್ದವನ್ನು ಮಾಡುವುದರಿಂದ ಋತ್ವಿಕ್ಕುಗಳಿಗೆ ಈ ಹೆಸರು ಪ್ರಸಿದ್ಧ ವಾಗಿದೆಯೆಂದು ಸಾಯಣರು ತಿಳಿಸುತ್ತಾರೆ. 'ವ' ಎಂಬ ಪ್ರತ್ಯಯವು 'ಅಶ್' ಧಾತುವಿನೊಂದಿಗೆ ಸೇರಿ "ಅಶ್ವ" ಎಂದಾಗುವಂತೆ, "ಕಣ್" ಧಾತುವಿಗೆ "ವ" ಪ್ರತ್ಯಯವು ಸೇರಿ "ಕಣ್ವ" ಪದವಾಗಿದೆಯೆಂದು ವಿವರಿಸಿದೆ. ಇದ ರಂತೆಯೇ,

" ಕಣ್ವಾಸಸ್ತ್ವಾ ಸುತಸೋಮಾಸ ಇಂಧತೇ " (೧-೪೪-೮)

" ದಿವಸ್ಕಣ್ವಾಸ ಇಂದವೋ ವಸು ಸಿಂಧೂನಾಂ ಪದೇ " (೧-೪೬-೯)

ಇತ್ಯಾದಿ ಸ್ಥಳಗಳಲ್ಲೂ ಇದೇ ವಿಧವಾಗಿ ಅರ್ಥಮಾಡಿದೆ. ಈ ಸ್ತುತಿಕರ್ತರೇ ಕಣ್ವಪುತ್ರರೆಂದು ತಿಳಿಯಬೇಕು ಎಂದು ಆಕ್ಷೇಪಿಸಿದರೆ, ಅದಕ್ಕೆ ಉತ್ತರವಾಗಿ " ಕಣ್ವಪುತ್ರಾಃ ಯದ್ವಾ ಮೇಧಾವಿನಃ ಋತ್ವಿಜಃ " ಎಂದು ವಿವರಿಸಿದ್ದಾರೆ (೧-೪೬-೯) ಎಂದರೆ, ಕಣ್ವರೆಂದರೆ ಕಣ್ವ ಅಥವಾ ಕಣ್ವಪುತ್ರರೇ ಆಗಿರಬೇಕೆಂಬ ನಿಯಮವಿಲ್ಲ. ಹೀಗೆಯೇ ಸುಮಾರು ಹನ್ನೆರಡು ಸನ್ನಿವೇಶಗಳಲ್ಲಿ ಸಾಯಣರು ಈ ರೀತಿ ಅರ್ಥಮಾಡಿದ್ದಾರೆ. ಇಂತಹ ಸಂದರ್ಭಗಳಲ್ಲಿ ಸಾಯಣರ ವಿವರಣೆಯು ಉಚಿತವಾಗಿರುವಂತೆಯೇ ತೋರುತ್ತದೆ.

ಋಕ್ಸಂಹಿತೆಯಲ್ಲಿ ಸುಮಾರು ಅರವತ್ತೈದು ಮಂತ್ರಗಳಲ್ಲಿ ಕಣ್ವಶಬ್ದದ ಸಾಕ್ಷಾತ್ಪ್ರಯೋಗವಿರುತ್ತದೆ. ಇವುಗಳಲ್ಲಿ ೨೨ ಮಂತ್ರಗಳು ಇಂದ್ರನನ್ನುದ್ದೇಶಿಸಿಯೂ, ೧೮ ಅಶ್ವಿನೀದೇವತೆಗಳನ್ನು ನಿರ್ದೇಶಿಸಿಯೂ, ೧೨ ಮಂತ್ರಗಳು ಅಗ್ನಿಪ್ರಶಂಸಕವಾಗಿಯೂ, ೭ ಮಂತ್ರಗಳು ಮರುದ್ದೇವತಾಕವಾಗಿಯೂ, ೨ ಮಂತ್ರಗಳು ಉಷಸ್ಸನ್ನು ಸ್ತುತಿಸುವುವಾಗಿಯೂ, ೧ ಇಂದ್ರಾಗ್ನೀ ಮತ್ತು ೧ ವಿಶ್ವೇದೇವತೆಗಳನ್ನು ಸ್ತುತಿಸುವುದಾಗಿಯೂ ಇರುತ್ತದೆ.

ಅಗ್ನಿಯನ್ನು ಪ್ರಶಂಸಿಸುವ ಮಂತ್ರಗಳಲ್ಲಿ ಕೇವಲ ಅಗ್ನಿಯ ಪ್ರಜ್ವಲನಕ್ರಮವನ್ನು ಸ್ತುತಿಸಿದೆ. ಕಣ್ವರಿಂದ ಪ್ರಜ್ವಲಿತನಾದ ಅಗ್ನಿಯು ಅತಿಯಾಗಿ ಪ್ರಕಾಶಿಸುತ್ತಾನೆಂಬ ಸ್ತುತಿಯಿರುತ್ತದೆ. ಕಣ್ವರಿಂದ ಪ್ರಜ್ವಲಿತನಾದ ಅಗ್ನಿಯು ಕಣ್ವತಮನೆಂದೇ ಸ್ತುತಿಸಲ್ಪಟ್ಟಿದ್ದಾನೆ. ಉದಾಹರಣೆಗೆ—

"ಸ ಇದಗ್ನಿಃ ಕಣ್ವತಮಃ ಕಣ್ವಸಖಾರ್ಯಃ ಪರಸ್ಯಾಂತರಸ್ಯ ತರುಷಃ ||

(ಋ. ಸಂ. ೧೦-೧೧೫-೫)

**ಕಣ್ವತಮಃ** ಎಂಬುದು ಅಗ್ನಿಗೆ ವಿಶೇಷಣವಾಗಿದೆ. **ಕಣ್ವ**ಶಬ್ದಕ್ಕೆ ಸ್ತುತಿಕರ್ತನು ಎಂದೂ, **ಕಣ್ವತಮಃ** ಎಂಬುದಕ್ಕೆ ಅತಿಶಯವಾಗಿ ಸ್ತುತಿಸುವವನು ಎಂದೂ ಅರ್ಥ. ಇವನೇ **ಕಣ್ವಸಖನು** ಎಂದರೆ ಸ್ತುತಿಕರ್ತನಿಗೆ ಸಖನು ಎಂದೂ ಅರ್ಥಮಾಡಿದೆ.

ಸಾಧಾರಣವಾಗಿ ಇಂದ್ರಪರವಾಗಿರತಕ್ಕ ಸ್ತುತಿಗಳಲ್ಲೆಲ್ಲಾ ಕಣ್ವಶಬ್ದಕ್ಕೆ ಕಣ್ವಋಷಿ ಅಥವಾ ಕಣ್ವಗೋತ್ರೋತ್ಪನ್ನನಾದ ಋಷಿಯೆಂದೇ ಅರ್ಥವಾಗುತ್ತದೆ. ಅಲ್ಲದೇ ಈ ಋಷಿಯ ಮತ್ತು ಇವನ ವಂಶೋತ್ಪನ್ನರಾದ ಋಷಿಗಳ ಪ್ರಭಾವವನ್ನು ಸೂಚಿಸುವ ಸನ್ನಿವೇಶಗಳೂ ಅನೇಕವಾಗಿರುತ್ತವೆ. ಉದಾಹರಣೆಗೆ—

ಧೀಭಿಃ ಸಾತಾನಿ ಕಾಣ್ವಸ್ಯ ವಾಜಿನಃ ಪ್ರಿಯಮೇಧೈರಭಿದ್ಯುಭಿಃ |

ಷಷ್ಟಿಂ ಸಹಸ್ರಾನು ನಿರ್ಮಜಾಮಜೇ ನಿಯೂಥಾನಿ ಗವಾಮೃಷಿಃ ||

(ಋ. ಸಂ ೮-೪-೨೦)

ಎಂಬಲ್ಲಿ ಕಣ್ವಋಷಿಯ ಸ್ತುತಿಯ ಮಹಿಮೆಯು ವರ್ಣಿತವಾಗಿದೆ. ಈ ಮಹರ್ಷಿಯ ಸ್ತುತಿಯಿಂದ ಸಂತುಷ್ಟರಾದ ಯಜಮಾನರು ಅರವತ್ತು ಸಹಸ್ರಸಂಖ್ಯೆಯುಳ್ಳ ಉತ್ತಮವಾದ ಗೋವುಗಳನ್ನು ಕೊಟ್ಟರು ಎಂದು ಸ್ತುತಿಯ ಫಲವಾದ ಸಂತುಷ್ಟಿಯನ್ನೂ ಔದಾರ್ಯವನ್ನೂ ತಿಳಿಸಿದೆ. ಇದೇ ಅಲ್ಲದೇ, ಇತರ ಋಷಿಗಳು ಸಹ ತಮ್ಮ

ಕೃತಿಕೌಶಲ್ಯವನ್ನು ಕಣ್ವನ ಸ್ತುತಿಗಳಿಗೆ ಹೋಲಿಸಿಕೊಂಡಿರುವುದರಿಂದ ಕಣ್ವನ ರಚನಾಸಾಮರ್ಥ್ಯವು ಇದರಿಂದ ತಿಳಿಯುತ್ತದೆ.

**ಅಹಂ ಪ್ರತ್ನೇನ ಮನ್ಮನಾ ಗಿರಃ ಶುಂಭಾಮಿ ಕಣ್ವವತ್ । ಯೇನೇಂದ್ರಃ ಶುಷ್ಮಮಿದ್ದಧೇ ॥**

(ಋ. ಸಂ. ೮-೬-೧೧)

ಯಾವ ಕಣ್ವಋಷಿಯ ಸ್ತುತಿಯಿಂದ ಇಂದ್ರನು ಪ್ರೀತನಾದನೋ ಅಂತಹ ಋಷಿಯ ಕೃತಿಯಂತೆಯೇ ಉತ್ತಮವೂ ಧ್ಯಾನಾತ್ಮಕವೂ ಆದ ಸ್ತುತಿಯನ್ನು ನಾನು ನಿರ್ಮಿಸುತ್ತೇನೆ ಎಂದು ಕಣ್ವವಂಶೋತ್ಪನ್ನನಾದ ಇನ್ನೊಬ್ಬ ಋಷಿಯು ತಿಳಿಸುತ್ತಾನೆ.

**ಇತ್ಥಾ ಧೀವಂತಮದ್ರಿವಃ ಕಾಣ್ವಂ ಮೇಧ್ಯಾತಿಥಿಂ । ಮೇಷೋ ಭೂತೋಽಭಿ ಯನ್ನಯಃ ॥**

(ಋ ಸಂ. ೮-೨-೪೦)

ವಜ್ರಾಯುಧಧಾರಿಯಾದ ಇಂದ್ರನು ಕಣ್ವಪುತ್ರನಾದ ಮೇಧ್ಯಾತಿಥಿಯಲ್ಲಿಗೆ ಮೇಷರೂಪದಲ್ಲಿ ಎಂಬ ವರ್ಣನೆಯೂ ಕಣ್ವನ ಮತ್ತು ಕಣ್ವಗೋತ್ರೋತ್ಪನ್ನವಾದ ಋಷಿಗಳ ಮಾಹಾತ್ಮ್ಯವನ್ನು ತಿಳಿಸುತ್ತದೆ. " **ಕಣ್ವಾಸಸ್ತ್ವಾ ಬ್ರಹ್ಮಭಿಃ ಸ್ತೋಮವಾಹಸಃ** " (೮-೪-೨) ಇತ್ಯಾದಿ ವಾಕ್ಯಗಳು ಇಂದ್ರನಿಗೂ ಕಣ್ವರಿಗೂ ಇರುವ ನಿಕಟವಾದ ಸಂಬಂಧವನ್ನು ತಿಳಿಸುತ್ತದೆ. ಇಂದ್ರನು ಅನೇಕ ಸಂದರ್ಭಗಳಲ್ಲಿ ಕಣ್ವರ ಜೊತೆಯಲ್ಲಿಯೇ ಇರುವ ಅಂಶವೂ ತಿಳಿಯುತ್ತದೆ. " ಆ ತೂ ಷಿಂಚ ಕಣ್ವಮಂತಂ " (೮-೨-೨೨) ಇತ್ಯಾದಿಯಾಗಿ ಕಣ್ವಮಂತಂ ಎಂಬ ಪದವು ಇಂದ್ರನಿಗೆ ವಿಶೇಷಣವಾಗಿರುತ್ತದೆ. ಇಂತಹ ಸಂದರ್ಭಗಳು ಅನೇಕವಾಗಿವೆ.

ಕಣ್ವನಂತೆಯೇ, **ಪ್ರಸ್ಕಣ್ವನೂ** ಸಹ ಅಗ್ನ್ಯಾದಿಗಳನ್ನು ಪ್ರಶಂಸಿಸಿ ಸ್ತುತಿಗಳನ್ನು ನಿರ್ಮಿಸಿದ್ದಾನೆ. ಆದರೆ ಇಂತಹ ಪ್ರಶಂಸೆಗಳು ಎರಡು ಮಂತ್ರಗಳಲ್ಲಿ ಮಾತ್ರವಿರುತ್ತವೆ. ಇವುಗಳಲ್ಲಿ ಮೊದಲನೆಯದಾದ,

**ಪ್ರಿಯಮೇಧವದತ್ರಿವಜ್ಜಾತವೇದೋ ವಿರೂಪವತ್ ।**
**ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಂ ॥**

(೧-೪೫-೩)

ಎಂಬ ಮಂತ್ರದಲ್ಲಿ ಪ್ರಸ್ಕಣ್ವನು ಕಣ್ವಪುತ್ರನೆಂದು ತಿಳಿಯುತ್ತದೆ.

ಸಾಯಣರೂ ಸಹ ಕಣ್ವಪುತ್ರನೆಂದೇ ಅರ್ಥಮಾಡಿದ್ದಾರೆ. ಇಲ್ಲಿ ಮಂತ್ರದ್ರಷ್ಟೃವಾದ ಋಷಿಯು " ಪ್ರಿಯಮೇಧಾದಿಋಷಿಗಳ ಸ್ತುತಿಗಳನ್ನು ಅಗ್ನಿಯು ಸ್ವೀಕರಿಸಿದಂತೆ" ತನ್ನ ಸ್ತುತಿಗಳನ್ನೂ ಸ್ವೀಕರಿಸಬೇಕೆಂದು ಪ್ರಾರ್ಥಿಸಿದ್ದಾನೆ ಎರಡನೆಯದು ಇಂದ್ರನಿರ್ದಿಷ್ಟವಾದುದು.

**ತತ್ತ್ವಾ ಯಾಮಿ ಸುವೀರ್ಯಂ ತದ್ಬ್ರಹ್ಮ ಪೂರ್ವಚಿತ್ತಯೇ ।**
**ಯೇನಾ ಯತಿಭ್ಯೋ ಭೃಗವೇ ಧನೇ ಹಿತೇ ಯೇನ ಪ್ರಸ್ಕಣ್ವಮಾವಿಥ ॥**

(ಋ ಸಂ ೮-೩-೯)

ಯತಿ, ಭೃಗು ಇತ್ಯಾದಿಗಳಿಗೆಲ್ಲಾ ರಕ್ಷಣೆಯನ್ನು ನೀಡಿದ ಇಂದ್ರನು ಪ್ರಸ್ಕಣ್ವನಿಗೂ ರಕ್ಷಣೆಯನ್ನು ನೀಡಬೇಕೆಂದು ಪ್ರಾರ್ಥಿಸಿದೆ.

ಇದಲ್ಲದೇ, ಅನೇಕ ಸಂದರ್ಭಗಳಲ್ಲಿ ಕಣ್ವಶಬ್ದವು ಒಂದು ತಮೋಯುತವಾದ ಶಕ್ತಿಯೆಂಬರ್ಥದಲ್ಲೂ ಪ್ರಯೋಗಿಸಿರುವ ಸಂದರ್ಭಗಳುಂಟು. (ಅ. ವೇ. ೨-೨-೫), ಆದರೆ ಪ್ರಕೃತದಲ್ಲಿ ಋಕ್ಸಂಹಿತೆಯಲ್ಲಿ ಎಂಟನೆಯ ಮಂಡಲದ ದ್ರಷ್ಟೃಗಳೂ ನಿರ್ಮಾಪಕನೂ ಆದ ಕಣ್ವ ಮತ್ತು ತತ್ಸಂತತಿಯ ವಿಷಯವು ಮಾತ್ರ ವಿಮರ್ಶಿಸಲ್ಪಡಬೇಕಾಗಿದೆ. ಪುರಾಣಾದಿಗಳಲ್ಲಿ ಕಣ್ವಋಷಿಯ ಹೆಸರು ಪ್ರಸಿದ್ಧವಾಗಿದ್ದರೂ, ಇತರ ಸಂಹಿತಾ ಮತ್ತು ಬ್ರಾಹ್ಮಣಾದಿಗಳಲ್ಲಿ ಈ ಹೆಸರು ಅಷ್ಟು ಪ್ರಸಿದ್ಧವಾಗಿಲ್ಲ. ಋಕ್ಸಂಹಿತೆಯಲ್ಲಿಯೂ ಕಣ್ವಶಬ್ದವು ಅನೇಕಸಲ ಸ್ತೋತೃಗಳೆಂದೇ ಸಾಧಾರಣವಾದ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ.

ಎಂಟನೆಯ ಮಂಡಲದಲ್ಲಿರುವ ಋಷಿಗಳು ಮತ್ತು ಅವರಿಂದ ದೃಷ್ಟವಾದ ಸೂಕ್ತ ಮತ್ತು ಋಕ್ಕುಗಳ ವಿವರಣೆ—

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ. |
|---|---|---|---|---|---|
| 1. | ಪ್ರಗಾಥಃ ಕಾಣ್ವಃ | ೮ | ೧೦ | ೬ | |
| | | ,, | ೬೩ | ೧೨ | |
| | | ,, | ೬೪ | ೧೨ | |
| | | ,, | ೬೫ | ೧೨ | (೪೨) |
| 2. | ಪ್ರಗಾಥಃ ಘೌರಃ ಕಾಣ್ವೋ ವಾ | ೮ | ೧ | ೨ | |
| | | ,, | ೧೦ | ೬ | |
| | | ,, | ೪೮ | ೧೫ | |
| | | ,, | ೬೨ | ೧೨ | (೩೫) |
| 3. | ಮೇಧಾತಿಥಿಃ ಕಾಣ್ವಃ | ೧ | ೧೨ | ೧೨ | |
| | | ,, | ೧೩ | ೧೨ | |
| | | ,, | ೧೪ | ೧೨ | |
| | | ,, | ೧೫ | ೧೨ | |
| | | ,, | ೧೬ | ೯ | |
| | | ,, | ೧೭ | ೯ | |
| | | ,, | ೧೮ | ೯ | |
| | | ,, | ೧೯ | ೯ | |
| | | ,, | ೨೦ | ೮ | |
| | | ,, | ೨೧ | ೬ | |
| | | ,, | ೨೨ | ೨೧ | |
| | | ,, | ೨೩ | ೨೪ | |
| | | ೮ | ೧ | ೩-೨೯ = ೨೭ | |
| | | ೮ | ೨ | ೪೨ | |
| | | ,, | ೩೨ | ೩೦ | |
| | | ೯ | ೨ | ೧೦ | (೨೫೨) |
| 4. | ಮೇಧ್ಯಾತಿಥಿಃ ಕಾಣ್ವಃ | ೮ | ೧ | ೩-೨೯= ೨೭ | |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| | | ೮ | ೩ | ೨೪ | |
| | | ,, | ೩೩ | ೧೯ | |
| | | ೯ | ೪೧ | ೬ | |
| | | ,, | ೪೨ | ೬ | |
| | | ,, | ೪೩ | ೬ | (೮೮) |
| 5. | ಅಸಂಗಃ ಪ್ಲಾಯೋಗಿಃ | ೮ | ೧ | ೩೦-೩೩= ೪ | (೪) |
| | ಶಶ್ವತೀ (ಆಂಗಿರಸಿ) ಅಸಂಗಸ್ಯ ಪತ್ನೀ | ೮ | ೧ | ೩೪= ೧ | (೧) |
| 6. | ಪ್ರಿಯಮೇಧ ಆಂಗಿರಸಃ | ೮ | ೨ | ೪೦ | |
| | | ,, | ೬೮ | ೧೯ | |
| | | ,, | ೬೯ | ೧೮ | |
| | | ,, | ೮೭ | ೬ | |
| | | ೯ | ೨೮ | ೬ | (೮೯) |
| 7. | ದೇವಾತಿಥಿಃ ಕಾಣ್ವಃ | ೮ | ೪ | ೨೧ | (೨೧) |
| 8. | ಬ್ರಹ್ಮಾತಿಥಿಃ ಕಾಣ್ವಃ | ೮ | ೫ | ೩೯ | (೩೯) |
| 9. | ವತ್ಸಃ ಕಾಣ್ವಃ | ೮ | ೬ | ೪೮ | |
| | | ,, | ೧೧ | ೧೦ | (೫೮) |
| 10. | ಪುನರ್ವತ್ಸಃ ಕಾಣ್ವಃ | ೮ | ೭ | ೩೬ | (೩೬) |
| 11. | ಸಧ್ವಂಸಃ ಕಾಣ್ವಃ | ೮ | ೮ | ೨೩ | (೨೩) |
| 12. | ಶಶಕರ್ಣಃ ಕಾಣ್ವಃ | ೮ | ೯ | ೨೧ | (೨೧) |
| 13. | ಪರ್ವತಃ ಕಾಣ್ವಃ | ೮ | ೧೨ | ೩೩ | |
| | | ೯ | ೧೦೪ | ೬ | |
| | | ,, | ೧೦೫ | ೬ | (೪೫) |
| 14. | ನಾರದಃ ಕಾಣ್ವಃ | ೮ | ೧೩ | ೩೩ | |
| | | ೯ | ೧೦೪ | ೬ | |
| | | ,, | ೧೦೫ | ೬ | (೪೫) |
| 15. | ಗೋಷೂಕ್ತೀ ಅಶ್ವಸೂಕ್ತೀ ಚ | ೮ | ೧೪ | ೧೫ | |
| | | ,, | ೧೫ | ೧೩ | (೨೮) |
| 16. | ಇರಿಂಬಿಟಿಃ ಕಾಣ್ವಃ | ೮ | ೧೬ | ೧೨ | |
| | | ,, | ೧೭ | ೧೫ | |
| | | ,, | ೧೮ | ೨೨ | (೪೯) |
| 17. | ಸೋಭರಿಃ ಕಾಣ್ವಃ | ೮ | ೧೯ | ೩೭ | |
| | | ,, | ೨೦ | ೨೬ | |
| | | ,, | ೨೧ | ೧೮ | |
| | | ,, | ೨೨ | ೧೮ | |
| | | ,, | ೧೦೩ | ೧೪ | (೧೧೩) |
| 18. | ವಿಶ್ವಮನಾ ವೈಯಶ್ವಃ | ೮ | ೨೩ | ೩೦ | |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| | | ೮ | ೨೪ | ೩೦ | |
| | | ,, | ೨೫ | ೨೪ | |
| | | ೮ | ೨೬ | ೨೫ | (೧೦೯) |
| 19. | ವೃಶ್ವ ಆಂಗಿರಸಃ | ೮ | ೨೬ | ೨೫ | (೨೫) |
| 20. | ಮನುರ್ವೈವಸ್ವತಃ | ,, | ೨೭ | ೨೨ | |
| | | ,, | ೨೮ | ೫ | |
| | | ,, | ೨೯ | ೧೦ | |
| | | ,, | ೩೦ | ೪ | |
| | | ,, | ೩೧ | ೧೮ | (೫೯) |
| 21. | ಕಶ್ಯಪಃ ಮಾರೀಚಃ | ೧ | ೯೯ | ೧ | |
| | | ೮ | ೨೯ | ೧೦ | |
| | | ೯ | ೬೪ | ೩೦ | |
| | | ,, | ೬೭ | ೪–೬= ೩ | |
| | | ,, | ೯೧ | ೬ | |
| | | ,, | ೯೨ | ೬ | |
| | | ,, | ೧೧೩ | ೧೧ | |
| | | ,, | ೧೧೪ | ೪ | (೭೧) |
| 22. | ನೀಪಾತಿಥಿಃ ಕಾಣ್ವಃ | ೮ | ೩೪ | ೧೫ | (೧೫) |
| 23. | ಶ್ಯಾವಾಶ್ವಃ (ಆತ್ರೇಯಃ) | ೫ | ೫೨ | ೧೭ | |
| | | ,, | ೫೩ | ೧೬ | |
| | | ,, | ೫೪ | ೧೫ | |
| | | ,, | ೫೫ | ೧೦ | |
| | | ,, | ೫೬ | ೯ | |
| | | ,, | ೫೭ | ೮ | |
| | | ,, | ೫೮ | ೮ | |
| | | ,, | ೫೯ | ೮ | |
| | | ,, | ೬೦ | ೮ | |
| | | ,, | ೬೧ | ೧೯ | |
| | | ,, | ೮೧ | ೫ | |
| | | ,, | ೮೨ | ೯ | |
| | | ೮ | ೩೫ | ೨೪ | |
| | | ,, | ೩೬ | ೭ | |
| | | ,, | ೩೭ | ೭ | |
| | | ,, | ೩೮ | ೧೦ | |
| | | ೯ | ೩೨ | ೬ | (೧೮೬) |
| 24. | ನಾಭಾಕಃ ಕಾಣ್ವಃ | ೮ | ೩೯ | ೧೦ | |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| | | ೮ | ೪೦ | ೧೨ | |
| | | ,, | ೪೧ | ೧೦ | |
| | | ,, | ೪೨ | ೬ | (೨೮) |
| 25. | ಅರ್ಚನಾನಾಃ (ಆತ್ರೇಯಃ) | ೫ | ೬೩ | ೭ | |
| | | ,, | ೬೪ | ೭ | |
| | | ೮ | ೪೨ | ೬ | (೨೦) |
| 26. | ವಿರೂಪ ಆಂಗಿರಸಃ | ೮ | ೪೩ | ೩೩ | |
| | | ,, | ೪೪ | ೩೦ | |
| | | ,, | ೭೫ | ೧೬ | (೭೯) |
| 27. | ತ್ರಿಶೋಕಃ ಕಾಣ್ವಃ | ೮ | ೪೫ | ೪೨ | (೪೨) |
| 28. | ವಶೋಽಶ್ವ್ಯಃ | ೮ | ೪೬ | ೩೩ | (೩೩) |
| 29. | ತ್ರಿತ ಆಪ್ತ್ಯಃ | ೧ | ೧೦೫ | ೧೯ | |
| | | ೮ | ೪೭ | ೧೮ | |
| | | ೯ | ೩೩ | ೬ | |
| | | ,, | ೩೪ | ೬ | |
| | | ,, | ೧೦೨ | ೮ | |
| | | ೧೦ | ೧ | ೭ | |
| | | ,, | ೨ | ೭ | |
| | | ,, | ೩ | ೭ | |
| | | ,, | ೪ | ೭ | |
| | | ,, | ೫ | ೭ | |
| | | ,, | ೬ | ೭ | |
| | | ,, | ೭ | ೭ | (೧೦೬) |
| 30. | ಪ್ರಸ್ಕಣ್ವಃ ಕಾಣ್ವಃ | ೧ | ೪೪ | ೧೪ | |
| | | ,, | ೪೫ | ೧೦ | |
| | | ,, | ೪೬ | ೧೫ | |
| | | ,, | ೪೭ | ೧೦ | |
| | | ,, | ೪೮ | ೧೬ | |
| | | ,, | ೪೯ | ೪ | |
| | | ,, | ೫೦ | ೧೩ | |
| | | ೮ | ೪೯ | ೧೦ | |
| | | ೯ | ೯೫ | ೫ | (೯೭) |
| 31. | ಪುಷ್ಟಿಗುಃ ಕಾಣ್ವಃ | ೮ | ೫೦ | ೧೦ | (೧೦) |
| 32. | ಶ್ರುಷ್ಟಿಗುಃ ಕಾಣ್ವಃ | ೮ | ೫೧ | ೧೦ | (೧೦) |
| 33. | ಆಯುಃ ಕಾಣ್ವಃ | ೮ | ೫೨ | ೧೦ | (೧೦) |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| 34. | ಮೇಧ್ಯಃ ಕಾಣ್ವಃ | ೮ | ೫೩ | ೮ | |
| | | ೮ | ೫೭ | ೪ | |
| | | ,, | ೫೮ | ೩ | (೧೫) |
| 35. | ಮಾತರಿಶ್ವಾ ಕಾಣ್ವಃ | ೮ | ೫೪ | ೮ | (೮) |
| 36. | ಕೃಶಃ ಕಾಣ್ವಃ | ೮ | ೫೫ | ೫ | (೫) |
| 37. | ಪೃಷಧ್ರಃ ಕಾಣ್ವಃ | ೮ | ೫೬ | ೫ | (೫) |
| 38. | ಸುಪರ್ಣಃ ಕಾಣ್ವಃ | ೮ | ೫೯ | ೭ | (೭) |
| 39. | ಭರ್ಗಃ ಪ್ರಾಗಾಥಃ | ೮ | ೬೦ | ೨೦ | |
| | | ,, | ೬೧ | ೧೮ | (೩೮) |
| 40. | ಪ್ರಗಾಥಃ ಕಾಣ್ವಃ | ೮ | ೬೩ | ೧೨ | |
| | | ,, | ೬೪ | ೧೨ | |
| | | ,, | ೯೫ | ೧೨ | (೩೬) |
| 41. | ಕಲಿಃ ಪ್ರಾಗಾಥಃ | ೮ | ೬೬ | ೧೫ | (೧೫) |
| 42. | ಮತ್ಸ್ಯಃ ಸಾಮ್ಮದಃ | ೮ | ೬೭ | ೨೧ | (೨೧) |
| 43. | ಮಾನ್ಯೋ ಮೈತ್ರಾವರುಣಿಃ | ೮ | ೬೭ | ೨೧ | (೨೧) |
| 44. | ಪುರುಹನ್ಮಾ (ಆಂಗಿರಸಃ) | ೮ | ೭೦ | ೧೫ | (೧೫) |
| 45. | ಸುದೀತಿಃ (ಆಂಗಿರಸಃ) | ೮ | ೭೧ | ೧೫ | (೧೫) |
| 46. | ಪುರುಮೀಳ್ಹಃ (ಆಂಗಿರಸಃ) | ೮ | ೭೧ | ೧೫ | (೧೫) |
| 47. | ಹರ್ಯತಃ ಪ್ರಾಗಾಥಃ | ೮ | ೭೨ | ೧೮ | (೧೮) |
| 48 | ಗೋಪವನ ಆತ್ರೇಯಃ | ೮ | ೭೩ | ೧೮ | |
| | | ,, | ೭೪ | ೧೫ | (೩೩) |
| 49. | ಕುರುಸುತಿಃ ಕಾಣ್ವಃ | ೮ | ೭೬ | ೧೨ | |
| | | ,, | ೭೭ | ೧೧ | |
| | | ,, | ೭೮ | ೧೦ | (೩೩) |
| 50. | ಕೃತ್ನುರ್ಭಾರ್ಗವಃ | ೮ | ೭೯ | ೯ | (೯) |
| 51. | ಏಕದ್ಯೂರ್ನೌಧಸಃ | ೮ | ೮೦ | ೧೦ | (೧೦) |
| 52. | ಕುಸೀದೀ ಕಾಣ್ವಃ | ೮ | ೮೧ | ೯ | |
| | | ,, | ೮೨ | ೯ | |
| | | ,, | ೮೩ | ೯ | (೨೭) |
| 53 | ಉಶನಾ ಕಾವ್ಯಃ | ೮ | ೮೪ | ೯ | |
| | | ೯ | ೮೭ | ೯ | |
| | | ,, | ೮೮ | ೮ | |
| | | ,, | ೮೯ | ೭ | (೩೩) |
| 54. | ಕೃಷ್ಣಃ (ಆಂಗಿರಸಃ) | ೮ | ೮೫ | ೯ | |
| | | ,, | ೮೬ | ೫ | |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| | | ೮ | ೮೭ | ೬ | |
| | | ೧೦ | ೪೨ | ೧೧ | |
| | | ,, | ೪೩ | ೧೧ | |
| | | ,, | ೪೪ | ೧೧ | (೫೩) |
| 55. | ವಿಶ್ವಕಃ ಕಾರ್ಷ್ಣಿಃ | ೮ | ೮೬ | ೫ | (೫) |
| 56. | ದ್ಯುಮ್ನೀಕಃ | ೮ | ೭೭ | ೬ | (೬) |
| 57. | ನೋಧಾಃ (ಗೌತಮಃ) | ೧ | ೫೮ | ೯ | |
| | | ,, | ೫೯ | ೭ | |
| | | ,, | ೬೦ | ೫ | |
| | | ,, | ೬೧ | ೧೬ | |
| | | ,, | ೬೨ | ೧೩ | |
| | | ,, | ೬೩ | ೯ | |
| | | ,, | ೬೪ | ೧೫ | |
| | | ೮ | ೮೮ | ೬ | |
| | | ೯ | ೯೩ | ೫ | (೮೫) |
| 58. | ನೃಮೇಧಃ (ಆಂಗಿರಸಃ) | ೮ | ೮೯ | ೭ | |
| | | ,, | ೯೦ | ೬ | |
| | | ,, | ೯೮ | ೧೨ | |
| | | ,, | ೯೯ | ೮ | |
| | | ೯ | ೨೭ | ೬ | |
| | | ,, | ೨೯ | ೬ | (೪೫) |
| 59. | ಪುರುಮೇಧಃ (ಆಂಗಿರಸಃ) | ೮ | ೮೯ | ೭ | |
| | | ,, | ೯೦ | ೬ | (೧೩) |
| 60. | ಅಪಾಲಾ ಆತ್ರೇಯೀ | ೮ | ೯೧ | ೭ | (೭) |
| 61. | ಶ್ರುತಕಕ್ಷಃ (ಆಂಗಿರಸಃ) | ೮ | ೯೨ | ೩೩ | (೩೩) |
| 62. | ಸುಕಕ್ಷಃ (ಆಂಗಿರಸಃ) | ೮ | ೯೨ | ೩೩ | |
| | | ,, | ೯೩ | ೩೪ | (೬೭) |
| 63. | ಬಿಂದುಃ (ಆಂಗಿರಸಃ) | ೮ | ೯೪ | ೧೨ | |
| | | ೯ | ೩೦ | ೬ | (೧೮) |
| 64. | ಪೂತದಕ್ಷಃ (ಆಂಗಿರಸಃ) | ೮ | ೯೪ | ೧೨ | (೧೨) |
| 65. | ತಿರಶ್ಚೀಃ (ಆಂಗಿರಸಃ) | ೮ | ೯೫ | ೯ | |
| | | ,, | ೯೬ | ೨೧ | (೩೦) |
| 66. | ದ್ಯುತಾನಃ ಮಾರುತಃ | ೮ | ೯೬ | ೨೧ | (೨೧) |
| 67. | ರೇಭಃ ಕಾಶ್ಯಪಃ | ೮ | ೯೭ | ೧೫ | (೧೫) |

| ನಂ. | ಋಷಿಗಳ ಹೆಸರು | ಮಂಡಲ | ಸೂಕ್ತ | ಋಕ್ಸಂಖ್ಯೆ | ಒಟ್ಟು ಋಕ್ಸಂಖ್ಯೆ |
|---|---|---|---|---|---|
| 68. | ನೇಮೋ ಭಾರ್ಗವಃ | ೮ | ೧೦೦ | ೧-೩= ೩ | |
| | | ,, | ,, | ೬-೧೨= ೭ | (೧೦) |
| 69. | ಇಂದ್ರಃ | ೮ | ೧೦೦ | ೪-೫= ೨ | (೨) |
| 70. | ಜಮದಗ್ನಿರ್ಭಾರ್ಗವಃ | ೮ | ೧೦೧ | ೧೬ | |
| | | ೯ | ೬೨ | ೩೦ | |
| | | ,, | ೬೫ | ೩೦ | |
| | | ,, | ೬೭ | ೧೬-೧೮= ೩ | (೭೯) |
| 71. | ಪ್ರಯೋಗೋ ಭಾರ್ಗವಃ | ೮ | ೧೦೨ | ೨೨ | (೨೨) |
| 72. | ಅಗ್ನಿಃ ಪಾವಕಃ ಬಾರ್ಹಸ್ಪತ್ಯಃ | ೮ | ೧೦೨ | ೨೨ | |
| | | ೧೦ | ೧೪೦ | ೬ | (೨೮) |
| 73. | ಗೃಹಪತಿಃ ಸಹಸಸ್ಪುತ್ರಃ | ೮ | ೧೦೨ | ೨೨ | (೨೨) |
| 74. | ಯವಿಷ್ಠಃ ಸಹಸಸ್ಪುತ್ರಃ | ೮ | ೧೦೨ | ೨೨ | (೨೨) |

ಈ ೮ ನೆಯ ಮಂಡಲದಲ್ಲಿ ೧೦ ಅನುವಾಕಗಳೂ ೧೦೩ ಸೂಕ್ತಗಳೂ ೧೭೧೬ ಋಕ್ಕುಗಳೂ (ವಾಲಖಿಲ್ಯಸೂಕ್ತಗಳೂ ಸೇರಿ) ಇರುವವು.



## ಮೊದಲನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಅಷ್ಟಮೇ ಮಂಡಲೇ ದಶಾನುವಾಕಾಃ । ತತ್ರ ಪ್ರಥಮೇಽನುವಾಕೇ ಪಂಚ ಸೂಕ್ತಾನಿ । ತೇಷು ಮಾ ಚಿದನ್ಯದಿತಿ ಚತುಸ್ತ್ರಿಂಶದೃಚಂ ಪ್ರಥಮಂ ಸೂಕ್ತಂ । ತಥಾನುಕ್ರಮ್ಯತೇ । ಮಾ ಚಿಚ್ಚತುಸ್ತ್ರಿಂಶನ್ಮೇಧಾತಿಥಿಮೇಧ್ಯಾತಿಥೀ ಐಂದ್ರಂ ಬಾರ್ಹತಂ ದ್ವಿಪ್ರಗಾಥಾದಿ ದ್ವಿತ್ರಿಷ್ಟುಬಂತಮಾದ್ಯಂ ದ್ವ್ಯೃಚಂ ಪ್ರಗಾಥೋಽಪಶ್ಯತ್ಸ ಘೌರಃ ಸನ್ಭ್ರಾತುಃ ಕಣ್ವಸ್ಯ ಪುತ್ರತಾಮಗಾತ್ ಪ್ಲಾಯೋಗಿಶ್ಚಾಸಂಗೋ ಯಃ ಸ್ತ್ರೀಭೂತ್ವಾ ಪುಮಾನಭೂತ್ಸ ಮೇಧ್ಯಾತಿಥಯೇ ದಾನಂ ದತ್ವಾ ಸ್ತುಹಿ ಸ್ತುಹೀತಿ ಚತಸೃಭಿರಾತ್ಮಾನಂ ತುಷ್ಟಾವ ಪತ್ನೀ ಚಾಸ್ಯಾಂಗಿರಸೀ ಶಶ್ವತೀ ಪುಂಸ್ತ್ವಮುಪಲಭ್ಯೈನಂ ಪ್ರೀತಾಂತ್ಯಯಾ ತುಷ್ಟಾವೇತಿ । ಅಸ್ಯಾಯಮರ್ಥಃ । ಅಸ್ಯ ಸೂಕ್ತಸ್ಯ ಮೇಧಾತಿಥಿಮೇಧ್ಯಾತಿಥಿನಾಮಾನಾವೃಷೀ ತೌ ಚ ಕಣ್ವಗೋತ್ರೌ । ಋಷಿಶ್ಚಾನುಕ್ತಗೋತ್ರಃ ಪ್ರಾಗುಕ್ತಾತ್ಕಾಣ್ವ ಇತಿ ಪರಿಭಾಷಿತತ್ವಾತ್ । ಆದ್ಯಸ್ಯ ದ್ವ್ಯೃಚಸ್ಯ ತು ಘೋರಸ್ಯ ಪುತ್ರಃ ಸ್ವಕೀಯಭ್ರಾತುಃ ಕಣ್ವಸ್ಯ ಪುತ್ರತಾಂ ಪ್ರಾಪ್ತತ್ವಾತ್ಕಾಣ್ವಃ ಪ್ರಗಾಥಾಖ್ಯ ಋಷಿಃ । ಪ್ಲಯೋಗನಾಮ್ನೋ ರಾಜ್ಞಃ ಪುತ್ರ ಆಸಂಗಾಭಿಧಾನೋ ರಾಜಾ ದೇವಶಾಪಾತ್ ಸ್ತ್ರೀತ್ವಮನುಭೂಯ ಪಶ್ಚಾತ್ತಪೋಬಲೇನ ಮೇಧಾತಿಥೇಃ ಪ್ರಸಾದಾತ್ಪುಮಾನ್ ಭೂತ್ವಾ ತಸ್ಮೈ ಬಹು ಧನಂ ದತ್ವಾ ಸ್ವಕೀಯಮಂತರಾತ್ಮಾನಂ ದತ್ತದಾನಂ ಸ್ತುಹಿ ಸ್ತುಹೀತ್ಯಾದಿಭಿಶ್ಚತಸೃಭಿರ್ಋಗ್ಭಿರಸ್ತೌತ್ । ಅತಸ್ತಾಸಾಮಾಸಂಗಾಖ್ಯೋ ರಾಜಾ ಋಷಿಃ । ಅಸ್ಯಾಸಂಗಸ್ಯ ಭಾರ್ಯಾಂಗಿರಸಃ ಸುತಾ ಶಶ್ವತ್ಯಾಖ್ಯಾ

ಭರ್ತುಃ ಪುಂಸ್ತ್ವಮುಪಲಭ್ಯ ಪ್ರೀತಾ ಸತೀ ಸ್ವಭರ್ತಾರಮನ್ಯಸ್ಯ ಸ್ಥೂರಮಿತ್ಯನಯಾ ಸ್ತುತವತೀ। ಅತಸ್ತಸ್ಯಾ ಋಚಃ ಶಶ್ವತ್ಯೃಷಿಕಾ। ಅಂತ್ಯೇ ದ್ವೇ ತ್ರಿಷ್ಟುಭೌ ದ್ವಿತೀಯಾಚತುರ್ಥ್ಯೌ ಸತೋಬೃಹತ್ಯೌ ಶಿಷ್ಟಾ ಬೃಹತ್ಯಃ। ಕೃತ್ಸ್ನಸ್ಯ ಸೂಕ್ತಸ್ಯೇಂದ್ರೋ ದೇವತಾ। ಸ್ತುಹಿ ಸ್ತುಹೀತ್ಯಾದ್ಯಾಶ್ಚತಸ್ರ ಆತ್ಮಕೃತಸ್ಯ ದಾನಸ್ಯ ಸ್ತೂಯಮಾನತ್ವಾತ್ತದ್ದೇವತಾಕಾಃ। ಅನ್ವಸ್ಯೇತ್ಯಸ್ಯಾ ಆಸಂಗಾಖ್ಯೋ ರಾಜಾ ದೇವತಾ। ಯಾ ತೇನೋಚ್ಯತೇ ಸಾ ದೇವತೇತಿ ನ್ಯಾಯಾತ್ ॥ ಮಹಾವ್ರತೇ ನಿಷ್ಕೇವಲ್ಯೇ ಬಾರ್ಹತತೃಚಾಶೀತಾ-ವಾದಿತ ಏಕೋನತ್ರಿಂಶದ್ವಿನಿಯುಕ್ತಾಃ। ತಥೈವ ಪಂಚಮಾರಣ್ಯಕೇ ಸೂತ್ರಿತಂ। ಮಾ ಚಿದನ್ಯದ್ವಿ ಶಂಸ-ತೇತ್ಯೇಕಯಾ ನ ತ್ರಿಂಶತ್ । ಐ. ಆ. ೫-೨-೪ । ಇತಿ ॥ ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಮೈತ್ರಾವರುಣಸ್ಯ ಮಾ ಚಿದನ್ಯದಿತಿ ವೈಕಲ್ಪಿಕಃ ಸ್ತೋತ್ರಿಯಃ ಪ್ರಗಾಥಃ। ಸೂತ್ರಿತಂ ಚ। ಮಾ ಚಿದನ್ಯದ್ವಿ ಶಂಸತ ಯಚ್ಚಿದ್ಧಿ ತ್ವಾ ಜನಾ ಇಮ ಇತಿ ಸ್ತೋತ್ರಿಯಾನುರೂಪೌ। ಆ. ೭-೪। ಇತಿ ॥ ಗ್ರಾವಸ್ತೋತ್ರೇಽಪ್ಯಾದ್ಯಾ ವಿನಿಯುಕ್ತಾ। ಸೂತ್ರಿತಂ ಚ। ಆ ತೂ ನ ಇಂದ್ರ ಕ್ಷುಮಂತಂ ಮಾ ಚಿದನ್ಯದ್ವಿ ಶಂಸತ। ಆ. ೫-೧೨। ಇತಿ ॥ ಉಪಾಕರಣೋತ್ಸರ್ಜನಯೋರ್ಮಂಡಲಾದಿಹೋಮೇಽ-ಪ್ಯೇಷಾ। ಸೂತ್ರ್ಯತೇ ಹಿ। ಮಾ ಚಿದನ್ಯದಾಗ್ನೇ ಯಾಹಿ ಸ್ವಾದಿಷ್ಠಯೇತಿ ॥

ಅನುವಾದವು—ಎಂಟನೆಯ ಮಂಡಲದಲ್ಲಿ ಹತ್ತು ಅನುವಾಕಗಳಿರುವವು. ಅವುಗಳಲ್ಲಿ ಮೊದಲನೆಯ ಅನುವಾಕದಲ್ಲಿ ಐದು ಸೂಕ್ತಗಳಿರುವವು. ಆ ಐದು ಸೂಕ್ತಗಳಲ್ಲಿ ಮಾ ಚಿದನ್ಯತ್ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಮೂವತ್ತನಾಲ್ಕು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—ಮಾ ಚಿತ್ ಚತುಸ್ತ್ರಿಂಶನ್ಮೇಧಾ-ತಿಥಿಮೇಧ್ಯಾತಿಥೀ ಐಂದ್ರಂ ಬಾರ್ಹತಂ ಧ್ವಿಪ್ರಗಾಥಾದಿ ದ್ವಿತ್ರಿಷ್ಟುಬಂತಮಾದ್ಯಂ ದ್ವೃಚಂ ಪ್ರಗಾಥೋಽ-ಪಶ್ಯತ್ಸ ಘೌರಃ ಸನ್ಕಾಣ್ವತಃ। ಕಣ್ವಸ್ಯ ಪುತ್ರತಾಮಗಾತ್ ಪ್ಲಾಯೋಗಿಶ್ಚಾಸಂಗೋ ಯಃ ಸ್ತ್ರೀ ಭೂತ್ವಾ ಪುಮಾನಭೂತ್ಸ ಮೇಧ್ಯಾತಿಥಯೇ ದಾನಂ ದತ್ವಾ ಸ್ತುಹಿ ಸ್ತುಹೀತಿ ಚತಸೃಭಿರಾತ್ಮಾನಂ ತುಷ್ಟಾವ ಪತ್ನೀ ಚಾಸ್ಯಾಂಗಿರಸೀ ಶಶ್ವತೀ ಪುಂಸ್ತ್ವಮುಪಲಭ್ಯೈನಂ ಪ್ರೀತಾಂತ್ಯಯಾ ತುಷ್ಟಾವ ಎಂದು ಹೇಳಿರುವುದು. ಮುಖ್ಯಾರ್ಥವೇನೆಂದರೆ-ಈ ಸೂಕ್ತಕ್ಕೆ ಮೇಧಾತಿಥಿ ಮತ್ತು ಮೇಧ್ಯಾತಿಥಿ ಎಂಬ ಇಬ್ಬರು ಋಷಿಗಳು; ಈ ಇಬ್ಬರೂ ಕಣ್ವ ಗೋತ್ರೋದ್ಭವರು. ಋಷಿಯ ಗೋತ್ರವು ತಿಳಿಯದಿದ್ದರೆ ಆ ಋಷಿಯು ಕಣ್ವಗೋತ್ರದವ ನೆಂದು ಹೇಳುವ ರೂಢಿ ಇರುವುದು. ಈ ಸೂಕ್ತದ ಮೊದಲ ಎರಡು ಋಕ್ಕುಗಳಿಗೆ ಕಣ್ವಪುತ್ರನಾದ ಪ್ರಗಾಥ ನೆಂಬುವನು ಋಷಿಯು. ಇವನು ಘೋರನೆಂಬುವನ ಪುತ್ರನಾಗಿದ್ದು ಘೋರನ ಸಹೋದರನಾದ ಕಣ್ವನ ಪುತ್ರತ ವನ್ನು ಪಡೆದನು ಎಂದರೆ ಕಣ್ವನ ಪುತ್ರನೆಂದು ಪ್ರಸಿದ್ಧನಾದನು. ಪ್ಲಯೋಗ ಎಂಬ ಹೆಸರಿನ ಒಬ್ಬ ರಾಜನ ಪುತ್ರನಾದ ಆಸಂಗ ಎಂಬ ರಾಜಪುತ್ರನು ದೇವತೆಗಳ ಶಾಪದಿಂದ ಕೆಲವುಕಾಲ ಸ್ತ್ರೀತ್ವವನ್ನು ಹೊಂದಿ (ಸ್ತ್ರೀ ಯಾಗಿದ್ದು) ಮೇಧಾತಿಥಿಋಷಿಯ ತಪೋಬಲದಿಂದಲೂ ಅನುಗ್ರಹದಿಂದಲೂ ಮತ್ತೆ ಪುರುಷತ್ವವನ್ನು ಪಡೆದು ಆ ಉಪಕಾರಕ್ಕಾಗಿ ಮೇಧಾತಿಥಿಋಷಿಗೆ ಬಹಳವಾಗಿ ಧನಾದಿಗಳನ್ನು ಕೊಟ್ಟು ಆ ವಿಷಯವನ್ನು ಎಂದರೆ ತಾನು ಮಾಡಿದ ದಾನಸ್ತುತಿಯನ್ನು ಪ್ರಶಂಶಿಸು ಎಂದು ತನ್ನನ್ನೇ ಸಂಬೋಧಿಸಿ ಆ ವಿಷಯವನ್ನು ಸ್ತುಹಿ ಸ್ತುಹಿ ಎಂದು ಮೊದಲಾಗುವ (ಈ ಸೂಕ್ತದ ೩೦-೩೩ನೇ ಋಕ್ಕುಗಳು) ನಾಲ್ಕು ಋಕ್ಕುಗಳಿಂದ ಸ್ತುತಿಸಿರುವನು. ಆದ್ದರಿಂದ ಆ ನಾಲ್ಕು ಋಕ್ಕುಗಳಿಗೆ ಆಸಂಗನೆಂಬ ರಾಜನೇ ಋಷಿಯು. ಈ ಆಸಂಗರಾಜನ ಭಾರ್ಯೆಯೂ ಅಂಗಿರಾಋಷಿಯ ಪುತ್ರಿಯೂ ಆದ ಶಶ್ವತೀ ಎಂಬುವಳು ತನ್ನ ಪತಿಯು ಮತ್ತೆ ಪುರುಷತ್ವವನ್ನು ಪಡೆದದ್ದರಿಂದ ಸಂತುಷ್ಟಳಾಗಿ ತನ್ನ

ಪತಿಯಾದ ಆಸಂಗರಾಜನನ್ನು **ಅನ್ವಸ್ಯ ಸ್ಥೂರಂ** ಎಂಬ ಋಕ್ಕಿನಿಂದ (೩೪ ನೇ ಋಕ್ಕು) ಸ್ತುತಿಸಿರುವಳು. ಆದ್ದರಿಂದ ಆ ಋಕ್ಕಿಗೆ ಶಶ್ವತೀ ಎಂಬ ಆಸಂಗರಾಜನ ಪತ್ನಿಯೇ ಋಷಿಯು. ಈ ಸೂಕ್ತದ ಕೊನೆಯ ಎರಡು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಎರಡು ಮತ್ತು ಮೂರನೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಉಳಿದ ಋಕ್ಕುಗಳು ಬೃಹತೀಛಂದಸ್ಕವು. ಒಟ್ಟು ಸೂಕ್ತಕ್ಕೆಲ್ಲಾ ಇಂದ್ರನೇ ದೇವತೆಯು; ಸ್ತುಹಿ ಸ್ತುಹಿ ಎಂದು ಮೊದಲಾಗುವ (೩೦-೩೩ನೇ ಋಕ್ಕುಗಳು) ನಾಲ್ಕು ಋಕ್ಕುಗಳಲ್ಲಿ ತಾನು ಮಾಡಿದ ದಾನಪ್ರಶಂಸೆಯಿರುವುದರಿಂದ ಆ ನಾಲ್ಕು ಋಕ್ಕುಗಳಿಗೆ ದಾನಸ್ತುತಿಯೇ ದೇವತೆಯು. **ಅನ್ವಸ್ಯ** ಎಂಬ ಋಕ್ಕಿಗೆ (೩೪ನೇ ಋಕ್ಕು) ಆಸಂಗನೆಂಬ ರಾಜನೇ ದೇವತೆಯು; **ಯಾ ತೇನೋಚ್ಯತೇ ಸಾ ದೇವತಾ**—ಋಕ್ಕಿನಲ್ಲಿ ಯಾವ ವಿಷಯವು ಪ್ರತಿಪಾದಿಸಲ್ಪಡುವುದೋ (ಸ್ತುತಿಸಲ್ಪಡುವುದೋ) ಆ ವಿಷಯವೇ ಆ ಋಕ್ಕಿಗೆ ದೇವತೆಯು ಎಂಬ ನ್ಯಾಯಾನುಸಾರವಾಗಿ ದೇವತೆಗಳನ್ನು ನಿರ್ದೇಶಿಸಲಾಗಿದೆ. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಮಂತ್ರಶಸ್ತ್ರಗಳನ್ನು ಪಠಿಸುವಾಗ ಬೃಹತೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ಮೊದಲ ಇಪ್ಪತ್ತೊಂಭತ್ತು ಋಕ್ಕುಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಮಾ ಚಿದನ್ಯದ್ವಿ ಶಂಸತೇತ್ಯೇಕಯಾ ನ ತ್ರಿಂಶತ್** ಎಂಬ ವಾಕ್ಯದಿಂದ (ಐ. ಆ. ೫-೨ ೪) ನಿರ್ದಿಷ್ಟವಾಗಿರುವುದು. ಮತ್ತು ಯಾಗದ ಚಾತುರ್ವಿಂಶಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು **ಮಾ ಚಿದನ್ಯತ್** ಎಂಬ ತೃಚವನ್ನು (ಮೂರು ಋಕ್ಕುಗಳನ್ನು) ವಿಕಲ್ಪವಾಗಿ ಸ್ತೋತ್ರೀಯ ಪ್ರಗಾಥತೃಚವನ್ನಾಗಿ ಪಠಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ—**ಮಾ ಚಿದನ್ಯದ್ವಿ ಶಂಸತ ಯಚ್ಚಿದ್ಧಿ ತ್ವಾ ಜನಾ ಇಮ ಇತಿ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ. ೫-೧೨) ವಿವೃತವಾಗಿರುವುದು. ಸೋಮಲತೆಗಳನ್ನು ಜಜ್ಜುವ ಗ್ರಾವಾಣಃ ಎಂಬ ಕಲ್ಲುಗಳನ್ನು ಸ್ತುತಿಸುವ ಗ್ರಾವಸ್ತುತಿಯ ಮಂತ್ರಗಳ ಆರಂಭದಲ್ಲಿಯೂ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಆ ತೂನ ಇಂದ್ರ ಕ್ಷುಮಂತಂ ಮಾ ಚಿದನ್ಯದ್ವಿ ಶಂಸತ** ಎಂಬ ಸೂತ್ರದಿಂದ (ಆ. ೫-೧೨) ವಿವೃತವಾಗಿರುವುದು. ಉಪಾಕರಣ ಮತ್ತು ಉತ್ಸರ್ಜನ ಕರ್ಮಗಳಲ್ಲಿ ಮಾಡುವ ಮಂಡಲಾದಿ ಹೋಮಗಳಲ್ಲಿಯೂ ಈ ಋಕ್ಕನ್ನು ಪ್ರಧಾನಾಹುತಿಯ ಋಕ್ಕುಗಳಲ್ಲಿ ಒಂದನ್ನಾಗಿ ಪಠಿಸಬೇಕೆಂದು ಆಶ್ವಲಾಯನಗೃಹ್ಯಸೂತ್ರದ—**ಮಾ ಚಿದನ್ಯದಾಗ್ನೇ ಯಾಹಿ ಸ್ವಾದಿಷ್ಠಯಾ** ಎಂಬ ಸೂತ್ರದಿಂದ ವಿವೃತವಾಗಿರುವುದು.

## ಸೂಕ್ತ—೧

ಮಂಡಲ—೮ । ಅನುವಾಕ—೧ । ಸೂಕ್ತ—೧ ।

ಅಷ್ಟಕ—೫ । ಅಧ್ಯಾಯ—೭ । ವರ್ಗ—೧೦, ೧೧, ೧೨, ೧೩, ೧೪, ೧೫, ೧೬ ।

ಸೂಕ್ತದಲ್ಲಿರುವ ಋಕ್ಸಂಖ್ಯೆ—೩೪ ।

ಋಷಿಃ—೧, ೨. ಪ್ರಗಾಥೋ ಘೌರಃ ಕಾಣ್ವೋ ವಾ । ೩-೨೯. ಮೇಧಾತಿಥಿಮೇಧ್ಯಾತಿಥೀ ಕಾಣ್ವೌ । ೩೦-೩೩. ಅಸಂಗಃ ಪ್ಲಾಯೋಗಿಃ । ೩೪. ಶಶ್ವತ್ಯಾಂಗಿರಸ್ಯಾಸಂಗಸ್ಯ ಪತ್ನೀ ।

ದೇವತಾ—೧-೨೯. ಇಂದ್ರಃ । ೩೦-೩೩. ಅಸಂಗಸ್ಯ ದಾನಸ್ತುತಿಃ । ೩೪. ಅಸಂಗಃ ॥

ಛಂದಃ—೧, ೩, ೫-೩೨. ಬೃಹತೀ । ೨, ೪. ಸತೋಬೃಹತೀ । ೩೩, ೩೪. ತ್ರಿಷ್ಟುಪ್ ॥



॥ ಸಂಹಿತಾಪಾಠಃ ॥

ಮಾ ಚಿದನ್ಯದ್ವಿ ಶಂಸತ ಸಖಾಯೋ ಮಾ ರಿಷಣ್ಯತ ।

ಇಂದ್ರಮಿತ್ಸ್ತೋತಾ ವೃಷಣಂ ಸಚಾ ಸುತೇ ಮುಹುರುಕ್ಥಾ ಚ ಶಂಸತ ॥

॥ ಪದಪಾಠಃ ॥

ಮಾ । ಚಿತ್ । ಅನ್ಯತ್ । ವಿ । ಶಂಸತ । ಸಖಾಯಃ । ಮಾ । ರಿಷಣ್ಯತ ।

ಇಂದ್ರಂ । ಇತ್ । ಸ್ತೋತ । ವೃಷಣಂ । ಸಚಾ । ಸುತೇ । ಮುಹುಃ । ಉಕ್ಥಾ । ಚ । ಶಂಸತ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸಖಾಯಃ ಸಮಾನಖ್ಯಾನಾಃ ಸ್ತೋತಾರಃ ಇಂದ್ರಸ್ತೋತ್ರಾದನ್ಯತ್ಸ್ತೋತ್ರಂ ಮಾ ಚಿದ್ವಿ ಶಂಸತ । ಮ್ಯುಪೋಚ್ಚಾರಯತ । ಮಾ ರಿಷಣ್ಯತ । ಮಾ ಹಿಂಸಿತಾರೋ ಭವತ । ಅನ್ಯದೀಯಸ್ತೋತ್ರೋಚ್ಚಾರಣೇನ ವೃಥೋಪಕ್ಷೀಣಾ ಮಾ ಭವತ । ಸುತೇಽಭಿಷುತೇ ಸೋಮೇ ವೃಷಣಂ ಕಾಮಾನಾಂ ವರ್ಷಿತಾರಮಿಂದ್ರಮಿದಿಂದ್ರಮೇವ ಹೇ ಪ್ರಸ್ತೋತ್ರಾದಯಃ ಸಚಾ ಸಹ ಸಂಭೂಯ ಸ್ತೋತ । ಸ್ತುತ । ಹೇ ಪ್ರಶಸ್ತ್ರಾದಯಃ ಉಕ್ಥಾ ಚೋಕ್ಥಾನಿ ಶಸ್ತ್ರಾಣಿ ಚೇಂದ್ರವಿಷಯಾಣಿ ಯೂಯಂ ಮುಹುಃ ಪುನಃಪುನಃ ಶಂಸತ ॥

॥ ಪ್ರತಿಪದಾರ್ಥ ॥

**ಸಖಾಯಃ**—ಎಲೈ ಮಿತ್ರರೇ । **ಅನ್ಯತ್**—ಇಂದ್ರಸ್ತುತಿಗಿಂತಲೂ ಬೇರೆ ಯಾವ ಸ್ತುತಿಯನ್ನೂ । **ಮಾ ಚಿತ್ ವಿ ಶಂಸತ**—ಖಂಡಿತವಾಗಿಯೂ ಪಠಿಸಲೇಬೇಡಿರಿ । **ಮಾ ರಿಷಣ್ಯತ**—ನಿಮಗೆ ನೀವೇ ತೊಂದರೆಯನ್ನುಂಟುಮಾಡಿಕೊಳ್ಳಬೇಡಿರಿ । **ಸುತೇ**—ಸೋಮರಸವು ಹಿಂಡಲ್ಪಟ್ಟಾಗ । **ವೃಷಣಂ**—ಕಾಮವರ್ಷಕನಾದ । **ಇಂದ್ರಮಿತ್**—ಕೇವಲ ಇಂದ್ರನನ್ನೇ । **ಸಚಾ**—ಒಟ್ಟಿಗೆ ಕೂಡಿಕೊಂಡು । **ಸ್ತೋತ**—ಸ್ತುತಿಸಿರಿ । **ಉಕ್ಥಾ ಚ**—ಇಂದ್ರೋದ್ದಿಷ್ಟವಾದ ಉಕ್ಥಮಂತ್ರಗಳನ್ನೂ । **ಮುಹುಃ**—ಪದೇಪದೇ । **ಶಂಸತ**—ಪಠಿಸಿರಿ.

॥ ಭಾವಾರ್ಥ ॥

ಎಲೈ ಮಿತ್ರರೇ, ಇಂದ್ರಸ್ತುತಿಗಿಂತಲೂ ಬೇರೆಯಾದ ಯಾವ ಸ್ತುತಿಯನ್ನೂ ಖಂಡಿತವಾಗ ಪಠಿಸಲೇಬೇಡಿರಿ. ನಿಮಗೆ ನೀವೇ ತೊಂದರೆಯನ್ನುಂಟುಮಾಡಿಕೊಳ್ಳಬೇಡಿರಿ. ಸೋಮರಸವು ಹಿಂಡಲ್ಪಟ್ಟಾಗ ಕಾಮವರ್ಷಕನಾದ ಕೇವಲ ಇಂದ್ರನನ್ನೇ ಒಟ್ಟಿಗೆ ಕೂಡಿಕೊಂಡು ಸ್ತುತಿಸಿರಿ. ಇಂದ್ರೋದ್ದಿಷ್ಟವಾದ ಉಕ್ಥಗಳನ್ನು ಪುನಃ ಪುನಃ ಪಠಿಸಿರಿ.

## English Translation

Repeat, friends, no other praise, be not hurtful (to yourselves):

praise together Indra, the showerer (of benefits) when the Soma is effused; repeatedly utter praise (to him).

॥ ಸಂಹಿತಾಪಾಠಃ ॥

ಅವಕ್ರಕ್ಷಿಣಂ ವೃಷಭಂ ಯಥಾಜುರಂ ಗಾಂ ನ ಚರ್ಷಣೀಸಹಂ ।
ವಿದ್ವೇಷಣಂ ಸಂವನನೋಭಯಂಕರಂ ಮಂಹಿಷ್ಠಮುಭಯಾವಿನಂ ॥ ೨ ॥

॥ ಪದಪಾಠಃ ॥

ಅವऽಕ್ರಕ್ಷಿಣಂ । ವೃಷಭಂ । ಯಥಾ । ಅಜುರಂ । ಗಾಂ । ನ । ಚರ್ಷಣಿऽಸಹಂ ।
ವಿऽದ್ವೇಷಣಂ । ಸಂऽವನನಾ । ಉಭಯಂऽಕರಂ । ಮಂಹಿಷ್ಠಂ । ಉಭಯಾವಿನಂ ॥ ೨ ॥

॥ ಸಾಯಣಭಾಷ್ಯಂ ॥

ವೃಷಭಂ ಯಥಾ ವೃಷಭಮಿವಾವಕ್ರಕ್ಷಿಣಮವಕರ್ಷಣಶೀಲಂ ಶತ್ರೂಣಾಂ ಹಿಂಸಿತಾರಮಜುರಂ ಜರಾರಹಿತಮಹಿಂಸಿತಂ ವಾ ಗಾಂ ನ ಗಾಮಿವ ವೃಷಮಿವ ಚರ್ಷಣೀಸಹಂ ಚರ್ಷಣೀನಾಂ ಮನುಷ್ಯಾಣಾಂ ಶತ್ರುಭೂತಾನಾಮಭಿಭವಿತಾರಂ ವಿದ್ವೇಷಣಂ ವಿದ್ವೇಷ್ಟಾರಂ ಶತ್ರೂಣಾಂ ಸಂವನನಾ ಸಂವನನಂ ಸಮ್ಯಕ್ಸಂಭಜನೀಯಂ ಸ್ತೋತೃಭಿರುಭಯಂಕರಂ ನಿಗ್ರಹಾನುಗ್ರಹಯೋರುಭಯೋಃ ಕರ್ತಾರಂ ಮಂಹಿಷ್ಠಂ ದಾತೃತಮಮುಭಯಾವಿನಂ ದಿವ್ಯಪಾರ್ಥಿವಲಕ್ಷಣೇನೋಭಯವಿಧಧನೇನೋಪೇತಂ । ಯದ್ವಾ । ಸ್ಥಾವರಜಂಗಮರೂಪೇಣ ದ್ವಿಪ್ರಕಾರೇಣ ರಕ್ಷಿತವ್ಯೇನೋಪೇತಂ । ಅಥವೋಭಯವಿಧೈಃ ಸ್ತೋತೃಭಿರ್ಯಷ್ಟೃಭಿಶ್ಚೋಪೇತಂ । ಏವಂವಿಧಮಿಂದ್ರಮಿತ್ ಸ್ತೋತೇತ್ಯನ್ವಯಃ ॥

॥ ಪ್ರತಿಪದಾರ್ಥ ॥

ವೃಷಭಂ ಯಥಾ—ವೃಷಭದಂತೆ । ಅವಕ್ರಕ್ಷಿಣಂ - ಶತ್ರುಗಳನ್ನು ಹಿಂಸಿಸುವವನೂ । ಅಜುರಂ—ಜರಾರಹಿತನೂ । ಗಾಂ ನ—ಎತ್ತಿನಂತೆ । ಚರ್ಷಣೀಸಹಂ—ಶತ್ರುಗಳನ್ನು ಸೋಲಿಸುವವನೂ । ವಿದ್ವೇಷಣಂ—ಶತ್ರುಗಳನ್ನು ದ್ವೇಷಿಸುವವನೂ । ಸಂವನನಾ—ಸ್ತೋತೃಗಳಿಗೆ ಪೂಜ್ಯನೂ । ಉಭಯಂಕರಂ—ದುಷ್ಟನಿಗ್ರಹ ಮತ್ತು ಶಿಷ್ಟಾನುಗ್ರಹ ಇವೆರಡಕ್ಕೂ ಸಮರ್ಥನೂ । ಮಂಹಿಷ್ಠಂ—ಉದಾರವಾದ ದಾತೃವೂ । ಉಭಯಾವಿನಂ—ದಿವ್ಯಪಾರ್ಥಿವರೂಪವಾದ ಎರಡು ವಿಧವಾದ ಸಂಪದ್ಯುಕ್ತನೂ ಆದ (ಇಂದ್ರನನ್ನೇ ಸ್ತುತಿಸಿರಿ).

॥ ಭಾವಾರ್ಥ ॥

ವೃಷಭದಂತೆ ಶತ್ರುಗಳನ್ನು ಹಿಂಸಿಸುವವನೂ, ಜರಾರಹಿತನೂ, ಎತ್ತಿನಂತೆ ಶತ್ರುಗಳನ್ನು ಸೋಲಿಸುವವನೂ, ಶತ್ರುಗಳನ್ನು ದ್ವೇಷಿಸುವವನೂ, ಸ್ತೋತೃಗಳಿಗೆ ಪೂಜ್ಯನೂ, ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ಅನುಗ್ರಹದಿಂದ

ಪಾಲಿಸುವವನೂ, ಉದಾರವಾದ ದಾತೃವೂ, ದಿವ್ಯಪಾರ್ಥಿವರೂಪವಾದ ಎರಡು ವಿಧವಾದ ಸಂಪದ್ಯುಕ್ತನೂ ಆದ ಇಂದ್ರನನ್ನೇ ಸೇವಿಸಿರಿ.

## English Translation

A bull rushing (upon his foes), undecaying, like an ox, the overcomer of (hostile) men, the hater (of adversaries), the venerable, the displayer of both (enmity and favour), the munificent, the distributor of both (celestial and terrestrial riches).

॥ ಸಂಹಿತಾಪಾಠಃ ॥

ಯಚ್ಚಿದ್ಧಿ ತ್ವಾ ಜನಾ ಇಮೇ ನಾನಾ ಹವಂತ ಊತಯೇ ।

ಅಸ್ಮಾಕಂ ಬ್ರಹ್ಮೇದಮಿಂದ್ರ ಭೂತು ತೇಽಹಾ ವಿಶ್ವಾ ಚ ವರ್ಧನಂ ॥ ೩ ॥

॥ ಪದಪಾಠಃ ॥

ಯತ್ । ಚಿತ್ । ಹಿ । ತ್ವಾ । ಜನಾಃ । ಇಮೇ । ನಾನಾ । ಹವಂತೇ । ಊತಯೇ ।

ಅಸ್ಮಾಕಂ । ಬ್ರಹ್ಮ । ಇದಂ । ಇಂದ್ರ । ಭೂತು । ತೇ । ಅಹಾ । ವಿಶ್ವಾ । ಚ । ವರ್ಧನಂ ॥ ೩ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಯಚ್ಚಿದ್ಧಿ ತ್ವೇತಿ ಪ್ರಗಾಥಸ್ತೃತೀಯಶ್ಚಕಲ್ಪಿತೋಽನುರೂಪಃ ಪ್ರಗಾಥಃ । ಸೂತ್ರಂ ತೂದಾಹೃತಂ ॥

ಇಮೇ ದೃಶ್ಯಮಾನಾಃ ಸರ್ವೇ ಜನಾ ಹೇ ಇಂದ್ರ ತ್ವಾಮೂತಯೇ ರಕ್ಷಣಾಯ ತರ್ಪಣಾಯ ವಾ ನಾನಾ ಪೃಥಕ್ಪೃಥಕ್ ಯಚ್ಚಿದ್ಯದ್ಯಪಿ ಹವಂತೇ ಸ್ತುವಂತಿ । ಹೀತಿ ಪೂರಣಃ । ತಥಾಪ್ಯಸ್ಮಾಕಮಿದಂ ಬ್ರಹ್ಮ ಸ್ತೋತ್ರಮೇವ ಹೇ ಇಂದ್ರ ತೇ ತವ ವರ್ಧನಂ ವರ್ಧಕಂ ಭೂತು । ಭವತು । ನ ಕೇವಲಮಿದಾನೀಮೇವ ಅಪಿ ತು ವಿಶ್ವಾಹಾ ಸರ್ವಾಣ್ಯಹಾನಿ ಸರ್ವೇಷ್ವಹಃಸು ಚೇದಮೇವ ಸ್ತೋತ್ರಂ ತ್ವಾಂ ವರ್ಧಯತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಇಮೇ ಜನಾಃ—ಇಲ್ಲಿರುವ ಉಳಿದವರೂ ಸಹ । ಊತಯೇ—ತಮ್ಮ ರಕ್ಷಣಾರ್ಥವಾಗಿ । ನಾನಾ—ಅನೇಕವಿಧವಾಗಿ । ಯಚ್ಚಿತ್—ಒಂದು ವೇಳೆ । ತ್ವಾ—ನಿನ್ನನ್ನು । ಹವಂತೇ ಹಿ—ಸ್ತುತಿಸಿದರೂ ಕೂಡ । ಅಸ್ಮಾಕಂ—ನಮ್ಮಿಂದ ಪಠಿತವಾದ । ಇದಂ ಬ್ರಹ್ಮ—ಈ ಸ್ತೋತ್ರವೇ । ವಿಶ್ವಾಹಾ ಚ—ಸಕಲದಿನಗಳಲ್ಲಿಯೂ । ತೇ—ನಿನ್ನ । ವರ್ಧನಂ—ಬೆಳವಣಿಗೆಗೆ ಸಾಧಕವಾಗಿ । ಭೂತು—ಆಗಿರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಇಲ್ಲಿರುವ ಉಳಿದ ಜನರೂ ಸಹ ತಮ್ಮ ರಕ್ಷಣೆಯನ್ನಪೇಕ್ಷಿಸಿ ನಿನ್ನನ್ನು ಅನೇಕವಿಧವಾಗಿ ಸ್ತುತಿಸುವುದು ಸಹಜವಾಗಿದೆ. ಆದರೂ ಸಹ ನಮ್ಮಿಂದ ಪಠಿತವಾದ ಈ ಸ್ತುತಿಯೇ ಸಕಲದಿನಗಳಲ್ಲಿಯೂ ನಿನ್ನ ವೃದ್ಧಿಗೆ ಸಾಕ್ಷಾತ್ಸಾಧನವಾಗಿರಲಿ (ನಿನಗೆ ಪ್ರೀತಿದಾಯಕವಾಗಿರಲಿ).

## English Translation

Although these people worship you, Indra, in many ways to (secure) your protection, (yet) may this our prayer be throughout all days your magnification.

॥ ವಿಶೇಷವಿಷಯಗಳು ॥

ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಪ್ರಶಾಸ್ತೃವೆಂಬ ಋತ್ವಿಜನು ಯಚ್ಚಿದ್ಧಿ ತ್ವಾ ಎಂಬ ಈ ಋಕ್ಕನ್ನು ವೈಕಲ್ಪಿಕಾನುರೂಪಪ್ರಗಾಥಮಂತ್ರವನ್ನಾಗಿ ಪಠಿಸಬೇಕೆಂದು ಹೇಳಿರುವ ಆಶ್ವಲಾಯನಶ್ರೌತಸೂತ್ರವನ್ನು ಹಿಂದೆಯೇ ಹೇಳಲಾಗಿದೆ.

॥ ಸಂಹಿತಾಪಾಠಃ ॥

ವಿ ತರ್ತೂರ್ಯಂತೇ ಮಘವನ್ವಿಪಶ್ಚಿತೋಽರ್ಯೋ ವಿಪ್ರೋ ಜನಾನಾಂ ।
ಉಪ ಕ್ರಮಸ್ವ ಪುರುರೂಪಮಾ ಭರ ವಾಜಂ ನೇದಿಷ್ಠಮೂತಯೇ ॥ ೪ ॥

॥ ಪದಪಾಠಃ ॥

ವಿ । ತರ್ತೂರ್ಯಂತೇ । ಮಘಽವನ್ । ವಿಪಃಽಚಿತಃ । ಅರ್ಯಃ । ವಿಪಃ । ಜನಾನಾಂ ।
ಉಪ । ಕ್ರಮಸ್ವ । ಪುರುಽರೂಪಂ । ಆ । ಭರ । ವಾಜಂ । ನೇದಿಷ್ಠಂ । ಊತಯೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಮಘವನ್ ಧನವನ್ನಿಂದ್ರ ವಿಪಶ್ಚಿತೋ ವಿದ್ವಾಂಸಸ್ತ್ವದೀಯಾಃ ಸ್ತೋತಾರೋಽರ್ಯೋಽಭಿಗಂತಾರೋ ಜನಾನಾಂ ಶತ್ರೂಣಾಂ ವಿಪ್ರೋ ವೇಪಯಿತಾರಃ ಸಂತೋ ವಿ ತರ್ತೂರ್ಯಂತೇ । ಭೃಶಮಾಪದೋ ವಿತರಂತಿ । ಅತಿಕ್ರಾಮಂತಿ । ತಾದೃಶಸ್ತ್ವಮುಪ ಕ್ರಮಸ್ವ । ಉಪಗಚ್ಛಾಸ್ಮಾನ್ । ಪುರುರೂಪಂ ಬಹುರೂಪಂ ನೇದಿಷ್ಠಮಂತಿಕತಮಂ ವಾಜಮನ್ನಮೂತಯೇ ತರ್ಪಣಾಯಾ ಭರಾಸ್ಮಭ್ಯಂ ॥

॥ ಪ್ರತಿಪದಾರ್ಥ ॥

ಮಘವನ್—ಧನವಂತನಾದ ಎಲೈ ಇಂದ್ರನೇ । ವಿಪಶ್ಚಿತಃ—ವಿವೇಕಿಗಳಾದ ನಿನ್ನ ಸ್ತುತಿಕರ್ತರು । ಅರ್ಯಃ—ಶತ್ರುಗಳನ್ನು ಜಯಿಸುವವರಾಗಿಯೂ । ಜನಾನಾಂ—ಶತ್ರುಜನರನ್ನು । ವಿಪಃ—ನಡುಗಿಸುವವರಾಗಿಯೂ ಇದ್ದು । ವಿ ತರ್ತೂರ್ಯಂತೇ—(ನಿನ್ನ ಅನುಗ್ರಹದಿಂದ) ಅನೇಕ ಆಪತ್ತುಗಳನ್ನು ದಾಟುತ್ತಾರೆ.। (ಅಂತಹ ಸಾಮರ್ಥ್ಯವುಳ್ಳ ನೀನು) । ಉಪ ಕ್ರಮಸ್ವ—ನಮ್ಮ ಹತ್ತಿರ ದಯಮಾಡು । ಪುರುರೂಪಂ—ನಾನಾವಿಧವಾಗಿರತಕ್ಕದ್ದೂ । ನೇದಿಷ್ಠಂ—ಯಾವಾಗಲೂ ನಮ್ಮ ಸಮೀಪದಲ್ಲೇ ಸ್ಥಿರವಾಗಿರತಕ್ಕದ್ದೂ ಆದ । ವಾಜಂ—ಅನ್ನವನ್ನು । ಊತಯೇ—ನಮ್ಮ ತೃಪ್ತ್ಯರ್ಥವಾಗಿ । ಆ ಭರ—ತಂದೊದಗಿಸು.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ವಿವೇಕಿಗಳಾದ ನಿನ್ನ ಸ್ತುತಿಕರ್ತರು ಶತ್ರುಗಳನ್ನು ಜಯಿಸುವವರಾಗಿಯೂ, ಶತ್ರುಜನರನ್ನು ನಡುಗಿಸುವವರಾಗಿಯೂ ಇದ್ದು ಅನೇಕ ಆಪತ್ತುಗಳನ್ನು ದಾಟಲು ಶಕ್ತರಾಗುತ್ತಾರೆ. ಇವೆಲ್ಲವೂ ನಿನ್ನ ಅನುಗ್ರಹವೇ ಆಗಿರುತ್ತದೆ. ಇಂತಹ ಸಾಮರ್ಥ್ಯವುಳ್ಳ ನೀನು ನಮ್ಮ ಹತ್ತಿರ ದಯಮಾಡು. ನಾನಾವಿಧವಾಗಿ ಇರತಕ್ಕದ್ದೂ, ಯಾವಾಗಲೂ ನಮ್ಮಲ್ಲೇ ಸ್ಥಿರವಾಗಿರತಕ್ಕದ್ದೂ ಆದ ಅನ್ನವನ್ನು ತೃಪ್ತ್ಯರ್ಥವಾಗಿ ತಂದೊದಗಿಸು.

## English Translation

The sages (your worshippers), Maghavan, the overcomers (of foes) the terrifiers of (hostile) people, pass over various (calamities by your aid): come nigh and bring many sorts of food, and available for our preservation.

॥ ಸಂಹಿತಾಪಾಠಃ ॥

ಮಹೇ ಚನ ತ್ವಾಮದ್ರಿವಃ ಪರಾ ಶುಲ್ಕಾಯ ದೇಯಾಂ ।
ನ ಸಹಸ್ರಾಯ ನಾಯುತಾಯ ವಜ್ರಿವೋ ನ ಶತಾಯ ಶತಾಮಘ ॥ ೫ ॥

॥ ಪದಪಾಠಃ ॥

ಮಹೇ । ಚನ । ತ್ವಾಂ । ಅದ್ರಿऽವಃ । ಪರಾ । ಶುಲ್ಕಾಯ । ದೇಯಾಂ ।
ನ । ಸಹಸ್ರಾಯ । ನ । ಅಯುತಾಯ । ವಜ್ರಿऽವಃ । ನ । ಶತಾಯ । ಶತऽಮಘ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅದ್ರಿವೋ ವಜ್ರವನ್ನಿಂದ್ರ ತ್ವಾಂ । ಚನೇತಿ ನಿಪಾತದ್ವಯಸಮುದಾಯೋ ವಿಭಕ್ತ್ಯ ಯೋಜನೀಯಃ । ಮಹೇ ಚ ಮಹತೇऽಪಿ ಶುಲ್ಕಾಯ ಮೂಲ್ಯಾಯ ನ ಪರಾ ದೇಯಾಂ । ನ ವಿಕ್ರೀ-

ಣಾನಿ । ಹೇ ವಜ್ರಿವೋ ವಜ್ರಹಸ್ತೇಂದ್ರ ಸಹಸ್ರಾಯ ಸಹಸ್ರಸಂಖ್ಯಾಯ ಚ ಧನಾಯ ನ ಪರಾ ದೇಯಾಂ । ಅಯುತಾಯ ದಶಸಹಸ್ರಾಯ ಚ ಶುಲ್ಕಾಯ ನ ಪರಾ ದೇಯಾಂ । ಹೇ ಶತಾಮಘ ಬಹುಧನೇಂದ್ರ ಶತಾಯ । ಬಹುನಾಮ್ಯೈತತ್ । ಅಪರಿಮಿತಾಯ ಚ ಧನಾಯ ನ ಪರಾ ದೇಯಾಂ । ನ ವಿಕ್ರೀಣಾನಿ । ಉಕ್ತಸಂಖ್ಯಾದ್ಧನಾದಪಿ ತ್ವಂ ಮಮ ಪ್ರಿಯತಮೋಽಸೀತ್ಯರ್ಥಃ ॥

। ಪ್ರತಿಪದಾರ್ಥ ।

ಅದ್ರಿವಃ—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । ತ್ವಾಂ ಚ—ನಿನ್ನನ್ನಾದರೋ । ಮಹೇ—ಮಹತ್ತಾದ । ಶುಲ್ಕಾಯ—ಮೌಲ್ಯಕ್ಕೂ । ನ ಪರಾ ದೇಯಾಂ—ಇತರರಿಗೆ ಬಿಟ್ಟುಕೊಡೆನು । ವಜ್ರಿವಃ—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । ಸಹಸ್ರಾಯ—ಸಹಸ್ರಸಂಖ್ಯೆಯುಳ್ಳ ಧನಕ್ಕೂ । ನ—ಬಿಟ್ಟುಕೊಡೆನು। ಅಯುತಾಯ—ದಶಸಹಸ್ರಕ್ಕೂ । ನ—ಬೇರೆಯವರ ವಶಮಾಡಲಾರೆನು । ಶತಾಮಘ—ಅತ್ಯಧಿಕವಾದ ಧನವಂತನಾದ ಎಲೈ ಇಂದ್ರನೇ । ಶತಾಯ—ಅಪರಿಮಿತವಾದ ಧನಕ್ಕೂ ನಿನ್ನನ್ನು । ನ—ನಾನು ಬಿಡೆನು.

। ಭಾವಾರ್ಥ ।

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಅತ್ಯಪರಿಮಿತವಾದ ಐಶ್ವರ್ಯಕ್ಕಿಂತಲೂ ನೀನೇ ಅಧಿಕನು. ಆದುದರಿಂದ ಇತರರು ನಿನಗಾಗಿ ಶತಸಂಖ್ಯಾಕವಾಗಲಿ, ಸಹಸ್ರಸಂಖ್ಯಾಕವಾಗಲಿ ಅಥವಾ ಅತ್ಯಪರಿಮಿತವಾಗಿಯಾಗಲಿ ಎಷ್ಟೇ ಧನವನ್ನು ನಿನ್ನ ಮೌಲ್ಯಕ್ಕಾಗಿ ಕೊಟ್ಟರೂ ಸಹ, ಅತ್ಯಧಿಕವಾದ ಧನವಂತನಾದ ಎಲೈ ಇಂದ್ರನೇ, ನಿನಗಿಂತಲೂ ನಿಕೃಷ್ಟವಾದ ಮೌಲ್ಯಕ್ಕಾಗಿ ಆಸೆಪಟ್ಟು ನಿನ್ನನ್ನು ಬೇರೆಯವರಿಗೆ ಬಿಟ್ಟುಕೊಡಲಾರೆನು.

## English Translation

Wielder of the thunderbolt, I would not sell you for a large price, not for a thousand, nor for ten thousand, nor, opulent bearer of the thunderbolt, for a hundred.

। ಸಂಹಿತಾಪಾಠಃ ।

ವಸ್ಯಾँ ಇಂದ್ರಾಸಿ ಮೇ ಪಿತುರುತ ಭ್ರಾತುರಭುಂಜತಃ ।
ಮಾತಾ ಚ ಮೇ ಛದಯಥಃ ಸಮಾ ವಸೋ ವಸುತ್ವನಾಯ ರಾಧಸೇ ॥೬॥

। ಪದಪಾಠಃ ।

ವಸ್ಯಾನ್ । ಇಂದ್ರ । ಅಸಿ । ಮೇ । ಪಿತುಃ । ಉತ । ಭ್ರಾತುಃ । ಅಭುಂಜತಃ ।
ಮಾತಾ । ಚ । ಮೇ । ಛದಯಥಃ । ಸಮಾ । ವಸೋ ಇತಿ । ವಸುಽತ್ವನಾಯ । ರಾಧಸೇ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಂ ಮೇ ಮದೀಯಾತ್ಪಿತುರ್ಜನಕಾದಪಿ ವಸ್ಯಾನ್ ವಸೀಯಾನ್ ವಸುಮತ್ತರೋಽಸಿ । ಉತಾಪಿ ಚಾಭುಂಜತೋಽಪಾಲಯತೋ ಮಮ ಭ್ರಾತುರಪಿ ವಸೀಯಾಂಸ್ತ್ವಮಧಿಕೋಽಸಿ। ಹೇ ವಸೋ ವಾಸಕೇಂದ್ರ ಮೇ ಮದೀಯಾ ಮಾತಾ ಚ ತ್ವಂ ಚ ಸಮಾ ಸಮೌ ಸಮಾನೌ ಸಂತೌ ॥ ಪುಮಾನ್ ಸ್ತ್ರಿಯಾ । ಪಾ. ೧-೨.೬೭. । ಇತಿ ಪುಂಸಃ ಶೇಷಃ ॥ ಛದಯಥಃ । ಅರ್ಚತಿಕರ್ಮಾಯಂ । ಮಾಂ ಪೂಜಿತಂ ಕುರುಥಃ । ಕಿಮರ್ಥಂ । ವಸುತ್ವನಾಯ ವ್ಯಾಪನಾಯ ರಾಧಸೇ ಧನಾಯ ಚ । ಉಭಯೋರ್ಲಾಭಾಯೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಮೇ**—ನನ್ನ । **ಪಿತುಃ**—ತಂದೆಗಿಂತಲೂ । **ವಸ್ಯಾನ್**—ನೀನೇ ಅಧಿಕನಾಗಿ । **ಅಸಿ**—ಆಗಿದ್ದೀಯೆ । **ಉತ**—ಮತ್ತು । **ಅಭುಂಜತಃ**—ನನ್ನನ್ನು ಪಾಲಿಸದೇ ಇರುವ । **ಭ್ರಾತುಃ**—ಸಹೋದರನಿಗಿಂತಲೂ ನೀನೇ ಅಧಿಕನು । **ವಸೋ**—ವಸತಿದಾಯಕನಾದ ಎಲೈ ಇಂದ್ರನೇ । **ಮೇ**—ನನ್ನ । **ಮಾತಾ ಚ**—ತಾಯಿಯೂ ನೀನೂ ಸಹ । **ಸಮಾ**-ಒಂದೇ ಸಮನಾಗಿದ್ದೀರಿ (ಏತಕ್ಕೆಂದರೆ) । **ವಸುತ್ವನಾಯ**—ನನ್ನ ಉತ್ತಮವಾದ ಸ್ಥಿತಿಗೂ । **ರಾಧಸೇ**—ಧನಲಾಭಕ್ಕೂ ಸಹ । **ಛದಯಥಃ**—ನನ್ನನ್ನು ಅರ್ಹನನ್ನಾಗಿ ಮಾಡುತ್ತೀರಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನನ್ನ ತಂದೆಗಿಂತಲೂ ನೀನೇ ಅಧಿಕನು. ನನ್ನನ್ನು ಪಾಲಿಸದೇ ಇರುವ ಸಹೋದರನಿಗಿಂತಲೂ ನೀನೇ ಅಧಿಕನು. ವಸತಿದಾಯಕನಾದ ಎಲೈ ಇಂದ್ರನೇ, ನನ್ನ ತಾಯಿಯೂ ನೀನೂ ಸಹ ಒಂದೇ ಸಮನಾಗಿದ್ದೀರಿ. ಏತಕ್ಕೆಂದರೆ ನನ್ನ ಉತ್ತಮವಾದ ಸ್ಥಿತಿಗೂ ಧನಲಾಭಕ್ಕೂ ನನ್ನನ್ನು ಅರ್ಹನನ್ನಾಗಿ ಮಾಡುತ್ತೀರಿ.

## English Translation

You are more precious, Indra, than my father, or than my brother, who is not affectionate: you, giver of dwellings, are equal to my mother, for you both render me distinguished on account of celebrity and riches.

॥ ಸಂಹಿತಾಪಾಠಃ ॥

**ಕ್ವೇಯಥ ಕ್ವೇದಸಿ ಪುರುತ್ರಾ ಚಿದ್ಧಿ ತೇ ಮನಃ ।**
**ಅಲರ್ಷಿ ಯುಧ್ಮ ಖಜಕೃತ್ಪುರಂದರ ಪ್ರ ಗಾಯತ್ರಾ ಅಗಾಸಿಷುಃ ॥ ೭ ॥**

॥ ಪದಪಾಠಃ ॥

**ಕ್ವ । ಇಯಥ । ಕ್ವ । ಇತ್ । ಅಸಿ । ಪುರುऽತ್ರಾ । ಚಿತ್ । ಹಿ । ತೇ । ಮನಃ ।**

ಅಲರ್ಷಿ । ಯುಧ್ಮ । ಖಜಽಕೃತ್ । ಪುರಂಽದರ । ಪ್ರ । ಗಾಯತ್ರಾಃ । ಅಗಾಸಿಷುಃ ॥ ೭ ॥

। ಸಾಯಣಭಾಷ್ಯಂ ।

ಹೇ ಇಂದ್ರ ಕ್ವ ಕುತ್ರ ದೇಶ ಇಯಥ । ಗತವಾನಸಿ ಪುರಾ । ಕ್ವೇತ್ ಕುತ್ರ ಚಾಸಿ । ಭವಸಿ । ಇದಾನೀಂ ವರ್ತಸೇ । ಪುರುತ್ರಾ ಚಿದ್ಧಿ ಬಹುಷು ಹಿ ಯಜಮಾನೇಷು ತೇ ತ್ವದೀಯಂ ಮನಃ ಸಂಚರತಿ। ಹೇ ಯುಧ್ಮ ಯುದ್ಧಕುಶಲ ಖಜಕೃದ್ಯುದ್ಧಸ್ಯ ಕರ್ತರ್ಹೇ ಪುರಂದರಾಸುರೀಣಾಂ ಪುರಾಂ ದಾರಯಿತರ್ಹೇ ಇಂದ್ರ ಅಲರ್ಷಿ । ಆಗಚ್ಛ । ಗಾಯತ್ರಾ ಗಾನಕುಶಲಾ ಅಸ್ಮದೀಯಾಃ ಸ್ತೋತಾರಃ ಪ್ರಾಗಾಸಿಷುಃ । ಪ್ರಗಾಯಂತಿ । ಸ್ತುವಂತಿ ॥ ಅಲರ್ಷೀತ್ಯೇತತ್ ದಾಧರ್ತ್ಯಾದೌ । ಪಾ. ೭-೪-೬೫ । ಇಯರ್ತೇರ್ನಿಪಾತ್ಯತೇ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) ಕ್ವ—ಯಾವ ಪ್ರದೇಶಕ್ಕೆ । ಇಯಥ—ಈಗ ನೀನು ಹೋಗಿದ್ದೀಯೆ ? । ಕ್ವೇತ್—ಎಲ್ಲಿ ತಾನೇ । ಅಸಿ—ಸ್ಥಿತನಾಗಿದ್ದೀಯೆ ? । ತೇ—ನಿನ್ನ । ಮನಃ—ಮನಸ್ಸು । ಪುರುತ್ರಾ ಚಿದ್ಧಿ—ಅನೇಕ ಯಜಮಾನರಲ್ಲಿ ಸಂಚರಿಸುತ್ತದೆಯಲ್ಲವೇ ? । ಯುಧ್ಮ—ಯುದ್ಧಕುಶಲನೂ । ಖಜಕೃತ್—ಯುದ್ಧದಲ್ಲಿ ನಿರತನೂ। ಪುರಂದರ—ಶತ್ರುಪಟ್ಟಣಗಳನ್ನು ನಾಶಮಾಡುವವನೂ ಆದ ಎಲೈ ಇಂದ್ರನೇ । ಅಲರ್ಷಿ—ದಯಮಾಡು । ಗಾಯತ್ರಾಃ—ಗಾನಕುಶಲರಾದ ನಮ್ಮ ಸ್ತೋತೃಗಳು । ಪ್ರ ಅಗಾಸಿಷುಃ—ನಿನ್ನನ್ನು ಸ್ತುತಿಸಿ ಅತ್ಯುತ್ತಮವಾಗಿ ಗಾನಮಾಡುತ್ತಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಪ್ರಕೃತದಲ್ಲಿ ಯಾವ ಪ್ರದೇಶಕ್ಕೆ ಹೋಗಿದ್ದೀಯೆ ? ಎಲ್ಲಿ ನೆಲೆಸಿದ್ದೀಯೆ ? ನಿನ್ನ ಮನಸ್ಸು ಅನೇಕ ಯಜಮಾನರಲ್ಲಿ ನೆಲೆಸಿರುವುದು ಸಹಜವಾಗಿದೆ. ಯುದ್ಧಕುಶಲನೂ, ಯುದ್ಧದಲ್ಲಿ ನಿರತನೂ, ಶತ್ರುಪಟ್ಟಣಗಳನ್ನು ನಾಶಮಾಡುವವನೂ ಆದ ಎಲೈ ಇಂದ್ರನೇ, ಗಾನಕುಶಲರಾದ ನಮ್ಮ ಸ್ತೋತೃಗಳು ನಿನ್ನನ್ನು ಪ್ರಶಂಸಿಸುವ ಸ್ತುತಿಗಳನ್ನು ಗಾನಮಾಡುತ್ತಾರೆ. ನಮ್ಮ ಯಾಗಕ್ಕೆ ದಯಮಾಡು.

## English Translation

Whither have you gone ? where, indeed are you, now ? Verily your mind (wanders) amongst many (worshippers) : martial, volorous Purandara, come hither ; the chaunters are singing (your praise),

॥ ಸಂಹಿತಾಪಾಠಃ ॥

ಪ್ರಾಸ್ಮೈ ಗಾಯತ್ರಮರ್ಚತ ವಾವಾತುರ್ಯಃ ಪುರಂದರಃ ।

ಯಾಭಿಃ ಕಾಣ್ವಸ್ಯೋಪ ಬರ್ಹಿರಾಸದಂ ಯಾಸದ್ವಜ್ರೀ ಭಿನತ್ಪುರಃ ॥ ೮ ॥

॥ ಪದಪಾಠಃ ॥

ಪ್ರ । ಅಸ್ಮೈ । ಗಾಯತ್ರಂ । ಅರ್ಚತ । ವವಾತುಃ । ಯಃ । ಪುರಂಽದರಃ ।
ಯಾಭಿಃ । ಕಾಣ್ವಸ್ಯ । ಉಪ । ಬರ್ಹಿಃ । ಆಽಸದಂ ಯಾಸತ್ । ವಜ್ರೀ । ಭಿನತ್ । ಪುರಃ ॥ ೮ ॥

॥ ಸಾಯಣಭಾಷ್ಯಂ ॥

ಅಸ್ಮಾ ಇಂದ್ರಾಯ ಗಾಯತ್ರಂ ಗಾತವ್ಯಂ ಸಾಮ ಗಾಯತ್ರಸಂಜ್ಞಂ ವಾ ಪ್ರಾರ್ಚತ । ಪ್ರಗಾಯತ । ಪುರಂದರಃ ಪುರಾಂ ದಾರಯಿತಾ ಯ ಇಂದ್ರೋ ವಾವಾತುರ್ವನನೀಯಃ ಸಂಭಜನೀಯಃ । ಯದ್ವಾ । ವಾವಾತುಃ ಸಂಭಕ್ತುಃ ಸ್ತೋತುರ್ಯ ಇಂದ್ರಃ ಪುರಂದರಃ ಶತ್ರುಪುರಾಣಾಂ ದಾರಯಿತಾ । ಯಾಭಿರ್ಗೀರ್ಭಿಃ ಕಾಣ್ವಸ್ಯ ಕಣ್ವಪುತ್ರಸ್ಯ ಮೇಧಾತಿಥೇರ್ಮೇಧ್ಯಾತಿಥೇಶ್ಚ ಬರ್ಹಿರ್ಯಜ್ಞಮುಪಾಸದಮುಪಾಸತ್ತುಮುಪಗಂತುಂ ಯಾಸತ್ ಗಚ್ಛೇತ್ ವಜ್ರೀ ವಜ್ರಯುಕ್ತಃ ಸನ್ । ಯಾಭಿರ್ಗೀರ್ಭಿಃ ಸ್ತೂಯಮಾನಃ ಸನ್ ಪುರಃ ಶಾತ್ರವೀರ್ಭಿನತ್ ಭಿಂದ್ಯಾತ್ । ತಾಸ್ವೃಕ್ಷು ಗಾಯತ್ರಂ ಸಾಮ ಗಾಯತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ವಾವಾತುಃ**—ತನ್ನ ಸ್ತುತಿಕರ್ತನಿಗಾಗಿ । **ಪುರಂದರಃ**—ಶತ್ರುಪಟ್ಟಣಗಳನ್ನು ನಾಶಮಾಡುವನೋ । **ಅಸ್ಮೈ**—ಅಂತಹ ಇಂದ್ರನನ್ನುದ್ದೇಶಿಸಿ । **ಯಾಭಿಃ**—ಯಾವ ಋಕ್ಕುಗಳಿಂದ ಪ್ರಶಂಸಿತನಾಗಿ । **ವಜ್ರೀ**—ವಜ್ರಾಯುಧಧಾರಿಯಾದ ಇಂದ್ರನು । **ಕಾಣ್ವಸ್ಯ**—ಕಣ್ವಪುತ್ರನಾದ ಮೇಧಾತಿಥಿಯ । **ಬರ್ಹಿಃ**—ಯಜ್ಞಾಸನದಲ್ಲಿ । **ಉಪ ಆಸದಂ**—ಕುಳಿತುಕೊಳ್ಳಲು । **ಯಾಸತ್**—ಬರುವನೋ (ಅಲ್ಲದೇ, ಯಾವ ಋಕ್ಕುಗಳಿಂದ ಪ್ರಶಂಸಿತನಾದಾಗ) । **ಪುರಃ**—ಶತ್ರುಪಟ್ಟಣಗಳನ್ನು । **ಭಿನತ್**—ಸೀಳುವನೋ ಅಂತಹ ಋಕ್ಕುಗಳಲ್ಲಿ ಸಂಯೋಜಿತವಾದ । **ಗಾಯತ್ರಂ**—ಗಾಯತ್ರಸಂಜ್ಞಕವಾದ ಸಾಮವನ್ನು । **ಪ್ರ ಅರ್ಚತ**—ಗಾನಮಾಡಿ ಪಠಿಸಿರಿ.

॥ ಭಾವಾರ್ಥ ॥

ಯಾವ ಇಂದ್ರನು ತನ್ನ ಸ್ತುತಿಕರ್ತನ ಶತ್ರುಪಟ್ಟಣಗಳನ್ನು ನಾಶಮಾಡುವನೋ, ಅಂತಹ ಇಂದ್ರನನ್ನುದ್ದೇಶಿಸಿ ಅವನನ್ನು ಪ್ರಶಂಸಿಸಿದೊಡನೆಯೇ ವಜ್ರಾಯುಧಧಾರಿಯಾದ ಇಂದ್ರನನ್ನು ಕಣ್ವಪುತ್ರನಾದ ಮೇಧಾತಿಥಿಯ ಯಜ್ಞಾಸನದಲ್ಲಿ ಬಂದು ಕುಳಿತುಕೊಳ್ಳುವಂತೆ ಮಾಡುವ ಶಕ್ತಿಯುಳ್ಳವೂ ಮತ್ತು ಪ್ರಶಂಸಿಸಿದೊಡನೆಯೇ ಹೃಷ್ಟನಾದ ಇಂದ್ರನನ್ನ ಶತ್ರುಪಟ್ಟಣಗಳಲ್ಲಿ ಸೀಳುವಂತೆ ಪ್ರೇರಿಸತಕ್ಕವೂ ಆದ ಋಕ್ಕುಗಳಲ್ಲಿ ಸಂಯೋಜಿತವಾದ ಗಾಯತ್ರಸಂಜ್ಞಕವಾದ ಸಾಮವನ್ನು ಪಠಿಸಿ ಇಂದ್ರನನ್ನು ಪ್ರಶಂಸಿಸಿರಿ.

## English Translation

Raise the sacred chaunt to him who is the destroyer of the cities (of the foes) of his worshipper, (induced) by which may the thunderer come to sit down at the sacrifice of the sons of Kanwa, and destroy the cities (of their enemies).

। ಸಂಹಿತಾಪಾಠಃ ।

ಯೇ ತೇ ಸಂತಿ ದಶಗ್ವಿನಃ ಶತಿನೋ ಯೇ ಸಹಸ್ರಿಣಃ ।

ಅಶ್ವಾಸೋ ಯೇ ತೇ ವೃಷಣೋ ರಘುದ್ರುವಸ್ತೇಭಿರ್ನಸ್ತೂಯಮಾ ಗಹಿ ॥

। ಪದಪಾಠಃ ।

ಯೇ । ತೇ । ಸಂತಿ । ದಶಽಗ್ವಿನಃ । ಶತಿನಃ । ಯೇ । ಸಹಸ್ರಿಣಃ ।

ಅಶ್ವಾಸಃ । ಯೇ । ತೇ । ವೃಷಣಃ । ರಘುಽದ್ರುವಃ । ತೇಭಿಃ । ನಃ । ತೂಯಂ । ಆ । ಗಹಿ ॥ ೯ ॥

। ಸಾಯಣಭಾಷ್ಯಂ ।

ಹೇ ಇಂದ್ರ ದಶಗ್ವಿನೋ ದಶಯೋಜನಗಾಮಿನೋ ಯೇಽಶ್ವಾಸ್ತೇ ತವ ಸಂತಿ ವಿದ್ಯಂತೇ । ಯೇ ಚಾನ್ಯೇ ಶತಿನಃ ಶತಸಂಖ್ಯಾಕಾಃ ಸಹಸ್ರಿಣಃ ಸಹಸ್ರಸಂಖ್ಯಾಕಾಃ ಸಂತಿ । ಯೇ ತೇ ತ್ವದೀಯಾ ಅಶ್ವಾಸೋಽಶ್ವಾ ವೃಷಣಃ ಸೇಚನಸಮರ್ಥಾ ಯುವಾನೋ ರಘುದ್ರುವಃ ಶೀಘ್ರಗಾಮಿನಶ್ಚ । ತೇಭಿಸ್ತೈಃ ಸರ್ವೈರಶ್ವೈರ್ನೋಽಸ್ಮಾಂಸ್ತೂಯಂ ಕ್ಷಿಪ್ರಮಾ ಗಹಿ । ಆಗಚ್ಛ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) ತೇ—ನಿನಗೆ ಸೇರಿದ । ಯೇ—ಯಾವ ಅಶ್ವಗಳು । ದಶಗ್ವಿನಃ—ದಶಯೋಜನದ ಸಂಚಾರಕ್ಕೆ ಯೋಗ್ಯವಾಗಿ । ಸಂತಿ—ಇರುವುವೋ । ಯೇ—ಯಾವ ಅಶ್ವಗಳು । ಶತಿನಃ—ಶತಸಂಖ್ಯಾಕವೂ । ಸಹಸ್ರಿಣಃ—ಸಹಸ್ರಸಂಖ್ಯಾಕವೂ ಆಗಿರುವುವೋ । ತೇ—ನಿನಗೆ ಸೇರಿದ । ಯೇ ಅಶ್ವಾಸಃ—ಯಾವ ಅಶ್ವಗಳು । ವೃಷಣಃ—ಸೇಚನಸಾಮರ್ಥ್ಯವನ್ನು ಹೊಂದಿ । ರಘುದ್ರುವಃ—ಶೀಘ್ರಗಾಮಿಗಳಾಗಿರುವುವೊ । ತೇಭಿಃ—ಅಂತಹ ಎಲ್ಲಾ ಅಶ್ವಗಳೊಡನೆಯೂ । ನಃ—ನಮ್ಮಲ್ಲಿಗೆ । ತೂಯಂ—ಶೀಘ್ರವಾಗಿ । ಆ ಗಹಿ—ದಯಮಾಡು.

। ಭಾವಾರ್ಥ ।

ಎಲೈ ಇಂದ್ರನೇ, ನಿನಗೆ ಸೇರಿದ ಯಾವ ಅಶ್ವಗಳು ದಶಯೋಜನದ ಸಂಚಾರಕ್ಕೆ ಯೋಗ್ಯವಾಗಿರುವುವೋ ಯಾವ ಅಶ್ವಗಳು ಶತಸಂಖ್ಯಾಕವೂ, ಸಹಸ್ರಸಂಖ್ಯಾಕವೂ ಆಗಿರುವುವೋ ಮತ್ತು ಯಾವುವು ಸೇಚನಸಾಮರ್ಥ್ಯಾತ್ಮಕವಾದ ಯೌವನವನ್ನು ಹೊಂದಿ ಶೀಘ್ರಗಾಮಿಗಳಾಗಿರುವುವೋ ಅಂತಹ ಸಕಲ ಅಶ್ವಗಳೊಡನೆಯೂ ಕೂಡಿ ನಮ್ಮಲ್ಲಿಗೆ ಶೀಘ್ರವಾಗಿ ದಯಮಾಡು.

English Translatian

Come quickly with those your horses which are vigorous and fleet, and which are traversers of tens, or hundreds, or thousands (of leagues).

॥ ಸಂಹಿತಾಪಾಠಃ ॥

ಆ ತ್ವ೧ದ್ಯ ಸಬರ್ದುಘಾಂ ಹುವೇ ಗಾಯತ್ರವೇಪಸಂ ।
ಇಂದ್ರಂ ಧೇನುಂ ಸುದುಘಾಮನ್ಯಾಮಿಷಮುರುಧಾರಾಮರಂಕೃತಂ ॥೧೦॥

॥ ಪದಪಾಠಃ ॥

ಆ । ತು । ಅದ್ಯ । ಸಬಃಽದುಘಾಂ । ಹುವೇ । ಗಾಯತ್ರಽವೇಪಸಂ ।
ಇಂದ್ರಂ । ಧೇನುಂ । ಸುಽದುಘಾಂ । ಅನ್ಯಾಂ । ಇಷಂ । ಉರುಽಧಾರಾಂ । ಅರಂಽಕೃತಂ ॥ ೧೦ ॥

॥ ಸಾಯಣಭಾಷ್ಯಂ ॥

ಅನಯೇಂದ್ರಂ ಧೇನುರೂಪೇಣ ವೃಷ್ಟಿರೂಪೇಣ ಚ ನಿರೂಪಯನ್ ಸ್ತೌತಿ । ಅದ್ಯೇದಾನೀಂ ಧೇನುಂ ಧೇನುರೂಪಮಿಂದ್ರಂ ತು ಕ್ಷಿಪ್ರಮಾ ಹುವೇ । ಆಹ್ವಯೇ । ಕೀದೃಶೀಂ ಧೇನುಂ । ಸಬರ್ದುಘಾಂ ಪಯಸೋ ದೋಗ್ಧ್ರೀಂ ಗಾಯತ್ರವೇಪಸಂ ಪ್ರಶಸ್ಯವೇಗಾಂ ಸುದುಘಾಂ ಸುಖೇನ ದೋಗ್ಧುಂ ಶಕ್ಯಾಂ । ಅನ್ಯಾಮುಕ್ತವಿಲಕ್ಷಣಾಮುರುಧಾರಾಂ ಬಹೂದಕಧಾರಮಿಷಮೇಷಣೀಯಾಂ ವೃಷ್ಟಿಂ । ಏತದ್ರೂಪೇಣ ವರ್ತಮಾನಮರಂಕೃತಮಲಂಕರ್ತಾರಂ ಪರ್ಯಾಪ್ತಕಾರಿಣಂ ವೇಂದ್ರಂ ಚಾಹ್ವಯೇ ॥

॥ ಪ್ರತಿಪದಾರ್ಥ ॥

ಸಬರ್ದುಘಾಂ — ಪುಷ್ಕಲವಾಗಿ ಕ್ಷೀರವನ್ನು ಕರೆಯುತಕ್ಕದ್ದೂ । ಗಾಯತ್ರವೇಪಸಂ — ಪ್ರಶಂಸನೀಯವಾದ ವೇಗವುಳ್ಳದ್ದೂ । ಸುದುಘಾಂ — ಸುಲಭವಾಗಿ ಕರೆಯಲು ಸಾಧ್ಯವಾದುದೂ ಆದ । ಧೇನುಂ — ಧೇನುವಿನಂತೆ ತೃಪ್ತಿಕಾರಕವಾದ ವಿಶಿಷ್ಟಗುಣಗಳಿಂದ ಯುಕ್ತನಾದ । ಇಂದ್ರಂ — ಇಂದ್ರನನ್ನು । ತು — ಕ್ಷಿಪ್ರವಾಗಿ । ಅದ್ಯ — ಈ ಯಾಗಕಾಲದಲ್ಲಿ । ಆ ಹುವೇ — ಪ್ರಾರ್ಥಿಸಿ ಕರೆಯುತ್ತೇನೆ (ಅಥವಾ) । ಅನ್ಯಾಂ — ಬೇರೊಂದು ರೂಪವನ್ನು ಧರಿಸಿ । ಉರುಧಾರಾಂ — ಪ್ರಭೂತವಾದ ಧಾರೆಯನ್ನು ಸುರಿಸುವ । ಇಷಂ — ವೃಷ್ಟಿರೂಪದಲ್ಲಿದ್ದು । ಅರಂಕೃತಂ — ವೃಷ್ಟಿಯಂತೆ ತೃಪ್ತಿಕಾರಕನೂ ಆದ ಇಂದ್ರನನ್ನು ಪ್ರಾರ್ಥಿಸಿ ಕರೆಯುತ್ತೇನೆ.

॥ ಭಾವಾರ್ಥ ॥

ಪುಷ್ಕಲವಾಗಿ ಕ್ಷೀರವನ್ನು ಕರೆಯುತಕ್ಕದ್ದೂ, ಪ್ರಶಂಸನೀಯವಾದ ವೇಗವುಳ್ಳದ್ದೂ, ಸುಲಭವಾಗಿ ಕರೆಯಲು ಸಾಧ್ಯವಾದುದೂ ಆದ ಧೇನುವಿನಂತೆ ತೃಪ್ತಿಕರವಾದ ವಿಶಿಷ್ಟಗುಣಗಳಿಂದ ಯುಕ್ತನಾದ ಇಂದ್ರನನ್ನು ಕ್ಷಿಪ್ರವಾಗಿ ಈ ಯಾಗಕಾಲದಲ್ಲಿ ಪ್ರಾರ್ಥಿಸಿ ಕರೆಯುತ್ತೇನೆ. ಅಥವಾ ಬೇರೊಂದು ರೂಪವನ್ನು ಧರಿಸಿ ಪ್ರಭೂತವಾದ ಧಾರೆಯನ್ನು ಸುರಿಸುವ ವೃಷ್ಟಿರೂಪದಲ್ಲಿದ್ದು ವೃಷ್ಟಿಯಂತೆಯೇ ತೃಪ್ತಿಕಾರಕನೂ ಆದ ಇಂದ್ರನನ್ನು ಪ್ರಾರ್ಥಿಸಿ ಕರೆಯುತ್ತೇನೆ.

## English Translation

I invoke to-day the all-sufficient Indra, as the milch cow yielding abundant milk, of excellent motion, and easy to be milked; or, as another (form), the vast-dropping, desirable (rain).

। ಸಂಹಿತಾಪಾಠಃ ।

ಯತ್ತುದತ್ಸೂರ ಏತಶಂ ವಂಕೂ ವಾತಸ್ಯ ಪರ್ಣಿನಾ ।
ವಹತ್ಕುತ್ಸಮಾರ್ಜುನೇಯಂ ಶತಕ್ರತುಃ ತ್ಸರದ್ಗಂಧರ್ವಮಸ್ತೃತಂ ॥ ೧೧ ॥

। ಪದಪಾಠಃ ।

ಯತ್ । ತುದತ್ । ಸೂರಃ । ಏತಶಂ । ವಂಕೂ ಇತಿ । ವಾತಸ್ಯ । ಪರ್ಣಿನಾ ।
ವಹತ್ । ಕುತ್ಸಂ । ಆರ್ಜುನೇಯಂ । ಶತಽಕ್ರತುಃ । ತ್ಸರತ್ । ಗಂಧರ್ವಂ । ಅಸ್ತೃತಂ ॥ ೧೧ ॥

। ಸಾಯಣಭಾಷ್ಯಂ ।

ಸೂರಃ ಸೂರ್ಯ ಏತಶಮೇತತ್ಸಂಜ್ಞಂ ರಾಜರ್ಷಿಂ ಯದ್ಯದಾ ತುದತ್ ಅವ್ಯಥಯತ್ ತದಾನೀಮೇತಶಂ ರಕ್ಷಿತುಂ ವಂಕೂ ವಕ್ರಗಾಮಿನೌ ವಾತಸ್ಯ ವಾಯೋಃ ಸದೃಶೌ ಪರ್ಣಿನಾ ಪರ್ಣಿನೌ ಪತನವಂತಾವೀದೃಶಾವಶ್ವೌ ಶತಕ್ರತುರ್ಬಹುವಿಧಕರ್ಮೇಂದ್ರ ಆರ್ಜುನೇಯಮರ್ಜುನ್ಯಾಃ ಪುತ್ರಂ ಕುತ್ಸಮೃಷಿಂ ವಹತ್। ಅವಹತ್। ಅನಯತ್। ಕುತ್ಸೇನ ಸಾರ್ಧಂ ಸಮಾನಂ ರಥಮಾರುಹ್ಯೈತಶರಕ್ಷಣಾಯಾಗಚ್ಛದಿತ್ಯರ್ಥಃ । ತಥಾ ಚ ನಿಗಮಾಂತರಂ । ಪ್ರೈತಶಂ ಸೂರ್ಯೇ ಪಸ್ಪೃಧಾನಂ ಸೌವಶ್ವ್ಯೇ ಸುಷ್ವಿಮಾವದಿಂದ್ರಃ । ಋ. ೧-೬೧-೧೫. । ಇತಿ । ಗಂಧರ್ವಂ ಗವಾಂ ರಶ್ಮೀನಾಂ ಧರ್ತಾರಂ ಸೂರ್ಯಮಸ್ತೃತಂ ಕೇನಾಪ್ಯಹಿಂಸಿತಂ ತ್ಸರತ್ । ಅತ್ಸರತ್ । ಛದ್ಮಗತ್ಯಾಗಚ್ಛತ್ । ಸೂರ್ಯೇಣ ಯೋದ್ಧುಂ ಗತವಾನಿತ್ಯರ್ಥಃ ॥

। ಪ್ರತಿಪದಾರ್ಥ ।

ಯತ್—ಯಾವಾಗ । ಸೂರಃ—ಸೂರ್ಯನು । ಏತಶಂ—ಏತಶನೆಂಬ ರಾಜರ್ಷಿಯನ್ನು । ತುದತ್—ಹಿಂಸಿಸಿದನೋ (ಆಗ) । ಶತಕ್ರತುಃ—ಅನೇಕಕರ್ಮಕರ್ತನಾದ ಇಂದ್ರನು । ವಂಕೂ—ವಕ್ರಗಾಮಿಗಳೂ । ವಾತಸ್ಯ—ವಾಯುವಿಗೆ ಸಮಾನವಾಗಿ । ಪರ್ಣಿನಾ—ಹಾರತಕ್ಕವೂ ಆದ ಅಶ್ವಗಳನ್ನೂ ( ಅವುಗಳೊಡನೆ ) । ಆರ್ಜುನೇಯಂ—ಅರ್ಜುನಿಯ ಪುತ್ರನಾದ । ಕುತ್ಸಂ—ಕುತ್ಸಋಷಿಯನ್ನೂ । ವಹತ್—(ಏತಶನ ಸಹಾಯಾರ್ಥವಾಗಿ) ಜೊತೆಯಲ್ಲಿ ಕರೆದುಕೊಂಡು ಹೋದನು । ಅಸ್ತೃತಂ—ಅಪ್ರತಿಹತನಾದ । ಗಂಧರ್ವಂ—ಸೂರ್ಯನನ್ನು । ತ್ಸರತ್—ಗುಟ್ಟಾಗಿ ಸಮೀಪಿಸಿದನು.

। ಭಾವಾರ್ಥ ।

ಸೂರ್ಯನು ಏತಶನೆಂಬ ರಾಜರ್ಷಿಯನ್ನು ಯಾವಾಗ ಹಿಂಸಿಸಿದನೋ ಆಗ ಅನೇಕಕರ್ಮಕರ್ತನಾದ ಇಂದ್ರನು ವಕ್ರಗಾಮಿಗಳೂ ವಾಯುವಿನ ಸಮಾನವಾಗಿ ಹಾರತಕ್ಕವೂ ಆದ ಅಶ್ವಗಳನ್ನೂ ಅವುಗಳೊಡನೆ ಅರ್ಜುನಿಯ ಪುತ್ರನಾದ ಕುತ್ಸಋಷಿಯನ್ನೂ ಏತಶನ ಸಹಾಯಾರ್ಥವಾಗಿ ಜೊತೆಯಲ್ಲಿ ಕರೆದುಕೊಂಡು ಹೋದನು. ಅಪ್ರತಿಹತನಾದ ಸೂರ್ಯನನ್ನು ಎದುರಿಸಲು ಗುಟ್ಟಾಗಿ ಹೋದನು.

## English Translation

When Surya harassed Etasha, Shatakratu conveyed (to his aid) Kutsa, the son of Arjuni, with his two prancing horses (swift) as the wind, and stealthily approached the irresistible Gandharva.

। ಸಂಹಿತಾಪಾಠಃ ।

ಯ ಋತೇ ಚಿದಭಿಶ್ರಿಷಃ ಪುರಾ ಜತ್ರುಭ್ಯ ಆತೃದಃ ।

ಸಂಧಾತಾ ಸಂಧಿಂ ಮಘವಾ ಪುರೂವಸುರಿಷ್ಕರ್ತಾ ವಿಹ್ರುತಂ ಪುನಃ ॥೧೨॥

। ಪದಪಾಠಃ ।

ಯಃ । ಋತೇ । ಚಿತ್ । ಅಭಿಽಶ್ರಿಷಃ । ಪುರಾ । ಜತ್ರುಽಭ್ಯಃ । ಆಽತೃದಃ ।

ಸಂಽಧಾತಾ । ಸಂಽಧಿಂ । ಮಘಽವಾ । ಪುರುಽವಸುಃ । ಇಷ್ಕರ್ತಾ । ವಿಽಹ್ರುತಂ । ಪುನರಿತಿ ॥ ೧೨ ॥

। ಸಾಯಣಭಾಷ್ಯಂ ।

ಯ ಇಂದ್ರೋಽಭಿಶ್ರಿಷೋಽಭಿಶ್ಲಿಷೋಽಭಿಶ್ಲೇಷಣಾತ್ಸಂಧಾನದ್ರವ್ಯಾದೃತೇ ಚಿದ್ವಿನಾಪಿ ಜತ್ರು-ಭ್ಯೋ ಗ್ರೀವಾಭ್ಯಃ ಸಕಾಶಾದಾತೃದ ಆತರ್ದನಾದಾ ರುಧಿರನಿಃಸ್ರವಣಾತ್ ಪುರಾ ಪೂರ್ವಮೇವ ಸಂಧಿಂ ಸಂಧಾತವ್ಯಂ ತಂ ಸಂಧಾತಾ ಸಂಯೋಜಯಿತಾ ಭವತಿ ಮಘವಾ ಧನವಾನ್ ಪುರೂವಸುರ್ಬಹುಧನಃ ಸ ಇಂದ್ರೋ ವಿಹ್ರುತಂ ವಿಚ್ಛಿನ್ನಂ ತಂ ಪುನರಿಷ್ಕರ್ತಾ ಸಂಸ್ಕರ್ತಾ ಭವತಿ ॥

। ಪ್ರತಿಪದಾರ್ಥ ।

ಯಃ—ಯಾವ ಇಂದ್ರನು । ಅಭಿಶ್ರಿಷಃ—ವೈದ್ಯಸಾಮಗ್ರಿಗಳ । ಋತೇಚಿತ್—ರಾಹಿತ್ಯವಿದ್ದಾಗ್ಯೂ ಸಹ। ಜತ್ರುಭ್ಯಃ—(ಕತ್ತರಿಸಲ್ಪಟ್ಟ) ಕತ್ತುಗಳಿಂದ। ಆತೃದಃ—ರಕ್ತಸ್ರಾವವಾಗುವುದಕ್ಕೆ । ಪುರಾ—ಪೂರ್ವಭಾವಿಯಾಗಿಯೇ । ಸಂಧಿಂ—ದೇಹದೊಡನೆ ಸೇರಿಸಬೇಕಾದ ಕತ್ತನ್ನು । ಸಂದಾತಾ—ಒಟ್ಟಿಗೆ ಸೇರಿಸುವನೋ ಅಂತಹ ।

ಮಘವಾ—ಸಂಪದ್ಯುಕ್ತನೂ । ಪುರೂವಸುಃ—ಪ್ರಭೂತವಾದ ಧನವುಳ್ಳವನೂ ಆದ ಇಂದ್ರನು । ವಿಹ್ರುತಂ—ಕತ್ತರಿಸಲ್ಪಟ್ಟ ಅವಯವವನ್ನು । ಪುನಃ—ತಿರುಗಿಯೂ । ಇಷ್ಕರ್ತಾ—ಸಂಸ್ಕರಿಸುತ್ತಾನೆ. (ಸೇರಿಸುತ್ತಾನೆ).

। ಭಾವಾರ್ಥ ।

ವೈದ್ಯಸಾಮಗ್ರಿಗಳು ಹತ್ತಿರದಲ್ಲಿಲ್ಲದಿದ್ದಾಗ್ಯೂ ಸಹ ಯಾವ ಇಂದ್ರನು ಛಿನ್ನವಾದ ಕತ್ತುಗಳಿಂದ ರಕ್ತಸ್ರಾವವಾಗುವುದಕ್ಕೆ ಮೊದಲೇ ದೇಹದೊಡನೆ ಸೇರಿಸಬೇಕಾದ ಕತ್ತನ್ನು ಒಟ್ಟಿಗೆ ಸೇರಿಸಬಲ್ಲನೋ ಅಂತಹ ಸಂಪದ್ಯುಕ್ತನೂ, ಪ್ರಭೂತವಾದ ಧನವುಳ್ಳವನೂ ಆದ ಇಂದ್ರನು ಕತ್ತರಿಸಲ್ಪಟ್ಟ ಅವಯವವನ್ನು ತಿರುಗಿಯೂ ಸಂಸ್ಕರಿಸುತ್ತಾನೆ.

## English Translation

He who without healing materials before the flow of blood from the necks was the effector of the re-union, the opulent Maghavan, again makes whole the dissevered (parts).

। ಸಂಹಿತಾಪಾಠಃ ।

ಮಾ ಭೂಮ ನಿಷ್ಟ್ಯಾ ಇವೇಂದ್ರ ತ್ವದರಣಾ ಇವ ।
ವನಾನಿ ನ ಪ್ರಜಹಿತಾನ್ಯದ್ರಿವೋ ದುರೋಷಾಸೋ ಅಮನ್ಮಹಿ ॥ ೧೩ ॥

। ಪದಪಾಠಃ ।

ಮಾ । ಭೂಮ । ನಿಷ್ಟ್ಯಾಃಽಇವ । ಇಂದ್ರ । ತ್ವತ್ । ಅರಣಾಃಽಇವ ।
ವನಾನಿ । ನ । ಪ್ರಽಜಹಿತಾನಿ । ಅದ್ರಿಽವಃ । ದುರೋಷಾಸಃ । ಅಮನ್ಮಹಿ ॥ ೧೩ ॥

। ಸಾಯಣಭಾಷ್ಯಂ ।

ಹೇ ಇಂದ್ರ ತ್ವತ್ತ್ವತ್ತಸ್ತ್ವತ್ಪ್ರಸಾದಾನ್ನಿಷ್ಟ್ಯಾ ಇವ । ನೀಚೈರ್ಭೂತಾ ಹೀನಾ ನಿಷ್ಟ್ಯಾಃ । ತ ಇವ ವಯಂ ಮಾ ಭೂಮ । ತಥಾರಣಾ ಇವಾರಮಣಾ ದುಃಖಿನ ಇವ ವಯಂ ಮಾ ಭೂಮ । ಅಪಿ ಚ ಪ್ರಜಹಿತಾನಿ ಪ್ರಕ್ಷೀಣಾನಿ ಶಾಖಾದಿಭಿರ್ವಿಯುಕ್ತಾನಿ ವನಾನಿ ನ ವೃಕ್ಷಜಾತಾನೀವ ವಯಂ ಪುತ್ರಾದಿಭಿರ್ವಿಯುಕ್ತಾ ಮಾ ಭೂಮ । ಹೇ ಅದ್ರಿವೋ ವಜ್ರವನ್ನಿಂದ್ರ ದುರೋಷಾಸ ಓಷಿತುಮನ್ಯೈರ್ದಗ್ಧುಮಶಕ್ಯಾ ದುರ್ಗೇಷು ಗೃಹೇಷು ನಿವಸಂತೋ ವಾ ವಯಮಮನ್ಮಹಿ । ತ್ವಾಂ ಸ್ತುಮಃ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ತ್ವತ್—ನಿನ್ನ ಅನುಗ್ರಹದಿಂದ । ನಿಷ್ಟ್ಯಾ ಇವ—ಹೀನಮನುಜರಂತೆ । ಮಾ ಭೂಮ—ನಾವು ಆಗದಿರುವಂತಾಗಲಿ । ಅರಣಾ ಇವ—ದುಃಖಿತರ ಗುಂಪಿಗೂ ಸೇರದಿರುವಂತಾಗಲಿ ।

ಪ್ರಜಹಿತಾನಿ—ಕೊಂಬೆಗಳಿಲ್ಲದಿರುವ । ವನಾನಿ ನ—ವೃಕ್ಷಗಳಂತೆ ಪುತ್ರಾದಿಗಳಿಲ್ಲದಿರುವಂತೆ ಮಾಡಬೇಡ । ಅದ್ರಿವಃ—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । ದುರೋಷಾಸಃ—ಇತರರಿಂದ ಕೆಡಿಸಲು ಸಾಧ್ಯವಿಲ್ಲದ ನಿವಾಸಸ್ಥಾನಗಳಲ್ಲಿ ವಾಸಿಸುತ್ತಾ । ಅಮನ್ಮಹಿ—ನಿನ್ನನ್ನು ಸ್ತುತಿಸುವ ಸ್ಥಿತಿಯಲ್ಲಿ ಇರುವಂತಾಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಅನುಗ್ರಹದಿಂದ ನಾವು ಅತ್ಯುತ್ತಮವಾದ ಸ್ಥಿತಿಯಲ್ಲಿರುವಂತಾಗಲಿ. ಹೀನಮನುಜರಂತೆ ನಿಕೃಷ್ಟವಾದ ಸ್ಥಿತಿಯಲ್ಲಿ ನಾವಿರದಂತೆ ಅನುಗ್ರಹಿಸು. ನಾವು ದುಃಖಿತರ ಗುಂಪಿಗೂ ಸೇರದಿರುವಂತಾಗಲಿ. ಶಾಖಾದಿಗಳಿಲ್ಲದಿರುವ ವೃಕ್ಷಗಳಂತೆ ನಾವು ಪುತ್ರಾದಿರಹಿತರಾಗಿರುವಂತೆ ಮಾಡಬೇಡ, ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಇತರರಿಂದ ಕೆಡಿಸಲು ಸಾಧ್ಯವಿಲ್ಲದ ನಿವಾಸಸ್ಥಾನಗಳಲ್ಲಿ ನಾವು ವಾಸಿಸುತ್ತಾ ನಿನ್ನನ್ನು ಸ್ತುತಿಸುವ ಸ್ಥಿತಿಯಲ್ಲಿ ಇರುವಂತಾಗಲಿ.

## English Translation

May we never be like the abject, Indra, through your favour, nor suffer affliction: may we never be like branchless trees; for, thunderer, unconsumeable (by foes) we glorify you.

॥ ಸಂಹಿತಾಪಾಠಃ ॥

ಅಮನ್ಮಹೀದನಾಶವೋಽನುಗ್ರಾಸಶ್ಚ ವೃತ್ರಹನ್ ।

ಸಕೃತ್ಸು ತೇ ಮಹತಾ ಶೂರ ರಾಧಸಾನು ಸ್ತೋಮಂ ಮುದೀಮಹಿ ॥೧೪॥

॥ ಪದಪಾಠಃ ॥

ಅಮನ್ಮಹಿ । ಇತ್ । ಅನಾಶವಃ । ಅನುಗ್ರಾಸಃ । ಚ । ವೃತ್ರ್ಽಹನ್ ।

ಸಕೃತ್ । ಸು । ತೇ । ಮಹತಾ । ಶೂರ । ರಾಧಸಾ । ಅನು । ಸ್ತೋಮಂ । ಮುದೀಮಹಿ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ವೃತ್ರಹನ್ ವೃತ್ರಸ್ಯಾಸುರಸ್ಯ ಹಂತರಿಂದ್ರ ಅನಾಶವೋಽಶೀಘ್ರಾ ಅತ್ವರಮಾಣಾ ಅನುಗ್ರಾ-ಸೋಽನುಗ್ರಾ ಅನುದ್ಗೂರ್ಣಾಶ್ಚ ಸಂತೋ ವಯಂ ಭಕ್ತಿಶ್ರದ್ಧಾಪುರಃಸರಂ ಶನೈಸ್ತ್ವಾಮಮ-ನ್ಮಹೀತ್ । ಸ್ತುಮ ಏವ । ಹೇ ಶೂರ ವೀರ್ಯವನ್ನಿಂದ್ರ ತೇ ತ್ವದರ್ಥಂ ಸಕೃದೇಕವಾರಮಪಿ ಮಹತಾ ಪ್ರಭೂ-ತೇನ ರಾಧಸಾ ಧನೇನ ಹವಿರ್ಲಕ್ಷಣೇನ ಸಹ ಸು ಶೋಭನಂ ಸ್ತೋಮಂ ಸ್ತೋತ್ರಮನು ಮುದೀಮಹಿ । ಅನುಮೋದೇಮಹಿ । ಅನುಬ್ರವಾಮೇತ್ಯರ್ಥಃ ॥

॥ ಪ್ರತಿಪದಾರ್ಥ ॥

ವೃತ್ರಹನ್—ವೃತ್ರಹಂತಕನಾದ ಎಲೈ ಇಂದ್ರನೇ । ಅನಾತುರಾಃ—ಆತುರವಾದ ಕರ್ಮಾಚರಣೆಯಿಲ್ಲದವರಾಗಿಯೂ । ಅನುಗ್ರಾಸಃ ಚ—ಮನೋವಿಕಲ್ಪವಿಲ್ಲದವರಾಗಿಯೂ । ಅಮನ್ಮಹಿ ಇತ್—(ನಿನ್ನನ್ನು ಶುದ್ಧವಾದ ಭಕ್ತಿಯಿಂದಲೂ ಶಾಂತಮನಸ್ಕರಾಗಿಯೂ) ಖಂಡಿತ ಸ್ತುತಿಸುತ್ತೇವೆ । ಶೂರ—ವೀರ್ಯವಂತನಾದ ಎಲೈ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿ । ಸಕೃತ್—ಕೊಂಚಕಾಲವಾದರೂ । ಮಹತಾ—ಅತ್ಯಧಿಕವಾದ । ರಾಧಸಾ—(ಧನದೊಂದಿಗೆ ಕೂಡಿದ) ಹವಿಸ್ಸಿನಿಂದ । ಸು—ಶೋಭಿತವಾದ । ಸ್ತೋಮಂ—ಸ್ತೋತ್ರವನ್ನು । ಅನು ಮ. ದೀಮಹಿ—ಪಠಿಸುವ ಆಸೆಯನ್ನು ಹೊಂದಿದ್ದೇವೆ.

। ಭಾವಾರ್ಥ ।

ವೃತ್ರಹಂತಕನಾದ ಎಲೈ ಇಂದ್ರನೇ, ಕರ್ಮಾಚರಣೆಯಲ್ಲಿ ಕೊಂಚವೂ ಆತುರವಿಲ್ಲದವರಾಗಿಯೂ, ಮನೋವಿಕಲ್ಪವಿಲ್ಲದವರಾಗಿಯೂ, ನಿನ್ನನ್ನು ಶುದ್ಧವಾದ ಭಕ್ತಿಯಿಂದಲೂ, ಶಾಂತವಾದ ಮನಸ್ಸಿನಿಂದಲೂ ಖಂಡಿತ ಸ್ತುತಿಸುತ್ತೇವೆ. ವೀರ್ಯವಂತನಾದ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಕೊಂಚಕಾಲವಾದರೂ ಸಹ ಉತ್ತಮವಾದ ಹವಿಸ್ಸಿನಿಂದ ಶೋಭಿತವಾದ ಸ್ತೋತ್ರವನ್ನು ಪಠಿಸಲು ಆಶಿಸುತ್ತೇವೆ.

## English translation

Neither rash nor irate, we verily glorify you, slayer of Vritra; may we propitiate you, hero, for once (at least) by our praise with great (sacrificial) wealth.

॥ ಸಂಹಿತಾಪಾಠಃ ॥

ಯದಿ ಸ್ತೋಮಂ ಮಮ ಶ್ರವದಸ್ಮಾಕಮಿಂದ್ರಮಿಂದವಃ ।
ತಿರಃ ಪವಿತ್ರಂ ಸಸೃವಾಂಸ ಆಶವೋ ಮಂದಂತು ತುಗ್ರ್ಯಾವೃಧಃ ॥ ೧೫ ॥

। ಪದಪಾಠಃ ।

ಯದಿ । ಸ್ತೋಮಂ । ಮಮ । ಶ್ರವತ್ । ಅಸ್ಮಾಕಂ । ಇಂದ್ರಂ । ಇಂದವಃ ।
ತಿರಃ । ಪವಿತ್ರಂ । ಸಸೃಽವಾಂಸಃ । ಆಶವಃ । ಮಂದಂತು । ತುಗ್ರ್ಯಽವೃಧಃ ॥ ೧೫ ॥

। ಸಾಯಣಭಾಷ್ಯಂ ।

ಅಯಮಿಂದ್ರೋ ಮಮ ಮದೀಯಂ ಸ್ತೋತ್ರಂ ಯದಿ ಶ್ರವತ್ ಶೃಣುಯಾತ್ ತದಾನೀಂ ತಮಿಂದ್ರಮಸ್ಮಾಕಮಸ್ಮದೀಯಾ ಇಂದವಃ ಸೋಮಾ ಮದಂತು । ಮಾದಯಂತು । ಹರ್ಷಯಂತು ।

ಕೇದೃಶಾಃ ಸೋಮಾಃ । ತಿರಸ್ತಿರ್ಯಗವಸ್ಥಿತಂ ಪವಿತ್ರಂ ಪವನಸಾಧನಂ ದಶಾಪವಿತ್ರಂ ಸಸ್ರುವಾಂಸಃ ಪ್ರಾಪ್ತವಂತಃ । ದಶಾಪವಿತ್ರೇಣ ಪೂತಾ ಇತ್ಯರ್ಥಃ । ಆಶವಃ ಶೀಘ್ರಂ ಮದಜನಕಾಸ್ತುಗ್ರ್ಯಾವೃಧಸ್ತುಗ್ರ್ಯಾಭಿರ್ವಸತೀವರ್ಯೇಕಧನಾಖ್ಯಾಭಿರದ್ಭಿರ್ವರ್ಧಮಾನಾಃ ॥

। ಪ್ರತಿಪದಾರ್ಥ ।

ಮಮ—ನನ್ನ । ಸ್ತೋಮಂ—ಈ ಸ್ತೋತ್ರವನ್ನು । ಯದಿ—ಒಂದು ವೇಳೆ । ಶ್ರವತ್—ಇಂದ್ರನು ಕೇಳಿದ್ದೇ ಆದರೆ, (ಆಗ) । ಅಸ್ಮಾಕಂ—ನಮ್ಮ (ನಮ್ಮಿಂದ ಅರ್ಪಿತವಾದ) । ತಿರಃ—ತಿರ್ಯಗ್ರೂಪದಲ್ಲಿಟ್ಟಿರುವುದೂ । ಪವಿತ್ರಂ—ದಶಾಪವಿತ್ರಸಂಜ್ಞಕವೂ ಆದ ಶುದ್ಧಿಕಾರಕವಾದ ಪಾತ್ರೆಯನ್ನು । ಸಸ್ರುವಾಂಸಃ—ಪ್ರವೇಶಿಸಿ ಶುದ್ಧವಾಗತಕ್ಕವೂ । ಆಶವಃ—ಶೀಘ್ರವಾಗಿ ಹರ್ಷವನ್ನುಂಟುಮಾಡುವುವೂ । ತುಗ್ರ್ಯಾವೃಧಃ—ವಸತೀವರ್ಯಾದಿಗಳಿಂದ ಕೂಡಿ ವೃದ್ಧಿಯನ್ನು ಹೊಂದತಕ್ಕವೂ ಆದ । ಇಂದವಃ—ಸೋಮರಸಗಳು । ಇಂದ್ರಂ—ಇಂದ್ರನನ್ನು । ಮದಂತು—ತೃಪ್ತಿಗೊಳಿಸಲಿ.

। ಭಾವಾರ್ಥ ।

ಇಂದ್ರನು ಒಂದು ವೇಳೆ ನನ್ನ ಈ ಸ್ತುತಿಯನ್ನು ಕೇಳಿ ಸಂತೋಷಪಟ್ಟದ್ದೇ ಆದರೆ, ಆಗ ನಮ್ಮಿಂದ ಅರ್ಪಿತವಾಗಿ ತಿರ್ಯಗ್ರೂಪದಲ್ಲಿಟ್ಟಿರುವುವೂ, ದಶಾಪವಿತ್ರಸಂಜ್ಞಕವೂ ಆದ ಶುದ್ಧಿಕಾರಕವಾದ ಪಾತ್ರೆಯನ್ನು ಪ್ರವೇಶಿಸಿ ಶುದ್ಧವಾಗತಕ್ಕವೂ ಶೀಘ್ರವಾಗಿ ಹರ್ಷವನ್ನುಂಟುಮಾಡುವುವೂ, ವಸತೀವರ್ಯಾದಿ ಉದಕಗಳಿಂದ ಕೂಡಿ ವೃದ್ಧಿಯನ್ನು ಹೊಂದತಕ್ಕವೂ ಆದ ಸೋಮರಸಗಳು ಇಂದ್ರನನ್ನು ತೃಪ್ತಿಗೊಳಿಸಲಿ.

## English Translation

If he hear our praise, then may our libations, flowing through the filter, dropping quickly, and diluted with consecrated water, exhilarate Indra.

। ಸಂಹಿತಾಪಾಠಃ ।

ಆ ತ್ವ೧ದ್ಯ ಸಧಸ್ತುತಿಂ ವಾವಾತುಃ ಸಖ್ಯುರಾ ಗಹಿ ।

ಉಪಸ್ತುತಿರ್ಮಘೋನಾಂ ಪ್ರ ತ್ವಾವತ್ವಧಾ ತೇ ವಶ್ಮಿ ಸುಷ್ಟುತಿಂ ॥ ೧೬ ॥

। ಪದಪಾಠಃ ।

ಆ । ತು । ಅದ್ಯ । ಸಧಽಸ್ತುತಿಂ । ವವಾತುಃ । ಸಖ್ಯುಃ । ಆ । ಗಹಿ ।

ಉಪಽಸ್ತುತಿಃ । ಮಘೋನಾಂ । ಪ್ರ । ತ್ವಾ । ಅವತು । ಅಧ । ತೇ । ವಶ್ಮಿ । ಸುಽಸ್ತುತಿಂ ॥ ೧೬ ॥

। ಸಾಯಣಭಾಷ್ಯಂ ।

ಹೇ ಇಂದ್ರ ವಾವಾತುಃ ಸಂಭಕ್ತುಸ್ತ್ವಾಂ ಸೇವಮಾನಸ್ಯ ಸಖ್ಯುಃ ಸ್ತೋತುಃ ಸಧಸ್ತುತಿಮನ್ಯೈ-ರ್ಋತ್ವಿಗ್ಭಿಃ ಸಹ ಕ್ರಿಯಮಾಣಾಂ ಸ್ತುತಿಮದ್ಯೇದಾನೀಂ ತು ಕ್ಷಿಪ್ರಮಾ ಗಹಿ । ಆಗಚ್ಛ । ಮಘೋನಾಂ ಹವಿಷ್ಮತಾಮನ್ಯೇಷಾಮಪಿ ಯಜಮಾನಾನಾಮುಪಸ್ತುತಿಃ ಸ್ತೋತ್ರಂ ತ್ವಾ ತ್ವಾಂ ಪ್ರಾವತು । ಪ್ರಗಚ್ಛತು । ಪ್ರತರ್ಪಯತು ವಾ । ಅಥಾಧುನಾ ಸುಷ್ಟುತಿಂ ತ್ವದ್ವಿಷಯಾಂ ಶೋಭನಾಂ ಸ್ತುತಿಮಹಮಪಿ ವಶ್ಮಿ । ಕಾಮಯೇ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) ವಾವಾತುಃ—ನಿನ್ನನ್ನು ಸೇವಿಸುವವನೂ । ಸಖ್ಯುಃ—ನಿನ್ನ ಮಿತ್ರನೂ ಆದ ಸ್ತುತಿಕರ್ತನ । ಸಧಸ್ತುತಿಂ—ಇತರ ಋತ್ವಿಕ್ಕುಗಳೊಡನೆ ಪಠಿತವಾಗುವ ಸ್ತುತಿಯನ್ನು (ಕೇಳಲು) । ಅದ್ಯ—ಈಗ । ತು—ಒಡನೆಯೇ । ಆ ಗಹಿ—ದಯಮಾಡು । ಮಘೋನಾಂ—ಹವಿಸ್ಸುಗಳಿಂದ ಕೂಡಿದ ಇತರ ಯಜಮಾನರಿಂದ ಪಠಿತವಾದ । ಉಪಸ್ತುತಿಃ—ಸ್ತೋತ್ರವೂ ಕೂಡ । ತ್ವಾ—ನಿನ್ನನ್ನು । ಪ್ರ ಅವತು—ಬಂದು ಸೇರಲಿ (ನಿನಗೆ ತೃಪ್ತಿಕಾರಕವಾಗಲಿ) । ತೇ—ನಿನ್ನನ್ನುದ್ದೇಶಿಸಿ । ಅಥ—ಈಗ । ಸುಷ್ಟುತಿಂ—ಉತ್ತಮವಾದ ಸ್ತುತಿಯನ್ನು ಪಠಿಸಲು । ವಶ್ಮಿ—ನಾನೂ ಅಪೇಕ್ಷಿಸುತ್ತೇನೆ.

। ಭಾವಾರ್ಥ ।

ಎಲೈ ಇಂದ್ರನೇ, ನಿನ್ನನ್ನು ಸೇವಿಸುವವನೂ, ನಿನ್ನ ಮಿತ್ರನೂ ಆದ ಸ್ತುತಿಕರ್ತನು ಇತರ ಋತ್ವಿಕ್ಕುಗಳೊಡನೆ ಪಠಿಸುವ ಸ್ತುತಿಯನ್ನು ಕೇಳಲು ಈ ಒಡನೆಯೇ ದಯಮಾಡು. ಹವಿರ್ಯುಕ್ತರಾದ ಇತರ ಯಜಮಾನರಿಂದ ಪಠಿತವಾದ ಸ್ತುತಿಯೂ ಸಹ ನಿನ್ನನ್ನು ಬಂದು ಸೇರಿ ನಿನಗೆ ತೃಪ್ತಿಕಾರಕವಾಗಲಿ. ನಿನ್ನನ್ನುದ್ದೇಶಿಸಿ ಈಗ ಉತ್ತಮವಾದ ಸ್ತುತಿಯನ್ನು ಪಠಿಸಲು ನಾನೂ ಆಶಿಸುತ್ತೇನೆ.

## English Translation

Come quickly to-day to the collected laudation of your devoted friend: may the subsidiary praise of wealthy (worshippers) reach you, but now I wish (to offer) your complete eulogium.

। ಸಂಹಿತಾಪಾಠಃ ।

ಸೋತಾ ಹಿ ಸೋಮಮದ್ರಿಭಿರೇಮೇನಮಪ್ಸು ಧಾವತ ।
ಗವ್ಯಾ ವಸ್ತ್ರೇವ ವಾಸಯಂತ ಇನ್ನರೋ ನಿರ್ಧುಕ್ಷನ್ವಕ್ಷಣಾಭ್ಯಃ ೧೭ ॥

। ಪದಪಾಠಃ ।

ಸೋತ । ಹಿ । ಸೋಮಂ । ಅದ್ರಿಽಭಿಃ । ಆ । ಈಂ । ಏನಂ । ಅಪ್ಽಸು । ಧಾವತ ।

ಗವ್ಯಾ । ವಸ್ತ್ರಾಽಇವ । ವಾಸಯಂತಃ । ಇತ್ । ನರಃ । ನಿಃ । ಧುಕ್ಷನ್ । ವಕ್ಷಣಾಭ್ಯಃ ॥ ೧೭ ॥

। ಸಾಯಣಭಾಷ್ಯಂ ।

ಹೇ ಅಧ್ವರ್ಯವಃ ಅದ್ರಿಭಿರ್ಗ್ರಾವಭಿಃ ಸೋಮಂ ಸೋತ । ಹಿರವಧಾರಣೇ । ಅಭಿಷುಣುತೈವ । ಏನಮಿಮಮಪ್ಸು ವಸತೀವರೀಷ್ವಾ ಧಾವತ । ಅಸ್ಯ ಸೋಮಸ್ಯ ಧವನಂ ಕುರುತ । ಅದಾಭ್ಯಗ್ರಹೇ ಹಿಮಾದಾಸುತ ಇತ್ಯಾದಿಭಿರ್ಮಂತ್ರೈರ್ವಸತೀವರೀಷ್ವಾಧವನಂ ಸೋಮಸ್ಯ ಕ್ರಿಯತೇ । ತತ್ಕುರು-ತೇತ್ಯರ್ಥಃ । ಗವ್ಯಾ ಗವಿ ಭವಾನಿ ವಸ್ತ್ರೇವ ವಸ್ತ್ರಾಣ್ಯಾಚ್ಛಾದಕಾನಿ ಚರ್ಮಾಣೀವ ಮೇಘಾನ್ ವಾಸ-ಯಂತ ಇದಾಚ್ಛಾದಯಂತ ಏವ ನರೋ ನೇತಾರ ಇಂದ್ರಸ್ಯಾನುಚರಾ ಮರುತೋ ವಕ್ಷಣಾಭ್ಯೋ ನದೀ-ಭ್ಯೋ ನದೀನಾಮರ್ಥಾಯ ನಿರ್ಧುಕ್ಷನ್ । ಉದಕಾನಿ ನಿದುಹಂತಿ । ಕ್ಷಾರಯಂತಿ । ಯತ ಏವಮತಃ ಕಾರಣಾದಿಂದ್ರಯಾಗಾಯ ಸೋಮಮದ್ರಿಭಿರಭಿಷುಣುತೈವ । ಮೋದಾಸಿಷತೇತ್ಯರ್ಥಃ ॥

। ಪ್ರತಿಪದಾರ್ಥ ।

(ಎಲೈ ಅಧ್ವರ್ಯುಗಳೇ) ಅದ್ರಿಭಿಃ—ಹಿಂಡುವ ಕಲ್ಲುಗಳಿಂದ । ಈಂ ಸೋಮಂ—ಈ ಸೋಮರಸವನ್ನು । ಸೋತ—ಹಿಂಡಿರಿ । ಏನಂ ಹಿ—ಈ ಹಿಂಡಿದ ರಸವನ್ನು ಅಪ್ಸು—ವಸತೀವರ್ಯಾದ್ಯುದಕಗಳೊಂದಿಗೆ ಸೇರಿಸಿ । ಆ ಧಾವತ—ವಿಧ್ಯುಕ್ತಪ್ರಕಾರವಾಗಿ ಸಂಸ್ಕರಿಸಿರಿ (ಹೀಗೆ ಮಾಡಿದ್ದೇ ಆದರೆ । ಗವ್ಯಾ—ಗೋವುಗಳಿಂದ ಸಂಪಾದಿತ ವಾದ । ವಸ್ತ್ರೇವ—ಚರ್ಮದಿಂದ ಹೊದ್ದಿಸುವಂತೆ । ವಾಸಯಂತ ಇತ್—ಅಂತರಿಕ್ಷವನ್ನು ಮೇಘಗಳಿಂದ ಆಚ್ಛಾದಿಸುತ್ತಾ । ನರಃ—ನೇತೃಗಳಾದ ಮರುತ್ತುಗಳು । ವಕ್ಷಣಾಭ್ಯಃ—ನದಿಗಳ ಪ್ರವಾಹಗಳಿಗಾಗಿ । ನಿರ್ಧುಕ್ಷನ್—ವೃಷ್ಟ್ಯುದಕಗಳನ್ನು ಕರೆಯುತ್ತಾರೆ.

। ಭಾವಾರ್ಥ ।

ಎಲೈ ಅಧ್ವರ್ಯುಗಳೇ, ಹಿಂಡುವ ಕಲ್ಲುಗಳಿಂದ ಈ ಸೋಮರಸವನ್ನು ಹಿಂಡಿರಿ. ಈ ಹಿಂಡಿದ ರಸವನ್ನು ವಸತೀವರ್ಯಾದಿಗಳೊಂದಿಗೆ ಸೇರಿಸಿ ವಿಧ್ಯುಕ್ತಪ್ರಕಾರವಾಗಿ ಸಂಸ್ಕರಿಸಿರಿ. ಹೀಗೆ ಮಾಡಿದ್ದೇ ಆದರೆ, ಗೋವುಗಳ ಚರ್ಮದಿಂದ ಹೊದ್ದಿಸುವಂತೆ ಅಂತರಿಕ್ಷವನ್ನು ಮೇಘಗಳಿಂದ ಹೊದ್ದಿಸುತ್ತಾ ನೇತೃಗಳಾದ ಮರುತ್ತುಗಳು ನದಿಗಳ ಪ್ರವಾಹಗಳಿಗಾಗಿ ವೃಷ್ಟ್ಯುದಕಗಳನ್ನು ಕರೆಯುತ್ತಾರೆ.

## English Translation

Extract the Soma juice with the bruising stones, wash it with the consecrated waters; (for by so doing) the leaders (of the rain, the Maruts) clothing (the sky with clouds) as with a vesture of the hide of the cow, milk forth (the water) for the rivers.

। ಸಂಹಿತಾಪಾಠಃ ।

ಅಧ ಜ್ಮೋ ಅಧ ವಾ ದಿವೋ ಬೃಹತೋ ರೋಚನಾದಧಿ ।

ಅಯಾ ವರ್ಧಸ್ವ ತನ್ವಾ ಗಿರಾ ಮಮಾ ಜಾತಾ ಸುಕ್ರತೋ ಪೃಣ ॥ ೧೮ ॥

। ಪದಪಾಠಃ ।

ಅಧ । ಜ್ಮಃ । ಅಧ । ವಾ । ದಿವಃ । ಬೃಹತಃ । ರೋಚನಾತ್ । ಅಧಿ ।

ಅಯಾ । ವರ್ಧಸ್ವ । ತನ್ವಾ । ಗಿರಾ । ಮಮ । ಆ । ಜಾತಾ । ಸುಕ್ರತೋ ಇತಿ ಸುऽಕ್ರತೋ । ಪೃಣ ॥

। ಸಾಯಣಭಾಷ್ಯಂ ।

ಹೇ ಇಂದ್ರ ಅಧಾಧುನಾ ಜ್ಮಃ । ಜಮಂತಿ ಗಚ್ಛಂತ್ಯಸ್ಯಾಮಿತಿ ಜ್ಮಾ ಪೃಥಿವೀ । ತಸ್ಯಾಃ ಸಕಾಶಾದಧ ವಾಪಿ ವಾ ದಿವೋऽಂತರಿಕ್ಷಾದ್ಬೃಹತೋ ಮಹತೋ ರೋಚನಾನ್ನಕ್ಷತ್ರೈರ್ದೀಪ್ಯಮಾನಾತ್ಸ್ವರ್ಗಾದ್ವಾಗತ್ಯ । ಅಧಿಃ ಪಂಚಮ್ಯರ್ಥಾನುವಾದೀ । ಅಯಾನಯಾ ತನ್ವಾ ತತಯಾ ವಿಸ್ತೃತಯಾ ಮಮ ಮದೀಯಯಾ ಗಿರಾ ಸ್ತುತ್ಯಾ ವರ್ಧಸ್ವ । ವೃದ್ಧೋ ಭವ । ಹೇ ಸುಕ್ರತೋ ಶೋಭನಕರ್ಮವನ್ನಿಂದ್ರ ಜಾತಾ ಜಾತಾನಸ್ಮದೀಯಾಞ್ಜನಾನಾ ಪೃಣ । ಅಭಿಲಷಿತೈಃ ಫಲೈರಾಪೂರಯ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) । ಅಧ—ಈಗ । ಜ್ಮಃ—ಪೃಥ್ವಿಯಿಂದಾಗಲಿ । ಅಧ ವಾ—ಅಥವಾ । ದಿವಃ—ಅಂತರಿಕ್ಷದಿಂದಾಗಲಿ (ಅಥವಾ) । ಬೃಹತಃ—ಮಹತ್ತಾದ ರೋಚನಾತ್ ಅಧಿ—ನಕ್ಷತ್ರಾದಿಗಳಿಂದ ಪ್ರಕಾಶಿಸುವ ದ್ಯುಲೋಕದಿಂದಾಗಲಿ ಬಂದು । ತನ್ವಾ—ವಿಸ್ತೃತವಾಗಿ ನಿರ್ಮಿತವಾದುದೂ । ಮಮ—ನನ್ನಿಂದ ಅರ್ಪಿತವಾದುದೂ ಆದ । ಅಯಾ ಗಿರಾ—ಈ ಸ್ತುತಿವಾಕ್ಯನಿಂದ । ವರ್ಧಸ್ವ—ವೃದ್ಧಿಯನ್ನು (ಸಂತೋಷವನ್ನು) ಹೊಂದು । ಸುಕ್ರತೋ—ಉತ್ತಮವಾದ ಕರ್ಮಕರ್ತನಾದ ಎಲೈ ಇಂದ್ರನೇ । ಜಾತಾ—ನಮ್ಮವರನ್ನೆಲ್ಲಾ । ಆ ಪೃಣ—ಫಲಗಳಿಂದ ತುಂಬು (ತೃಪ್ತಿಗೊಳಿಸು).

। ಭಾವಾರ್ಥ ।

ಎಲೈ ಇಂದ್ರನೇ, ಪೃಥ್ವಿಯಿಂದಾಗಲಿ, ಅಂತರಿಕ್ಷದಿಂದಾಗಲಿ, ಅಥವಾ ನಕ್ಷತ್ರಾದಿಗಳಿಂದ ಪ್ರಕಾಶಿಸುವ ಮಹತ್ತಾದ ದ್ಯುಲೋಕದಿಂದಾಗಲಿ ಬಂದು ವಿಸ್ತೃತವಾಗಿ ನಿರ್ಮಿತವಾದುದೂ, ನನ್ನಿಂದ ಅರ್ಪಿತವಾದುದೂ ಆದ ಈ ಸ್ತುತಿವಾಕ್ಯನಿಂದ ವೃದ್ಧಿಯನ್ನು (ಸಂತೋಷವನ್ನು) ಹೊಂದು. ಉತ್ತಮವಾದ ಕರ್ಮಕರ್ತನಾದ ಎಲೈ ಇಂದ್ರನೇ, ನಮ್ಮ ಜನರನ್ನೆಲ್ಲಾ ಫಲಗಳಿಂದ ತುಂಬಿ ತೃಪ್ತಿಪಡಿಸು.

## English Translation

Whether come from the earth or the firmament, or the vast luminous

(heaven), be magnified by this may diffusive praise; satisfy, Satakratu (my) people.

। ಸಂಹಿತಾಪಾಠಃ ।

ಇಂದ್ರಾ॑ಯ ಸು ಮ॒ದಿನ್ತ॑ಮಂ ಸೋಮಂ॑ ಸೋತಾ॒ ವರೇ॑ಣ್ಯಂ ।
ಶ॒ಕ್ರ ಏ॑ಣಂ ಪೀಪಯ॒ದ್ವಿಶ್ವ॑ಯಾ ಧಿ॒ಯಾ ಹಿ॑ನ್ವಾ॒ನಂ ನ ವಾ॑ಜ॒ಯುಂ ॥೧೯॥

॥ ಪದಪಾಠಃ ॥

ಇಂದ್ರಾ॑ಯ । ಸು । ಮ॒ದಿನ್ऽತ॑ಮಂ । ಸೋಮಂ॑ । ಸೋತ॒ । ವರೇ॑ಣ್ಯಂ ।
ಶ॒ಕ್ರಃ । ಏ॒ನಂ॒ । ಪೀ॒ಪ॒ಯ॒ತ್ । ವಿಶ್ವ॑ಯಾ । ಧಿ॒ಯಾ । ಹಿ॒ನ್ವಾ॒ನಂ । ನ । ವಾ॒ಜ॒ऽಯುಂ ॥ ೧೯ ॥

। ಸಾಯಣಭಾಷ್ಯಂ ।

ಹೇ ಅಧ್ವರ್ಯವಃ ಇಂದ್ರಾಯೇಂದ್ರಾರ್ಥಂ ಮದಿಂತಮಂ ಮಾದಯಿತೃತಮಂ ವರೇಣ್ಯಂ ವರಣೀಯಂ ಸಂಭಜನೀಯಂ ಸೋಮಂ ಸು ಸೋತ। ಅಭಿಷುಣುತ। ಕುತ ಇತ್ಯತ ಆಹ । ಶಕ್ರ ಇಂದ್ರೋ ವಿಶ್ವಯಾ ಧಿಯಾ ಸರ್ವಯಾ ಕ್ರಿಯಯಾಗ್ನಿಷ್ಟೋಮಾದಿಲಕ್ಷಣಯಾ ಹಿನ್ವಾನಂ ಪ್ರೀಣಯಂತಂ ವಾಜಯುಮನ್ನಮಾತ್ಮನ ಇಚ್ಛಂತಮೇನಂ ಯಜಮಾನಂ । ನೇತಿ ಸಂಪ್ರತ್ಯರ್ಥೀಯಃ। ಸಂಪ್ರತಿ ಪೀಪಯತ್ । ವರ್ಧಯತಿ । ಅತಃ ಕಾರಣಾತ್ತಸ್ಮಾ ಇಂದ್ರಾಯ ಸೋಮಂ ಸುನುತೇತ್ಯರ್ಥಃ ॥

। ಪ್ರತಿಪದಾರ್ಥ ।

ವಿಶ್ವಯಾ—ಸಮಸ್ತವಾದ । ಧಿಯಾ—ಅಗ್ನಿಷ್ಟೋಮಾದಿ ಕರ್ಮಗಳಿಂದ । ಹಿನ್ವಾನಂ- ತೃಪ್ತಿಗೊಳಿಸುವವನೂ । ವಾಜಯುಂ—ಅನ್ನೇಚ್ಛುವೂ ಆದ । ಏನಂ—ಈ ಯಜಮಾನನನ್ನು । ಶಕ್ರಃ—ಇಂದ್ರನು । ನ—ಒಡನೆಯೇ । ಪೀಪಯತ್—ಪ್ರವೃದ್ಧನಾಗುವಂತೆ ಮಾಡುತ್ತಾನೆ (ಆದುದರಿಂದಲೇ ಎಲೈ ಅಧ್ವರ್ಯುಗಳೇ) । ಇಂದ್ರಾಯ—ಇಂದ್ರನನ್ನುದ್ದೇಶಿಸಿ । ಮದಿಂತಮಂ—ಮದಕಾರಕವೂ । ವರೇಣ್ಯಂ—ಪೂಜ್ಯವಾದುದೂ ಆದ । ಸೋಮಂ—ಸೋಮರಸವನ್ನು । ಸು ಸೋತ—ಚೆನ್ನಾಗಿ ಹಿಂಡಿರಿ.

। ಭಾವಾರ್ಥ ।

ಸಮಸ್ತವಾದ ಅಗ್ನಿಷ್ಟೋಮಾದಿ ಕರ್ಮಗಳಿಂದ ತೃಪ್ತಿಗೊಳಿಸುವವನೂ, ಅನ್ನೇಚ್ಛುವೂ ಆದ ಯಜಮಾನನನ್ನು ಇಂದ್ರನು ಒಡನೆಯೇ ಪ್ರವೃದ್ಧನಾಗುವಂತೆ ಮಾಡುತ್ತಾನೆ. ಆದುದರಿಂದಲೇ ಎಲೈ ಅಧ್ವರ್ಯುಗಳೇ ಇಂದ್ರನನ್ನುದ್ದೇಶಿಸಿ ಮದಕಾರಕವೂ, ಪೂಜ್ಯವಾದುದೂ ಆದ ಸೋಮರಸವನ್ನು ಉತ್ತಮವಾಗಿ ಹಿಂಡಿರಿ.

## English Translation

Pour out to Indra the most exhilarating, the most excellent Soma,

for Sakra cherishes him who is desirous of food, propitiating him by every pious act.

॥ ಸಂಹಿತಾಪಾಠಃ ॥

ಮಾ ತ್ವಾ ಸೋಮಸ್ಯ ಗಲ್ದಯಾ ಸದಾ ಯಾಚನ್ನಹಂ ಗಿರಾ ।
ಭೂರ್ಣಿಂ ಮೃಗಂ ನ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷತ್॥

॥ ಪದಪಾಠಃ ॥

ಮಾ । ತ್ವಾ । ಸೋಮಸ್ಯ । ಗಲ್ದಯಾ । ಸದಾ । ಯಾಚನ್ । ಅಹಂ । ಗಿರಾ ।
ಭೂರ್ಣಿಂ । ಮೃಗಂ । ನ । ಸವನೇಷು । ಚುಕ್ರುಧಂ । ಕಃ । ಈಶಾನಂ । ನ । ಯಾಚಿಷತ್ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾಂ ಸವನೇಷು ಯಜ್ಞೇಷು ಸೋಮಸ್ಯ ಗಲ್ದಯಾ ಗಾಲನೇನಾಸ್ರಾವಣೇನ ಗಿರಾ ಸ್ತುತ್ಯಾ ಚ ಯುಕ್ತೋಽಹಂ ಸದಾ ಸರ್ವದಾ ಯಾಚನ್ ಯಾಚಮಾನಃ ಸನ್ ಮಾ ಚುಕ್ರುಧಂ । ಮಾ ಕ್ರೋಧಯಾನಿ । ಬಹುಶೋ ಯಾಚ್ಯಮಾನೇ ತ್ವಯಿ ಕ್ರೋಧೋ ಜಾಯತೇ ತಂ ಸೋಮಸ್ಯ ಗಾಲನೇನ ಸ್ತುತ್ಯಾ ಚಾಪನಯಾಮೀತ್ಯರ್ಥಃ । ಕೀದೃಶಂ ತ್ವಾಂ । ಭೂರ್ಣಿಂ ಭರ್ತಾರಂ ಮೃಗಂ ನ ಸಿಂಹಮಿವ ಭೀಮಂ । ಸ್ವಾಮಿನ ಇಂದ್ರಸ್ಯ ಯಾಚನೇ ಲೌಕಿಕನ್ಯಾಯಂ ದರ್ಶಯತಿ । ಲೋಕೇ ಕೋ ವಾ ಪುರುಷ ಈಶಾನಮೀಶ್ವರಂ ಸ್ವಾಮಿನಂ ನ ಯಾಚಿಷತ್ । ನ ಯಾಚೇತ । ಸರ್ವ ಏವ ಹಿ ಯಾಚತೇ । ಅತೋಽಹಮಪಿ ತ್ವಾಂ ಸ್ವಾಮಿನಂ ಯಾಚ ಇತಿ ಭಾವಃ ॥

॥ ಪ್ರತಿಪದಾರ್ಥ ॥

( ಎಲೈ ಇಂದ್ರನೇ ) **ಭೂರ್ಣಿಂ**—ಭಯಂಕರನೂ ಮೃಗರಾಜನೂ ಆದ । **ಮೃಗಂ ನ**—ಸಿಂಹದಂತೆ ಭಯಂಕರನಾದ । **ತ್ವಾ**—ನಿನ್ನನ್ನು । **ಸದಾ**—ಯಾವಾಗಲೂ । **ಯಾಚನ್**—ಯಾಚಿಸುತ್ತಾ । **ಸವನೇಷು**—ಯಜ್ಞಗಳಲ್ಲಿ । **ಸೋಮಸ್ಯ**—ಸೋಮರಸದ । **ಗಲ್ದಯಾ**—ಪ್ರವಾಹರೂಪದ ಸೋಮರಸದ ಅರ್ಪಣೆಯಿಂದಲೂ । **ಗಿರಾ**—ಸ್ತುತಿಯಿಂದಲೂ ಕೂಡಿದ । **ಅಹಂ**—ನಾನು । **ಮಾ ಚುಕ್ರುಧಂ**—ಕೋಪಗೊಳ್ಳದಿರುವಂತೆ ಮಾಡುತ್ತೇನೆ । **ಕಃ**—ಮಾನವರಲ್ಲಿ ಯಾರು ತಾನೇ । **ಈಶಾನಂ**—ಸರ್ವೇಶ್ವರನಾದ ಇಂದ್ರನನ್ನು । **ನ ಯಾಚಿಷತ್**—ಯಾಚಿಸುವುದಿಲ್ಲ ?

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಮೃಗರಾಜನಾದ ಸಿಂಹದಂತೆ ಭಯಂಕರನು. ಅಂತಹ ನಿನ್ನನ್ನು ಪದೇ ಪದೇ ಯಾಚಿಸುವುದರಿಂದ ನಿನಗೆ ಕೋಪಬರುವುದು ಸಹಜ. ಆದರೆ, ಯಜ್ಞದಲ್ಲಿ ಪ್ರವಿಸತಕ್ಕ ಸೋಮಾರ್ಪಣೆಯಿಂದಲೂ

ಸ್ತುತಿಗಳಿಂದ ಕೂಡಿಯೂ ನಿನ್ನನ್ನು ತೃಪ್ತಿಗೊಳಿಸುವುದರಿಂದ ನಿನಗೆ ಕೋಪವುಂಟಾಗದಂತೆ ಮಾಡುತ್ತೇನೆ. ಲೋಕದಲ್ಲಿ ಯಾರು ತಾನೇ ಸರ್ವೇಶ್ವರನಾದ ಇಂದ್ರನನ್ನು ಯಾಚಿಸುವುದಿಲ್ಲ ?

## English Translation

May I never, when importuning you in sacrifices with the effusion of the Soma and with praise, excite you like a ferocious lion, to wrath: who (is there in the world) that does not solicit his lord ?

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ ಗಲ್ದಯಾ ಎಂಬ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

ಮಾ ಚುಕ್ರುಧಂ ತ್ವಾಂ ಸೋಮಸ್ಯ ಗಾಲನೇನ ಸದಾ ಯಾಚನ್ನಹಂ ಗಿರಾ ಗೀತ್ಯಾ ಸ್ತುತ್ಯಾ ಭೂರ್ಣಿಮಿವ ಮೃಗಂ ನ ಸವನೇಷು ಚುಕ್ರುಧಂ ಕ ಈಶಾನಂ ನ ಯಾಚಿಷ್ಯತ ಇತಿ ॥ ಗಲ್ದಾ ಧಮನಯೋ ಭವಂತಿ ಗಲನಮಾಸು ಧೀಯತೇ । ಆ ತ್ವಾ ವಿಶಂತ್ವಿಂದವ ಆ ಗಲ್ದಾ ಧಮನೀನಾಂ । ನಾನಾವಿಭಕ್ತೀ ತ್ಯೇತೇ ಭವತ ಆಗಲನಾ ಧಮನೀನಾಮಿತ್ಯತ್ರಾರ್ಥಃ ॥

(ನಿ. ೬-೨೪)

ಸೋಮರಸವು ಹಿಂಡಲ್ಪಟ್ಟಾಗ ಅದನ್ನು ಪಾನಮಾಡಬೇಕೆಂದು ನಾವು ನಿನ್ನನ್ನು ಯಾವಾಗಲೂ ಸ್ತುತಿಗಳಿಂದಲೂ, ಗಾನದಿಂದಲೂ, ಪ್ರಾರ್ಥನೆಗಳಿಂದಲೂ, ಇತರ ವಿಧವಾದ ಯಾಚನೆಗಳಿಂದಲೂ ಪ್ರಾರ್ಥಿಸುತ್ತೇವೆ ಇರುವುದರಿಂದ ಅದರಿಂದ ನಿನಗೆ ಬೇಸರವಾಗಿ, ಕಾಡಿನಲ್ಲಿರುವ ದುಷ್ಟಮೃಗಕ್ಕೆ ಹಿಂಸೆಮಾಡುವುದರಿಂದ ಕೋಪ ಬರುವಂತೆ, ನಮ್ಮ ಪ್ರಾರ್ಥನೆಗಳಿಂದ ನಿನಗೆ ಕೋಪವುಂಟಾಗದಿರಲಿ. ಏಕೆಂದರ ಪ್ರಭುವಾದ ನಿನ್ನನ್ನು ಯಾರು ತಾನೇ ಪ್ರಾರ್ಥಿಸಿ ಕರೆಯುವುದಿಲ್ಲ ?

ಇಲ್ಲಿ ಗಲ್ದಾ ಎಂದರೆ ಪಾತ್ರೆಯು. ಏಕೆಂದರೆ ಹಿಂಡಲ್ಪಟ್ಟ ಸೋಮರಸವನ್ನು ಇದರಲ್ಲಿ ತುಂಬುವುದರಿಂದ ಗಲ್ದಾ ಎಂದರೆ ಪಾತ್ರೆಗಳು ಎಂಬರ್ಥವು ರೂಢಿಯಲ್ಲಿ ಬಂದಿರುವುದು. ಹಿಂಡಲ್ಪಟ್ಟ ಸೋಮರಸವು ನಿನ್ನನ್ನು (ನಿನ್ನ ಉದರಕ್ಕೆ) ಪ್ರವೇಶಿಸಲಿ ಅಥವಾ ಸೋಮವನ್ನು ಶೇಖರಿಸುವ ಪಾತ್ರೆಯಲ್ಲಿ ಬಂದು ಸೇರಲಿ ಎಂಬರ್ಥವುಳ್ಳ—ಆ ತ್ವಾ ವಿಶಂತ್ವಿಂದವ ಆ ಗಲ್ದಾ ಧಮನೀನಾಂ ಎಂಬ ಶ್ರುತಿವಾಕ್ಯವನ್ನು ಉದಾಹರಣೆಗಾಗಿ ಇಲ್ಲಿ ಕೊಟ್ಟಿದೆ.

ಗಲ್ದಾ ಮತ್ತು ಧಮನೀ ಎಂಬ ಶಬ್ದಗಳಿಗೆ ಒಂದೇ ವಿಧವಾದ ಅರ್ಥವಿರುವುದು-ಎಂದರೆ ಇವು ಒಂದೇ ಅರ್ಥವನ್ನು ಸೂಚಿಸುವ ಪರ್ಯಾಯಶಬ್ದಗಳು. ಈ ಶಬ್ದಗಳಿಗೆ ನಾನಾ ವಿಭಕ್ತಿಗಳಲ್ಲಿ ಪ್ರಯೋಗವಿರುವುದು. ಪ್ರಕೃತ ಋಕ್ಕಿನಲ್ಲಿ ಗಲ್ದಾ ಎಂಬ ಶಬ್ದಕ್ಕೆ ಪಾತ್ರೆಗಳಲ್ಲಿ ಸಂಗ್ರಹಿಸಲ್ಪಟ್ಟಿರುವ ಸೋಮರಸವು ಎಂದರ್ಥವು.

॥ ಸಂಹಿತಾಪಾಠಃ ॥

ಮದೇನೇಷಿತಂ ಮದಮುಗ್ರಮುಗ್ರೇಣ ಶವಸಾ ।
ವಿಶ್ವೇಷಾಂ ತರುತಾರಂ ಮದಚ್ಯುತಂ ಮದೇ ಹಿ ಷ್ಮಾ ದದಾತಿ ನಃ ॥೨೧॥

॥ ಪದಪಾಠಃ ॥

ಮದೇನ । ಇಷಿತಂ । ಮದಂ । ಉಗ್ರಂ । ಉಗ್ರೇಣ । ಶವಸಾ ।
ವಿಶ್ವೇಷಾಂ । ತರುತಾರಂ । ಮದऽಚ್ಯುತಂ । ಮದೇ । ಹಿ । ಸ್ಮ । ದದಾತಿ । ನಃ ॥ ೨೧ ॥

॥ ಸಾಯಣಭಾಷ್ಯಂ ॥

ಮದೇನ ಮಾದಯಿತ್ರಾ ಸ್ತೋತ್ರೇಷಿತಂ ಪ್ರೇಷಿತಂ ಮದಂ ಮದಕರಂ ಸೋಮಮುಗ್ರಮುದ್ಗೂರ್ಣಂ ರಸಮುಗ್ರೇಣೋದ್ಗೂರ್ಣೇನಾಧಿಕೇನ ಶವಸಾ ಬಲೇನ ಯುಕ್ತ ಇಂದ್ರಃ ಪಿಬತ್ವಿತಿ ಶೇಷಃ। ಪೀತ್ವಾ ಚ ವಿಶ್ವೇಷಾಂ ಸರ್ವೇಷಾಂ ಶತ್ರೂಣಾಂ ತರುತಾರಂ ತರೀತಾರಂ ಜೇತಾರಂ ಮದಚ್ಯುತಂ ಮದಸ್ಯ ಶತ್ರೂಣಾಂ ಗರ್ವಸ್ಯ ಚ್ಯಾವಯಿತಾರಂ ಪುತ್ರಂ ಮದೇ ಸೋಮಪಾನೇನ ಜನಿತೇ ಹರ್ಷೇ ಸತಿ ನೋಽಸ್ಮಭ್ಯಂ ದದಾತಿ ಹಿ ಷ್ಮ । ದದಾತಿ ಖಲು । ಅತಃ ಸೋಮಂ ಪಿಬತ್ವಿತ್ಯರ್ಥಃ॥

॥ ಪ್ರತಿಪದಾರ್ಥ ॥

ಮದೇನ—ಮದಕಾರಕವಾದ ಸ್ತುತಿಯನ್ನು ನಿರ್ಮಿಸುವ ಸ್ತುತಿಕರ್ತನಿಂದ । ಇಷಿತಂ—ಅರ್ಪಿತವಾದುದೂ। ಮದಂ—ಹರ್ಷವನ್ನುಂಟುಮಾಡತಕ್ಕದ್ದೂ । ಉಗ್ರಂ—ಶಕ್ತಿಯುತವಾದುದೂ ಆದ ಸೋಮರಸವನ್ನು । ಉಗ್ರೇಣ—ಅತ್ಯಧಿಕವಾದ । ಶವಸಾ—ಶಕ್ತಿಯೊಡಗೂಡಿದ ಇಂದ್ರನು ಪಾನಮಾಡಲಿ । ಮದೇ—ಸೋಮರಸದ ಪಾನದಿಂದ ತೃಪ್ತನಾದಾಗ । (ಇಂದ್ರಃ—ಇಂದ್ರನು)। ನಃ—ನಮಗೆ । ವಿಶ್ವೇಷಾಂ—ಸಮಸ್ತ ಶತ್ರುಗಳನ್ನೂ । ತರುತಾರಂ—ಜಯಿಸಲು ಸಮರ್ಥನೂ । ಮದಚ್ಯುತಂ—ಶತ್ರುಗಳ ಗರ್ವವನ್ನಡಗಿಸುವವನೂ ಆದ ಪುತ್ರನನ್ನು । ದದಾತಿ ಹಿ ಸ್ಮ—ಖಂಡಿತ ಅನುಗ್ರಹಿಸಿ ಕೊಡುತ್ತಾನಲ್ಲವೇ ?

॥ ಭಾವಾರ್ಥ ॥

ಮದಕಾರಕವಾದ ಸ್ತುತಿಯನ್ನು ನಿರ್ಮಿಸುವ ಸ್ತುತಿಕರ್ತನಿಂದ ಅರ್ಪಿತವಾದುದೂ ಹರ್ಷವನ್ನುಂಟುಮಾಡತಕ್ಕದ್ದೂ, ಶಕ್ತಿಯುತವಾದುದೂ ಆದ ಸೋಮರಸವನ್ನು ಅತ್ಯಧಿಕವಾದ ಶಕ್ತಿಯೊಡಗೂಡಿದ ಇಂದ್ರನು ಪಾನಮಾಡಲಿ. ಇಂದ್ರನು ಸೋಮರಸದ ಪಾನದಿಂದ ತೃಪ್ತನಾದಾಗ ಸಮಸ್ತ ಶತೃಗಳನ್ನೂ ಜಯಿಸಲು ಸಮರ್ಥನೂ, ಶತ್ರುಗಳ ಗರ್ವವನ್ನು ಅಡಗಿಸುವವನೂ ಆದ ಪುತ್ರನನ್ನು ಖಂಡಿತ ಅನುಗ್ರಹಿಸಿ ಕೊಡುತ್ತಾನೆ.

## English Translation

(May Indra drink) with invigorated strength, the strong exhilarating (Soma) offered with animating (laudation): for in his delight he gives us (a son) the overcomer of all (foes), the humbler of their pride.

॥ ಸಂಹಿತಾಪಾಠಃ ॥

ಶೇವಾರೇ ವಾರ್ಯಾ ಪುರು ದೇವೋ ಮರ್ತಾಯ ದಾಶುಷೇ ।
ಸ ಸುನ್ವತೇ ಚ ಸ್ತುವತೇ ಚ ರಾಸತೇ ವಿಶ್ವಗೂರ್ತೋ ಅರಿಷ್ಟುತಃ ॥ ೨೨ ॥

॥ ಪದಪಾಠಃ ॥

ಶೇವಾರೇ । ವಾರ್ಯಾ । ಪುರು । ದೇವಃ । ಮರ್ತಾಯ । ದಾಶುಷೇ ।
ಸಃ । ಸುನ್ವತೇ । ಚ । ಸ್ತುವತೇ । ಚ । ರಾಸತೇ । ವಿಶ್ವऽಗೂರ್ತಃ । ಅರಿऽಸ್ತುತಃ ॥ ೨೨ ॥

॥ ಸಾಯಣಭಾಷ್ಯಂ ॥

ಶೇವಾರೇ । ಶೇವಂ ಸುಖಂ । ತಸ್ಯ ಗಮಕೇ ಯಜ್ಞೇ ದಾಶುಷೇ ಚರುಪುರೋಡಾಶಾದೀನಿ ದತ್ತವತೇ ಯಜಮಾನಾಯ ಪುರು ಪುರೂಣಿ ಬಹೂನಿ ವಾರ್ಯಾಣಿ ವರಣೀಯಾನಿ ಧನಾನಿ ದೇವೋ ದಾನಾದಿಗುಣಯುಕ್ತ ಇಂದ್ರೋ ರಾಸತೇ । ದದಾತಿ । ಸ ಏವ ಸುನ್ವತೇ ಚ ಸೋಮಾಭಿಷವಂ ಕುರ್ವತೇ ಚ ಸ್ತುವತೇ ಚ ಸ್ತೋತ್ರಂ ಕುರ್ವತೇ ಚ ಧನಾನಿ ರಾಸತೇ । ಕೀದೃಶಃ ಸಃ । ವಿಶ್ವಗೂರ್ತೋ ವಿಶ್ವೇಷು ಸರ್ವೇಷು ಕಾರ್ಯೇಷೂದ್ಯತಃ ಸ್ವತಃ ಪ್ರವೃತ್ತೋಽರಿಷ್ಟುತೋಽರಿಭಿಃ ಪ್ರೇರಯಿತೃಭಿಃ ಪ್ರಶಸ್ತಃ ॥

॥ ಪ್ರತಿಪದಾರ್ಥ ॥

**ವಿಶ್ವಗೂರ್ತಃ**—ಸಮಸ್ತಕಾರ್ಯಗಳಲ್ಲಿಯೂ ಸ್ವತಃ ಸಂಕಲ್ಪವುಳ್ಳವನೂ । **ಅರಿಷ್ಟುತಃ**—ಶತ್ರುಗಳಿಂದಲೂ ಪ್ರಶಂಸಿತನೂ । **ದೇವಃ**—ದೇವತಾತ್ಮನೂ ಆದ ಇಂದ್ರನು । **ಶೇವಾರೇ**—ಯಜ್ಞದಲ್ಲಿ । **ದಾಶುಷೇ**—ಹವಿಸ್ಸನ್ನರ್ಪಿಸುವ । **ಮರ್ತಾಯ**—ಮಾನವನಿಗೆ । **ಪುರು**—ಅತ್ಯಧಿಕವಾಗಿ । **ವಾರ್ಯಾ**—ಎಲ್ಲರಿಂದಲೂ ಅಪೇಕ್ಷಿತವಾದ ಧನಗಳನ್ನು । **ರಾಸತೇ**—ಕೊಡುತ್ತಾನೆ । **ಸಃ**—ಅದೇ ಇಂದ್ರನು । **ಸುನ್ವತೇ ಚ**—ಸೋಮರಸವನ್ನು ಹಿಂಡಿ ಅರ್ಪಿಸುವವನಿಗೂ । **ಸ್ತುವತೇ ಚ**—ಅವನನ್ನು ಸ್ತುತಿಸುವವನಿಗೂ ಸಹ ಕೊಡುತ್ತಾನೆ.

॥ ಭಾವಾರ್ಥ ॥

ಸಮಸ್ತ ಕಾರ್ಯಗಳಲ್ಲಿಯೂ ಸ್ವತಃ ಸಂಕಲ್ಪವುಳ್ಳವನೂ, ಶತ್ರುಗಳಿಂದ ಪ್ರಶಂಸಿತನೂ, ದೇವತಾತ್ಮನೂ ಆದ ಇಂದ್ರನು ಯಜ್ಞದಲ್ಲಿ ಹವಿಸ್ಸನ್ನರ್ಪಿಸುವ ಮಾನವನಿಗೆ ಎಲ್ಲರಿಂದಲೂ ಅಪೇಕ್ಷಿತವಾದ ಧನವನ್ನು ಅತ್ಯಧಿಕವಾಗಿ

ಕೊಡುತ್ತಾನೆ. ಅದೇ ಇಂದ್ರನು ಸೋಮರಸವನ್ನು ಹಿಂಡಿ ಅರ್ಪಿಸುವವನಿಗೂ, ಅದೇ ಇಂದ್ರನನ್ನು ಸ್ತುತಿಸುವವನಿಗೂ ಸಹ ಕೊಡುತ್ತಾನೆ.

## English Translation

The divine (Indra), the accomplisher of all aims, the glorified by his foes, gives vast treasures to the mortal who presents offerings at the sacrifice, to him who pours out the libation, who hymns his praise.

॥ ಸಂಹಿತಾಪಾಠಃ ॥

ಐಂದ್ರ ಯಾಹಿ ಮತ್ಸ್ವ ಚಿತ್ರೇಣ ದೇವ ರಾಧಸಾ ।
ಸರೋ ನ ಪ್ರಾಸ್ಯುದರಂ ಸಪೀತಿಭಿರಾ ಸೋಮೇಭಿರುರು ಸ್ಫಿರಂ ॥ ೨೩ ॥

॥ ಪದಪಾಠಃ ॥

ಆ । ಇಂದ್ರ । ಯಾಹಿ । ಮತ್ಸ್ವ । ಚಿತ್ರೇಣ । ದೇವ । ರಾಧಸಾ ।
ಸರಃ । ನ । ಪ್ರಾಸಿ । ಉದರಂ । ಸಪೀತಿऽಭಿಃ । ಆ । ಸೋಮೇಭಿಃ । ಉರು । ಸ್ಫಿರಂ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಆ ಯಾಹಿ । ಆಗಚ್ಛ । ಹೇ ದೇವ ದ್ಯೋತಮಾನ ಚಿತ್ರೇಣ ದರ್ಶನೀಯೇನ ರಾಧಸಾ ಧನೇನ ಸೋಮಲಕ್ಷಣೇನ ಮತ್ಸ್ವ । ಮಾದ್ಯ । ಸಪೀತಿಭಿರ್ಮರುದ್ಭಿಃ ಸಹ ಪೀಯಮಾನೈಃ ಸೋಮೇಭಿಃ ಸೋಮೈರುರು ವಿಸ್ತೀರ್ಣಂ ಸ್ಫಿರಂ ವೃದ್ಧಮುದರಮಾತ್ಮೀಯಂ ಜಠರಂ ಸರೋ ನ ಸರ ಇವಾ ಪ್ರಾಸಿ । ಅಪೂರಯ ॥ ಪ್ರಾ ಪೂರಣ ಅದಾದಿಕಃ ॥

॥ ಪ್ರತಿಪದಾರ್ಥ ॥

ದೇವ—ದೇವತಾತ್ಮನಾದ । ಇಂದ್ರ—ಎಲೈ ಇಂದ್ರನೇ । ಆ ಯಾಹಿ—ದಯಮಾಡು । ಚಿತ್ರೇಣ—ಆಕರ್ಷಕವಾದ । ರಾಧಸಾ—ಸೋಮರೂಪವಾದ ಧನದಿಂದ । ಮತ್ಸ್ವ—ಹರ್ಷವನ್ನು ಹೊಂದು । ಸಪೀತಿಭಿಃ—ಮರುತ್ತುಗಳೊಡಗೂಡಿ ಪಾನಮಾಡತಕ್ಕ । ಸೋಮೇಭಿಃ—ಸೋಮರಸಗಳಿಂದ । ಉರು—ವಿಸ್ತೃತವಾದುದೂ । ಸ್ಫಿರಂ—ಅಧಿಕವಾಗಿ ಬೆಳೆದುದೂ ಆದ । ಉದರಂ—ನಿನ್ನ ಉದರವನ್ನು । ಸರೋ ನ—ಸರಸ್ಸನ್ನು ನೀರಿನಿಂದ ತುಂಬುವಂತೆ । ಆ ಪ್ರಾಸಿ—ತುಂಬು.

॥ ಭಾವಾರ್ಥ ॥

ದೇವತಾತ್ಮನಾದ ಎಲೈ ಇಂದ್ರನೇ, ದಯಮಾಡು. ಆಕರ್ಷಕವೂ, ಸೋಮರೂಪವೂ ಆದ ಧನದಿಂದ

ಹರ್ಷವನ್ನು ಹೊಂದು. ಸರಸ್ಸನ್ನು ನೀರಿನಿಂದ ತುಂಬುವಂತೆ ವಿಸ್ತೃತವಾಗಿ ಬೆಳೆದಿರುವ ನಿನ್ನ ಉದರವನ್ನು ಮರುತ್ತುಗಳೊಡಗೂಡಿ ಪಾನಮಾಡತಕ್ಕ ಸೋಮರಸಗಳಿಂದ ತುಂಬು.

### English Translation

Come hither, Indra, be exhilarated by the wonderful (libatory) affluence and with your fellow-troopers (the Maruts fill with the Soma juices, your vast belly, capacious as a lake.

॥ ಸಂಹಿತಾಪಾಠಃ ॥

ಆ ತ್ವಾ ಸಹಸ್ರಮಾ ಶತಂ ಯುಕ್ತಾ ರಥೇ ಹಿರಣ್ಯಯೇ ।
ಬ್ರಹ್ಮಯುಜೋ ಹರಯ ಇಂದ್ರ ಕೇಶಿನೋ ವಹಂತು ಸೋಮಪೀತಯೇ ॥

॥ ಪದಪಾಠಃ ॥

ಆ । ತ್ವಾ । ಸಹಸ್ರಂ । ಆ । ಶತಂ । ಯುಕ್ತಾಃ । ರಥೇ । ಹಿರಣ್ಯಯೇ ।
ಬ್ರಹ್ಮಽಯುಜಃ । ಹರಯಃ । ಇಂದ್ರ । ಕೇಶಿನಃ । ವಹಂತು । ಸೋಮಽಪೀತಯೇ ॥ ೨೪ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇಽಹನಿ ಮಾಧ್ಯಂದಿನೇ ಬ್ರಹ್ಮಶಸ್ತ್ರ ಆ ತ್ವೇತಿ ವೈಕಲ್ಪಿಕಃ ಸ್ತೋತ್ರಿಯಸ್ತೃಚಃ । ಸೂತ್ರ್ಯತೇ ಹಿ । ಆ ತ್ವಾ ಸಹಸ್ರಮಾ ಶತಂ ಮಮ ತ್ವಾ ಸೂರ ಉದಿತ ಇತಿ ಬ್ರಾಹ್ಮಣಾಚ್ಛಂಸಿನಃ । ಆ. ೭-೪ । ಇತಿ ॥

ಹೇ ಇಂದ್ರ ತ್ವಾ ತ್ವಾಂ ಸಹಸ್ರಂ ಸಹಸ್ರಸಂಖ್ಯಾಕಾ ಹರಯಸ್ತ್ವದೀಯಾ ಅಶ್ವಾ ಆ ವಹಂತು । ಆನಯಂತ್ವಸ್ಮದ್ಯಜ್ಞಂ । ತಥಾ ಶತಂ ಶತಸಂಖ್ಯಾಕಾಶ್ಚ ಭವದೀಯಾ ಅಶ್ವಾಸ್ತ್ವಾಮಾ ವಹಂತು । ಯದ್ಯಪಿ ದ್ವಾವೇವಾಸ್ಯ ಹರೀ ತಥಾಪಿ ತದ್ವಿಭೂತಯೋಽನ್ಯೇಽಪಿ ಬಹವೋಽಶ್ವಾಃ ಸಂತಿ । ನನು ಯುಗಪದನೇಕೈರಶ್ವೈಃ ಕಥಂ ಯಾತುಂ ಶಕ್ಯತ ಇತಿ ಅತ ಆಹ ಯುಕ್ತಾ ಇತಿ । ಹಿರಣ್ಯಯೇ ಹಿರಣ್ಮಯೇ ಸ್ವರ್ಣವಿಕಾರೇ ॥ ಹಿರಣ್ಯಶಬ್ದಾದ್ವಿಕಾರಾರ್ಥೇ ವಿಹಿತಸ್ಯ ಮಯಟ ಋತ್ವ್ಯವಾಸ್ತ್ವ್ಯೇತ್ಯಾದೌ ಮಲೋಪೋ ನಿಪಾತ್ಯತೇ ॥ ತಾದೃಶೇ ರಥೇ ಯುಕ್ತಾಃ ಸಂಬದ್ಧಾಃ । ಬಹೂನಾಮಶ್ವಾನಾಂ ಶೀಘ್ರಗಮನಾಯ ರಥೇ ನಿಯುಕ್ತತ್ವಾದ್ಯುಗಪದೇವ ಸರ್ವೈರಶ್ವೈರ್ಗಂತುಂ ಶಕ್ಯತ ಇತಿ ಭಾವಃ । ಕೀದೃಶಾ ಹರಯಃ । ಬ್ರಹ್ಮಯುಜೋ ಬ್ರಹ್ಮಣಾ ಪರಿವೃಢೇನೇಂದ್ರೇಣ ಯುಕ್ತಾಃ । ಯದ್ವಾ । ಬ್ರಹ್ಮಣಾಸ್ಮದೀಯೇನ ಸ್ತೋತ್ರೇಣಾಸ್ಮಾಭಿರ್ದತ್ತೇನ ಹವಿಷಾ ವಾ ಯುಕ್ತಾಃ । ಕೇಶಿನಃ । ಕೇಶಾಃ ಕೇಸರಾಃ । ತೈರ್ಯುಕ್ತಾಃ । ಕಿಮರ್ಥ-

ಮಿಂದ್ರಸ್ಯ ವಹನಂ ತತ್ರಾಹ। ಸೋಮಪೀತಯೇ ಸೋಮಸ್ಯ ಪಾನಾಯ ಯಥಾಸ್ಮದೀಯಂ ಸೋಮಂ ಪಿಬೇತ್ ಅತ ಆವಹಂತ್ವಿತ್ಯರ್ಥಃ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಹಿರಣ್ಯಯೇ—ಸುವರ್ಣಮಯವಾದ । ರಥೇ—ರಥದಲ್ಲಿ । ಯುಕ್ತಾಃ—ಯೋಜಿತವಾದವೂ । ಬ್ರಹ್ಮಯುಜಃ—ಸ್ತುತಿಯಿಂದ ಯೋಜಿತವಾಗತಕ್ಕವೂ । ಕೇಶಿನಃ—ಆಕರ್ಷಕವಾದ ಕೇಸರವುಳ್ಳವೂ । ಸಹಸ್ರಂ—ಸಹಸ್ರಸಂಖ್ಯಾಕವೂ ಆದ । ಹರಯಃ—ಅಶ್ವಗಳು । ತ್ವಾ—ನಿನ್ನನ್ನು । ಸೋಮಪೀತಯೇ—ಸೋಮಪಾನಾರ್ಥವಾಗಿ । ಆ ವಹಂತು—ಕರೆತರಲಿ । ಶತಂ—ಅಸಂಖ್ಯಾತವಾದ ಅಂತಹ ಅಶ್ವಗಳು । ಆ (ವಹಂತು)—ಕರೆತರಲಿ.

। ಭಾವಾರ್ಥ ।

ಎಲೈ ಇಂದ್ರನೇ, ಸುವರ್ಣಮಯವಾದ ರಥದಲ್ಲಿ ಯೋಜಿತವಾದವೂ, ಸ್ತುತಿಯಿಂದ ಯೋಜಿತವಾಗತಕ್ಕವೂ ಆಕರ್ಷಕವಾದ ಕೇಸರವುಳ್ಳವೂ, ಸಹಸ್ರಸಂಖ್ಯಾಕವೂ ಆದ ಅಶ್ವಗಳು ನಿನ್ನನ್ನು ಸೋಮಪಾನಾರ್ಥವಾಗಿ ಕರೆತರಲಿ. ಅಸಂಖ್ಯಾತವಾದ ಅಂತಹ ಅಶ್ವಗಳು ನಿನ್ನನ್ನು ಕರೆತರಲಿ.

## English Translation

May your thousand, your hundred steeds, Indra, yoked to your golden chariot, harnessed by prayer, with flowing manes, bring you to drink the Soma libation.

। ವಿಶೇಷವಿಷಯಗಳು ॥

ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಆ ತ್ವಾ ಎಂದು ಮೊದಲಾಗುವ ಈ ಸೂಕ್ತದ ಮೂರು ಋಕ್ಕುಗಳನ್ನು (೨೪-೨೬ ಋಕ್ಕುಗಳನ್ನು) ವೈಕಲ್ಪಿಕಸ್ತೋತ್ರಿಯ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಆ ತ್ವಾ ಸಹಸ್ರಮಾ ಶತಂ ಮಮ ತ್ವಾ ಸೂರ ಉದಿತ ಇತಿ ಬ್ರಾಹ್ಮಣಾಚ್ಛಂಸಿನಃ ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಆ ತ್ವಾ ರಥೇ ಹಿರಣ್ಯಯೇ ಹರೀ ಮಯೂರಶೇಪ್ಯಾ ।
ಶಿತಿಪೃಷ್ಠಾ ವಹತಾಂ ಮಧ್ವೋ ಅಂಧಸೋ ವಿವಕ್ಷಣಸ್ಯ ಪೀತಯೇ ॥ ೨೫ ॥

। ಪದಪಾಠಃ ।

ಆ । ತ್ವಾ । ರಥೇ । ಹಿರಣ್ಯಯೇ । ಹರೀ ಇತಿ । ಮಯೂರಽಶೇಪ್ಯಾ ।
ಶಿತಿಽಪೃಷ್ಠಾ । ವಹತಾಂ । ಮಧ್ವಃ । ಅಂಧಸಃ । ವಿವಕ್ಷಣಸ್ಯ । ಪೀತಯೇ ॥ ೨೫ ॥

। ಸಾಯಣಭಾಷ್ಯಂ ।

ಪೂರ್ವಂ ಹರ್ಯೋರ್ವಿಭೂತಿರೂಪಾ ಅಶ್ವಾ ಇಂದ್ರಮಾವಹಂತ್ವಿತಿ ಪ್ರಾರ್ಥಿತಂ । ಅಧುನಾ ತಾವೇವೇಂದ್ರಮಾವಹತಾಮಿತಿ ಪ್ರಾರ್ಥ್ಯತೇ । ಹಿರಣ್ಯಯೇ ಹಿರಣ್ಮಯೇ ರಥೇ ಯುಕ್ತೌ ಮಯೂರಶೇಪ್ಯಾ ಮಯೂರಶೇಪೌ ಮಯೂರವರ್ಣಶೇಪೌ ಯಯೋಸ್ತೌ ॥ ಸುಪಾಂ ಸುಲುಗಿತಿ ವಿಭಕ್ತೇರ್ಡ್ಯಾದೇಶಃ ॥ ಶಿತಿಪೃಷ್ಠಾ ಶ್ವೇತಪೃಷ್ಠೌ ಏವಂಭೂತಾವಶ್ವೌ ಹೇ ಇಂದ್ರ ತ್ವಾಮಾ ವಹತಾಂ । ಕಿಮರ್ಥಂ । ಮಧ್ವಃ ಮಧುರರಸಸ್ಯ ವಿವಕ್ಷಣಸ್ಯ ವಕ್ತುಮಿಷ್ಟಸ್ಯ ಸ್ತುತ್ಯಸ್ಯ ಯದ್ವಾ ವೋಢವ್ಯಸ್ಯ ಪ್ರಾಪ್ತವ್ಯಸ್ಯಾಂಧಸೋಽನ್ನಸ್ಯ ಸೋಮರೂಪಸ್ಯ ಪೀತಯೇ ಪಾನಾರ್ಥಂ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) ಮಯೂರಶೇಪ್ಯಾ—ಮಯೂರದ (ನವಿಲಿನ) ಪುಚ್ಛಗಳಂತೆ ಪುಚ್ಛಗಳುಳ್ಳವೂ । ಶಿತಿಪೃಷ್ಠಾ—ಶ್ವೇತವರ್ಣದ ಪೃಷ್ಠವುಳ್ಳವೂ । ಹಿರಣ್ಯಯೇ—ಸುವರ್ಣಮಯವಾದ । ರಥೇ—ರಥಕ್ಕೆ ಯೋಜಿತವಾದವೂ ಆದ । ಹರೀ—ಅಶ್ವಗಳು । ತ್ವಾ—ನಿನ್ನನ್ನು । ವಿವಕ್ಷಣಸ್ಯ—ಪೂಜ್ಯವಾದುದೂ । ಮಧ್ವಃ—ಮಧುರವಾದುದೂ ಆದ । ಅಂಧಸಃ—ಸೋಮರಸದ । ಪೀತಯೇ—ಪಾನಾರ್ಥವಾಗಿ । ಆ ವಹತಾಂ—ಕರೆತರಲಿ.

। ಭಾವಾರ್ಥ ।

ಎಲೈ ಇಂದ್ರನೇ, ನವಿಲಿನ ಪುಚ್ಛದಂತೆ ಆಕರ್ಷಕವಾದ ಪುಚ್ಛವುಳ್ಳವೂ, ಶ್ವೇತವರ್ಣದ ಪೃಷ್ಠವುಳ್ಳವೂ, ಸುವರ್ಣಮಯವಾದ ರಥಕ್ಕೆ ಯೋಜಿತವಾದವೂ ಆದ ಅಶ್ವಗಳು ನಿನ್ನನ್ನು ಪೂಜ್ಯವಾದುದೂ, ಮಧುರವಾದುದೂ ಆದ ಸೋಮರಸದ ಪಾನಕ್ಕಾಗಿ ಕರೆತರಲಿ.

## English Translation

May your two peacock-tailed, white-backed horses, yoked to your golden chariot, bring you to drink of the sweet praiseworthy libation.

। ಸಂಹಿತಾಪಾಠಃ ।

ಪಿಬಾ ತ್ವಸ್ಯ ಗಿರ್ವಣಃ ಸುತಸ್ಯ ಪೂರ್ವಪಾ ಇವ ।
ಪರಿಷ್ಕೃತಸ್ಯ ರಸಿನ ಇಯಮಾಸುತಿಶ್ಚಾರುರ್ಮದಾಯ ಪತ್ಯತೇ ॥ ೨೬ ॥

॥ ಪದಪಾಠಃ ॥

ಪಿಬ । ತು । ಅಸ್ಯ । ಗಿರ್ವಣಃ । ಸುತಸ್ಯ । ಪೂರ್ವಪಾಃಽಇವ ।
ಪರಿಽಕೃತಸ್ಯ । ರಸಿನಃ । ಇಯಂ । ಆಽಸುತಿಃ । ಚಾರುಃ । ಮದಾಯ । ಪತ್ಯತೇ ॥ ೨೬ ॥

॥ ಸಾಯಣಭಾಷ್ಯಂ ॥

ಹೇ ಗಿರ್ವಣೋ ಗೀರ್ಭಿರ್ವನನೀಯ ಸ್ತುತಿಭಿಃ ಸಂಭಜನೀಯೇಂದ್ರ ಸುತಸ್ಯಾಭಿಷುತಸ್ಯಾಸ್ಯ ಸೋಮಸ್ಯ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ ॥ ಇಮಮಭಿಷುತಂ ಸೋಮಂ ತು ಕ್ಷಿಪ್ರಂ ಪಿಬ । ತತ್ರ ದೃಷ್ಟಾಂತಃ । ಪೂರ್ವಪಾ ಇವ । ಪೂರ್ವಪಾ ಇವ। ಪೂರ್ವಃ ಸರ್ವೇಭ್ಯೋ ದೇವೇಭ್ಯಃ ಪ್ರಥಮಂಭಾವೀ ಸನ್ ಪಿಬತೀತಿ ಪೂರ್ವಪಾ ವಾಯುಃ । ಸ ಇವೈಂದ್ರ-ವಾಯವೇ ಮುಖ್ಯೇ ಗ್ರಹೇ ಸರ್ವೇಭ್ಯೋ ದೇವೇಭ್ಯಃ ಪೂರ್ವಂ ಪಿಬೇತ್ಯರ್ಥಃ । ಕೀದೃಶಸ್ಯ ಸೋಮಸ್ಯ॥ ಪರಿಷ್ಕೃತಸ್ಯಾಭಿಷವಾದಿಭಿಃ ಸಂಸ್ಕೃತಸ್ಯ ॥ ಸಂಪರ್ಯುಭ್ಯಃ । ಪಾ. ೬-೧-೧೩೭ । ಇತಿ ಕರೋತೇರ್ಭೂಷಣೇ ಸುಟ್ । ಪರಿನಿವಿಭ್ಯಃ । ಪಾ. ೮.೩-೭೦ । ಇತಿ ಸುಟಃ ಷತ್ವಂ ॥ ರಸಿನೋ ರಸವತಃ। ಅಪಿ ಚಾಯಮಾಸುತಿರಯಮಾಸವೋ ಮದಕರಶ್ಚಾರುಃ ಶೋಭನಃ ಸೋಮರಸೋ ಮದಾಯ ಹರ್ಷಾಯ ಹರ್ಷಜನನಾಯ ಪತ್ಯತೇ । ಸಂಪದ್ಯತೇ ।' ಪತ್ಲೃ ಗತೌ ॥ ಯದ್ವಾ । ಪತ್ಯತಿರೈಶ್ವರ್ಯ-ಕರ್ಮಾ । ಮದಾಯ ಮದಸ್ಯ ಪತ್ಯತೇ । ಈಷ್ಟೇ । ಮದೋತ್ಪಾದನೇ ಶಕ್ತ ಇತರ್ಥಃ ॥

॥ ಪ್ರತಿಪದಾರ್ಥ ॥

ಗಿರ್ವಣಃ—ಸ್ತುತಿಗಳಿಂದ ಪ್ರಶಂಸಿತನಾದ ಎಲೈ ಇಂದ್ರನೇ । ಸುತಸ್ಯ—ಹಿಂಡಿ ಸಿದ್ಧವಾಗಿರುವುದೂ । ಪರಿಷ್ಕೃತಸ್ಯ—ಅಭಿಷವಾದಿ ಕರ್ಮಗಳಿಂದ ಸಂಸ್ಕೃತವಾದುದೂ । ರಸಿನಃ—ರಸಭರಿತವಾದುದೂ ಆದ । ಅಸ್ಯ—ಈ ಸೋಮವನ್ನು । ಪೂರ್ವಪಾ ಇವ—ಇತರ ದೇವತೆಗಳಿಗಿಂತಲೂ ಪೂರ್ವಭಾವಿಯಾಗಿ ಪಾನಮಾಡತಕ್ಕ ವಾಯುವಿನಂತೆ । ತು—ಕ್ಷಿಪ್ರವಾಗಿ । ಪಿಬ—ಪಾನಮಾಡು । ಆಸುತಿಃ—ಮದಕಾರಕವೂ । ಚಾರುಃ—ಆಕರ್ಷಕವೂ ಆದ । ಇಯಂ—ಈ ಸೋಮರಸವು । ಮದಾಯ—ಇಂದ್ರನ ತೃಪ್ತ್ಯರ್ಥವಾಗಿ । ಪತ್ಯತೇ—ಸಂಪಾದಿತವಾಗುತ್ತದೆ.

॥ ಭಾವಾರ್ಥ ॥

ಸ್ತುತಿಗಳಿಂದ ಪ್ರಶಂಸಿತನಾಗುವ ಎಲೈ ಇಂದ್ರನೇ, ಹಿಂದಿ ಸಿದ್ಧವಾಗಿರುವುದೂ, ಅಭಿಷವಾದಿಕರ್ಮಗಳಿಂದ ಸಂಸ್ಕೃತವಾದುದೂ, ರಸಭರಿತವಾದುದೂ ಆದ ಈ ಸೋಮವನ್ನು ಇತರ ದೇವತೆಗಳಿಗಿಂತಲೂ ಪೂರ್ವಭಾವಿಯಾಗಿ ಪಾನಮಾಡತಕ್ಕ ವಾಯುವಿನಂತೆ ಕ್ಷಿಪ್ರವಾಗಿ ಪಾನಮಾಡು. ಮದಕಾರಕವೂ ಆಕರ್ಷಕವೂ ಆದ ಈ ಸೋಮರಸವು ಇಂದ್ರನ ತೃಪ್ತ್ಯರ್ಥವಾಗಿ ಸಂಪಾದಿತವಾಗುತ್ತದೆ.

## English Translatian

Drink you, who are worthy to be glorified, of this consecrated and juicy libation, like the first drinker (Vayu): this excellent effusion issues for your exhilaration.

॥ ಸಂಹಿತಾಪಾಠಃ ॥

ಯ ಏಕೋ ಅಸ್ತಿ ದಂಸನಾ ಮಹಾಁ ಉಗ್ರೋ ಅಭಿ ವ್ರತೈಃ ।

ಗಮತ್ಸ ಶಿಪ್ರೀ ನ ಸ ಯೋಷದಾ ಗಮದ್ಧವಂ ನ ಪರಿ ವರ್ಜತಿ ॥ ೨೭ ॥

॥ ಪದಪಾಠಃ ॥

ಯಃ । ಏಕಃ । ಅಸ್ತಿ । ದಂಸನಾ । ಮಹಾನ್ । ಉಗ್ರಃ । ಅಭಿ । ವ್ರತೈಃ ।

ಗಮತ್ । ಸಃ । ಶಿಪ್ರೀ । ನ । ಸಃ । ಯೋಷತ್ । ಆ । ಗಮತ್ । ಹವಂ । ನ । ಪರಿ । ವರ್ಜತಿ ॥ ೨೭ ॥

॥ ಸಾಯಣಭಾಷ್ಯಂ ॥

ಯ ಇಂದ್ರ ಏಕಃ ಕೇವಲೋಽಸಹಾಯ ಏವ ವ್ರತೈರಾತ್ಮೀಯೈಃ ಕರ್ಮಭಿರಭ್ಯಸ್ತಿ ಶತ್ರೂನಭಿಭವತಿ । ಯಶ್ಚ ದಂಸನಾ ಕರ್ಮಣಾ ಮಹಾನಧಿಕಃ ಅತ ಏವೋಗ್ರ ಉದ್ಗೂರ್ಣಬಲಃ ಶಿಪ್ರೀ । ಶಿಪ್ರಂ ಶಿರಸ್ತ್ರಾಣಂ ॥ ಪ್ರಶಂಸಾಯಾಮಿನಿಃ ॥ ಶೋಭನಶಿರಸ್ತ್ರಾಣಃ । ಯದ್ವಾ । ಶಿಪ್ರೇ ಹನೂ ನಾಸಿಕೇ ವಾ । ತದ್ವಾನ್ । ಸ ಇಂದ್ರೋ ಗಮತ್ । ಗಚ್ಛತು । ಪ್ರಾಪ್ನೋತು ಸರ್ವದಾ । ಸ ತಾದೃಶೋ ನ ಯೋಷತ್ । ನ ಪೃಥಗ್ಭವತು । ನ ವಿಯುಕ್ತೋ ಭವತು ॥ ಗಮೇರ್ಯೌತೇಶ್ಚ ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಗಮೇರ್ಬಹುಲಂ ಛಂದಸೀತಿ ಶಪೋ ಲುಕ್ । ಯೌತೇಃ ಸಿಬ್ಬಹುಲಮಿತಿ ಸಿಪ್ ॥ ಹವಮಸ್ಮದೀಯಂ ಸ್ತೋತ್ರಂ ವಾ ಗಮತ್ । ಅಭಿಗಚ್ಛತು । ಪ್ರಾಪ್ನೋತು । ನ ಪರಿ ವರ್ಜತಿ । ನ ಪರಿವರ್ಜಯತು । ನ ಪರಿತ್ಯಜತು। ಸರ್ವದಾಸ್ಮದೀಯಂ ಸ್ತೋತ್ರಂ ಚೇಂದ್ರಃ ಪ್ರಾಪ್ನೋತ್ವಿತಿ ಯಾವತ್॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ಏಕಃ**—ಬೇರೆಯ ಸಹಾಯವಿಲ್ಲದೇ ತಾನೊಬ್ಬನೇ । **ವ್ರತೈಃ**- ತನ್ನ ಅಸಾಧಾರಣವಾದ ಕರ್ಮಗಳಿಂದ । **ಅಭ್ಯಸ್ತಿ**—ಶತ್ರುಗಳನ್ನು ಸೋಲಿಸುವನೋ । **ದಂಸನಾ**—ತನ್ನ ಕರ್ಮಗಳಿಂದಲೇ। **ಮಹಾನ್**—ಅತ್ಯಧಿಕನೂ । **ಉಗ್ರಃ**—ಭಯಂಕರನೂ । **ಶಿಪ್ರೀ**—ಪ್ರಶಸ್ತವಾದ ನಾಸಿಕವುಳ್ಳವನೂ ಆಗಿರುವನೋ। **ಸಃ**—ಅಂತಹ ಇಂದ್ರನು । **ನ ಯೋಷತ್**—ನಮ್ಮಿಂದ ಬೇರೆಯಾಗದಿರಲಿ । **ಹವಂ** - ನಮ್ಮ ಸ್ತುತಿಯನ್ನು । **ಆ ಗಮತ್**—ಸಮೀಪಿಸಿ ಬರಲಿ । **ನ ಪರಿ ವರ್ಜತಿ**—ನಮ್ಮನ್ನು ತ್ಯಜಿಸದಿರಲಿ.

॥ ಭಾವಾರ್ಥ ॥

ಯಾವ ಇಂದ್ರನು ಬೇರೆಯವರ ಸಹಾಯವಿಲ್ಲದೇ ತನ್ನ ಅಸಾಧಾರಣವಾದ ಕರ್ಮದ ಫಲವಾಗಿ ತಾನೊಬ್ಬನೇ ಶತ್ರುಗಳನ್ನು ಸೋಲಿಸುವನೋ, ಮತ್ತು ತನ್ನ ಕರ್ಮಗಳ ಮಾಹಾತ್ಮ್ಯದಿಂದಲೇ ಅತ್ಯಧಿಕನೂ, ಭಯಂಕರನೂ ಆಗಿರುವನೋ, ಯಾವನು ಆಕರ್ಷಕವಾದ ನಾಸಿಕವುಳ್ಳವನೋ ಅಂತಹ ಇಂದ್ರನು ನಮ್ಮಲ್ಲಿಗೆ ಬರಲಿ. ಅವನು ನಮ್ಮಿಂದ ಬೇರೆಯಾಗದಿರಲಿ. ನಮ್ಮ ಸ್ತುತಿಯಿಂದ ಆಕರ್ಷಿತನಾಗಿ ನಮ್ಮನ್ನು ತ್ಯಜಿಸದಿರಲಿ.

## English Translation

May he who alone overcomes (enemies) through (the power of)

religious observances, who by pious acts is rendered mighty and fierce, who is handsome-chinned, approach : may he never be remote ; may he come to our invocation ; may he never abandon us.

॥ ಸಂಹಿತಾಪಾಠಃ ॥

ತ್ವಂ ಪುರಂ ಚರಿಷ್ಣ್ವಂ ವಧೈಃ ಶುಷ್ಣಸ್ಯ ಸಂ ಪಿಣಕ್ ।

ತ್ವಂ ಭಾ ಅನು ಚರೋ ಅಧ ದ್ವಿತಾ ಯದಿಂದ್ರ ಹವ್ಯೋ ಭುವಃ ॥ ೨೮ ॥

॥ ಪದಪಾಠಃ ॥

ತ್ವಂ । ಪುರಂ । ಚರಿಷ್ಣ್ವಂ । ವಧೈಃ । ಶುಷ್ಣಸ್ಯ । ಸಂ । ಪಿಣಕ್ ।

ತ್ವಂ । ಭಾಃ । ಅನು । ಚರಃ । ಅಧ । ದ್ವಿತಾ । ಯತ್ । ಇಂದ್ರ । ಹವ್ಯಃ । ಭುವಃ ॥ ೨೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಶುಷ್ಣಸ್ಯ ಶೋಷಕಸ್ಯಾಸುರಸ್ಯ ಚರಿಷ್ಣ್ವಂ ಚರಣಶೀಲಂ ॥ ವಾ ಛಂದಸೀತ್ಯಮಿ ಪೂರ್ವತ್ವಸ್ಯ ವಿಕಲ್ಪಿತತ್ವಾದ್ಯಣಾದೇಶಃ ॥ ಪುರಂ ನಿವಾಸಸ್ಥಾನಂ ವಧೈರ್ವಜ್ರಾದಿಭಿರಾಯುಧೈಃ ಸಂ ಪಿಣಕ್ । ಸಮಚೂರ್ಣಯಃ । ಅಭಾಂಕ್ಷೀರಿತ್ಯರ್ಥಃ ॥ ಪಿನಷ್ಟೇರ್ಲಙಿ ಮಧ್ಯಮೈಕವಚನೇ ರೂಪಮೇತತ್ ॥ ಅಧಾಪಿ ಚ ಭಾ ಭಾಸಮಾನಸ್ತ್ವಮನು ಚರಃ । ತಂ ಶುಷ್ಣಂ ಹಂತುಮನ್ವಗಚ್ಛಃ । ಯದ್ವಾ । ಅಧ ಶುಷ್ಣಸ್ಯ ಪುರಭೇದನಾನಂತರಂ ಭಾ ದೀಪ್ತೀಸ್ತ್ವಮನು ಚರಃ । ಅನ್ವಗಚ್ಛಃ । ಪ್ರಾಪ್ತವಾನಿತ್ಯರ್ಥಃ । ಹೇ ಇಂದ್ರ ತ್ವಂ ಯದ್ಯದಾ ದ್ವಿತಾ ದ್ವಿಧಾ ದ್ವಿವಿಧೈಃ ಸ್ತೋತೃಭಿರ್ಯಷ್ಟೃಭಿಶ್ಚ ಹವ್ಯೋ ಹ್ವಾತವ್ಯೋ ಭುವಃ ಭವೇಃ । ತದಾನೀಂ ತ್ವಂ ಶುಷ್ಣಸ್ಯ ಪುರಂ ಸಂ ಪಿಣಗಿತ್ಯನ್ವಯಃ ॥ ಭವತೇರ್ಲೇಟಿ ಸಿಪ್ಯಡಾಗಮಃ ।ಛಾಂದಸಃ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಾದುವಙ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತ್ವಂ—ನೀನೇ । ಶುಷ್ಣಸ್ಯ—ಶೋಷಕನಾದ ಅಸುರನ । ಚರಿಷ್ಣ್ವಂ—ಸಂಚಾರಶೀಲವಾದ । ಪುರಂ—ನಿವಾಸಸ್ಥಾನವನ್ನು । ವಧೈಃ—ನಿನ್ನ ಆಯುಧಗಳಿಂದ । ಸಂ ಪಿಣಕ್—ಪೂರ್ಣವಾಗ್ನಿ ನಾಶಮಾಡಿದೆ । ಅಧ—ಅಲ್ಲದೇ । ಭಾಃ—ಕಾಂತಿಯುತನಾದ । ತ್ವಂ—ನೀನು । ಅನು ಚರಃ—(ಅವನನು ಕೊಲ್ಲಲು) ಅವನನ್ನೇ ಹಿಂಬಾಲಿಸಿದೆ । ಇಂದ್ರ—ಎಲೈ ಇಂದ್ರನೇ । ಯತ್—ಯಾವ ಆದೇ ಕಾರಣದಿಂದಲೇ (ತ್ವಂ—ನೀನು) । ದ್ವಿತಾ—ಎರಡು ವಿಧವಾಗಿ । ಹವ್ಯಃ—ಪೂಜಾರ್ಹನಾಗಿ । ಭುವಃ—ಆಗಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಶೋಷಕನಾದ ಶುಷ್ಣಾಸುರನ ಸಂಚಾರಶೀಲವಾದ ನಿವಾಸಸ್ಥಾನವನ್ನು ನೀನೇ ನಿನ್ನ ಆಯುಧ

ಗಳಿಂದ ಪೂರ್ಣವಾಗಿ ನಾಶಮಾಡಿದೆ. ಅಲ್ಲದೇ, ಕಾಂತಿಯುತನಾದ ನೀನು ಅವನನ್ನು ಕೊಲ್ಲಲು ಅವನನ್ನೇ ಹಿಂಬಾಲಿಸಿದೆ. ಎಲೈ ಇಂದ್ರನೇ, ಯಾವ ಅದೇ ಕಾರಣದಿಂದಲೇ ನೀನು ಎರಡು ವಿಧವಾದ ಪೂಜೆಗೆ ಅರ್ಹನಾಗಿರುವೆ.

## English Translation

You have broken to pieces the moveable city of Sushna with your weapons; you who are light have followed him; wherefore, Indra, you are in two ways to be worshipped.

॥ ಸಂಹಿತಾಪಾಠಃ ॥

ಮಮ ತ್ವಾ ಸೂರ ಉದಿತೇ ಮಮ ಮಧ್ಯಂದಿನೇ ದಿವಃ ।
ಮಮ ಪ್ರಪಿತ್ವೇ ಅಪಿಶರ್ವರೇ ವಸವಾ ಸ್ತೋಮಾಸೋ ಅವೃತ್ಸತ ॥ ೨೯ ॥

॥ ಪದಪಾಠಃ ॥

ಮಮ । ತ್ವಾ । ಸೂರೇ । ಉತ್ಽಇತೇ । ಮಮ । ಮಧ್ಯಂದಿನೇ । ದಿವಃ ।
ಮಮ । ಪ್ರಽಪಿತ್ವೇ । ಅಪಿಽಶರ್ವರೇ । ವಸೋ ಇತಿ । ಆ । ಸ್ತೋಮಾಸಃ । ಅವೃತ್ಸತ ॥ ೨೯ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಬ್ರಹ್ಮಶಸ್ತ್ರೇ ಮಮ ತ್ವೇತಿ ವೈಕಲ್ಪಿಕೋಽನುರೂಪಸ್ತೃಚಃ । ಸೂತ್ರಂ ತು ಪೂರ್ವಮುದಾಹೃತಂ ॥

ಸೂರೇ ಸೂರ್ಯೇ ಉದಿತ ಉದಯಂ ಪ್ರಾಪ್ತೇ ಪೂರ್ವಾಹ್ಣಸಮಯೇ ಮಮ ಸ್ತೋಮಾಸಃ ಸ್ತೋತ್ರಾಣಿ ಹೇ ವಸೋ ವಾಸಕೇಂದ್ರ ತ್ವಾಮಾವೃತ್ಸತ । ಆವರ್ತಯಂತು । ಅಸ್ಮದಭಿಮುಖಂ ಗಮಯಂತು । ತಥಾ ದಿವೋ ದಿವಸಸ್ಯ ಮಧ್ಯಂದಿನೇ ಮಧ್ಯಾಹ್ನೇಽಪಿ ಮದೀಯಾಃ ಸ್ತೋಮಾಸ್ತ್ವಾಮಾವರ್ತಯಂತು । ತಥಾ ಪ್ರಪಿತ್ವೇ ಪ್ರಾಪ್ತೇ ದಿವಸಸ್ಯಾವಸಾನೇ ಸಾಯಾಹ್ನೇಽಪಿ ಮದೀಯಾಃ ಸ್ತೋಮಾಸ್ತ್ವಾಮಾವರ್ತಯಂತು । ಅಪಿಶರ್ವರೇ । ಶರ್ವರೀಂ ರಾತ್ರಿಮಪಿಗತಃ ಕಾಲೋಽಪಿಶರ್ವರಃ । ಶಾರ್ವರೇ ಕಾಲೇಽಪಿ ಮದೀಯಾಃ ಸ್ತೋಮಾಸ್ತ್ವಾಮಾವರ್ತಯಂತು ॥

॥ ಪ್ರತಿಪದಾರ್ಥ ॥

ವಸೋ—ವಸತಿದಾಯಕನಾದ ಎಲೈ ಇಂದ್ರನೇ । ಸೂರೇ—ಸೂರ್ಯನು । ಉದಿತೇ—ಉದಯವಾದಾಗ ಎಂದರೆ ಪ್ರಾತಃಕಾಲದಲ್ಲಿ । ಮಮ—ನನ್ನ । ಸ್ತೋಮಾಸಃ—ಸ್ತೋತ್ರಗಳು । ತ್ವಾ—ನಿನ್ನನ್ನು । ಆ ಅವೃತ್ಸತ-

ನಮ್ಮ ಕಡೆಗೆ ತಿರುಗಿಸಲಿ । ದಿವಃ—ದಿವಸದ । ಮಾಧ್ಯಂದಿನೇ—ಮಧ್ಯಾಹ್ನಕಾಲವು । ಪ್ರಪಿತ್ವೇ—ಪ್ರಾಪ್ತವಾದಾಗ । ಮಮ—ನನ್ನ ಸ್ತುತಿಯು ನಿನ್ನನ್ನು ನಮ್ಮ ಕಡೆಗೆ ತಿರುಗಿಸಲಿ । ಅಪಿಶರ್ವರೇ—ಸಂಧ್ಯಾಕಾಲವು ಸಮಾಪಿಸಿದಾಗ । ಮಮ—ನನ್ನ ಸ್ತುತಿಯು ನಿನ್ನನ್ನು ನಮ್ಮ ಕಡೆಗೆ ತಿರುಗಿಸಲಿ.

॥ ಭಾವಾರ್ಥ ॥

ವಸತಿದಾಯಕನಾದ ಎಲೈ ಇಂದ್ರನೇ, ಸೂರ್ಯನ ಉದಯವಾದಾಗಲೂ, ಮಧ್ಯಾಹ್ನಕಾಲದಲ್ಲೂ ಸಾಯಂಕಾಲದಲ್ಲೂ ನನ್ನ ಸ್ತುತಿಗಳು ನಿನ್ನನ್ನು ನಮ್ಮ ಕಡೆಗೆ ತಿರುಗಿಸಲಿ. ಎಂದರೆ ಪ್ರಾತಃಸವನ, ಮಾಧ್ಯಂದಿನಸವನ ಮತ್ತು ತೃತೀಯಸವನ ಎಂಬ ಈ ಮೂರು ಕಾಲಗಳಲ್ಲೂ ನಮ್ಮ ಸ್ತುತಿಗಳು ನಿನ್ನನ್ನು ನಮ್ಮ ಕಡೆಗೆ ಆಕರ್ಷಿಸಲಿ.

## English Translation

May my prayers when the sun has risen, those also at noon, those also when evening arrives, bring you back, giver of riches (to my sacrifice).

॥ ವಿಶೇಷವಿಷಯಗಳು ॥

ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನ ಸವನಕಾಲದಲ್ಲಿ ಮಮ ತ್ವಾ ಎಂದು ಮೊದಲಾಗುವ ಈ ಸೂಕ್ತದ ೨೯-೩೧ ನೆಯ ಋಕ್ಕುಗಳನ್ನು ವೈಕಲ್ಪಿಕಾನುರೂಪತೃಚವನ್ನಾಗಿ ಪಠಿಸಬೇಕೆಂಬ ವಿಷಯದಲ್ಲಿ ಸೂತ್ರವಾಕ್ಯವನ್ನು ಹಿಂದೆಯೇ ಹೇಳಲಾಗಿದೆ.

॥ ಸಂಹಿತಾಪಾಠಃ ॥

ಸ್ತುಹಿ ಸ್ತುಹೀದೇತೇ ಘಾ ತೇ ಮಂಹಿಷ್ಠಾಸೋ ಮಘೋನಾಂ ।
ನಿಂದಿತಾಶ್ವಃ ಪ್ರಪಥೀ ಪರಮಜ್ಯಾ ಮಘಸ್ಯ ಮೇಧ್ಯಾತಿಥೇ ॥ ೩೦ ॥

॥ ಪದಪಾಠಃ ॥

ಸ್ತುಹಿ । ಸ್ತುಹಿ । ಇತ್ । ಏತೇ । ಘ । ತೇ । ಮಂಹಿಷ್ಠಾಸಃ । ಮಘೋನಾಂ ।
ನಿಂದಿತಽಅಶ್ವಃ । ಪ್ರಽಪಥೀ । ಪರಮಽಜ್ಯಾಃ । ಮಘಸ್ಯ । ಮೇಧ್ಯಽಅತಿಥೇ ॥ ೩೦ ॥

॥ ಸಾಯಣಭಾಷ್ಯಂ ॥

ಆಸಂಗೋ ರಾಜರ್ಷಿರ್ಮೇಧ್ಯಾತಿಥಯೇ ಬಹು ಧನಂ ದತ್ವಾ ತಮೃಷಿಂ ದತ್ತದಾನಸ್ಯ ಸ್ವಸ್ಯ ಸ್ತುತೌ ಪ್ರೇರಯತಿ । ಹೇ ಮೇಧ್ಯಾತಿಥೇ ಯಜ್ಞಾರ್ಹಾತಿಥ ಏತತ್ಸಂಜ್ಞರ್ಷೇ ಸ್ತುಹಿ ಸ್ತುಹೀತ್ । ಪುನಃಪುನರಸ್ಮಾನ್ ಪ್ರಶಂಸೈವ । ಮೋದಾಸ್ತ । ಔದಾಸೀನ್ಯಂ ಮಾ ಕಾರ್ಷೀಃ । ಏತೇ ಘೃತೇ ಖಲು ವಯಂ ಮಘೋನಾಂ ಧನವತಾಂ ಮಧ್ಯೇ ತೇ ತುಭ್ಯಂ ಮಘಸ್ಯ ಧನಸ್ಯ ಮಂಹಿಷ್ಠಾಸೋ ದಾತೃತಮಾಃ ।

ಅತೋಽಸ್ಮಾನ್ ಸ್ತುಹೀತ್ಯರ್ಥಃ । ಆಸೌ ಸ್ತುತಿಃ ತಾವದಾಹ । ನಿಂದಿತಾಶ್ವಃ । ಯಸ್ಯ ವೀರ್ಯೇಣ ಪರೇಷಾಮಶ್ವಾ ನಿಂದಿತಾಃ ಕುತ್ಸಿತಾ ಭವಂತಿ ತಾದೃಶಃ । ಪ್ರಪಥೀ । ಪ್ರಕೃಷ್ಟಃ ಪಂಥಾಃ ಪ್ರಪಥಃ । ತದ್ವಾನ್ । ಸನ್ಮಾರ್ಗವರ್ತೀತ್ಯರ್ಥಃ । ಪರಮಜ್ಯಾ ಉತ್ಕೃಷ್ಟಜ್ಯಃ । ಅನೇನ ಧನುರಾದಿಕಂ ಲಕ್ಷ್ಯತೇ । ಉತ್ಕೃಷ್ಟಾಯುಧ ಇತ್ಯರ್ಥಃ । ಯದ್ವಾ । ಪರಮಾನುತ್ಕೃಷ್ಟಾಞ್ಛತ್ರೂಞ್ಜ್ಯಾನಾತಿ ಹಿನಸ್ತೀತಿ ಪರಮಜ್ಯಾಃ ॥ ಜ್ಯಾ ವಯೋಹಾನೌ । ಅಸ್ಮಾದಾತೋ ಮನಿನ್ನಿತಿ ವಿಚ್ ॥ ಏವಂಭೂತೋಽಹಮಾಸಂಗ ಇತಿ ಸ್ತುಹೀ-ತ್ಯರ್ಥಃ ॥

॥ ಪ್ರತಿಪದಾರ್ಥ ॥

**ಮೇಧ್ಯಾತಿಥೇ**—ಎಲೈ ಮೇಧ್ಯಾತಿಥಿಯೇ । **ಸ್ತುಹಿ**—ನಮ್ಮನ್ನೇ ಸ್ತುತಿಸು । **ಸ್ತುಹೀತ್**—ಅತ್ಯಧಿಕವಾಗಿ ನಮ್ಮನ್ನೇ ಪ್ರಶಂಸಿಸು । **ಏತೇ ಘ**—ನಾನಾದಲೋ । **ಮಘೋನಾಂ**—ಸಂಪದ್ಯುಕ್ತರ ನಡುವೆ । **ತೇ**—ನಿನಗೆ **ಮಘಸ್ಯ**—ಧನದ । **ಮಂಹಿಷ್ಠಾಸಃ**—ಅತ್ಯುದಾರವಾದ ದಾತೃಗಳಾಗಿದ್ದೇವೆ । **ನಿಂದಿತಾಶ್ವಃ**—ಇತರರ ಅಶ್ವಗಳನ್ನು ಅವಹೇಳನಮಾಡುವ ಅಶ್ವಗಳುಳ್ಳವರಾಗಿಯೂ । **ಪ್ರಪಥೀ**—ಅತ್ಯುತ್ತಮವಾದ ಮಾರ್ಗದಲ್ಲಿ ನಡೆಯುವವರಾಗಿಯೂ । **ಪರಮಜ್ಯಾಃ**—ಅತ್ಯುತ್ಕೃಷ್ಟವಾದ ಹೆದೆಯುಳ್ಳ ಧನುಸ್ಸುಳ್ಳವರಾಗಿಯೂ ಆಗಿದ್ದೇವೆ.

॥ ಭಾವಾರ್ಥ ॥

ಎಲೈ ಮೇಧ್ಯಾತಿಥಿಯೇ, ಸಂಪದ್ಯುಕ್ತರಾದ ಪುರುಷರಲ್ಲೆಲ್ಲಾ ನಿನಗೆ ಅತ್ಯುದಾರವಾಗಿ ಧನದಾನವನ್ನು ಮಾಡತಕ್ಕವರು ನಾವೇ ಆಗಿದ್ದೇವೆ. ಆದುದರಿಂದ ನಮ್ಮನ್ನಲ್ಲದೇ ಇತರರನ್ನು ಪ್ರಶಂಸಿಸಲವಕಾಶವಿಲ್ಲ ನಮ್ಮನ್ನೇ ಅತ್ಯತಿಶಯವಾಗಿ ಪ್ರಶಂಸಿಸು. ಅತ್ಯುತ್ತಮವಾದ ಅಶ್ವಗಳನ್ನು ಹೊಂದಿ ಇತರರ ಅಶ್ವಗಳನ್ನು ಅವಹೇಳನ ಮಾಡುವ ಸ್ಥಿತಿಯುಳ್ಳವರಾಗಿಯೂ, ಅತ್ಯುತ್ತಮವಾದ ಮಾರ್ಗಾವಲಂಬಿಗಳಾಗಿಯೂ, ಉತ್ಕೃಷ್ಟವಾದ ಹೆದೆಯುಳ್ಳ ಧನುಸ್ಸುಳ್ಳವರಾಗಿಯೂ ಇದ್ದೇವೆ.

English Translation

Praise (me), praise (me), Medhyatithi, for amongst the wealthy we are the most liberal donors of wealth to you: (praise me as one) who outstrips a horse in speed, follows the right path, and bears the best arms.

॥ ಸಂಹಿತಾಪಾಠಃ ॥

ಆ ಯದಶ್ವಾನ್ವನನ್ವತಃ ಶ್ರದ್ಧಯಾಹಂ ರಥೇ ರುಹಂ ।
ಉತ ವಾಮಸ್ಯ ವಸುನಶ್ಚಿಕೇತತಿ ಯೋ ಅಸ್ತಿ ಯಾದ್ವಃ ಪಶುಃ ॥ ೩೧ ॥

॥ ಪದಪಾಠಃ ॥

ಆ । ಯತ್ । ಅಶ್ವಾನ್ । ವನನ್ಽವತಃ । ಶ್ರದ್ಧಯಾ । ಅಹಂ । ರಥೇ । ರುಹಂ ।

ಉತ । ವಾಮಸ್ಯ । ವಸುನಃ । ಚಿಕೇತತಿ । ಯಃ । ಅಸ್ತಿ । ಯಾದ್ವಃ । ಪಶುಃ ॥ ೩೧ ॥

। ಸಾಯಣಭಾಷ್ಯಂ ।

ವನನ್ವತೋ ವನನವತಃ ಸಂಭಕ್ತವತೋಽಶ್ವಾಂಸ್ತುರಗಾನಹಂ ಪ್ಲಾಯೋಗಿಃ ಶ್ರದ್ಧಯಾದರಾತಿಶಯೇನ ಯುಕ್ತಃ ಸನ್ ಯದ್ಯದಾ ಹೇ ಮೇಧ್ಯಾತಿಥೇ ತ್ವದೀಯೇ ರಥ ಆ ರುಹಂ ಆರೋಹಯಂ॥ ರುಹೇರಂತರ್ಭಾವಿತಣ್ಯರ್ಥಾಲ್ಲುಙಿ ಕೃಮೃದೃರುಹಿಭ್ಯ ಇತಿ ಚ್ಲೇರಙಾದೇಶಃ ॥ ತದಾನೀಂ ಮಾಮೇವಂ ಸ್ತುಹಿ । ಉತಾಪಿ ಚ । ಪ್ರಕೃತಸ್ತುತ್ಯಪೇಕ್ಷ ಏಷ ಸಮುಚ್ಚಯಃ । ವಾಮಸ್ಯ ವನನೀಯಸ್ಯ ವಸುನೋ ಧನಸ್ಯ ॥ ಪೂರ್ವವತ್ಕರ್ಮಣಿ ಷಷ್ಠೀ ॥ ಈದೃಶಂ ಧನಂ ಚಿಕೇತತಿ । ಏಷ ಆಸಂಗೋ ದಾತುಂ ಜಾನಾತಿ । ಯಾದ್ವೋ ಯದುವಂಶೋದ್ಭವಃ । ಯದ್ವಾ । ಯದವೋ ಮನುಷ್ಯಾಃ । ತೇಷು ಪ್ರಸಿದ್ಧಃ । ಪಶುಃ ॥ ಉಪ್ತಮುತ್ವರ್ಥಮೇತತ್ ॥ ಪಶುಮಾನ್ । ಯದ್ವಾ। ಪಶುಃ ಪಶ್ಯತೇಃ । ಸೂಕ್ಷ್ಮಸ್ಯ ದ್ರಷ್ಟಾ । ಯ ಆಸಂಗೋಽಸ್ತಿ ವಿದ್ಯತೇ ಏಷ ಚಿಕೇತತೀತ್ಯನ್ವಯಃ ॥

। ಪ್ರತಿಪದಾರ್ಥ ।

(ಎಲೈ ಮೇಧ್ಯಾತಿಥಿಯೇ) ವನನ್ವತಃ—ಸೇವಾಯೋಗ್ಯವಾದ। ಅಶ್ವಾನ್—ಅಶ್ವಗಳನ್ನು। ಅಹಂ—ನಾನು। ಶ್ರದ್ಧಯಾ—ಆದರದಿಂದ । ಯತ್—ಯಾವಾಗ । ರಥೇ—ನಿನ್ನ ರಥಕ್ಕೆ । ಆ ರುಹಂ—ಯೋಜಿಸುವೆನೋ (ಆಗ ನನ್ನನ್ನು ಸ್ತುತಿಸು) । ಉತ—ಮತ್ತು । ಯಃ—ಯಾರು । ಯಾದ್ವಃ—ಯದುವಂಶದಲ್ಲಿ ಪ್ರಸಿದ್ಧನೂ । ಪಶುಃ ಅಸ್ತಿ—ಪಶುವಂತನೂ ಆಗಿರುವನೋ ಅಂತಹ ಆಸಂಗನು । ವಾಮಸ್ಯ—ಆಕರ್ಷಕವಾದ । ವಸುನಃ—ಧನವನ್ನು ದಾನಮಾಡಬೇಕೆಂದು । ಚಿಕೇತತಿ—ತಿಳಿಯುತ್ತಾನೆ.

॥ ಭಾವಾರ್ಥ ॥

ಎಲೈ ಮೇಧ್ಯಾತಿಥಿಯೇ, ಸೇವಾಯೋಗ್ಯವಾದ ಅಶ್ವಗಳನ್ನು ನಾನು ಆದರದಿಂದ ನಿನ್ನ ರಥಕ್ಕೆ ಯೋಜಿಸಿದೊಡನೆಯೇ ನನ್ನನ್ನು ಸ್ತುತಿಸು. ಮತ್ತು ಯದುವಂಶೋದ್ಭವರಲ್ಲೆಲ್ಲಾ ಪ್ರಸಿದ್ಧನೂ, ಪಶುವಂತನೂ ಆಗಿರುವ ಆಸಂಗನು ಆಕರ್ಷಕವಾದ ಧನದ ದಾನವನ್ನು ನಿನ್ನಂತಹ ಸ್ತುತಿಕರ್ತರಿಗೆ ಮಾಡಬೇಕೆಂದು ತಿಳಿದಿದ್ದಾನೆ.

## English Translation

When with faith I harness the docile horses in the car, (praise me), for the descendant of Yadu, possessed of cattle, know how to distribute desirable riches.

। ಸಂಹಿತಾಪಾಠಃ ॥

ಯ ಋಜ್ರಾ ಮಹ್ಯಂ ಮಾಮಹೇ ಸಹ ತ್ವಚಾ ಹಿರಣ್ಯಯಾ ।

ಏಷ ವಿಶ್ವಾನ್ಯಭ್ಯಸ್ತು ಸೌಭಗಾಸಂಗಸ್ಯ ಸ್ವನದ್ರಥಃ ॥ ೩೨ ॥

। ಪದಪಾಠಃ ।

ಯಃ । ಮೇ । ಹಿರಣ್ಯಸಂದೃಶಃ ...

ಯಃ । ಯುಕ್ತ್ರಾ । ಮಹ್ಯಂ । ಮಮಹೇ । ಸಹ । ತ್ವಚಾ । ಹಿರಣ್ಯಯಾ ।

ಏಷಃ । ವಿಶ್ವಾನಿ । ಅಭಿ । ಅಸ್ತು । ಸೌಭಗಾ । ಆಸಂಗಸ್ಯ । ಸ್ವನತ್ಽರಥಃ ॥ ೩೨ ॥

। ಸಾಯಣಭಾಷ್ಯಂ ।

ಏವಮೇವಂ ಮಾಂ ಸ್ತುಹೀತ್ಯಾಸಂಗೋ ಮೇಧ್ಯಾತಿಥಿಂ ಬ್ರೂತೇ । ಯ ಆಸಂಗಸ್ತ್ವಾತ್ಮಾ ಯುಕ್ತ್ರಾ ಗಮನಶೀಲಾನಿ ಧನಾನಿ ಹಿರಣ್ಯಯಾ ಹಿರಣ್ಮಯ್ಯಾ ತ್ವಚಾ ಚರ್ಮಣಾಸ್ತರಣೇನ ಸಹ ಸಹಿತಾನಿ ಮಹ್ಯಂ ಮೇಧ್ಯಾತಿಥಯೇ ಮಮಹೇ ದದೌ । ಮಂಹತಿರ್ದಾನಕರ್ಮಾ । ಏಷ ಆಸಂಗಸ್ತ್ವಾತ್ಮಾ ಸ್ವನದ್ರಥಃ ಶಬ್ದಾಯಮಾನರಥಃ ಸನ್ ವಿಶ್ವಾನಿ ವ್ಯಾಪ್ತಾನಿ ಸೌಭಗಾನಿ ಧನಾನಿ ಶತ್ರೂಣಾಂ ಸ್ವಭೂತಾನ್ಯಭ್ಯಸ್ತು । ಅಭಿಭವತು ॥

॥ ಪ್ರತಿಪದಾರ್ಥ ॥

ಯಃ—ಯಾವ ಆಸಂಗನು । ಯುಕ್ತ್ರಾ—ಚರಾತ್ಮಕವಾದ ಸಂಪತ್ತನ್ನು (ಸುವರ್ಣಾದಿ ನಾಣ್ಯಗಳನ್ನು) । ಹಿರಣ್ಯಯಾ—ಸುವರ್ಣಮಯವಾದ (ಕಟ್ಟುಳ್ಳ) । ತ್ವಚಾ ಸಹ—ಚರ್ಮಚೀಲದಲ್ಲಿಟ್ಟು । ಮಹ್ಯಂ—ನನಗೆ । ಮಮಹೇ—ಕೊಡುವನೋ । ಆಸಂಗಸ್ಯ ಏಷಃ—ಅಂತಹ ಈ ಆಸಂಗನು । ಸ್ವನದ್ರಥಃ—ಶಬ್ದಮಾಡತಕ್ಕ ರಥವುಳ್ಳವನಾಗಿ । ವಿಶ್ವಾನಿ ಸೌಭಗಾ—ಶತ್ರುಗಳ ಸಮಸ್ತ ಸಂಪತ್ತುಗಳನ್ನೂ । ಅಭ್ಯಸ್ತು—ಜಯಿಸಿ ತನ್ನ ವಶಮಾಡಿಕೊಳ್ಳಲಿ (ಎಂದು ಪ್ರಶಂಸಿಸು).

॥ ಭಾವಾರ್ಥ ॥

"ಯಾವ ಆಸಂಗನು ಚರಾತ್ಮಕವಾದ ಸುವರ್ಣಾದಿ ನಾಣ್ಯಗಳನ್ನೆಲ್ಲಾ ಸುವರ್ಣಮಯವಾದ ಕಟ್ಟುಳ ಚರ್ಮಚೀಲದಲ್ಲಿಟ್ಟು ನನಗೆ ಕೊಡುವನೋ ಅಂತಹ ಈ ಆಸಂಗನು ಶಬ್ದಮಾಡತಕ್ಕ ರಥವುಳ್ಳವನಾಗಿ ಶತ್ರುಗಳ ಸಮಸ್ತ ಸಂಪತ್ತುಗಳನ್ನೂ ಜಯಿಸಿ ತನ್ನ ವಶಮಾಡಿಕೊಳ್ಳಲಿ" ಎಂದು ಪ್ರಶಂಸಿಸು.

## English Translation

(Praise me, saying,) "He who has presented riches to me with a golden purse: may this rattling chariot of Asanga carry off all the treasures (of the enemy)."

। ಸಂಹಿತಾಪಾಠಃ ।

ಅಧ ಪ್ಲಾಯೋಗಿರತಿ ದಾಸದನ್ಯಾನಾಸಂಗೋ ಅಗ್ನೇ ದಶಭಿಃ ಸಹಸ್ರೈಃ ।

ಅಧೋಕ್ಷ್ಣೋ ದಶ ಮಹ್ಯಂ ರುಶಂತೋ ನಳಾ ಇವ ಸರಸೋ ನಿರತಿಷ್ಠನ್॥

। ಪದಪಾಠಃ ।

ಅಥ । ಪ್ಲಾಯೋಗಿಃ । ಅತಿ । ದಾಸತ್ । ಅನ್ಯಾನ್ । ಆಽಸಂಗಃ । ಅಗ್ನೇ । ದಶಽಭಿಃ । ಸಹಸ್ರೈಃ ।

ಅಥ । ಉಕ್ಷಣಃ । ದಶ । ಮಹ್ಯಂ । ರುಶಂತಃ । ನಳಾಃಽಇವ । ಸರಸಃ । ನಿಃ । ಅತಿಷ್ಠನ್ ॥ ೩೩ ॥

। ಸಾಯಣಭಾಷ್ಯಂ ।

ಅಥಾಪಿ ಚ ಪ್ಲಾಯೋಗಿಃ ಪ್ರಯೋಗನಾಮ್ನಃ ಪುತ್ರ ಆಸಂಗೋ ನಾಮ ರಾಜಾ ದಶಭಿರ್ದಶ-ಗುಣಿತೈಃ ಸಹಸ್ರೈಃ ಸಹಸ್ರಸಂಖ್ಯಾಕೈರ್ಗವಾದಿಭಿರನ್ಯಾನ್ದಾತ್ರ್ಯಾನತಿ ದಾಸತ್ । ಅತಿಕ್ರಮ್ಯ ದದಾತಿ । ಅಥಾನಂತರಮುಕ್ಷಣಃ ಸೇಚನಸಮರ್ಥಾ ಮಹ್ಯಮಾಸಂಗೇನ ದತ್ತಾ ರುಶಂತೋ ದೀಪ್ಯಮಾನಾ ದಶ ದಶಗುಣಿತಸಹಸ್ರಸಂಖ್ಯಾಕಾಸ್ತೇ ಗವಾದಯೋ ನಳಾ ಇವ । ನಳಾಸ್ತಟಾಕೋದ್ಭವಾಸ್ತೃಣವಿಶೇಷಾಃ । ತೇ ಯಥಾ ಸರಸಸ್ತಟಾಕಾತ್ಸಂಘಶೋ ನಿರ್ಗಚ್ಛಂತಿ ತದ್ವೈವ ಮಹ್ಯಂ ದತ್ತಾ ಗವಾದಯೋಽಸ್ಮಾದಾ-ಸಂಗಾನ್ನಿರತಿಷ್ಠನ್ । ನಿರ್ಗತ್ಯಾವಾತಿಷ್ಠತ । ಏವಮೇವಂಪ್ರಕಾರೇಣ ಮಾಂ ಸ್ತುಹೀತಿ ಮೇಧ್ಯಾತಿಥಿಂ ಪ್ರತ್ಯುಕ್ತತ್ವಾದೇತಾಸಾಂ ಚತಸೃಣಾಮೃಚಾಂ ಪ್ಲಾಯೋಗಿರಾಸಂಗ ಋಷಿಃ ಸ ಏವ ದೇವತೇತ್ಯೇತ-ದುಪಪನ್ನಂ ಭವತಿ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಅಥ—ಮತ್ತು । ಪ್ಲಾಯೋಗಿಃ—ಪ್ಲಯೋಗನ ಪುತ್ರನಾದ । ಆಸಂಗಃ—ಆಸಂಗನು । ದಶಭಿಃ—ದಶಸಂಖ್ಯೆಯಿಂದ ಗುಣಿತವಾದ । ಸಹಸ್ರೈಃ—ಸಹಸ್ರಸಂಖ್ಯಾಕವಾದ ಗೋವುಗಳನ್ನು । ಅನ್ಯಾನ್—ಇತರ ಪಾತ್ರಗಳಿಗಿಂತಲೂ । ಅತಿ ದಾಸತ್—ಅಧಿಕವಾಗಿ ಕೊಟ್ಟಿದ್ದಾನೆ । ಅಥ—ಮತ್ತು । ಮಹ್ಯಂ—ನನಗೆ ಕೊಡಲ್ಪಟ್ಟವೂ । ಉಕ್ಷಣಃ—ತಾರುಣ್ಯವನ್ನು ಹೊಂದಿರುವುವೂ । ರುಶಂತಃ—ಪ್ರಕಾಶಮಾನವಾದವೂ । ದಶ—ದಶಸಂಖ್ಯೆಯಿಂದ ಗುಣಿತವಾದ ಸಹಸ್ರ ಗೋವುಗಳೂ ಸಹ । ಸರಸಃ—ಸರಸ್ಸಿನ ಉದಕಗಳಿಂದ ಹೊರಕ್ಕೆ ಹೊರಟ । ನಳಾಇವ—ಜೊಂಡಿನ ಪೊದೆಗಳು ಒಟ್ಟಿಗೆ ಗುಂಪುಕಟ್ಟಿಕೊಂಡು ಹೊರಕ್ಕೆ ಬರುವಂತೆ । ನಿರತಿಷ್ಠನ್—ಆಸಂಗನಿಂದ ಹೊರಟು ತನ್ನಲ್ಲಿ ಬಂದು ನಿಂತವು.

॥ ಭಾವಾರ್ಥ ॥

“ಎಲೈ ಅಗ್ನಿಯೇ, ಪ್ಲಯೋಗಪುತ್ರನಾದ ಆಸಂಗನು ಇತರ ದಾನಿಗಳು ಕೊಡುವುದಕ್ಕಿಂತಲೂ ಹತ್ತು ಸಹಸ್ರ ಸಂಖ್ಯೆ ಅಧಿಕವಾಗಿರುವ ಗೋಸಂಘವನ್ನು ನನಗೆ ದಾನಮಾಡಿದ್ದಾನೆ. ಅವನಿಂದ ನನಗೆ ದಾನಮಾಡಲ್ಪಟ್ಟವೂ, ತಾರುಣ್ಯವನ್ನು ಹೊಂದಿರುವುವೂ, ಪ್ರಕಾಶಮಾನವಾದವೂ ಆದ ಆ ಹತ್ತು ಸಹಸ್ರ ಗೋವುಗಳೂ ಸಹ ಸರಸ್ಸಿನ ಉದಕದಿಂದ ಹೊರಕ್ಕೆ ಹೊರಟ ಜೊಂಡಿನ ಪೊದೆಗಳಂತೆ ಸಂಘರೂಪದಲ್ಲಿ ಅವನಿಂದ ಹೊರಟು ನನ್ನಲ್ಲಿ ಬಂದು ನಿಂತಿವೆ” ಎಂದು ಪ್ರಶಂಸಿಸು.

## English Translation

(So praise me, saying,) "Asanga, the son of Playoga, has given more than others, Agni by tens of thousands: ten times the (number of) vigorous and brilliant oxen (given by him) to me, issue forth like the reeds of a lake"

॥ ಸಂಹಿತಾಪಾಠಃ ॥

ಅನ್ವಸ್ಯ ಸ್ಥೂರಂ ದದೃಶೇ ಪುರಸ್ತಾದನಸ್ಥ ಊರುರವರಂಬಮಾಣಃ ।
ಶಶ್ವತೀ ನಾರ್ಯಭಿಚಕ್ಷ್ಯಾಹ ಸುಭದ್ರಮರ್ಯ ಭೋಜನಂ ಬಿಭರ್ಷಿ ॥ ೩೪ ॥

॥ ಪದಪಾಠಃ ॥

ಅನು । ಅಸ್ಯ । ಸ್ಥೂರಂ । ದದೃಶೇ । ಪುರಸ್ತಾತ್ । ಅನಸ್ಥಃ । ಊರುಃ । ಅವऽರಂಬಮಾಣಃ ।
ಶಶ್ವತೀ । ನಾರೀ । ಅಭಿऽಚಕ್ಷ್ಯ । ಆಹ । ಸುऽಭದ್ರಂ । ಅರ್ಯ । ಭೋಜನಂ । ಬಿಭರ್ಷಿ ॥ ೩೪ ॥

॥ ಸಾಯಣಭಾಷ್ಯಂ ॥

ಅಯಮಾಸಂಗೋ ರಾಜಾ ಕದಾಚಿದ್ದೇವಶಾಪೇನ ನಪುಂಸಕೋ ಬಭೂವ । ತಸ್ಯ ಪತ್ನೀ ಶಶ್ವತೀ ಭರ್ತುರ್ನಪುಂಸಕತ್ವೇನ ಖಿನ್ನಾ ಸತೀ ಮಹತ್ತಪಸ್ತೇಪೇ । ತೇನ ಚ ತಪಸಾ ಸ ಚ ಪುಂಸ್ತ್ವಂ ಪ್ರಾಪ । ಪ್ರಾಪ್ತಪುಂವ್ಯಂಜನಂ ತಂ ರಾತ್ರಾವುಪಲಭ್ಯ ಪ್ರೀತಾ ಶಶ್ವತ್ಯನಯಾ ತಮಸ್ತೌತ್ ॥ ಅಸ್ಯಾಸಂಗಸ್ಯ ಪುರಸ್ತಾತ್ಪುರೋಭಾಗೇ ಗುಹ್ಯದೇಶೇ ಸ್ಥೂರಂ ಸ್ಥೂಲಂ ವೃದ್ಧಂ ಸತ್ಪುಂವ್ಯಂಜನಮನು ದದೃಶೇ। ಅನುದೃಶ್ಯತೇ। ಅನಸ್ಥೋಽಸ್ಥಿರಹಿತಃ ಸ ಚಾವಯವ ಊರುರುರುರ್ವಿಸ್ತೀರ್ಣೋಽವರಂಬಮಾಣೋಽತಿದೀರ್ಘತ್ವೇನಾವಾಙ್ಮುಖಂ ಲಂಬಮಾನಃ । ಯದ್ವಾ। ಊರುಃ॥ ಸುಪಾಂ ಸುಲುಗಿತಿ ದ್ವಿವಚನಸ್ಯ ಸುಃ॥ ಊರೂ ಪ್ರತ್ಯವಲಂಬಮಾನೋ ಭವತಿ ಶಶ್ವತೀ ನಾಮಾಂಗಿರಸಃ ಸುತಾ ನಾರೀ ತಸ್ಯಾಸಂಗಸ್ಯ ಭಾರ್ಯಾಭಿಚಕ್ಷ್ಯೈವಂಭೂತಮವಯವಂ ನಿಶಿ ದೃಷ್ಟ್ವಾ ಹೇ ಅರ್ಯ ಸ್ವಾಮಿನ್ ಭರ್ತಃ ಸುಭದ್ರಮತಿಶಯೇನ ಕಲ್ಯಾಣಂ ಭೋಜನಂ ಭೋಗಸಾಧನಂ ಬಿಭರ್ಷಿ ಧಾರಯಸೀತ್ಯಾಹ । ಬ್ರೂತೇ ॥

॥ ಪ್ರತಿಪದಾರ್ಥ ॥

ಅಸ್ಯ—ಈ ಆಸಂಗರಾಜನ । ಪುರಸ್ತಾತ್—ಶರೀರದ ಮರ್ಮಸ್ಥಾನದ ಮುಂಭಾಗದಲ್ಲಿ । ಸ್ಥೂರಂ—ಉದ್ದವಾಗಿಯೂ ದಪ್ಪವಾಗಿಯೂ ಇರುವ ಪುರುಷಲಿಂಗವು । ಅನು ದದೃಶೇ—ಕಾಣಿಸುತ್ತಿದೆ । ಅನಸ್ಥಃ—ಎಲುಬುಗಳಿಲ್ಲದೆ ರಕ್ತಮಾಂಸಗಳಿಂದಲೇ ಪುಷ್ಟವಾಗಿ ಕೊಬ್ಬಿರುವ ಈ ಪುರುಷಲಿಂಗವು । ಊರುಃ—ವಿಸ್ತೀರ್ಣವಾಗಿದೆ ಎಂದರೆ ಉದ್ದವಾಗಿದೆ । ಅವರಂಬಮಾಣಃ—ಮತ್ತು ಮುಂದಕ್ಕೆ ಚಾಚಿ ಬಗ್ಗಿನಿಂತಿದೆ । (ಅಥವಾ)

ಊರುಃ—ಎರಡು ತೊಡೆಗಳ ಮಧ್ಯದಲ್ಲಿ । ಅವರಂಬಮಾಣಃ—ಬಗ್ಗಿನಿಂತಿದೆ । ಶಶ್ವತೀ—ಶಶ್ವತೀ ಎಂಬ ಹೆಸರಿನ ಅಂಗಿರಾಋಷಿಯ ಪುತ್ರಿಯಾದ । ನಾರೀ—ಆಸಂಗರಾಜನ ಪತ್ನಿಯು । ಅಭಿಚಕ್ಷ್ಯ—ಆಸಂಗರಾಜನಮೇಲೆ ಹೇಳಿದ ಪುರುಷಲಿಂಗವನ್ನು ರಾತ್ರಿವೇಳೆ ಸಂಭೋಗಸಮಯದಲ್ಲಿ ನೋಡಿ (ಸಂತೋಷದಿಂದ) । ಅರ್ಯ—ಎಲೈ ಪ್ರಾಣಕಾಂತನೇ (ನೀನು ಈಗ) । ಸುಭದ್ರಂ—ಮಂಗಳಕರವಾದ । ಭೋಜನಂ—ಸಂಭೋಗಸಾಧನವಾದ ಪುರುಷಾವಯವವನ್ನು । ಬಿಭರ್ಷಿ—ಪಡೆದಿರುವೆ ಎಂದು । ಆಹ—ಹೇಳಿದಳು.

॥ ಭಾವಾರ್ಥ ॥

ಈ ಆಸಂಗರಾಜನ ಶರೀರದ ಮುಂಭಾಗದಲ್ಲಿ ಎಂದರೆ ಮರ್ಮಸ್ಥಾನವಿರುವ ಪ್ರದೇಶದಲ್ಲಿ ಉದ್ದವಾಗಿಯೂ ದಪ್ಪನಾಗಿಯೂ ಇರುವ ಪುರುಷಲಿಂಗವು ಕಾಣಿಸುತ್ತಿದೆ. ಎಲಬುಗಳಿಲ್ಲದ ಕೇವಲ ರಕ್ತಮಾಂಸಗಳಿಂದಲೇ ಪುಷ್ಟವಾಗಿ ಬೆಳೆದು ಕೊಬ್ಬಿರುವ ಈ ಪುರುಷಲಿಂಗವು ಎರಡು ತೊಡೆಗಳ ಮಧ್ಯದಲ್ಲಿ ಉದ್ದವಾಗಿ ಮುಂದಕ್ಕೆ ಚಾಚಿಕೊಂಡು ಬಗ್ಗಿ ನಿಂತಿದೆ. ಆಸಂಗರಾಜನ ಪತ್ನಿಯೂ, ಅಂಗಿರಾಋಷಿಯ ಪುತ್ರಿಯೂ ಆದ ಶಶ್ವತೀ ಎಂಬ ಸ್ತ್ರೀಯು 'ತನ್ನ ಪತಿಯ ಈರೀತಿ ಇರುವ ಪುರುಷಲಿಂಗವನ್ನು ರಾತ್ರಿವೇಳೆ ಸಂಭೋಗಸಮಯದಲ್ಲಿ ನೋಡಿ ಸಂತೋಷದಿಂದ ಎಲೈ ಪ್ರಾಣಕಾಂತನೇ, ಈಗ ನೀನು ಮಂಗಳಕರವಾದ ಮತ್ತು ಸಂಭೋಗಕಾರ್ಯಕ್ಕೆ ಅನುಕೂಲವಾದ ಪುರುಷಾಯವವನ್ನು ಪಡೆದಿರುವೆ ಎಂದು ಹೇಳಿದಳು.

## English Translation

Saswati, perceiving that the signs of manhood were restored exclaims, "Joy, husband, you are capable of enjoyment."

॥ ವಿಶೇಷವಿಷಯಗಳು ॥

ಈ ಸೂಕ್ತದ ಪೀಠಿಕೆಯಲ್ಲಿ ಹೇಳಿರುವಂತೆ ಭಾಷ್ಯಕಾರರು ಒಂದು ಪೂರ್ವೇತಿಹಾಸವನ್ನು ಇಲ್ಲಿ ಹೇಳಿದಾರೆ—

ಅಯಮಾಸಂಗೋ ರಾಜಾ ಕದಾಚಿದ್ದೇವಶಾಪೇನ ನಪುಂಸಕೋ ಬಭೂವ । ತಸ್ಯ ಪತ್ನೀ ಶಶ್ವತೀ ಭರ್ತುರ್ನಪುಂಸಕತ್ವೇನ ಖಿನ್ನಾ ಸತೀ ಮಹತ್ತಪಸ್ತೇಪೇ ತೇನ ಚ ತಪಸಾ ಸ ಚ ಪುಂಸ್ತ್ವಂ ಪ್ರಾಪ । ಪ್ರಾಪ್ತಪುಂವ್ಯಂಜನಂ ತಂ ರಾತ್ರಾವುಪಲಭ್ಯ ಪ್ರೀತಾ ಶಶ್ವತ್ಯನಯಾ ತಮಸ್ತೌತ್ .

ಪೂರ್ವದಲ್ಲಿ ಒಂದಾನೊಂದು ಕಾಲದಲ್ಲಿ ಈ ಆಸಂಗರಾಜನಿಗೆ ದೇವತೆಗಳ ಶಾಪದಿಂದ ನಪುಂಸಕತ್ವವು ಪ್ರಾಪ್ತವಾಯಿತು. ಇದರಿಂದ ಶಶ್ವತೀ ಎಂಬ ಅವನ ಪತ್ನಿಗೆ ಬಹುದುಃಖವುಂಟಾಯಿತು. ಆದ್ದರಿಂದ ಆ ಸ್ತ್ರೀಯು ಘೋರವಾದ ತಪಸ್ಸನ್ನು ಮಾಡಿ ದೇವತೆಗಳನ್ನು ಮೆಚ್ಚಿಸಿದಳು. ಅದರಿಂದ ದೇವತೆಗಳಿಗೆ ಸಂತೋಷವುಂಟಾಗಿ ಆಸಂಗರಾಜನಿಗೆ ನಪುಂಸಕತ್ವವು ಹೋಗಿ ಪುನಃ ಪುರುಷತ್ವವು ಲಭಿಸುವಂತೆ ಅನುಗ್ರಹಿಸಿದರು. ಇದರಿಂದ ಶಶ್ವತೀ ಎಂಬ ಅವನ ಪತ್ನಿಗೆ ಬಹು ಸಂತೋಷವುಂಟಾಗಿ ರಾತ್ರಿವೇಳೆ ಸಂಭೋಗಸಮಯದಲ್ಲಿ ತನ್ನ ಪತಿಯು ಪೂರ್ವದಂತೆ ಪುರುಷತ್ವವನ್ನು ಪಡೆದು ಸಂಭೋಗಸಾಧನವಾದ ಪುರುಷಲಿಂಗವುಳ್ಳವನಾಗಿರುವುದನ್ನು ಕಂಡು ಹರ್ಷಿಸಿ ಅವನನ್ನು ಅಭಿನಂದಿಸುವುದಕ್ಕಾಗಿ ಈ ಋಕ್ಕನ್ನು ಪಠಿಸಿರುವಳೆಂದು ಹೇಳಲಾಗಿದೆ.

ಈ ಸೂಕ್ತದ ಪೀಠಿಕೆಯಲ್ಲಿ ಈ ವಿಷಯವು ಸ್ವಲ್ಪ ವ್ಯತ್ಯಸ್ತವಾಗಿ ವರ್ಣಿತವಾಗಿದೆ—

ಪ್ಲಯೋಗನಾಮ್ನೋ ರಾಜ್ಞಃ ಪುತ್ರ ಆಸಂಗಾಭಿಧಾನೋ ರಾಜಾ ದೈವಶಾಪಾತ್ ಸ್ತ್ರೀತ್ವಮನುಭೂಯ ಪಶ್ಚಾತ್ತಪೋಬಲೇನ ಮೇಧಾತಿಥೇಃ ಪ್ರಸಾದಾತ್ ಪುಮಾನ್ಭೂತ್ವಾ ತಸ್ಮೈ ಬಹು ಧನಂ ದತ್ವಾ ಸ್ವಕೀಯಮಂಶರಾತ್ಮಾನಂ ದತ್ತದಾನಂ ಸ್ತುಹಿ ಸ್ತುಹೀತ್ಯಾದಿಭಿಶ್ಚತಸೃಭಿರ್ಋಗ್ಭಿರಸ್ತೌತ್................ಅಸ್ಯಾಸಂಗಸ್ಯ ಭಾರ್ಯಾಂಗಿರಸಃ ಸುತಾ ಶಶ್ವತ್ಯಾಖ್ಯಾ ಭರ್ತುಃ ಪುಂಸ್ತ್ವಮುಪಲಭ್ಯ ಪ್ರೀತಾ ಸತೀ ಸ್ವಭರ್ತಾರಂ ಅನ್ವಸ್ಯ ಸ್ಥೂರಂ ಇತ್ಯನಯಾ ಸ್ತುತವತೀ ॥

ಪ್ಲಯೋಗ ಎಂಬ ಹೆಸರಿನ ರಾಜನ ಪುತ್ರನಾದ ಆಸಂಗ ಎಂಬ ರಾಜಪುತ್ರನು ದೇವತೆಗಳ ಶಾಪದಿಂದ ಕೆಲವು ಕಾಲ ಸ್ತ್ರೀತ್ವವನ್ನು ಹೊಂದಿ (ಸ್ತ್ರೀಯಾಗಿದ್ದು) ಮೇಧಾತಿಥಿಋಷಿಯ ತಪೋಬಲದಿಂದಲೂ, ಅನುಗ್ರಹದಿಂದಲೂ ಮತ್ತೆ ಪುರುಷತ್ವವನ್ನು ಪಡೆದು ಆ ಉಪಕಾರಕ್ಕಾಗಿ ಮೇಧಾತಿಥಿ ಋಷಿಗೆ ಬಹಳವಾಗಿ ಧನಾದಿಗಳನ್ನೂ ಕೊಟ್ಟು ಆ ವಿಷಯವನ್ನು ಎಂದರೆ ತಾನು ಮಾಡಿದ ದಾನದ ವಿಷಯವನ್ನು ಪ್ರಶಂಸಿಸು ಎಂದು ಋಷಿಯನ್ನು ಸಂಬೋಧಿಸಿ ಆ ವಿಷಯವನ್ನು ಸ್ತುಹಿ ಸ್ತುಹಿ ಎಂದು ಮೊದಲಾಗುವ (ಈ ಸೂಕ್ತದ ೩೦-೩೩ ನೇ ಋಕ್ಕುಗಳಿಂದ) ನಾಲ್ಕು ಋಕ್ಕುಗಳಿಂದ ಸ್ತುತಿಸಿರುವನು................ಈ ಆಸಂಗರಾಜನ ಭಾರ್ಯೆಯೂ ಅಂಗಿರಾಋಷಿಯ ಪುತ್ರಿಯೂ ಆದ ಶಶ್ವತೀ ಎಂಬುವಳು ತನ್ನ ಪತಿಯು ಮತ್ತೆ ಪುರುಷತ್ವವನ್ನು ಪಡೆದದ್ದರಿಂದ ಸಂತುಷ್ಟಳಾಗಿ ತನ್ನ ಪತಿಯಾದ ಆಸಂಗರಾಜನನ್ನು ಅಭಿನಂದಿಸುವುದಕ್ಕಾಗಿ ಅನ್ವಸ್ಯ ಸ್ಥೂರಂ ಎಂದು (೩೪ನೇ ಋಕ್ಕು) ಸ್ತುತಿಸಿರುವಳು ಎಂದು ಹೇಳಿದೆ. ಮೊದಲು ಹೇಳಿರುವ ಪೂರ್ವೇತಿಹಾಸದಲ್ಲಿ ಆಸಂಗರಾಜನಿಗೆ ದೇವಶಾಪದಿಂದ ನಪುಂಸಕತ್ವ ಪ್ರಾಪ್ತವಾಯಿತೆಂದೂ ಅದು ಅವನ ಪತ್ನಿಯ ತಪಸ್ಸಿನಿಂದ ಪರಿಹಾರವಾಯಿತೆಂದೂ ಹೇಳಿದೆ. ಆದರೆ ಸೂಕ್ತದ ಪೀಠಿಕೆಯಲ್ಲಿ ಆಸಂಗರಾಜನು ದೇವಶಾಪದಿಂದ ಪುರುಷತ್ವವನ್ನು ಕಳೆದುಕೊಂಡದ್ದಲ್ಲದೆ ಕೆಲವುಕಾಲ ಸ್ತ್ರೀರೂಪದಿಂದಲೇ ಇದ್ದನೆಂದೂ ಈ ಸೂಕ್ತದ ಋಷಿಯಾದ ಮೇಧಾತಿಥಿಯ ತಪಸ್ಸಾಮರ್ಥ್ಯದಿಂದಲೂ, ಅನುಗ್ರಹದಿಂದಲೂ ಮತ್ತೆ ಪುರುಷತ್ವವನ್ನು ಪಡೆದನೆಂದೂ ಈ ಉಪಕಾರಕ್ಕಾಗಿ ಮೇಧಾತಿಥಿಗೆ ಧನಾದಿಗಳನ್ನು ಬಹಳವಾಗಿ ಕೊಟ್ಟನೆಂದೂ ಹೇಳಿದೆ. ಆದ್ದರಿಂದ ಈ ಎರಡು ವಿವರಣೆಗಳ ಮುಖ್ಯವಿಷಯಗಳಲ್ಲಿ ವಿಶೇಷ ವ್ಯತ್ಯಾಸವೇನೂ ಕಂಡುಬರುವುದಿಲ್ಲವೆಂದು ಹೇಳಬಹುದು.



## ಎರಡನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಇದಂ ವಸೋ ಇತಿ ದ್ವಿಚತ್ವಾರಿಂಶದೃಚಂ ದ್ವಿತೀಯಂ ಸೂಕ್ತಂ ಕಾಣ್ವಸ್ಯ ಮೇಧಾತಿಥೇರಾಂಗಿರಸಸ್ಯ ಚ ಪ್ರಿಯಮೇಧಸ್ಯಾರ್ಷಂ । ಶಿಕ್ಷಾ ವಿಭಿಂದೋ ಇತ್ಯಾದಿಕೇ ದ್ವೇ ಮೇಧಾತಿಥೇರೇವ । ಸ್ವಾದವಃ ಸೋಮಾ ಇತ್ಯೇಷಾನುಷ್ಟುಪ್ ಶಿಷ್ಟಾ ಗಾಯತ್ರ್ಯಃ । ಇಂದ್ರೋ ದೇವತಾ । ಅಂತ್ಯೇ ದ್ವೇ ಋಚೌ ವಿಭಿಂದೋರ್ದಾನಸ್ತುತಿತ್ವಾತ್ತದ್ದೇವತಾಕೇ । ತಥಾ ಚಾನುಕ್ರಾಂತಂ । ಇದಂ ವಸೋ ದ್ವಿಚತ್ವಾರಿಂಶನ್ಮೇಧಾತಿಥಿರಾಂಗಿರಸಶ್ಚ ಪ್ರಿಯಮೇಧಃ ಸ್ವಾದವೋಽನುಷ್ಟುಬಂತ್ಯಾಭ್ಯಾಂ ಮೇಧಾತಿಥಿರ್ವಿಭಿಂದೋರ್ದಾನಂ ತುಷ್ಟಾವೇತಿ ॥ ಗತಃ ಸೂಕ್ತವಿನಿಯೋಗಃ ॥ ಜ್ಯೋತಿಷ್ಟೋಮೇ ಮರುತ್ವತೀಯ ಆದ್ಯಸ್ತ್ರ್ಯ-

ಚೋಽನುಚರಃ । ಸೂತ್ರ್ಯತೇ ಹಿ । ಇದಂ ವಸೋ ಸುತಮಂಧ ಇತಿ ಮರುತ್ವತೀಯಸ್ಯ ಪ್ರತಿಪದನು- ಚರೌ । ಆ. ೫-೧೪ । ಇತಿ ॥ ದ್ವಿತೀಯೇ ರಾತ್ರಿಪರ್ಯಾಯೇ ಬ್ರಹ್ಮಶಸ್ತ್ರೇಽಯಮೇವ ಸ್ತೋತ್ರಿಯಸ್ತೃ- ಚಃ । ಸೂತ್ರಿತಂ ಚ । ಇದಂ ವಸೋ ಸುತಮಂಧ ಇಂದ್ರೇಹಿ ಮತ್ಸ್ಯಂಧಸಃ । ಆ. ೬.೪ । ಇತಿ ॥ ಅಯ- ಮೇವ ಚತುರ್ಥೇಽಹನ್ಯಪಿ ಮರುತ್ವತೀಯಸ್ಯಾನುಚರಸ್ತೃಚಃ । ಸೂತ್ರಿತಂ ಚ । ತಂ ತ್ವಾ ಯಜ್ಞೇಭಿರೀ- ಮಹ ಇದಂ ವಸೋ ಸುತಮಂಧ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ । ಆ. ೭-೧೧ । ಇತಿ ॥

ಅನುವಾದವು—ಇದಂ ವಸೋ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ನಲವತ್ತೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಮೇಧಾತಿಥಿಃ ಕಾಣ್ವಃ ಎಂಬ ಋಷಿಯೂ ಪ್ರಿಯಮೇಧ ಆಂಗಿರಸ ಎಂಬುವರೂ ಋಷಿಗಳು. ಆದರೆ ಶಿಕ್ಷಾ ವಿಭಿಂದೋ ಎಂದು ಮೊದಲಾಗುವ ಈ ಸೂಕ್ತದ ಕೊನೆಯ ಎರಡು ಋಕ್ಕುಗಳಿಗೆ ಮೇಧಾತಿಥಿಯೊಬ್ಬನೇ ಋಷಿಯು. ಸ್ವಾದವಃ ಸೋಮಾಃ ಎಂಬ ಋಕ್ಕು (೨೮ನೆ ಋಕ್ಕು) ಅನುಷ್ಟುಪ್ ಛಂದಸ್ಕವು. ಉಳಿದ ಋಕ್ಕುಗಳೆಲ್ಲಾ ಗಾಯತ್ರೀಛಂದಸ್ಕವು. ಇಂದ್ರನು ದೇವತೆಯು. ಕೊನೆಯ ಎರಡು ಋಕ್ಕುಗಳಿಗೆ ವಿಭಿಂದನ ದಾನಸ್ತುತಿಯೇ ದೇವತೆಯು. ಅನುಕ್ರಮಣಿಕೆಯಲ್ಲಿ—ಇದಂ ವಸೋ ದ್ವಿಚತ್ವಾರಿಂಶ- ನ್ಮೇಧಾತಿಥಿರಾಂಗಿರಸಶ್ಚ ಪ್ರಿಯಮೇಧಃ ಸ್ವಾದವೋಽನುಷ್ಟುಬಂತ್ಯಾಭ್ಯಾಂ ಮೇಧಾತಿಥಿರ್ವಿಭಿಂದೋ- ರ್ದಾನಂ ತುಷ್ಟಾವ ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ ಜ್ಯೋತಿ ಷ್ಟೋಮಯಾಗದಲ್ಲಿ ಮರುತ್ವತೀಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳನ್ನು ಅನುಚರತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಇದಂ ವಸೋ ಸುತಮಂಧ ಇತಿ ಮರು- ತ್ವತೀಯಸ್ಯ ಪ್ರತಿಪದನುಚರೌ ಎಂಬ ಸೂತ್ರದಿಂದ (ಆ. ೫-೧೪) ವಿವೃತವಾಗಿರುವುದು. ಎರಡನೇ ರಾತ್ರಿ ಪರ್ಯಾಯದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲಿನ ಮೂರು ಋಕ್ಕುಗಳನ್ನು ಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಇದಂ ವಸೋ ಸುತ- ಮಂಧ ಇಂದ್ರೇಹಿ ಮತ್ಸ್ಯಂಧಸಃ ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು. ಮತ್ತು ಇದೇ ಮೂರು ಋಕ್ಕುಗಳನ್ನು ಯಜ್ಞದ ನಾಲ್ಕನೆಯ ದಿವಸ ಪಠಿಸುವ ಮರುತ್ವತೀಯ ಶಸ್ತ್ರಮಂತ್ರಗಳಲ್ಲಿ ಅನುಚರತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ತಂ ತ್ವಾ ಯಜ್ಞೇಭಿರೀಮಹ ಇದಂ ವಸೋ ಸುತಮಂಧ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ ಎಂಬ ಸೂತ್ರದಿಂದ (ಆ. ೭-೧೧) ವಿವೃತವಾಗಿರುವುದು.

## ಸೂಕ್ತ—೨

ಮಂಡಲ—೮ । ಅನುವಾಕ—೧ । ಸೂಕ್ತ—೨ ।

ಅಷ್ಟಕ—೫ । ಅಧ್ಯಾಯ—೬ । ವರ್ಗ—೧೬, ೧೮, ೧೯, ೨೦, ೨೧, ೨೨, ೨೩, ೨೪ ।

ಸೂಕ್ತದಲ್ಲಿರುವ ಋಕ್ಸಂಖ್ಯೆ—೪೨ ।

ಋಷಿ—೧-೪೦, ಮೇಧಾತಿಥಿಃ ಕಾಣ್ವಃ ಪ್ರಿಯಮೇಧಶ್ಚಾಂಗಿರಸಃ । ೪೧-೪೨. ಮೇಧಾತಿಥಿಃ ।

ದೇವತಾ—೧-೪೦. ಇಂದ್ರಃ । ೪೧-೪೨. ವಿಭಿಂದೋರ್ದಾನಸ್ತುತಿಃ ।

ಛಂದಃ—೧-೨೭, ೨೯-೪೨. ಗಾಯತ್ರೀ । ೨೮. ಅನುಷ್ಟುಪ್ ।

॥ ಸಂಹಿತಾಪಾಠಃ ॥

ಇದಂ ವಸೋ ಸುತಮಂಧಃ ಪಿಬಾ ಸುಪೂರ್ಣಮುದರಂ ।

ಅನಾಭಯಿನ್ರರಿಮಾ ತೇ ॥ ೧ ॥

॥ ಪದಪಾಠಃ ॥

ಇದಂ । ವಸೋ ಇತಿ । ಸುತಂ । ಅಂಧಃ । ಪಿಬ । ಸುಽಪೂರ್ಣಂ । ಉದರಂ ।

ಅನಾಭಯಿನ್ । ರರಿಮ । ತೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ವಸೋ ವಾಸಯಿತರಿಂದ್ರ ಇದಂ ಪುರೋವರ್ತಮಾನಂ ಸುತಮಭಿಷುತಮಂಧೋಽನ್ನಂ ಸೋಮಲಕ್ಷಣಂ ಪಿಬ । ಯಥೋದರಂ ತ್ವದೀಯಂ ಜಠರಂ ಸುಪೂರ್ಣಮತಿಶಯೇನ ಸಂಪೂರ್ಣಂ ಭವತಿ ತಥೇತ್ಯರ್ಥಃ । ಹೇ ಅನಾಭಯಿನ್ । ಆ ಸಮಂತಾದ್ಬಿಭೇತೀತ್ಯಾಭಯೀ । ಬಿಭೇತೇರೌಣಾದಿಕ ಇನಿಃ ॥ ನಾಭಯ್ಯನಾಭಯೀ । ತಾದೃಶ ಹೇ ಇಂದ್ರ ತೇ ತುಭ್ಯಂ ತ್ವದರ್ಥಂ ರರಿಮ । ಉಕ್ತಲಕ್ಷಣಂ ಸೋಮಂ ದದ್ಮಃ ॥ ರಾ ದಾನೇ । ಛಾಂದಸೋ ಲಿಟ್ ॥

॥ ಪ್ರತಿಪದಾರ್ಥ ॥

**ವಸೋ**—ವಸತಿದಾಯಕನಾದ ಎಲೈ ಇಂದ್ರನೇ । **ಇದಂ**—ಇಲ್ಲಿ ಅರ್ಪಿತವಾಗತಕ್ಕದ್ದೂ । **ಸುತಂ**—ಪೂರ್ಣವಾಗಿ ಹಿಂಡಿರತಕ್ಕದ್ದೂ ಆದ । **ಅಂಧಃ**—ಸೋಮರೂಪವಾದ ಅನ್ನವನ್ನು । **ಉದರಂ**—ನಿನ್ನ ಉದರವು । **ಸುಪೂರ್ಣಂ**—ಪೂರ್ಣವಾಗಿ ತುಂಬುವಂತೆ । **ಪಿಬ**—ಪಾನಮಾಡು । **ಅನಾಭಯಿನ್**—ಯಾರಿಗೂ, ಎಲ್ಲಿಯೂ ಭಯಪಡದಿರುವ ಎಲೈ ಇಂದ್ರನೇ । **ತೇ**—ನಿನ್ನನ್ನುದ್ದೇಶಿಸಿ । **ರರಿಮ**—ಮೇಲೆ ವರ್ಣಿತವಾದ ಸೋಮರಸವನ್ನರ್ಪಿಸುತ್ತೇನೆ.

॥ ಭಾವಾರ್ಥ ॥

ವಸತಿದಾಯಕನಾದ ಎಲೈ ಇಂದ್ರನೇ, ಈಗ ಇಲ್ಲಿ ಅರ್ಪಿತವಾಗತಕ್ಕದ್ದೂ, ಪೂರ್ಣವಾಗಿ ಹಿಂಡಿರತಕ್ಕದ್ದೂ ಆದ ಸೋಮರೂಪವಾದ ಅನ್ನವನ್ನು ಯಾವ ರೀತಿ ನಿನ್ನ ಉದರವು ತುಂಬುವುದೋ ಆ ರೀತಿ ಪಾನಮಾಡು. ಯಾರಿಗೂ ಎಲ್ಲಿಯೂ ಭಯಪಡದಿರುವ ಎಲೈ ಇಂದ್ರನೇ, ಮೇಲೆ ವರ್ಣಿತವಾದ ಸೋಮರಸವನ್ನು ನಿನ್ನನ್ನುದ್ದೇಶಿಸಿ ಅರ್ಪಿಸುತ್ತೇನೆ.

## English Translation

Giver of dwellings (Indra), drink this effused libation till your belly is full, we offer it, undaunted (Indra), to you.

॥ ಸಂಹಿತಾಪಾಠಃ ॥

ನೃಭಿರ್ಧೂತಃ ಸುತೋ ಅಶ್ನೈರವ್ಯೋ ವಾರೈಃ ಪರಿಪೂತಃ ।

ಅಶ್ವೋ ನ ನಿಕ್ತೋ ನದೀಷು ॥ ೨ ॥

॥ ಪದಪಾಠಃ ॥

ನೃಽಭಿಃ । ಧೂತಃ । ಸುತಃ । ಅಶ್ನೈಃ । ಅವ್ಯಃ । ವಾರೈಃ । ಪರಿಽಪೂತಃ ।

ಅಶ್ವಃ । ನ । ನಿಕ್ತಃ । ನದೀಷು ॥ ೨ ॥

। ಸಾಯಣಭಾಷ್ಯಂ ।

ನೃಭಿರಧ್ವರಸ್ಯ ನೇತೃಭಿರ್ಋತ್ವಿಗ್ಭಿರ್ಧೂತ ಆಧೂತೋಽದಾಭ್ಯಗ್ರಹ ಆಧವನೇನ ಸಂಸ್ಕೃತೋಽಶ್ನೈರಶ್ಮಭಿರ್ಗ್ರಾವಭಿಃ ಕರಣಭೂತೈಃ ಸುತೋಽಧ್ವರ್ಯುಭಿರಭಿಷುತೋಽವ್ಯೋಽವೇರ್ಮೇಷಸ್ಯ ವಾರೈರ್ವಾಲೈಃ ಪರಿಪೂತಃ । ದಶಾಪವಿತ್ರಸ್ಯ ನಾಭಿಂ ಕುರುತೇ ಶುಕ್ಲಂ ವಲಕ್ಷ್ಯಾಃ ಪವಿತ್ರಮನೋತಂ ಭವತೀತಿ । ನದೀಷು ನದನಾಸ್ವಪ್ಸ್ವಶ್ವೋ ನಾಶ್ವ ಇವ ನಿಕ್ತೋ ನಿರ್ಣಿಕ್ತಃ ಶೋಧಿತಃ । ಯಥಾಪ್ಸು ಸ್ನಾತೋಽಶ್ವೋಽಪಗತಮಲಃ ಸನ್ ದೀಪ್ತೋ ಭವತಿ ಏವಂ ವಸತೀವರ್ಯೇಕಧನಾಭಿರದ್ಭಿರಭಿಷುತಃ ಸೋಮೋ ದೀಪ್ತೋ ಭವತೀತ್ಯರ್ಥಃ । ಈದೃಶೋ ಯಃ ಸೋಮಸ್ತಂ ತೇ ಯವಮಿತ್ಯುತ್ತರಯಾ ಸಂಬಂಧಃ ॥

॥ ಪ್ರತಿಪದಾರ್ಥ ॥

ನೃಭಿಃ—ಯಜ್ಞಕ್ಕೆ ನೇತೃಗಳಾದ ಅಧ್ವರ್ಯುಗಳಿಂದ । ಧೂತಃ—ಆಧವನರೂಪವಾದ ಸಂಸ್ಕೃತಿಯನ್ನು ಹೊಂದಿದುದೂ । ಅಶ್ನೈಃ—ಹಿಂಡುವ ಸಾಧನಗಳಾದ ಗ್ರಾವಗಳಿಂದ । ಸುತಃ—ಹಿಂಡಲ್ಪಟ್ಟುದೂ । ಅವ್ಯಃ—ಮೇಷದ । ವಾರೈಃ—ಬಾಲಗಳಿಂದ (ದಶಾಪವಿತ್ರಸಂಜ್ಞಕವಾದ ಪಾತ್ರೆಯಲ್ಲಿರುವ ಊರ್ಣೆಯಿಂದ) । ಪರಿಪೂತಃ—ಶೋಧಿತವಾದುದೂ ಆದ ಸೋಮರಸವು । ನದೀಷು—ನದಿಯ ಉದಕದಿಂದ । ನಿಕ್ತಃ—ತೊಳೆಯಲ್ಪಟ್ಟ । ಅಶ್ವೋ ನ—ಅಶ್ವದಂತೆ (ಪ್ರಕಾಶಿಸುತ್ತದೆ).

॥ ಭಾವಾರ್ಥ ॥

ಯಜ್ಞಕ್ಕೆ ನೇತೃಗಳಾದ ಅಧ್ವರ್ಯುಗಳಿಂದ ಆಧವನರೂಪವಾದ ಸಂಸ್ಕೃತಿಯನ್ನು ಹೊಂದಿದುದೂ, ಹಿಂಡುವ ಸಾಧನಗಳಾದ ಗ್ರಾವಗಳಿಂದ ಹಿಂಡಲ್ಪಟ್ಟುದೂ ಮೇಷದ ಬಾಲಗಳಿಂದ ಎಂದರೆ ಸಶಾಪವಿತ್ರಸಂಜ್ಞಕವಾದ ಪಾತ್ರೆಯಲ್ಲಿರುವ ಊರ್ಣೆಯಿಂದ ಶೋಧಿತವಾದುದೂ ಆದ ಸೋಮರಸವು ನದಿಯ ಉದಕದಿಂದ ತೊಳೆಯಲ್ಪಟ್ಟ ಅಶ್ವದಂತೆ ಶುದ್ಧವಾಗಿ ಪ್ರಕಾಶಿಸುತ್ತದೆ.

## English Translation

Washed by the priests, effused by the stones, purified by the woollen filter, like a horse cleansed in a stream.

॥ ಸಂಹಿತಾಪಾಠಃ ॥

ತಂ ತೇ ಯವಂ ಯಥಾ ಗೋಭಿಃ ಸ್ವಾದುಮಕರ್ಮ ಶ್ರೀಣಂತಃ ।
ಇಂದ್ರ ತ್ವಾಸ್ಮಿನ್ತ್ಸಧಮಾದೇ ॥ ೩ ॥

॥ ಪದಪಾಠಃ ॥

ತಂ । ತೇ । ಯವಂ । ಯಥಾ । ಗೋಭಿಃ । ಸ್ವಾದುಂ । ಅಕರ್ಮ । ಶ್ರೀಣಂತಃ ।
ಇಂದ್ರ । ತ್ವಾ । ಅಸ್ಮಿನ್ । ಸಧಮಾದೇ ॥ ೩ ॥

। ಸಾಯಣಭಾಷ್ಯಂ ।

ತಂ ಪೂರ್ವೋಕ್ತಗುಣಂ ಸೋಮಂ ಹೇ ಇಂದ್ರ ತೇ ತ್ವದರ್ಥಂ ಯವಂ ಯಥಾ ಯವಮಯಂ ಸವನೀಯಪುರೋಡಾಶಮಿವ ಗೋಭಿರ್ಗವಿ ಭವೈಃ ಕ್ಷೀರಾದಿಭಿಃ ಶ್ರಯಣದ್ರವ್ಯೈಃ ಶ್ರೀಣಂತೋ ಮಿಶ್ರೀಕುರ್ವಂತಃ ಸ್ವಾದುಂ ರಸತ್ವೇನ ಸ್ವಾದನೀಯಮಕರ್ಮ । ಅಕಾರ್ಷ್ಮ ॥ ಕರೋತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ ॥ ಯಸ್ಮಾದೇವಂ ತಸ್ಮಾತ್ ಹೇ ಇಂದ್ರ ತ್ವಾ ತ್ವಾಂ ತಾದೃಶಂ ಸೋಮಂ ಪಾತುಮಸ್ಮಿನ್ವರ್ತಮಾನೇ ಸಧಮಾದೇ ಸಹಮದನೇ ಯಜ್ಞೇ ಆಹ್ವಯಾಮೀತಿ ಶೇಷಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತಂ—ಹಿಂದೆ ವರ್ಣಿತವಾದ ಸೋಮರಸವನ್ನು । ತೇ—ನಿನಗರ್ಪಿಸುವುದಕ್ಕಾಗಿ । ಯವಂ ಯಥಾ—ಯವಮಿಶ್ರಿತವಾದ ಪುರೋಡಾಶದಂತೆ । ಗೋಭಿಃ—ಗೋವಿಕಾರವಾದ ಕ್ಷೀರಾದಿಗಳೊಂದಿಗೆ । ಶ್ರೀಣಂತಃ—ಮಿಶ್ರಮಾಡಿ । ಸ್ವಾದುಂ—ಮಧುರವಾದ ರಸವಾಗಿರುವಂತೆ । ಅಕರ್ಮ—ಮಾಡಿದ್ದೇವೆ । ಇಂದ್ರ—ಎಲೈ ಇಂದ್ರನೇ । ತ್ವಾ—ನಿನ್ನನ್ನು । ಅಸ್ಮಿನ್—ಈ ಯಜ್ಞದಲ್ಲಿ ಸೋಮಪಾನವನ್ನು ಮಾಡಲು । ಸಧಮಾದೇ—ಈ ಯಜ್ಞದಲ್ಲಿ ನಿನ್ನನ್ನು ಕರೆಯುತ್ತೇನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂದೆಲ್ಲಾ ವರ್ಣಿತವಾದ ಸೋಮರಸವನ್ನು ನಿನಗರ್ಪಿಸುವುದಕ್ಕಾಗಿ ಯವಮಿಶ್ರಿತವಾದ ಪುರೋಡಾಶದಂತೆ ಗೋವಿಕಾರವಾದ ಕ್ಷೀರಾದಿಗಳೊಂದಿಗೆ ಮಿಶ್ರಮಾಡಿ ಮಧುರವಾಗಿರುವ ರಸವಾಗಿರುವಂತೆ ಮಾಡಿದ್ದೇವೆ. ಎಲೈ ಇಂದ್ರನೇ, ನಿನ್ನನ್ನು ಈ ಯಜ್ಞದಲ್ಲಿ ಸೋಮಪಾನವನ್ನು ಮಾಡಲು ಕರೆಯುತ್ತೇನೆ.

## English Translation

We have made it sweet for you as the barley-cake, mixing it with milk, and therefore, Indra, (I invoke) you to this social rite.

॥ ಸಂಹಿತಾಪಾಠಃ ॥

ಇಂದ್ರ ಇತ್ಸೋಮಪಾ ಏಕ ಇಂದ್ರಃ ಸುತಪಾ ವಿಶ್ವಾಯುಃ ।
ಅಂತರ್ದೇವಾನ್ಮರ್ತ್ಯಾಂಶ್ಚ ॥ ೪ ॥

॥ ಪದಪಾಠಃ ॥

ಇಂದ್ರಃ । ಇತ್ । ಸೋಮಽಪಾಃ । ಏಕಃ । ಇಂದ್ರಃ । ಸುತಽಪಾಃ । ವಿಶ್ವಽಆಯುಃ ।
ಅಂತಃ । ದೇವಾನ್ । ಮರ್ತ್ಯಾನ್ । ಚ ॥ ೪ ॥

। ಸಾಯಣಭಾಷ್ಯಂ ।

ಮಹಾವ್ರತೇ ನಿಷ್ಕೇವಲ್ಯೇ ಗಾಯತ್ರತೃಚಾಶೀತಾವಿಂದ್ರ ಇತ್ಸೋಮಪಾ ಇತ್ಯೇತದಾದಿಸೂಕ್ತಶೇಷಃ ಶಂಸನೀಯಃ । ಅಂತ್ಯಾಸ್ತಿಸ್ರೋ ವರ್ಜಯಿತ್ವಾ ತತ್ರಾಪಿ ಸ್ವಾದವ ಇತ್ಯೇತಾಂ ಪರಿತ್ಯಜ್ಯ ತತ್ರ ಸ್ಥಾನೇ ನ ಹ್ಯನ್ಯಂ ಬಳಾಕರಮಿತ್ಯೇತಾಮಾವಪೇತ್ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ಇಂದ್ರ ಇತ್ಸೋಮಪಾ ಏಕ ಇತ್ಯೇತತ್ಪ್ರಭೃತೀನಾಂ ತಿಸ್ರ ಉತ್ತಮಾ ಉದ್ಧರತಿ । ತಾಸಾಂ ಸ್ವಾದವಃ ಸೋಮಾ ಆ ಯಾಹೀತ್ಯೇತಾಮುದ್ಧೃತ್ಯ ನ ಹ್ಯನ್ಯಂ ಬಳಾಕರಮಿತ್ಯೇತಾಂ ಪ್ರತ್ಯವದಧಾತಿ । ಐ. ಆ. ೫-೨-೩ । ಇತಿ ॥ ಪಂಚಮೇಽಹನಿ ಮರುತ್ವತೀಯ ಇಂದ್ರ ಇದಿತ್ಯನುಚರಸ್ತೃಚಃ । ಸೂತ್ರ್ಯತೇ ಹಿ । ಇಂದ್ರ ಇತ್ಸೋಮಪಾ ಏಕ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ । ಆ. ೭-೧೨ । ಇತಿ ॥

ಇಂದ್ರ ಇದಿಂದ್ರ ಏಕ ಏವ ದೇವಾನ್ ಮರ್ತ್ಯಾನ್ ಮನುಷ್ಯಾಂಶ್ಚಾಂತರ್ಮಧ್ಯೇ ದೇವೇಷು ಚ ಮಧ್ಯೇ ಸೋಮಪಾಃ ಕೃತ್ಸ್ನಸ್ಯ ಸೋಮಸ್ಯ ಪಾತಾ । ನಾನ್ಯೇ । ತೇ ಹ್ಯೇಕದೇಶಭಾಜಃ । ಅತ ಏವ ಸುತಪಾಃ ಸುತಸ್ಯಾಭಿಷುತಸ್ಯಾಸ್ಮದೀಯಸ್ಯ ಸೋಮಸ್ಯ ಕಾರ್ತ್ಸ್ನ್ಯೇನ ಪಾತಾ । ಇಂದ್ರ ಏಕ ಏವ ವಿಶ್ವಾಯುಃ । ಸ ಚೇಂದ್ರಃ ಸರ್ವಾನ್ನೋ ಭವತಿ । ಧಾನಾಕರಂಭಾದಿಹವೀಂಷಿ ಸವನೇಷ್ವಿಂದ್ರಾಯೈವ ಹೂಯಂತೇ ತದಭಿಪ್ರಾಯೇಣೇದಮುಚ್ಯತೇ । ಅತ ಏವಂವಿಧ ಇಂದ್ರೋಽಸ್ಮದೀಯಂ ಹವಿಃ ಸ್ವೀಕರೋತ್ವಿತ್ಯರ್ಥಃ ॥

। ಪ್ರತಿಪದಾರ್ಥ ।

ದೇವಾನ್—ದೇವತೆಗಳ (ಮತ್ತು) । ಮರ್ತ್ಯಾನ್ ಚ—ಮಾನವರ । ಅಂತಃ—ಮಧ್ಯದಲ್ಲೆಲ್ಲಾ । ಇಂದ್ರಃಇತ್—ಇಂದ್ರನೇ । ಏಕಃ—ಅದ್ವಿತೀಯನಾದ (ಒಬ್ಬನೇ) । ಸೋಮಪಾಃ—ಸೋಮವನ್ನು ಪಾನಮಾಡು

ವವನಾಗಿದ್ದಾನೆ । ಸುತಪಾಃ—ಹಿಂಡಿರುವ ಸೋಮವನ್ನು ಪಾನಮಾಡತಕ್ಕ । ಇಂದ್ರಃ—ಇಂದ್ರನೊಬ್ಬನೇ । ವಿಶ್ವಾಯುಃ—ಸಮಸ್ತವಾದ ಅನ್ನವನ್ನೂ ಹೊಂದಿದವನಾಗಿದ್ದಾನೆ.

॥ ಭಾವಾರ್ಥ ॥

ಸಕಲ ದೇವಮಾನವಾದಿಗಳ ಮಧ್ಯದಲ್ಲಿಲ್ಲಾ ಇಂದ್ರನಂತೆ ಸೋಮಪಾನವನ್ನು ಮಾಡತಕ್ಕವರು ಬೇರೊಬ್ಬರಿಲ್ಲ. ಹೀಗೆ ಅದ್ವಿತೀಯನಾಗಿ ಹಿಂಡಿರುವ ಸೋಮವನ್ನು ಪಾನಮಾಡತಕ್ಕ ಇಂದ್ರನೊಬ್ಬನೇ ಸಮಸ್ತವಾದ ಅನ್ನಕ್ಕೂ ಅಧಿಪತಿಯಾಗಿದ್ದಾನೆ.

## English Translation

Indra verily is the chief drinker of the Soma among gods and men, the drinker of the effused libation, the acceptor of all kinds of offerings.

॥ ವಿಶೇಷವಿಷಯಗಳು ॥

ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ಗಾಯತ್ರೀ ಛಂದಸ್ಸಿನ ಋಕ್ಕುಗಳಿಗಾಗಿ ಇಾದ್ರ ಇತ್ಸೋಮಪಾಃ ಎಂದು ಪ್ರಾರಂಭವಾಗುವ ಈ ಋಕ್ಕಿನಿಂದ ಈ ಸೂಕ್ತದ ಕೊನೆಯವರೆಗೂ ಇರುವ ಋಕ್ಕುಗಳನ್ನು ಪಠಿಸಬೇಕು. ಆದರೆ ಕೊನೆಯ ಮೂರು ಋಕ್ಕುಗಳನ್ನು (ಎಂದರೆ ಈ ಸೂಕ್ತದ ೧೦-೧೨ ನೇ ಋಕ್ಕುಗಳನ್ನು ಬಿಟ್ಟುಬಿಡಬೇಕು. ಹಾಗೆಯೇ ಸ್ವಾದವಃ ಎಂಬ ೨೯ ನೇ ಋಕ್ಕನ್ನು ಬಿಟ್ಟು ಅದರ ಸ್ಥಾನದಲ್ಲಿ ನ ಹ್ಯನ್ಯಂ ಬಳಾ-ಕರಂ ಎಂಬ ಋಕ್ಕನ್ನು (ಋ. ಸಂ. ೮-೮೦-೧) ಆವಾಪಾರ್ಥವಾಗಿ ಪಠಿಸಬೇಕು. ಈ ವಿಷಯವು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—ಇಂದ್ರ ಇತ್ಸೋಮಪಾ ಏಕ ಇತ್ಯೇತತ್ಪ್ರಭೃತೀನಾಂ ತಿಸ್ರ ಉತ್ತಮಾ ಉದ್ಧರತಿ । ತಾಸಾಂ ಸ್ವಾದವಃ ಸೋಮಾ ಆ ಯಾಹೀತ್ಯೇತಾಮುದ್ಧೃತ್ಯ ನ ಹ್ಯನ್ಯಂ ಬಳಾಕರಮಿತ್ಯೇತಾಂ ಪ್ರತ್ಯ-ವದಧಾತಿ ಎಂಬ ವಾಕ್ಯದಿಂದ (ಐ. ಆ. ೫-೨-೩) ನಿರ್ದಿಷ್ಟವಾಗಿರುವುದು. ಮತ್ತು ಯಜ್ಞದ ಐದನೆಯ ದಿವಸದಲ್ಲಿ ಇಂದ್ರ ಇತ್ ಎಂದು ಪ್ರಾರಂಭವಾಗುವ ಮೂರು ಋಕ್ಕುಗಳನ್ನೂ (ಈ ಸೂಕ್ತದ ೪-೬ ಋಕ್ಕುಗಳನ್ನು) ಅನುಚರ ತೃಚವನ್ನಾಗಿ ಪಠಿಸಬೇಕೆಂದು ಅಶ್ವಲಾಯನ ಶ್ರೌತಸೂತ್ರದ—ಇಂದ್ರ ಇತ್ಸೋಮಪಾ ಏಕ ಇತಿ ಮರುತ್ವತೀ-ಯಸ್ಯ ಪ್ರತಿಪದನುಚರೌ ಎಂಬ ಸೂತ್ರದಿಂದ (ಆ. ೬-೧೨) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ನ ಯಂ ಶುಕ್ರೋ ನ ದುರಾಶೀರ್ನ ತೃಪ್ರಾ ಉರುವ್ಯಚಸಂ ।
ಅಪಸ್ಪೃಣ್ವತೇ ಸುಹಾರ್ದಂ ॥ ೫ ॥

॥ ಪದಪಾಠಃ ॥

ನ । ಯಂ । ಶುಕ್ರಃ । ನ । ದುಃಽಆಶೀಃ । ನ । ತೃಪ್ರಾಃ । ಉರುಽವ್ಯಚಸಂ ।
ಅಪಽಸ್ಪೃಣ್ವತೇ । ಸುಽಹಾರ್ದಂ ॥ ೫ ॥

॥ ಸಾಯಣಭಾಷ್ಯಂ ॥

ಉರುವ್ಯಚಸಂ ವಿಸ್ತೀರ್ಣವ್ಯಾಪನಂ ಸುಹಾರ್ದಂ ಸುಹೃದಯಂ ಯಮಿಂದ್ರಂ ಶುಕ್ರೋ ರಸಾಧಿಕ್ಯೇನ ದೀಪ್ತಃ ಸೋಮೋ ನಾಪಸ್ಪೃಣುತೇ ॥ ಸ್ಪೃ ಪ್ರೀತಿಬಲಯೋರಪೋಪಸರ್ಗವಶಾತ್ ಪ್ರೀತ್ಯಭಾವೇ ವರ್ತತೇ ॥ ನಞಾ ಚ ಪ್ರೀತ್ಯಭಾವೋ ನಿವಾರ್ಯತೇ । ನ ಪ್ರೀಣಯತೀತಿ ನ ಅಪಿ ತು ಪ್ರೀಣಯತ್ಯೇವ । ತಥಾ ದುರಾಶೀರ್ದುಃಖೇನ ನಿಷ್ಪಾದ್ಯಾಶೀರಾಶ್ರಯಣದ್ರವ್ಯಂ ಯಸ್ಯ ತಾರ್ತೀಯಸವನಿಕಶ್ಚ ಸೋಮಸ್ಸ ಸೋಽಪಿ ಯಮಿಂದ್ರಂ ನಾಪಸ್ಪೃಣುತೇ ಪ್ರೀಣಯತ್ಯೇವ । ತೃಪ್ರಾಸ್ತರ್ಪಕಾ ಅನ್ಯೇ ಚರುಪುರೋಡಾಶಾದಯಶ್ಚ ಯಮಿಂದ್ರಂ ನಾಪಸ್ಪೃಣ್ವತೇ ನ ನ ಪ್ರೀಣಯಂತಿ ಅಪಿ ತು ಪ್ರೀಣಯಂತ್ಯೇವ ತಮಿಂದ್ರಂ ಸ್ತುಮ ಇತಿ ಶೇಷಃ । ಯದ್ವಾ । ಅಪೇತ್ಯುಪಸರ್ಗೋ ಧಾತ್ವರ್ಥಾನುವಾದಕಃ । ಯಮಿಂದ್ರಂ ಶುಕ್ರಾದಯೋ ನಾಪಸ್ಪೃಣ್ವತೇ ನ ಪ್ರೀಣಯಂತಿ । ಉರುವ್ಯಚಸಮಿತಿ ಹೇತುಗರ್ಭವಿಶೇಷಣಂ । ಯತೋಽಯಮಿಂದ್ರ ಉರುವ್ಯಚಾ ವಿಸ್ತೀರ್ಣವ್ಯಾಪ್ತಿಃ ಅತಃ ಕಾರಣಾದಪರ್ಯಾಪ್ತಾಃ ಸಂತಃ ಶುಕ್ರಾದಯಃ ಪ್ರೀಣಯಿತುಂ ನ ಶಕ್ನುವಂತೀತಿ ಭಾವಃ ॥

॥ ಪ್ರತಿಪದಾರ್ಥ ॥

**ಉರುವ್ಯಚಸಂ**—ವಿಸ್ತೃತವಾಗಿ ವ್ಯಾಪಿಸಿರುವವನೂ । **ಸುಹಾರ್ದಂ**—ಪ್ರೀತಿಯುತವಾದ ಹೃದಯವುಳ್ಳವನೂ ಆದ । **ಯಂ**—ಯಾವ ಇಂದ್ರನನ್ನು । **ಶುಕ್ರಃ**—ಪ್ರಕಾಶಮಾನವಾದ ಸೋಮವು । **ನ (ಅಪಸ್ಪೃಣತೇ)**—ತೃಪ್ತಿಪಡಿಸದೇ ಇರುವುದಿಲ್ಲವೋ । **ದುರಾಶೀಃ**—ಶ್ರಮದಿಂದ ಆಶಿರಗಳೊಡನೆ ಮಿಶ್ರಿತವಾಗಿ ತೃತೀಯಸವನದಲ್ಲಿ ಅರ್ಪಿತವಾಗುವ ಸೋಮವು । **ನ (ಅಪಸ್ಪೃಣ್ವತೇ)**—ಯಾರನ್ನು ತೃಪ್ತಿಪಡಿಸದೇ ಇರುವುದಿಲ್ಲವೋ । **ತೃಪ್ರಾಃ**—ಇತರ ಚರುಪುರೋಡಾಶಾದಿಗಳೂ । **ನ ಅಪಸ್ಪೃಣ್ವತೇ**—ಯಾರನ್ನು ತೃಪ್ತಿಪಡಿಸದೇ ಇರುವುದಿಲ್ಲವೋ (ಅಂತಹ ಇಂದ್ರನನ್ನು ಸ್ತುತಿಸುತ್ತೇವೆ).

॥ ಭಾವಾರ್ಥ ॥

ಅತ್ಯಂತ ವಿಸ್ತೃತವಾಗಿ ವ್ಯಾಪಿಸಿರುವವನೂ, ಪ್ರೀತಿಯುತವಾದ ಹೃದಯವುಳ್ಳವನೂ ಆದ ಯಾವ ಇಂದ್ರನನ್ನು ಪ್ರಕಾಶಮಾನವಾದುದೂ, ಆಶಿರದ್ರವ್ಯಗಳೊಂದಿಗೆ ಪ್ರಯತ್ನಪೂರ್ವಕವಾಗಿ ಮಿಶ್ರಿತವಾದುದೂ ಆದ ಸವನತ್ರಯಕಾಲಗಳಲ್ಲೂ ಅರ್ಪಿತವಾಗುವ ಸೋಮವು ಖಂಡಿತವಾಗಿಯೂ ತೃಪ್ತಿಗೊಳಿಸುವುದೋ ಮತ್ತು ಯಾರನ್ನು ಪುರೋಡಾಶಾದಿಗಳು ಖಂಡಿತ ತೃಪ್ತಿಗೊಳಿಸುವುವೋ ಅಂತಹ ಇಂದ್ರನನ್ನು ಸ್ತುತಿಸುವೆವು

## English Translation

(We praise him) a universal kind-hearted (friend), whom the pure Soma the mixture (of it) made with difficulty, or other satisfying (offerings) do not displease.

॥ ಸಂಹಿತಾಪಾಠಃ ॥

**ಗೋಭಿರ್ಯದೀಮನ್ಯೇ ಅಸ್ಮನ್ಮೃಗಂ ನ ವ್ರಾ ಮೃಗಯಂತೇ ।**

ಅಭಿತ್ಸರಂತಿ ಧೇನುಭಿಃ ॥ ೬ ॥

॥ ಪದಪಾಠಃ ॥

ಗೋಭಿಃ । ಯತ್ । ಈಂ । ಅನ್ಯೇ । ಅಸ್ಮತ್ । ಮೃಗಂ । ನ । ವ್ರಾಃ । ಮೃಗಯಂತೇ ।

ಅಭಿऽತ್ಸರಂತಿ । ಧೇನುऽಭಿಃ ॥ ೬ ॥

॥ ಸಾಯಣಭಾಷ್ಯಂ ॥

ಯದ್ಯೇऽಸ್ಮದಸ್ಮತ್ತೋऽನ್ಯೇ ಋತ್ವಿಗ್ಯಜಮಾನಾ ಈಮೇನಮಿಂದ್ರಂ ಗೋಭಿರ್ಗವಿ ಭವೈಃ ಕ್ಷೀರಾದಿಭಿಃ ಸಂಸ್ಕೃತೈಃ ಸೋಮೈಃ ಸಹಿತಾಃ ಸಂತೋ ಮೃಗಯಂತೇ ಅನ್ವಿಷ್ಯಂತೇ । ತತ್ರ ದೃಷ್ಟಾಂತಃ । ವ್ರಾ ವರೀತಾರೋ ಜಾಲಾದಿಭಿರುಪಾಯೈರ್ನಿರುಂಧಾನಾ ವ್ಯಾಧಾ ಮೃಗಂ ನ । ಯಥಾ ಮೃಗಮನ್ವಿಷ್ಯಂತಿ ತದ್ವದನಧಿಕಾರಿಣ ಏವ ಬಲಾದಿಂದ್ರಸ್ಯಾನ್ವೇಷಣೇ ವರ್ತಂತ ಇತ್ಯರ್ಥಃ ॥ ಮೃಗ ಅನ್ವೇಷಣ ಇತಿ ಧಾತುಃ ॥ ಯೇ ಚ ಜನಾ ಧೇನುಭಿಃ । ಧೇನುರಿತಿ ವಾಙ್ನಾಮ । ವಾಗ್ಭಿಃ ಸ್ತುತಿಭಿಶ್ಛಾಭಿತ್ಸರಂತಿ ಅಭಿಮುಖಂ ಕುತ್ಸಿತಂ ಗಚ್ಛಂತಿ । ಸಮ್ಯಕ್ಸ್ತೋತುಂ ನ ಶಕ್ನುವಂತೀತ್ಯರ್ಥಃ ॥ ತ್ಸರ ಛದ್ಮಗತೌ ॥ ತಥಾವಿಧಾ ಜನಾ ಇಂದ್ರಂ ನೋಪಲಭಂತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ವ್ರಾಃ—ಬಲೆಗಳಿಂದ ಕೂಡಿದ ಬೇಟೆಗಾರರು । ಮೃಗಂ ನ—ಜಿಂಕೆಯನ್ನಟ್ಟಿಸಿಕೊಂಡು ಓಡುವಂತೆ । ಅಸ್ಮತ್—ನಮಗೆ ಸೇರಿದ । ಯತ್ ಅನ್ಯೇ—ಯಾವ ಇತರ ಋತ್ವಿಗಾದಿಗಳು । ಈಂ—ಈ ಇಂದ್ರನನ್ನು । ಗೋಭಿಃ—ಕ್ಷೀರಾದಿಗಳೊಡನೆ ಮಿಶ್ರಿತವಾದ ಸೋಮಯುಕ್ತರಾಗಿ । ಮೃಗಯಂತೇ—ಹುಡುಕುವರೋ। (ಯೇ-ಯಾರು) । ಧೇನುಭಿಃ—ಸ್ತುತಿಗಳೊಡನೆ ಕೂಡಿದವರಾಗಿ । ಅಭಿತ್ಸರಂತಿ—ಇಂದ್ರನನ್ನು ಕುಟಿಲಮಾರ್ಗದಿಂದ ಸಮೀಪಿಸುವರೋ (ಅಂತಹವರು ಇಂದ್ರನ ಅನುಗ್ರಹವನ್ನು ಪಡೆಯಲಾರರು).

॥ ಭಾವಾರ್ಥ ॥

ಬಲೆಗಳಿಂದ ಕೂಡಿದ ಬೇಟೆಗಾರರು ಜಿಂಕೆಯನ್ನಟ್ಟಿಸಿಕೊಂಡು ಓಡುವಂತೆ ನಮಗೆ ಸೇರಿದ ಯಾವ ಇತರ ಋತ್ವಿಗಾದಿಗಳು ಈ ಇಂದ್ರನನ್ನು ಕ್ಷೀರಾದಿಗಳೊಡನೆ ಮಿಶ್ರಿತವಾದ ಸೋಮಯುಕ್ತರಾಗಿ ಹುಡುಕುವರೋ, ಯಾರು ಸ್ತುತಿಯುಕ್ತರಾಗಿ ಈ ಇಂದ್ರನನ್ನು ಕುಟಿಲಮಾರ್ಗದಿಂದ ಸಮೀಪಿಸುವರೋ ಅಂತಹವರು ಈ ಇಂದ್ರನ ಅನುಗ್ರಹವನ್ನು ಪಡೆಯಲಾರರು. ಎಂದರೆ, ಕಠಿನಪ್ರವೃತ್ತಿಯುಳ್ಳವರೂ ವಂಚಕರೂ ಎಷ್ಟೇ ವಿಧವಾಗಿ ಪೂಜಿಸಿದರೂ ಇಂದ್ರನು ತೃಪ್ತನಾಗುವುದಿಲ್ಲ.

## English translation

Whom others pursue with offerings of milk and curds as hunters chase a deer (with net and snares), and harass with (inappropriate) praises.

|| ವಿಶೇಷವಿಷಯಗಳು ||

ಮೃಗಂ ನ ವ್ರಾ ಮೃಗಯಂತೇ—ಈ ವಾಕ್ಯವನ್ನು ವಿವರಿಸುತ್ತಾ ಯಾಸ್ಕರು—ಮೃಗಮಿವ ವ್ರಾತ್ಯಾಃ ಪ್ರೈಷಾಃ (ನಿ. ೫.೩) ಎಂದು ನಿರ್ವಚನವನ್ನು ಹೇಳಿದಾರೆ. ಅದಕ್ಕೆ ದುರ್ಗಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ—ಯಥಾ ಲುಬ್ಧಕಾಃ ಮೃಗಂ ವನೇ ಮಾರ್ಗಯಂತೇ ತಥಾ ಹೇ ಇಂದ್ರ ತ್ವಾಂ ಸ್ತೋತಾರೋ ಭಕ್ತ್ಯತಿರೇಕಾತ್ ಹವಿರರ್ಪಣಾಯ ಮಾರ್ಗಯಂತೇ | ಕಾಡಿನಲ್ಲಿ ಬೇಟೆಗಾರರು ಮೃಗವನ್ನು ಹುಡುಕುವಂತೆ ಸ್ತೋತೃಗಳು ಇಂದ್ರನಿಗೆ ಹವಿರಾದಿದ್ರವ್ಯಗಳನ್ನು ಅರ್ಪಿಸುವುದಕ್ಕಾಗಿ ಭಕ್ತ್ಯತಿಶಯದಿಂದ ಇಂದ್ರನನ್ನು ಹುಡುಕುತ್ತಾರೆ ಎಂದಭಿಪ್ರಾಯವು.

। ಸಂಹಿತಾಪಾಠಃ ।

ತ್ರಯ ಇಂದ್ರಸ್ಯ ಸೋಮಾಃ ಸುತಾಸಃ ಸಂತು ದೇವಸ್ಯ ।

ಸ್ವೇ ಕ್ಷಯೇ ಸುತಪಾವ್ನಃ ॥ ೭ ॥

। ಪದಪಾಠಃ ।

ತ್ರಯಃ । ಇಂದ್ರಸ್ಯ । ಸೋಮಾಃ । ಸುತಾಸಃ । ಸಂತು । ದೇವಸ್ಯ ।

ಸ್ವೇ । ಕ್ಷಯೇ । ಸುತಽಪಾವ್ನಃ ॥ ೭ ॥

। ಸಾಯಣಭಾಷ್ಯಂ ।

ದಶರಾತ್ರೇ ತೃತೀಯೇಽಹನಿ ಮರುತ್ವತೀಯಸ್ಯ ತ್ರಯ ಇಂದ್ರಸ್ಯೇತಿ ತೃಚೋಽನುಚರಃ | ಸೂತ್ರ್ಯತೇ ಹಿ | ತಂ ತಮಿದ್ರಾಧಸೇ ಮಹೇ ತ್ರಯ ಇಂದ್ರಸ್ಯ ಸೋಮಾ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ | ಆ. ೭-೧೦ | ಇತಿ ||

ದೇವಸ್ಯ ದಾನಾದಿಗುಣಯುಕ್ತಸ್ಯೇಂದ್ರಸ್ಯ ಪಾನಾರ್ಥಂ ತ್ರಯಃ ಸವನತ್ರಯರೂಪೇಣ ತ್ರಿಧಾ ವರ್ತಮಾನಾಃ ಸ್ವೇ ಕ್ಷಯೇ ಸ್ವಕೀಯೆ ಯಜ್ಞಗೃಹೇ ಸುತಾಸೋಽಭಿಸುತಾಃ ಸಂತು | ಭವಂತು | ಸುತಪಾವ್ನಃ | ಹೇತುಗರ್ಭವಿಶೇಷಣಮೇತತ್ | ಯಸ್ಮಾದಯಮಿಂದ್ರೋಽಭಿಷುತಸ್ಯೈವ ಸೋಮಸ್ಯ ಪಾತಾ ತಸ್ಮಾದಭಿಷುತಾಃ ಸಂತ್ವಿತ್ಯರ್ಥಃ ||

। ಪ್ರತಿಪದಾರ್ಥ ।

ಸುತಪಾವ್ನಃ—ಯಾವ ಕಾರಣದಿಂದ ಇಂದ್ರನು ಹಿಂಡಿದ ಸೋಮವನ್ನು ಪಾನಮಾಡುವನೋ ಅ ನಿಮಿತ್ತವಾಗಿಯೇ | ದೇವಸ್ಯ—ದೇವತಾತ್ಮನಾದ | ಇಂದ್ರಸ್ಯ—ಇಂದ್ರನ ಪಾನಾರ್ಥವಾಗಿ | ತ್ರಯಃ ಸೋಮಾಃ—ಸವನತ್ರಯಕಾಲದಲ್ಲೂ ಬೇರೆ ಬೇರೆ ರೂಪದಲ್ಲಿರುವ ಮೂರು ವಿಧವಾದ ಸೋಮರಸಗಳು | ಸ್ವೇ ಕ್ಷಯೇ—ತನ್ನ ಯಜ್ಞಗೃಹದಲ್ಲಿಯೇ | ಸುತಾಸಃ—ಹಿಂಡಲ್ಪಟ್ಟು | ಸಂತು—ಸಿದ್ಧವಾಗಿರಲಿ.

॥ ಭಾವಾರ್ಥ ॥

ಯಾವ ಕಾರಣದಿಂದ ಇಂದ್ರನು ಹಿಂಡಿದ ಸೋಮವನ್ನೇ ಪಾನಮಾಡುವನೋ ಆ ನಿಮಿತ್ತವಾಗಿಯೇ ದೇವತಾತ್ಮನಾದ ಇಂದ್ರನ ಪಾನಾರ್ಥವಾಗಿ ಸವನತ್ರಯಕಾಲದಲ್ಲೂ ಬೇರೆ ಬೇರೆ ರೂಪದಲ್ಲಿರುವ ಮೂರು ವಿಧವಾದ ಸೋಮರಸಗಳೂ ತನ್ನ ಯಜ್ಞಗೃಹದಲ್ಲಿಯೇ ಹಿಂಡಲ್ಪಟ್ಟು ಸಿದ್ಧವಾಗಲಿ.

## English Translation

May the three libations be effused for the divine Indra in his own dwelling, (for he is) the drinker of the effused juice.

॥ ವಿಶೇಷವಿಷಯಗಳು ॥

ದಶರಾತ್ರವೆಂಬ ಯಾಗದ ಮೂರನೆಯ ದಿವಸ ಮರುತ್ವತೀಯಶಸ್ತ್ರಮಂತ್ರಗಳನ್ನು ಪಠಿಸುವಾಗ ತ್ರಯ ಇಂದ್ರಸ್ಯ ಎಂದು ಪ್ರಾರಂಭವಾಗುವ ಮೂರು ಋಕ್ಕುಗಳನ್ನು (೭-೯ ಋಕ್ಕುಗಳನ್ನು) ಅನುಚರತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— ತದು ತವಿದಾಸ್ರಾಭಸೇ ಮಹೇ ತ್ರಯ ಇಂದ್ರಸ್ಯ ಸೋಮಾ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ ಎಂಬ ಸೂತ್ರದಿಂದ (ಆ. ೭-೧೦) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ತ್ರಯಃ ಕೋಶಾಸಃ ಶ್ಚೋತಂತಿ ತಿಸ್ರಶ್ಚಮ್ವಃ ಸುಪೂರ್ಣಾಃ ।
ಸಮಾನೇ ಅಧಿ ಭಾರ್ಮನ್ ॥ ೮ ॥

॥ ಪದಪಾಠಃ ॥

ತ್ರಯಃ । ಕೋಶಾಸಃ । ಶ್ಚೋತಂತಿ । ತಿಸ್ರಃ । ಚಮ್ವಃ । ಸುऽಪೂರ್ಣಾಃ ।
ಸಮಾನೇ । ಅಧಿ । ಭಾರ್ಮನ್ ॥ ೮ ॥

॥ ಸಾಯಣಭಾಷ್ಯಂ ॥

ತ್ರಯಸ್ತ್ರಿಸಂಖ್ಯಾಕಾಃ ಕೋಶಾಸಃ ಕೋಶಾಃ ಸೋಮಸ್ಯಾಶ್ರಯಭೂತಾ ದ್ರೋಣಕಲಶಪೂತಭೃದಾಧವನೀಯಾಖ್ಯಾಃ ಶ್ಚೋತಂತಿ । ಕ್ಷರಂತಿ । ಇಂದ್ರಾರ್ಥಂ ಸೋಮಂ ಸ್ರಾವಯಂತಿ । ತಿಸ್ರಸ್ತ್ರಿವಿಧಾಃ ಸವನತ್ರಯೇ ವರ್ತಮಾನಾಶ್ಚಮ್ವಶ್ಚಮಸಾಶ್ಚ ಸುಪೂರ್ಣಾ ಇಂದ್ರಯಾಗಾಯ ಸೋಮೈಃ ಸುಪೂರಿತಾ ಅಸನ್ । ಏತತ್ಸರ್ವಂ ಕುತ್ರೇತಿ ಚೇತ್ ಉಚ್ಯತೇ । ಸಮಾನ ಏಕಸ್ಮಿನ್ನೇವ ಭಾರ್ಮನ್ ಭರ್ಮಣಿ ಭರ ಋತ್ವಿಗ್ಭಿರ್ಧ್ರಿಯಮಾಣೇ ಯಜ್ಞೇ । ಅಧಿ ಸಪ್ತಮ್ಯರ್ಥಾನುವಾದೀ ॥

॥ ಪ್ರತಿಪದಾರ್ಥ ॥

ಸಮಾನೇ—ಒಂದೇ ದೇವತೆಯನ್ನುದ್ದೇಶಿಸಿದ । ಭಾರ್ಮನ್ ಅಧಿ—ಯಜ್ಞದಲ್ಲಿ । ತ್ರಯಃ ಕೋಶಾಸಃ—

ಸೋಮರಸಕ್ಕೆ ಆಶ್ರಯಭೂತವಾದ ದ್ರೋಣಕಲಶ, ಪೂತಭೃತ್, ಆಧವನೀಯ ಎಂಬ ಮೂರು ಪಾತ್ರೆಗಳೂ ಸಹ ಶ್ಚೋತಂತಿ—ಸೋಮವನ್ನು ಸುರಿಸುತ್ತವೆ । ತಿಸ್ರಃ—ಸವನತ್ರಯಕಾಲಗಳಲ್ಲೂ ಸಿದ್ಧವಾಗಿರುವ । ಚಮ್ವಃ—ಚಮಸ ಪಾತ್ರೆಗಳೂ । ಸುಪೂರ್ಣಾಃ—ಸೋಮರಸಗಳಿಂದ ತುಂಬಿವೆ.

। ಭಾವಾರ್ಥ ।

ಒಂದೇ ದೇವತೆಯನ್ನುದ್ದೇಶಿಸಿ ಯಜ್ಞದಲ್ಲಿ ಸೋಮರಸಕ್ಕೆ ಆಶ್ರಯಭೂತವಾದ ದ್ರೋಣಕಲಶ, ಪೂತಭೃತ್ ಆಧವನೀಯ ಎಂಬ ಮೂರು ಪಾತ್ರೆಗಳೂ ಸಹ ಸೋಮರಸವನ್ನು ಸುರಿಸುತ್ತವೆ. ಸವನತ್ರಯಕಾಲದಲ್ಲೂ ಸಿದ್ಧವಾಗಿರುವ ಚಮಸಪಾತ್ರೆಗಳೂ ಸೋಮರಸಗಳಿಂದ ತುಂಬಿವೆ.

**English Translation**

Three purifying vessels prop (the Soma), three ladles are well filled (for the libation), the whole is furnished for the common sacrifice.

। ಸಂಹಿತಾಪಾಠಃ ।

ಶುಚಿರಸಿ ಪುರುನಿಷ್ಠಾಃ ಕ್ಷೀರೈರ್ಮಧ್ಯತ ಆಶೀರ್ತಃ ।
ದಧ್ನಾ ಮಂದಿಷ್ಠಃ ಶೂರಸ್ಯ ॥ ೯ ॥

। ಪದಪಾಠಃ ।

ಶುಚಿಃ । ಅಸಿ । ಪುರುನಿಃऽಸ್ಥಾಃ । ಕ್ಷೀರೈಃ । ಮಧ್ಯತಃ । ಆऽಶೀರ್ತಃ ।
ದಧ್ನಾ । ಮಂದಿಷ್ಠಃ । ಶೂರಸ್ಯ ॥ ೯ ॥

। ಸಾಯಣಭಾಷ್ಯಂ ।

ಹೇ ಸೋಮ ತ್ವಂ ಶುಚಿರಸಿ । ದಶಾಪವಿತ್ರೇಣ ಶೋಧಿತೋ ಭವಸಿ । ಸ ತ್ವಂ ಪುರುನಿಷ್ಠಾಃ ಪುರುಷು ಬಹುಷು ಪಾತ್ರೇಷು ಗ್ರಹಚಮಸಾದಿಷು ನಿಃಶೇಷೇಣ ಸ್ಥಾತಾ ಮಧ್ಯತೋ ಮಧ್ಯೇ ಮೈತ್ರಾವರುಣಗ್ರಹಾದೌ ಕ್ಷೀರೈಃ ಪಯಃಪ್ರಭೃತಿಭಿಃ ಶ್ರಯಣದ್ರವ್ಯೈರಾಶೀರ್ತೋ ಮಿಶ್ರಣೇನ ಸಂಸ್ಕೃತಃ । ತೃತೀಯೇ ಸವನೇ ದಧ್ನಾ ಚಾಶೀರ್ತಃ । ಏವಂಭೂತಸ್ತ್ವಂ ಶೂರಸ್ಯ ವಿಕ್ರಾಂತಸ್ಯೇಂದ್ರಸ್ಯ ಮಂದಿಷ್ಠೋ ಮಾದಯಿತೃತಮೋ ಭವ ॥

। ಪ್ರತಿಪದಾರ್ಥ ।

(ಎಲೈ ಸೋಮವೇ) ಶುಚಿಃ ಅಸಿ—ನೀನು ದಶಾಪವಿತ್ರದಿಂದ ಶೋಧಿಸಲ್ಪಟ್ಟು ಶುದ್ಧವಾಗಿದ್ದೀಯೆ । ಪುರುನಿಷ್ಠಾಃ—ಅನೇಕ ಪಾತ್ರೆಗಳಲ್ಲಿ ತುಂಬಿಕೊಂಡಿದ್ದೀಯೆ । ಮಧ್ಯತಃ—ಮಧ್ಯಸ್ಥವಾದ ಮೈತ್ರಾವರುಣಗ್ರಹಾದಿಗಳಲ್ಲಿ । ಕ್ಷೀರೈಃ—ಕ್ಷೀರಾದ್ಯಾಶ್ರಯಣೀಯ ದ್ರವ್ಯಗಳಿಂದ । ಆಶೀರ್ತಃ—ಮಿಶ್ರಿತವಾಗಿ ಸಂಸ್ಕೃತವಾಗಿದ್ದೀಯೆ ।

(ತೃತೀಯಸವನಕಾಲದಲ್ಲಿ) । ದಧ್ನಾ—ದಧಿಯಿಂದ ಮಿಶ್ರಿತವಾಗಿದ್ದೀಯೆ (ಇಂತಹ ಆಕರ್ಷಕವಾದ ರೂಪವನ್ನು ಹೊಂದಿರುವ ನೀನು) । ಶೂರಸ್ಯ—ಪರಾಕ್ರಮಿಯಾದ ಇಂದ್ರನಿಗೆ । ಮಂದಿಷ್ಠಃ—ಅತ್ಯತಿಶಯವಾದ ತೃಪ್ತಿಕಾರಕವಾಗಿ ಆಗು.

॥ ಭಾವಾರ್ಥ ॥

ಎಲೈ ಸೋಮವೇ, ನೀನು ದಶಾಪವಿತ್ರದಿಂದ ಶೋಧಿಸಲ್ಪಟ್ಟು ಶುದ್ಧವಾಗಿದ್ದೀಯೆ. ಅನೇಕ ಪಾತ್ರೆಗಳಲ್ಲಿ ತುಂಬಿಕೊಂಡಿದ್ದೀಯೆ. ಮಧ್ಯಸ್ಥವಾದ ಮೈತ್ರಾವರುಣಗ್ರಹಾದಿಗಳಲ್ಲಿ ಕ್ಷೀರಾದ್ಯಾಶ್ರಯಣೀಯದ್ರವ್ಯಗಳಿಂದ ಮಿಶ್ರಿತವಾಗಿ ಸಂಸ್ಕೃತಿಯನ್ನು ಹೊಂದಿದ್ದೀಯೆ. ತೃತೀಯಸವನದಲ್ಲಿ ದಧಿಯಿಂದ ಮಿಶ್ರಿತವಾಗಿದ್ದೀಯೆ. ಇಂತಹ ಆಕರ್ಷಕವಾದ ರೂಪವನ್ನು ಹೊಂದಿರುವ ನೀನು ಪರಾಕ್ರಮಿಯಾದ ಇಂದ್ರನಿಗೆ ಅತ್ಯತಿಶಯವಾದ ತೃಪ್ತಿಕಾರಕವಾಗಿ ಆಗು.

English Translation

You (Soma) are pure, distributed in many vessels, mixed at the mid-day sacrifice with milk, and (at the third sacrifice) with curds, the most exhilarating (beverage) of the hero (Indra).

॥ ಸಂಹಿತಾಪಾಠಃ ॥

ಇಮೇ ತ ಇಂದ್ರ ಸೋಮಾಸ್ತೀವ್ರಾ ಅಸ್ಮೇ ಸುತಾಸಃ ।
ಶುಕ್ರಾ ಆಶಿರಂ ಯಾಚಂತೇ ॥ ೧೦ ॥

॥ ಪದಪಾಠಃ ॥

ಇಮೇ । ತೇ । ಇಂದ್ರ । ಸೋಮಾಃ । ತೀವ್ರಾಃ । ಅಸ್ಮೇ ಇತಿ । ಸುತಾಸಃ ।
ಶುಕ್ರಾಃ । ಆऽಶಿರಂ । ಯಾಚಂತೇ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವದೀಯಾ ಇಮೇ ಸೋಮಾಸ್ತೀವ್ರಾಸ್ತೀವ್ರಮದಾ ಅಸ್ಮೇ ಅಸ್ಮಾಭಿರಧ್ವರ್ಯುಭಿಃ ಸುತಾಸಃ ಅಭಿಷುತಾಃ ಶುಕ್ರಾಃ ಶುದ್ಧಾಃ ಸಂತ ಆಶಿರಂ ಕ್ಷೀರಾದಿಕಂ ಶ್ರಯಣದ್ರವ್ಯಂ ತ್ವಾಂ ಯಾಚಂತೇ । ಪಾಪ್ರೇಣೇಹೇತ್ಯುತ್ತರಸ್ಯಾನ್ವಯಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನಗೆ ಸೇರಿದ । ಇಮೇ ಸೋಮಾಃ—ಈ ಸೋಮರಸಗಳು । ತೀವ್ರಾಃ—ತೀಕ್ಷ್ಣವಾದ ಮದಕಾರಕಗಳಾಗಿಯೂ । ಅಸ್ಮೇ—ನಮ್ಮ ಋತ್ವಿಗಾದಿಗಳಿಂದ। ಸುತಾಸಃ—ಹಿಂಡಲ್ಪಟ್ಟ

ವಾಗಿಯೂ । ಶುಕ್ರಾಃ—ಶುದ್ಧವಾಗಿಯೂ ಇದ್ದು । ಆಶಿರಂ—ಕ್ಷೀರಾದ್ಯಾಶ್ರಯಣದ್ರವ್ಯವನ್ನು । ಯಾಚಂತೇ—ಅಪೇಕ್ಷಿಸುತ್ತವೆ.

। ಭಾವಾರ್ಥ ।

ಎಲೈ ಇಂದ್ರನೇ, ನಿನಗೆ ಸೇರಿದ ಈ ಸೋಮರಸಗಳು ತೀಕ್ಷ್ಣವಾದ ಮದಕಾರಕಗಳಾಗಿಯೂ, ನಮ್ಮ ಋತ್ವಿಗಾದಿಗಳಿಂದ ಹಿಂಡಲ್ಪಟ್ಟವಾಗಿಯೂ, ಶುದ್ಧವಾಗಿಯೂ ಇದ್ದು ನಿನ್ನಿಂದ ಕ್ಷೀರಾದ್ಯಾಶ್ರಯಣದ್ರವ್ಯವನ್ನು ಅಪೇಕ್ಷಿಸುತ್ತವೆ.

**English Translation**

**These sharp and pure Soma libations effused by us for you, solicit you for admixture.**

। ಸಂಹಿತಾಪಾಠಃ ।

ತಾँ ಆಶಿರಂ ಪುರೋಳಾಶಮಿಂದ್ರೇಮಂ ಸೋಮಂ ಶ್ರೀಣೀಹಿ ।
ರೇವಂತಂ ಹಿ ತ್ವಾ ಶೃಣೋಮಿ ॥ ೧೧ ॥

॥ ಪದಪಾಠಃ ॥

ತಾನ್ । ಆಽಶಿರಂ । ಪುರೋಳಾಶಂ । ಇಂದ್ರ । ಇಮಂ । ಸೋಮಂ । ಶ್ರೀಣೀಹಿ ।
ರೇವಂತಂ । ಹಿ । ತ್ವಾ । ಶೃಣೋಮಿ ॥ ೧೧ ॥

। ಸಾಯಣಭಾಷ್ಯಂ ।

ಹೇ ಇಂದ್ರ ತಾನ್ ಪೂರ್ವೋಕ್ತಾನ್ ಸೋಮಾನಾಶಿರಂ ಶ್ರಯಣದ್ರವ್ಯಂ ಚ ಕ್ಷೀರಾದಿಕಂ ಶ್ರೀಣೀಹಿ । ಮಿಶ್ರಯ ಯಾಗಾರ್ಥಂ । ತದನಂತರಂ ಪುರೋಳಾಶಂ ಧಾನಾಕರಂಭಾದಿಲಕ್ಷಣಂ ಸವನೀಯ-ಪುರೋಡಾಶಮಿಮಮಸ್ಮದೀಯಂ ಸೋಮಂ ಚ ಶ್ರೀಣೀಹಿ । ಮಿಶ್ರಯ । ಪ್ರಥಮಂ ಭಕ್ಷಿತಂ ಪುರೋಳಾಶಂ ಪಶ್ಚಾತ್ಪೀತೇನ ಸೋಮೇನ ಸಂಯೋಜಯೇತ್ಯರ್ಥಃ । ತವ ಪ್ರಾರ್ಥನೇ ಕೋ ಹೇತುರಿತಿ ಚೇತ್ । ಹಿ ಯಸ್ಮಾದ್ರೇವಂತಂ ರಯಿಮಂತಂ ॥ ರಯೇರ್ಮತೌ ಬಹುಲಮಿತಿ ಸಂಪ್ರಸಾರಣಂ ॥ ಬಹುಲಧನಂ ತ್ವಾಂ ಶೃಣೋಮಿ ತ್ವಂ ಬಹುಧನ ಇತಿ ಸರ್ವತ್ರ ಶ್ರೂಯತೇ ಅತಃ ಕಾರಣಾತ್ ತ್ವಾಮೇವ ಪ್ರಾರ್ಥಯಾಮಹೇ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ತಾನ್—ಹಿಂದೆ ವರ್ಣಿತವಾದ ಸೋಮರಸಗಳೊಂದಿಗೆ । ಆಶಿರಂ—ಕ್ಷೀರಾದಿ ಆಶಿರದ್ರವ್ಯಗಳನ್ನು । ಶ್ರೀಣೀಹಿ—ಮಿಶ್ರಮಾಡು । ಪುರೋಳಾಶಂ—ಪುರೋಡಾಶಗಳೊಂದಿಗೆ । ಇಮಂ—ನಮ್ಮಿಂದ ಅರ್ಪಿತವಾದ । ಸೋಮಂ—ಸೋಮವನ್ನು ಮಿಶ್ರಮಾಡು (ಪಾನಮಾಡಿ ಅವುಗಳೊಂದಿಗೆ

ಸೇರಿಸು) | ಹಿ—ಏತಕ್ಕೆಂದರೆ | ತ್ವಾ—ನಿನ್ನನ್ನು | ರೇವಂತಂ—ಧನಯುಕ್ತನೆಂದು | ಶೃಣೋಮಿ—ನಾನು ಕೇಳಿದ್ದೇನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂದೆ ವರ್ಣಿತವಾದ ಸೋಮರಸಗಳೊಂದಿಗೆ ಕ್ಷೀರಾದಿ ಶ್ರಯಣೀಯದ್ರವ್ಯಗಳನ್ನು ಸೇರಿಸು. ಹಿಂದೆ ಭಕ್ಷಿತವಾದ ಪುರೋಡಾಶಾದಿಗಳೊಂದಿಗೆ ನಮ್ಮಿಂದ ಅರ್ಪಿತವಾದ ಸೋಮವನ್ನು ಪಾನಮಾಡಿ ಸೇರಿಸು. ಎಲೈ ಇಂದ್ರನೇ, ನೀನೇ ಅತ್ಯಧಿಕವಾದ ಸಂಪದ್ಯುಕ್ತನೆಂದು ನಾನು ಕೇಳಿದ್ದೇನೆ.

## English Translation

Mix, Indra, the milk and Soma, (add) the cakes to this libation. I hear that you are possessed of riches.

॥ ಸಂಹಿತಾಪಾಠಃ ॥

ಹೃತ್ಸು ಪೀತಾಸೋ ಯುಧ್ಯಂತೇ ದುರ್ಮದಾಸೋ ನ ಸುರಾಯಾಂ ।
ಊಧರ್ನ ನಗ್ನಾ ಜರಂತೇ ॥ ೧೨ ॥

॥ ಪದಪಾಠಃ ॥

ಹೃತ್ಽಸು । ಪೀತಾಸಃ । ಯುಧ್ಯಂತೇ । ದುಃಽಮದಾಸಃ । ನ । ಸುರಾಯಾಂ ।
ಊಧಃ । ನ । ನಗ್ನಾಃ । ಜರಂತೇ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪೀತಾಸಸ್ತ್ವಯಾ ಪೀತಾಃ ಸೋಮಾ ಹೃತ್ಸು ಹೃದಯೇಷು ತ್ವದಿಯೇಷು ಯುಧ್ಯಂತೇ । ಪರಸ್ಪರಂ ಸಂಪ್ರಹಾರಂ ಕುರ್ವತೇ । ತತ್ರ ದೃಷ್ಟಾಂತಃ । ಸುರಾಯಾಂ ಪೀತಾಯಾಂ ಜಾಯಮಾನಾ ದುರ್ಮದಾಸೋ ನ । ದುಷ್ಟಮದಾ ಯಥಾ ಪಾತಾರಂ ಮಾದಯಂತಿ ತದ್ವತ್ತ್ವಾಂ ಮಾದಯಿತುಂ ಪರಸ್ಪರಂ ಯುಧ್ಯಂತ ಇತ್ಯರ್ಥಃ । ಅಪಿ ಚ । ಗ್ನಾಶ್ಛಂದಾಂಸಿ । ತಾನಿ ನ ಜಹತೀತಿ ನಗ್ನಾಃ ಸ್ತೋತಾರಃ । ತೇ ಚೋಧರ್ನ ಪಯಸಾ ಪೂರ್ಣಂ ಗವಾದೇರೂಧ ಇವ ಸೋಮಪೂರ್ಣಂ ತ್ವಾಂ ಜರಂತೇ । ಸ್ತುವಂತಿ ॥ ಜರತಿಃ ಸ್ತುತಿಕರ್ಮಾ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಸುರಾಯಾಂ—ಸುರಾಪಾನದಿಂದ ಪ್ರಕಟಿತವಾದ । ದುರ್ಮದಾಸೋ ನ—ಉನ್ಮತ್ತವಾದ ಚಿತ್ತವಿಕಾರಗಳು ಪರಸ್ಪರ ಹೋರಾಡುವಂತೆ । ಪೀತಾಸಃ—ನಿನ್ನಿಂದ ಪಾನಮಾಡಲ್ಪಟ್ಟ ಈ ಸೋಮರಸಗಳು ।

ಹೃತ್ಸು—ನಿನ್ನ ಹೃದಯದಲ್ಲಿ ಪ್ರವೇಶಿಸಿ । ಯುಧ್ಯಂತೇ—ಪರಸ್ಪರ ಹೋರಾಡುತ್ತವೆ । ನಗ್ನಾಃ—ಸ್ತೋತೃಗಳು . ಊಧಃ ನ—ಕ್ಷೀರದಿಂದ ಪುಷ್ಕಲವಾದ ಗೋವಿನ ಕೆಚ್ಚಲನ್ನು ಸ್ತುತಿಸುವಂತೆ । ಜರಂತೇ—ನಿನ್ನನ್ನು ಸ್ತುತಿಸುತ್ತಾರೆ

। ಭಾವಾರ್ಥ ।

ಎಲೈ ಇಂದ್ರನೇ, ಸುರಾಪಾನದಿಂದ ಪ್ರಕಟಿತವಾದ ಉನ್ಮತ್ತವಾದ ಚಿತ್ತವಿಕಾರಗಳು ಪರಸ್ಪರ ಹೋರಾಡುವಂತೆ ನಿನ್ನಿಂದ ಪಾನಮಾಡಲ್ಪಟ್ಟ ಈ ಸೋಮರಸಗಳು ನಿನ್ನ ಹೃದಯದಲ್ಲಿ ಪ್ರವೇಶಿಸಿ ಪರಸ್ಪರ ಹೋರಾಡುತ್ತವೆ. ಕ್ಷೀರದಿಂದ ಪುಷ್ಕಲವಾದ ಗೋವಿನ ಕೆಚ್ಚಲನ್ನು ಸ್ತುತಿಸುವಂತೆ ಸ್ತೋತೃಗಳು ನಿನ್ನನ್ನು ಸ್ತುತಿಸುತ್ತಾರೆ.

## English Translation

The potations (of Soma) contend in your interior (for your exhilaration) like the ebriety caused by wine: your worshippers praise you (filled full of Soma) like the udder (of a cow with milk).

। ಸಂಹಿತಾಪಾಠಃ ।

ರೇವಾँ ಇದ್ರೇವತಃ ಸ್ತೋತಾ ಸ್ಯಾತ್ತ್ವಾವತೋ ಮಘೋನಃ ।
ಪ್ರೇದು ಹರಿವಃ ಶ್ರುತಸ್ಯ ॥ ೧೩ ॥

॥ ಪದಪಾಠಃ ॥

ರೇವಾನ್ । ಇತ್ । ರೇವತಃ । ಸ್ತೋತಾ । ಸ್ಯಾತ್ । ತ್ವಾऽವತಃ । ಮಘೋನಃ ।
ಪ್ರ । ಇತ್ । ಊಂ ಇತಿ । ಹರಿऽವಃ । ಶ್ರುತಸ್ಯ ॥ ೧೩ ॥

। ಸಾಯಣಭಾಷ್ಯಂ ।

ಷಷ್ಠೇऽಹನಿ ಯದಿ ರೈವತಸಾಮಸಾಧ್ಯಂ ಪೃಷ್ಠಸ್ತೋತ್ರಂ ತದಾ ನಿಷ್ಕೇವಲ್ಯೇ ರೇವಾँ ಇದಿತ್ಯನುರೂಪಸ್ತೃಚಃ । ಸೂತ್ರ್ಯತೇ ಹಿ । ರೇವತೀರ್ನಃ ಸಧಮಾದೇ ರೇವಾँ ಇದ್ರೇವತಃ ಸ್ತೋತೇತಿ ಸ್ತೋತ್ರಿಯಾನುರೂಪೌ । ಆ. ೮-೧ । ಇತಿ ॥

ಹೇ ಹರಿವೋ ಹರಿವನ್ ॥ ಮತುವಸೋ ರುರಿತಿ ನಕಾರಸ್ಯ ರುತ್ವಂ ॥ ಹರೀ ಅಶ್ವೌ । ತದ್ವನ್ನಿಂದ್ರ ರೇವತೋ ರಯಿಮತೋ ಬಹುಧನೋಪೇತಸ್ಯ ತವ ಸ್ತೋತಾ ರೇವಾನ್ ಸ್ಯಾತ್ । ರಯಿಮಾನ್ ಭವೇತ್ । ಇಚ್ಛಬ್ದೋऽವಧಾರಣೇ । ಧನವಾನ್ ಭವೇದೇವ ನ ತು ದಾರಿದ್ರ್ಯಂ ಪ್ರಾಪ್ನೋತಿ । ಉಕ್ತಮೇವಾರ್ಥಂ ಕೈಮುತಿಕನ್ಯಾಯೇನ ದೃಢಯತಿ । ತ್ವಾವತಸ್ತ್ವತ್ಸದೃಶಸ್ಯ ॥ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಮಿತಿ ವತುಪ್ ॥ ಮಘೋನೋ ಮಘವತೋ ಧನಾಢ್ಯಸ್ಯ ಶ್ರುತಸ್ಯ

ವಿಶ್ರುತಸ್ಯ ಸರ್ವತ್ರ ಪ್ರಖ್ಯಾತಸ್ಯಾನ್ಯಸ್ಯಾಪಿ ಸ್ತೋತಾ ಪ್ರೇದು । ಸ್ಯಾದಿತ್ಯನುಷಜ್ಯತೇ । ಪ್ರಸ್ಯಾತ್ । ಪ್ರಭವೇದೇವ ನ ತು ನಿಹೀಯತೇ । ಕಿಮು ವಕ್ತವ್ಯಂ ತವ ಸ್ತೋತಾ ಧನವಾನ್ ಭವೇದೇವೇತಿ ॥

। ಪ್ರತಿಪದಾರ್ಥ ।

ಹರಿವಃ— ಅಶ್ವಯುಕ್ತನಾದ ಎಲೈ ಇಂದ್ರನೇ । ರೇವತಃ—ಸಂಪದ್ಯುಕ್ತನಾದ ನಿನ್ನ । ಸ್ತೋತಾ—ಸ್ತುತಿಕರ್ತನೂ ಸಹ । ರೇವಾನ್ ಇತ್—ಧನಯುಕ್ತನಾಗಿಯೇ । ಸ್ಯಾತ್—ಇರಲಿ (ಅಲ್ಲದೇ) ತ್ವಾವತಃ—ನಿನಗೆ ಸಮಾನನೂ । ಮಘೋನಃ - ನಿನ್ನಂತೆಯೇ ಧನವಂತನೂ । ಶ್ರುತಸ್ಯ—ಪ್ರಸಿದ್ಧನೂ ಆದ ಬೇರೊಬ್ಬ ಪುರುಷನಿಗಿಂತಲೂ ! ಪ್ರೇದು—ಮೀರಿದ ಸಂಪತ್ತುಳ್ಳವನಾಗಿರಲಿ.

॥ ಭಾವಾರ್ಥ ॥

ಅಶ್ವಯುಕ್ತನಾದ ಎಲೈ ಇಂದ್ರನೇ, ಸಂಪದ್ಯುಕ್ತನಾದ ನಿನ್ನ ಸ್ತುತಿಕರ್ತನೂ ಸಹ ಧನವಂತನಾಗಿಯೇ ಇರಲಿ. ಅಲ್ಲದೇ ನಿನಗೆ ಸಮಾನನೂ ನಿನ್ನಂತೆಯೇ ಧನವಂತನೂ, ಪ್ರಸಿದ್ಧನೂ ಆದ ಬೇರೊಬ್ಬ ಪುರುಷನಿಗಿಂತಲೂ ಮೀರಿದ ಸಂಪತ್ತುಳ್ಳವನಾಗಿರಲಿ.

## English Translation

May the eulogist of you, who are opulent, be opulent; may he even, lord of steeds, surpass one who is wealthy and renowned, like you.

॥ ವಿಶೇಷವಿಷಯಗಳು ॥

ಯಜ್ಞದ ಆರನೆಯ ದಿವಸ ರೈವತಸಾಮಮಂತ್ರಗಳಿಗನುಗುಣವಾಗಿ ಪೃಷ್ಠಸ್ತೋತ್ರವನ್ನು ಪಠಿಸುವಾಗ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ರೇವಾँ ಇತ್ ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೧-೧೫ ಋಕ್ಕುಗಳನ್ನು) ಅನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ರೇವತೀರ್ನಃ ಸಧಮಾದೇ ರೇವಾँ ಇದ್ರೇವತಃ ಸ್ತೋತೇತಿ ಸ್ತೋತ್ರಿಯಾನುರೂಪೌ ಎಂಬ ಸೂತ್ರದಿಂದ (ಆ· ೮-೧) ವಿವೃತವಾಗಿರುವುದು.

। ಸಂಹಿತಾಪಾಠಃ ।

ಉಕ್ಥಂ ಚನ ಶಸ್ಯಮಾನಮಗೋರರಿರಾ ಚಿಕೇತ ।
ನ ಗಾಯತ್ರಂ ಗೀಯಮಾನಂ ॥ ೧೪ ॥

। ಪದಪಾಠಃ ।

ಉಕ್ಥಂ । ಚನ । ಶಸ್ಯಮಾನಂ । ಅಗೋಃ । ಅರಿಃ । ಆ । ಚಿಕೇತ ।
ನ । ಗಾಯತ್ರಂ । ಗೀಯಮಾನಂ ॥ ೧೪ ॥

॥ ಸಾಯಣಭಾಷ್ಯಂ ॥

ಗಾಯತೇರ್ಗೌ। ಅಗೋರಸ್ತೋತುರರಿಃ ಶತ್ರುರಿಂದ್ರಃ ಶಸ್ಯಮಾನಂ ಹೋತ್ರಾ ಪಠ್ಯಮಾನಮುಕ್ಥಂ ಚನ ಶಸ್ತ್ರಮಪ್ಯಾ ಚಿಕೇತ। ಅಭಿಜಾನಾತಿ ॥ ಕಿತ ಜ್ಞಾನೇ। ಛಾಂದಸೋ ಲಿಟ್ ॥ ನೇತಿ ಸಂಪ್ರತ್ಯರ್ಥೇ। ನ ಸಂಪ್ರತಿ ಪ್ರಸ್ತೋತ್ರಾದಿಭಿರ್ಗೀಯಮಾನಂ ಗಾಯತ್ರಂ ಗಾತವ್ಯಂ ಸಾಮ ಯದ್ವಾ ಗಾಯತ್ರಾಖ್ಯಮಪಿ ಚಿಕೇತೇತ್ಯೇವ। ಅತಃ ಕಾರಣಾದ್ವಯಮಪಿ ತಮಿಂದ್ರಂ ಸ್ತುಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಗೋಃ—ಸ್ತುತಿಕರ್ತನಲ್ಲದವನಿಗೆ। ಅರಿಃ—ಶತ್ರುವಾದ ಇಂದ್ರನು। ಶಸ್ಯಮಾನಂ—ಹೋತ್ರಾದಿಗಳಿಂದ ಪಠಿತವಾಗುವ। ಉಕ್ಥಂ ಚನ—ಶಸ್ತ್ರವನ್ನೂ ಕೂಡ। ಆ ಚಿಕೇತ—ತಿಳಿಯುತ್ತಾನೆ। ನ—ಪ್ರಕೃತದಲ್ಲಿ। ಗೀಯಮಾನಂ—ಪ್ರಸ್ತೋತ್ರಾದಿಗಳಿಂದ ಗಾನರೂಪದಲ್ಲಿ ಪಠಿತವಾಗುವ। ಗಾಯತ್ರಂ—ಗಾಯತ್ರಾದಿ ಸಾಮಗಳನ್ನೂ ಅರಿಯುವನು.

॥ ಭಾವಾರ್ಥ ॥

ಸ್ತುತಿಕರ್ತನಲ್ಲದವನಿಗೆ ಶತ್ರುವಾದ ಇಂದ್ರನು ಹೋತ್ರಾದಿಗಳಿಂದ ಪಠಿತವಾಗುವ ಶಸ್ತ್ರಮಂತ್ರಗಳನ್ನು ಕೂಡ ಅರಿತು ಸ್ವೀಕರಿಸುತ್ತಾನೆ. ಪ್ರಕೃತದಲ್ಲಿ ಪ್ರಸ್ತೋತ್ರಾದಿಗಳಿಂದ ಗಾನರೂಪದಲ್ಲಿ ಪಠಿತವಾಗುವ ಗಾಯತ್ರಾದಿ ಸಾಮಗಳನ್ನೂ ಅರಿಯುವನು.

## English Translation

(Indra), the enemy of the unbeliever, apprehends whatever prayer is being repeated, whatever chaunt is being chaunted.

॥ ಸಂಹಿತಾಪಾಠಃ ॥

ಮಾ ನ ಇಂದ್ರ ಪೀಯತ್ನವೇ ಮಾ ಶರ್ಧತೇ ಪರಾ ದಾಃ।
ಶಿಕ್ಷಾ ಶಚೀವಃ ಶಚೀಭಿಃ ॥ ೧೫ ॥

॥ ಪದಪಾಠಃ ॥

ಮಾ। ನಃ। ಇಂದ್ರ। ಪೀಯತ್ನವೇ। ಮಾ। ಶರ್ಧತೇ। ಪರಾ। ದಾಃ।
ಶಿಕ್ಷ। ಶಚೀಽವಃ। ಶಚೀಭಿಃ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಪೀಯತ್ನವೇ। ಪೀಯತಿರ್ವಧಕರ್ಮಾ। ವಧಶೀಲಾಯ ಹಿಂಸಾಕಾರಿಣೇ ಶತ್ರವೇ ನೋಽಸ್ಮಾನ್ ಪರಾ ದಾಃ। ಮಾ ಪರಿತ್ಯಾಕ್ಷೀಃ। ಮಾ ಚ ಶರ್ಧತೇಽಭಿಭವಿತ್ರೇಽಸ್ಮಾನ್ ಪರಾ

ದಾಃ ॥ ಶೃಧು ಪ್ರಸಹನ ಇತಿ ಧಾತುಃ ॥ ಅಪಿ ಚ ಹೇ ಶಚೀವಃ ಶಕ್ತಿಮನ್ನಿಂದ್ರ ಶಚೀಭಿರಾತ್ಮೀಯೈಃ ಕರ್ಮಭಿಃ ಶಿಕ್ಷ । ಅಸ್ಮಾನನುಶಾಧಿ । ಯದ್ವಾ । ಶಿಕ್ಷತಿರ್ದಾನಕರ್ಮಾ । ಅಭೀಷ್ಟಂ ಧನಮಸ್ಮಭ್ಯಂ ದೇಹಿ । ಯದ್ವಾ । ಶತ್ರೂನ್ಹಂತುಂ ಶಿಕ್ಷ । ಶಕ್ತಾನ್ ಕರ್ತುಮಿಚ್ಛ ॥ ಶಕೇಃ ಸನಂತಸ್ಯ ಸನಿ ಮೀಮಾಮೇತೀಸಾದೇ-ಶೇಽಭ್ಯಾಸಲೋಪೇ ಚ ಕೃತೇ ಲೋಟಿ ರೂಪಮೇತತ್ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಪೀಯತ್ನವೇ—ಹತ್ಯಾಕಾರಿಯಾದ ಶತ್ರುವಿಗೆ । ನಃ—ನಮ್ಮನ್ನು । ಮಾ ಪರಾ ದಾಃ—ಬಿಟ್ಟುಕೊಡಬೇಡ (ಅವನ ವಶವಾಗುವಂತೆ ಮಾಡಬೇಡ) ಶರ್ಧತೇ—ಹಿಂಸಾಕಾರಿಯಾದ ಶತ್ರುವಿಗೂ । ಮಾ—ಬಿಟ್ಟುಕೊಡಬೇಡ ।। ಶಚೀವಃ—ಶಕ್ತಿಯುತನಾದ ಎಲೈ ಇಂದ್ರನೇ । ಶಚೀಭಿಃ—ನಿನ್ನ ಉತ್ತಮವಾದ ಕರ್ಮಗಳಿಂದ । ಶಿಕ್ಷ—ನಮಗೆ ಉಪದೇಶಕನಾಗಿರು.

॥ ಭಾವಾರ್ಥ ॥

ಎಲೈ ಇಂದ್ರನೇ, ಹತ್ಯಾಕಾರಿಯಾದ ಶತ್ರುವಿಗೆ ನಮ್ಮನ್ನು ಬಿಟ್ಟುಕೊಡಬೇಡ. ಎಂದರೆ, ಅವನ ವಶವಾಗುವಂತೆ ಮಾಡಬೇಡ. ಹಿಂಸಾಕಾರಿಯಾದ ಶತ್ರುವಿಗೂ ನಮ್ಮನ್ನು ಬಿಟ್ಟುಕೊಡಬೇಡ. ಶಕ್ತಿಯುತನಾದ ಎಲೈ ಇಂದ್ರನೇ, ನಿನ್ನ ಉತ್ತಮವಾದ ಕರ್ಮಗಳಿಂದ ನಮಗೆ ಉಪದೇಶಕನಾಗಿರು.

## English Translation

Consign us not, Indra, to the slayer, not to an overpowering foe; doer of great deeds, enable us by your acts (to conquer).

। ಸಂಹಿತಾಪಾಠಃ ।

ವಯಮು ತ್ವಾ ತದಿದರ್ಥಾ ಇಂದ್ರ ತ್ವಾಯಂತಃ ಸಖಾಯಃ ।
ಕಣ್ವಾ ಉಕ್ಥೇಭಿರ್ಜರಂತೇ ॥ ೧೬ ॥

। ಪದಪಾಠಃ ।

ವಯಂ । ಊಂ ಇತಿ । ತ್ವಾ । ತದಿತ್ಽಅರ್ಥಾಃ । ಇಂದ್ರ । ತ್ವಾಽಯಂತಃ । ಸಖಾಯಃ ।
ಕಣ್ವಾಃ । ಉಕ್ಥೇಭಿಃ । ಜರಂತೇ ॥ ೧೬ ॥

। ಸಾಯಣಭಾಷ್ಯಂ ।

ಪ್ರಥಮೇ ರಾತ್ರಿಪರ್ಯಾಯೇ ಬ್ರಹ್ಮಶಸ್ತ್ರೇ ವಯಮು ತ್ವೇತಿ ಸ್ತೋತ್ರಿಯಸ್ತೃಚಃ । ಸೂತ್ರಿತಂ ಚ । ವಯಮು ತ್ವಾ ತದಿದರ್ಥಾ ವಯಮಿಂದ್ರ ತ್ವಾಯವೋಽಭಿ । ಆ. ೬-೪ । ಇತಿ ॥

ಹೇ ಇಂದ್ರ ತ್ವಾಯಂತಸ್ತ್ವಾಮಾತ್ಮನ ಇಚ್ಛಂತಃ ಸಖಾಯಃ ಸಮಾನಖ್ಯಾನಾ ವಯಂ ತದಿ-ದರ್ಥಾ ಯತ್ತ್ವದ್ವಿಷಯಂ ಸ್ತೋತ್ರಂ ತದಿತ್ತದೇವಾರ್ಥಃ ಪ್ರಯೋಜನಂ ಯೇಷಾಂ ತಾದೃಶಾಃ ಸಂತಸ್ತ್ವ ತ್ವಾಂ ಜರಾಮಹೇ । ಸ್ತುಮಹೇ । ಉ ಇತಿ ಪೂರಣಃ । ಕಣ್ವಾಃ ಕಣ್ವಗೋತ್ರೋತ್ಪನ್ನಾ ಅಸ್ಮ-ದೀಯಾಃ ಪುತ್ರಾದಯಸ್ತೋತ್ರೇಭಿರುಕ್ಥೈಃ ಶಸ್ತ್ರೈರ್ಜರಂತೇ । ತ್ವಾಂ ಸ್ತುವಂತಿ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ತ್ವಾಯಂತಃ—ನಿನ್ನ ಸಾನ್ನಿಧ್ಯವನ್ನು ಅಪೇಕ್ಷಿಸುವವರೂ । ಸಖಾಯಃ—ನಿನ್ನ ಮಿತ್ರಭೂತರೂ ಆದ । ವಯಂ—ನಾವು । ತದಿದರ್ಥಾಃ ಉ—ನಿನ್ನನ್ನು ಪ್ರಶಂಸಿಸುವುದೇ ಮುಖ್ಯವಾಗಿ ಪ್ರಯೋಜನವುಳ್ಳ ಸ್ತುತಿಯುಳ್ಳವರಾಗಿ । ತ್ವಾ—ನಿನ್ನನ್ನು ಸ್ತುತಿಸುತ್ತೇವೆ । ಕಣ್ವಾಃ—ಕಣ್ವವಂಶೋತ್ಪನ್ನರಾದ ನಮ್ಮ ಪುತ್ರಾದಿಗಳೂ ಸಹ । ಉಕ್ಥೇಭಿಃ—ಶಸ್ತ್ರಮಂತ್ರಗಳಿಂದ । ಜರಂತೇ—ನಿನ್ನನ್ನು ಸ್ತುತಿಸುತ್ತಾರೆ.

। ಭಾವಾರ್ಥ ।

ಎಲೈ ಇಂದ್ರನೇ, ನಿನ್ನ ಸಾನ್ನಿಧ್ಯವನ್ನು ಅಪೇಕ್ಷಿಸುವವರೂ ನಿನ್ನ ಮಿತ್ರಭೂತರೂ ಆದ ನಾವು ನಿನ್ನನ್ನು ಪ್ರಶಂಸಿಸುವುದೇ ಮುಖ್ಯವಾದ ಪ್ರಯೋಜನವುಳ್ಳ ಸ್ತುತಿಯಿಂದ ಕೂಡಿದವರಾಗಿ ನಿನ್ನನ್ನು ಸ್ತುತಿಸುತ್ತೇವೆ. ಕಣ್ವ ವಂಶೋತ್ಪನ್ನರಾದ ನಮ್ಮ ಪುತ್ರಾದಿಗಳೂ ಸಹ ಶಸ್ತ್ರಮಂತ್ರಪಠನದಿಂದ ನಿನ್ನನ್ನು ಸ್ತುತಿಸುತ್ತಾರೆ.

## English Translation

Friends devoted, Indra, to you we, the descendents of Kanwa, having your praise for our object, glorify you with prayers.

॥ ವಿಶೇಷವಿಷಯಗಳು ॥

ಮೊದಲನೇ ರಾತ್ರಿಪರ್ಯಾಯದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ವಯಮು ತ್ವಾ. ಎಂದು ಮೊದಲಾಗುವ ಮೂರು ಋಕ್ಕುಗಳನ್ನೂ (೧೬-೧೮ ಋಕ್ಕುಗಳನ್ನೂ) ಸ್ತೋತ್ರಿಯತೃಚವನ್ನಾಗಿ ಪಠಿಸ ಬೇಕೆಂದು ಆಶ್ವಲಾಯನಶ್ರೌತಸೂತ್ರದ—ವಯಮು ತ್ವಾ ತದಿದರ್ಥಾ ವಯಮಿಂದ್ರ ತ್ವಾಯವೋಽಭಿ ಎಂಬ ಸೂತ್ರದಿಂದ (೮. ೬-೪) ವಿವೃತವಾಗಿರುವುದು.

। ಸಂಹಿತಾಪಾಠಃ ।

ನ ಘೇಮನ್ಯದಾ ಪಪನ ವಜ್ರಿನ್ನಪಸೋ ನವಿಷ್ಟೌ ।

ತವೇದು ಸ್ತೋಮಂ ಚಿಕೇತ ॥ ೧೭ ॥

। ಪದಪಾಠಃ ।

ನ । ಘ । ಈಂ । ಅನ್ಯತ್ । ಆ । ಪಪನ । ವಜ್ರಿನ್ । ಅಪಸಃ । ನವಿಷ್ಟೌ ।

ತವ | ಇತ್ | ಊಂ ಇತಿ | ಸ್ತೋಮಂ | ಚಿಕೇತ || ೧೭ ||

। ಸಾಯಣಭಾಷ್ಯಂ ।

ಹೇ ವಜ್ರಿನ್ ವಜ್ರವನ್ನಿಂದ್ರ ಅಪಸೋಽಪಸ್ವಿನಃ ಕರ್ಮವತಸ್ತವ ಸಂಬಂಧಿನಿ ನವಿಷ್ಠಾವಧಿನವೇ ಯಾಗೇ ವರ್ತಮಾನೋಽಹಮನ್ಯತ್ತ್ವದ್ವಿಷಯಾದನ್ಯತ್ಸ್ತೋತ್ರಂ ನ ಘೇಂ ನೈವಾ ಪಪನ । ಅಭಿಷ್ಟೌಮಿ ॥ ಪನತೇಃ ಸ್ತುತಿಕರ್ಮಣ ಉತ್ತಮೇ ಣಲಿ ಲಿಟಿ ರೂಪಂ ॥ ಅಪಿ ತು ತವೇದು ತವೈವ ಸ್ತೋಮಂ ಸ್ತೋತ್ರಂ ಚಿಕೇತ । ಅಭಿಜಾನಾಮಿ । ತ್ವಾಮೇವ ಸರ್ವದಾ ಸ್ತೌಮೀತ್ಯರ್ಥಃ ॥

। ಪ್ರತಿಪದಾರ್ಥ ।

ವಜ್ರಿನ್—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । ಅಪಸಃ—ಕರ್ಮವಂತನಾದ ನಿನ್ನನ್ನುದ್ದೇಶಿಸಿದ। ನವಿಷ್ಠೌ—ನೂತನವಾದ ಯಾಗಕರ್ಮದಲ್ಲಿ ನಿರತನಾದ ನಾನು । ಅನ್ಯತ್—ನಿನ್ನ ಸ್ತುತಿಯಲ್ಲದೇ ಬೇರೆ ಯಾವ ದೇವತೆಯ ಸ್ತುತಿಯನ್ನೂ । ನ ಘೇಂ ಆ ಪಪನ—ಖಂಡಿತವಾಗಿಯೂ ಪಠಿಸುವುದೇ ಇಲ್ಲ । ತವೇದು—ನಿನ್ನನ್ನೇ ಪ್ರಶಂಸಿಸುವುದಾದ । ಸ್ತೋಮಂ—ಸ್ತೋತ್ರವನ್ನು । ಚಿಕೇತ—ತಿಳಿದಿದ್ದೇನೆ ಮತ್ತು ಅದನ್ನೇ ಪಠಿಸುತ್ತೇನೆ.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಕರ್ಮವಂತನಾದ ನಿನ್ನನ್ನುದ್ದೇಶಿಸಿದ ನೂತನವಾದ ಯಾಗ ಕರ್ಮದಲ್ಲಿ ನಿರತನಾದ ನಾನು ನಿನ್ನ ಸ್ತುತಿಯಲ್ಲದೇ ಬೇರೆ ಯಾವ ದೇವತೆಯ ಸ್ತುತಿಯನ್ನೂ ಖಂಡಿತವಾಗಿಯೂ ಪಠಿಸುವುದೇ ಇಲ್ಲ. ನಿನ್ನನ್ನೇ ಪ್ರಶಂಸಿಸುವುದಾದ ಸ್ತೋತ್ರವನ್ನು ತಿಳಿದಿದ್ದೇನೆ ಮತ್ತು ಅದನ್ನೇ ಪ್ರಶಂಸಿಸುತ್ತೇನೆ.

## English Translation

(Engaged), thunderer, in your most recent (worship) I utter no other praise than that of you, the doer of great deeds, I repeat only your glorification-

। ಸಂಹಿತಾಪಾಠಃ ।

ಇಚ್ಛಂತಿ ದೇವಾಃ ಸುನ್ವಂತಂ ನ ಸ್ವಪ್ನಾಯ ಸ್ಪೃಹಯಂತಿ ।
ಯಂತಿ ಪ್ರಮಾದಮತಂದ್ರಾಃ ॥ ೧೮ ॥

। ಪದಪಾಠಃ ।

ಇಚ್ಛಂತಿ । ದೇವಾಃ । ಸುನ್ವಂತಂ । ನ । ಸ್ವಪ್ನಾಯ । ಸ್ಪೃಹಯಂತಿ ।
ಯಂತಿ । ಪ್ರಽಮಾದಂ । ಅತಂದ್ರಾಃ ॥ ೧೮ ॥

। ಸಾಯಣಭಾಷ್ಯಂ ।

ಸುನ್ವಂತಂ ಸೋಮಾಭಿಷವಂ ಕುರ್ವಂತಂ ಯಜಮಾನಂ ದೇವಾ ಇಂದ್ರಾದಯಃ ಸರ್ವ ಇಚ್ಛಂತಿ ರಕ್ಷಿತುಂ। ಸ್ವಪ್ನಾಯ ನ ಸ್ಪೃಹಯಂತಿ । ಸ್ವಪ್ನಾವಸ್ಥಾಂ ತಸ್ಯ ಸುನ್ವತೋ ನೇಚ್ಛಂತಿ । ಸರ್ವದಾ ಪ್ರಬುದ್ಧಮೇವ ಕುರ್ವಂತೀತ್ಯರ್ಥಃ ॥ ಸ್ಪೃಹೇರೀಪ್ಸಿತಃ । ಪಾ. ೧-೪-೩೬ । ಇತಿ ಕರ್ಮಣಿ ಚತುರ್ಥೀ। ಸ್ಪೃಹ ಈಪ್ಸಾಯಾಂ ಚುರಾದಿರದಂತಃ ॥ ಯತ ಏವಮತಃ ಕಾರಣಾದತಂದ್ರಾ ಅನಾಲಸಾ ದೇವಾಃ ಪ್ರಮಾದಂ ಪ್ರಕರ್ಷೇಣ ಮದಕರಂ ತದೀಯಂ ಸೋಮಂ ಯಂತಿ । ಪ್ರಾಪ್ನುವಂತಿ ॥

॥ ಪ್ರತಿಪದಾರ್ಥ ॥

ಸುನ್ವಂತಂ—ಸೋಮವನ್ನು ಹಿಂಡಿ ಅರ್ಪಿಸುವ ಯಜಮಾನನನ್ನು । ದೇವಾಃ—ಇಂದ್ರಾದಿದೇವತೆಗಳು । ಇಚ್ಛಂತಿ—ಅಪೇಕ್ಷಿಸುತ್ತಾರೆ । ಸ್ವಪ್ನಾಯ—ಅವನು ತನ್ನ ಕರ್ಮವನ್ನು ಮರೆತು ಸ್ವಪ್ನಾವಸ್ಥೆಯಲ್ಲಿರಲು (ಅಲಸನಾಗಿರಲು) । ನ ಸ್ಪೃಹಯಂತಿ—ಅಪೇಕ್ಷಿಸುವುದಿಲ್ಲ । ಅತಂದ್ರಾಃ—ಆಲಸ್ಯವಿಲ್ಲದೇ ಯಾವಾಗಲೂ ಪ್ರಬುದ್ಧರಾಗಿರುವ ದೇವತೆಗಳು । ಪ್ರಮಾದಂ—ಅತಿಶಯವಾದ ಹರ್ಷವನ್ನುಂಟುಮಾಡುವ ಸೋಮವನ್ನು । ಯಂತಿ—ಹೊಂದುತ್ತಾರೆ.

॥ ಭಾವಾರ್ಥ ॥

ಸೋಮವನ್ನು ಹಿಂಡಿ ಅರ್ಪಿಸುವ ಯಜಮಾನನನ್ನು ಇಂದ್ರಾದಿದೇವತೆಗಳು ಅಪೇಕ್ಷಿಸುತ್ತಾರೆ. ಅವನು ತನ್ನ ಕರ್ಮವನ್ನು ಮರೆತು ಸ್ವಪ್ನಾವಸ್ಥೆಯಲ್ಲಿರಲು ಅವಕಾಶವನ್ನು ಕೊಡುವುದಿಲ್ಲ. ಆಲಸ್ಯವಿಲ್ಲದೇ ಯಾವಾಗಲೂ ಎಚ್ಚರದಿಂದಲೇ ಇರುವ ದೇವತೆಗಳು ಅತಿಶಯವಾದ ಹರ್ಷವನ್ನುಂಟುಮಾಡುವ ಸೋಮವನ್ನು ಹೊಂದುತ್ತಾರೆ.

English Translation

The gods love the man who offers libations, they desire not to (let him) sleep, thence they, unslothful obtain the inebriating Soma.

। ಸಂಹಿತಾಪಾಠಃ ।

ಓ ಷು ಪ್ರ ಯಾಹಿ ವಾಜೇಭಿರ್ಮಾ ಹೃಣೀಥಾ ಅಭ್ಯಸ್ಮಾನ್ ।
ಮಹಾಁ ಇವ ಯುವಜಾನಿಃ ॥ ೧೯ ॥

। ಪದಪಾಠಃ ।

ಓ ಇತಿ । ಸು । ಪ್ರ । ಯಾಹಿ । ವಾಜೇಭಿಃ । ಮಾ । ಹೃಣೀಥಾಃ । ಅಭಿ । ಅಸ್ಮಾನ್ ।
ಮಹಾನ್ऽಇವ । ಯುವಽಜಾನಿಃ ॥ ೧೯ ॥

। ಸಾಯಣಭಾಷ್ಯಂ ।

ಹೇ ಇಂದ್ರ ವಾಜೇಭಿರ್ವಾಜೈರನ್ನೈರ್ಭೃತ್ಯಂ ದಾತವ್ಯೈರನ್ನೈಃ । ಸಾರ್ಧಮಸ್ಮಾನಭ್ಯಾಭಿಮುಖ್ಯೇನ ಸು ಸುಷ್ಠು ಪ್ರ ಪ್ರಕರ್ಷೇಣ ಓ ಆ ಉ ಯಾಹಿ । ಶೀಘ್ರಮಾಯಾಹ್ಯೇವ । ಆಗಚ್ಛೈವ । ಮಾ ಹೃಣೀಥಾಃ । ಮಾ ಕ್ರುಧ್ಯಸ್ವ । ಹೃಣೀಯತಿಃ ಕ್ರುಧ್ಯತಿಕರ್ಮಾ । ಯದ್ವಾ । ಮಾ ಲಜ್ಜಾಂ ಪ್ರಾಪ್ನುಹಿ ॥ ಹೃಣೀಙ್ ಲಜ್ಜಾಯಾಮಿತಿ ಕಂಡ್ವಾದೌ ಪಠ್ಯತೇ ॥ ತತ್ರ ದೃಷ್ಟಾಂತಃ । ಮಹಾನಿವ ಯುವಜಾನಿಃ । ಯುವತಿರ್ಜಾಯಾ ಯಸ್ಯ ಸ ತಥೋಕ್ತಃ ॥ ಜಾಯಾಯಾ ನಿಙ್ಙಿತಿ ಸಮಾಸಾಂತೋ ನಿಙಾದೇಶಃ ॥ ಈದೃಶೋ ಮಹಾನ್ ಗುಣೈರಧಿಕೋಽಪಿ ಯಥಾ ಸ್ವಭಾರ್ಯಾಂ ಪ್ರತಿ ನಿರ್ಲಜ್ಜಃ ಸನ್ ಶೀಘ್ರಂ ಗಚ್ಛತಿ ತದ್ವತ್ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) ವಾಜೇಭಿಃ—ನಮಗೆ ಕೊಡಬೇಕಾದ ಅನ್ನಗಳೊಡನೆ । ಅಸ್ಮಾನ್ ಅಭಿ— ನಮಗೆ ಅಭಿಮುಖನಾಗಿ । ಸು ಪ್ರ ಓ ಯಾಹಿ—ಅತಿಶಯವಾದ ಗಮನದಿಂದ ಬಾ । ಯುವಜಾನಿಃ—ಯುವತಿ ಯಾದ ಪತ್ನಿಯುಳ್ಳ । ಮಹಾನಿವ—ಮಹಾಪುರುಷನಾದರೂ ಪತ್ನಿಯಮೇಲಿನ ಅಭಿಮಾನದಿಂದ ಲಜ್ಜೆಯಿಲ್ಲದೇ ಅವಳನ್ನು ಸಮೀಪಿಸುವಂತೆ । ಮಾ ಹೃಣೀಥಾಃ—ಗುಣಗಳಲ್ಲಿ ನಿನಗಿಂತಲೂ ಕೀಳಿನವರಾದರೂ ಲಜ್ಜೆಯಿಲ್ಲದೇ ನಮ್ಮಲ್ಲಿಗೆ ಬಾ.

। ಭಾವಾರ್ಥ ।

ಎಲೈ ಇಂದ್ರನೇ, ನಮಗೆ ದಾನಮಾಡಬೇಕಾದ ಅನ್ನಗಳೊಡಗೂಡಿ ನಮಗೆ ಅಭಿಮುಖವಾಗಿ ಅತಿಶಯವಾದ ಗಮನದಿಂದ ನಮ್ಮಲ್ಲಿಗೆ ಬಾ ಯುವತಿಯಾದ ಪತ್ನಿಯುಳ್ಳ ಮಹಾಪುರುಷನಾದರೂ ತನಗಿಂತ ಚಿಕ್ಕವಳಾದ ಪತ್ನಿ ಯಲ್ಲಿ ಹೋಗಲು ಲಜ್ಜೆಪಡದೆ ಅಭಿಮಾನದಿಂದ ಹೋಗುವಂತೆ, ಗುಣಗಳಲ್ಲಿ ನಿನಗಿಂತಲೂ ಕೀಳಿನವರಾದರೂ ಸಹ ನಮ್ಮಲ್ಲಿಗೆ ಲಜ್ಜೆಪಡದೆ ಬಾ.

English Translation

Come to us quickly with excellent viands, be not bashful, like the ardent husband of a new bride.

। ಸಂಹಿತಾಪಾಠಃ ।

ಮೋ ಷ್ವ1ದ್ಯ ದುರ್ಹಣಾವಾನ್ತ್ಸಾಯಂ ಕರದಾರೇ ಅಸ್ಮತ್ ।
ಅಶ್ರೀರ ಇವ ಜಾಮಾತಾ ॥ ೨೦ ॥

। ಪದಪಾಠಃ ।

ಮೋ ಇತಿ । ಸು । ಅದ್ಯ । ದುಃಽಹನಾವಾನ್ । ಸಾಯಂ । ಕರತ್ । ಆರೇ । ಅಸ್ಮತ್ ।
ಅಶ್ರೀರಃಽಇವ । ಜಾಮಾತಾ ॥ ೨೦ ॥

। ಸಾಯಣಭಾಷ್ಯಂ ।

ದುರ್ಹಣಾವಾನ್ । ಪರೈರ್ದುರಾಸಹಹನನಂ ದುರ್ಹಣಂ । ತದ್ವಾನಿಂದ್ರೋಽದ್ಯೇದಾನೀಮಸ್ಮದಾರೇಽಸ್ಮಾಕಂ ಸಮೀಪ ಆಗಚ್ಛತು । ಸು ಸುಷ್ಠ್ವತಿಶಯೇನ ಸಾಯಂ ದಿವಸಸ್ಯಾವಸಾನಂ ಸಾಯಂಕಾಲಂ ಮೋ ಕರತ್ । ಮಾ ಕಾರ್ಷೀತ್ ॥ ಕರೋತೇರ್ಮಾಙಿ ಲುಙಿ ಕೃಮೃದೃರುಹಿಭ್ಯ ಇತಿ ಚ್ಲೇರಙಾದೇಶಃ ॥ ಜಾಮಾತಾ । ಜಾಯತ ಇತಿ ಜಾ ಅಪತ್ಯಂ । ತಸ್ಯ ನಿರ್ಮಾತಾ ದುಹಿತುಃ ಪತಿಃ । ಅಶ್ರೀರ ಇವ । ನ ಶ್ರೀರಶ್ರೀಃ । ತದಸ್ಯಾಸ್ತೀತ್ಯಶ್ರೀರಃ ॥ ಮತ್ವರ್ಥೀಯೋ ರಃ ॥ ಗುಣೈರ್ವಿಹೀನಃ ಕುತ್ಸಿತೋ ಜಾಮಾತಾಸಕೃದಾಹೂಯಮಾನೋಽಪ್ಯಾಸಾಯಂಕಾಲಂ ವಿಲಂಬತೇ । ತದ್ವತ್ತ್ವಂ ಕಾಲವಿಲಂಬಂ ಮಾ ಕೃಥಾ ಇತ್ಯರ್ಥಃ ॥

। ಪ್ರತಿಪದಾರ್ಥ ।

ದುರ್ಹಣಾವಾನ್—ಇತರರಿಂದ ಪ್ರತಿಭಟಿಸಲು ಸಾಧ್ಯವಿಲ್ಲದ ಶಕ್ತಿಯುಳ್ಳ ಇಂದ್ರನು । ಅದ್ಯ—ಈ ಯಾಗಕಾಲದಲ್ಲಿ । ಅಸ್ಮತ್ ಆರೇ—ನಮ್ಮ ಸಮೀಪಕ್ಕೆ । ಸು—ಅತಿಶಯವಾಗಿ ಬರಲಿ । ಅಶ್ರೀರ ಇವ—ದುರ್ಗುಣಿಯಾದ । ಜಾಮಾತಾ—ಅಳಿಯನು ಎಷ್ಟು ಕರೆದರೂ ಬರದೆ ಸಾವಕಾಶಮಾಡುವಂತೆ । ಸಾಯಂ—ಸಾಯಂಕಾಲದವರೆಗೆ । ಮೋ ಕರತ್—ಇಂದ್ರನು ನಮ್ಮಲ್ಲಿಗೆ ಬರಲು ಸಾವಕಾಶವನ್ನು ಮಾಡದಿರಲಿ.

। ಭಾವಾರ್ಥ ।

ಇತರರಿಂದ ಪ್ರತಿಭಟಿಸಲು ಸಾಧ್ಯವಿಲ್ಲದ ಶಕ್ತಿಯುಳ್ಳ ಇಂದ್ರನು ಈ ಯಾಗಕಾಲದಲ್ಲಿ ನಮ್ಮ ಸಮೀಪಕ್ಕೆ ಅತಿಶಯವಾಗಿ ಬರಲಿ. ದುರ್ಗುಣಿಯಾದ ಅಳಿಯನು ಎಷ್ಟು ಕರೆದರೂ ಬರದೇ ಸಾವಕಾಶಮಾಡುವಂತೆ ಸಾಯಂಕಾಲದವರೆಗೆ ನಮ್ಮಲ್ಲಿಗೆ ಬರಲು ಇಂದ್ರನು ಸಾವಕಾಶವನ್ನು ಮಾಡದಿರಲಿ.

English Translatian

Let not Indra, the insuperable, delay (coming to us) to-day until the evening, like an unlucky son-in-law.

। ಸಂಹಿತಾಪಾಠಃ ।

ವಿದ್ಮಾ ಹ್ಯಸ್ಯ ವೀರಸ್ಯ ಭೂರಿದಾವರೀಂ ಸುಮತಿಂ ।
ತ್ರಿಷು ಜಾತಸ್ಯ ಮನಾಂಸಿ ॥ ೨೧ ॥

॥ ಪದಪಾಠಃ ॥

ವಿದ್ಮ । ಹಿ । ಅಸ್ಯ । ವೀರಸ್ಯ । ಭೂರಿಽದಾವರೀಂ । ಸುಽಮತಿಂ ।
ತ್ರಿಷು । ಜಾತಸ್ಯ । ಮನಾಂಸಿ ॥ ೨೧ ॥

॥ ಸಾಯಣಭಾಷ್ಯಂ ॥

ಅಸ್ಯೇಂದ್ರಸ್ಯ ವೀರಸ್ಯ ವಿಕ್ರಾಂತಸ್ಯ ಭೂರಿದಾವರೀಂ ಬಹುಧನಸ್ಯ ದಾತ್ರೀಂ ಸುಮತಿಂ ಕಲ್ಯಾಣೀಂ ಮತಿಮನುಗ್ರಹಬುದ್ಧಿಂ ವಿದ್ಮಾ ಹಿ। ಜಾನೀಮಃ ಖಲು। ತಥಾ ತ್ರಿಷು ಭೂಮ್ಯಾದಿಷು ತ್ರಿಷು ಲೋಕೇಷು ಜಾತಸ್ಯ ತತ್ಕಾರ್ಯಾರ್ಥಂ ಪ್ರಾದುರ್ಭೂತಸ್ಯ ಮನಾಂಸಿ ಹೃದಯಾನಿ ಚ ಜಾನೀಮಃ। ಅತಸ್ತಸ್ಯೇಂದ್ರಸ್ಯ ಯಥಾ ಪ್ರೀತಿರ್ಜನಿಷ್ಯತೇ ತಥಾ ಸ್ತೋತ್ರಂ ಕುರ್ಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ವೀರಸ್ಯ—ಪರಾಕ್ರಮಿಯಾದ। ಅಸ್ಯ—ಈ ಇಂದ್ರನ। ಭೂರಿದಾವರೀಂ—ಅತ್ಯಧಿಕವಾಗಿ ಧನಪ್ರದವಾದುದೂ। ಸುಮತಿಂ—ಕಲ್ಯಾಣಾತ್ಮಕವೂ ಆದ ಬುದ್ಧಿಯನ್ನು। ವಿದ್ಮ ಹಿ—ನಾವು ಖಂಡಿತ ಅರಿತಿದ್ದೇವಲ್ಲವೇ। ತ್ರಿಷು—ಪೃಥಿವ್ಯಾದಿ ಮೂರು ಲೋಕಗಳಲ್ಲೂ। ಜಾತಸ್ಯ—ಉತ್ಪನ್ನನಾದ ಅದೇ ಇಂದ್ರನ। ಮನಾಂಸಿ—ಸಂಕಲ್ಪಾದಿಗಳನ್ನೂ (ಅರಿತಿದ್ದೇವೆ).

॥ ಭಾವಾರ್ಥ ॥

ಪರಾಕ್ರಮಿಯಾದ ಈ ಇಂದ್ರನ ಅತ್ಯುದಾರವಾಗಿ ಧನದಾನಮಾಡತಕ್ಕದ್ದೂ ಕಲ್ಯಾಣಾತ್ಮಕವೂ ಆದ ಬುದ್ಧಿಯನ್ನು ನಾವು ಅರಿತಿದ್ದೇವೆ. ಪೃಥಿವ್ಯಾದಿ ಮೂರು ಲೋಕಗಳಲ್ಲೂ ಉತ್ಪನ್ನನಾದ ಅದೇ ಇಂದ್ರನ ಸಂಕಲ್ಪಾದಿಗಳನ್ನೂ ಅರಿತಿದ್ದೇವೆ.

English Translation

We know the munificent generosity of the hero (Indra): of the purposes of him who is manifest in the three worlds (we are aware).

॥ ಸಂಹಿತಾಪಾಠಃ ॥

ಆ ತೂ ಷಿಂಚ ಕಣ್ವಮಂತಂ ನ ಘಾ ವಿದ್ಮ ಶವಸಾನಾತ್ ।

ಯಶಸ್ತರಂ ಶತಮೂತೇಃ ॥ ೨೨ ॥

॥ ಪದಪಾಠಃ ॥

ಆ । ತು । ಸಿಂಚ । ಕಣ್ವऽಮಂತಂ । ನ । ಘ । ವಿದ್ಮ । ಶವಸಾನಾತ್ ।

ಯಶಃऽತರಂ । ಶತಂऽಊತೇಃ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ಅಧ್ವರ್ಯೋ ಕಣ್ವಮಂತಂ। ಕಣತಿಃ ಶಬ್ದಕರ್ಮಾ। ಕಣ್ವಾಃ ಸ್ತೋತಾರಃ। ಯದ್ವಾ। ಕಣ್ವಗೋತ್ರಾ ಋಷಯಃ। ತೈರ್ಯುಕ್ತಮಿಂದ್ರಮುದ್ದಿಶ್ಯ ತು ಕ್ಷಿಪ್ರಮಾ ಸಿಂಚ। ಸೋಮಂ ಜುಹುಧಿ।

ಶವಸಾನಾತ್ । ಶವೋ ಬಲಂ । ತದಿವಾಚರತೋಽತಿಬಲಾಚ್ಛತಮೂತೇಃ । ಶತಂ ಬಹುನಾಮೈತತ್ । ಬಹ್ವ್ಯ ಊತಯೋ ರಕ್ಷಾ ಯಸ್ಮಿನ್ ಸ ಶತಮೂತಿಃ । ತಾದೃಶಾದಸ್ಮಾದಿಂದ್ರಾದ್ಯಶಸ್ತರಂ ಯಶಸ್ವಿತರಂ ಪುರುಷಂ ನ ಘ ನೈವ ವಿದ್ಮ । ಜಾನೀಮಃ । ಅತಸ್ತಮೇವೋದ್ದಿಶ್ಯ ಸೋಮಂ ಜುಹುಧೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಅಧ್ವರ್ಯುವೇ) ಕಣ್ವಮಂತಂ—ಕಣ್ವಗೋತ್ರೋತ್ಪನ್ನರಾದ ಋಷಿಗಳಿಗೆ ಸಂಬಂಧಿಸಿದ ಇಂದ್ರನನ್ನುದ್ದೇಶಿಸಿ । ತು—ಕ್ಷಿಪ್ರವಾಗಿ । ಆ ಸಿಂಚ—ಸೋಮವನ್ನು ಆಹುತಿರೂಪದಲ್ಲಿ ಅರ್ಪಿಸು । ಶವಸಾನಾತ್—ಅತ್ಯಧಿಕವಾದ ಬಲವುಳ್ಳವನೂ । ಶತಮೂತೇಃ—ಅನೇಕವಿಧವಾದ ರಕ್ಷಣೆಯುಳ್ಳವನೂ ಆದ ಇಂದ್ರನಿಗಿಂತಲೂ ಯಶಸ್ತರಂ—ಅತ್ಯಧಿಕವಾದ ಯಶಸ್ವಿಯಾದ ಪುರುಷನನ್ನು । ನ ಘ ವಿದ್ಮ—ನಾವು ಖಂಡಿತ ಅರಿಯೆವು.

॥ ಭಾವಾರ್ಥ ॥

ಎಲೈ ಅಧ್ವರ್ಯುವೇ, ಕಣ್ವಗೋತ್ರೋತ್ಪನ್ನರಾದ ಋಷಿಗಳಿಗೆ ಸಂಬಂಧಿಸಿದ ಇಂದ್ರನನ್ನುದ್ದೇಶಿಸಿ ಕ್ಷಿಪ್ರವಾಗಿ ಸೋಮವನ್ನು ಆಹುತಿರೂಪದಲ್ಲಿ ಅರ್ಪಿಸು. ಅತ್ಯಧಿಕವಾದ ಬಲವುಳ್ಳವನೂ, ಅನೇಕ ವಿಧವಾದ ರಕ್ಷಣೆಗಳುಳ್ಳವನೂ ಆದ ಇಂದ್ರನಿಗಿಂತಲೂ ಅಧಿಕವಾಗಿ ಯಶಸ್ವಿಯಾದ ಪುರುಷನಿರುವನೆಂದು ನಾವು ಅರಿಯೆವು.

## Englisn Translation

Pour out the libation to him who is associated with the Kanwa (race): we know not any one more celebrated than the very powerful bestower of numerous protections.

॥ ಸಂಹಿತಾಪಾಠಃ ॥

ಜ್ಯೇಷ್ಠೇನ ಸೋತರಿಂದ್ರಾಯ ಸೋಮಂ ವೀರಾಯ ಶಕ್ರಾಯ ।
ಭರಾ ಪಿಬನ್ನರ್ಯಾಯ ॥ ೨೩ ॥

॥ ಪದಪಾಠಃ ॥

ಜ್ಯೇಷ್ಠೇನ । ಸೋತಃ । ಇಂದ್ರಾಯ । ಸೋಮಂ । ವೀರಾಯ । ಶಕ್ರಾಯ ।
ಭರ । ಪಿಬತ್ । ನರ್ಯಾಯ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಸೋತರಭಿಷೋತರಧ್ವರ್ಯೋ ವೀರಾಯ ವಿಕ್ರಾಂತಾಯ ಶಕ್ರಾಯ ಶಕ್ತಿಯುಕ್ತಾಯ ನರ್ಯಾಯ ನೃಭ್ಯೋ ಹಿತಾಯೇಂದ್ರಾಯ ಜ್ಯೇಷ್ಠೇನ ಮುಖ್ಯೇನೈಂದ್ರವಾಯವಗ್ರಹೇಣ। ಸ ಹಿ ಧಾರಾಗ್ರಹಾಣಾಂ ಮಧ್ಯೇ ಜ್ಯೇಷ್ಠಃ । ತೇನ ಸೋಮಂ ಭರ । ಹರ । ಆಹರ । ವೀರ್ಯಂ ಪ್ರಾಪಯ । ಸ ಚೇಂದ್ರಃ ಪಿಬತ್ । ತಂ ಸೋಮಂ ಪಿಬತು ॥

॥ ಪ್ರತಿಪದಾರ್ಥ ॥

ಸೋತಃ—ಸೋಮವನ್ನು ಹಿಂಡತಕ್ಕ ಎಲೈ ಅಧ್ವರ್ಯುವೇ । ವೀರಾಯ—ಪರಾಕ್ರಮಿಯೂ । ಶಕ್ರಾಯ—ಶಕ್ತಿಯುತನೂ । ನರ್ಯಾಯ—ಮಾನವರಿಗೆಲ್ಲಾ ಹಿತಕಾರಿಯೂ ಆದ । ಇಂದ್ರಾಯ—ಇಂದ್ರನನ್ನುದ್ದೇಶಿಸಿ । ಜ್ಯೇಷ್ಠೇನ—ಎಲ್ಲಕ್ಕಿಂತಲೂ ಮುಖ್ಯವಾದ ಐಂದ್ರವಾಯವಗ್ರಹದಿಂದ । ಸೋಮಂ - ಸೋಮವನ್ನು । ಭರ—ಅರ್ಪಿಸು । ಪಿಬತ್—ಇಂದ್ರನು ಆ ಸೋಮವನ್ನು ಪಾನಮಾಡಲಿ.

॥ ಭಾವಾರ್ಥ ॥

ಸೋಮಾಭಿಷವಕ್ರಿಯೆಯನ್ನು ಮಾಡತಕ್ಕ ಎಲೈ ಅಧ್ವರ್ಯುವೇ, ಪರಾಕ್ರಮಿಯೂ, ಶಕ್ತಿಯುತನೂ ಮಾನವರಿಗೆಲ್ಲಾ ಹಿತಕಾರಿಯೂ ಆದ ಇಂದ್ರನನ್ನುದ್ದೇಶಿಸಿ ಎಲ್ಲ ಗ್ರಹಗಳಿಗಿಂತಲೂ ಮುಖ್ಯವಾದ ಐಂದ್ರವಾಯವಗ್ರಹದಿಂದ ಸೋಮವನ್ನು ಅರ್ಪಿಸು. ಇಂದ್ರನು ಆ ಸೋಮವನ್ನು ಪಾನಮಾಡಲಿ.

## English Translation

Offer, worshipper, the libation in the first place to the hero, the powerful Indra, the benefactor of man : may he drink (of it),—

॥ ಸಂಹಿತಾಪಾಠಃ ॥

ಯೋ ವೇದಿಷ್ಠೋ ಅವ್ಯಥಿಷ್ವಶ್ವಾವಂತಂ ಜರಿತೃಭ್ಯಃ ।
ವಾಜಂ ಸ್ತೋತೃಭ್ಯೋ ಗೋಮಂತಂ ॥ ೨೪ ॥

॥ ಪದಪಾಠಃ ॥

ಯಃ । ವೇದಿಷ್ಠಃ । ಅವ್ಯಥಿಷು । ಅಶ್ವಽವಂತಂ । ಜರಿತೃಽಭ್ಯಃ ।
ವಾಜಂ । ಸ್ತೋತೃಽಭ್ಯಃ । ಗೋಽಮಂತಂ ॥ ೨೪ ॥

। ಸಾಯಣಭಾಷ್ಯಂ ।

ಯ ಇಂದ್ರೋಽವ್ಯಥಿಷ್ವವ್ಯಥಯಿತೃಷು ಸುಖಕರೇಷು ಸೋತೃಷು ವೇದಿಷ್ಠೋಽತಿಶಯೇನ ವೇದಿತಾ ಕೃತಸ್ಯ ಸ್ತೋತ್ರಸ್ಯ ಜ್ಞಾತಾ ಸ ಇಂದ್ರೋ ಜರಿತೃಭ್ಯಃ ಶಂಸಿತೃಭ್ಯೋ ಹೋತ್ರಾದಿಭ್ಯಃ ಸ್ತೋತೃಭ್ಯಃ ಪ್ರಸ್ತೋತ್ರಾದಿಭ್ಯಶ್ಚಾಶ್ವಾವಂತಂ ಬಹುಭಿರಶ್ವೈರುಪೇತಂ ಗೋಮಂತಂ ಬಹುಭಿರ್ಗೋಭಿರುಪೇತಂ ಸಂತಂ ವಾಜಮನ್ನಂ ಬಲಂ ವಾ ದದಾತೀತಿ ಶೇಷಃ ॥

। ಪ್ರತಿಪದಾರ್ಥ ।

ಯಃ—ಯಾವ ಇಂದ್ರನು । ಅವ್ಯಥಿಷು—ಸುಖಕಾರಕರಾದ ಸ್ತೋತೃಗಳಲ್ಲಿ । ವೇದಿಷ್ಠಃ—ಅವರ ಸ್ತುತಿಗಳ ಮತ್ತು ಕರ್ಮಗಳ ಸ್ವರೂಪವನ್ನು ಅರಿತಿರುವನೋ ಅಂತಹ ಇಂದ್ರನು । ಜರಿತೃಭ್ಯಃ—ಹೋತೃರೂಪವಾದ ಸ್ತುತಿ ಕರ್ತರಿಗೂ । ಸ್ತೋತೃಭ್ಯಃ—ಪ್ರಸ್ತೋತೃರೂಪವಾದ ಸ್ತುತಿಕರ್ತರಿಗೂ । ಅಶ್ವಾವಂತಂ—ಅನೇಕವಾಗಿ ಅಶ್ವ ಯುಕ್ತವಾದುದೂ । ಗೋಮಂತಂ—ಗೋವುಗಳಿಂದ ಕೂಡಿದುದೂ ಆದ । ವಾಜಂ—ಅನ್ನವನ್ನು (ಕೊಡುತ್ತಾನೆ).

। ಭಾವಾರ್ಥ ।

ಯಾವ ಇಂದ್ರನು ಸುಖಕಾರಕರಾದ ಸ್ತೋತೃಗಳಲ್ಲಿ ಅವರ ಸ್ತುತಿಗಳ ಮತ್ತು ಕರ್ಮಗಳ ಸ್ವರೂಪವನ್ನರಿತಿರುವನೋ ಅಂತಹ ಇಂದ್ರನು ಹೋತೃರೂಪವಾದ ಸ್ತುತಿಕರ್ತರಿಗೂ ಪ್ರಸ್ತೋತೃರೂಪರಾದ ಸ್ತುತಿಕರ್ತರಿಗೂ ಅನೇಕವಾಗಿ ಅಶ್ವಯುಕ್ತವಾದುದೂ, ಗೋವುಗಳಿಂದ ಕೂಡಿದುದೂ ಆದ ಅನ್ನವನ್ನು ಕೊಡುತ್ತಾನೆ.

## English Translation

He who most cognisant of (the merit) of those who give him no annoyance, bestows upon his adorers and praisers food with horses and cattle.

। ಸಂಹಿತಾಪಾಠಃ ॥

ಪನ್ಯಂಪನ್ಯಮಿತ್ಸೋತಾರ ಆ ಧಾವತ ಮದ್ಯಾಯ ।

ಸೋಮಂ ವೀರಾಯ ಶೂರಾಯ ॥ ೨೫ ॥

। ಪದಪಾಠಃ ।

ಪನ್ಯಂಽಪನ್ಯಂ । ಇತ್ । ಸೋತಾರಃ । ಆ । ಧಾವತ । ಮದ್ಯಾಯ ।

ಸೋಮಂ । ವೀರಾಯ । ಶೂರಾಯ ॥ ೨೫ ॥

॥ ಸಾಯಣಭಾಷ್ಯಂ ॥

ಅಹೀನಾಂತರ್ಗತೇಽತಿರಾತ್ರೇ ಪ್ರಥಮೇ ಪರ್ಯಾಯೇ ಹೋತುಃ ಶಸ್ತ್ರೇ ಪನ್ಯಂಪನ್ಯಮಿತಿ ಸ್ತೋತ್ರಿಯಸ್ತೃಚಃ ಛಂದೋಗೈರಸ್ಯ ತೃಚಸ್ಯ ಸ್ತೂಯಮಾನತ್ವಾತ್ । ಛಂದೋಗಪ್ರತ್ಯಯಂ ಸ್ತೋಮಃ ಸ್ತೋತ್ರಿಯಃ । ಆ. ೮-೧೩ । ಇತಿ ಹಿ ಸೂತ್ರಿತಂ ॥

ಹೇ ಸೋತಾರೋಽಭಿಷೋತಾರೋಽಧ್ವರ್ಯವಃ ಮದ್ಯಾಯ ಮಾದಯಿತವ್ಯಾಯ ವೀರಾಯ ವಿಕ್ರಾಂತಾಯ ಶೂರಾಯ ಶೌರ್ಯವತ ಇಂದ್ರಾಯ ಪನ್ಯಂ ಪನ್ಯಮಿತ್ ಸರ್ವತ್ರ ಸ್ತುತ್ಯಮೇವ ಸೋಮಮಾ ಧಾವತ । ಅಭಿಗಮಯತ । ಪ್ರಯಚ್ಛತೇತ್ಯರ್ಥಃ ॥

। ಪ್ರತಿಪದಾರ್ಥ ।

ಸೋತಾರಃ—ಸೋಮರಸವನ್ನು ಹಿಂಡತಕ್ಕ ಎಲೈ ಅಧ್ವರ್ಯುಗಳೇ । ವೀರಾಯ—ವೀರ್ಯಯುಕ್ತನೂ । ಶೂರಾಯ—ಪರಾಕ್ರಮಿಯೂ । ಮದ್ಯಾಯ—ಹರ್ಷಕ್ಕೆ ಯೋಗ್ಯನೂ ಆದ ಇಂದ್ರನನ್ನುದ್ದೇಶಿಸಿ । ಪನ್ಯಂಪನ್ಯಮಿತ್—ಅತ್ಯಂತ ಶ್ರೇಷ್ಠವಾದ ಪ್ರಶಂಸೆಗೆ ಯೋಗ್ಯವಾದ । ಸೋಮಂ—ಸೋಮರಸವನ್ನು । ಆ ಧಾವತ—ಅರ್ಪಿಸಿರಿ.

॥ ಭಾವಾರ್ಥ ॥

ಸೋಮರಸವನ್ನು ಹಿಂಡತಕ್ಕ ಎಲೈ ಅಧ್ವರ್ಯುಗಳೇ, ವೀರ್ಯಯುಕ್ತನೂ, ಪರಾಕ್ರಮಿಯೂ, ಹರ್ಷಕ್ಕೆ ಯೋಗ್ಯನೂ ಆದ ಇಂದ್ರನನ್ನುದ್ದೇಶಿಸಿ ಅತ್ಯಂತ ಪ್ರಶಸ್ತ್ಯವಾದ ಸೋಮರಸವನ್ನು ಅರ್ಪಿಸಿರಿ.

## English Translation

Hasten, offerers of the libation, (to present) the glorious Soma to the valiant, the hero (Indra), for (his) exhilaration.

। ವಿಶೇಷವಿಷಯಗಳು ।

ಅತಿರಾತ್ರವೆಂಬ ಯಜ್ಞದ ಪ್ರಥಮ ಪರ್ಯಾಯದಲ್ಲಿ ಹೋತೃವೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಪನ್ಯಂಪನ್ಯಂ ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೨೫-೨೭ ಋಕ್ಕುಗಳನ್ನು) ಅಹೀನಸೂಕ್ತದ ಮಧ್ಯದಲ್ಲಿ—ಸಾಮಗಾನಮಾಡುವವರು ಈ ಮೂರು ಋಕ್ಕುಗಳನ್ನು ಗಾನಮಾಡುವುದರಿಂದ—ಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ—ಛಂದೋಗಪ್ರತ್ಯಯಂ ಸ್ತೋಮಃ ಸ್ತೋತ್ರಿಯಃ ಎಂಬ ಸೂತ್ರದಿಂದ (ಆ. ೮-೧೩) ವಿಧಿಸಲ್ಪಟ್ಟಿರುವುದು.

। ಸಂಹಿತಾಪಾಠಃ ।

ಪಾತಾ ವೃತ್ರಹಾ ಸುತಮಾ ಘಾ ಗಮನ್ನಾರೇ ಅಸ್ಮತ್ ।

ನಿ ಯಮತೇ ಶತಮೂತಿಃ ॥ ೨೬ ॥

। ಪದಪಾಠಃ ।

ಪಾತಾ । ವೃತ್ರಽಹಾ । ಸುತಂ । ಆ । ಘ । ಗಮತ್ । ನ । ಆರೇ । ಅಸ್ಮತ್ ।

ನಿ । ಯಮತೇ । ಶತಂಽಊತಿಃ ॥ ೨೬ ॥

। ಸಾಯಣಭಾಷ್ಯಂ ।

ಸುತಮಭಿಷುತಂ ಸೋಮಂ ಪಾತಾ ಪಾನಶೀಲಃ ॥ ತಾಚ್ಛೀಲಿಕಸ್ತೃನ್ । ನ ಲೋಕಾವ್ಯಯೇತಿ ಕರ್ಮಣಿ ಷಷ್ಠ್ಯಾಃ ಪ್ರತಿಷೇಧಃ ॥ ವೃತ್ರಹಾ ವೃತ್ರಸ್ಯಾಸುರಸ್ಯ ಹಂತೇಂದ್ರ ಆ ಗಮತ್ । ಘೇತ್ಯವಧಾರಣೇ । ಆಗಚ್ಛತ್ವೇವ । ಅಸ್ಮದಸ್ಮತ್ತ ಆರೇ ದೂರದೇಶೇ ಮಾ ಭವತು । ಆಗತ್ಯ ಚ ಶತಮೂತಿರ್ಬಹುವಿಧರಕ್ಷಣ ಇಂದ್ರೋ ನಿ ಯಮತೇ । ಅಸ್ಮದೀಯಾಞ್ಛತ್ರೂನ್ನಿಯಚ್ಛತು । ತಿರಸ್ಕರೋತು । ಯದ್ವಾ । ಧನಾನ್ಯಸ್ಮಭ್ಯಂ ನಿಯಚ್ಛತು । ದದಾತು ॥

॥ ಪ್ರತಿಪದಾರ್ಥ ॥

ಸುತಂ—ಹಿಂಡಿ ಸಿದ್ಧವಾಗಿರುವ ಸೋಮವನ್ನು । ಪಾತಾ—ಪಾನಮಾಡುವವನೂ । ವೃತ್ರಹಾ—ವೃತ್ರ ಹಂತಕನೂ ಆದ ಇಂದ್ರನು । ಘ—ಖಂಡಿತವಾಗಿಯೂ । ಆ ಗಮತ್—ಇಲ್ಲಿಗೆ ಬರಲಿ । ಅಸ್ಮತ್—ನಮ್ಮಿಂದ । ಆರೇ ನ—ದೂರಪ್ರದೇಶದಲ್ಲಿ ನಿಲ್ಲದಿರಲಿ । ಶತಮೂತಿಃ—ಅನೇಕ ವಿಧವಾದ ರಕ್ಷಣೆಯೊಡಗೂಡಿದ ಇಂದ್ರನು । ನಿ ಯಮತೇ—ನಮ್ಮ ಶತ್ರುಗಳನ್ನು ನಿಯಮದಲ್ಲಿಡಲಿ.

। ಭಾವಾರ್ಥ ॥

ಹಿಂಡಿ ಸಿದ್ಧವಾಗಿರುವ ಸೋಮವನ್ನು ಪಾನಮಾಡುವವನೂ ವೃತ್ರಹಂತಕನೂ ಆದ ಇಂದ್ರನು ಖಂಡಿತವಾಗಿಯೂ ಇಲ್ಲಿಗೆ ಬರಲಿ. ನಮ್ಮಿಂದ ದೂರವಾದ ಪ್ರದೇಶದಲ್ಲಿ ನಿಲ್ಲದಿರಲಿ. ಅನೇಕವಿಧವಾದ ರಕ್ಷಣೆಯಿಂದೊಡಗೂಡಿದ ಇಂದ್ರನು ನಮ್ಮ ಶತ್ರುಗಳನ್ನು ನಿಯಮನದಲ್ಲಿಡಲಿ.

## English Translation

May the drinker of the Soma libation, the slayer of Vritra, approach, let him not be far form us; let the granter of many protections keep in check (our enemies).

। ಸಂಹಿತಾಪಾಠಃ ।

ಏಹ ಹರೀ ಬ್ರಹ್ಮಯುಜಾ ಶಗ್ಮಾ ವಕ್ಷತಃ ಸಖಾಯಂ ।

ಗೀರ್ಭಿಃ ಶ್ರುತಂ ಗಿರ್ವಣಸಂ ॥ ೨೭ ॥

। ಪದಪಾಠಃ ।

ಆ । ಇಹ । ಹರೀ ಇತಿ । ಬ್ರಹ್ಮಯುಜಾ । ಶಗ್ಮಾ । ವಕ್ಷತಃ । ಸಖಾಯಂ ।
ಗೀಃಽಭಿಃ । ಶ್ರುತಂ । ಗಿರ್ವಣಸಂ ॥ ೨೭ ॥

। ಸಾಯಣಭಾಷ್ಯಂ ।

ಬ್ರಹ್ಮಯುಜಾ ಬ್ರಹ್ಮಣಾ ಮಂತ್ರೇಣ ಸ್ತೋತ್ರೇಣ ಹವಿಷಾ ವಾ ಯುಜ್ಯಮಾನೌ ಶಗ್ಮಾ ಶಗ್ಮೌ ಸುಖಕರೌ ಶಕ್ತೌ ವಾ ಈದೃಶೌ ಹರೀ ಅಶ್ವಾವಿಹಾಸ್ಮಿನ್ಯಜ್ಞೇ ಸಖಾಯಂ ಸಮಾನಖ್ಯಾನಂ ಮಿತ್ರಭೂತಮಿಂದ್ರಮಾ ವಕ್ಷತಃ । ಆವಹತಾಂ । ಕೀದೃಶಮಿಂದ್ರಂ । ಗೀರ್ಭಿಃ ಸ್ತುತಿಭಿಃ ಶ್ರುತಂ ಪ್ರಖ್ಯಾಪಿತಮಾಹಾತ್ಮ್ಯಂ ಗಿರ್ವಣಸಂ ಗಿರಾಂ ಸಂಭಕ್ತಾರಂ ಸ್ತುತಿಭಿಃ ಸಂಭಜನೀಯಂ ವಾ ॥

। ಪ್ರತಿಪದಾರ್ಥ ।

ಬ್ರಹ್ಮಯುಜಾ—ಸ್ತುತಿಪೂರ್ವಕವಾಗಿ ರಥಕ್ಕೆ ಯೋಜಿಸಲ್ಪಡತಕ್ಕವೂ । ಶಗ್ಮಾ—ಸುಖಕಾರಕವೂ ಆದ। ಹರೀ—ಇಂದ್ರನ ಅಶ್ವಗಳು । ಗೀರ್ಭಿಃ—ಸ್ತುತಿಗಳಿಂದ । ಶ್ರುತಂ—ಪ್ರಸಿದ್ಧವಾಗಿ ಪ್ರಶಂಸಿತನಾದವನೂ । ಗಿರ್ವಣಸಂ—ಸ್ತುತಿಗಳಿಂದ ಪೂಜ್ಯನೂ । ಸಖಾಯಂ—ಮಿತ್ರಭೂತನೂ ಆದ ಇಂದ್ರನನ್ನು । ಇಹ—ಈ ಯಜ್ಞಕ್ಕೆ । ಆ ವಕ್ಷತಃ—ಕರೆತರಲಿ.

॥ ಭಾವಾರ್ಥ ॥

ಸ್ತುತಿಪೂರ್ವಕವಾಗಿ ರಥಕ್ಕೆ ಯೋಜಿಸಲ್ಪಡತಕ್ಕವೂ, ಸುಖಕಾರಕವೂ ಆದ ಇಂದ್ರನ ಅಶ್ವಗಳು ಸ್ತುತಿಗಳಿಂದ ಪೂಜ್ಯನೂ, ಮಿತ್ರಭೂತನೂ ಆದ ಇಂದ್ರನನ್ನು ಈ ಯಜ್ಞಕ್ಕೆ ಕರೆತರಲಿ.

## English Translation

May the delightful steeds who are harnessed by prayer bring hither (our) friend (Indra), magnified by praises, deserving of laudation

॥ ಸಂಹಿತಾಪಾಠಃ ॥

ಸ್ವಾದವಃ ಸೋಮಾ ಆ ಯಾಹಿ ಶ್ರೀತಾಃ ಸೋಮಾ ಆ ಯಾಹಿ ।
ಶಿಪ್ರಿನ್ನೃಷೀವಃ ಶಚೀವೋ ನಾಯಮಚ್ಛಾ ಸಧಮಾದಂ ॥ ೨೮ ॥

॥ ಪದಪಾಠಃ ॥

ಸ್ವಾದವಃ । ಸೋಮಾಃ । ಆ । ಯಾಹಿ । ಶ್ರೀತಾಃ । ಸೋಮಾಃ । ಆ । ಯಾಹಿ ।

ಶಿಪ್ರಿನ್ । ಋಷಿऽವಃ । ಶಚೀऽವಃ । ನ । ಅಯಂ । ಅಚ್ಛ । ಸಧऽಮಾದಂ ॥ ೨೮ ॥

॥ ಸಾಯಣಭಾಷ್ಯಂ ॥

ಹೇ ಶಿಪ್ರಿನ್ । ಶಿಪ್ರಂ ಶಿರಸ್ತ್ರಾಣಂ । ಯದ್ವಾ । ಶಿಪ್ರೇ ಹನೂ ನಾಸಿಕೇ ವಾ । ತದ್ವನ್ ಹೇ ಋಷೀವ ಋಷಿಭಿಃ ಸ್ತೋತೃಭಿರ್ಯುಕ್ತ ಶಚೀವಃ ಶಕ್ತಿಮನ್ ಏವಂಭೂತ ಹೇ ಇಂದ್ರ ಅಸ್ಮದೀಯಾ ಇಮೇ ಸೋಮಾಃ ಸ್ವಾದವಃ । ಅಭಿಷವಾದಿಭಿಃ ಸಂಸ್ಕೃತತ್ವೇನಾಸ್ವಾದನಾರ್ಹಾ ಜಾತಾಃ । ಅತಸ್ತ್ವಮಾ ಯಾಹಿ । ಆಗಚ್ಛ । ತಥಾ ತೇ ಸೋಮಾಃ ಶ್ರೀತಾಃ । ಪಯಆದಿಭಿಃ ಕ್ರಯಣದ್ರವ್ಯೈರ್ಮಿಶ್ರಿತಾಃ ಸಂಸ್ಕೃತಾಃ । ಅತೋऽಸ್ಮಾ ಯಾಹಿ । ಆಗಚ್ಛ । ನೇತಿ ಸಂಪ್ರತ್ಯರ್ಥೇ । ನ ಸಂಪ್ರತ್ಯಯಂ ಸ್ತೋತಾ ಸಧಮಾದಂ ಸಹ ಮಾದಯಿತವ್ಯಂ ತ್ವಾಮಚ್ಛಾಭಿಮುಖಂ ಸ್ತೌತೀತಿ ಶೇಷಃ । ಅತೋऽಸ್ಮಾಯಾಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಋಷೀವಃ—ಋಷಿಗಳಿಂದ ಪೂಜಿಸಲ್ಪಡುವವನೂ । ಶಿಪ್ರಿನ್—ಆಕರ್ಷಕವಾದ ಕೆನ್ನೆಯುಳ್ಳವನೂ । ಶಚೀವಃ—ಅತ್ಯಂತ ಶಕ್ತಿಯುತನೂ ಆದ ಎಲೈ ಇಂದ್ರನೇ । ಸೋಮಾಃ—ನಮ್ಮಿಂದ ಹಿಂಡಲ್ಪಟ್ಟ ಈ ಸೋಮ ರಸಗಳು । ಸ್ವಾದವಃ—ರುಚಿಕರವಾಗಿವೆ । ಆ ಯಾಹಿ—ಇದರ ಪಾನಾರ್ಥವಾಗಿ ಬಾ । ಸೋಮಾಃ—ಇದೇ ಸೋಮರಸಗಳು । ಶ್ರೀತಾಃ—ಕ್ಷೀರಾದಿ ಕ್ರಯಣೀಯದ್ರವ್ಯಗಳಿಂದ ಮಿಶ್ರಿತವಾಗಿವೆ । ಆ ಯಾಹಿ—ಅದುದರಿಂದ ಅವನ್ನು ಪಾನಮಾಡಲು ಬಾ । ನ—ಈಗ । ಅಯಂ—ಈ ಸ್ತುತಿಕರ್ತನು । ಸಧಮಾದಂ—ಇತರ ದೇವತೆಗಳೊಡನೆ ಹರ್ಷವನ್ನನುಭವಿಸುವ ನಿನ್ನನ್ನು । ಅಚ್ಛ—ನಿನಗಭಿಮುಖನಾಗಿದ್ದು (ಸ್ತುತಿಸುತ್ತಾನೆ).

॥ ಭಾವಾರ್ಥ ॥

ಋಷಿಗಳಿಂದ ಪೂಜಿಸಲ್ಪಡುವವನೂ, ಆಕರ್ಷಕವಾದ ಕೆನ್ನೆಯುಳ್ಳವನೂ, ಅತ್ಯಂತ ಶಕ್ತಿಯುತನೂ ಆದ ಎಲೈ ಇಂದ್ರನೇ, ನಮ್ಮಿಂದ ಹಿಂಡಲ್ಪಟ್ಟ ಈ ಸೋಮರಸಗಳು ರುಚಿಕರವಾಗಿವೆ. ಇದರ ಪಾನಾರ್ಥವಾಗಿ ಬಾ. ಇದೇ ಸೋಮರಸಗಳು ಕ್ಷೀರಾದಿಕ್ರಯಣದ್ರವ್ಯಗಳಿಂದ ಮಿಶ್ರಿತವಾಗಿವೆ. ಅದುದರಿಂದ ಅವನ್ನು ಪಾನಮಾಡಲು ಬಾ. ಈಗ ಈ ಸ್ತುತಿಕರ್ತನು ಇತರ ದೇವತೆಗಳೊಡನೆ ಹರ್ಷವನ್ನನುಭವಿಸುವ ನಿನ್ನನ್ನು ನಿನಗಭಿಮುಖನಾಗಿದ್ದು ಸ್ತುತಿಸುತ್ತಾನೆ.

## English translation

Handsome-chinned (Indra), the honoured of sages, the doer of great deeds, come, for well-flavoured are the Soma juices; come, for the libations are ready mixed: this (your worshipper) now (invites you) to be present at this social exhilarating rite.

॥ ಸಂಹಿತಾಪಾಠಃ ॥

ಸ್ತುತಶ್ಚ ಯಾಸ್ತ್ವಾ ವರ್ಧಂತಿ ಮಹೇ ರಾಧಸೇ ನೃಮ್ಣಾಯ ।
ಇಂದ್ರ ಕಾರಿಣಂ ವೃಧಂತಃ ॥ ೨೯ ॥

॥ ಪದಪಾಠಃ ॥

ಸ್ತುತಃ । ಚ । ಯಾಃ । ತ್ವಾ । ವರ್ಧಂತಿ । ಮಹೇ । ರಾಧಸೇ । ನೃಮ್ಣಾಯ ।
ಇಂದ್ರ । ಕಾರಿಣಂ । ವೃಧಂತಃ ॥ ೨೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಕಾರಿಣಂ ಕರ್ಮಣಾಂ ಕರ್ತಾರಂ ವೃಧಂತೋ ವರ್ಧಯಂತೋ ಯೇ ಸ್ತುತಃ ಸ್ತೋತಾರಃ ಯಾಶ್ಚ ತದೀಯಾಃ ಸ್ತುತಯಸ್ತ್ವಾ ತ್ವಾಂ ವರ್ಧಂತಿ ವರ್ಧಯಂತಿ । ಕಿಮರ್ಥಂ । ಮಹೇ ಮಹತೇ ರಾಧಸೇ ಧನಾಯ ನೃಮ್ಣಾಯ ಬಲಾಯ ಚ । ಉಭಯೋರರ್ಥಾಯ । ತೇ ತದುಭಯಂ ಲಭಂತ ಇತ್ಯಧ್ಯಾಹಾರಃ । ಯದ್ವಾ । ಉತ್ತರತ್ರ ತೇ ಸತ್ರಾ ದಧಿರೇ ಶವಾಂಸೀತಿ ಸಂಬಂಧಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಮಹೇ—ಮಹತ್ತಾದ । ರಾಧಸೇ—ಧನದ ನಿಮಿತ್ತವಾಗಿಯೂ । ನೃಮ್ಣಾಯ—ಶಕ್ತ್ಯರ್ಥವಾಗಿಯೂ । ಕಾರಿಣಂ—ಕರ್ಮಕರ್ತನಾದ ನಿನ್ನನ್ನು । ಸ್ತುತಃ—ಯಾವ ಸ್ತುತಿಕರ್ತರು । ವೃಧಂತಃ—ನಿನ್ನ ಬೆಳವಣಿಗೆಗೆ ಕಾರಣರಾಗಿರುವರೋ । ಯಾಃ ಚ—ಯಾವ ನಿನ್ನ ಸ್ತುತಿಗಳು । ತ್ವಾ—ನಿನ್ನನ್ನು । ವರ್ಧಂತಿ—ಬೆಳೆಸುವವೋ (ಅವರೆಲ್ಲರೂ ಧನವನ್ನೂ ಶಕ್ತಿಯನ್ನೂ ಪಡೆಯುತ್ತಾರೆ).

॥ ಭಾವಾರ್ಥ ॥

ಎಲೈ ಇಂದ್ರನೇ, ಮಹತ್ತಾದ ಧನದ ನಿಮಿತ್ತವಾಗಿಯೂ ಅತಿಯಾದ ಶಕ್ತ್ಯರ್ಥವಾಗಿಯೂ ಯಾವ ಸ್ತುತಿಕರ್ತರು ಪ್ರಶಸ್ತವಾದ ಸ್ತುತಿಗಳಿಂದ ನಿನ್ನ ಬೆಳವಣಿಗೆಗೆ ಕಾರಣರಾಗಿರುವರೋ ಅವರೆಲ್ಲರೂ ಸಹ ಧನವನ್ನೂ, ಶಕ್ತಿಯನ್ನೂ ಪಡೆಯುತ್ತಾರೆ.

## English Translation

They who praising you magnify you, Indra, the institutor of rites, and those (hymns which glorify) you have (for their object) great riches and strength.

। ಸಂಹಿತಾಪಾಠಃ ।

ಗಿರಶ್ಚ ಯಾಸ್ತೇ ಗಿರ್ವಾಹ ಉಕ್ಥಾ ಚ ತುಭ್ಯಂ ತಾನಿ ।

ಸತ್ರಾ ದಧಿರೇ ಶವಾಂಸಿ ॥ ೩೦ ॥

। ಪದಪಾಠಃ ।

ಗಿರಃ । ಚ । ಯಾಃ । ತೇ । ಗಿರ್ವಾಹಃ । ಉಕ್ಥಾ । ಚ । ತುಭ್ಯಂ । ತಾನಿ ।

ಸತ್ರಾ । ದಧಿರೇ । ಶವಾಂಸಿ ॥ ೩೦ ॥

। ಸಾಯಣಭಾಷ್ಯಂ ।

ಹೇ ಗಿರ್ವಾಹೋ ಗೀರ್ಭಿಃ ಸ್ತುತಿಭಿರ್ವಹನೀಯೇಂದ್ರ ತೇ ತುಭ್ಯಂ ಕ್ರಿಯಮಾಣಾ ಗಿರಶ್ಚ ಸ್ತುತಿರೂಪಾಶ್ಚ ವಾಚೋ ಯಾಃ ಸಂತಿ । ಉಕ್ಥಾ ಚೋಕ್ಥಾನಿ ಚ ಶಸ್ತ್ರರೂಪಾಣಿ ಚ ವಚಾಂಸಿ ತುಭ್ಯಂ ತ್ವದರ್ಥಂ ಕ್ರಿಯಮಾಣಾನಿ ಯಾನಿ ಸಂತಿ । ತಾನಿ ಸರ್ವಾಣಿ ಸತ್ರಾ ಸಹೈವ ಶವಾಂಸಿ ಬಲಾನಿ ದಧಿರೇ । ತವ ವಿದಧಿರೇ ॥

। ಪ್ರತಿಪದಾರ್ಥ ।

ಗಿರ್ವಾಹಃ—ಸ್ತುತಿಗಳಿಂದ ವಹಿಸಲ್ಪಡತಕ್ಕ ಎಲೈ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿ ಪಠಿತವಾದ । ಗಿರಶ್ಚ—ಸ್ತುತಿರೂಪವಾದ ವಾಕ್ಯಗಳು । ಯಾಃ—ಯಾವುವು ಇರುವುವೋ । ತುಭ್ಯಃ—ನಿನಗರ್ಪಿತವಾದ । ಉಕ್ಥಾ ಚ—ಉಕ್ಥರೂಪವಾದುದೂ ಶಸ್ತ್ರಾತ್ಮಿಕವಾದುದೂ ಆದ ಯಾವ ಸ್ತುತಿಗಳಿವೆಯೋ । ತಾನಿ—ಅವೆಲ್ಲವೂ ಸಹ । ಸತ್ರಾ—ಒಟ್ಟಿಗೆ ಸೇರಿ । ಶವಾಂಸಿ—ನಿನ್ನ ಬಲಗಳನ್ನು । ದಧಿರೇ—ಧರಿಸುತ್ತವೆ.

॥ ಭಾವಾರ್ಥ ॥

ಸ್ತುತಿಗಳಿಂದ ವಹಿಸಲ್ಪಡತಕ್ಕ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಪಠಿತವಾದ ಸ್ತುತಿವಾಕ್ಯಗಳು ಯಾವುವು ಇರುವುವೋ, ಉಕ್ಥರೂಪವೂ, ಶಸ್ತ್ರಾತ್ಮಿಕವೂ ಆದ ಯಾವ ಸ್ತುತಿಗಳು ನಿನಗರ್ಪಿತವಾಗಿವೆಯೋ ಅವೆಲ್ಲವೂ ಒಟ್ಟಿಗೆ ಸೇರಿ ನಿನ್ನ ಬಲಗಳನ್ನು ಧರಿಸುತ್ತವೆ. (ವೃದ್ಧಿಪಡಿಸುತ್ತವೆ)

## English Translation

Upborne by hymns, those your praises and those prayers which are addressed to you, all combined, sustain your energies.

। ಸಂಹಿತಾಪಾಠಃ ।

ಏವೇದೇಷ ತುವಿಕೂರ್ಮಿರ್ವಾಜಾಁ ಏಕೋ ವಜ್ರಹಸ್ತಃ ।

ಸನಾದಮೃಕ್ತೋ ದಯತೇ ॥ ೩೧ ॥

॥ ಪದಪಾಠಃ ॥

ಏವ । ಇತ್ । ಏಷಃ । ತುವಿऽಕೂರ್ಮಿಃ । ವಾಜಾನ್ । ಏಕಃ । ವಜ್ರऽಹಸ್ತಃ ।

ಸನಾತ್ । ಅಮೃಕ್ತಃ । ದಯತೇ ॥ ೩೧ ॥

॥ ಸಾಯಣಭಾಷ್ಯಂ ॥

ಏಷ ಏವೇಂದ್ರಸ್ತುವಿಕೂರ್ಮಿರ್ಬಹುಕರ್ಮಾ । ಇದಿತಿ ಪೂರಕಃ । ಏಕಃ ಸರ್ವೇಷು ದೇವೇಷು ಮುಖ್ಯೋ ವಜ್ರಹಸ್ತೋ ವಜ್ರಬಾಹುಃ ಸನಾಚ್ಚಿರಕಾಲಾದಾರಭ್ಯಾಮೃಕ್ತಃ ಶತ್ರುಭಿರಬಾಧಿತಃ ಏವಂಭೂತಃ ಸ ಇಂದ್ರೋ ವಾಜಾನನ್ನಾನಿ ಬಲಾನಿ ವಾ ದಯತೇ । ಸ್ತೋತೃಭ್ಯೋ ದದಾತಿ ॥

॥ ಪ್ರತಿಪದಾರ್ಥ ॥

ತುವಿಕೂರ್ಮಿಃ—ಅನೇಕ ಕರ್ಮಕರ್ತನೂ । ಏಕಃ—ಸಕಲದೇವತೆಗಳಲ್ಲಿಯೂ ಅತಿಮುಖ್ಯನೂ । ವಜ್ರಹಸ್ತಃ—ಹಸ್ತದಲ್ಲಿ ವಜ್ರಾಯುಧವನ್ನು ಧರಿಸಿರುವವನೂ । ಸನಾತ್—ಬಹುಕಾಲದಿಂದಲೂ । ಅಮೃಕ್ತಃ—ಶತ್ರುಗಳಿಂದ ಅಹಿಂಸಿತನೂ ಆದ । ಏಷ ಏವೇತ್—ಈ ಇಂದ್ರನು ಮಾತ್ರ । ವಾಜಾನ್—ಅನ್ನಗಳನ್ನು । ದಯತೇ—ಸ್ತೋತೃಗಳಿಗೆ ಕೊಡುತ್ತಾನೆ.

॥ ಭಾವಾರ್ಥ ॥

ಅನೇಕ ಕರ್ಮಕರ್ತನೂ, ಸಕಲ ದೇವತೆಗಳಲ್ಲಿಯೂ ಪ್ರಧಾನನೂ, ಹಸ್ತದಲ್ಲಿ ವಜ್ರಾಯುಧವನ್ನು ಧರಿಸಿರುವವನೂ ಬಹುಕಾಲದಿಂದಲೂ ಶತ್ರುಗಳಿಂದ ಅಹಿಂಸಿತನೂ ಆದ ಕೇವಲ ಇಂದ್ರನು ಮಾತ್ರ ಸ್ತೋತೃಗಳಿಗೆ ಅನ್ನಗಳನ್ನು ಕೊಡಬಲ್ಲನು.

## English Translation

Verily this accomplisher of many acts, the chief ( among the gods ), the wielder of the thunderbolt, he who has evrr been unconquered, gives food (to his votaries).

॥ ಸಂಹಿತಾಪಾಠಃ ॥

ಹಂತಾ ವೃತ್ರಂ ದಕ್ಷಿಣೇನೇಂದ್ರಃ ಪುರೂ ಪುರುಹೂತಃ ।

ಮಹಾನ್ಮಹೀಭಿಃ ಶಚೀಭಿಃ ॥ ೩೨ ॥

॥ ಪದಪಾಠಃ ॥

ಹಂತಾ । ವೃತ್ರಂ । ದಕ್ಷಿಣೇನ । ಇಂದ್ರಃ । ಪುರು । ಪುರುऽಹೂತಃ ।

ಮಹಾನ್ । ಮಹೀಭಿಃ । ಶಚೀಭಿಃ ॥ ೩೨ ॥

। ಸಾಯಣಭಾಷ್ಯಂ ।

ಅಯಮಿಂದ್ರೋ ದಕ್ಷಿಣೇನ ಹಸ್ತೇನೈಕೇನೈವ ವೃತ್ರಮಾವರಕಮಸುರಂ ಹಂತಾ ಸಾಧು ಹತವಾನ್ ॥ ಹಂತೇಃ ಸಾಧುಕಾರಿಣಿ ತೃನ್ । ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ ॥ ಪುರು ಪುರುಷು ॥ ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ ॥ ಬಹುಷು ದೇಶೇಷು ಪುರುಹೂತೋ ಮಹೀಭಿರ್ಮಹತೀಭಿಃ ಶಚೀಭಿಃ ಕ್ರಿಯಾಭಿಃ ಶಕ್ತಿಭಿರ್ವಾ ಮಹಾನ್ ಸರ್ವೇಭ್ಯ ಉತ್ಕೃಷ್ಟಃ । ಏವಂಭೂತ ಇಂದ್ರೋऽಸ್ಮಾನ್ರಕ್ಷತ್ವಿತ್ಯರ್ಥಃ ॥

। ಪ್ರತಿಪದಾರ್ಥ ।

ಇಂದ್ರಃ—ಇಂದ್ರನು । ದಕ್ಷಿಣೇನ—ಕೇವಲ ಬಲಗೈಯಿನಿಂದಲೇ । ವೃತ್ರಂ—ವೃತ್ರಾಸುರನನ್ನು । ಹಂತಾ—ಕೊಲ್ಲುವವನಾಗುತ್ತಾನೆ । ಪುರು—ಅನೇಕ ಪ್ರದೇಶಗಳಲ್ಲಿ। ಪುರುಹೂತಃ—ಅನೇಕರಿಂದ ಕರೆಯಲ್ಪಟ್ಟ। ಮಹೀಭಿಃ—ಮಾಹಾತ್ಮ್ಯವುಳ್ಳ । ಶಚೀಭಿಃ—ಕರ್ಮಗಳಿಂದ । ಮಹಾನ್—ಅತ್ಯಧಿಕವಾದ ಪ್ರಭಾವವುಳ್ಳವನಾಗುತ್ತಾನೆ.

॥ ಭಾವಾರ್ಥ ॥

ಇಂದ್ರನು ಕೇವಲ ಬಲಗೈಯಿನಿಂದಲೇ ವೃತ್ರಾಸುರನನ್ನು ಕೊಲ್ಲುವವನಾಗುತ್ತಾನೆ. ಅನೇಕ ಪ್ರದೇಶಗಳಲ್ಲಿ ಅನೇಕರಿಂದ ಕರೆಯಲ್ಪಟ್ಟ ಮಾಹಾತ್ಮ್ಯವುಳ್ಳ ತನ್ನ ಕರ್ಮಗಳ ಫಲವಾಗಿ ಅತ್ಯಧಿಕವಾದ ಪ್ರಭಾವವುಳ್ಳವನಾಗುತ್ತಾನೆ

## English Translation

Indra, the slayer of Vritra with his right hand, the invoked of many in many (places), the mighty by mighty deeds.

॥ ಸಂಹಿತಾಪಾಠಃ ॥

ಯಸ್ಮಿನ್ವಿಶ್ವಾಶ್ಚರ್ಷಣಯ ಉತ ಚ್ಯೌತ್ನಾ ಜ್ರಯಾಂಸಿ ಚ ।

ಅನು ಘೇನ್ಮಂದೀ ಮಘೋನಃ ॥ ೩೩ ॥

॥ ಪದಪಾಠಃ ॥

ಯಸ್ಮಿನ್ । ವಿಶ್ವಾಃ । ಚರ್ಷಣಯಃ । ಉತ । ಚ್ಯೌತ್ನಾ । ಜ್ರಯಾಂಸಿ । ಚ ।

ಅನು । ಘ । ಇತ್ । ಮಂದೀ । ಮಘೋನಃ ॥ ೩೩ ॥

॥ ಸಾಯಣಭಾಷ್ಯಂ ॥

ವಿಶ್ವಾಃ ಸರ್ವಾಶ್ಚರ್ಷಣಯಃ ಪ್ರಜಾ ಯಸ್ಮಿನ್ನಿಂದ್ರೇ ವರ್ತಂತೇ ಯದಧೀನಾ ಭವಂತಿ । ಉತಾಪಿ ಚ ಚ್ಯೌತ್ನಾ ಚ್ಯೌತ್ನಾನಿ । ಬಲನಾಮೈತತ್ । ಪ್ರಚ್ಯುತಿಸಾಧನಾನಿ ಬಲಾನಿ ಚ ಜ್ರಯಾಂಸಿ ಶತ್ರುವಿಷಯಾಣ್ಯಭಿಭವನಾನಿ ಯಸ್ಮಿನ್ನಿಂದ್ರೇ ವರ್ತಂತೇ ॥ ಜಿ ಜ್ರಿ ಅಭಿಭವನ ಇತಿ ಧಾತುಃ ॥ ಸ ಇಂದ್ರೋ ಮಘೋನಃ । ಮಘಂ ಹವಿರ್ಲಕ್ಷಣಂ ಧನಂ । ತದ್ವತೋ ಯಜಮಾನಾನನು ಮಂದ್ಯನುಮೋದಕೋ ಭವತಿ । ಘೇದಿತಿ ಪೂರಕೌ । ಯದ್ವಾ । ಮಂದೀ ಸ್ತುತ್ಯಃ ಸ ಇಂದ್ರಸ್ತಾನನು ಗೃಹ್ಣಾತೀತಿ ಶೇಷಃ । ಅಥವಾ ಯಸ್ಯ ಮಘೋನೋ ಧನವತ ಇಂದ್ರಸ್ಯ ಮಂದೀ ಸ್ತೋತಾನುಕೂಲೋ ಭವತಿ ಏಷ ಏತಾನೀತ್ಯುತ್ತರತ್ರೈಕವಾಕ್ಯತಾ ॥

॥ ಪ್ರತಿಪದಾರ್ಥ ॥

ವಿಶ್ವಾಃ—ಸಮಸ್ತವಾದ । ಚರ್ಷಣಯಃ—ಪ್ರಜೆಗಳೂ । ಯಸ್ಮಿನ್—ಯಾವ ಇಂದ್ರನಲ್ಲೇ ಆಶ್ರಯುವನ್ನು ಹೊಂದಿದ್ದಾರೆಯೋ । ಉತ—ಮತ್ತು । ಚ್ಯೌತ್ನಾ ಚ—ಯಾರ ಬಲವು । ಜ್ರಯಾಂಸಿ—ಶತ್ರುನಾಶಕವಾಗಿರುವುದೋ ಅಂತಹ ಇಂದ್ರನು । ಮಘೋನಃ—ಹವಿಸ್ಸಿನ ರೂಪದ ಧನವಿರುವ ಯಜಮಾನನಿಗೆ । ಘೇತ್—ಖಂಡಿತವಾಗಿಯೂ । ಅನು ಮಂದೀ—ಹರ್ಷವನ್ನುಂಟುಮಾಡುತ್ತಾನೆ.

॥ ಭಾವಾರ್ಥ ॥

ಸಮಸ್ತವಾದ ಪ್ರಜೆಗಳೂ ಯಾವ ಇಂದ್ರನಲ್ಲೇ ಆಶ್ರಯುವನ್ನು ಹೊಂದಿದ್ದಾರೆಯೋ ಮತ್ತು ಯಾರ ಬಲವು ಶತ್ರುನಾಶಕವಾಗಿರುವುದೋ ಅಂತಹ ಇಂದ್ರನು ಹವಿಸ್ಸಿನ ರೂಪದ ಧನವಿರುವ ಯಜಮಾನನಿಗೆ ಖಂಡಿತ ಹರ್ಷವನ್ನುಂಟುಮಾಡುತ್ತಾನೆ

## English Translation

He upon whom all men depend, (in whom) overwhelming energies (abide), he verily is the delighter of the opulent (worshipper).

॥ ಸಂಹಿತಾಪಾಠಃ ॥

ಏಷ ಏತಾನಿ ಚಕಾರೇಂದ್ರೋ ವಿಶ್ವಾ ಯೋಽತಿ ಶೃಣ್ವೇ ।

ವಾಜದಾವಾ ಮಘೋನಾಂ ॥ ೩೪ ॥

॥ ಪದಪಾಠಃ ॥

ಏಷಃ । ಏತಾನಿ । ಚಕಾರ । ಇಂದ್ರಃ । ವಿಶ್ವಾ । ಯಃ । ಅತಿ । ಶೃಣ್ವೇ ।

ವಾಜ್ಯದಾವಾ । ಮಘೋನಾಂ ॥ ೩೪ ॥

॥ ಸಾಯಣಭಾಷ್ಯಂ ॥

ಏಷ ಇಂದ್ರೋ ವಿಶ್ವಾ ವಿಶ್ವಾನಿ ವ್ಯಾಪ್ತಾನ್ಯೇತಾನಿ ವೃತ್ರವಧಾದೀನಿ ವೀರ್ಯಾಣಿ । ಯದ್ವಾ । ಪೃಥಿವ್ಯಾದೀನಿ ಭೂತಜಾತಾನಿ । ತಾನಿ ಚಕಾರ । ಕೃತವಾನ್ । ಯ ಇಂದ್ರೋ ಬಲೈರತಿಶಯಿತಃ ಶೃಣ್ವೇ ಶ್ರೂಯತೇ ಸರ್ವತ್ರ ಸ್ತೂಯತೇ । ಅಪಿ ಚ ಸ ಇಂದ್ರೋ ಮಘೋನಾಂ ಹವಿಷ್ಮತಾಂ ಯಜಮಾನಾನಾಂ ವಾಜದಾವಾ ವಾಜಸ್ಯಾನ್ನಸ್ಯ ದಾತಾ ಭವತಿ ॥

॥ ಪ್ರತಿಪದಾರ್ಥ ॥

ಏಷಃ ಇಂದ್ರಃ—ಇದೇ ಇಂದ್ರನು । ವಿಶ್ವಾ—ಸಮಸ್ತವಾದ । ಏತಾನಿ—ವೃತ್ರವಧಾದಿ ವೀರ್ಯಕರ್ಮಗಳನ್ನೆಲ್ಲಾ । ಚಕಾರ—ತಾನೊಬ್ಬನೇ ಮಾಡಿದನು । ಯಃ—ಯಾವ ಇಂದ್ರನು । ಅತಿ ಶೃಣ್ವೇ—ತನ್ನ ಅತಿಶಯವಾದ ಮಾಹಾತ್ಮ್ಯದಿಂದ ಪ್ರಸಿದ್ಧನಾಗಿದ್ದಾನೆಯೋ (ಅದೇ ಇಂದ್ರನು) । ಮಘೋನಾಂ—ಹವಿಸ್ಸನ್ನು ಹೊಂದಿರುವ ಯಜಮಾನರಿಗೆ । ವಾಜದಾವಾ—ಅನ್ನದಾತನಾಗುತ್ತಾನೆ.

॥ ಭಾವಾರ್ಥ ॥

ಇದೇ ಇಂದ್ರನು, ಸಮಸ್ತವಾದ ವೃತ್ರವಧಾದಿಕರ್ಮಗಳನ್ನೂ ಪೃಥಿವ್ಯಾದಿ ಸೃಷ್ಟಿಕರ್ಮಗಳನ್ನೂ ತಾನೊಬ್ಬನೇ ಮಾಡಿದನು. ಯಾವ ಇಂದ್ರನು ತನ್ನ ಅತಿಶಯವಾದ ಮಾಹಾತ್ಮ್ಯದಿಂದ ಪ್ರಸಿದ್ಧನಾಗಿದ್ದಾನೆಯೋ ಅದೇ ಇಂದ್ರನು ಹವಿಸ್ಸನ್ನು ಹೊಂದಿರುವ ಯಜಮಾನರಿಗೆ ಅನ್ನದಾತನಾಗುತ್ತಾನೆ.

## English Translation

This Indra has made all these (beings), who is thence exceedingly renowned ; he is the donor of food to opulent worshippers.

॥ ಸಂಹಿತಾಪಾಠಃ ॥

ಪ್ರಭರ್ತಾ ರಥಂ ಗವ್ಯಂತಮಪಾಕಾಚ್ಚಿದ್ಯಮವತಿ ।

ಇನೋ ವಸು ಸ ಹಿ ವೋಳ್ಹಾ ॥ ೩೫ ॥

॥ ಪದಪಾಠಃ ॥

ಪ್ರಽಭರ್ತಾ । ರಥಂ । ಗವ್ಯಂತಂ । ಅಪಾಕಾತ್ । ಚಿತ್ । ಯಂ । ಅವತಿ ।

ಇನಃ । ವಸು । ಸಃ । ಹಿ । ವೋಳ್ಹಾ ॥ ೧೫ ॥

॥ ಸಾಯಣಭಾಷ್ಯಂ ॥

ಪ್ರಭರ್ತಾ ಪ್ರಹರ್ತಾ ಪ್ರಹರಣಶೀಲ ಇಂದ್ರೋ ರಥಂ ರಂಹಣಂ ಗವ್ಯಂತಂ ಗಾ ಇಚ್ಛಂತಂ ಯಂ ಸ್ತೋತಾರಮಪಾಕಾದವಿಪಕ್ವಪ್ರಜ್ಞಾಚ್ಛತ್ರೋಃ । ಚಿಚ್ಛಬ್ದೋಽನುಕ್ತಸಮುಚ್ಚಯಾರ್ಥಃ । ವಿಪಕ್ವ-ಪ್ರಜ್ಞಾದಪ್ಯವತಿ ರಕ್ಷತಿ ಸ ಹಿ ಸ ಖಲು ಸ್ತೋತೇನ ಈಶ್ವರಃ ಸನ್ ವಸು ಧನಂ ವೋಳ್ಹಾ ಸಾಧುವಾಹೀ ಭವತಿ ॥ ವಹೇಃ ಸಾಧುಕಾರಿಣಿ ತೃನ್ । ಅತೋ ನ ಲೋಕಾವ್ಯಯೇತಿ ಕರ್ಮಣಿ ಷಷ್ಠ್ಯಾಃ ಪ್ರತಿಷೇಧಃ ॥

॥ ಪ್ರತಿಪದಾರ್ಥ ॥

ಪ್ರಭರ್ತಾ—ಶತ್ರುದಮನದಿಂದ ಯಜಮಾನನನ್ನು ರಕ್ಷಿಸುವ ಇಂದ್ರನು । ರಥಂ—ಪೂಜಾನಿರತನೂ । ಗವ್ಯಂತಂ—ಗೋವುಗಳನ್ನು ಇಚ್ಛಿಸುವವನೂ ಆದ । ಯಂ—ಯಾವ ಯಜಮಾನನನ್ನು । ಅಪಾಕಾತ್ ಚಿತ್—ವಿವೇಕಜ್ಞಾನವಿಲ್ಲದ ಶತ್ರುವಿನಿಂದ । ಅವತಿ—ರಕ್ಷಿಸುವನೋ । ಸ ಹಿ—ಅದೇ ಯಜಮಾನನು । ಇನಃ—ಪ್ರಭುವಾಗಿ । ವಸು—ಧನವನ್ನು । ವೋಳ್ಹಾ—ವಹಿಸುತ್ತಾನೆ.

॥ ಭಾವಾರ್ಥ ॥

ಶತ್ರುಗಳಿಂದ ಯಜಮಾನನನ್ನು ರಕ್ಷಿಸಿ ಭರಿಸುವ ಇಂದ್ರನು ಪೂಜಾನಿರತನೂ, ಗೋವುಗಳನ್ನು ಇಚ್ಛಿಸುವವನೂ ಆದ ಯಾವ ಯಜಮಾನನನ್ನು ವಿವೇಕಜ್ಞಾನವಿಲ್ಲದ ಶತ್ರುವಿನಿಂದ ರಕ್ಷಿಸುವನೋ ಅದೇ ಯಜಮಾನನು ಪ್ರಭುವಾಗಿ ಸಕಲ ಧನವನ್ನೂ ತಾನೇ ವಹಿಸುತ್ತಾನೆ.

## English Translation

He whom, adoring, and desirous of cattle, the protector (Indra) defends against an ignorant (foe), becomes a prince, the possessor of wealth.

॥ ಸಂಹಿತಾಪಾಠಃ ॥

ಸನಿತಾ ವಿಪ್ರೋ ಅರ್ವದ್ಭಿರ್ಹಂತಾ ವೃತ್ರಂ ನೃಭಿಃ ಶೂರಃ ।

ಸತ್ಯೋಽವಿತಾ ವಿಧಂತಂ ॥ ೧೬ ॥

। ಪದಪಾಠಃ ।

ಸನಿತಾ । ವಿಪ್ರಃ । ಅರ್ವತ್ಽಭಿಃ । ಹಂತಾ । ವೃತ್ರಂ । ನೃಽಭಿಃ । ಶೂರಃ ।

ಸತ್ಯಃ । ಅವಿತಾ । ವಿಧಂತಂ ॥ ೩೬ ॥

। ಸಾಯಣಭಾಷ್ಯಂ ।

ವಿಪ್ರೋ ಮೇಧಾವೀ ಸ ಇಂದ್ರೋಽರ್ವದ್ಭಿರಶ್ವೈರ್ವಾಹನಭೂತೈಃ ಸನಿತಾ ಗಂತವ್ಯಂ ಸಂಭಕ್ತಾ । ತಥಾ ಶೂರಃ ಶೌರ್ಯೋಪೇತಃ ಸನ್ನೃಭಿರ್ನೇತೃಭಿರ್ಮರುದ್ಭಿಃ ಸಾರ್ಧಂ ವೃತ್ರಮಾವರಕಮಸುರಂ ಹಂತಾ ಸಾಧು ಘಾತೀ । ಅಪಿ ಚ ವಿಧಂತಂ ಪರಿಚರಂತಂ ಯಜಮಾನಂ ಸತ್ಯಃ ಸಾಧುರವಿತಥಸ್ತಥಾವೋ ವಾ ಸ ಇಂದ್ರೋಽವಿತಾ ಪರಿಚರತೋ ಯಜಮಾನಸ್ಯ ರಕ್ಷಿತಾ ಭವತಿ ॥ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತ್ರ ಕರ್ಮಣಿ ಷಷ್ಠೀ ನ ಪ್ರವರ್ತತೇ ॥

। ಪ್ರತಿಪದಾರ್ಥ ।

ವಿಪ್ರಃ—ಮೇಧಾವಿಯೂ । ಶೂರಃ—ಪರಾಕ್ರಮಿಯೂ ಆದ ಇಂದ್ರನು । ಅರ್ವದ್ಭಿಃ—ತನ್ನ ಅಶ್ವಗಳಿಂದಲೇ । ಸನಿತಾ—ವಹಿಸಲ್ಪಟ್ಟವನಾಗಿ । ನೃಭಿಃ—ನೇತೃಗಳಾದ ಮರುತ್ತುಗಳೊಡಗೂಡಿ । ವೃತ್ರಂ—ವೃತ್ರಾಸುರನನ್ನು । ಹಂತಾ—ಕೊಲ್ಲುತ್ತಾನೆ । ಸತ್ಯಃ—ಸತ್ಯಾತ್ಮಕನಾದ ಅದೇ ಇಂದ್ರನು । ವಿಧಂತಂ—ತನ್ನನ್ನು ಉಪಚರಿಸುವ ಯಜಮಾನನನ್ನು । ಅವಿತಾ—ರಕ್ಷಿಸುತ್ತಾನೆ.

। ಭಾವಾರ್ಥ ।

ಮೇಧಾವಿಯೂ, ಪರಾಕ್ರಮಿಯೂ ಆದ ಇಂದ್ರನು ತನ್ನ ಅಶ್ವಗಳಿಂದಲೇ ವಹಿಸಲ್ಪಟ್ಟವನಾಗಿ ನೇತೃಗಳಾದ ಮರುತ್ತುಗಳೊಡಗೂಡಿ ವೃತ್ರಾಸುರನನ್ನು ಕೊಲ್ಲುತ್ತಾನೆ. ಸತ್ಯಾತ್ಮಕನಾದ ಅದೇ ಇಂದ್ರನು ತನ್ನನ್ನು ಉಪಚರಿಸುವ ಯಜಮಾನನನ್ನು ರಕ್ಷಿಸುತ್ತಾನೆ.

English Translation

Liberal, wise, (borne by his own) steeds, a hero, the slayer of Vritra, (aided) by the Maruts, truthful, he is the protector of the performer of holy rites.

। ಸಂಹಿತಾಪಾಠಃ ।

ಯಜಧ್ವೈನಂ ಪ್ರಿಯಮೇಧಾ ಇಂದ್ರಂ ಸತ್ರಾಚಾ ಮನಸಾ ।

ಯೋ ಭೂತ್ಸೋಮೈಃ ಸತ್ಯಮದ್ವಾ ॥ ೩೭ ॥

॥ ಪದಪಾಠಃ ॥

ಯಜಧ್ವ । ಏನಂ । ಪ್ರಿಯಽಮೇಧಾಃ । ಇಂದ್ರಂ । ಸತ್ರಾಚಾ । ಮನಸಾ ।

ಯಃ । ಭೂತ್ । ಸೋಮೈಃ । ಸತ್ಯಽಮದ್ವಾ ॥ ೩೭ ॥

॥ ಸಾಯಣಭಾಷ್ಯಂ ॥

ಹೇ ಪ್ರಿಯಮೇಧಾಃ । ಪ್ರಿಯೋಽನುಕೂಲೋ ಮೇಧೋ ಯಜ್ಞೋ ಯೇಷಾಂ ತೇ ತಥೋಕ್ತಾಃ। ಆತ್ಮನಿ ಪೂಜಾರ್ಥಂ ಬಹುವಚನಂ। ಪ್ರಿಯಮೇಧಾ ಅಸ್ಯ। ಋಷಿರಾತ್ಮಾನಂ ಸಂಬೋಧ್ಯ ಬ್ರೂತೇ। ಹೇ ಪ್ರಿಯಮೇಧಾಃ ಸತ್ರಾಚಾ ಸಹಾಂಚತಾ ಸ್ತೋತವ್ಯೇನೇಂದ್ರೇಣ ಸಹ ವರ್ತಮಾನೇನ ಮನಸಾ ಚಿತ್ತೇನೈನಮಿಂದ್ರಂ ಯಜಧ್ವ । ಯಜಧ್ವಂ । ಬುದ್ಧಿಪೂರ್ವಕಂ ಯಜೇತ್ಯರ್ಥಃ ॥ ಯಜಧ್ವೈನಂ । ಪಾ. ೭ ೧-೪೩ । ಇತಿ ನಿಪಾತನಾದ್ವರ್ಣಲೋಪಃ ॥ ಯ ಇಂದ್ರಃ ಸೋಮೈಃ ಕರಣಭೂತೈಃ ಸತ್ಯಮದ್ವಾ ಭೂತ್ ಸತ್ಯಮದೋಽವಿತಥಮದೋ ಭವತಿ ॥

॥ ಪ್ರತಿಪದಾರ್ಥ ॥

ಪ್ರಿಯಮೇಧಾಃ—ಎಲೈ ಪ್ರಿಯಮೇಧನೇ । ಯಃ—ಯಾವ ಇಂದ್ರನು । ಸೋಮೈಃ—ಸೋಮರಸ ಪಾನದಿಂದ । ಸತ್ಯಮದ್ವಾ—ಸತ್ಯವಾಗಿಯೂ ಹರ್ಷಪೂರಿತನಾಗಿ । ಭೂತ್—ಆಗುವನೋ (ಅಂತಹ ಇಂದ್ರನೊಡನೆ) । ಸತ್ರಾಚಾ—ಒಟ್ಟಿಗೆ ಸೇರಿಕೊಂಡಿರುವ । ಮನಸಾ—ಮನಸ್ಸಿನೊಡನೆ (ಇಂದ್ರನಲ್ಲೇ ನೆಟ್ಟಮನಸ್ಸಿನೊಡನೆ) । ಏನಂ ಇಂದ್ರಂ—ಈ ಇಂದ್ರನನ್ನು । ಯಜಧ್ವ—ಪೂಜಿಸು.

॥ ಭಾವಾರ್ಥ ॥

ಎಲೈ ಪ್ರಿಯಮೇಧನೇ, ಯಾವ ಇಂದ್ರನು ಸೋಮರಸಪಾನದಿಂದ ಸತ್ಯವಾಗಿಯೂ ಹರ್ಷಪೂರಿತನಾಗುವನೋ ಅಂತಹ ಇಂದ್ರನಲ್ಲೇ ನೆಟ್ಟ ಮನಸ್ಸಿನೊಡನೆ ಎಂದರೆ ಅಚಲವಾದ ಭಕ್ತಿಯಿಂದ ಇದೇ ಇಂದ್ರನನ್ನು ಪೂಜಿಸು.

English Translation

Worship, priyamedha, with mind intent upon him, that Indra, who is truthful when exhilarated by the Soma potations.

॥ ಸಂಹಿತಾಪಾಠಃ ॥

ಗಾಥಶ್ರವಸಂ ಸತ್ಪತಿಂ ಶ್ರವಸ್ಕಾಮಂ ಪುರುತ್ಮಾನಂ ।

ಕಣ್ವಾಸೋ ಗಾತ ವಾಜಿನಂ ॥ ೩೮ ॥

॥ ಪದಪಾಠಃ ॥

ಗಾಥ॑ಽಶ್ರವಸಂ । ಸತ್ಽಪ॑ತಿಂ । ಶ್ರವಃ॑ಽಕಾಮಂ । ಪು॒ರು॒ಽತ್ಮಾನಂ॑ ।

ಕಣ್ವಾ॑ಸಃ । ಗಾ॒ತ । ವಾ॒ಜಿನಂ॑ ॥ ೩೮ ॥

। ಸಾಯಣಭಾಷ್ಯಂ ।

ಹೇ ಕಣ್ವಾಸಃ ಕಣ್ವಪುತ್ರಾ ಮೇಧಾತಿಥಯಃ । ಪೂರ್ವವದ್ಬಹುವಚನಮಾತ್ಮನಃ ಸಂಬೋಧನಂ ಚ । ಹೇ ಕಣ್ವಸ್ಯ ಪುತ್ರಾ ಮೇಧಾತಿಥಯಃ ಯೂಯಂ ಗಾಥಶ್ರವಸಂ ಗಾತವ್ಯಯಶಸಂ ಸತ್ಪತಿಂ ಸತಾಂ ಪಾಲಯಿತಾರಂ ಶ್ರವಸ್ಕಾಮಂ । ಶ್ರವಃಸ್ವನ್ನೇಷು ಹವಿಃಷು ಕಾಮೋಽಭಿಲಾಷೋ ಯಸ್ಯ ತಾದೃಶಂ । ಪುರುತ್ಮಾನಂ ಬಹ್ವಾತ್ಮಾನಂ ಯದ್ವಾ ಪುರುಷು ಬಹುಷು ಪ್ರದೇಶೇಷ್ವತಂತಂ ಸತತಂ ಗಚ್ಛಂತಂ ವಾಜಿನಂ ವೇಗವಂತಂ । ಏವಂಗುಣಕಮಿಂದ್ರಂ ಗಾತ ಗಾಯತ । ಸ್ತುಧ್ವಂ ॥

। ಪ್ರತಿಪದಾರ್ಥ ।

ಕಣ್ವಾಸಃ—ಎಲೈ ಕಣ್ವಪುತ್ರರೇ । ಗಾಥಶ್ರವಸಂ—ಗಾನರೂಪದಲ್ಲಿ ಪ್ರಶಂಸಿಸಲ್ಪಡುವ ಯಶಸ್ಸುಳ್ಳವನೂ। ಸತ್ಪತಿಂ—ಸಜ್ಜನರ ಪಾಲಕನೂ । ಶ್ರವಸ್ಕಾಮಂ—ಹವಿಸ್ಸುಗಳಲ್ಲಿ ಆದರವುಳ್ಳವನೂ । ಪುರುತ್ಮಾನಂ—ಅನೇಕ ಪ್ರದೇಶಗಳಲ್ಲಿ ವ್ಯಾಪಿಸಿರುವ ಸ್ವರೂಪವುಳ್ಳವನೂ । ವಾಜಿನಂ—ಶಕ್ತಿಯುತನೂ ಆದ ಇಂದ್ರನನ್ನು । ಗಾತ—ಗಾನ ರೂಪದಲ್ಲಿ ಪ್ರಶಂಸಿಸಿರಿ.

। ಭಾವಾರ್ಥ ।

ಎಲೈ ಕಣ್ವಪುತ್ರರೇ, ಗಾನರೂಪದಲ್ಲಿ ಪ್ರಶಂಸಿಸಲ್ಪಡುವ ಯಶಸ್ಸುಳ್ಳವನೂ, ಸಜ್ಜನರ ಪಾಲಕನೂ, ಹವಿಸ್ಸುಗಳಲ್ಲಿ ಆದರವುಳ್ಳವನೂ, ಅನೇಕ ಪ್ರದೇಶಗಳಲ್ಲಿ ವ್ಯಾಪಿಸಿರುವ ಸ್ವರೂಪವುಳ್ಳವನೂ, ಶಕ್ತಿಯುತನೂ ಆದ ಇಂದ್ರನನ್ನು ಗಾನರೂಪದಲ್ಲಿ ಪ್ರಶಂಸಿಸಿರಿ.

English Translation

Sing, Kanwas, the mighty (Indra), of widely-sung renown, the protector of the good, the desirous of (sacrificial) food, present in many places.

। ಸಂಹಿತಾಪಾಠಃ ।

ಯ ಋ॒ತೇ ಚಿ॒ದ್ಗಾಸ್ಪ॒ದೇಭ್ಯೋ॒ ದಾತ್ಸಖಾ॒ ನೃಭ್ಯಃ॒ ಶಚೀ॑ವಾನ್ ।

ಯೇ ಅ॑ಸ್ಮಿ॒ನ್ಕಾಮ॒ಮಶ್ರಿ॑ಯನ್ ॥ ೩೯ ॥

॥ ಪದಪಾಠಃ ॥

ಯಃ । ಋತೇ । ಚಿತ್ । ಗಾಃ । ಪದೇಭ್ಯಃ । ದಾತ್ । ಸಖಾ । ನೃಽಭ್ಯಃ । ಶಚೀಽವಾನ್ ।

ಯೇ । ಅಸ್ಮಿನ್ । ಕಾಮಂ । ಅಶ್ರಿಯನ್ ॥ ೬೯ ॥

॥ ಸಾಯಣಭಾಷ್ಯಂ ॥

ಪಣಿಭಿರ್ದೇವಗವೀಷ್ವಪಹೃತಾಸು ಪದೇಭ್ಯೋ ಗತಾನಾಂ ಗವಾಂ ಮಾರ್ಗೇ ಸಂಲಗ್ನೇಭ್ಯೋಽನ್ವೇಷಣಸಾಧನಭೂತೇಭ್ಯ ಋತೇ ಚಿದ್ಯತೇಽಪಿ ವಿನಾಪಿ ಸಖಾ ಮಿತ್ರಭೂತಃ ಶಚೀವಾನ್ ಕರ್ಮವಾನ್ ಪ್ರಶಸ್ತಕರ್ಮಾ ಯ ಇಂದ್ರೋ ನೃಭ್ಯೋ ನೇತೃಭ್ಯೋ ದೇವೇಭ್ಯೋ ಗಾಃ ಪಣಿಭಿರಪಹೃತಾ ದಾತ್ ಪುನರ್ದತ್ತವಾನ್ । ಯೇ ದೇವಾ ಅಸ್ಮಿನ್ನಿಂದ್ರೇ ಕಾಮಮಭಿಲಾಷಮಶ್ರಿಯನ್ ಅಸೇವಂತ ಪ್ರಾಪ್ನುವನ್। ತೇಭ್ಯೋ ನೃಭ್ಯ ಇತ್ಯನ್ವಯಃ । ತಮಿಂದ್ರಂ ಗಾತೇತಿ ಪೂರ್ವೇಣ ಸಹೈಕವಾಕ್ಯತಾ ।

॥ ಪ್ರತಿಪದಾರ್ಥ ॥

**ಯೇ**—ಯಾವ ಕರ್ಮನೇತೃಗಳು । **ಅಸ್ಮಿನ್**—ಈ ಇಂದ್ರನಲ್ಲೇ । **ಕಾಮಂ**—ತಮ್ಮ ಶ್ರದ್ಧೆಯನ್ನು । **ಅಶ್ರಿಯನ್**—ಪೂರ್ಣವಾಗಿ ಬೆಳೆಸಿದರೋ ಅಂತಹ । **ನೃಭ್ಯಃ**—ಕರ್ಮನೇತೃಗಳಿಗೆ । **ಸಖಾ**—ಮಿತ್ರಭೂತನೂ । **ಶಚೀವಾನ್**—ಕರ್ಮವಂತನೂ ಆದ । **ಯಃ**—ಯಾವ ಇಂದ್ರನು । **ಋತೇ ಚಿತ್**—ಹುಡುಕುವ ಬೇರೆ ಯಾವ ಸಾಧನವೂ ಇಲ್ಲದೇ । **ಪದೇಭ್ಯಃ**—ಕೇವಲ ಗೋವುಗಳ ಪಾದವಿನ್ಯಾಸಗಳ ಗುರುತುಗಳಿಂದಲೇ । **ಗಾಃ**—ಪಣಿಗಳಿಂದ ಅಪಹೃತವಾದ ಗೋವುಗಳನ್ನು ಹುಡುಕಿ । **ದಾತ್**—ಪುನಃ ಕೊಟ್ಟನೋ (ಅಂತಹ ಇಂದ್ರನನ್ನು ಪ್ರಶಂಸಿಸಿರಿ).

॥ ಭಾವಾರ್ಥ ॥

ಯಾವ ಕರ್ಮನೇತೃಗಳು ಈ ಇಂದ್ರನಲ್ಲೇ ತಮ್ಮ ಪ್ರೇಮವನ್ನು ಭಕ್ತಿಪೂರ್ವಕವಾಗಿ ಬೆಳೆಸಿ ಇವನಲ್ಲೇ ಶ್ರದ್ಧೆಯನ್ನಿಟ್ಟರೋ ಅಂತಹ ಕರ್ಮನೇತೃಗಳಿಗೆ ಮಿತ್ರಭೂತನೂ, ಕರ್ಮವಂತನೂ ಆದ ಯಾವ ಇಂದ್ರನು ಹುಡುಕುವ ಬೇರೆ ಯಾವ ಸಾಧನವೂ ಇಲ್ಲದೆ ಕೇವಲ ಗೋವುಗಳ ಹೆಜ್ಜೆಯ ಗುರುತುಗಳಿಂದಲೇ ಪಣಿಗಳಿಂದ ಅಪಹೃತವಾದ ಗೋವುಗಳನ್ನು ಹುಡುಕಿ ಪುನಃ ಅವರಿಗೆ ಕೊಟ್ಟನೋ ಅಂತಹ ಇಂದ್ರನನ್ನು ಪ್ರಶಂಸಿಸಿರಿ.

## English Translation

He who, a friend (to his worshippers), the doer of great deeds, tracing the cattle by their foot-marks, being without (other means of detection), restored them to those leaders (of rites) who willingly put their trust in him.

॥ ಸಂಹಿತಾಪಾಠಃ ॥

ಇ॒ತ್ಥಾ ಧೀವಂ᳚ತಮದ್ರಿವಃ ಕಾ॒ಣ್ವಂ ಮೇಧ್ಯಾ᳚ತಿಥಿಂ ।
ಮೇ॒ಷೋ ಭೂ॒ತೋ॒೩॒ಽಭಿ ಯನ್ನಯಃ ॥ ೪೦ ॥

॥ ಪದಪಾಠಃ ॥

ಇ॒ತ್ಥಾ । ಧೀ॒ಽವಂ᳚ತಂ । ಅ॒ದ್ರಿ॒ಽವಃ॒ । ಕಾ॒ಣ್ವಂ । ಮೇಧ್ಯ॑ಽಅತಿಥಿಂ ।
ಮೇ॒ಷಃ । ಭೂ॒ತಃ । ಅ॒ಭಿ । ಯನ್ । ಅಯಃ᳚ ॥ ೪೦ ॥

॥ ಸಾಯಣಭಾಷ್ಯಂ ॥

ಇತ್ಥಮನೇನೋಕ್ತೇನ ಪ್ರಕಾರೇಣ ಧೀವಂತಂ ಸ್ತುತಿಮಂತಂ ಕಾಣ್ವಂ ಕಣ್ವಪುತ್ರಂ ಮೇಧ್ಯಾತಿಥಿಂ ಯಜ್ಞಾರ್ಹಾತಿಥಿಮೇತತ್ಸಂಜ್ಞಮೃಷಿಂ ಹೇ ಅದ್ರಿವೋ ವಜ್ರಿವನ್ನಿಂದ್ರ ಮೇಷೋ ಭೂತೋ ಮೇಷರೂಪತಾಂ ಪ್ರಾಪ್ತೋಽಭಿ ಯನ್ನಭಿಗಚ್ಛನ್ ॥ ಯ ಇತ್ಯನುವರ್ತತೇ । ತದ್ಯೋಗಾಚ್ಚ ತಿಙೋ ನಿಘಾತಾಭಾವಃ ॥ ಯಸ್ತ್ವಮಯಃ ಅಗಮಃ ತಂ ತ್ವಾಂ ಸ್ತುಮ ಇತ್ಯರ್ಥಃ । ಮೇಧಾತಿಥೇರ್ಮೇಷೇತಿ ಸುಬ್ರಹ್ಮಣ್ಯಾಮಂತ್ರೈಕದೇಶಸ್ಯ ವ್ಯಾಖ್ಯಾನರೂಪಂ ಬ್ರಾಹ್ಮಣಂ ಛಂದೋಗೈರೇವಮಾಮ್ನಾಯತೇ । ಮೇಧಾತಿಥಿಂ ಹ ಕಾಣ್ವಾಯನಿಂ ಮೇಷೋ ಭೂತ್ವಾಜಹಾರ । ಷಡ್ವಿ. ಬ್ರಾ. ೧-೧ । ಇತಿ । ತದಭಿಪ್ರಾಯೇಣೇಯಂ ಸ್ತುತಿಃ ಕೃತಾ ॥

॥ ಪ್ರತಿಪದಾರ್ಥ ॥

ಅದ್ರಿವಃ—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । ಇತ್ಥಾ—ಇದೇ ರೀತಿ ಅನೇಕ ಪ್ರಕಾರವಾಗಿ । ಧೀವಂತಂ—ಸ್ತುತಿಗಳನ್ನು ಹೊಂದಿರುವವನೂ । ಕಾಣ್ವಂ—ಕಣ್ವಪುತ್ರನೂ ಆದ । ಮೇಧ್ಯಾತಿಥಿಂ—ಮೇಧ್ಯಾತಿಥಿಯಲ್ಲಿಗೆ । ಮೇಷೋ ಭೂತಃ—ಮೇಷರೂಪನಾಗಿ । ಅಭಿ ಯನ್—ಸಮೀಪಿಸುತ್ತಾ । ಅಯಃ—ಬಂದಿರುವೆ.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಇದೇ ರೀತಿ ಅನೇಕಪ್ರಕಾರವಾಗಿ ನಿನ್ನನ್ನು ಪ್ರಶಂಸಿಸುವ ಸ್ತುತಿಗಳನ್ನು ಪಠಿಸುವವನೂ, ಕಣ್ವಪುತ್ರನೂ ಆದ ಮೇಧ್ಯಾತಿಥಿಯಲ್ಲಿಗೆ ಮೇಷರೂಪದಲ್ಲಿ ಸಮೀಪಿಸಿ ಅವನನ್ನು ಅನುಗ್ರಹಿಸಲು ಬಂದಿರುವೆ.

## English Translation

You, thunderer, approaching in the form of a ram, have come to Medhyatithi, of the race of Kanwa, thus propitiating you.

॥ ಸಂಹಿತಾಪಾಠಃ ॥

ಶಿಕ್ಷಾ ವಿಭಿಂದೋ ಅಸ್ಮೈ ಚತ್ವಾರ್ಯಯುತಾ ದದತ್ ।
ಅಷ್ಟಾ ಪರಃ ಸಹಸ್ರಾ ॥ ೪೧ ॥

। ಪದಪಾಠಃ ।

ಶಿಕ್ಷ । ವಿಭಿಂದೋ ಇತಿ ವಿऽಭಿಂದೋ । ಅಸ್ಮೈ । ಚತ್ವಾರಿ । ಅಯುತಾ । ದದತ್ ।
ಅಷ್ಟ । ಪರಃ । ಸಹಸ್ರಾ ॥ ೪೧ ॥

। ಸಾಯಣಭಾಷ್ಯಂ ।

ವಿಭಿಂದುನಾಮ್ನೋ ರಾಜ್ಞಃ ಸಕಾಶಾದ್ಬಹು ಧನಂ ಲಬ್ಧ್ವಾ ತದೀಯಂ ದಾನಮಿದಮಾದಿಕೇನ ದ್ವ್ಯೃಚೇನ ಪ್ರಶಂಸತಿ । ಹೇ ವಿಭಿಂದೋ ರಾಜನ್ ದದದ್ಧಾತಾ ತ್ವಮಸ್ಮೈ ಮಹ್ಯಮೃಷಯೇ ಚತ್ವಾರ್ಯಯುತಾಯುತಾನಿ ದಶಸಹಸ್ರಾಣಿ ಚತ್ವಾರಿಂಶತ್ಸಹಸ್ರಾಣಿ ಶಿಕ್ಷ । ಅಶಿಕ್ಷಃ । ದತ್ತವಾನಸಿ । ಪರಃ ಪರಸ್ತಾದೂರ್ಧ್ವಮಷ್ಟಸಂಖ್ಯಾಕಾನಿ ಸಹಸ್ರಾ ಸಹಸ್ರಾಣಿ ಚ ದತ್ತವಾನಸಿ ॥

॥ ಪ್ರತಿಪದಾರ್ಥ ॥

**ವಿಭಿಂದೋ**—ಎಲೈ ವಿಭಿಂದುರಾಜನೇ । **ದದತ್** -ಉದಾರವಾಗಿ ದಾನಮಾಡುವ ನೀನು । **ಅಸ್ಮೈ**—ಋಷಿಯಾದ ನನಗೆ । **ಚತ್ವಾರಿ**—ನಾಲ್ಕರಿಂದ ಗುಣಿತವಾದ । **ಅಯುತಾ**— ದಶಸಹಸ್ರಗಳನ್ನು । **ಶಿಕ್ಷ**—ಕೊಟ್ಟಿದ್ದೀಯೆ । **ಪರಃ**—ಅನಂತರ । **ಅಷ್ಟ**—ಎಂಟರಿಂದ ಗುಣಿತವಾದ । **ಸಹಸ್ರಾ**— ಸಹಸ್ರವನ್ನೂ ಕೊಟ್ಟಿದ್ದೀಯೆ.

॥ ಭಾವಾರ್ಥ ॥

ಎಲೈ ವಿಭಿಂದುರಾಜನೇ, ಉದಾರವಾಗಿ ದಾನಮಾಡುವ ನೀನು ಋಷಿಯಾದ ನನಗೆ ಮೊದಲು ನಲವತ್ತು ಸಾವಿರಗಳನ್ನೂ ತದನಂತರ ಎಂಟುಸಾವಿರಗಳನ್ನೂ ದಾನಮಾಡಿದ್ದೀಯೆ.

## English Translation

Liberal Vibhindu, you have given to me four times ten thousand, and afterwards eight thousand.

। ಸಂಹಿತಾಪಾಠಃ ।

ಉತ ಸು ತ್ಯೇ ಪಯೋವೃಧಾ ಮಾಕೀ ರಣಸ್ಯ ನಪ್ತ್ಯಾ ।

ಜನಿತ್ವನಾಯ ಮಾಮಹೇ ॥ ೪೨ ॥

॥ ಪದಪಾಠಃ ॥

ಉತ । ಸು । ತ್ಯೇ ಇತಿ । ಪಯಃಽವೃಧಾ । ಮಾಕೀ ಇತಿ । ರಣಸ್ಯ । ನಪ್ತ್ಯಾ ।

ಜನಿಽತ್ವನಾಯ । ಮಮಹೇ ॥ ೪೨ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಸು ಸುಷ್ಠು ತ್ಯೇ ತೇ ಸರ್ವತ್ರ ಪ್ರಸಿದ್ಧೇ ಪಯೋವೃಧಾ ಪಯಸ ಉದಕಸ್ಯ ವರ್ಧಯಿತ್ರ್ಯೌ ಮಾಕೀ ನಿರ್ಮಾತ್ರ್ಯೌ ಭೂತಜಾತಸ್ಯ ರಣಸ್ಯ । ಸ್ತೋತೃನಾಮೈತತ್ । ಸ್ತೋತುರ್ನಪ್ತ್ರ್ಯೌ ನಪ್ತ್ರ್ಯೌ ನ ಪಾತಯಿತ್ರ್ಯೌ ಸರ್ವದಾನುಗ್ರಹಶೀಲೇ ದ್ಯಾವಾಪೃಥಿವ್ಯೌ ಜನಿತ್ವನಾಯ ಪೂರ್ವೋಕ್ತಧನಸ್ಯ ಜನನಾಯ ಪ್ರಾದುರ್ಭಾವಾಯ ಲಾಭಾಯ ಮಮಹೇ । ಸ್ತುತವಾನಸ್ಮಿ । ದ್ಯಾವಾಪೃಥಿವ್ಯೋಃ ಪ್ರಸನ್ನಯೋರೇವೇದಂ ದಾನಂ ಲಭ್ಯತೇ ನಾನ್ಯದೇತಿ ದಾನಮಾಹಾತ್ಮ್ಯಪ್ರಶಂಸಾಧಿಗಂತವ್ಯಾ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಸು—ಅತಿಶಯವಾಗಿ । ತ್ಯೇ—ಪ್ರಸಿದ್ಧರೂ । ಪಯೋವೃಧಾ—ಉದಕವನ್ನು ವೃದ್ಧಿಪಡಿಸುವವರೂ । ಮಾಕೀ—ಸಕಲಭೂತಗಳ ನಿರ್ಮಾಪಕಿಯರೂ । ರಣಸ್ಯ—ಸ್ತುತಿಕರ್ತನಿಗೆ । ನಪ್ತ್ರ್ಯಾ—ಅನುಗ್ರಹವನ್ನು ತೋರಿಸುವವರೂ ಆದ ದ್ಯಾವಾಪೃಥಿವಿಗಳನ್ನು । ಜನಿತ್ವನಾಯ—ನನಗೆ ಕೊಡಬೇಕಾದ ಧನದ ಉತ್ಪನ್ನಕ್ಕಾಗಿ । ಮಮಹೇ—ಸ್ತುತಿಸುತ್ತೇನೆ.

॥ ಭಾವಾರ್ಥ ॥

ಪ್ರಸಿದ್ಧರೂ, ಉದಕವನ್ನು ವೃದ್ಧಿಪಡಿಸುವವರೂ, ಸಕಲಭೂತಗಳ ನಿರ್ಮಾಪಕಿಯರೂ, ಸ್ತುತಿಕರ್ತನಿಗೆ ಅನುಗ್ರಹವನ್ನು ತೋರಿಸುವವರೂ ಆದ ದ್ಯಾವಾಪೃಥಿವಿಗಳನ್ನು ನನಗೆ ಕೊಡಬೇಕಾದ ಧನದ ಉತ್ಪನ್ನಕ್ಕಾಗಿ (ಲಾಭಕ್ಕಾಗಿ) ಸ್ತುತಿಸುತ್ತೇನೆ.

## English Translation

I glorify those two (heaven and earth), the augmenters of water, the originators (of beings), the benefactors of the worshipper, on account of their generation (of the wealth so given to me)



# ಮೂರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಪಿಬಾ ಸುತಸ್ಯೇತಿ ಚತುರ್ವಿಂಶತ್ಯೃಚಂ ತೃತೀಯಂ ಸೂಕ್ತಂ ಕಾಣ್ವಸ್ಯ ಮೇಧ್ಯಾತಿಥೇರಾರ್ಷಂ। ಅಯುಜೋ ಬೃಹತ್ಯೋ ಯುಜಃ ಸತೋಬೃಹತ್ಯ ಏಕವಿಂಶ್ಯನುಷ್ಟುಬ್ದ್ವಾವಿಂಶೀತ್ರಯೋವಿಂಶ್ಯೌ ಗಾಯತ್ರ್ಯೌ ಚತುರ್ವಿಂಶೀ ಬೃಹತೀ । ಏತಾಶ್ಚತಸ್ರಃ ಕುರಯಾಣಸ್ಯ ಪುತ್ರಸ್ಯ ಪಾಕಸ್ಥಾಮನಾಮ್ನೋ ರಾಜ್ಞೋ ದಾನಸ್ತುತಿಪ್ರತಿಪಾದಿಕಾಃ। ಅತಸ್ತದ್ದೇವತಾಕಾಃ। ಶಿಷ್ಟಾ ಐಂದ್ರ್ಯಃ। ತಥಾ ಚಾನುಕ್ರಾಂತಂ। ಪಿಬ ಚತುರ್ವಿಂಶತಿರ್ಮೇಧ್ಯಾತಿಥಿಃ ಪ್ರಾಗಾಥಂ ತ್ವನುಷ್ಟುಬ್ಗಾಯತ್ರ್ಯೌ ಬೃಹತೀ ಚಾಂತ್ಯಾಃ ಕೌರ-ಯಾಣಸ್ಯ ಪಾಕಸ್ಥಾಮ್ನೋ ದಾನಸ್ತುತಿರಿತಿ ॥ ಮಹಾವ್ರತೇ ನಿಷ್ಕೇವಲ್ಯೇ ಬಾರ್ಹತತೃಚಾಶೀತೌ ದಾನ-ಸ್ತುತೀರ್ವರ್ಜನೀಯಮಿದಂ ಸೂಕ್ತಂ ಸಪ್ತಮ್ಯಷ್ಟಮ್ಯೋಶ್ಚೋದ್ಧಾರಃ। ತಥೈವ ಪಂಚಮಾರಣ್ಯಕೇ ಸೂತ್ರಿತಂ। ಪಿಬಾ ಸುತಸ್ಯ ರಸಿನ ಇತಿ ವಿಂಶತೇಃ ಸಪ್ತಮೀಂ ಚಾಷ್ಟಮೀಂ ಚೋದ್ಧರತಿ। ಐ ಆ. ೫-೨-೪। ಇತಿ ॥ ಜ್ಯೋತಿಷ್ಟೋಮೇ ನಿಷ್ಕೇವಲ್ಯ ಆದ್ಯೋ ರಥಂತರಸಾಮಪ್ರಗಾಥಃ ಶಂಸನೀಯಃ । ಸೂತ್ರ್ಯತೇ ಹಿ । ಪಿಬಾ ಸುತಸ್ಯ ರಸಿನ ಇತಿ ಸಾಮಪ್ರಗಾಥಃ। ಆ. ೫-೧೫। ಇತಿ ॥ ಚಾತುರ್ವಿಂಶಿಕೇಽಹನಿ ನಿಷ್ಕೇವಲ್ಯೇಽ-ಪ್ಯಯಂ ಪ್ರಗಾಥಃ। ಸೂತ್ರ್ಯತೇ ಹಿ। ಉಕ್ತೋ ರಥಂತರಸ್ಯೋಭಯಂ ಶೃಣವಚ್ಚ ನ ಇತಿ ಬೃಹತಃ। ಆ. ೭-೩। ಇತಿ ॥ ಏವಮನ್ಯತ್ರಾಪಿ ಯದಿ ರಥಂತರಂ ಪೃಷ್ಠಂ ಭವತಿ ತತ್ರ ಸರ್ವತ್ರಾಯಂ ಪ್ರಗಾಥೋ ದ್ರಷ್ಟವ್ಯಃ ॥ ಪಂಚಮೇಽಹನಿ ಪ್ರಉಗಶಸ್ತ್ರೇ ಪಿಬಾ ಸುತಸ್ಯೇತ್ಯಯಮೈಂದ್ರಃ ಪ್ರಗಾಥಃ। ಸೂತ್ರಿತಂ ಚ। ಪಿಬಾ ಸುತಸ್ಯ ರಸಿನೋ ದೇವಂ ದೇವಂ ವೋಽವಸೇ। ಆ. ೭-೧೨। ಇತಿ ॥**

ಅನುವಾದವು— **ಪಿಬಾ ಸುತಸ್ಯ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಇಪ್ಪತ್ತನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಮೇಧ್ಯಾತಿಥಿಃ ಕಾಣ್ವಃ ಎಂಬುವನು ಋಷಿಯು. ಈ ಸೂಕ್ತದಲ್ಲಿ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು. ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಆದರೆ ಇಪ್ಪತ್ತೊಂದನೆಯ ಋಕ್ಕು ಅನುಷ್ಟುಪ್ ಛಂದಸ್ಕವು. ಇಪ್ಪತ್ತೆರಡು ಮತ್ತು ಇಪ್ಪತ್ತಮೂರನೆಯ ಋಕ್ಕುಗಳು ಗಾಯತ್ರೀಛಂದಸ್ಕವು. ಇಪ್ಪತ್ತನಾಲ್ಕನೆಯ ಋಕ್ಕು ಬೃಹತೀಛಂದಸ್ಕವು. ಈ ನಾಲ್ಕು ಋಕ್ಕುಗಳಲ್ಲಿ ಎಂದರೆ ೨೧–೨೪ನೆಯ ಋಕ್ಕುಗಳಲ್ಲಿ ಕುರಯಾಣನೆಂಬುವನ ಪುತ್ರನಾದ ಪಾಕಸ್ಥಾಮ ಎಂಬ ರಾಜನ ದಾನಸ್ತುತಿ ಇರುವುದರಿಂದ ಈ ನಾಲ್ಕು ಋಕ್ಕುಗಳಿಗೆ ಆ ರಾಜನ ದಾನಸ್ತುತಿಯೇ ದೇವತೆಯು. ಉಳಿದ ಋಕ್ಕುಗಳು ಇಂದ್ರದೇವತಾಕವು. ಅನುಕ್ರಮಣಿಕೆಯಲ್ಲಿ— **ಪಿಬ ಚತುರ್ವಿಂಶತಿರ್ಮೇಧ್ಯಾತಿಥಿಃ ಪ್ರಾಗಾಥಂ ತ್ವನುಷ್ಟುಬ್ಗಾಯತ್ರ್ಯೌ ಬೃಹತೀ ಚಾಂತ್ಯಾಃ ಕೌರಯಾಣಸ್ಯ ಪಾಕಸ್ಥಾಮ್ನೋ ದಾನಸ್ತುತಿಃ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ಬೃಹತೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ದಾನಸ್ತುತಿದೇವತಾಕವಾದ ಈ ಋಕ್ಕುಗಳನ್ನೂ ಮತ್ತು ಏಳು ಮತ್ತು ಎಂಟನೆಯ ಋಕ್ಕುಗಳನ್ನು ಬಿಟ್ಟು ಉಳಿದ ಋಕ್ಕುಗಳ ವಿನಿಯೋಗವಿರುವುದೆಂದು **ಐತರೇಯಾರಣ್ಯಕದ— ಪಿಬಾ ಸುತಸ್ಯ ರಸಿನ ಇತಿ ವಿಂಶತೇಃ ಸಪ್ತಮೀಂ ಚಾಷ್ಟಮೀಂ ಚೋದ್ಧರತಿ** ಎಂಬ ವಾಕ್ಯದಿಂದ (ಐ. ಆ. ೫-೨-೪). ನಿರ್ದಿಷ್ಟವಾಗಿರುವುದು.

ಜ್ಯೋತಿಷ್ಟೋಮಯಾಗದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ಮೊದಲು ಪಠಿಸುವ ರಥಂತರಸಾಮ ಪ್ರಗಾಥಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಪಿಬಾ ಸುತಸ್ಯ ರಸಿನ ಇತಿ ಸಾಮಪ್ರಗಾಥಃ** ಎಂಬ ಸೂತ್ರದಿಂದ (ಆ. ೫-೧೫) ವಿವೃತವಾಗಿರುವುದು. ಯಾಗದ ಚಾತುರ್ವಿಂಶಿಕ ವೆಂಬ ದಿವಸದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಪ್ರಗಾಥಮಂತ್ರಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಉಕ್ತೋ ರಥಂತರಸ್ಯೋಭಯಂ ಶೃಣವಚ್ಚ ನ ಇತಿ ಬೃಹತಃ** ಎಂಬ ಸೂತ್ರದಿಂದ (ಆ. ೭.೩) ವಿವೃತವಾಗಿರುವುದು. ಇದೇರೀತಿಯಲ್ಲಿ ಇತರಸ್ಥಳಗಳಲ್ಲಿಯೂ ರಥಂತರಪೃಷ್ಠಮಂತ್ರಗಳನ್ನು ಪಠಿಸಬೇಕಾದ ಸಂದರ್ಭಗಳಲ್ಲೆಲ್ಲಾ ಈ ಸೂಕ್ತದ ಪ್ರಗಾಥಮಂತ್ರಗಳನ್ನು ಪಠಿಸಬೇಕಾಗಿರುವುದೆಂದು ತಿಳಿಯಬೇಕು. ಮತ್ತು ಯಜ್ಞದ ಐದನೆಯ ದಿವಸ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸುವಾಗ **ಪಿಬಾ ಸುತಸ್ಯ** ಎಂಬ ಪ್ರಗಾಥ ಮಂತ್ರವನ್ನು ಐಂದ್ರ್ಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಪಿಬಾ ಸುತಸ್ಯ ರಸಿನೋ ದೇವಂದೇವಂ ವೋಽವಸೇ** ಎಂಬ ಸೂತ್ರದಿಂದ (ಆ. ೭.೧೨) ವಿವೃತವಾಗಿರುವುದು.

## ಸೂಕ್ತ—೩

ಮಂಡಲ—೮ । ಅನುವಾಕ—೧ । ಸೂಕ್ತ—೩ ।

ಅಷ್ಟಕ—೫ । ಅಧ್ಯಾಯ—೭ ॥ ವರ್ಗ—೨೫, ೨೬, ೨೭, ೨೮, ೨೯ ।

ಸೂಕ್ತದಲ್ಲಿರುವ ಋಕ್ಸಂಖ್ಯೆ—೨೪ ।

ಋಷಿಃ—ಮೇಧ್ಯಾತಿಥಿಃ ಕಾಣ್ವಃ ।

ದೇವತಾ—೧-೨೦. ಇಂದ್ರಃ । ೨೧-೨೪. ಪಾಕಸ್ಥಾಮ್ನಃ ಕೌರಯಾಣಸ್ಯ ದಾನಸ್ತುತಿಃ ॥

ಛಂದಃ—೧-೨೦. ಪ್ರಾಗಾಥಂ । ೨೧. ಅನುಷ್ಟುಪ್ । ೨೨, ೨೩. ಗಾಯತ್ರೀ ।
೨೪. ಬೃಹತೀ ॥

॥ ಸಂಹಿತಾಪಾಠಃ ॥

**ಪಿಬಾ ಸುತಸ್ಯ ರಸಿನೋ ಮತ್ಸ್ವಾ ನ ಇಂದ್ರ ಗೋಮತಃ ।**
**ಆಪಿರ್ನೋ ಬೋಧಿ ಸಧಮಾದ್ಯೋ ವೃಧೇ೩ಸ್ಮಾಁ ಅವಂತು ತೇ ಧಿಯಃ ॥ ೧ ॥**

॥ ಪದಪಾಠಃ ॥

ಪಿಬ । ಸುತಸ್ಯ । ರಸಿನಃ । ಮತ್ಸ್ವ । ನಃ । ಇಂದ್ರ । ಗೋಽಮತಃ ।
ಆಪಿಃ । ನಃ । ಬೋಧಿ । ಸಧಽಮಾದ್ಯಃ । ವೃಧೇ । ಅಸ್ಮಾನ್ । ಅವಂತು । ತೇ । ಧಿಯಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ರಸಿನೋ ರಸವತೋ ಗೋಮತೋ ಗೋವಿಕಾರೈಃ ಪಯಃಪ್ರಭೃತಿಭಿಃ ಶ್ರಯಣದ್ರವ್ಯೈರ್ಯುಕ್ತಸ್ಯ ನೋಽಸ್ಮದೀಯಸ್ಯ ಸುತಸ್ಯಾಭಿಷುತಸ್ಯ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ

ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ ॥ ಈದೃಶಂ ಸೋಮಂ ಪಿಬ । ಪೀತ್ವಾ ಚ ಮತ್ಸ್ವ । ತೃಪ್ತೋ ಭವ । ಅಪಿ ಚ ಸಧಮಾದ್ಯಃ ಸಹ ಮಾದಯಿತವ್ಯಃ ಸಂಹಿತೈರಸ್ಮಾಭಿಸ್ತರ್ಪಯಿತವ್ಯಸ್ತ್ವಮಾಪಿ-ರಾಪಯಿತಾ ಬಂಧುಃ ಸನ್ನೋಽಸ್ಮಾಕಂ ವೃಧೇ ವರ್ಧನಾಯ ಬೋಧಿ । ಬುಧ್ಯಸ್ವ । ತೇ ತ್ವದೀಯಾ ಧಿಯೋ ಬುದ್ಧಯೋಽನುಗ್ರಹಾತ್ಮಿಕಾ ಅಸ್ಮಾನ್ ಸ್ತೋತೄನವಂತು । ರಕ್ಷಂತು ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ರಸಿನಃ—ರಸವತ್ತಾದುದೂ । ಗೋಮತಃ—ಕ್ಷೀರಾದಿಗಳಿಂದ ಮಿಶ್ರಿತವಾದುದೂ । ನಃ—ನಮ್ಮಿಂದ ಅರ್ಪಿತವಾದುದೂ । ಸುತಸ್ಯ—ಹಿಂಡಿ ಸಿದ್ಧವಾಗಿರುವುದೂ ಆದ ಸೋಮವನ್ನು । ಪಿಬ—ಪಾನಮಾಡು । ಮತ್ಸ್ವ—ತೃಪ್ತಿಯನ್ನು ಹೊಂದು । ಸಧಮಾದ್ಯಃ—ನಮ್ಮ ಜೊತೆಯಲ್ಲಿ ತೃಪ್ತಿಯನ್ನು ಹೊಂದುವ ನೀನು । ಆಪಿಃ—ನಮಗೆ ಆಪ್ತನಾದ ಬಂಧುವಾಗಿದ್ದುಕೊಂಡು । ನಃ—ನಮ್ಮ । ವೃಧೇ—ಎಲ್ಲಾ ವಿಧವಾದ ಬೆಳೆವಣಿಗೆಗೂ ಸಹಾಯಕನಾಗಬೇಕೆಂದು । ಬೋಧಿ—ತಿಳಿ । ತೇ—ನಿನ್ನ । ಧಿಯಃ—ಅನುಗ್ರಹಾತ್ಮಕವಾದ ಬುದ್ಧಿಗಳು । ಅಸ್ಮಾನ್—ನಮ್ಮನ್ನು । ಅವಂತು—ರಕ್ಷಿಸಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ರಸವತ್ತಾದುದೂ, ಕ್ಷೀರಾದಿಗಳಿಂದ ಮಿಶ್ರಿತವಾದುದೂ, ನಮ್ಮಿಂದ ಅರ್ಪಿತವಾದುದೂ, ಹಿಂಡಿ ಸಿದ್ಧವಾಗಿರುವುದೂ ಆದ ಸೋಮವನ್ನು ಪಾನಮಾಡು. ಉದರ ತೃಪ್ತಿಯನ್ನು ಹೊಂದು. ನಮ್ಮ ಜೊತೆಯಲ್ಲಿ ಹರ್ಷವನ್ನು ಹೊಂದುವ ನೀನು ನಮಗೆ ಆಪ್ತನಾದ ಬಂಧುವಾಗಿದ್ದುಕೊಂಡು ನಮ್ಮ ಎಲ್ಲಾ ವಿಧವಾದ ಬೆಳೆವಣಿಗೆಗೂ ಸಹಾಯಕನಾಗಬೇಕೆಂದು ತಿಳಿ. ನಿನ್ನ ಅನುಗ್ರಹಾತ್ಮಕವಾದ ಬುದ್ಧಿಗಳು ನಮ್ಮನ್ನು ರಕ್ಷಿಸಲಿ.

English Translation

Drink, Indra, of our sapid libation mixed with milk, and be satisfied : regard yourself as our kinsman, to be exhilarated along with us for our welfare : may your (good) intentions protect us

॥ ಸಂಹಿತಾಪಾಠಃ ॥

ಭೂಯಾಮ ತೇ ಸುಮತೌ ವಾಜಿನೋ ವಯಂ ಮಾ ನಃ ಸ್ತರಭಿಮಾತಯೇ ।
ಅಸ್ಮಾಞ್ಚಿತ್ರಾಭಿರವತಾದಭಿಷ್ಟಿಭಿರಾ ನಃ ಸುಮ್ನೇಷು ಯಾಮಯ ॥

॥ ಪದಪಾಠಃ ॥

ಭೂಯಾಮ । ತೇ । ಸುಽಮತೌ । ವಾಜಿನಃ । ವಯಂ । ಮಾ । ನಃ । ಸ್ತಃ । ಅಭಿಽಮಾತಯೇ ।

ಅಸ್ಮಾನ್ । ಚಿತ್ರಾಭಿಃ । ಅವತಾತ್ । ಅಭಿಷ್ಟಿಽಭಿಃ । ಆ । ನಃ । ಸುಮ್ನೇಷು । ಯಮಯ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಸುಮತೌ ಶೋಭನಾಯಾಂ ಮತಾವನುಗ್ರಹಬುದ್ಧೌ ವಾಜಿನೋ ಹವಿಷ್ಮಂತೋ ವಯಂ ಭೂಯಾಮ । ವರ್ತಮಾನಾ ಭವಾಮ । ಅಭಿಮಾತಯೇ । ಅಭಿಮನ್ಯತ ಇತ್ಯಭಿಮಾತಿಃ ಶತ್ರುಃ । ತಸ್ಮೈ ತದರ್ಥಂ ನೋಽಸ್ಮಾನ್ಮಾ ಸ್ತೃಃ । ಮಾ ಹಿಂಸೀಃ ॥ ಸ್ತೃಞ್ ಹಿಂಸಾಯಾಂ। ಮಾಙಿ ಲುಙಿ ಛಾಂದಸಶ್ಚ್ಲೇರ್ಲುಕ್ ॥ ಅಪಿ ತ್ವಭಿಷ್ಟಿಭಿರಭ್ಯೇಷಣೀಯಾಭಿಃ ಪ್ರಾರ್ಥನೀಯಾಭಿಶ್ಚಿತ್ರಾ-ಭಿಶ್ಚಾಯನೀಯಾಭಿರ್ಬಹುವಿಧಾಭಿರ್ವಾ ತ್ವದೀಯಾಭಿರೂತಿಭಿರಸ್ಮಾನವತಾತ್ । ಅವ । ರಕ್ಷ । ತಥಾ ನೋಽಸ್ಮಾನ್ ಸುಮ್ನೇಷು ಸುಖೇಷ್ವಾ ಯಾಮಯ । ಆಯತಾನ್ ಕುರು । ಸರ್ವದಾ ಸುಖಿನ ಏವ ಕುರು ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತೇ—ನಿನ್ನ । ಸುಮತೌ—ಅತ್ಯುತ್ತಮವಾದ ಅನುಗ್ರಹಬುದ್ಧಿಯಲ್ಲಿ । ವಾಜಿನಃ—ಹವಿಷ್ಮಂತರಾದ । ವಯಂ—ನಾವು । ಭೂಯಾಮ—ಇರುವಂತಾಗಲಿ । ಅಭಿಮಾತಯೇ—ನಮ್ಮ ಶತ್ರುವಿಗಾಗಿ । ನಃ—ನಮ್ಮನ್ನು । ಮಾ ಸ್ತೃಃ—ಹಿಂಸಿಸಬೇಡ । ಅಭಿಷ್ಟಿಭಿಃ—ನಮ್ಮಿಂದ ಪ್ರಾರ್ಥಿತವಾದವೂ । ಚಿತ್ರಾಭಿಃ—ಅನೇಕವಿಧವಾದವೂ ಆದ ರಕ್ಷಣೆಗಳಿಂದ । ಅಸ್ಮಾನ್—ನಮ್ಮನ್ನು । ಅವತಾತ್—ರಕ್ಷಿಸು । ನಃ—ನಮ್ಮನ್ನು । ಸುಮ್ನೇಷು—ಸುಖಗಳಲ್ಲಿ । ಆ ಯಾಮಯ—ಬಹು ದೀರ್ಘಕಾಲ ಇರಿಸು

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಅತ್ಯುತ್ತಮವಾದ ಅನುಗ್ರಹಬುದ್ಧಿಯಲ್ಲಿ ಹವಿಷ್ಮಂತರಾದ ನಾವು ಇರುವಂತಾಗಲಿ. ನಮ್ಮ ಶತ್ರುವಿಗಾಗಿ ನಮ್ಮನ್ನು ಹಿಂಸಿಸಬೇಡ. ನಮ್ಮಿಂದ ಪ್ರಾರ್ಥಿತವಾದವೂ, ಅನೇಕ ವಿಧವಾದವೂ, ಆದ ರಕ್ಷಣೆಗಳಿಂದ ನಮ್ಮನ್ನು ರಕ್ಷಿಸು. ನಮ್ಮನ್ನು ಬಹು ದೀರ್ಘಕಾಲ ಸುಖಗಳಲ್ಲಿರಿಸು.

## English Translation

May we be offerers of oblations (to enjoy) your favour; harm us not for the sake of the enemy; protect us with your wondrous solicited (protections), maintain us ever in felicity.

॥ ಸಂಹಿತಾಪಾಠಃ ॥

ಇಮಾ ಉ ತ್ವಾ ಪುರೂವಸೋ ಗಿರೋ ವರ್ಧಂತು ಯಾ ಮಮ ।

ಪಾವಕವರ್ಣಾಃ ಶುಚಯೋ ವಿಪಶ್ಚಿತೋಽಭಿ ಸ್ತೋಮೈರನೂಷತ ॥ ೩ ॥

|| ಪದಪಾಠಃ ||

ಇಮಾಃ | ಊಂ ಇತಿ | ತ್ವಾ | ಪುರುವಸೋ ಇತಿ ಪುರುऽವಸೋ | ಗಿರಃ | ವರ್ಧಂತು | ಯಾಃ | ಮಮ |

ಪಾವಕऽವರ್ಣಾಃ | ಶುಚಯಃ | ವಿಪಃऽಚಿತಃ | ಅಭಿ | ಸ್ತೋಮೈಃ | ಅನೂಷತ || ೩ ||

|| ಸಾಯಣಭಾಷ್ಯಂ ||

ಹೇ ಪುರೂವಸೋ ಬಹುಧನೇಂದ್ರ ಮಮ ಮದೀಯಾ ಇಮಾ ಗಿರಃ ಶಸ್ತ್ರರೂಪಾ ವಾಚಸ್ತ್ವಾ ತ್ವಾಂ ವರ್ಧಂತು | ವರ್ಧಯಂತು | ಕಥಾ ಪಾವಕವರ್ಣಾ ಅಗ್ನಿಸಮಾನತೇಜಸ್ಕಾಃ ಅತ ಏವ ಶುಚಯಃ ಶುದ್ಧಾ ವಿಪಶ್ಚಿತೋ ವಿದ್ವಾಂಸ ಉದ್ಗಾತಾರಶ್ಚ ಸ್ತೋಮೈಃ ಸ್ತೋತ್ರೈರ್ಬಹಿಷ್ಪವಮಾನಾದಿಭಿರಭ್ಯನೂಷತ। ತ್ವಾಮಭಿಷ್ಟುವಂತಿ || ನೂ ಸ್ತುತೌ ಕುಟಾದಿಃ ||

|| ಪ್ರತಿಪದಾರ್ಥ ||

ಪುರೂವಸೋ—ಅನೇಕವಿಧವಾದ ಧನವುಳ್ಳ ಎಲೈ ಇಂದ್ರನೇ | ಮಮ—ನನ್ನಿಂದ ಅರ್ಪಿತವಾದ | ಯಾ ಇಮಾ ಗಿರಃ—ಈ ಸ್ತುತಿವಾಕ್ಯಗಳು | ತ್ವಾ ಉ—ನಿನ್ನನ್ನು | ವರ್ಧಂತು—ಬೆಳೆಸಲಿ | ಪಾವಕವರ್ಣಾಃ—ಅಗ್ನಿಗೆ ಸಮಾನವಾದ ತೇಜಸ್ಸುಳ್ಳವರೂ | ಶುಚಯಃ—ಪರಿಶುದ್ಧರೂ | ವಿಪಶ್ಚಿತಃ—ಪ್ರಾಜ್ಞರೂ ಆದ ಉದ್ಗಾತೃಗಳು | ಸ್ತೋಮೈಃ—ಬಹಿಷ್ಪವಮಾನಾದಿಸ್ತೋತ್ರಗಳಿಂದ | ಅಭ್ಯನೂಷತ—ನಿನ್ನನ್ನು ಸ್ತುತಿಸುತ್ತಾರೆ.

|| ಭಾವಾರ್ಥ ||

ಅನೇಕವಿಧವಾದ ಧನವುಳ್ಳ ಎಲೈ ಇಂದ್ರನೇ, ನನ್ನಿಂದ ಅರ್ಪಿತವಾದ ಈ ಸ್ತುತಿವಾಕ್ಯಗಳು ನಿನ್ನನ್ನು ಬೆಳೆಸಲಿ ಅಗ್ನಿಗೆ ಸಮಾನವಾದ ತೇಜಸ್ಸುಳ್ಳವರೂ, ಪರಿಶುದ್ಧರೂ, ಪ್ರಾಜ್ಞರೂ ಆದ ಉದ್ಗಾತೃಗಳು ಬಹಿಷ್ಪವಮಾನಾದಿ ಸ್ತೋತ್ರಗಳಿಂದ ನಿನ್ನನ್ನು ಸ್ತುತಿಸುತ್ತಾರೆ.

English Translation

(Indra), abounding in wealth, may these my praises magnify you; the brilliant pure sages glorify you with hymns.

। ಸಂಹಿತಾಪಾಠಃ ।

ಅಯಂ ಸಹಸ್ರಮೃಷಿಭಿಃ ಸಹಸ್ಕೃತಃ ಸಮುದ್ರ ಇವ ಪಪ್ರಥೇ ।

ಸತ್ಯಃ ಸೋ ಅಸ್ಯ ಮಹಿಮಾ ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ ॥೪॥

॥ ಪದಪಾಠಃ ॥

ಅಯಂ । ಸಹಸ್ರಂ । ಋಷಿsಭಿಃ । ಸಹಃsಕೃತಃ । ಸಮುದ್ರಃsಇವ । ಪಪ್ರಥೇ ।

ಸತ್ಯಃ । ಸಃ । ಅಸ್ಯ । ಮಹಿಮಾ । ಗೃಣೇ । ಶವಃ । ಯಜ್ಞೇಷು । ವಿಪ್ರsರಾಜ್ಯೇ ॥ ೪ ॥

॥ ಸಾಯಣಭಾಷ್ಯಂ ॥

ಅಯಮಿಂದ್ರಃ ಸಹಸ್ರಂ ಸಹಸ್ರಸಂಖ್ಯಾಕೈರ್ಋಷಿಭಿರತೀಂದ್ರಿಯಾರ್ಥದರ್ಶಿಭಿಃ ಸ್ತೋತೃಭಿಃ ಸಹಸ್ಕೃತಃ ಸಹಸಾ ಬಲೇನ ಯುಕ್ತಃ ಕೃತಃ । ಸ್ತುತ್ಯಾ ಹಿ ದೇವತಾಯಾ ಬಲಂ ವರ್ಧತೇ । ಸ ಚೈವಂಭೂತಃ ಸನ್ ಸಮುದ್ರ ಇವೋದಧಿರಿವ ಪಪ್ರಥೇ । ಪ್ರಥಿತೋ ವಿಸ್ತೀರ್ಣೋ ಬಭೂವ । ಅಸ್ಯ ಚೇಂದ್ರಸ್ಯ ಸತ್ಯೋsವಿತಥಃ ಸ ಪ್ರಸಿದ್ಧೋ ಮಹಿಮಾ ಮಹತ್ತ್ವಂ ಶವೋ ಬಲಂ ಚ ಯಜ್ಞೇಷು ಯಾಗೇಷು ವಿಪ್ರರಾಜ್ಯೇ । ರಾಜ್ಞಃ ಕರ್ಮ ರಾಜ್ಯಂ । ವಿಪ್ರಾಣಾಂ ಸ್ತೋತೄಣಾಂ ರಾಜ್ಯೇ ಸ್ತುತಶಸ್ತ್ರಸಂಘೇ ಗೃಣೇ । ಸ್ತೂಯತೇ ॥

॥ ಪ್ರತಿಪದಾರ್ಥ ॥

ಅಯಂ—ಈ ಇಂದ್ರನು । ಸಹಸ್ರಂ—ಸಹಸ್ರಸಂಖ್ಯಾಕವಾದ । ಋಷಿಭಿಃ—ಸ್ತುತಿಕರ್ತರಾದ ಋಷಿಗಳಿಂದ । ಸಹಸ್ಕೃತಃ—ಸ್ತುತನಾಗಿ ತನ್ನ ಶಕ್ತಿಯನ್ನು ಬೆಳೆಸಿಕೊಂಡು । ಸಮುದ್ರಃಇವ—ಸಮುದ್ರದಂತೆ । ಪಪ್ರಥೇ—ವಿಸ್ತೃತನಾಗಿ ಬೆಳೆದಿದ್ದಾನೆ । ಅಸ್ಯ—ಈ ಇಂದ್ರನ । ಸತ್ಯಃ—ಸತ್ಯಾತ್ಮಕವಾದುದೂ । ಸಃ—ಪ್ರಸಿದ್ಧವಾದುದೂ ಆದ । ಮಹಿಮಾ—ಮಾಹಾತ್ಮ್ಯವೂ । ಶವಃ—ಬಲವೂ । ಯಜ್ಞೇಷು—ಯಜ್ಞಗಳಲ್ಲಿ । ವಿಪ್ರರಾಜ್ಯೇ—ಸ್ತುತಿಕರ್ತರ ಸಂಘಗಳಲ್ಲಿ । ಗೃಣೇ—ಪ್ರಶಂಸಿತವಾಗುತ್ತದೆ.

॥ ಭಾವಾರ್ಥ ॥

ಈ ಇಂದ್ರನು ಸಹಸ್ರಸಂಖ್ಯಾಕವಾದ ಸ್ತುತಿಕರ್ತರಾದ ಋಷಿಗಳಿಂದ ಸ್ತುತನಾಗಿ ತನ್ನ ಶಕ್ತಿಯನ್ನು ಬೆಳೆಸಿಕೊಂಡು ಸಮುದ್ರದಂತೆ ವಿಸ್ತೃತನಾಗಿ ಬೆಳೆದಿದ್ದಾನೆ. ಈ ಇಂದ್ರನ ಸತ್ಯಾತ್ಮಕವಾದುದೂ, ಪ್ರಸಿದ್ಧವಾದುದೂ ಆದ ಮಾಹಾತ್ಮ್ಯವೂ ಮತ್ತು ಬಲವೂ ಸಹ ಯಜ್ಞಗಳಲ್ಲಿ ಸ್ತುತಿಕರ್ತರ ಸಂಘಗಳಲ್ಲಿ ಪ್ರಶಂಸಿತವಾಗುತ್ತದೆ.

## English Translation

Invigorated by (the praises of) a thousand Rishis, this (Indra) is as vast as the ocean: the true mightiness and strength of him are glorified at sacrifices, and in the realm of the devout.

॥ ಸಂಹಿತಾಪಾಠಃ ॥

ಇಂದ್ರಮಿದ್ದೇವತಾತಯ ಇಂದ್ರಂ ಪ್ರಯತ್ಯಧ್ವರೇ ।

ಇಂದ್ರಂ ಸಮೀಕೇ ವನಿನೋ ಹವಾಮಹ ಇಂದ್ರಂ ಧನಸ್ಯ ಸಾತಯೇ ॥ ೫ ॥

॥ ಪದಪಾಠಃ ॥

ಇಂದ್ರಂ । ಇತ್ । ದೇವಽತಾತಯೇ । ಇಂದ್ರಂ । ಪ್ರಽಯತಿ । ಅಧ್ವರೇ ।

ಇಂದ್ರಂ । ಸಂಽಈಕೇ । ವನಿನಃ । ಹವಾಮಹೇ । ಇಂದ್ರಂ । ಧನಸ್ಯ । ಸಾತಯೇ ॥ ೫ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇಽಹನಿ ನಿಷ್ಕೇವಲ್ಯ ಇಂದ್ರಮಿದ್ದೇವತಾತಯ ಇತಿ ರೈವತಸಾಮಪ್ರಗಾಥಃ ಶಂಸನೀಯಃ ಪೃಷ್ಠ್ಯೇಽಹನಿ ನಿಷ್ಕೇವಲ್ಯೇ ತ್ವಯಂ ಪ್ರಗಾಥಃ । ಸೂತ್ರ್ಯತೇ ಹಿ । ಇಂದ್ರಮಿದ್ದೇವತಾತಯ ಇತೀತರೇಷಾಂ ಪೃಷ್ಠ್ಯ ಏವೈಕೈಕಮನ್ವಹಂ । ಆ. ೭-೩ । ಇತಿ ॥

ದೇವತಾತಯೇ । ದೇವೈಃ ಸ್ತೋತೃಭಿಸ್ತಾಯತೇ ವಿಸ್ತಾರ್ಯತ ಇತಿ ದೇವತಾತಿರ್ಯಜ್ಞಃ । ತದರ್ಥಮಿಂದ್ರಮಿದ್ದೇವೇಷು ಮಧ್ಯೇ ಇಂದ್ರಮೇವಾಹ್ವಯಾಮಹೇ । ಅಧ್ವರೇ ಯಜ್ಞೇ ಪ್ರಯತಿ ಪ್ರಗಚ್ಛತ್ಯುಪಕ್ರಾಂತೇ ಸತೀಂದ್ರಂ ಹವಾಮಹೇ । ತಥಾ ಸಮೀಕೇ ಸಮ್ಯಗ್ಗತೇ ಸಂಪೂರ್ಣೇ ಚ ಯಾಗೇ ವನಿನಃ ಸಂಭಜಮಾನಾ ವಯಮಿಂದ್ರಮೇವಾಹ್ವಯಾಮಹೇ । ಯದ್ವಾ । ಸಮೀಕಮಿತಿ ಸಂಗ್ರಾಮನಾಮ । ಸಮೀಕೇ ಸಂಗ್ರಾಮ ಇಂದ್ರಮಾಹ್ವಯಾಮಹೇ । ಧನಸ್ಯ ಸಾತಯೇ ಲಾಭಾಯೇಂದ್ರಮೇವಾಹ್ವಯಾಮಹೇ । ಅತಃ ಶೀಘ್ರಮಿಂದ್ರ ಆಗಚ್ಛತ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ದೇವತಾತಯೇ**—ದೇವಪೂಜಾಸಾಧನವಾದ ಯಜ್ಞಾರ್ಥವಾಗಿ । **ಇಂದ್ರಮಿತ್**—ಇಂದ್ರನನ್ನೇ (ಕರೆಯುತ್ತೇವೆ) । **ಅಧ್ವರೇ**—ಯಜ್ಞವು । **ಪ್ರಯತಿ**—ಆರಂಭವಾದಾಗ । ಇಂದ್ರಂ—ಇಂದ್ರನನ್ನು । **ಹವಾಮಹೇ**—ಕರೆಯುತ್ತೇವೆ । **ಸಮೀಕೇ**—ಸಂಗ್ರಾಮದಲ್ಲಿ । **ವನಿನಃ**—ಸಹಾಯಾಪೇಕ್ಷಿಗಳಾದ ನಾವು । **ಇಂದ್ರಂ**—ಇಂದ್ರನನ್ನೇ ಕರೆಯುತ್ತೇವೆ । **ಧನಸ್ಯ**—ಧನದ । **ಸಾತಯೇ**—ಲಾಭಾರ್ಥವಾಗಿ । **ಇಂದ್ರಂ**—ಇಂದ್ರನನ್ನೇ ಕರೆಯುತ್ತೇವೆ.

॥ ಭಾವಾರ್ಥ ॥

ದೇವಪೂಜಾಸಾಧನವಾದ ಯಜ್ಞಾರ್ಥವಾಗಿ ಇಂದ್ರನನ್ನೇ ಕರೆಯುತ್ತೇವೆ. ಯಜ್ಞವು ಆರಂಭವಾದಾಗಲೂ ಇಂದ್ರನನ್ನೇ ಕರೆಯುತ್ತೇವೆ. ಸಂಗ್ರಾಮದಲ್ಲಿ ಸಹಾಯಾಪೇಕ್ಷಿಗಳಾದ ನಾವು ಇಂದ್ರನನ್ನೇ ಕರೆಯುತ್ತೇವೆ. ಧನದ ಲಾಭಾರ್ಥವಾಗಿಯೂ ಇಂದ್ರನನ್ನೇ ಕರೆಯುತ್ತೇವೆ.

## English Translation

We invoke Indra for the worship of the gods, and when the sacrifice is proceeding; adoring him, we call upon Indra at the close of the rite; we invoke him for the acquirement of wealth.

।ವಿಶೇಷವಿಷಯಗಳು।

ಯಾಗದ ಚಾತುರ್ವಿಂಶಿಕವೆಂಬ ದಿನದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ಇಂದ್ರಮಿದ್ದೇವತಾತಯೇ ಎಂಬ ಋಕ್ಕನ್ನು ರೈವತಸಾಮಪ್ರಗಾಥ ಮಂತ್ರಗಳಲ್ಲಿ ಸೇರಿಸಿ ಪಠಿಸಬೇಕು ಮತ್ತು ಪೃಷ್ಠ್ಯವೆಂಬ ದಿನದಲ್ಲಿಯೂ ಇದನ್ನು ಪ್ರಗಾಥ ಮಂತ್ರಗಳಲ್ಲಿ ಸೇರಿಸಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-ಇಂದ್ರಮಿದ್ದೇವತಾತಯ ಇತೀತರೇಷಾಂ ಪೃಷ್ಠ್ಯ ಏವೈಕೈಕಮನ್ವಹಂ ಎಂಬ ಸೂತ್ರದಿಂದ (ಆ. ೭-೩) ವಿವೃತವಾಗಿರುವುದು.

।ಸಂಹಿತಾಪಾಠಃ।

ಇಂದ್ರೋ ಮಹ್ನಾ ರೋದಸೀ ಪಪ್ರಥಚ್ಛವ ಇಂದ್ರಃ ಸೂರ್ಯಮರೋಚಯತ್ ।
ಇಂದ್ರೇ ಹ ವಿಶ್ವಾ ಭುವನಾನಿ ಯೇಮಿರ ಇಂದ್ರೇ ಸುವಾನಾಸ ಇಂದವಃ ॥

।ಪದಪಾಠಃ।

ಇಂದ್ರಃ । ಮಹ್ನಾ । ರೋದಸೀ ಇತಿ । ಪಪ್ರಥತ್ । ಶವಃ । ಇಂದ್ರಃ । ಸೂರ್ಯಂ । ಅರೋಚಯತ್ ।
ಇಂದ್ರೇ । ಹ । ವಿಶ್ವಾ । ಭುವನಾನಿ । ಯೇಮಿರೇ । ಇಂದ್ರೇ । ಸುವಾನಾಸಃ । ಇಂದವಃ । ೬ ॥

।ಸಾಯಣಭಾಷ್ಯಂ।

ಅಯಮಿಂದ್ರಃ ಶವಃ ಶವಸ ಆತ್ಮೀಯಸ್ಯ ಬಲಸ್ಯ ಮಹ್ನಾ ಮಹಿಮ್ನಾ ಮಹತ್ತ್ವೇನ ರೋದಸೀ ದ್ಯಾವಾಪೃಥಿವ್ಯೌ ಪಪ್ರಥತ್ । ಅಪ್ರಥಯತ್ । ವಿಸ್ತಾರಿತವಾನ್ । ತಥಾ ಸ್ವರ್ಭಾನುನಾವೃತಂ ಸೂರ್ಯಮಯಮೇವೇಂದ್ರೋಽರೋಚಯತ್ । ಅದೀಪಯತ್ । ತಸ್ಯಾಸುರಸ್ಯ ವಧೇನ ಪ್ರಕಾಶಿತವಾನ್ । ಅಪಿ ಚೇಂದ್ರೇ ಹಾಸ್ಮಿನ್ನೇವೇಂದ್ರೇ ವಿಶ್ವಾ ವಿಶ್ವಾನಿ ವ್ಯಾಪ್ತಾನಿ ಭುವನಾನಿ ಭೂತಜಾತಾನಿ ಯೇಮಿರೇ । ಉಪರಮಂತೇ । ಇಂದ್ರೇಣ ನಿಯಮ್ಯಂತ ಇತ್ಯರ್ಥಃ । ತಥಾ ಸುವಾನಾಸಃ ಸೂಯಮಾನಾ ಅಭಿಷೂಯಮಾಣಾ ಇಂದವಃ ಸೋಮಾಶ್ಚಾಸ್ಮಿನ್ನೇವೇಂದ್ರೇ ನಿಯಮ್ಯಂತೇ । ಅಂತರ್ಭವಂತೀತ್ಯರ್ಥಃ ॥

।ಪ್ರತಿಪದಾರ್ಥಃ।

ಇಂದ್ರಃ—ಇಂದ್ರನು । ಶವಃ—ತನ್ನ ಶಕ್ತಿಯ । ಮಹ್ನಾ—ಮಾಹಾತ್ಮ್ಯದಿಂದ । ರೋದಸೀ—ದ್ಯಾವಾಪೃಥಿವಿಗಳೆರಡನ್ನೂ । ಪಪ್ರಥತ್—ವಿಸ್ತೃತವಾಗಿ ಹರಡಿದ್ದಾನೆ । ಇಂದ್ರಃ—ಇದೇ ಇಂದ್ರನು । ಸೂರ್ಯಂ—

ಸೂರ್ಯನನ್ನು । ಅರೋಚಯತ್—ಪ್ರಕಾಶಿಸುವಂತೆ ಮಾಡಿದ್ದಾನೆ । ಇಂದ್ರೇ ಹ—ಇದೇ ಇಂದ್ರನಲ್ಲಿಯೇ । ವಿಶ್ವಾ—ಸಮಸ್ತವಾದ । ಭುವನಾನಿ—ಭೂತಜಾತಗಳೂ । ಯೇಮಿರೇ—ವಿಹರಿಸುತ್ತವೆ । ಸುವಾನಾಸಃ—ಹಿಂಡಿ ಪ್ರವಹಿಸುವ । ಇಂದವಃ—ಸೋಮರಸಗಳು । ಇಂದ್ರೇ—ಇಂದ್ರನಲ್ಲಿಯೇ ಐಕ್ಯವಾಗುತ್ತವೆ.

। ಭಾವಾರ್ಥ ।

ಇಂದ್ರನು ತನ್ನ ಶಕ್ತಿಯ ಮಾಹಾತ್ಮ್ಯದಿಂದ ದ್ಯಾವಾಪೃಥಿವಿಗಳೆರಡನ್ನೂ ವಿಸ್ತೃತವಾಗಿ ಹರಡಿದ್ದಾನೆ. ಇದೇ ಇಂದ್ರನು ಸೂರ್ಯನನ್ನೂ ಪ್ರಕಾಶಿಸುವಂತೆ ಮಾಡಿದ್ದಾನೆ. ಇದೇ ಇಂದ್ರನಲ್ಲಿಯೇ ಸಮಸ್ತವಾದ ಭೂತಜಾತಗಳೂ ವಿಹರಿಸುತ್ತವೆ. ಹಿಂಡಿ ಪ್ರವಹಿಸುವ ಸೋಮರಸಗಳು ಇಂದ್ರನಲ್ಲಿಯೇ ಐಕ್ಯವಾಗುತ್ತವೆ.

## English Translation

Indra, by the might of his strength, has spread out the heaven and earth : Indra has lighted up the sun : in Indra are all beings aggregated ; the distilling drops of the Soma flow to Indra.

। ಸಂಹಿತಾಪಾಠಃ ।

ಅಭಿ ತ್ವಾ ಪೂರ್ವಪೀತಯ ಇಂದ್ರ ಸ್ತೋಮೇಭಿರಾಯವಃ ।
ಸಮೀಚೀನಾಸ ಋಭವಃ ಸಮಸ್ವರನ್ರುದ್ರಾ ಗೃಣಂತ ಪೂರ್ವ್ಯಂ ॥ ೭ ॥

॥ ಪದಪಾಠಃ ।

ಅಭಿ । ತ್ವಾ । ಪೂರ್ವಽಪೀತಯೇ । ಇಂದ್ರ । ಸ್ತೋಮೇಭಿಃ । ಆಯವಃ ।
ಸಂಽಈಚೀನಾಸಃ । ಋಭವಃ । ಸಂ । ಅಸ್ವರನ್ । ರುದ್ರಾಃ । ಗೃಣಂತ । ಪೂರ್ವ್ಯಂ ॥ ೭ ॥

। ಸಾಯಣಭಾಷ್ಯಂ ।

ಜ್ಯೋತಿಷ್ಟೋಮೇ ಯದಿ ರಥಂತರಪೃಷ್ಠಸ್ತದಾ ನಿಷ್ಕೇವಲ್ಯೇಽಭಿ ತ್ವಾ ಪೂರ್ವಪೀತ ೦ ಇತಿ ಪ್ರಗಾಥೋಽನುರೂಪಃ । ಸೂತ್ರ್ಯತೇ ಹಿ । ಅಭಿ ತ್ವಾ ಪೂರ್ವಪೀತಯ ಇತಿ ಪ್ರಗಾಥೌ ಸ್ತೋತ್ರಿಯಾನುರೂಪೌ । ಆ. ೫-೧೫ । ಇತಿ ॥ ಮಹಾವ್ರತೇಽಪಿ ನಿಷ್ಕೇವಲ್ಯೇ ದಕ್ಷಿಣಪಕ್ಷೇಽಯಂ ಪ್ರಗಾಥಃ । ಸೂತ್ರಿತಂ ಚ । ಅಭಿ ತ್ವಾ ಪೂರ್ವಪೀತಯ ಇತಿ ರಥಂತರಸ್ಯ ಸ್ತೋತ್ರಿಯಾನುರೂಪೌ ಪ್ರಗಾಥೌ । ಐ. ಆ. ೫-೨. ೬. । ಇತಿ ॥

ಹೇ ಇಂದ್ರ ಆಯವೋ ಮನುಷ್ಯಾಃ ಸ್ತೋತಾರಃ ಸ್ತೋಮೇಭಿಃ ಸ್ತೋತ್ರೈಸ್ತ್ವಾಮಭಿಷ್ಟುವಂತಿ । ಕಿಮರ್ಥಂ । ಪೂರ್ವಪೀತಯೇ ಸರ್ವೇಭ್ಯೋ ದೇವೇಭ್ಯಃ ಪೂರ್ವಂ ಪ್ರಥಮತ ಏವ ಸೋಮಸ್ಯ

ಪಾನಾಯ । ಸವನಮುಖೇ ಹಿ ಚಮಸಗಣೈರಿಂದ್ರಸ್ಯೈವ ಸೋಮೋ ಹೂಯತೇ । ತಥಾ ಸಮೀಚೀನಾಸಃ ಸಂಗತಾ ಋಭವಃ । ಪ್ರಥಮವಾಚಕೇನ ಶಬ್ದೇನ ತ್ರಯೋಽಪ್ಯುಪಲಕ್ಷ್ಯಂತೇ । ಋಭುರ್ವಿಭ್ವಾ ವಾಜ ಇತ್ಯೇತೇ ಚ ಸಮಸ್ವರನ್ । ತ್ವಾಮೇವ ಸಮ್ಯಗಸ್ತುವನ್ ॥ ಸ್ವೃ ಶಬ್ದೋಪತಾಪಯೋಃ ॥ ರುದ್ರಾ ರುದ್ರಪುತ್ರಾ ಮರುತಶ್ಚ ಪೂರ್ವ್ಯಂ ಪುರಾತನಂ ವೃದ್ಧಂ ತ್ವಾಮೇವ ಗೃಣಂತ । ಅಭ್ಯಸ್ತುವನ್ । ವೃತ್ರವಧಸಮಯೇ ಪ್ರಹರ ಭಗವೋ ಜಹಿ ವೀರಯಸ್ವೇತ್ಯೇವಂರೂಪಯಾ ವಾಚಾ ತ್ವಾಂ ಸ್ತುತವಂತ ಇತ್ಯರ್ಥಃ ॥

। ಪ್ರತಿಪದಾರ್ಥ ।

**ಇಂದ್ರ**—ಎಲೈ ಇಂದ್ರನೇ । **ಆಯವಃ**—ಸ್ತುತಿಕರ್ತರಾದ ಮಾನವರು । **ಪೂರ್ವಪೀತಯೇ**—ಇತರ ಸಕಲದೇವತೆಗಳಿಗಿಂತಲೂ (ಇಂದ್ರನೇ) ಮೊದಲು ಪಾನಮಾಡಲೆಂದು । **ತ್ವಾ**—ನಿನ್ನನ್ನೇ । **ಸ್ತೋಮೇಭಿಃ ಅಭಿ**—ಸ್ತೋತ್ರಗಳಿಂದ ಸ್ತುತಿಸುತ್ತಾರೆ । **ಸಮೀಚೀನಾಸಃ**—ಒಟ್ಟಿಗೆ ಸೇರಿಕೊಂಡಿರುವ । **ಋಭವಃ**—ಋಭುಗಳೂ (ಮೂವರೂ) । **ಸಮಸ್ವರನ್**—ನಿನ್ನನ್ನೇ ಸ್ತುತಿಸುತ್ತಿದ್ದಾರೆ । **ರುದ್ರಾಃ**—ರುದ್ರಪುತ್ರರಾದ । ಮರುತ್ತುಗಳೂ ಸಹ । **ಪೂರ್ವ್ಯಂ**—ಪುರಾತನನಾದ ನಿನ್ನನ್ನೇ । **ಗೃಣಂತ**—ಸ್ತುತಿಸಿದ್ದಾರೆ.

। ಪ್ರತಿಪದಾರ್ಥ ।

ಎಲೈ ಇಂದ್ರನೇ, ಸ್ತುತಿಕರ್ತರಾದ ಮಾನವರು ಇತರ ಸಕಲ ದೇವತೆಗಳಿಗಿಂತಲೂ ನೀನೇ ಮೊದಲು ಪಾನ ಮಾಡಲೆಂದು ಸ್ತೋತ್ರಗಳಿಂದ ನಿನ್ನನ್ನೇ ಸ್ತುತಿಸುತ್ತಾರೆ. ಒಟ್ಟಿಗೆ ಕೂಡಿರುವ ಋಭುಗಳೂ ಸಹ ನಿನ್ನನ್ನೇ ಸ್ತುತಿಸಿದ್ದಾರೆ. ರುದ್ರಪುತ್ರರಾದ ಮರುತ್ತುಗಳೂ ಸಹ ನಿನ್ನನ್ನೇ ಸ್ತುತಿಸಿದ್ದಾರೆ.

English Translation

Men glorify you, Indra, with hymns that you may drink the first (of the gods): the associated Ribhus unite in your praise, the Rudras glorify the ancient (Indra).

॥ ವಿಶೇಷವಿಷಯಗಳು ॥

ಜ್ಯೋತಿಷ್ಟೋಮಯಾಗವು ರಥಂತರಪೃಷ್ಠವೆಂಬ ವಿಕೃತಿರೂಪದಲ್ಲಿ ಅನುಷ್ಠಾನಮಾಡಲ್ಪಡುವಾಗ ನಿಷ್ಕೇವಲ್ಯ ಶಸ್ತ್ರಮಂತ್ರಗಳಲ್ಲಿ **ಅಭಿ ತ್ವಾ ಪೂರ್ವಪೀತಯೇ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೭-೯ ಋಕ್ಕುಗಳನ್ನು) ಪ್ರಗಾಥ ಮಂತ್ರಗಳಲ್ಲಿ ಅನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಭಿ ತ್ವಾ ಪೂರ್ವಪೀತಯ ಇತಿ ಪ್ರಗಾಥೌ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ. ೫-೧೫) ವಿವೃತವಾಗಿರುವುದು ಮತ್ತು ಮಹಾವ್ರತೇಷ್ಟಿಯಲ್ಲಿಯೂ ಸಹ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ ದಕ್ಷಿಣಪಕ್ಷದಲ್ಲಿ ಈ ತೃಚವನ್ನು ಪ್ರಗಾಥಮಂತ್ರವನ್ನಾಗಿ ಪಠಿಸಬೇಕೆಂದು ಐತರೇಯಾರಣ್ಯಕದ—**ಅಭಿ ತ್ವಾ ಪೂರ್ವಪೀತಯ ಇತಿ ರಥಂತರಸ್ಯ ಸ್ತೋತ್ರಿಯಾನುರೂಪೌ ಪ್ರಗಾಥೌ** ಎಂಬ ವಾಕ್ಯದಿಂದ (ಐ. ಆ. ೫-೨-೨) ನಿರ್ದಿಷ್ಟವಾಗಿರುವುದು.

। ಸಂಹಿತಾಪಾಠಃ ।

ಅಸ್ಯೇದಿಂದ್ರೋ᳚ ವಾವೃಧೇ ವೃಷ್ಣ್ಯಂ᳚ ಶವೋ॒ ಮದೇ᳚ ಸು॒ತಸ್ಯ॒ ವಿಷ್ಣ॑ವಿ ।

ಅ॒ದ್ಯಾ ತಮ॑ಸ್ಯ ಮಹಿ॒ಮಾನ॑ಮಾ॒ಯವೋಽನು॑ ಷ್ಟುವಂತಿ ಪೂ॒ರ್ವಥಾ᳚ ॥ ೮ ॥

। ಪದಪಾಠಃ ।

ಅ॒ಸ್ಯ । ಇತ್ । ಇಂದ್ರಃ᳚ । ವ॒ವೃ॒ಧೇ । ವೃಷ್ಣ್ಯಂ᳚ । ಶವಃ॑ । ಮದೇ᳚ । ಸು॒ತಸ್ಯ॑ । ವಿಷ್ಣ॑ವಿ ।

ಅ॒ದ್ಯ । ತಂ । ಅ॒ಸ್ಯ॒ । ಮ॒ಹಿ॒ಮಾನ᳚ಂ । ಆ॒ಯವಃ॑ । ಅನು॑ । ಸ್ತು॒ವಂ॒ತಿ॒ । ಪೂ॒ರ್ವ॒ಽಥಾ᳚ ॥ ೮ ॥

। ಸಾಯಣಭಾಷ್ಯಂ ।

ಅಸ್ಯೇದಸ್ಯೈವ ಯಜಮಾನಸ್ಯ ವೃಷ್ಣ್ಯಂ ವೃಷತ್ವಂ ವೀರ್ಯಂ ಶವೋ ಬಲಂ ಚೇಂದ್ರೋ ವಾವೃಧೇ । ವರ್ಧಯತಿ । ಸುತಸ್ಯಾಭಿಷುತಸ್ಯ ಸೋಮಸ್ಯ ಪಾನೇನ ವಿಷ್ಣವಿ ಕೃತ್ಸ್ನದೇಹಸ್ಯ ವ್ಯಾಪಕೇ ಮದೇ ಹರ್ಷೇ ಸತಿ ತಸ್ಯೈವ ಯಜಮಾನಸ್ಯ ಬಲಂ ವರ್ಧಯತೀತ್ಯರ್ಥಃ । ಅದ್ಯಾಸ್ಮಿನ್ ಕಾಲೇಽಸ್ಯೇಂದ್ರಸ್ಯ ತಮುಕ್ತಗುಣಂ ಮಹಿಮಾನಂ ಮಹತ್ತ್ವಮಾಯವೋ ಮನುಷ್ಯಾ ಅನು ಷ್ಟುವಂತಿ । ಅನುಪೂರ್ವ್ಯೇಣ ಸ್ತುವಂತಿ । ಪೂರ್ವಥಾ ॥ ಪೂರ್ವಶಬ್ದಾದಿವಾರ್ಥೇ ಪ್ರತ್ನಪೂರ್ವೇತ್ಯಾದಿನಾ ಥಾಲ್ಪ್ರತ್ಯಯಃ ॥ ಯಥಾ ಪೂರ್ವಸ್ಮಿನ್ ಕಾಲೇಽಸ್ತುವನ್ ಏವಮಿದಾನೀಮಪಿ ತೇನೈವ ಕ್ರಮೇಣ ಸ್ತುವಂತೀತ್ಯರ್ಥಃ ॥

। ಪ್ರತಿಪದಾರ್ಥ ।

ಇಂದ್ರಃ—ಇಂದ್ರನು । ಸುತಸ್ಯ—ಹಿಂಡಲ್ಪಟ್ಟ ಸೋಮವು । ವಿಷ್ಣವಿ—ದೇಹದಲ್ಲೆಲ್ಲಾ ವ್ಯಾಪಿಸಿದ ಫಲವಾಗಿ । ಮದೇ—ಹರ್ಷವುಂಟಾದಾಗ । ಅಸ್ಯೇತ್—ಇದೇ ಯಜಮಾನನ । ವೃಷ್ಣ್ಯಂ—ವೀರ್ಯವನ್ನೂ । ಶವಃ—ಬಲವನ್ನೂ । ವಾವೃಧೇ—ಬೆಳೆಸುತ್ತಾನೆ । ಅದ್ಯ—ಈ ಯಾಗಕಾಲದಲ್ಲಿ । ಅಸ್ಯ—ಈ ಇಂದ್ರನ । ತಂ—ಪ್ರಸಿದ್ಧವಾದ । ಮಹಿಮಾನಂ—ಮಹತ್ತ್ವವನ್ನು । ಆಯವಃ—ಮಾನವರು । ಪೂರ್ವಥಾ—ಹಿಂದೆಲ್ಲಾ ಸ್ತುತಿಸಿದಂತೆಯೇ । ಅನು ಷ್ಟುವಂತಿ—ಸ್ತುತಿಸುತ್ತಾರೆ.

॥ ಭಾವಾರ್ಥ ॥

ಹಿಂಡಿದ ಸೋಮವನ್ನು ಪಾನಮಾಡಿ ಅದು ದೇಹದಲ್ಲೆಲ್ಲಾ ವ್ಯಾಪಿಸಿದಾಗ ಅತ್ಯಂತ ಹೃಷ್ಟನಾದ ಇಂದ್ರನು ಅದನ್ನು ಅರ್ಪಿಸಿದ ಇದೇ ಯಜಮಾನನ ವೀರ್ಯವನ್ನೂ ಬಲವನ್ನೂ ಬೆಳೆಸುತ್ತಾನೆ. ಈ ಯಾಗಕಾಲದಲ್ಲಿ ಈ ಇಂದ್ರನ ಪ್ರಸಿದ್ಧವಾದ ಮಹತ್ತ್ವವನ್ನು ಮಾನವರು ಹಿಂದೆಲ್ಲಾ ಸ್ತುತಿಸಿದಂತೆಯೇ ಈಗಲೂ ಸ್ತುತಿಸುತ್ತಾರೆ.

## English Translation

Indra augments the energy and the strength of this (his worshipper), when the exhilaration of the Soma juice is diffused through his body; men celebrate in due order his might to-day as they did of old.

॥ ಸಂಹಿತಾಪಾಠಃ ॥

ತತ್ತ್ವಾ ಯಾಮಿ ಸುವೀರ್ಯಂ ತದ್ಬ್ರಹ್ಮ ಪೂರ್ವಚಿತ್ತಯೇ ।
ಯೇನಾ ಯತಿಭ್ಯೋ ಭೃಗವೇ ಧನೇ ಹಿತೇ ಯೇನ ಪ್ರಸ್ಕಣ್ವಮಾವಿಥ ॥೯॥

॥ ಪದಪಾಠಃ ॥

ತತ್ । ತ್ವಾ । ಯಾಮಿ । ಸುಽವೀರ್ಯಂ । ತತ್ । ಬ್ರಹ್ಮ । ಪೂರ್ವಽಚಿತ್ತಯೇ ।
ಯೇನ । ಯತಿಽಭ್ಯಃ । ಭೃಗವೇ । ಧನೇ । ಹಿತೇ । ಯೇನ । ಪ್ರಸ್ಕಣ್ವಂ । ಆವಿಥ ॥ ೯ ॥

॥ ಸಾಯಣಭಾಷ್ಯಂ ॥

ಜ್ಯೋತಿಷ್ಟೋಮೇ ಮಾಧ್ಯಂದಿನಸವನೇ ಬ್ರಹ್ಮಶಸ್ತ್ರೇ ತತ್ತ್ವಾ ಯಾಮೀತಿ ಪ್ರಗಾಥೋಽನುರೂಪಃ । ಸೂತ್ರಿತಂ ಚ । ತತ್ತ್ವಾ ಯಾಮಿ ಸುವೀರ್ಯಮಿತಿ ಪ್ರಗಾಥೌ ಸ್ತೋತ್ರಿಯಾನುರೂಪೌ । ಆ. ೫-೧೬ । ಇತಿ ॥ ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇಽಪ್ಯಯಂ ಪ್ರಗಾಥಸ್ತಸ್ಯೈವಾನುರೂಪಃ। ಸೂತ್ರಿತಂ ಚ । ತತ್ತ್ವಾ ಯಾಮಿ ಸುವೀರ್ಯಮಭಿ ಪ್ರ ವಃ ಸುರಾಧಸಂ । ಆ. ೭-೪ । ಇತಿ ॥

ಹೇ ಇಂದ್ರ ತತ್ಸುವೀರ್ಯಂ ಶೋಭನವೀರ್ಯಂ ತ್ವಾ ತ್ವಾಂ ಯಾಮಿ । ಯಾಚಾಮಿ ॥ ಛಾಂದಸೋ ವರ್ಣಲೋಪಃ ॥ ತಥಾ ತದ್ಬ್ರಹ್ಮ ಪರಿವೃಢಮನ್ನಂ ಪೂರ್ವಚಿತ್ತಯೇ ಪೂರ್ವಪ್ರಜ್ಞಾನಾಯಾನ್ಯೇಭ್ಯಃ ಪೂರ್ವಮೇವ ಲಾಭಾಯ ತ್ವಾಂ ಯಾಚಾಮಿ । ಧನೇ ಹಿತೇಽಭೀಷ್ಟೇ ಸತಿ ಯೇನ ಸುವೀರ್ಯೇಣ ಯತಿಭ್ಯಃ ಕರ್ಮಸೂಪರತೇಭ್ಯೋಽಯಷ್ಟೃಭ್ಯೋ ಜನೇಭ್ಯಃ ಸಕಾಶಾದ್ಧನಮಾಹೃತ್ಯ ಭೃಗವೇ ಮಹರ್ಷಯೇ ಪ್ರಯಚ್ಛಸಿ । ಯದ್ವಾ । ಕರ್ಮಸು ನಿಯತಾ ಅಂಗಿರಸೋ ಯತಯಃ । ತೇಷಾಮರ್ಥಂ ಧನಂ ಪ್ರಯಚ್ಛಸಿ ॥ ತಾದರ್ಥ್ಯೇ ಚತುರ್ಥೀ ॥ ಯೇನ ಚ ಬ್ರಹ್ಮಣಾ ಪ್ರಸ್ಕಣ್ವಂ ಕಣ್ವಪ್ರಭವಂ ಕಣ್ವಸ್ಯ ಪುತ್ರಮೃಷಿಮಾವಿಥ ರರಕ್ಷಿಥ । ತದುಭಯಂ ಯಾಚಾಮೀತ್ಯನ್ವಯಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಧನೇ ಹಿತೇ—ಧನವು ಪ್ರಾಪ್ತವಾದಾಗ । ಯೇನ—ಯಾವ ನಿನ್ನ ವೀರ್ಯದಿಂದ । ಯತಿಭ್ಯಃ—ಕರ್ಮಭ್ರಷ್ಟರಿಂದ ಅಪಹರಿಸಿ । ಭೃಗವೇ—ಭೃಗುವಿಗೆ ಕೊಟ್ಟಿಯೋ । ಯೇನ—ಯಾವ ಅನ್ನದಿಂದ ಪ್ರಸ್ಕಣ್ವಃ—ಕಣ್ವಪುತ್ರನಾದ ಪ್ರಸ್ಕಣ್ವನನ್ನು । ಆವಿಥ—ರಕ್ಷಿಸಿದೆಯೋ । ತತ್—ಅಂತಹ । ಸುವೀರ್ಯಂ—ಉತ್ತಮವಾದ ವೀರ್ಯವನ್ನೂ । ತತ್ ಬ್ರಹ್ಮ—ಅದೇ ಅನ್ನವನ್ನೂ । ಪೂರ್ವಚಿತ್ತಯೇ—ಇತರರಿಗಿಂತಲೂ ಮೊದಲೇ ಹೊಂದಬೇಕೆಂದು । ತ್ವಾ—ನಿನ್ನನ್ನು । ಯಾಮಿ—ಯಾಚಿಸುತ್ತೇನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಧನವು ಪ್ರಾರ್ಥಿತವಾದಾಗ ಯಾವ ನಿನ್ನ ವೀರ್ಯದಿಂದ ಕರ್ಮಭ್ರಷ್ಟರಲ್ಲಿದ್ದ ಧನವನ್ನು ಅಪಹರಿಸಿ ಭೃಗುವಿಗೆ ಕೊಟ್ಟಿಯೋ, ಯಾವ ಅನ್ನದಿಂದ ಕಣ್ವಪುತ್ರನಾದ ಪ್ರಸ್ಕಣ್ವನನ್ನು ರಕ್ಷಿಸಿದೆಯೋ ಅಂತಹ

ಉತ್ತಮವಾದ ವೀರ್ಯವನ್ನೂ ಅದೇ ಅನ್ನವನ್ನೂ ಇತರರಿಗಿಂತಲೂ ಮೊದಲೇ ನಾನು ಹೊಂದಬೇಕೆಂದು ನಿನ್ನನ್ನು ಯಾಚಿಸುತ್ತೇನೆ.

## English Translation

I solicit you, Indra, for such vigour and for such food as may be hoped for in priority (to others), wherewith you have granted to Bhrigu the wealth taken from those who had desisted from sacrifices, wherewith you have protected Praskanwa.

॥ ವಿಶೇಷವಿಷಯಗಳು ॥

ಜ್ಯೋತಿಷ್ಟೋಮಯಾಗದಲ್ಲಿ ಮಾಧ್ಯಂದಿನಸವನಕಾಲದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ತತ್ತ್ವಾ ಯಾಮಿ ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೯-೧೧ ಋಕ್ಕುಗಳನ್ನು) ಪ್ರಗಾಥಾನುರೂಪ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ತತ್ತ್ವಾ ಯಾಮಿ ಸುವೀರ್ಯಮಿತಿ ಪ್ರಗಾಥೌ ಸ್ತೋತ್ರಿಯಾನುರೂಪೌ ಎಂಬ ಸೂತ್ರದಿಂದ (ಆ. ೫-೧೬) ವಿವೃತವಾಗಿರುವದು. ಚಾತುರ್ವಿಂಶಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿಯೂ ಸಹ ಈ ತೃಚವನ್ನು ಪ್ರಗಾಥಾನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ತತ್ತ್ವಾ ಯಾಮಿ ಸುವೀರ್ಯಮಭಿ ಪ್ರ ವಃ ಸುರಾಧಸಂ ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಯೇನಾ ಸಮುದ್ರಮಸೃಜೋ ಮಹೀರಪಸ್ತದಿಂದ್ರ ವೃಷ್ಣಿ ತೇ ಶವಃ ।
ಸದ್ಯಃ ಸೋ ಅಸ್ಯ ಮಹಿಮಾ ನ ಸಂನಶೇ ಯಂ ಕ್ಷೋಣೀರನುಚಕ್ರದೇ ॥

॥ ಪದಪಾಠಃ ॥

ಯೇನ । ಸಮುದ್ರಂ । ಅಸೃಜಃ । ಮಹೀಃ । ಅಪಃ । ತತ್ । ಇಂದ್ರ । ವೃಷ್ಣಿ । ತೇ । ಶವಃ ।
ಸದ್ಯಃ । ಸಃ । ಅಸ್ಯ । ಮಹಿಮಾ । ನ । ಸಂಽನಶೇ । ಯಂ । ಕ್ಷೋಣೀಃ । ಅನುಽಚಕ್ರದೇ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯೇನಾಸ್ತ್ರೀಯೇನ ಬಲೇನ ಸಮುದ್ರಮಬ್ಧಿಂ ಪ್ರತಿ ಮಹೀರ್ಮಹತೀರಪ ಉದಕಾನ್ಯಸೃಜಃ ವ್ಯಸೃಜಃ । ಮಹಾನ್ ಸಮುದ್ರೋ ಯಾವದ್ಭಿರ್ಜಲೈಃ ಪೂರ್ಯತೇ ತಾವಂತಿ ಜಲಾನಿ ಪುರಾ

ತ್ವಂ ಸೃಷ್ಟವಾನಿತ್ಯರ್ಥಃ । ತೇ ತ್ವದೀಯಂ ತಚ್ಛವೋ ಬಲಂ ವೃಷ್ಣಿ ವರ್ಷಕಂ । ಅಭೀಷ್ಟಫಲದಮಿತ್ಯರ್ಥಃ । ಅಸ್ಯೇಂದ್ರಸ್ಯ ಸ ಮಹಿಮಾ ನ ಸಂನಶೇ । ನ ಸಮ್ಯಗಾಪನೀಯಃ । ಪರೈರಪ್ರಧೃಷ್ಯ ಇತ್ಯರ್ಥಃ ॥ ನಶೇಃ ಕೃತ್ಯಾರ್ಥೇ ಕೇನ್ಪ್ರತ್ಯಯಃ ॥ ಯಂ ಮಹಿಮಾನಂ ಕ್ಷೋಣೀಃ ಕ್ಷೋಣೀ ಪೃಥಿವ್ಯನುಚಕ್ರದೇ ಅನುಗಚ್ಛತಿ । ಕ್ರದಿರತ್ರ ಗತ್ಯರ್ಥಃ । ಯದಧೀನಾ ವರ್ತತ ಇತ್ಯರ್ಥಃ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಯೇನ—ಯಾವ ನಿನ್ನ ಸ್ವಶಕ್ತಿಯಿಂದ । ಸಮುದ್ರಂ—ಸಮುದ್ರಕ್ಕಭಿಮುಖವಾಗಿ । ಮಹೀಃ—ಮಹತ್ತಾದ । ಅಪಃ—ಉದಕಗಳನ್ನು । ಅಸೃಜಃ—ಪ್ರವಹಿಸುವಂತೆ ಮಾಡಿದೆಯೋ । ತೇ—ನಿನ್ನ । ತತ್ ಶವಃ—ಅದೇ ಶಕ್ತಿಯು । ವೃಷ್ಣಿ—ಕಾಮವರ್ಷಕವಾಗಿರುತ್ತದೆ । ಅಸ್ಯ—ಈ ಇಂದ್ರನ । ಯಂ—ಯಾವ ಮಹಿಮೆಯನ್ನು । ಕ್ಷೋಣೀಃ—ಪೃಥ್ವಿಯು। ಸದ್ಯಃ— ಒಡನೆಯೇ । ಅನುಚಕ್ರದೇ—ಅನುಸರಿಸುವುದೋ। ಸಃ ಮಹಿಮಾ—ಅದೇ ಮಾಹಾತ್ಮ್ಯವು । ನ ಸಂನಶೇ—ಯಾರಿಂದಲೂ ಎದುರಿಸಲ್ಪಡುವುದಿಲ್ಲ.

। ಭಾವಾರ್ಥ ।

ಎಲೈ ಇಂದ್ರನೇ, ಯಾವ ನಿನ್ನ ಸ್ವಶಕ್ತಿಯಿಂದ ಸಮುದ್ರಕ್ಕಭಿಮುಖವಾಗಿ ಮಹತ್ತಾದ ಉದಕಗಳನ್ನು ಪ್ರವಹಿಸುವಂತೆ ಮಾಡಿದೆಯೋ ನಿನ್ನ ಅದೇ ಶಕ್ತಿಯು ಕಾಮವರ್ಷಕವಾಗಿರುತ್ತದೆ. ಈ ಇಂದ್ರನ ಯಾವ ಮಹಿಮೆಯನ್ನು ಪೃಥ್ವಿಯು ಒಡನೆಯೇ ಅನುಸರಿಸಿ ಪ್ರಶಂಸಿಸುವುದೋ ಅದೇ ಮಾಹಾತ್ಮ್ಯವು ಯಾರಿಂದಲೂ ಎದುರಿಸಲ್ಪಡುವುದಿಲ್ಲ.

## English Translation

Wherewith you have sent the great waters to the ocean: such as is your wish-fulfilling strength: that might of Indra is not easily to be resisted which the earth obeys

। ಸಂಹಿತಾಪಾಠಃ ।

ಶಗ್ಧೀ ನ ಇಂದ್ರ ಯತ್ತ್ವಾ ರಯಿಂ ಯಾಮಿ ಸುವೀರ್ಯಂ ।
ಶಗ್ಧಿ ವಾಜಾಯ ಪ್ರಥಮಂ ಸಿಷಾಸತೇ ಶಗ್ಧಿ ಸ್ತೋಮಾಯ ಪೂರ್ವ್ಯ ॥೧೧॥

। ಪದಪಾಠಃ ।

ಶಗ್ಧಿ । ನಃ । ಇಂದ್ರ । ಯತ್ । ತ್ವಾ । ರಯಿಂ । ಯಾಮಿ । ಸುಽವೀರ್ಯಂ ।
ಶಗ್ಧಿ । ವಾಜಾಯ । ಪ್ರಥಮಂ । ಸಿಸಾಸತೇ । ಶಗ್ಧಿ । ಸ್ತೋಮಾಯ । ಪೂರ್ವ್ಯ ॥ ೧೧ ॥

। ಸಾಯಣಭಾಷ್ಯಂ ।

ಹೇ ಇಂದ್ರ ಸುವೀರ್ಯಂ ಶೋಭನವೀರ್ಯೋಪೇತಂ ॥ ಬಹುವ್ರೀಹೌ ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ ॥ ಯದ್ರಯಿಂ ಧನಂ ತ್ವಾಂ ಯಾಮಿ ಯಾಚಾಮಿ ॥ ಛಾಂದಸೋ ವರ್ಣಲೋಪಃ ॥ ನೋಽಸ್ಮಭ್ಯಂ ತದ್ಧನಂ ಶಗ್ಧಿ । ದೇಹಿ ॥ ಶಕಿರತ್ರ ದಾನಾರ್ಥಃ । ತಸ್ಮಾಲ್ಲೋಟಿ ಹೌ ಛಾಂದಸೋ ವಿಕರಣಸ್ಯ ಲುಕ್ । ಹುಝಲ್ಭ್ಯ ಇತಿ ಹೇರ್ಧಿತ್ವಂ ॥ ತಥಾ ಸಿಷಾಸತೇ ಸಂಭಕ್ತುಮಿಚ್ಛತೇ ॥ ಸನತೇಃ ಸನಿ ಸನೀವಂತರ್ಧೇತಿ ವಿಕಲ್ಪನಾದಿಡಭಾವೇ ಜನಸನಖನಾಮಿತ್ಯಾತ್ವಂ ॥ ವಾಜಾಯ । ವಾಜ ಇತ್ಯನ್ನನಾಮ । ತೇನ ಚ ತದ್ವಾಲ್ಲಕ್ಷ್ಯತೇ । ಹವಿಷ್ಮತೇ ಯಜಮಾನಾಯ ಪ್ರಥಮಂ ಸರ್ವೇಭ್ಯಃ ಪೂರ್ವಮೇವ ಶಗ್ಧಿ । ಧನಂ ಪ್ರಯಚ್ಛ । ಯದ್ವಾ । ವಾಜಯೇತಿ ದ್ವಿತೀಯಾರ್ಥೇ ಚತುರ್ಥೀ ॥ ತವರ್ಭಿಸ್ತ್ವಾಂ ಸಂಭಕ್ತುಮಿಚ್ಛತೇ ಜನಾಯ ಪ್ರಥಮಂ ವಾಜಾಯ ವಾಜಮನ್ನಂ ಶಗ್ಧಿ। ದೇಹಿ।ಪಶ್ಚಾತ್ಸ್ತೋಮಾಯ ಸ್ತೋತ್ರೇ ಹೇ ಪೂರ್ವ ಪೂರ್ವಸ್ಮಿನ್ ಕಾಲೇ ಭವ ಚಿರಂತನೇಂದ್ರ ಶಗ್ಧಿ । ದೇಹಿ ॥ ಸ್ತೌತೇಃ ಕರ್ತರ್ಯರ್ತಿಸ್ತುಸ್ವಿತ್ಯಾದಿನಾ ಮನ್ಪ್ರತ್ಯಯಃ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಸುವೀರ್ಯಂ—ಉತ್ತಮವಾದ ವೀರ್ಯದಿಂದ ಕೂಡಿದ । ಯತ್ ರಯಿಂ—ಯಾವ ಧನವನ್ನು । ತ್ವಾ—ನಿನ್ನನ್ನು । ಯಾಮಿ—ಯಾಚಿಸುವೆನೋ ಆ ಧನವನ್ನು । ನಃ—ನಮಗೆ । ಶಗ್ಧಿ—ಕೊಡು । ಸಿಷಾಸತೇ—ನಿನ್ನನ್ನು ಸೇವಿಸಲಿಚ್ಛಿಸುವವನೂ । ವಾಜಾಯ—ಹವಿಷ್ಮಂತನೂ ಆದ ಯಜಮಾನನಿಗೆ ಪ್ರಥಮಂ—ಉಳಿದವರಿಗೆಲ್ಲರಿಗಿಂತಲೂ ಮೊದಲು। ಶಗ್ಧಿ—ಕೊಡು। ಪೂರ್ವ್ಯ—ಪುರಾತನನಾದ ಎಲೈ ಇಂದ್ರನೇ । ಸ್ತೋಮಾಯ—ಸ್ತುತಿಕರ್ತನಿಗೂ ಸಹ । ಶಗ್ಧಿ—ಅನಂತರ ಕೊಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಉತ್ತಮವಾದ ವೀರ್ಯದಿಂದ ಕೂಡಿದ ಯಾವ ಧನವನ್ನು ನಿನ್ನಿಂದ ಯಾಚಿಸುವೆನೋ ಆ ಧನವನ್ನು ನಮಗೆ ಕೊಡು. ನಿನ್ನನ್ನು ಸೇವಿಸಲಿಚ್ಛಿಸುವವನೂ, ಹವಿಷ್ಮಂತನೂ ಆದ ಯಜಮಾನನಿಗೆ ಉಳಿದವರಿಗೆಲ್ಲರಿಗಿಂತಲೂ ಮೊದಲು ಕೊಡು. ಪುರಾತನನಾದ ಎಲೈ ಇಂದ್ರನೇ, ಅನಂತರ ಸ್ತುತಿಕರ್ತನಿಗೂ ದಾನಮಾಡು.

English Translation

Grant us, Indra, the wealth accompaniend by vigour, which I solicit from you; give (wealth) first of all to him desirous of gratifying you, presenting (sacrificial) food; give (wealth), you who are of old, to him who glorifies you.

। ಸಂಹಿತಾಪಾಠಃ ।

ಶಗ್ಧೀ ನೋ ಅಸ್ಯ ಯದ್ಧ ಪೌರಮಾವಿಥ ಧಿಯ ಇಂದ್ರ ಸಿಷಾಸತಃ ।

ಶಗ್ಧಿ ಯಥಾ ರುಶಮಂ ಶ್ಯಾವಕಂ ಕೃಪಮಿಂದ್ರ ಪ್ರಾವಃ ಸ್ವರ್ಣರಂ ॥೧೨॥

॥ ಪದಪಾಠಃ ॥

ಶಗ್ಧಿ । ನಃ । ಅಸ್ಯ । ಯತ್ । ಹ । ಪೌರಂ । ಆವಿಥ । ಧಿಯಃ । ಇಂದ್ರ । ಸಿಸಾಸತಃ ।

ಶಗ್ಧಿ । ಯಥಾ । ರುಶಮಂ । ಶ್ಯಾವಕಂ । ಕೃಪಂ । ಇಂದ್ರ । ಪ್ರ । ಆವಃ । ಸ್ವಃಽನರಂ ॥ ೧೨ ॥

। ಸಾಯಣಭಾಷ್ಯಂ ।

ಹೇ ಇಂದ್ರ ಧಿಯಃ ಕರ್ಮಾಣಿ ಸ್ತೋತ್ರಾಣಿ ವಾ ಸಿಷಾಸತಃ ಸಂಭಕ್ತವತೋ ನೋಽಸ್ಮಾಕಂ ಸಂಬಂಧಿನೋಽಸ್ಯ ಯಜಮಾನಸ್ಯ ತದ್ಧನಂ ಶಗ್ಧಿ ಪ್ರದೇಹಿ ಯದ್ಧ ಯೇನ ಖಲು ಧನೇನ ಪೌರಂ । ಪುರುರ್ನಾಮ ರಾಜಾ । ತಸ್ಯ ಪುತ್ರಮಾವಿಥ ರರಕ್ಷಿಥ । ಅಪಿ ಚ ಹೇ ಇಂದ್ರ ರುಶಮಂ ಶ್ಯಾವಕಂ ಕೃಪಂ ಚೈತನ್ನಾಮಕಾಂಸ್ತ್ರೀನ್ರಾಜರ್ಷೀನ್ ಯಥಾ ಯೇನ ಪ್ರಕಾರೇಣ ಪ್ರಾವಃ ಪ್ರಾರಕ್ಷಃ ತಥಾ ಸ್ವರ್ಣರಂ ಸರ್ವಸ್ಯ ಹವಿಷೋ ನೇತಾರಂ ಪ್ರಾಪಯಿತಾರಂ । ಯದ್ವಾ । ಸ್ವಃ ಸ್ವರ್ಗಂ ಪ್ರತಿ ನೇತವ್ಯಮಿಮಂ ಯಜಮಾನಂ ಶಗ್ಧಿ । ಶಕ್ತಂ ಕುರು । ಧನಾದಿಸಂಪತ್ತ್ಯಾ ಯಾಗಾನುಷ್ಠಾನಾಯ ಯಥಾ ಶಕ್ತೋ ಭವತಿ ತಥಾ ಕುರ್ವಿತ್ಯರ್ಥಃ । ಇಂದ್ರೇತ್ಯಾಮಂತ್ರಿತಸ್ಯ ಪಾದಾದಿತ್ವೇನಾಷ್ಟಮಿಕನಿಘಾತಾಭಾವೇ ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಯದ್ಧ—ಯಾವ ಧನದಿಂದ। ಪೌರಂ—ಪುರುವಿನ ಪುತ್ರನನ್ನು । ಆವಿಥ—ರಕ್ಷಿಸಿದೆಯೋ ( ಆ ಧನವನ್ನು) । ಧಿಯಃ—ಯಜ್ಞಕರ್ಮಗಳನ್ನು । ಸಿಷಾಸತಃ—ಆಚರಿಸುವವನೂ । ನಃ—ನಮಗೆ ಸೇರಿದವನೂ ಆದ । ಅಸ್ಯ—ಆರಾಧಕನಿಗೆ । ಶಗ್ಧಿ—ಕೊಡು । ಇಂದ್ರ—ಎಲೈ ಇಂದ್ರನೇ । ರುಶಮಂ—ರುಶಮನನ್ನೂ । ಶ್ಯಾವಕಂ—ಶ್ಯಾವಕನನ್ನೂ । ಕೃಪಂ—ಕೃಪನನ್ನೂ । ಯಥಾ—ಯಾವ ಪ್ರಕಾರವಾಗಿ । ಪ್ರಾವಃ—ರಕ್ಷಿಸಿದೆಯೋ (ಅದೇರೀತಿಯಲ್ಲಿ) । ಸ್ವರ್ಣರಂ—ಸ್ವರ್ಗಾಪೇಕ್ಷಿಯಾದ ಯಜಮಾನನನ್ನೂ । ಶಗ್ಧಿ—ಶಕ್ತನನ್ನಾಗಿ ಮಾಡು.

। ಭಾವಾರ್ಥ ।

ಎಲೈ ಇಂದ್ರನೇ, ಯಾವ ಧನದಿಂದ ಪುರುವಿನ ಮಿತ್ರನನ್ನು ರಕ್ಷಿಸಿದೆಯೋ ಆ ಧನವನ್ನು ಯಜ್ಞಕರ್ಮಗಳನ್ನು ಆಚರಿಸುವವನೂ, ನಮಗೆ ಸೇರಿದವನೂ ಆದ ಆರಾಧಕನಿಗೂ ಕೊಡು. ಎಲೈ ಇಂದ್ರನೇ, ರುಶಮ, ಶ್ಯಾವಕ, ಕೃಪ ಎಂಬ ಮೂರು ರಾಜರ್ಷಿಗಳನ್ನೂ ಯಾವ ಪ್ರಕಾರ ರಕ್ಷಿಸಿದೆಯೋ ಅದೇ ಪ್ರಕಾರ ಸ್ವರ್ಗಾಪೇಕ್ಷಿಯಾದ ಯಜಮಾನನಿಗೂ ಶಕ್ತಿಯನ್ನು ಕೊಡು.

## English Translation

Give to this our ( worshipper ) engaged in celebrating your sacred rites, Indra, (the wealth) whereby you have protected the son of Puru: grant to the man (aspiring) to heaven ( the wealth wherewith ) you have preserved, O Indra, Rusama, Syavaka, and Kripa.

॥ ಸಂಹಿತಾಪಾಠಃ ॥

ಕನ್ನವ್ಯೋ ಅತಸೀನಾಂ ತುರೋ ಗೃಣೀತ ಮರ್ತ್ಯಃ ।
ನಹೀ ನ್ವಸ್ಯ ಮಹಿಮಾನಮಿಂದ್ರಿಯಂ ಸ್ವರ್ಗೃಣಂತ ಆನಶುಃ ॥ ೧೩ ॥

॥ ಪದಪಾಠಃ ॥

ಕತ್ । ನವ್ಯಃ । ಅತಸೀನಾಂ । ತುರಃ । ಗೃಣೀತ । ಮರ್ತ್ಯಃ ।
ನಹಿ । ನು । ಅಸ್ಯ । ಮಹಿಮಾನಂ । ಇಂದ್ರಿಯಂ । ಸ್ವಃ । ಗೃಣಂತಃ । ಆನಶುಃ ॥ ೧೩ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಬ್ರಹ್ಮಶಸ್ತ್ರೇ ಕನ್ನವ್ಯ ಇತಿ ಕದ್ವಾನ್ಪ್ರಗಾಥಃ । ಸೂತ್ರಿತಂ ಚ । ಕನ್ನವ್ಯೋ ಅತಸೀನಾಂ ಕದೂ ನ್ವಸ್ಯಾಕೃತಮಿತಿ ಕದ್ವಂತಃ ಪ್ರಗಾಥಾಃ । ಆ. ೭-೪ । ಇತಿ ॥ ಅಹರ್ಗಣೇಷು ದ್ವಿತೀಯಾದಿಷ್ವಹಃಸು ತಸ್ಮಿನ್ನೇವ ಶಸ್ತ್ರೇ ತಸ್ಯೈವಾಯಂ ಪ್ರಗಾಥಃ । ಸೂತ್ರ್ಯತೇ ಹಿ । ಆರಂಭಣೀಯಾಃ ಪರ್ಯಾಸಾನ್ ಕದ್ವತೋಽಹರಹಃಶಸ್ಯಾನೀತಿ ಹೋತ್ರಕಾ ದ್ವಿತೀಯಾದಿಷ್ವೇವ । ಆ. ೭-೧ । ಇತಿ ॥

ಅತಸೀನಾಮತಂತೀನಾಂ ಸತತಗಾಮಿನೀನಾಂ ಸ್ತುತೀನಾಂ ತುರಃ ಪ್ರೇರಯಿತಾ ಮರ್ತ್ಯೋ ಮರಣಧರ್ಮಾ ನವ್ಯೋಽಭಿನವ ಇದಾನೀಂತನಃ ಕತ್ ಕೋ ನಾಮ ಸ್ತೋತಾ ಗೃಣೀತ । ಇಂದ್ರಂ ಸ್ತುಯಾತ್ । ಅಲ್ಪಪ್ರಜ್ಞೈರಿದಾನೀಂತನೈರಿಂದ್ರಃ ಸ್ತೋತುಂ ನ ಶಕ್ಯತ ಇತ್ಯರ್ಥಃ ॥ ಗೄ ಶಬ್ದೇ । ಕ್ರ್ಯಾದಿಃ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ ॥ ನು ಪುರಾ ಪೂರ್ವಸ್ಮಿನ್ನಪಿ ಕಾಲೇ ವಿದ್ಯಮಾನಾಃ ಸ್ವಃ ಸರ್ವೇ ಗೃಣಂತಃ ಸ್ತೋತಾರಃ । ಯದ್ವಾ । ಸ್ವಃ ಸುಷ್ಠ್ವರಣೀಯಂ ಪ್ರಾಪ್ತವ್ಯಮಿಂದ್ರಂ ಗೃಣಂತಃ ಸ್ತುವಂತೋ ಜನಾಃ । ಇಂದ್ರಿಯಂ । ಇಂದ್ರಿಯಮಿಂದ್ರಸ್ಯ ಲಿಂಗಮಿಂದ್ರಸ್ಯೈವಾಸಾಧಾರಣಂ । ಅಸ್ಯೇಂದ್ರಸ್ಯ ಮಹಿಮಾನಂ ಮಹತ್ತ್ವಂ ನ ಹ್ಯಾನಶುಃ । ನ ಖಲು ಪ್ರಾಪ್ನುವನ್ ॥ ಅಶ್ನೋತೇರ್ಲಿಟಿ ವ್ಯತ್ಯ-

ಯೇನ ಪರಸ್ತ್ಯಪದಂ । ಅತ ಅದೇರಿತ್ಯಧ್ಯಾಸಸ್ಯಾತ್ವಂ । ಅಶ್ನೋತೇರ್ಶ್ಲಿತಿ ನುಟ್ । ಹಿ ಚೇತಿ ನಿಘಾತ-ಪ್ರತಿಷೇಧಃ ॥

॥ ಪ್ರತಿಪದಾರ್ಥ ॥

ನವ್ಯಃ—ಈಗಿನ ಕಾಲಕ್ಕೆ ಸೇರಿದವನೂ । ಅತಸೀನಾಂ—ಸ್ತುತಿಗಳಿಗೆ । ತುರಃ—ಪ್ರೇರಕನೂ ಆದ । ಮರ್ತ್ಯಃ—ಮಾನವನಲ್ಲಿ । ಕಃ—ಯಾವನು ತಾನೇ । ಗೃಣೀತ—ಇಂದ್ರನನ್ನು ತೃಪ್ತಿಕರವಾಗಿ ಸ್ತುತಿಸಬಲ್ಲನು ? । ನು—ಹಿಂದಿನಕಾಲದಲ್ಲಿಯೂ ಸಹ । ಗೃಣಂತಃ ಸ್ಮಃ—ಈ ಇಂದ್ರನನ್ನು ಸ್ತುತಿಸಿದವರು ಎಲ್ಲರೂ । ಅಸ್ಯ—ಈ ಇಂದ್ರನ । ಇಂದ್ರಿಯಂ—ಅಸಾಧಾರಣವಾದ । ಮಹಿಮಾನಂ—ಮಹತ್ವವನ್ನು । ನಹಿ ಆನಶುಃ—ಪಡೆಯಲಾಗಲಿಲ್ಲ.

॥ ಭಾವಾರ್ಥ ॥

ಈಗಿನ ಕಾಲಕ್ಕೆ ಸೇರಿದವನೂ, ಸ್ತುತಿಗಳಿಗೆ ಪ್ರೇರಕನೂ ಆದ ಮಾನವನಲ್ಲಿ ಯಾರು ತಾನೇ ಇಂದ್ರನನ್ನು ತೃಪ್ತಿಕರವಾಗಿ ಸ್ತುತಿಸಬಲ್ಲರು ? ಹಿಂದಿನ ಕಾಲದಲ್ಲಿಯೂ ಸಹ ಈ ಇಂದ್ರನನ್ನು ಸ್ತುತಿಸಿದವರಲ್ಲಿ ಎಲ್ಲರೂ ಇವನ ಅಸಾಧಾರಣವಾದ ಮಹತ್ವವನ್ನು ಪಡೆಯಲಾಗಲಿಲ್ಲ. (ಅರಿಯಲಾಗಲಿಲ್ಲ)

English Translation

What living mortal, the prompter of ever rising (praises), may now glorify Indra ? None of those heretofore praising him have attained the greatness of the properties of Indra.

॥ ವಿಶೇಷವಿಷಯಗಳು ॥

ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಕನ್ನವ್ಯಃ ಎಂಬ ಈ ಋಕ್ಕನ್ನು ಪ್ರಗಾಥಮಂತ್ರವನ್ನಾಗಿ ಪಠಿಸಬೇಕೆಂದು ಅಶ್ವಲಾಯನಶ್ರೌತ ಸೂತ್ರದ—ಕನ್ನವ್ಯೋ ಅತಸೀನಾಂ ಕದೂ ನ್ವಸ್ಯಾಕೃತಮಿತಿ ಕದ್ವತಃ ಪ್ರಗಾಥಾಃ ಎಂಬ ಸೂತ್ರದಿಂದ (ಅ. ೭-೪) ವಿವೃತವಾಗಿರುವುದು. ಅಹರ್ಗಣವೆಂಬ ಯಾಗದಲ್ಲಿಯೂ ಎರಡನೆಯ ದಿವಸದಿಂದ ಮುಂದಿನ ದಿನಗಳಲ್ಲಿ ಅದೇ ಶಸ್ತ್ರಮಂತ್ರಗಳಲ್ಲಿ ಈ ಮಂತ್ರವನ್ನು ಪ್ರಗಾಥಮಂತ್ರವನ್ನಾಗಿ ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ—ಆರಂಭಣೀಯಾಃ ಪರ್ಯಾಸಾನ್ ಕದ್ವತೋಽಹರಹಃಶಸ್ಯಾನೀತಿ ಹೋತ್ರಕಾ ದ್ವಿತೀಯಾದಿಷ್ವೇವ ಎಂಬ ಸೂತ್ರದಿಂದ (ಅ. ೭-೧) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಕದು ಸ್ತುವಂತ ಋತಯಂತ ದೇವತ ಋಷಿಃ ಕೋ ವಿಪ್ರ ಓಹತೇ ।

ಕದಾ ಹವಂ ಮಘವನ್ನಿಂದ್ರ ಸುನ್ವತಃ ಕದು ಸ್ತುವತ ಆ ಗಮಃ ॥ ೧೪ ॥

॥ ಪದಪಾಠಃ ॥

ಕತ್ । ಊಂ ಇತಿ । ಸ್ತುವಂತಃ । ಋತಯಂತ । ದೇವತಾ । ಋಷಿಃ । ಕಃ । ವಿಪ್ರಃ । ಓಹತೇ ।

ಕದಾ । ಹವಂ । ಮಘವನ್ । ಇಂದ್ರ । ಸುನ್ವತಃ । ಕತ್ । ಊಂ ಇತಿ । ಸ್ತುವತಃ । ಆ । ಗಮಃ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸ್ತುವಂತಃ ಸ್ತೋತ್ರಂ ಕುರ್ವಂತಃ ಕದು ಕೇ ಖಲು ಜನಾ ದೇವತಾ ॥ ದೇವಾತ್ತಲಿತಿ ಸ್ವಾರ್ಥಿಕಸ್ತಲ್ಪ್ರತ್ಯಯಃ । ವ್ಯತ್ಯಯೇನ ಪ್ರಥಮಾ ॥ ದೇವಂ ತ್ವಾಮುದ್ದಿಶ್ಯ ಋತಯಂತ । ಋತಂ ಯಜ್ಞಮೈಚ್ಛನ್ । ತ್ವದೀಯಯಾಗೇಚ್ಛಾಪಿ ದುರ್ಲಭಾ ದೂರೇ ತ್ವದ್ಯಾಗಕಥಾ। ಋಷಿರ್ದ್ರಷ್ಟಾ ವಿಪ್ರೋ ಮೇಧಾವೀ ಕಃ ಸ್ತೋತೌಹತೇ । ವಹತಿ । ತ್ವಾಂ ಸ್ತುತೀಃ ಪ್ರಾಪಯತಿ । ನ ಕಶ್ಚಿದಪಿ ತ್ವಾಂ ಸ್ತೋತುಂ ಶಕ್ನೋತೀತ್ಯರ್ಥಃ । ಯತ ಏವಮತಃ ಕಾರಣಾತ್ ಹೇ ಮಘವನ್ ಧನವನ್ನಿಂದ್ರ ಅನುಗ್ರಹೀತ್ರಾ ತ್ವಯೈವಾಗಂತವ್ಯಂ। ಸ ತ್ವಂ ಕದಾ ಕಸ್ಮಿನ್ಕಾಲೇ ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಹವಮಾಹ್ವಾನಂ ಪ್ರತ್ಯಾ ಗಮಃ । ಆಗಚ್ಛಃ । ಕದು ।ಕದಾ ಚ ಕಸ್ಮಿಂಶ್ಚ ಕಾಲೇ ಸ್ತುವತಃ ಕೇವಲಂ ಸ್ತೋತ್ರಂ ಕುರ್ವತೋ ಯಜಮಾನಸ್ಯ ಹವಮಾಹ್ವಾನಮಾ ಗಮಃ । ಅಭ್ಯಗಚ್ಛಃ ॥ ಸುನ್ವತಃ ಸ್ತುವತ ಇತ್ಯುಭಯತ್ರ ಶತುರನುಮ ಇತಿ ವಿಭಕ್ತೇರುದಾತ್ತತ್ವಂ। ಗಮೇರ್ಲುಙಿ ಲೃದಿತ್ತ್ವಾತ್ ಚ್ಲೇರಙಾದೇಶಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಸ್ತುವಂತಃ—ಸ್ತುತಿಯನ್ನು ಪಠಿಸುತ್ತಾ । ಕದು—ಯಾವ ಜನರು ತಾನೇ। ದೇವತಾ—ದೇವನಾದ ನಿನ್ನನ್ನುದ್ದೇಶಿಸಿ । ಋತಯಂತ—ಯಜ್ಞಮಾಡಲಿಚ್ಛೆಯುಳ್ಳವರಾಗಿದ್ದಾರೆ ? । ಋಷಿಃ—ಅತೀಂದ್ರಿಯ ದರ್ಶನಸಮರ್ಥನೂ । ವಿಪ್ರಃ—ಮೇಧಾವಿಯೂ ಆದ । ಕಃ—ಯಾವ ಸ್ತೋತೃವು ತಾನೇ । ಓಹತೇ—ನಿನ್ನಲ್ಲಿಗೆ ಸ್ತುತಿಯನ್ನು ವಹಿಸುತ್ತಾನೆ। ಮಘವನ್—ಧನವಂತನಾದ। ಇಂದ್ರ—ಎಲೈ ಇಂದ್ರನೇ। ಕದಾ—ಯಾವ ಕಾಲದಲ್ಲಿ । ಸುನ್ವತಃ—ಸೋಮರಸವನ್ನು ಹಿಂಡುವ ಯಜಮಾನನ। ಹವಂ—ಆಹ್ವಾನಕ್ಕಭಿಮುಖವಾಗಿ । ಆ ಗಮಃ—ಬರುವೆ ? । ಕದು—ಯಾವಾಗ ತಾನೇ । ಸ್ತುವತಃ—ಸ್ತುತಿಕರ್ತನಲ್ಲಿಗೆ ಬರುವೆ ?

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ತುತಿಯನ್ನು ಪಠಿಸುತ್ತಾ ಯಾವ ಜನರು ತಾನೇ ದೇವನಾದ ನಿನ್ನನ್ನುದ್ದೇಶಿಸಿ ಯಜ್ಞಮಾಡಲಿಚ್ಛೆಯುಳ್ಳವರಾಗಿದ್ದಾರೆ ? ಅತೀಂದ್ರಿಯ ದರ್ಶನಸಮರ್ಥನೂ, ಮೇಧಾವಿಯೂ ಆದ ಯಾವ ಸ್ತೋತೃವು ತಾನೇ ನಿನ್ನಲ್ಲಿಗೆ ಸ್ತುತಿಯನ್ನು ವಹಿಸುತ್ತಾನೆ ? ಧನವಂತನಾದ ಎಲೈ ಇಂದ್ರನೇ, ಯಾವ ಕಾಲದಲ್ಲಿ ಸೋಮರಸವನ್ನು ಹಿಂಡುವ ಯಜಮಾನನ ಆಹ್ವಾನಕ್ಕಭಿಮುಖವಾಗಿ ಬರುವೆ ? ಯಾವಾಗ ತಾನೇ ಸ್ತುತಿಕರ್ತನಲ್ಲಿಗೆ ಬರುವೆ ?

## English Translation

Who, praising you as the deity, (ever) hoped to sacrifice to you ?

What saint, what sage conveys (his) praises to you ?) When, opulent Indra, have you come to the invocation of one pouring out libations, of one repeating (your) praise ?

। ಸಂಹಿತಾಪಾಠಃ ।

ಉದು ತ್ಯೇ ಮಧುಮತ್ತಮಾ ಗಿರಃ ಸ್ತೋಮಾಸ ಈರತೇ ।
ಸತ್ರಾಜಿತೋ ಧನಸಾ ಅಕ್ಷಿತೋತಯೋ ವಾಜಯಂತೋ ರಥಾ ಇವ ॥೧೫॥

। ಪದಪಾಠಃ ॥

ಉತ್ । ಊಂ ಇತಿ । ತ್ಯೇ । ಮಧುಮತ್ಽತಮಾಃ । ಗಿರಃ । ಸ್ತೋಮಾಸಃ । ಈರತೇ ।
ಸತ್ರಾಽಜಿತಃ । ಧನಽಸಾಃ । ಅಕ್ಷಿತಽಊತಯಃ । ವಾಜಽಯಂತಃ । ರಥಾಃಽಇವ ॥ ೧೫ ॥

। ಸಾಯಣಭಾಷ್ಯಂ ।

ಜ್ಯೋತಿಷ್ಟೋಮೇ ಮಾಧ್ಯಂದಿನಸವನೇ ಬ್ರಹ್ಮಶಸ್ತ್ರ ಉದು ತ್ಯ ಇತಿ ಪ್ರಗಾಥೋಽನುರೂಪಾನಂತರಂ ಶಂಸನೀಯಃ । ಸೂತ್ರಿತಂ ಚ । ಉದು ತ್ಯೇ ಮಧುಮತ್ತಮಾ ಇಂದ್ರಃ ಪೂರ್ಭಿತ್ । ಆ. ೫-೧೬. ಇತಿ ॥ ಚಾತುರ್ವಿಂಶಿಕೇ ಮಾಧ್ಯಂದಿನಸವನೇ ತಸ್ಮಿನ್ನೇವ ಶಸ್ತ್ರೇಽಯಂ ಪ್ರಗಾಥೋ ವೈಕಲ್ಪಿಕೋಽನುರೂಪಃ । ಸೂತ್ರಿತಂ ಚ । ಉದು ತ್ಯೇ ಮಧುಮತ್ತಮಾಸ್ತ್ವಮಿಂದ್ರ ಪ್ರತೂರ್ತಿಷು ॥ ಆ. ೭. ೪- ಇತಿ ॥

ತ್ಯೇ ತೇ ಪ್ರಸಿದ್ಧಾ ಮಧುಮತ್ತಮಾ ಅತಿಶಯೇನ ಮಧುರಾ ಗಿರೋಽಪ್ರಗೀತಾಃ ಶಸ್ತ್ರರೂಪಾ ವಾಚಃ ಸ್ತೋಮಾಸಃ ಪ್ರಗೀತಾನಿ ಬಹಿಷ್ಪವಮಾನಾದೀನಿ ಸ್ತೋತ್ರಾಣಿ ಚೋದೀರತೇ । ಹೇ ಇಂದ್ರ ತ್ವಾಮುದ್ದಿಶ್ಯೋದ್ಗಚ್ಛಂತಿ । ಊರ್ಧ್ವಂ ಪ್ರಸರಂತಿ ॥ ಈರ ಗತೌ । ಅದಾದಿಕಃ ॥ ತತ್ರ ದೃಷ್ಟಾಂತಃ । ಸತ್ರಾಜಿತಃ ಸಹೈವ ಶತ್ರೂಂಜಯಂತಃ ಅತ ಏವ ಧನಸಾ ಧನಾನಿ ಸಂಭಜಂತಃ ॥ ವನ ಷಣ ಸಂಭಕ್ತೌ । ಜನಸನಖನಕ್ರಮಗಮೋ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ ॥ ಅಕ್ಷಿತೋತಯಃ । ಅಕ್ಷಿತಾಃ ಕ್ಷಯರಹಿತಾ ಊತಯೋ ರಕ್ಷಾ ಯೇಷಾಂ ತೇ ತಥೋಕ್ತಾಃ ॥ ಕ್ಷಿಯೋ ಭಾವೇ ನಿಷ್ಠಾ । ನಿಷ್ಠಾಯಾಮಣ್ಯದರ್ಥ ಇತಿ ಪರ್ಯುದಾಸಾದ್ದೀರ್ಘಾಭಾವಃ । ಅತ ಏವ ಕ್ಷಿಯೋ ದೀರ್ಘಾದಿತಿ ನಿಷ್ಠಾನತ್ವಾಭಾವಶ್ಚ ॥ ವಾಜಯಂತೋ ವಾಜಮನ್ನಮಿಚ್ಛಂತಃ ॥ ಕ್ಯಚಿ ನ ಛಂದಸ್ಯಪುತ್ರಸ್ಯೇತೀತ್ವದೀರ್ಘಯೋಃ ಪ್ರತಿಷೇಧಃ ॥ ಏವಂಗುಣವಿಶಿಷ್ಟಾ ರಥಾ ಇವ । ತೇ ಯಥಾ ವಿವಿಧಮಿತಸ್ತತ ಉತ್ತಿಷ್ಠಂತಿ ತದ್ವದುದೀರತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ!) **ಸತ್ರಾಜಿತಃ**— ಒಂದೇ ಸಮನೆ ಶತ್ರುಗಳನ್ನು ಜಯಿಸುವುವೂ । **ಧನಸಾಃ**—ಧನಗಳೊಂದಿಗೆ ತುಂಬಿರುವುವೂ । **ಅಕ್ಷಿತೋತಯಃ**—ವ್ಯರ್ಥವಾಗದ ರಕ್ಷಣೆಯುಳ್ಳವೂ । **ವಾಜಯಂತಃ**—ಅನ್ನೇಚ್ಛುಗಳೂ ಆದ । **ರಥಾ ಇವ**—ರಥಗಳಂತೆ । **ತ್ಯೇ ಉ**—ಪ್ರಸಿದ್ಧವಾದವೂ । **ಮಧುಮತ್ತಮಾಃ**—ಅತ್ಯಂತ ಮಧುರವಾದವೂ ಆದ । **ಗಿರಃ**—ಶಸ್ತ್ರರೂಪವಾದ ವಾಕ್ಯಗಳೂ । **ಸ್ತೋಮಾಸಃ**—ಬಹಿಷ್ಪವಮಾನಾದಿಸ್ತೋತ್ರಗಳೂ । **ಉದೀರತೇ**— ಪ್ರಕಟಿತವಾಗಿ ನಿನ್ನಲ್ಲಿಗೆ ಪ್ರಸರಿಸುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಒಂದೇ ಸಮನಾಗಿ ಶತ್ರುಗಳನ್ನು ಜಯಿಸುವುವೂ, ಧನಗಳೊಂದಿಗೆ ತುಂಬಿರುವುವೂ, ವ್ಯರ್ಥವಾಗದ ರಕ್ಷಣೆಯುಳ್ಳವೂ, ಅನ್ನೇಚ್ಛುಗಳೂ ಆದ ರಥಗಳಂತೆ ಪ್ರಸಿದ್ಧವಾದವೂ, ಅತ್ಯಂತ ಮಧುರವಾದವೂ ಆದ ಶಸ್ತ್ರರೂಪವಾದ ವಾಕ್ಯಗಳೂ ಬಹಿಷ್ಪವಮಾನಾದಿಸ್ತೋತ್ರಗಳೂ ಪ್ರಕಟಿತವಾಗಿ ನಿನ್ನಲ್ಲಿಗೆ ಪ್ರಸರಿಸುತ್ತವೆ.

English translation

These most sweet songs, these hymns of praise ascend ( to you ), like triumphant chariots laden with wealth, charged with unfailing protections, intended to procure food.

॥ ವಿಶೇಷವಿಷಯಗಳು ॥

ಜ್ಯೋತಿಷ್ಟೋಮಯಾಗದ ಮಾಧ್ಯಂದಿನಸವನಕಾಲದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಉದು ತ್ಯೇ** ಎಂಬ ತೃಚವನ್ನು ಪ್ರಗಾಥಾನುರೂಪತೃಚದ ಅನಂತರದಲ್ಲಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಉದು ತ್ಯೇ ಮಧುಮತ್ತಮಾ ಇಂದ್ರಃ ಪೂರ್ಭಿತ್** ಎಂಬ ಸೂತ್ರದಿಂದ (ಆ. ೫-೧೬) ವಿವೃತವಾಗಿರುವುದು. ಮತ್ತು ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿಯೂ ಅದೇ ಶಸ್ತ್ರಮಂತ್ರಗಳಲ್ಲಿ ಈ ಪ್ರಗಾಥಮಂತ್ರವನ್ನು ವೈಕಲ್ಪಿಕಾನುರೂಪ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಉದು ತ್ಯೇ ಮಧುಮತ್ತಮಾಸ್ತ್ವಮಿಂದ್ರ ಪ್ರತೂರ್ತಿಷು** ಎಂಬ ಸೂತ್ರದಿಂದ (ಆ ೭-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ಕಣ್ವಾ ಇವ ಭೃಗವಃ ಸೂರ್ಯಾ ಇವ ವಿಶ್ವಮಿದ್ಧೀತಮಾನಶುಃ ।**
**ಇಂದ್ರಂ ಸ್ತೋಮೇಭಿರ್ಮಹಯಂತ ಆಯವಃ ಪ್ರಿಯಮೇಧಾಸೋ ಅಸ್ವರನ್ ॥ ೧೩ ॥**

॥ ಪದಪಾಠಃ ॥

ಕಣ್ವಾಃ ಽ ಇವ । ಭೃಗವಃ । ಸೂರ್ಯಾಃ ಽ ಇವ । ವಿಶ್ವಂ । ಇತ್ । ಧೀತಂ । ಆನಶುಃ ।

ಇಂದ್ರಂ । ಸ್ತೋಮೇಭಿಃ । ಮಹಯಂತಃ । ಆಯವಃ । ಪ್ರಿಯಽಮೇಧಾಸಃ । ಅಸ್ವರನ್ ॥ ೧೩ ॥

॥ ಸಾಯಣಭಾಷ್ಯಂ ॥

ಕಣ್ವಾ ಇವ ಕಣ್ವಗೋತ್ರೋತ್ಪನ್ನಾ ಋಷಯ ಇವ ಸ್ತುವಂತೋ ಭೃಗವೋ ಭೃಗುಗೋತ್ರೋತ್ಪನ್ನಾ ಋಷಯೋ ಧೀತಮಾಧ್ಯಾತಂ ವಿಶ್ವಮಿದ್ವ್ಯಾಪ್ತಂ ತಮೇವೇಂದ್ರಮಾನಶುಃ । ವ್ಯಾಪುಃ । ಸೂರ್ಯಾ ಇವ । ಯಥಾ ಸೂರ್ಯರಶ್ಮಯಃ ಸರ್ವಂ ಜಗದ್ವ್ಯಾಪ್ನುವಂತಿ ತದ್ವತ್ । ಅಪಿ ಚ ಪ್ರಿಯಮೇಧಾಸಃ ಪ್ರಿಯಪ್ರಜ್ಞಾ ಏತತ್ಸಂಜ್ಞಾ ವಾಯವೋ ಮನುಷ್ಯಾಸ್ತಮೇವೇಂದ್ರಂ ಮಹಯಂತಃ ಪೂಜಯಂತಃ ಸ್ತೋಮೇಭಿಃ ಸ್ತೋತ್ರೈರಸ್ವರನ್ । ಅಸ್ತುವನ್ ॥ ಸ್ವೃ ಶಬ್ದೋಪತಾಪಯೋಃ । ಭೌವಾದಿಕಃ ॥

॥ ಪ್ರತಿಪದಾರ್ಥ ॥

ಕಣ್ವಾ ಇವ—ಕಣ್ವಗೋತ್ರೋತ್ಪನ್ನರಾದ ಋಷಿಗಳಂತೆಯೇ । ಭೃಗವಃ—ಭೃಗುಗೋತ್ರೋತ್ಪನ್ನರಾದ ಋಷಿಗಳೂ ಸಹ । ಧೀತಂ—ಅವರಿಂದ ಧ್ಯಾನಿಸಲ್ಪಟ್ಟವನೂ । ಸೂರ್ಯಾ ಇವ—ಸೂರ್ಯರಶ್ಮಿಗಳು ಸರ್ವತ್ರ ವ್ಯಾಪಿಸಿರುವಂತೆ । ವಿಶ್ವಮಿತ್—ಸರ್ವತ್ರ ವ್ಯಾಪಿಸಿರುವವನೂ ಆದ ಇಂದ್ರನನ್ನು । ಆನಶುಃ—ಹೊಂದಿ ಅವನೊಂದಿಗೆ ಸೇರಿಕೊಂಡಿದ್ದಾರೆ । ಪ್ರಿಯಮೇಧಾಸಃ—ಪ್ರಿಯಮೇಧಸಂಜ್ಞಕರಾದ । ಆಯವಃ—ಮಾನವರೂ ಕೂಡ । ಇಂದ್ರಂ—ಇಂದ್ರನನ್ನು । ಮಹಯಂತಃ—ಪೂಜಿಸುತ್ತಾ । ಸ್ತೋಮೇಭಿಃ—ಸ್ತೋತ್ರಗಳಿಂದ । ಅಸ್ವರನ್—ಸ್ತುತಿಸಿದರು.

॥ ಭಾವಾರ್ಥ ॥

ಕಣ್ವಗೋತ್ರೋತ್ಪನ್ನರಾದ ಋಷಿಗಳಂತೆಯೇ ಭೃಗುಗೋತ್ರೋತ್ಪನ್ನರಾದ ಋಷಿಗಳೂ ಸಹ ಅವರ ಧ್ಯಾನಕ್ಕೆ ಪಾತ್ರನಾದವನೂ ಸೂರ್ಯರಶ್ಮಿಗಳಂತೆ ಸರ್ವವ್ಯಾಪಕನೂ ಆದ ಇಂದ್ರನನ್ನು ಹೊಂದಿ ಅವನೊಂದಿಗೆ ಸೇರಿಕೊಂಡಿದ್ದಾರೆ. ಪ್ರಿಯಮೇಧಸಂಜ್ಞಕರಾದ ಮಾನವರೂ ಸಹ ಇಂದ್ರನನ್ನು ಪೂಜಿಸುತ್ತಾ ಸ್ತೋತ್ರಗಳಿಂದ ಸ್ತುತಿಸಿದರು.

English Translation

The Bhrigus, like the Kanwas, have verily attained to the all-pervading (Indra), on whom they have meditated, as the sun (pervades the universe by his rays): men of the Priyamedha race, worshipping Indra with praises, glorify him.

॥ ಸಂಹಿತಾಪಾಠಃ ॥

ಯುಕ್ಷ್ವಾ ಹಿ ವೃತ್ರಹಂತಮ ಹರೀ ಇಂದ್ರ ಪರಾವತಃ ।

ಅರ್ವಾಚೀನೋ ಮಘವನ್ತ್ಸೋಮಪೀತಯ ಉಗ್ರ ಋಷ್ವೇಭಿರಾ ಗಹಿ ॥

। ಪದಪಾಠಃ ।

ಯುಕ್ಷ್ವ । ಹಿ । ವೃತ್ರಹನ್ಽತಮ । ಹರೀ ಇತಿ । ಇಂದ್ರ । ಪರಾಽವತಃ ।

ಅರ್ವಾಚೀನಃ । ಮಘ೽ವನ್ । ಸೋಮಽಪೀತಯೇ । ಉಗ್ರಃ । ಋಷ್ವೇಭಿಃ । ಆ । ಗಹಿ ॥ ೧೭ ॥

। ಸಾಯಣಭಾಷ್ಯಂ ।

ಹೇ ವೃತ್ರಹಂತಮ । ವೃತ್ರಂ ಹತವಾನ್ ವೃತ್ರಹಾ । ಅತಿಶಯೇನ ಹತವಾನ್ ವೃತ್ರಹಂತಮಃ । ಯಥಾ ಪುನರ್ನೋತ್ತಿಷ್ಠತಿ ತಥಾ ಹತವಾನಿತ್ಯರ್ಥಃ ॥ ಅನ್ಯೇ ನುಡಿತಿ ತಮಪ್ಯೇ ನುಟ್ ॥ ಹೇ ತಾದೃಶೇಂದ್ರ ಹರೀ ತ್ವದೀಯಾವಶ್ವೌ ಯುಕ್ಷ್ವ । ಹಿರವಧಾರಣೇ । ಅಸ್ಮಿನ್ಯಾಗೇ ರಥೇ ಯೋಜಯೈವ । ಹೇ ಮಘವನ್ ಧನವನ್ ಉಗ್ರ ಉದ್ಗೂರ್ಣಸ್ತ್ವಂ ಸೋಮಪೀತಯೇ ಸೋಮಪಾನಾರ್ಥಂ ॥ ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ ॥ ಅರ್ವಾಚೀನೋಽಸ್ಮದಭಿಮುಖ ಋಷ್ವೇಭಿರ್ದರ್ಶನೀಯೈರ್ಮರುದ್ಭಿಃ ಸಾರ್ಧಂ ಪರಾವತಃ । ದೂರನಾಮೈತತ್ । ದೂರೇ ವರ್ತಮಾನಾದ್ದ್ಯುಲೋಕಾದಾ ಗಹಿ । ಆಗಚ್ಛ ॥ ಗಮೇ ರ್ಲೋಟಿ ಸೇರ್ಹಿಃ । ಛಾಂದಸಃ ಶಪೋ ಲುಕ್ । ಅನುದಾತ್ತೋಪದೇಶೇತ್ಯನುನಾಸಿಕಲೋಪಃ । ತಸ್ಯಾಸಿದ್ಧವದತ್ರಾಭಾದಿತ್ಯಸಿದ್ಧತ್ವಾದ್ಧೇರ್ಲುಗಭಾವಃ ॥

। ಪ್ರತಿಪದಾರ್ಥ ।

ವೃತ್ರಹಂತಮ—ವೃತ್ರನನ್ನು ಪೂರ್ಣವಾಗಿ ನಾಶಮಾಡತಕ್ಕ । ಇಂದ್ರ—ಎಲೈ ಇಂದ್ರನೇ । ಹರೀ—ನಿನ್ನ ಅಶ್ವಗಳನ್ನು । ಯುಕ್ಷ್ವ ಹಿ—ರಥಗಳೊಡನೆ ಯೋಜಿಸು । ಮಘವನ್—ಧನವಂತನಾದ ಎಲೈ ಇಂದ್ರನೇ । ಉಗ್ರಃ—ಅತ್ಯಧಿಕವಾದ ಬಲವುಳ್ಳ ನೀನು । ಸೋಮಪೀತಯೇ—ಸೋಮಪಾನಾರ್ಥವಾಗಿ । ಅರ್ವಾಚೀನಃ—ನಮಗಭಿಮುಖವಾಗಿ । ಋಷ್ವೇಭಿಃ—ಆಕರ್ಷಕವಾದ ರೂಪವುಳ್ಳ ಮರುತ್ತುಗಳೊಂದಿಗೆ । ಪರಾವತಃ—ಅತ್ಯಂತ ದೂರದೇಶದ ದ್ಯುಲೋಕದಿಂದಲೂ । ಆ ಗಹಿ—ದಯಮಾಡು.

॥ ಭಾವಾರ್ಥ ॥

ವೃತ್ರನನ್ನು ಪೂರ್ಣವಾಗಿ ನಾಶಮಾಡತಕ್ಕ ಎಲೈ ಇಂದ್ರನೇ, ನಿನ್ನ ಅಶ್ವಗಳನ್ನು ರಥಗಳೊಡನೆ ಯೋಜಿಸು. ಧನವಂತನಾದ ಎಲೈ ಇಂದ್ರನೇ, ಅತ್ಯಧಿಕವಾದ ಬಲವುಳ್ಳ ನೀನು ಸೋಮಪಾನಾರ್ಥವಾಗಿ ನಮಗಭಿಮುಖವಾಗಿ ಆಕರ್ಷಕವಾದ ರೂಪವುಳ್ಳ ಮರುತ್ತುಗಳೊಂದಿಗೆ ಅತ್ಯಂತ ದೂರದೇಶವಾದ ದ್ಯುಲೋಕದಿಂದಲೂ ದಯಮಾಡು.

## English Translation

Utter destroyer of Vritra, horness your horses; come down to us, fierce Maghavan, with your attendants from afar to drink the Soma.

॥ ಸಂಹಿತಾಪಾಠಃ ॥

ಇಮೇ ಹಿ ತೇ ಕಾರವೋ ವಾವಶುರ್ಧಿಯಾ ವಿಪ್ರಾಸೋ ಮೇಧಸಾತಯೇ ।
ಸ ತ್ವಂ ನೋ ಮಘವನ್ನಿಂದ್ರ ಗಿರ್ವಣೋ ವೇನೋ ನ ಶೃಣುಧೀ ಹವಂ ॥

॥ ಪದಪಾಠಃ ॥

ಇಮೇ । ಹಿ । ತೇ । ಕಾರವಃ । ವಾವಶುಃ । ಧಿಯಾ । ವಿಪ್ರಾಸಃ । ಮೇಧಽಸಾತಯೇ ।

ಸಃ । ತ್ವಂ । ನಃ । ಮಘಽವನ್ । ಇಂದ್ರ । ಗಿರ್ವಣಃ । ವೇನಃ । ನ । ಶೃಣುಧಿ । ಹವಂ ॥ ೧೮ ॥

॥ ಸಾಯಣಭಾಷ್ಯಂ ॥

ಕಾರವಃ ಕರ್ಮಣಾಂ ಕರ್ತಾರೋ ವಿಪ್ರಾಸೋ ಮೇಧಾವಿನ ಇಮೇ ಹೀಮೇ ಖಲು ಯಜಮಾನಾ ಧಿಯಾ ಸ್ತುತ್ಯಾ ಹೇ ಇಂದ್ರ ತೇ ತ್ವಾಂ ವಾವಶುಃ । ಪುನರಸ್ತುವನ್ ॥ ವಾಶೃ ಶಬ್ದ ಇತ್ಯಸ್ಮಾದ್ಯಙ್ಲುಗಂತಾದ್ರೂಪಮೇತತ್ ॥ ಯದ್ವಾ । ವಾವಶುಃ ಪುನಃಪುನರಕಾಮಯಂತ ॥ ವಶ ಕಾಂತೌ । ಅಸ್ಮಾದ್ಯಙ್ಲುಗಂತಾಲ್ಲಙಿ ಸಿಜಭ್ಯಸ್ತೇತಿ ಝೇರ್ಜುಸ್ । ಬಾಹುಲಕೋಽಡಭಾವಃ । ಲಿಟಿ ವಾ ತುಜಾದಿತ್ವಾದಭ್ಯಾಸದೀರ್ಘತ್ವಂ । ಹಿ ಚೇತಿ ನಿಘಾತಪ್ರತಿಷೇಧಃ ॥ ಕಿಮರ್ಥಂ । ಮೇಧಸಾತಯೇ ಮೇಧಸ್ಯ ಯಾಗಸ್ಯ ಸಂಭಜನಾರ್ಥಂ ॥ ಸನತೇಃ ಕ್ತಿನಿ ಜನಸನಖನಾಮಿತ್ಯಾತ್ವಂ । ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ ॥ ಹೇ ಮಘವನ್ ಧನವನ್ ಗಿರ್ವಣೋ ಗೀರ್ಭಿರ್ವನನೀಯ ನೋಽಸ್ಮಾಕಂ ಹವಂ ಸ್ತೋತ್ರಂ ಸರ್ವಪೂರ್ವೋಕ್ತಗುಣಸ್ತ್ವಂ ಶೃಣುಧಿ । ಶೃಣು । ಬುಧ್ಯಸ್ವ । ವೇನೋ ನ ॥ ವೇನತಿಃ ಕಾಂತಿಕರ್ಮಾ ॥ ಯಥಾ ಕಾಂತೋ ಜಾತಾಭಿಲಾಷಃ ಪುರುಷಃ ಕಾಮಯಿತವ್ಯಮೈಕಾಗ್ರ್ಯೇಣ ಶೃಣೋತಿ ತದ್ವನ್ ॥ ಶ್ರುಶೃಣುಪೄಕೃವೃಭ್ಯ ಇತಿ ಹೇರ್ಧಿತ್ವಂ । ಅನ್ಯೇಷಾಮಪೀತಿ ಸಾಂಹಿತಿಕೋ ದೀರ್ಘಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಕಾರವಃ—ಕರ್ಮಕರ್ತರೂ (ಸ್ತುತಿಕರ್ತರೂ) । ವಿಪ್ರಾಸಃ—ಮೇಧಾವಿಗಳೂ ಆದ । ಇಮೇ ಹಿ—ಈ ಯಜಮಾನರು । ಧಿಯಾ—ತಮ್ಮ ಸ್ತುತಿಗಳಿಂದ । ತೇ ಹಿ—ನಿನ್ನನ್ನೇ । ಮೇಧಸಾತಯೇ—ಯಜ್ಞಭಾಗದ ಸ್ವೀಕಾರಕ್ಕಾಗಿ । ವಾವಶುಃ—ಪುನಃ ಪುನಃ ಕರೆಯುತ್ತಾರೆ । ಮಘವನ್—ಧನವಂತನೂ । ಗಿರ್ವಣಃ—ಸ್ತುತಿಗಳಿಂದ ಪ್ರಶಂಸಿತನೂ ಆದ ಎಲೈ ಇಂದ್ರನೇ । ಸಃ ತ್ವಂ—ಅಂತಹ ನೀನು । ನಃ—ನಮ್ಮ । ಹವಂ—ಸ್ತೋತ್ರವನ್ನು । ವೇನೋ ನ—ಯಾವುದನ್ನಾದರೂ ಅಪೇಕ್ಷಿಸಿದ ಪುರುಷನನ್ನು ಅದರಲ್ಲೇ ನೆಟ್ಟದೃಷ್ಟಿಯುಳ್ಳವನಂತೆ । ಶೃಣುಧಿ—ಕೇಳು.

। ಭಾವಾರ್ಥ ।

ಎಲೈ ಇಂದ್ರನೇ, ಸ್ತುತಿಕರ್ತರೂ ಮೇಧಾವಿಗಳೂ ಆದ ಈ ಯಜಮಾನರು ತಮ್ಮ ಸ್ತುತಿಗಳಿಂದ ನಿನ್ನನ್ನೇ ಯಜ್ಞಭಾಗದ ಸ್ವೀಕಾರಕ್ಕೆ ಪುನಃ ಪುನಃ ಕರೆಯುತ್ತಾರೆ. ಧನವಂತನೂ, ಸ್ತುತಿಗಳಿಂದ ಪ್ರಶಂಸಿತನೂ ಆದ ಎಲೈ ಇಂದ್ರನೇ, ಅಂತಹ ನೀನು ಯಾವುದಾದರೂ ಅಪೇಕ್ಷಿತವಾದ ವಸ್ತುವಿನಲ್ಲಿಯೇ ನೆಟ್ಟದೃಷ್ಟಿಯುಳ್ಳ ಪುರುಷನಂತೆ ನಮ್ಮ ಸ್ತುತಿಯಲ್ಲಿಯೇ ನೆಟ್ಟದೃಷ್ಟಿಯುಳ್ಳವನಾಗಿ ಅದನ್ನು ಕೇಳು.

## English Translation

These wise celebrators (of holy rites) repeatedly propitiate you with pious praise for the acceptance of the sacrifice: you, opulent Indra, who are entitled to praise, hear our invocation like one who listens to what he desires.

। ಸಂಹಿತಾಪಾಠಃ ।

ನಿರಿಂದ್ರ ಬೃಹತೀಭ್ಯೋ ವೃತ್ರಂ ಧನುಭ್ಯೋ ಅಸ್ಫುರಃ ।
ನಿರರ್ಬುದಸ್ಯ ಮೃಗಯಸ್ಯ ಮಾಯಿನೋ ನಿಃ ಪರ್ವತಸ್ಯ ಗಾ ಆಜಃ ॥೧೯॥

। ಪದಪಾಠಃ ।

ನಿಃ । ಇಂದ್ರ । ಬೃಹತೀಭ್ಯಃ । ವೃತ್ರಂ । ಧನುಽಭ್ಯಃ । ಅಸ್ಫುರಃ ।
ನಿಃ । ಅರ್ಬುದಸ್ಯ । ಮೃಗಯಸ್ಯ । ಮಾಯಿನಃ । ನಿಃ । ಪರ್ವತಸ್ಯ । ಗಾಃ । ಆಜಃ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವೃತ್ರಮಾವರಕಮಸುರಂ ಬೃಹತೀಭ್ಯೋ ಮಹದ್ಭ್ಯಃ । ಲಿಂಗವ್ಯತ್ಯಯಃ ॥ ಧನುಭ್ಯೋ ಧನುರ್ಭ್ಯಃ ಕೋದಂಡೇಭ್ಯಃ ॥ ಛಾಂದಸೋ ರೇಫಲೋಪಃ ॥ ಹೇತೌ ಪಂಚಮೀ ॥ ಮಹದ್ಭಿರ್ಧನುರ್ಭಿರ್ಹೇತುಭಿರ್ನಿರಸ್ಫುರಃ । ಸ್ಫುರತಿರ್ವಧಕರ್ಮಾ । ನಿರವಧೀಃ । ನಿಃಶೇಷೇಣ ಹತವಾನಸಿ । ಯದ್ವಾ । ವೃತ್ರಮಾವರಕಂ ಮೇಘಂ ಧನುಭ್ಯಃ । ಧನ್ವಂತಿ ಗಚ್ಛಂತೀತಿ ಧನವ ಆಪಃ । ಮಹತೀಭ್ಯೋಽದ್ಭ್ಯಃ ॥ ತಾದರ್ಥ್ಯೇ ಚತುರ್ಥೀ ॥ ಈದೃಶೀನಾಮಪಾಂ ಲಾಭಾರ್ಥಂ ನಿರವಧೀಃ । ಅಪಿ ಚ ಮಾಯಿನೋ ಮಾಯಾವಿನೋಽರ್ಬುದಸ್ಯ ತತ್ಸಂಜ್ಞಕಸ್ಯಾಸುರಸ್ಯ ಮೃಗಯಸ್ಯ ತತ್ಸಂಜ್ಞಕಸ್ಯ ಚ ಉಭಯತ್ರ ಕರ್ಮಣಿ ಷಷ್ಠೀ ॥ ಇಮಾವಪ್ಯಸುರೌ ನಿರಸ್ಫುರಃ । ನಿಃಶೇಷೇಣಾವಧೀಃ ॥ ಮಾಯಾಶಬ್ದಸ್ಯ ವ್ರೀಹ್ಯಾದಿಷು ಪಾಠಾತ್ ವ್ರೀಹ್ಯಾದಿಭ್ಯಶ್ಚೇತಿ ಮತ್ವರ್ಥೀಯೋ ಇನಿಃ ॥ ತಥಾ ಪರ್ವತಸ್ಯ ವಲನಾಮ್ನಾಸುರೇಣ

ಗವಾಮುದರ್ಶನಾಯ ನಿಹಿತಸ್ಯ ಗಿರೇಃ ಸಂಬಂಧಿನೀರ್ಗಾ ವಲೇನಾಪಹೃತಾ ನಿರಾಜಃ । ನಿರಗಮಯಃ ॥ ಅಜ ಗತಿ ಕ್ಷೇಪಣಯೋಃ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ವೃತ್ರಂ—ವೃತ್ರಾಸುರನನ್ನು । ಬೃಹತೀಭ್ಯಃ—ಅತ್ಯಧಿಕವಾದ ಶಕ್ತಿಯುಳ್ಳ । ಧನುಭ್ಯಃ—ಧನುಸ್ಸುಗಳಿಂದ । ನ್ಯಸ್ಪುರಃ—ಪೂರ್ಣವಾಗಿ ಕೊಂದಿದ್ದೀಯೆ । ಮಾಯಿನಃ—ವಂಚಕರಾದ । ಅರ್ಬುದಸ್ಯ—ಅರ್ಬುದನನ್ನೂ । ಮೃಗಯಸ್ಯ—ಮೃಗಯನನ್ನೂ । ನಿಃ—ನಾಶಮಾಡಿದ್ದೀಯೆ । ಪರ್ವತಸ್ಯ—ಅಸುರನಿಂದ ಅಪಹೃತವಾಗಿ ಪರ್ವತದ ಗುಹೆಯುಲ್ಲಿಟ್ಟಿದ್ದ । ಗಾಃ—ಗೋವುಗಳನ್ನು । ನಿಃ ಆಜಃ—ಹಿಂತಿರುಗಿಸಿದೆ.

। ಭಾವಾರ್ಥ ।

ಎಲೈ ಇಂದ್ರನೇ, ವೃತ್ರಾಸುರನನ್ನು ಅತ್ಯಧಿಕವಾದ ಶಕ್ತಿಯುಳ್ಳ ಧನುಸ್ಸುಗಳಿಂದ ಪೂರ್ವವಾಗಿ ಕೊಂದಿದ್ದೀಯೆ, ವಂಚಕರಾದ ಅರ್ಬುದ ಮತ್ತು ಮೃಗಯ ಎಂಬ ಅಸುರರನ್ನು ನಾಶಮಾಡಿದ್ದೀಯೆ. ಅಸುರನಿಂದ ಅಪಹೃತವಾಗಿ ಪರ್ವತದ ಗುಹೆಯಲ್ಲಿಟ್ಟಿದ್ದ ಗೋವುಗಳನ್ನು ಬಿಡಿಸಿ ಹಿಂತಿರುಗಿಸಿದೆ.

## English Translation

You have extirpated Vritra with your mighty weapons; you have been the destroyer of the deceptive Arbuda and Mrigaya; you have extricated the cattle from the mountain.

। ಸಂಹಿತಾಪಾಠಃ ।

ನಿರಗ್ನಯೋ ರುರುಚುರ್ನಿರು ಸೂರ್ಯೋ ನಿಃ ಸೋಮ ಇಂದ್ರಿಯೋ ರಸಃ ।
ನಿರಂತರಿಕ್ಷಾದಧಮೋ ಮಹಾಮಹಿಂ ಕೃಷೇ ತದಿಂದ್ರ ಪೌಂಸ್ಯಂ ॥ ೨೦ ॥

॥ ಪದಪಾಠಃ ॥

ನಿಃ । ಅಗ್ನಯಃ । ರುರುಚುಃ । ನಿಃ । ಊಂ ಇತಿ । ಸೂರ್ಯಃ । ನಿಃ । ಸೋಮಃ । ಇಂದ್ರಿಯಃ । ರಸಃ ।
ನಿಃ । ಅಂತರಿಕ್ಷಾತ್ । ಅಧಮಃ । ಮಹಾಂ । ಅಹಿಂ । ಕೃಷೇ । ತತ್ । ಇಂದ್ರ । ಪೌಂಸ್ಯಂ ॥ ೨೦ ॥

। ಸಾಯಣಭಾಷ್ಯಂ ।

ಹೇ ಇಂದ್ರ ಮಹಾಂ ಮಹಾಂತಂ ಕೃತ್ಸ್ನಸ್ಯ ಜಗತೋ ವ್ಯಾಪಕಮಹಿಮಾಹನನಶೀಲಂ ವೃತ್ರಂ ಯದಾ ತ್ವಮಂತರಿಕ್ಷಾದಾಕಾಶಾನ್ನಿರಧಮಃ ನಿರಗಮಯಃ । ಧಮತಿರ್ಗತಿಕರ್ಮಾ । ತತ್ತದಾನೀಂ ಪೌಂಸ್ಯಂ

ವೃತ್ರಹನನಹೇತುಭೂತಂ ಬಲಂ ಕೃಷೇಃ । ಕುರುಷೇ। ಪುರಸ್ಕುರುಷೇ॥ ಕರೋತೇಃಶ್ಛಾಂದಸೋ ವಿಕರಣಸ್ಯ ಲುಕ್ ॥ ಅಗ್ನಯಶ್ಚ ತ್ರಿಸ್ಥಾನಗತಾ ನಿಃ ರುರುಚುಃ । ನಿಃಶೇಷೇಣ ದಿದೀಪಿರೇ । ಸೂರ್ಯಃ ಪ್ರೇರಕ ಆದಿತ್ಯೋಽಪಿ ನಿಃಶೇಷೇಣ ದಿದೀಪೇ । ಇಂದ್ರಿಯಃ ಇಂದ್ರೇಣ ಸೇವ್ಯೋ ರಸೋ ರಸಾತ್ಮಕೋಽಮೃತಮಯಃ ಸೋಮಶ್ಚ ನಿಃಶೇಷೇಣ ದಿದೀಪೇ । ಅಗ್ನ್ಯಾದಯಃ ಸರ್ವೇ ಪೂರ್ವಂ ವೃತ್ರೇಣಾವೃತತ್ವಾನ್ನಿಷ್ಪ್ರಭಾಃ ಸಂತ ಇದಾನೀಂ ತಸ್ಮಿನ್ನಾವರಕೇ ಹತೇ ಸಮ್ಯಕ್ ಪ್ರಾಕಾಶಿಷತೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ। ಮಹಾಂ—ಮಹತ್ಸ್ವರೂಪವುಳ್ಳ । ಅಹಿಂ—ವೃತ್ರನನ್ನು । ಅಂತರಿಕ್ಷಾತ್—ಅಂತರಿಕ್ಷದಿಂದ (ಯಾವಾಗ) । ನಿ ಅಧಮಃ—ಕೆಳಕ್ಕೆ ಉರುಳಿಸಿದೆಯೋ । ತತ್—ಆಗ । ಪೌಂಸ್ಯಂ—ನಿನ್ನ ವೀರ್ಯವನ್ನು । ಕೃಷೇ—ಪ್ರಕಟಿಸಿದ್ದೀಯೆ (ಅನಂತರ) । ಅಗ್ನಯಃ—ಅಗ್ನಿಗಳು । ನಿಃ ರುರುಚುಃ—ಪ್ರಜ್ವಲಿತವಾದವು । ಸೂರ್ಯಃ ನಿಃ—ಸೂರ್ಯನು ಪ್ರಕಾಶಿಸಿದನು । ಇಂದ್ರಿಯಃ—ಇಂದ್ರನಿಂದ ಸೇವಿಸಲ್ಪಡುವುದೂ । ರಸಃ—ರಸಾತ್ಮಕವಾದುದೂ ಆದ । ಸೋಮಃ—ಸೋಮವೂ । ನಿಃ—ಪ್ರಕಾಶಿಸಿತು.

॥ ಭಾವಾರ್ಥ ॥

ಎಲೈ ಇಂದ್ರನೇ, ಮಹತ್ಸ್ವರೂಪವುಳ್ಳ ವೃತ್ರನನ್ನು ಅಂತರಿಕ್ಷದಿಂದ ಯಾವಾಗ ಕೆಳಕ್ಕುರುಳಿಸಿದೆಯೋ ಆಗ ನಿನ್ನ ವೀರ್ಯವನ್ನು ಪ್ರಕಟಿಸಿದ್ದೀಯೆ. ಅನಂತರವೇ ಅಗ್ನಿಗಳು ಪ್ರಜ್ವಲಿತವಾದವು. ಸೂರ್ಯನು ಪ್ರಕಾಶಿಸಿದನು. ಇಂದ್ರನಿಂದ ಸೇವಿಸಲ್ಪಡುವುದೂ ರಸಾತ್ಮಕವಾದುದೂ ಆದ ಸೋಮವೂ ಪ್ರಕಾಶಿಸಿತು.

English Translation

When you had expelled the mighty Ahi from the firmament, then the fires blazed, the sun shone forth, the ambrosial Soma destined for Indra flowed out, and you, Indra, did manifest your manhood.

। ಸಂಹಿತಾಪಾಠಃ ।

ಯಂ ಮೇ ದುರಿಂದ್ರೋ ಮರುತಃ ಪಾಕಸ್ಥಾಮಾ ಕೌರಯಾಣಃ ।

ವಿಶ್ವೇಷಾಂ ತ್ಮನಾ ಶೋಭಿಷ್ಠಮುಪೇವ ದಿವಿ ಧಾವಮಾನಂ ॥ ೨೧ ॥

॥ ಪದಪಾಠಃ॥

ಯಂ । ಮೇ । ದುಃ । ಇಂದ್ರಃ । ಮರುತಃ । ಪಾಕಽಸ್ಥಾಮಾ । ಕೌರಯಾಣಃ ।

ವಿಶ್ವೇಷಾಂ । ತ್ಮನಾ । ಶೋಭಿಷ್ಠಂ । ಉಪಽಇವ । ದಿವಿ । ಧಾವಮಾನಂ ॥ ೨೧ ॥

। ಸಾಯಣಭಾಷ್ಯಂ ।

ಇದಮಾದಿಕೇನ ಚತುರ್ಥರ್ಚೇನ ಕುರಯಾಣಪುತ್ರಾತ್ಪಾಕಸ್ಥಾಮನಾಮ್ನೋ ರಾಜ್ಞೋ ದಾನಂ ಲಬ್ಧ್ವಾ ಮೇಧ್ಯಾತಿಥಿಸ್ತದೀಯಂ ದಾನಂ ಸ್ತೌತಿ । ಯಂ ಯಾದೃಶಂ ಧನಸಂಘಂ ಮಹ್ಯಮಿಂದ್ರೋ ಮರುತಶ್ಚ ದದುಃ ದತ್ತವಂತಃ ತಾದೃಶಮೇವ ಧನಸಮೂಹಂ ಕೌರಯಾಣಃ । ಶತ್ರೂನ್ ಪ್ರತಿ ಯುದ್ಧಾಭಿಮುಖ್ಯೇನ ಕೃತಂ ಯಾನಂ ಹಸ್ತ್ಯಶ್ವಾದಿಕಂ ಯೇನಾಸೌ ಕುರಯಾಣಃ । ತಸ್ಯ ಪುತ್ರಃ ಕೌರಯಾಣಃ । ಪಾಕಸ್ಥಾಮಾ । ತಿಷ್ಠತ್ಯನೇನೇತಿ ಸ್ಥಾಮ ಬಲಂ । ಪರಿಪಕ್ವಬಲಃ । ಏತತ್ಸಂಜ್ಞೋ ರಾಜಾ ಮಹ್ಯಂ ಪ್ರಾದಾತ್ ॥ ದದಾತೇರ್ಲುಙಿ ಗಾತಿಸ್ಥೇತಿ ಸಿಚೋ ಲುಕ್ । ಅಡಭಾವಶ್ಛಾಂದಸಃ ॥ ಕೀದೃಶಂ ಧನಸಂಘಂ । ವಿಶ್ವೇಷಾಂ ಸರ್ವೇಷಾಂ ಧನಾನಾಂ ಮಧ್ಯೇ ತ್ಮನಾತ್ಮನಾ ಸ್ವತ ಏವ ಶೋಭಿಷ್ಠಮತಿಶಯೇನ ಶೋಭಾವಂತಂ ॥ ಮಂತ್ರೇಷ್ವಾಙ್ಯಾದೇರಿತ್ಯಾತ್ಮನ ಆಕಾರಲೋಪಃ । ಶೋಭಾವಚ್ಛಬ್ದಾದಾತಿಶಾಯನಿಕ ಇಷ್ಠನ್ । ವಿನ್ಮತೋರ್ಲುಕ್ । ಯಸ್ಯೇತಿ ಲೋಪಃ ॥ ಅತಿಶಯೇನ ಶೋಭಾವತ್ತ್ವೇ ದೃಷ್ಟಾಂತಃ । ದಿವ್ಯಾಕಾಶ ಉಪೇವ ಧಾವಮಾನಂ ಪ್ರಭಾಭಿರುಪೇತಂ ಶೀಘ್ರಗಾಮಿನಂ ಸೂರ್ಯಮಿವ । ಶೋಭಾವತ್ತಮಮಿತ್ಯರ್ಥಃ ॥

। ಪ್ರತಿಪದಾರ್ಥ ।

ದಿವಿ—ಆಕಾಶದಲ್ಲಿ । ಉಪೇವ ಧಾವಮಾನಂ—ವೇಗವಾಗಿ ಸಂಚರಿಸುವ ಪ್ರಭಾಯುತನಾದ ಸೂರ್ಯನಂತೆ। ತ್ಮನಾ—ಸ್ವಪ್ರಭಾವದಿಂದಲೇ । ವಿಶ್ವೇಷಾಂ—ಸಮಸ್ತ ಧನಗಳ ನಡುವೆ । ಶೋಭಿಷ್ಠಂ—ಅತಿಶಯವಾಗಿ ಪ್ರಕಾಶಿಸುವ । ಯಂ—ಯಾವ ಧನಸಂಘವನ್ನು । ಮೇ—ನನಗೆ । ಇಂದ್ರ—ಇಂದ್ರನೂ । ಮರುತಃ—ಮರುತ್ತುಗಳೂ । ದುಃ—ಕೊಟ್ಟರೋ (ಅದೇ ಪ್ರಭಾವವುಳ್ಳ ಧನಸಮೂಹವನ್ನು) । ಕೌರಯಾಣಃ—ಕುರುಯಾಣ ಪುತ್ರನಾದ । ಪಾಕಸ್ಥಾಮಾ—ಪಾಕಸ್ಥಾಮನೆಂಬ ರಾಜನೂ (ನನಗೆ ಕೊಟ್ಟನು).

। ಭಾವಾರ್ಥ ।

ಆಕಾಶದಲ್ಲಿ ವೇಗವಾಗಿ ಸಂಚರಿಸುವ ಪ್ರಭಾಯುತನಾದ ಸೂರ್ಯನಂತೆ ಸ್ವಪ್ರಭಾವದಿಂದಲೇ ಸಮಸ್ತ ಧನಗಳ ನಡುವೆ ಅತಿಶಯವಾಗಿ ಪ್ರಕಾಶಿಸುವ ಯಾವ ಧನಸಂಘವನ್ನು ನನಗೆ ಇಂದ್ರನೂ, ಮರುತ್ತುಗಳೂ ಕೊಟ್ಟರೋ ಅದೇ ಪ್ರಭಾವವುಳ್ಳ ಧನಸಮೂಹವನ್ನು ಕುರುಯಾಣಪುತ್ರನಾದ ಪಾಕಸ್ಥಾಮನೆಂಬ ರಾಜನೂ ನನಗೆ ಕೊಟ್ಟನು.

## English Translation

Such wealth as Indra and the Maruts have bestowed upon me, such has Pakasthaman, the son of Kurayana, bestowed, of itself the most magnificent of all, like the quick-moving (sun) in the sky.

॥ ವಿಶೇಷವಿಷಯಗಳು ॥

ಕೌರಯಾಣಃ—ಈ ಶಬ್ದಕ್ಕೆ ಯಾಸ್ಕರು—ಕೌರಯಾಣಃ ಕೃತಯಾನಃ । ಪಾಕಸ್ಥಾಮಾ ಕೌರಯಾಣಃ ಇತ್ಯಪಿ ನಿಗಮೋ ಭವತಿ । (ನಿ. ೫-೧೫) ಎಂದು ನಿರ್ವಚನವನ್ನು ಹೇಳಿದಾರೆ. ಶತ್ರುಗಳನ್ನು ಯುದ್ಧದಲ್ಲಿ ಎದುರಿಸು

ವುದಕ್ಕಾಗಿ ಹಸ್ತ್ಯಶ್ವಾದಿ ಸೇನಾಬಲವನ್ನು ಸಿದ್ಧಪಡಿಸಿಕೊಂಡು ಪ್ರಯಾಣೋನ್ಮುಖನಾಗಿರುವವನಿಗೆ ಕುರಯಾಣನೆಂದು ಹೆಸರು. ಇಲ್ಲಿ ಕುರಯಾಣನೆಂಬ ಒಬ್ಬ ರಾಜನು. ಅವನ ಪುತ್ರನಿಗೆ ಕೌರಯಾಣನೆಂದು ಹೆಸರು. ಪ್ರಕೃತ ಋಕ್ಕಿನಲ್ಲಿ ಪಾಕಸ್ಥಾಮಾ ಕೌರಯಾಣಃ ಎಂದು ಹೇಳಿರುವ ಶಬ್ದಗಳಿಗೆ ಕುರುಯಾಣನ ಪುತ್ರನಾದ ಪಾಕಸ್ಥಾಮಾ ಎಂಬ ರಾಜನು ಎಂದರ್ಥವು.

॥ ಸಂಹಿತಾಪಾಠಃ ॥

ರೋಹಿತಂ ಮೇ ಪಾಕಸ್ಥಾಮಾ ಸುಧುರಂ ಕಕ್ಷ್ಯಪ್ರಾಂ ।

ಅದಾದ್ರಾಯೋ ವಿಬೋಧನಂ ॥ ೨೨ ॥

॥ ಪದಪಾಠಃ ॥

ರೋಹಿತಂ । ಮೇ । ಪಾಕಽಸ್ಥಾಮಾ । ಸುಽಧುರಂ । ಕಕ್ಷ್ಯಽಪ್ರಾಂ ।

ಅದಾತ್ । ರಾಯಃ । ವಿಽಬೋಧನಂ ॥ ೨೨ ॥

॥ ಸಾಯಣಭಾಷ್ಯಂ ॥

ಪಾಕಸ್ಥಾಮಾ ರಾಜಾ ರೋಹಿತಂ ಲೋಹಿತವರ್ಣಂ ವೃಷಭಮಶ್ವಂ ವಾ ಮೇ ಮಹ್ಯಮದಾತ್ । ದತ್ತವಾನ್ । ಕೀದೃಶಂ । ಸುಧುರಂ ಶೋಭನಧುರಂ ಶೋಭನವಹನಪ್ರದೇಶಂ ॥ ಋಕ್ಪೂರಬ್ಧೂಃ । ಪಾ. ೫-೪-೭೪ । ಇತ್ಯಕಾರಃ ಸಮಾಸಾಂತಃ । ಕ್ರತ್ವಾದಯಶ್ಚೇತಿ ಬಹುವ್ರೀಹಾವುತ್ತರಪದಾದ್ಯುದಾತ್ತತ್ವಂ॥ ಕಕ್ಷ್ಯಪ್ರಾಂ । ಕಕ್ಷ್ಯಾ ಕಕ್ಷಯೋರ್ಬಾಹುಮೂಲಯೋರ್ಬಧ್ಯಮಾನಾ ರಜ್ಜುಃ । ತಸ್ಯಾಃ ಪ್ರಾತಾರಂ ಪೂರಯಿತಾರಂ । ಪೀವರಮಿತ್ಯರ್ಥಃ ॥ ಪ್ರಾ ಪೂರಣೇ ॥ ರಾಯೋ ಧನಸ್ಯ ವಿಬೋಧನಂ ವಿಶೇಷೇಣ ಬೋಧಕಂ। ಬಹುಧನಪ್ರಾಪ್ತಿಹೇತುಮಿತ್ಯರ್ಥಃ ॥ ಊಡಿದಮಿತ್ಯಾದಿನಾ ರಾಯೋ ವಿಭಕ್ತಿರುದಾತ್ತಾ ॥

॥ ಪ್ರತಿಪದಾರ್ಥ ॥

ಪಾಕಸ್ಥಾಮಾ—ಪಾಕಸ್ಥಾಮನೆಂಬ ರಾಜನು । ಸುಧುರಂ—ಭಾರವನ್ನು ವಹಿಸುವ ಅವಯವವುಳ್ಳದ್ದೂ। ಕಕ್ಷ್ಯಪ್ರಾಂ—ಪುಷ್ಕಲವಾಗಿ ಬೆಳೆದ ದೇಹವುಳ್ಳದ್ದೂ । ರಾಯಃ—ಧನಕ್ಕೆ । ವಿಬೋಧನಂ—ಪ್ರಾಪ್ತಿಹೇತುವಾದುದೂ । ರೋಹಿತಂ—ಆಕರ್ಷಕವಾದ ಹೊಂಬಣ್ಣವುಳ್ಳದ್ದೂ ಆದ ಅಶ್ವವನ್ನು । ಮೇ—ನನಗೆ । ಅದಾತ್—ಕೊಟ್ಟಿದ್ದಾನೆ.

॥ ಭಾವಾರ್ಥ ॥

ಭಾರವನ್ನು ವಹಿಸುವ ಅವಯವವುಳ್ಳದ್ದೂ, ಪುಷ್ಕಲವಾಗಿ ಬೆಳೆದ ದೇಹವುಳ್ಳದ್ದೂ, ಧನದ ಪ್ರಾಪ್ತಿಗೆ ಸಾಧಕವಾದುದೂ, ಆಕರ್ಷಕವಾದ ಹೊಂಬಣ್ಣವುಳ್ಳದ್ದೂ ಆದ ಅಶ್ವವನ್ನು ಪಾಕಸ್ಥಾಮನೆಂಬ ರಾಜನು ನನಗೆ ಕೊಟ್ಟಿದ್ದಾನೆ.

## English Translation

Pakasthaman has given me a tawny robust beast of burden, the means of acquiring riches.

॥ ಸಂಹಿತಾಪಾಠಃ ॥

ಯಸ್ಮಾ ಅನ್ಯೇ ದಶ ಪ್ರತಿ ಧುರಂ ವಹಂತಿ ವಹ್ನಯಃ ।

ಅಸ್ತಂ ವಯೋ ನ ತುಗ್ರ್ಯಂ ॥ ೨೩ ॥

॥ ಪದಪಾಠಃ ॥

ಯಸ್ಮೈ । ಅನ್ಯೇ । ದಶ । ಪ್ರತಿ । ಧುರಂ । ವಹಂತಿ । ವಹ್ನಯಃ ।

ಅಸ್ತಂ । ವಯಃ । ನ । ತುಗ್ರ್ಯಂ ॥ ೨೩ ॥

॥ ಸಾಯಣಭಾಷ್ಯಂ ॥

ಪೂರ್ವೋಕ್ತ ಏವಾಶ್ವೋ ವಿಶೇಷ್ಯತೇ । ಯಸ್ಮೈ । ಷಷ್ಠ್ಯರ್ಥೇ ಚತುರ್ಥೀ । ಯಸ್ಯಾಶ್ವಸ್ಯ ವೃಷಭಸ್ಯ ವಾ ಧುರಂ ವೋಢವ್ಯಂ ಯುಗಧುರಮನ್ಯೇ ಪ್ರಕೃತಾದಸ್ಮಾದ್ವಿಲಕ್ಷಣಾ ದಶಸಂಖ್ಯಾಕಾ ವಹ್ನಯೋ ವೋಢಾರೋಽಶ್ವಾ ಬಲೀವರ್ದಾ ವಾ ಪ್ರತಿನಿಧಯಃ ಸಂತೋ ಮಾಂ ವೋಢುಂ ವಹಂತಿ ಬಿಭ್ರತಿ । ಬಹೂನಾಮೇಕತ್ರ ವಹನೇ ದೃಷ್ಟಾಂತಃ । ಅಸ್ತಂ । ಅಸ್ಯತೇ ಕ್ಷಿಪ್ಯತೇ ತಸ್ಮಿನ್ಪದಾರ್ಥಜಾತ-ಮಿತ್ಯಸ್ತಂ ಗೃಹಂ । ಪ್ರತಿ ವಯೋ ನ ಗಂತಾರೋಽಶ್ವಾ ಯಥಾ ತುಗ್ರ್ಯಂ ತುಗ್ರಪುತ್ರಂ ಭುಜ್ಯುಂ ಸಮುದ್ರತೀರಾದವಹನ್ ತದ್ವತ್ । ತಾದೃಶಮಶ್ವಂ ಮಹ್ಯಂ ಪ್ರಾದಾದಿತಿ ಪೂರ್ವಸ್ಯಾಮೃಚ್ಯನ್ವಯಃ ॥ ಭುಜ್ಯೋರ್ವಹನಂ ಚ ನಾಸತ್ಯಾ ಭುಜ್ಯುಮೂಹಥುಃ । ಋಗ್ವೇ. ೧-೧೧೬-೪ । ಇತ್ಯಾದಾವವಗಂತವ್ಯಂ ಯದ್ವಾ । ಯಸ್ಮಾ ಇತಿ ಕರ್ಮಣಿ ಚತುರ್ಥೀ । ಯಂ ರಥಮನ್ಯೇ ದಶಸಂಖ್ಯಾಕಾ ವಹ್ನಯೋ ವೋಢಾ-ರೋಽಶ್ವಾ ಧುರಂ ವಹನಪ್ರದೇಶಂ ಪ್ರತಿ ಗತಾಃ ಸಂತೋ ವಹಂತಿ ತಾದೃಶಂ ರಥಮಪಿ ಮಹ್ಯಂ ದತ್ತ-ವಾನಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಸ್ತಂ ಪ್ರತಿ—ಗೃಹಕ್ಕೆ ಅಭಿಮುಖನಾಗಿರುವ । ತುಗ್ರ್ಯಂ—ತುಗ್ರಪುತ್ರನಾದ ಭುಜ್ಯುವನ್ನು ವಯೋ ನ—ಗೃಹಕ್ಕೆ ಒಯ್ಯುವ ಅಶ್ವಗಳಂತೆ । ಯಸ್ಮೈ—ಯಾವ ಅಶ್ವದ । ಧುರಂ—ಭಾರವನ್ನು । ಅನ್ಯೇ ದಶ ವಹ್ನಯಃ—ಬೇರೆ ಹತ್ತು ಅಶ್ವಗಳು । ವಹಂತಿ—ವಹಿಸುವುವೋ ಅಂತಹ ಅಶ್ವವನ್ನು ದಾನಮಾಡು.

॥ ಭಾವಾರ್ಥ ॥

ಗೃಹಕ್ಕೆ ಅಭಿಮುಖನಾಗಿರುವ ತುಗ್ರಪುತ್ರನಾದ ಭುಜ್ಯುವನ್ನು ಗೃಹಕ್ಕೆ ಒಯ್ಯುವ ಅಶ್ವಗಳಂತೆ ಯಾವ ಅಶ್ವದ ಭಾರವನ್ನು ಬೇರೆ ಹತ್ತು ಅಶ್ವಗಳು ವಹಿಸುವುವೋ ಅಂತಹ ಅಶ್ವವನ್ನು ದಾನಮಾಡು.

**English Translation**

Whose burden ten other bearers (of loads) (would be required to) convey, such as were the steeds that bore Bhujyu home.

॥ ಸಂಹಿತಾಪಾಠಃ ॥

ಅತ್ಯಾ ಪಿತುಸ್ತನೂರ್ವಾಸ ಓಜೋದಾ ಅಭ್ಯಂಜನಂ ।
ತುರೀಯಮಿದ್ರೋಹಿತಸ್ಯ ಪಾಕಸ್ಥಾಮಾನಂ ಭೋಜಂ ದಾತಾರಮಬ್ರವಂ॥

॥ ಪದಪಾಠಃ ॥

ಅತ್ಯಾ । ಪಿತುಃ । ತನೂಃ । ವಾಸಃ । ಓಜಃऽದಾಃ । ಅಭಿऽಅಂಜನಂ ।
ತುರೀಯಂ । ಇತ್ । ರೋಹಿತಸ್ಯ । ಪಾಕऽಸ್ಥಾಮಾನಂ । ಭೋಜಂ । ದಾತಾರಂ । ಅಬ್ರವಂ ॥ ೨೪ ॥

॥ ಸಾಯಣಭಾಷ್ಯಂ ॥

ಅಯಂ ಪಾಕಸ್ಥಾಮಾತ್ಯಾ ಸ್ತಯಂ ಪಿತುರ್ಜನಕಸ್ಯ ತನೂಸ್ತನಯಃ । ಪಿತಾ ಯಥಾ ಸನ್ಮಾರ್ಗವರ್ತಿತಯಾ ಪ್ರಶಸ್ತ ಏವಮಯಮಪೀತ್ಯರ್ಥಃ । ತಥಾ ವಾಸೋ ವಾಸಯಿತಾ ನಿವಾಸಯಿತಾ ॥ ವಾಸಯತೇರೌಣಾದಿಕೋऽಸುನ್ ॥ ಅಭ್ಯಂಜನಮಭಿವ್ಯಕ್ತಂ ಯಥಾ ಭವತಿ ತಥೌಜೋದಾ ಓಜಸೋ ಬಲಸ್ಯ ದಾತಾ ಧಾರಯಿತಾ ವಾ । ಯದ್ವಾ। ಅತ್ಯಾ ಸತತಗಾಮೀ । ಪಿತುರಿತ್ಯನ್ನನಾಮ। ವ್ಯಾಪ್ತಮನ್ನಂ ಯೇನ ದತ್ತಂ । ತನೂರ್ವಿಸ್ತೃತಂ ವಾಸೋ ವಸ್ತ್ರಮಭ್ಯಂಜನಮಭ್ಯಂಜನಸಾಧನಂ ಘೃತತೈಲಾದಿಕಂ ಚ ಯೇನ ದತ್ತಂ । ಯಶ್ಚೌಜೋದಾ ಬಲಸ್ಯ ದಾತಾರಂ ಪಾಕಸ್ಥಾಮಾನಂ ತುರೀಯಂ ಸ್ವಕೀಯಪ್ರಪಿತಾಮಹಾಪೇಕ್ಷಯಾ ಚತುರ್ಥಂ ಯದ್ವಾ ತುರೀಯಂ ಶತ್ರೂಣಾಂ ತೂರ್ವಕಂ ಹಿಂಸಿತಾರಂ ಭೋಜಂ ಶತ್ರೂಣಾಂ ಭೋಜಯಿತಾರಂ ರೋಹಿತಸ್ಯ ಲೋಹಿತವರ್ಣಸ್ಯ ಪೂರ್ವೋಕ್ತಸ್ಯಾಶ್ವಸ್ಯ ದಾತಾರಂ ಏವಂಗುಣಕಂ ಪಾಕಸ್ಥಾಮಾನಮಬ್ರವಂ । ಉಕ್ತೇನ ಪ್ರಕಾರೇಣಾಸ್ತೌಷಂ । ಇದಿತಿ ಪೂರಕಃ ॥

। ಪ್ರತಿಪದಾರ್ಥ ।

ಪಾಕಸ್ಥಾಮಾ—ಈ ಪಾಕಸ್ಥಾಮನು । ಅತ್ಯಾ—ತನ್ನ । ಪಿತುಃ—ತಂದೆಗೆ । ತನೂಃ—ಪುತ್ರನು (ಎಂದರೆ ತಂದೆಯನ್ನೇ ಅನುಸರಿಸಿ ಅವನಂತೆಯೇ ಶ್ರೇಷ್ಠನು) । ವಾಸಃ—ವಸತಿದಾಯಕನು । ಅಭ್ಯಂಜನಂ—ಲೇಪಕ್ಕೆ ಯೋಗ್ಯವಾದ ಅಂಜನದಂತೆ । ಓಜೋದಾಃ—ಶಕ್ತಿದಾತನಾಗಿದ್ದಾನೆ । ತುರೀಯಂ—ಶತ್ರುಗಳನ್ನು ಹಿಂಸಿಸುವವನೂ । ಭೋಜಂ—ಶತ್ರುಗಳನ್ನು ಓಡಿಸುವವನೂ । ರೋಹಿತಸ್ಯ—ರೋಹಿತವರ್ಣವುಳ್ಳ ಅಶ್ವದ । ದಾತಾರಂ ಇತ್—ದಾನಿಯೂ ಆದ । ಪಾಕಸ್ಥಾಮಾನಂ—ಇಂತಹ ಪಾಕಸ್ಥಾಮನನ್ನು । ಅಬ್ರವಮ್—ಪ್ರಶಂಸಿಸಿದ್ದೇನೆ.

|| ಭಾವಾರ್ಥ ||

ಈ ಪಾಕಸ್ಥಾಮನು ಸನ್ಮಾರ್ಗದಲ್ಲಿರುವುದರಿಂದ ತನ್ನ ತಂದೆಯಂತೆಯೇ ಶ್ರೇಷ್ಠನು. ವಸತಿದಾಯಕನು. ಲೇಪಕ್ಕೆ ಯೋಗ್ಯವಾದ ಅಂಜನದಂತೆ ಶಕ್ತಿದಾತನಾಗಿದ್ದಾನೆ. ಶತ್ರುಹಿಂಸಕನೂ, ಶತ್ರುಗಳನ್ನು ಓಡಿಸುವವನೂ ರೋಹಿತವರ್ಣವುಳ್ಳ ಅಶ್ವದ ದಾನಿಯೂ ಆದ ಇಂತಹ ಪಾಕಸ್ಥಾಮನನ್ನು ಪ್ರಶಂಸಿಸಿದ್ದೇನೆ.

## English Translation

His father's own son, the giver of dwellings, the sustainer of strength like (invigorating) unguents, I celebrate Pakasthaman, the destroyer, (of foes), the despoiler (of enemies), the donor of the tawny (horse).



## ನಾಲ್ಕನೆಯ ಸೂಕ್ತವು.

|| ಸಾಯಣಭಾಷ್ಯಂ ||

ಯದಿಂದ್ರೇತ್ಯೇಕತ್ರಿಂಶದೃಚಂ ಚತುರ್ಥಂ ಸೂಕ್ತಂ ಕಾಣ್ವಗೋತ್ರಸ್ಯ ದೇವಾತಿಥೇರಾರ್ಷಂ । ವೃಕ್ಷಾಶ್ಚಿನ್ಮೇ ಇತ್ಯೇಷಾ ಪುರಉಷ್ಣಿಕ್ ಶಿಷ್ಟಾಸ್ತ್ರಯಸ್ತ್ರಿಂಶತೋ ಯುಜೋ ಬೃಹತ್ಯೋ ಯುಜಃ ಸತೋಬೃಹತ್ಯಃ । ಸ್ಥೂರಂ ರಾಧ ಇತ್ಯಾದಿಭಿಸ್ತಿಸೃಭಿಃ ಕುರುಂಗದಾನಸ್ಯ ಸ್ತೂಯಮಾನತ್ವಾತ್ತಾಸ್ತದ್ದೇವತಾಕಾಃ । ತತ್ಪೂರ್ವಾಃ ಪಂಚದಶ್ಯಾದ್ಯಾಶ್ಚತಸ್ರಃ ಪೂಷದೇವತಾಕಾ ಇಂದ್ರದೇವತಾಕಾ ವಾ ಶಿಷ್ಟಾ ಐಂದ್ರ್ಯಃ । ತಥಾ ಚಾನುಕ್ರಾಂತಂ । ಯದಿಂದ್ರ ಸೈಕಾ ದೇವಾತಿಥಿಸ್ತ್ವೃಚೋಽಂತ್ಯಾ ಪುರಉಷ್ಣಿಗಂತಃ ಕುರುಂಗಸ್ಯ ದಾನಸ್ತುತಿಸ್ತತ್ಪೂರ್ವಾಶ್ಚತಸ್ರಃ ಪೌಷ್ಣ್ಯೋ ವೇತಿ ॥ ಮಹಾವ್ರತೇ ನಿಷ್ಕೇವಲ್ಯೇ ಬಾರ್ಹತತೃಚಾಶೀತಾವಾದ್ಯಾಶ್ಚತುರ್ದಶರ್ಚಃ ಶಂಸನೀಯಾಃ । ತಥೈವ ಪಂಚಮಾರಣ್ಯಕೇ । ಯದಿಂದ್ರ ಪ್ರಾಗಪಾಗುದಗಿತಿ ಚತುರ್ದಶ । ಐ. ಆ. ೫-೨-೪ । ಇತಿ ॥ ಚಾತುರ್ವಿಂಶಿಕೇಽಹನಿ ಮಾಧ್ಯಂದಿನೇ ಸವನೇಽಚ್ಛಾವಾಕಶಸ್ತ್ರ ಆದ್ಯಃ ಪ್ರಗಾಥೋ ವೈಕಲ್ಪಿಕಃ ಸ್ತೋತ್ರಿಯಃ । ಸೂತ್ರ್ಯತೇ ಹಿ । ಯದಿಂದ್ರ ಪ್ರಾಗಪಾಗುದಗ್ಯಥಾ ಗೌರೋ ಅಪಾ ಕೃತಂ । ಆ. ೭-೪ । ಇತಿ ॥

ಅನುವಾದವು— ಯದಿಂದ್ರ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಇಪ್ಪತ್ತೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಾಣ್ವಗೋತ್ರೋದ್ಭವನಾದ ದೇವಾತಿಥಿ ಎಂಬುವನು ಋಷಿಯು. ಈ ಸೂಕ್ತದಲ್ಲಿ ವೃಕ್ಷಾಶ್ಚಿನ್ಮೇ ಎಂಬ ಕೊನೆಯ ಋಕ್ಕು ಪುರಉಷ್ಣಿಕ್ ಛಂದಸ್ಕವು. ಉಳಿದ ಇಪ್ಪತ್ತು ಋಕ್ಕುಗಳಲ್ಲಿ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು. ಸ್ಥೂರಂ ರಾಧ ಎಂದು ಪ್ರಾರಂಭವಾಗುವ ಈ ಸೂಕ್ತದ ಕೊನೆಯ ಮೂರು ಋಕ್ಕುಗಳಲ್ಲಿ ಕುರಂಗನೆಂಬ ರಾಜನ ದಾನಪ್ರಶಂಸೆಯ ವರ್ಣನೆ ಇರುವುದರಿಂದ ಆ ಮೂರು ಋಕ್ಕುಗಳಿಗೆ ಆ ರಾಜನ ದಾನಸ್ತುತಿಯೇ ದೇವತೆಯು. ಅದರ ಹಿಂದಿನ ನಾಲ್ಕು ಋಕ್ಕುಗಳಿಗೆ ಎಂದರೆ ೧೫-೧೮ ಋಕ್ಕುಗಳಿಗೆ ಇಂದ್ರನು ಅಥವಾ ಪೂಷನು ದೇವತೆಯು. ಉಳಿದ ಋಕ್ಕುಗಳಿಗೆಲ್ಲಾ ಇಂದ್ರನೇ ದೇವತೆಯು.

ಅನುಕ್ರಮಣಿಕೆಯಲ್ಲಿ—ಯದಿಂದ್ರ ಸೈಕಾ ದೇವಾತಿಥಿಸ್ತ್ರ್ಯೃಚೋಽನ್ತ್ಯಾ ಪುರಉಷ್ಣಿಗಂತಃ ಕುರುಂಗಸ್ಯ ದಾನಸ್ತುತಿಸ್ತ್ರತೃಪ್ವಾರ್ಕ್ಷ್ವಶಸ್ರಃ ಪೌಷ್ಣೀ ವಾ ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯ ಶಸ್ತ್ರಮಂತ್ರಗಳನ್ನು ಪಠಿಸುವಾಗ ಬೃಹತೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ಮೊದಲಿನ ಹದಿನಾಲ್ಕು ಋಕ್ಕುಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—ಯದಿಂದ್ರ ಪ್ರಾಗಪಗುದಗಿತಿ ಚತುರ್ದಶ ಎಂಬ ವಾಕ್ಯದಿಂದ (ಐ. ಆ. ೫-೨-೪) ನಿರ್ದಿಷ್ಟವಾಗಿರುವುದು. ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲಿನ ಪ್ರಾಗಾಥಋಕ್ಕುಗಳನ್ನು ವೈಕಲ್ಪಿಕ ಸ್ತೋತ್ರೀಯಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—ಯದಿಂದ್ರ ಪ್ರಾಗಪಾಗುದಗ್ಯಥಾ ಗೌರೋ ಅಪಾ ಕೃತಂ ಎಂಬ ಸೂತ್ರದಿಂದ ( ಆ. ೭-೪ ) ವಿವೃತವಾಗಿರುವುದು.

## ಸೂಕ್ತ—೪

ಮಂಡಲ—೮ । ಅನುವಾಕ—೧ । ಸೂಕ್ತ—೪ ।
ಅಷ್ಟಕ—೫ । ಅಧ್ಯಾಯ—೭ । ವರ್ಗ—೩೦, ೩೧, ೩೨, ೩೩ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೧ ।
ಋಷಿಃ—ದೇವಾತಿಥಿಃ ಕಾಣ್ವಃ ।
ದೇವತಾ—೧-೧೪. ಇಂದ್ರಃ । ೧೫-೧೮. ಇಂದ್ರಃ ಪೂಷಾ ವಾ । ೧೯-೨೧. ಕುರುಂಗಸ್ಯ ದಾನಸ್ತುತಿಃ ।
ಛಂದಃ—೧-೨೦. ಪ್ರಾಗಾಥಂ । ೨೧. ಪುರಉಷ್ಣಿಕ್ ॥

। ಸಂಹಿತಾಪಾಠಃ ।

ಯದಿಂದ್ರ ಪ್ರಾಗಪಾಗುದಙ್ ನ್ಯಗ್ವಾ ಹೂಯಸೇ ನೃಭಿಃ ।
ಸಿಮಾ ಪುರೂ ನೃಷೂತೋ ಅಸ್ಯಾನವೇಽಸಿ ಪ್ರಶರ್ಧ ತುರ್ವಶೇ ॥ ೧ ॥

। ಪದಪಾಠಃ ।

ಯತ್ । ಇಂದ್ರ । ಪ್ರಾಕ್ । ಅಪಾಕ್ । ಉದಕ್ । ನ್ಯಕ್ । ವಾ । ಹೂಯಸೇ । ನೃಽಭಿಃ ।
ಸಿಮ । ಪುರು । ನೃಽಸೂತಃ । ಅಸಿ । ಆನವೇ । ಅಸಿ । ಪ್ರಽಶರ್ಧ । ತುರ್ವಶೇ ॥ ೧ ॥

। ಸಾಯಣಭಾಷ್ಯಂ ।

ಹೇ ಇಂದ್ರ ಯದ್ಯದಿ ಪ್ರಾಕ್ಪ್ರಾಚ್ಯಾಂ ದಿಶಿ ವರ್ತಮಾನೈಃ ॥ ಸಪ್ತಮ್ಯಂತಾದ್ದಿಕ್ಛಬ್ದಾದ್ವಿಹಿತಸ್ಯಾಸ್ತಾತೇರಂಚೇರ್ಲುಕ್ । ಪಾ. ೫-೩-೩೦ । ಇತಿ ಲುಕ್ ॥ ಅಪಾಕ್ಪ್ರತೀಚ್ಯಾಂ ದಿಶಿ ವರ್ತಮಾನೈಃ । ಯದಿ ವೋದಗುದೀಚ್ಯಾಂ ದಿಶಿ ವರ್ತಮಾನೈಃ । ಯದ್ವಾ ನ್ಯಙ್ನೀಚ್ಯಾಂ ದಿಶ್ಯಧಸ್ತಾದ್ವರ್ತಮಾನೈಃ ॥

ನ್ಯಧೀ ಇತಿ ನೇಃ ಪ್ರಕೃತಿಸ್ವರತ್ವಂ । ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ ॥ ಏವಂಭೂತೈರ್ನೃಭಿಃ ಸ್ತೋತೃಭಿಸ್ತ್ವಂ ಹೂಯಸೇ ಸ್ವಸ್ವಕಾರ್ಯಾಯಾಹೂಯಸೇ ಹೇ ಸಿಮ ಶ್ರೇಷ್ಠೇಂದ್ರ। ಸಿಮ ಇತಿ ವೈ ಶ್ರೇಷ್ಠಮಾಚಕ್ಷತ ಇತಿ ವಾಜಸನೇಯಕಂ । ಯದ್ಯಪ್ಯೇವಂ ಬಹುಭಿರಾಹೂಯಸೇ ತಥಾಪ್ಯಾನವೇ । ಅನುರ್ನಾಮ ರಾಜಾ । ತಸ್ಯ ಪುತ್ರೇ ರಾಜರ್ಷೌ ಪುರು ಬಹುಲಂ ನೃಷೂತೋ ನೃಭಿಸ್ತ್ವದೀಯೈಃ ಸ್ತೋತೃಭಿಃ ಪ್ರೇರಿತೋಽಸಿ ಭವಸಿ । ರಾಜ್ಞೋ ಹಿತಕರಣೇ ತ್ವಾಂ ಸ್ತೋತಾರಃ ಪ್ರೇರಯಂತೀತ್ಯರ್ಥಃ ॥ ಷೂ ಪ್ರೇರಣೇ । ಅಸ್ಮಾತ್ಕರ್ಮಣಿ ನಿಷ್ಠಾ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥ ಅಪಿ ಚ ಹೇ ಪ್ರಶರ್ಧ ಪ್ರಕರ್ಷೇಣ ಶರ್ಧಯಿತರಭಿಭವಿತರಿಂದ್ರ ತುರ್ವಶ ಏತತ್ಸಂಜ್ಞೇ ಚ ರಾಜನಿ ನೃಷೂತೋಽಸಿ । ನೃಭಿಃ ಪ್ರೇರಿತೋ ಭವಸಿ ॥

। ಪ್ರತಿಪದಾರ್ಥ ।

ಸಿಮ—ಶ್ರೇಷ್ಠನಾದ । ಇಂದ್ರ—ಎಲೈ ಇಂದ್ರನೇ । ಯತ್—ಒಂದು ವೇಳೆ । ಪ್ರಾಕ್—ಪೂರ್ವದಿಕ್ಕಿನಲ್ಲಿಯೂ । ಅಪಾಕ್—ಪಶ್ಚಿಮದಿಕ್ಕಿನಲ್ಲಿಯೂ । ಉದಕ್—ಉತ್ತರದಿಕ್ಕಿನಲ್ಲಿಯೂ । ವಾ—ಅಥವಾ । ನ್ಯಕ್—ನಿಕೃಷ್ಟವಾದ ದಿಕ್ಕಿನಲ್ಲಿಯೂ ಇರತಕ್ಕ । ನೃಭಿಃ—ಸ್ತೋತೃಗಳಿಂದೆಲ್ಲಾ । ಹೂಯಸೇ—ನೀನು ಕರೆಯಲ್ಪಟ್ಟರೂ ಸಹ । ಆನವೇ—ಅನುಪುತ್ರನಲ್ಲಿರತಕ್ಕ । ನೃಷೂತಃ—ಋತ್ವಿಗಾದಿಗಳ ಸ್ತುತಿಯಿಂದಲೂ । ಪುರು ಅಸಿ—ಬಹುಮಟ್ಟಿಗೆ ಪ್ರೇರಿತನಾಗಿದ್ದೀಯೆ । ಪ್ರಶರ್ಧ—ಅತ್ಯುತ್ತಮವಾದ ಶಕ್ತಿಯುಳ್ಳ ಎಲೈ ಇಂದ್ರನೇ । ತುರ್ವಶೇ—ರಾಜನಲ್ಲಿರುವ ಋತ್ವಿಕ್ಕುಗಳಿಂದಲೂ । ಅಸಿ—ಪ್ರೇರಿಸಲ್ಪಟ್ಟವನಾಗಿದ್ದೀಯೆ.

। ಭಾವಾರ್ಥ ।

ಶ್ರೇಷ್ಠನಾದ ಎಲೈ ಇಂದ್ರನೇ, ನಿನ್ನನ್ನು ಪ್ರಾರ್ಥಿಸಿ ಕರೆಯುವವರು ಅನೇಕರಿದ್ದಾರೆ. ಆದರೂ ಸಹ, ಎಂದರೆ, ನೀನು ಪೂರ್ವ, ಪಶ್ಚಿಮ, ಉತ್ತರ ಮತ್ತು ದಕ್ಷಿಣ ಈ ಎಲ್ಲಾ ದಿಕ್ಕುಗಳಲ್ಲಿಯೂ ಇರತಕ್ಕ ಸ್ತುತಿಕರ್ತರಿಂದೆಲ್ಲಾ ಕರೆಯಲ್ಪಟ್ಟರೂ ಸಹ ಅನುಪುತ್ರನ ಯಾಗದಲ್ಲಿರುವ ಋತ್ವಿಗಾದಿಗಳ ಸ್ತುತಿಯಿಂಥಲೂ, ತುರ್ವಶನೆಂಬ ರಾಜನ ಯಾಗದಲ್ಲಿರುವ ಋತ್ವಿಗಾದಿಗಳ ಸ್ತುತಿಯಿಂದಲೂ ನೀನು ಪ್ರೇರಿತನಾಗಿ ಆ ಇಬ್ಬರಲ್ಲಿಯೇ ಇರುತ್ತೀಯೆ.

## English Translation

Inasmuch, Indra, as you are invoked by the people in the east in the west, in the north, in the south, so, excellent Indra, have you been incited by men on behalf of the son of Anu; so, overcomer of foes, (have you been called upon) on behalf of Turvasha.

॥ ಸಂಹಿತಾಪಾಠಃ ॥

ಯದ್ವಾ ರುಮೇ ರುಶಮೇ ಶ್ಯಾವಕೇ ಕೃಪ ಇಂದ್ರ ಮಾದಯಸೇ ಸಚಾ ।
ಕಣ್ವಾಸಸ್ತ್ವಾ ಬ್ರಹ್ಮಭಿಃ ಸ್ತೋಮವಾಹಸ ಇಂದ್ರಾ ಯಚ್ಛಂತ್ಯಾ ಗಹಿ ॥

। ಪದಪಾಠಃ ।

ಯತ್ । ವಾ । ರುಮೇ । ರುಶಮೇ । ಶ್ಯಾವಕೇ । ಕೃಪೇ । ಇಂದ್ರ । ಮಾದಯಸೇ । ಸಚಾ ।

ಕಣ್ವಾಸಃ । ತ್ವಾ । ಬ್ರಹ್ಮಽಭಿಃ । ಸ್ತೋಮಽವಾಹಸಃ । ಇಂದ್ರ । ಆ । ಯಚ್ಛಂತಿ । ಆ । ಗಹಿ ॥ ೨ ॥

। ಸಾಯಣಭಾಷ್ಯಂ ।

ಯದ್ವಾ ಯದ್ಯಪಿ ರುಮಾದಿಷು ಚತುರ್ಷು ರಾಜಸು ಹೇ ಇಂದ್ರ ತ್ವಂ ಸಚಾ ಸಹ ಮಾದಯಸೇ ಮಾದ್ಯಸಿ ತಥಾಪಿ ಸ್ತೋಮವಾಹಸಃ ಸ್ತೋಮಾನಾಂ ಸ್ತೋತ್ರಾಣಾಂ ವೋಢಾರಃ ಕಣ್ವಾಸಃ ಕಣ್ವಗೋತ್ರಾ ಋಷಯೋ ಬ್ರಹ್ಮಭಿಃ ಪರಿವೃಢೈರ್ಮಂತ್ರೈರ್ಹವಿರ್ಭಿರ್ವಾ ಹೇ ಇಂದ್ರ ತ್ವಾಮಾ ಯಚ್ಛಂತಿ । ಆಗಮಯಂತಿ । ಯದ್ವಾ । ದ್ವಿತೀಯಾರ್ಥೇ ತೃತೀಯಾ । ಬ್ರಹ್ಮಭಿರ್ಬ್ರಹ್ಮಾಣಿ ಹವೀಂಷ್ಯಾಭಿಮುಖ್ಯೇನ ಪ್ರಯಚ್ಛಂತಿ । ದದತಿ । ದಾಣ್ ದಾನೇ । ಪಾಘ್ರೇತ್ಯಾದಿನಾ ಯಚ್ಛಾದೇಶಃ ॥ ಅತಸ್ತ್ವಮಾ ಗಹಿ । ಶೀಘ್ರಮಾಗಚ್ಛ ॥ ಗಮೇರ್ಲೋಟಿ ಛಾಂದಸಃ ಶಪೋ ಲುಕ್ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯದ್ವಾ—ಒಂದು ವೇಳೆ । (ತ್ವಂ—ನೀನು) । ರುಮೇ—ರುಮನಲ್ಲಿಯೂ । ರುಶಮೇ—ರುಶಮನಲ್ಲಿಯೂ । ಶ್ಯಾವಕೇ—ಶ್ಯಾವಕನಲ್ಲಿಯೂ । ಕೃಪೇ—ಕೃಪನಲ್ಲಿಯೂ । ಸಚಾ—ಕೂಡಿಕೊಂಡು । ಮಾದಯಸೇ—ತೃಪ್ತಿಯನ್ನನುಭವಿಸುತ್ತಿದ್ದರೂ ಸಹ । ಇಂದ್ರ—ಎಲೈ ಇಂದ್ರನೇ । ಸ್ತೋಮವಾಹಸಃ—ಸ್ತೋತ್ರಗಳನ್ನು ಪಠಿಸತಕ್ಕ । ಕಣ್ವಾಸಃ—ಕಣ್ವಗೋತ್ರೋತ್ಪನ್ನರಾದ ಋಷಿಗಳು । ತ್ವಾ—ನಿನ್ನನ್ನು । ಬ್ರಹ್ಮಭಿಃ—ತಮ್ಮ ಸ್ತುತಿಗಳಿಂದ । ಆ ಯಚ್ಛಂತಿ—ಆಕರ್ಷಿಸುತ್ತಾರೆ । ಆ ಗಹಿ—(ಆದುದರಿಂದ) ಅವರಲ್ಲಿಗೂ ಬಾ.

। ಭಾವಾರ್ಥ ।

ಎಲೈ ಇಂದ್ರನೇ, ನೀನು ಒಂದು ವೇಳೆ ರುಮನಲ್ಲಿಯೂ, ರುಶಮನಲ್ಲಿಯೂ, ಶ್ಯಾವನಲ್ಲಿಯೂ, ಕೃಪನಲ್ಲಿಯೂ ಕೂಡಿಕೊಂಡು ತೃಪ್ತಿಯನ್ನನುಭವಿಸುತ್ತಿದ್ದರೂ ಸಹ ಎಲೈ ಇಂದ್ರನೇ, ಸ್ತುತಿಗಳನ್ನು ಪಠಿಸತಕ್ಕ ಕಣ್ವಗೋತ್ರೋತ್ಪನ್ನರಾದ ಋಷಿಗಳೂ ಸಹ ತಮ್ಮ ಸ್ತುತಿಗಳಿಂದ ನಿನ್ನನ್ನು ಆಕರ್ಷಿಸುತ್ತಾರೆ. ಆದುದರಿಂದ ಅವರಲ್ಲಿಗೂ ದಯಮಾಡು.

## English Translation

Inasmuch, Indra, as you have been exhilarated in the society of Ruma, Rusma, Shyavaka, and Kripa, so the Kanwas, bearers of oblations, attract you with their praises, (therefore) come hither.

॥ ಸಂಹಿತಾಪಾಠಃ ॥

ಯಥಾ ಗೌರೋ ಅಪಾ ಕೃತಂ ತೃಷ್ಯನ್ನೇತ್ಯವೇರಿಣಂ ।

ಆಪಿತ್ವೇ ನಃ ಪ್ರಪಿತ್ವೇ ತೂಯಮಾ ಗಹಿ ಕಣ್ವೇಷು ಸು ಸಚಾ ಪಿಬ ॥ ೩ ॥

॥ ಪದಪಾಠಃ ॥

ಯಥಾ । ಗೌರಃ । ಅಪಾ । ಕೃತಂ । ತೃಷ್ಯನ್ । ಏತಿ । ಅವ । ಇರಿಣಂ ।

ಆಽಪಿತ್ವೇ । ನಃ । ಪ್ರಽಪಿತ್ವೇ । ತೂಯಂ । ಆ । ಗಹಿ । ಕಣ್ವೇಷು । ಸು । ಸಚಾ । ಪಿಬ ॥ ೩ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇಽಚ್ಛಾವಾಕಶಸ್ತ್ರೇ ಯಥೇತಿ ಪ್ರಗಾಥೋಽನುರೂಪಃ । ಸೂತ್ರಿತಂ ಚ । ಯಥಾ ಗೌರೋ ಅಪಾ ಕೃತಮಿತ್ಯಚ್ಛಾವಾಕಸ್ಯ । ಆ. ೭-೪ । ಇತಿ ॥

ಗೌರೋ ಗೌರಮೃಗಸ್ತೃಷ್ಯನ್ ಪಿಪಾಸನ್ನಪಾದ್ಭಿರುದಕೈಃ ॥ ವ್ಯತ್ಯಯೇನೈಕವಚನಂ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ ॥ ಕೃತಂ ಸಂಪೂರ್ಣಂ ಕೃತಮಿರಿಣಂ ನಿಸ್ತೃಣಂ ತಟಾಕದೇಶಂ ಯಥಾ ಯೇನ ಪ್ರಕಾರೇಣಾವೈತಿ ಅವಗಚ್ಛತಿ । ಅವಶಬ್ದೋಽಭಿಶಬ್ದಸ್ಯಾರ್ಥೇ । ಅಭಿಮುಖಃ ಸಞ್ಶೀಘ್ರಂ ಗಚ್ಛತಿ ತಥಾಪಿತ್ವೇ ಬಂಧುತ್ವೇ ಪ್ರಪಿತ್ವೇ ಪ್ರಾಪ್ತೇ ಸತಿ ಹೇ ಇಂದ್ರ ತ್ವಂ ನೋಽಸ್ಮಾಂಸ್ತೂಯಂ । ಕ್ಷಿಪ್ರನಾಮೈತತ್ । ಶೀಘ್ರಮಾ ಗಹಿ । ಆಗಚ್ಛ । ಆಗತ್ಯ ಚ ಕಣ್ವೇಷು ಕಣ್ವಪುತ್ರೇಷ್ವಸ್ಮಾಸು ಸಚಾ ಸಹೈಕಯತ್ನೇನೈವ ವಿದ್ಯಮಾನಂ ಸರ್ವಂ ಸೋಮಂ ಸು ಸುಷ್ಠು ಪಿಬ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಗೌರಃ—ಗೌರಮೃಗವು । ತೃಷ್ಯನ್—ಬಾಯಾರಿಕೆಯಿಂದ ಬಳಲಿ । ಅಪಾ—ಉದಕಗಳಿಂದ । ಕೃತಂ—ತುಂಬಿದ । ಇರಿಣಂ—ತಟಾಕಪ್ರದೇಶವನ್ನು । ಯಥಾ—ಯಾವ ಪ್ರಕಾರವಾಗಿ । ಅವೈತಿ—ವೇಗವಾಗಿ ಹೋಗಿ ಸೇರುವುದೋ (ಅದೇ ಪ್ರಕಾರ) । ಆಪಿತ್ವೇ—(ಕಣ್ವರೊಡನೆ) ನಿನ್ನ ಬಂಧುತ್ವವು । ಪ್ರಪಿತ್ವೇ—ಪ್ರಾಪ್ತವಾದಾಗ । ನಃ—ನಮ್ಮಲ್ಲಿಗೆ । ತೂಯಂ—ಶೀಘ್ರವಾಗಿ । ಆ ಗಹಿ—ದಯಮಾಡು । ಕಣ್ವೇಷು ಸಚಾ—ಕಣ್ವಗೋತ್ರೋತ್ಪನ್ನರಾದ ನಮ್ಮಲ್ಲಿರುವ ಸೋಮವನ್ನು । ಸು—ಉತ್ತಮವಾಗಿ । ಪಿಬ—ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಗೌರಮೃಗವು ಬಾಯಾರಿಕೆಯಿಂದ ಬಳಲಿ ಉದಕಗಳಿಂದ ತುಂಬಿದ ತಟಾಕಪ್ರದೇಶವನ್ನು ಯಾವ ಪ್ರಕಾರವಾಗಿ ಬೇಗ ಹೋಗಿ ಸೇರುವುದೋ ಅದೇ ಪ್ರಕಾರ (ನಮ್ಮೊಡನೆ) ಕಣ್ವರೊಡನೆ ನಿನ್ನ ಬಂಧುತ್ವವು

ಸ್ಥಿರವಾದಾಗ ನಮ್ಮಲ್ಲಿಗೆ ಶೀಘ್ರವಾಗಿ ದಯಮಾಡು. ಕಣ್ವಗೋತ್ರೋತ್ಪನ್ನರಾದ ನಮ್ಮಲ್ಲಿರುವ ಸೋಮವನ್ನು ಅತಿಶಯವಾಗಿ ಪಾನಮಾಡು.

## English Translation

As the thirsty Gaura hastens to the pool filled with water in the desert, so, (Indra), our affinity being acknowledged, come quickly, and drink freely with the Kanwas.

॥ ವಿಶೇಷವಿಷಯಗಳು ॥

ಜ್ಯೋತಿಷ್ಟೋಮಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಯಥಾ ಎಂಬ ಈ ಋಕ್ಕನ್ನು ಪ್ರಗಾಥಾನುರೂಪಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಯಥಾ ಗೌರೋ ಅಪಾ ಕೃತಮಿತ್ಯಚ್ಛಾವಾಕಸ್ಯ ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು.

ಆಪಿತ್ವೇ ಪ್ರಪಿತ್ವೇ—ಈ ಶಬ್ದಗಳ ಅರ್ಥವಿವರಣೆಮಾಡುತ್ತಾ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿದಾರೆ—

ಪ್ರಪಿತ್ವೇಽಭೀಕ ಇತ್ಯಾಸನ್ನಸ್ಯ । ಪ್ರಪಿತ್ವೇ ಪ್ರಾಪ್ತೇ । ಅಭೀಕೇಽಭ್ಯಕ್ತೇ । ಆಪಿತ್ವೇ ನಃ ಪ್ರಪಿತ್ವೇ ತೂಯಮಾಗಹಿ । ಅಭೀಕೇ ಚಿದು ಲೋಕಕೃತ್ । ಇತ್ಯಪಿ ನಿಗಮೌ ಭವತಃ ॥ (ನಿ ೩-೨೦)

ಎಂದರೆ, ಪ್ರಪಿತ್ವೇ ಅಭೀಕೇ ಎಂಬ ಎರಡು ಶಬ್ದಗಳೂ ಸಮೀಪದಲ್ಲಿ ಎಂಬರ್ಥವನ್ನು ಸೂಚಿಸುವ ಪರ್ಯಾಯ ಪದಗಳು. ಪ್ರಪಿತ್ವೇ ಎಂದರೆ ಪ್ರಾಪ್ತವಾದ, ಹತ್ತಿರಕ್ಕೆ ಬಂದ ಎಂದೂ (arrived of) ಅಭೀಕೇ ಎಂದರೆ ಸಮೀಪಿಸಿದ ಎಂದೂ (approached) ಎಂದೂ ಅರ್ಥವು. ಈ ವಿಷಯದಲ್ಲಿ ಮೇಲೆ ಹೇಳಿರುವ ಆಪಿತ್ವೇ ಎಂದು ಮೊದಲಾದ ಎರಡು ವಾಕ್ಯಗಳೂ ಪ್ರತ್ಯುದಾಹರಣೆಗಳು.

॥ ಸಂಹಿತಾಪಾಠಃ ॥

ಮಂದಂತು ತ್ವಾ ಮಘವನ್ನಿಂದ್ರೇಂದವೋ ರಾಧೋದೇಯಾಯ ಸುನ್ವತೇ ।
ಆಮುಷ್ಯಾ ಸೋಮಮಪಿಬಶ್ಚಮೂ ಸುತಂ ಜ್ಯೇಷ್ಠಂ ತದ್ದಧಿಷೇ ಸಹಃ ॥೪॥

॥ ಪದಪಾಠಃ ॥

ಮಂದಂತು । ತ್ವಾ । ಮಘಽವನ್ । ಇಂದ್ರ । ಇಂದವಃ । ರಾಧಃಽದೇಯಾಯ । ಸುನ್ವತೇ ।
ಆಽಮುಷ್ಯ । ಸೋಮಂ । ಅಪಿಬಃ । ಚಮೂ ಇತಿ । ಸುತಂ । ಜ್ಯೇಷ್ಠಂ । ತತ್ । ದಧಿಷೇ । ಸಹಃ ॥ ೪ ॥

। ಸಾಯಣಭಾಷ್ಯಂ ।

ಹೇ ಮಘವನ್ ಧನವನ್ನಿಂದ್ರ ಇಂದವಃ ಕ್ಲೇದನಾಃ ಸೋಮಾಸ್ತ್ವಾಂ ಮಂದಂತು । ಮಾದಯಂತು । ಹರ್ಷಯಂತು ॥ ಮದೇರ್ವ್ಯತ್ಯಯೇನ ಪರಸ್ಮೈಪದಂ ॥ ಕಿಮರ್ಥಂ । ಸುನ್ವತೇ ಸೋಮಾಭಿಷವಂ ಕುರ್ವತೇ ಯಜಮಾನಾಯ ರಾಧೋದೇಯಾಯ ರಾಧಸೋ ಧನಸ್ಯ ದಾನಾರ್ಥಂ ॥ ದದಾತೇರಚೋ ಯದಿತಿ ಭಾವೇ ಯತ್ । ಈದ್ಯತೀತೀಕಾರಃ । ಯತೋಽನಾವ ಇತ್ಯಾದ್ಯುದಾತ್ತತ್ವೇ ಕೃದುತ್ತರಪದಪ್ರಕೃತಿಸ್ವರತ್ವಂ । ಶತುರನುಮ ಇತಿ ಸುನ್ವಚ್ಛಬ್ದಾತ್ಪರಾ ವಿಭಕ್ತಿರುದಾತ್ತಾ ॥ ಅಪಿ ಚ ತ್ವಂ ಸೋಮಮಾಮುಷ್ಯಾಯಣಂ ಕೃತ್ವಾದತ್ತಮಪಿ ಬಲಾದಪಹೃತ್ಯಾಪಿಬಃ । ಪೀತವಾನಸಿ । ಸ ಯಜ್ಞಶೇವಸಂ ಕೃತ್ವಾ ಪ್ರಾಸಹಾ ಸೋಮಮಪಿಬತ್ । ತೈ. ಸಂ. ೨-೪-೧೨-೧ । ಇತಿ ಶ್ರುತೇಃ । ಕೀದೃಶಂ ಸೋಮಂ । ಚಮೂ ಚಮ್ವೋರಧಿಷವಣಫಲಕಯೋಃ ಸುತಮಭಿಷುತಂ । ಯದ್ವಾ । ಚಮೂಭ್ಯಾಂ ಚಮಸಾಭ್ಯಾಂ ಹೋತುರ್ಮೈತ್ರಾವರುಣಸ್ಯ ಚ ಸಂಬಂಧಿಭ್ಯಾಂ ಸಂಸ್ಕೃತಾಭಿರ್ವಸತೀವರೀಭಿಃ ಸುತಮಭಿಷುತಂ । ಯಸ್ಮಾದೇವಂ ತತ್ತಸ್ಮಾತ್ಕಾರಣಾಜ್ಜ್ಯೇಷ್ಠಂ ಪ್ರಶಸ್ಯತಮಂ ವೃದ್ಧತಮಂ ವಾ ಸಹೋ ಬಲಂ ದಧಿಷೇ । ಹೇ ಇಂದ್ರ ತ್ವಂ ಧಾರಯಸಿ । ಅತೋ ಮದೀಯಾ ಅಪಿ ಸೋಮಾಸ್ತ್ವಾಂ ಮಾದಯಂತ್ವಿತಿ ಪ್ರಾರ್ಥ್ಯತೇ ॥

। ಪ್ರತಿಪದಾರ್ಥ ।

ಮಘವನ್—ಧನವಂತನಾದ । ಇಂದ್ರ—ಎಲೈ ಇಂದ್ರನೇ । ಸುನ್ವತೇ—ಸೋಮರಸವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ । ರಾಧೋದೇಯಾಯ—ಧನದ ದಾನಾರ್ಥವಾಗಿ । ಇಂದವಃ—ಸ್ರವಿಸುವ ಸೋಮರಸಗಳು । ತ್ವಾ—ನಿನ್ನನ್ನು । ಮದಂತು—ತೃಪ್ತಿಗೊಳಿಸಲಿ । ತ್ವಂ—ನೀನು । ಚಮೂ—ಹಿಂಡುವ ಕಲ್ಲುಗಳಿಂದ । ಸುತಂ—ಹಿಂಡಲ್ಪಟ್ಟ । ಸೋಮಂ—ಸೋಮರಸವನ್ನು । ಅಮುಷ್ಯ—ಬಲಾತ್ಕಾರದಿಂದ ಅಪಹರಿಸಿ । ಅಪಿಬಃ—ಪಾನ ಮಾಡಿದ್ದೀಯೆ । ತತ್—ಆದುದರಿಂದ । ಜ್ಯೇಷ್ಠಂ—ಅತ್ಯಧಿಕವಾದ । ಸಹಃ—ಬಲವನ್ನು । ದಧಿಷೇ—ಹೊಂದಿದ್ದೀಯೆ.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ಸೋಮರಸವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ ಧನದ ದಾನದ ನಿಮಿತ್ತವಾಗಿ ಸ್ರವಿಸುವ ಸೋಮರಸಗಳು ನಿನ್ನನ್ನು ತೃಪ್ತಿಗೊಳಿಸಲಿ. ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟ ಸೋಮರಸವನ್ನು ಹಿಂದೆ ನೀನು ಬಲಾತ್ಕಾರದಿಂದ ಅಪಹರಿಸಿ ಪಾನಮಾಡಿದ್ದೀಯೆ. ಆದುದರಿಂದ ನೀನು ಅತ್ಯಧಿಕವಾದ ಬಲವನ್ನು ಹೊಂದಿದ್ದೀಯೆ.

## English Translation

Opulent Indra, may the Soma drops exhilarate you, that you may bestow wealth on the donor of the libation; for taking it by stealth (when ungiven), you have drunk the Soma poured out into the ladle, and have then sustained pre-eminent strength.

॥ ಸಂಹಿತಾಪಾಠಃ ॥

ಪ್ರ ಚಕ್ರೇ ಸಹಸಾ ಸಹೋ ಬಭಂಜ ಮನ್ಯುಮೋಜಸಾ ।

ವಿಶ್ವೇ ತ ಇಂದ್ರ ಪೃತನಾಯವೋ ಯಹೋ ನಿ ವೃಕ್ಷಾ ಇವ ಯೇಮಿರೇ ॥

॥ ಪದಪಾಠಃ ॥

ಪ್ರ । ಚಕ್ರೇ । ಸಹಸಾ । ಸಹಃ । ಬಭಂಜ । ಮನ್ಯುಂ । ಓಜಸಾ ।

ವಿಶ್ವೇ । ತೇ । ಇಂದ್ರ । ಪೃತನಾಽಯವಃ । ಯಹೋ ಇತಿ । ನಿ । ವೃಕ್ಷಾಃಽಇವ । ಯೇಮಿರೇ ॥ ೫ ॥

॥ ಸಾಯಣಭಾಷ್ಯಂ ॥

ಸ ಇಂದ್ರಃ ಸಹಸಾತ್ಮೀಯೇನಾಭಿಭವೇನ ವೀರ್ಯಕರ್ಮಣಾ ಸಹಃ ಶತ್ರೂಣಾಮಭಿಭವನಂ ಪ್ರ ಚಕ್ರೇ। ಪ್ರಕರ್ಷೇಣ ಕೃತವಾನ್। ತಥೌಜಸಾ ಬಲೇನ ಮನ್ಯುಂ ಪರಕೀಯಂ ಕ್ರೋಧಂ ಬಭಂಜ। ಭಗ್ನವಾನ್ । ಉತ್ತರೋಽರ್ಧರ್ಚಃ ಪ್ರತ್ಯಕ್ಷಕೃತಃ । ಹೇ ಯಹೋ । ಮಹನ್ನಾಮೈತತ್ । ಹೇ ಮಹನ್ನಿಂದ್ರ ವಿಶ್ವೇ ಸರ್ವೇ ಪೃತನಾಯವೋ ಯುದ್ಧಕಾಮಾಃ ಶತ್ರವಸ್ತೇ ತ್ವಯಾ ವೃಕ್ಷಾ ಇವ ಮಹೀರುಹಾ ಇವ ನಿ ಯೇಮಿರೇ । ನಿಯತಾ ಆಸನ್ । ಯಥಾ ವೃಕ್ಷಾ ನಿಶ್ಚಲಾಸ್ತಿಷ್ಠಂತಿ ತದ್ವನ್ನಿರ್ವ್ಯಾಪಾರಾ ಅಭೂವನ್ನಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಇಂದ್ರಃ—ಇಂದ್ರನು) । ಸಹಸಾ—ತನ್ನ ವೀರ್ಯದಿಂದ । ಸಹಃ—ಶತ್ರುಪರಾಜಯವನ್ನು । ಪ್ರ ಚಕ್ರೇ—ಉಂಟುಮಾಡಿದ್ದಾನೆ । ಓಜಸಾ—ತನ್ನ ಶಕ್ತಿಯಿಂದ । ಮನ್ಯುಂ—ಶತ್ರುಗಳ ಕ್ರೋಧವನ್ನು । ಬಭಂಜ—ನಾಶಮಾಡಿದ್ದಾನೆ । ಯಹೋ—ಮಹಾತ್ಮನಾದ । ಇಂದ್ರ—ಎಲೈ ಇಂದ್ರನೇ । ಪೃತನಾಯವಃ—ಯುದ್ಧಾಪೇಕ್ಷಿಗಳಾದ । ವಿಶ್ವೇ—ಸಮಸ್ತ ಶತ್ರುಗಳೂ । ತೇ—ನಿನ್ನಿಂದ । ವೃಕ್ಷಾ ಇವ—ವೃಕ್ಷಗಳಂತೆ । ನಿ ಯೇಮಿರೇ—ನಿಶ್ಚಲರಾಗಿ ನಿಲ್ಲುವಂತೆ ಬಂಧಿತರಾಗಿದ್ದಾರೆ.

॥ ಭಾವಾರ್ಥ ॥

ಇಂದ್ರನು ತನ್ನ ವೀರ್ಯದಿಂದ ಶತ್ರುಪರಾಜಯವನ್ನುಂಟುಮಾಡಿದ್ದಾನೆ. ತನ್ನ ಶಕ್ತಿಯಿಂದ ಶತ್ರುಗಳ ಕ್ರೋಧವನ್ನು ನಾಶಮಾಡಿದ್ದಾನೆ. ಮಹಾತ್ಮನಾದ ಎಲೈ ಇಂದ್ರನೇ, ಯುದ್ಧಾಪೇಕ್ಷಿಗಳಾದ ಸಮಸ್ತ ಶತ್ರುಗಳೂ ನಿನ್ನಿಂದ ವೃಕ್ಷಗಳಂತೆ ನಿಶ್ಚಲರಾಗಿ ನಿಲ್ಲುವಂತೆ ಬಂಧಿತರಾಗಿದ್ದಾರೆ.

## English Translation

By his strength he has overpowered the strength (of his foes), he

he has crushed their wrath by his prowess: all hostile armies have been arrested like trees (immoveable through fear), mighty Indra, by you.

। ಸಂಹಿತಾಪಾಠಃ ।

ಸಹಸ್ರೇಣೇವ ಸಚತೇ ಯವೀಯುಧಾ ಯಸ್ತ ಆನಳುಪಸ್ತುತಿಂ ।
ಪುತ್ರಂ ಪ್ರಾವರ್ಗಂ ಕೃಣುತೇ ಸುವೀರ್ಯೇ ದಾಶ್ನೋತಿ ನಮಉಕ್ತಿಭಿಃ ॥

॥ ಪದಪಾಠಃ ।

ಸಹಸ್ರೇಣಽಇವ । ಸಚತೇ । ಯವಿಽಯುಧಾ । ಯಃ । ತೇ । ಆನಟ್ । ಉಪಽಸ್ತುತಿಂ ।
ಪುತ್ರಂ । ಪ್ರಾವರ್ಗಂ । ಕೃಣುತೇ । ಸುಽವೀರ್ಯೇ । ದಾಶ್ನೋತಿ । ನಮಉಕ್ತಿಽಭಿಃ ॥ ೬ ॥

। ಸಾಯಣಭಾಷ್ಯಂ ।

ಹೇ ಇಂದ್ರ ತೇ ತವೋಪಸ್ತುತಿಂ ಸ್ತೋತ್ರಂ ಯಃ ಪುರುಷ ಆನಟ್ ಪ್ರಾಪ್ನೋತಿ ತ್ವಾಂ ಪ್ರಾಪಯತಿ ॥ ಅಶ್ನೋತೇರ್ಲಙಿ ವ್ಯತ್ಯಯೇನ ಪರಸ್ಮೈಪದಂ ॥ .... .... .... ಸಚತೇ । ಸಮವೈತಿ ॥ ಷಚ ಸಮವಾಯೇ ॥ ಸಹಸ್ರೇಣೇವ ಯಥಾ ಸಹಸ್ರಸಂಖ್ಯೇನ ಬಲೇನ ತಥೇತ್ಯರ್ಥಃ । ಯಶ್ಚ ಯಜಮಾನೋ ನಮಉಕ್ತಿಭಿರ್ನಮಸ್ಕಾರವಚನೈಃ ಸ್ತೋತ್ರೈಃ ಸಾರ್ಧಂ ದಾಶ್ನೋತಿ ಹವೀಂಷಿ ತುಭ್ಯಂ ದದಾತಿ ॥ ದಾಶ್ನ ದಾನೇ ॥ ಸ ಯಜಮಾನಃ ಸುವೀರ್ಯೇ ಶೋಭನವೀರ್ಯಯುಕ್ತೇ ಸಂಗ್ರಾಮೇ ಪ್ರಾವರ್ಗಂ ಪ್ರಕರ್ಷೇಣ ಶತ್ರೂಣಾಂ ವರ್ಜಯಿತಾರಂ ಪುತ್ರಂ ಕೃಣುತೇ । ಕರೋತಿ । ಉತ್ಪಾದಯತಿ । ತ್ವತ್ಪ್ರಸಾದಾಲ್ಲಭತ ಇತ್ಯರ್ಥಃ ॥ ಪ್ರಪೂರ್ವಾದ್ವೃಜೇಃ ಕೃತ್ಯಲ್ಯುಟೋ ಬಹುಲಮಿತಿ ಕರ್ತರಿ ಘಞ್ । ಉಪಸರ್ಗಸ್ಯ ಘಞ್ಯಮನುಷ್ಯೇ । ಪಾ. ೬-೩-೧೨೨ । ಇತಿ ದೀರ್ಘಃ । ಥಾಥಾದಿನೋತ್ತರಪದಾಂತೋದಾತ್ತತ್ವಂ ॥ ಯದ್ವಾ । ಸುವೀರ್ಯ ಇತ್ಯೇತತ್ಪುತ್ರಸ್ಯ ವಿಶೇಷಣಂ । ದ್ವಿತೀಯಾರ್ಥೇ ಸಪ್ತಮೀ । ಶೋಭನವೀರ್ಯಂ ಪುತ್ರಂ ॥ ಬಹುವ್ರೀಹೌ ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಯಃ—ಯಾವ ಯಜಮಾನನು । ತೇ—ನಿನಗೆ । ಉಪಸ್ತುತಿಂ—ಸ್ತೋತ್ರವನ್ನು । ಆನಟ್—ಅರ್ಪಿಸುವನೋ (ನೀನು ಸೇವಿಸುವಂತೆ ಮಾಡುವನೋ) ಅವನು । ಯವಿಯುಧಾ—ಹೋರಾಡಲು ಸಮರ್ಥವಾದ । ಸಹಸ್ರೇಣೇವ—ಸಹಸ್ರಸಂಖ್ಯಾಕವಾದ ಬಲದಿಂದಲೋ ಎಂಬಂತೆ । ಸಚತೇ—ಕೂಡಿಕೊಳ್ಳುತ್ತಾನೆ । (ಯಃ—ಯಾರು) । ನಮಉಕ್ತಿಭಿಃ—ನಮಸ್ಕಾರಪೂರ್ವಕವಾದ ಸ್ತೋತ್ರಗಳೊಡನೆ । ದಾಶ್ನೋತಿ—ಹವಿಸ್ಸನ್ನು ನಿನಗರ್ಪಿಸುವನೋ ಅವನು । ಸುವೀರ್ಯೇ—ಉತ್ತಮವಾದ ಶಕ್ತಿಪ್ರಕಾಶವುಳ್ಳ ಯುದ್ಧದಲ್ಲಿ । ಪ್ರಾವರ್ಗಂ—ಶತ್ರುಗಳನ್ನು ಓಡಿಸತಕ್ಕ । ಪುತ್ರಂ—ಪುತ್ರನನ್ನು । ಕೃಣುತೇ—ಉತ್ಪನ್ನ ಮಾಡುತ್ತಾನೆ.

। ಭಾವಾರ್ಥಃ ।

ಎಲೈ ಇಂದ್ರನೇ, ಯಾವ ಯಜಮಾನನು ನಿನಗೆ ಸ್ತುತಿಯನ್ನರ್ಪಿಸಿ ಅದನ್ನು ನೀನು ಸೇವಿಸುವಂತೆ ಮಾಡುವನೋ ಅವನು ಸಹಸ್ರಸಂಖ್ಯಾಕವಾದ ಬಲದಿಂದ ಕೂಡಿಕೊಂಡು ಹೋರಾಡಲು ಸಿದ್ಧವಾಗಿರುತ್ತಾನೆ. ಯಾರು ನಮಸ್ಕಾರಪೂರ್ವಕವಾದ ಸ್ತುತಿಗಳೊಡನೆ ನಿನಗೆ ಸ್ತುತಿಯನ್ನರ್ಪಿಸುವನೋ ಅವನು ಯುದ್ಧದಲ್ಲಿ ಶತ್ರುಗಳೊಡನೆ ಹೋರಾಡಿ ಅವರನ್ನು ಜಯಿಸಬಲ್ಲ ಪುತ್ರನನ್ನು ಉತ್ಪನ್ನಮಾಡುತ್ತಾನೆ.

**English Translation**

He who has made his praise attain to you associates himself with a thousand gallant combatants; he who offers oblations with reverence begets a valiant son, the scatterer (of enemies).

। ಸಂಹಿತಾಪಾಠಃ ।

ಮಾ ಭೇಮ ಮಾ ಶ್ರಮಿಷ್ಮೋಗ್ರಸ್ಯ ಸಖ್ಯೇ ತವ ।

ಮಹತ್ತೇ ವೃಷ್ಣೋ ಅಭಿಚಕ್ಷ್ಯಂ ಕೃತಂ ಪಶ್ಯೇಮ ತುರ್ವಶಂ ಯದುಂ ॥

। ಪದಪಾಠಃ ।

ಮಾ । ಭೇಮ । ಮಾ । ಶ್ರಮಿಷ್ಮ । ಉಗ್ರಸ್ಯ । ಸಖ್ಯೇ । ತವ ।

ಮಹತ್ । ತೇ । ವೃಷ್ಣಃ । ಅಭಿಽಚಕ್ಷ್ಯಂ । ಕೃತಂ । ಪಶ್ಯೇಮ । ತುರ್ವಶಂ । ಯದುಂ ॥ ೭ ॥

। ಸಾಯಣಭಾಷ್ಯಂ ।

ಹೇ ಇಂದ್ರ ಉಗ್ರಸ್ಯೋದ್ಗೂರ್ಣಬಲಸ್ಯ ತವ ಸಖ್ಯೇ ಸಖಿತ್ವೇ ಸತಿ ವಯಂ ಮಾ ಭೇಮ । ಮಾ ಭೈಷ್ಮ । ಕುತಶ್ಚಿದಪಿ ಶತ್ರೋರ್ಭೀತಾ ಮಾ ಭೂಮ । ಮಾ ಶ್ರಮಿಷ್ಮ । ಶ್ರಾಂತಾಃ ಪೀಡಿತಾಶ್ಚ ಮಾ ಭೂಮ । ವೃಷ್ಣಃ ಕಾಮಾನಾಂ ವರ್ಷಿತುಸ್ತೇ ತವ ಸಂಬಂಧಿ ಮಹತ್ಪ್ರಭೂತಂ ಕೃತಂ ವೃತ್ರವಧಾದಿಲಕ್ಷಣಂ ಕರ್ಮಾಭಿಚಕ್ಷ್ಯಂ । ಅಭಿತಃ ಖ್ಯಾಪನೀಯಂ ಸ್ತೋತವ್ಯಂ । ಅತೋ ಮಹಾನುಭಾವಸ್ಯ ತವ ಸಖ್ಯಂ ಪ್ರಾಪ್ತಾನಾಂ ಭೀತಿಶ್ರಮೌ ನ ಜಾಯೇತೇ ಇತ್ಯರ್ಥಃ । ತತ್ಕಥಮವಗಮ್ಯತ ಇತಿ ಚೇತ್ ಉಚ್ಯತೇ । ತುರ್ವಶಮೇತತ್ಸಂಜ್ಞಂ ರಾಜರ್ಷಿಂ ಯದುಮೇತತ್ಸಂಜ್ಞಂ ಚ ತ್ವತ್ಪ್ರಸಾದಾತ್ಸುಖೇನ ಜೀವಂತೌ ಪಶ್ಯೇಮ । ದೃಷ್ಟವಂತಃ ಖಲು ವಯಂ । ಅತಃ ಕಾರಣಾತ್ತ್ವತ್ಸಖ್ಯಂ ಪ್ರಾಪ್ತಸ್ಯ ಭಯಾದಿಕಂ ನ ಜಾಯತ ಇತ್ಯೇತದುಪಪನ್ನಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಉಗ್ರಸ್ಯ—ಅತ್ಯಧಿಕವಾದ ಬಲವುಳ್ಳ । ತವ—ನಿನ್ನ । ಸಖ್ಯೇ—ಮಿತ್ರತ್ವದಲ್ಲಿ ಸುಸ್ಥಿತರಾಗಿರುವ ನಾವು । ಮಾ ಭೇಮ—ಯಾರಿಗೂ ಭಯಪಡಲಾರೆವು । ಮಾ ಶ್ರಮಿಷ್ಮ—ಮನಸ್ಸಿನಲ್ಲಿಯೂ ಗಾಬರಿಯನ್ನು ಹೊಂದೆವು । ತುರ್ವಶಂ—ತುರ್ವಶನೆಂಬ ರಾಜನನ್ನೂ । ಯದುಂ—ಯದುವೆಂಬ ರಾಜನನ್ನೂ । ಪಶ್ಯೇಮ—(ನಿನ್ನ ಅನುಗ್ರಹದಿಂದಲೇ ಕ್ಷೇಮದಿಂದ ಇರುವವರನ್ನಾಗಿ) ಯಾವಾಗ ನೋಡುವೆವೋ ಆಗ । ವೃಷ್ಣಃ—ಕಾಮವರ್ಷಕನಾದ । ತೇ—ನಿನ್ನ । ಮಹತ್—ಅತ್ಯಧಿಕವಾದ । ಕೃತಂ—ವೃತ್ರವಧಾದಿಕರ್ಮವು । ಅಭಿಚಕ್ಷ್ಯಂ—ಸರ್ವತ್ರ ಪ್ರಶಂಸನೀಯವಾದುದೆಂದು ತಿಳಿಯುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಅತ್ಯಧಿಕವಾದ ಬಲವುಳ್ಳ ನಿನ್ನ ಮಿತ್ರತ್ವದಲ್ಲಿ ಸುಖದಿಂದಿರುವ ನಾವು ಯಾವ ಶತ್ರುವಿಗೂ ಭಯಪಡಲು ಕಾರಣವಿಲ್ಲ. ನಮ್ಮ ಮನಸ್ಸಿನಲ್ಲಿ ಯಾವ ಗಾಬರಿಗೂ ಅವಕಾಶವಿಲ್ಲ. ನಿನ್ನ ಸಹಾಯದಿಂದಲೇ ಸುರಕ್ಷಿತವಾದ ಸ್ಥಿತಿಯನ್ನು ಹೊಂದಿರುವ ತುರ್ವಶ ಮತ್ತು ಯದು ಎಂಬ ರಾಜರ್ಷಿಗಳನ್ನು ನೋಡಿದಾಗಲೇ ಕಾಮವರ್ಷಕನಾದ ನಿನ್ನ ವೃತ್ರವಧಾದಿಮಹತ್ಕರ್ಮವು ಸರ್ವತ್ರ ಪ್ರಶಂಸನೀಯವಾದುದೆಂದು ತಿಳಿಯುತ್ತೇವೆ.

## English Translation

(Secure) in the friendship of you who are terrible, let us not fear, let us not be harassed : great and glorious, showerer (of benefits), are your deeds, as we may behold them in the case of Turvasa, of Yadu

॥ ಸಂಹಿತಾಪಾಠಃ ॥

ಸವ್ಯಾಮನು ಸ್ಫಿಗ್ಯಂ ವಾವಸೇ ವೃಷಾ ನ ದಾನೋ ಅಸ್ಯ ರೋಷತಿ ।
ಮಧ್ವಾ ಸಂಪೃಕ್ತಾಃ ಸಾರಘೇಣ ಧೇನವಸ್ತೂಯಮೇಹಿ ದ್ರವಾ ಪಿಬ ॥೮॥

॥ ಪದಪಾಠಃ ॥

ಸವ್ಯಾಂ । ಅನು । ಸ್ಫಿಗ್ಯಂ । ವವಸೇ । ವೃಷಾ । ನ । ದಾನಃ । ಅಸ್ಯ । ರೋಷತಿ ।
ಮಧ್ವಾ । ಸಂಽಪೃಕ್ತಾಃ । ಸಾರಘೇಣ । ಧೇನವಃ । ತೂಯಂ । ಆ । ಇಹಿ । ದ್ರವ । ಪಿಬ ॥ ೮ ॥

॥ ಸಾಯಣಭಾಷ್ಯಂ ॥

ವೃಷಾ ಕಾಮಾನಾಂ ವರ್ಷಿತೇಂದ್ರಃ ಸವ್ಯಾಂ ದಕ್ಷಿಣೇತರಾಂ ಸ್ಫಿಗ್ಯಂ ಕಟಿಪ್ರದೇಶಮನು ॥ ತೃತೀಯಾರ್ಥೇಽನುಃ ಕರ್ಮಪ್ರವಚನೀಯತ್ವಂ ॥ ಸವ್ಯಯಾ ಸ್ಫಿಗ್ಯಾ ಶರೀರೈಕದೇಶೇನೈವ ವಾವಸೇ ।

ವಸ್ತೇ | ಸರ್ವಭೂತಜಾತಮಾಚ್ಛಾದಯತಿ | ಸ್ವಯಂ ಕೃತ್ಸ್ನಂ ಜಗದತೀತ್ಯ ವರ್ತತ ಇತ್ಯರ್ಥಃ | ನಿಗಮಾಂತರಂ ಚ ಭವತಿ | ಯದನ್ಯಯಾ ಸ್ಫಿಗ್ಯಾ ಕ್ಷಾಮವಸ್ಥಾಃ | ಋಗ್ವೇ. ೩-೩೨-೧೧ | ಇತಿ || ಅಪಿ ಚ ದಾನೋಽವಖಂಡಯಿತಾ || ದಾಪ ಅವಖಂಡನೇ | ಪಚಾದ್ಯಚ್ || ಸ ಚಾಸ್ಯೇಮಮಿಂದ್ರಂ ನ ರೋಷತಿ | ನ ಹಿನಸ್ತಿ || ರಿಷ ರುಷ ಹಿಂಸಾಯಾಂ || ಇಂದ್ರಂ ಹಿಂಸಿತುಂ ಶತ್ರುಃ ಕಶ್ಚಿದಪಿ ನಾಸ್ತೀತ್ಯರ್ಥಃ | ಯದ್ವಾ | ದಾನೋ ಹವಿಷಾಂ ದಾತಾ ಯಜಮಾನಶ್ಚಾಸ್ಯೇಂದ್ರಸ್ಯ ನ ರೋಷತಿ | ರೋಷಂ ನ ಜನಯತಿ | ಸರ್ವದಾ ಹವಿರ್ಭಿಃ ಪರಿಚರತೀತ್ಯರ್ಥಃ | ಉತ್ತರೋಽರ್ಧರ್ಚಃ ಪ್ರತ್ಯಕ್ಷಕೃತಃ | ಸಾರಘೇಣ | ಸರಘಾ ಮಧುಮಕ್ಷಿಕಾ | ತತ್ಸಂಬಂಧಿನಾ ಮಧ್ವಾ ಮಧುನಾ | ಲುಪ್ತೋಪಮಮೇತತ್ | ಮಧುನೇವ ರಸವತಾ ಕ್ಷೀರಾದಿನಾ ಶ್ರಯಣದ್ರವ್ಯೇಣ ಸಂಪೃಕ್ತಾಃ ಸಂಸೃಷ್ಟಾಃ ಸಂಸ್ಕೃತಾ ಧೇನವೋ ಧೇನುವತ್ ಪ್ರೀತಿಜನಕಾ ಅಸ್ಮದೀಯಾಃ ಸೋಮಾಃ | ಯದ್ವಾ | ಧಿವೇಃ ಪ್ರೀಣನಾರ್ಥಾದ್ಧೇನವಃ | ಪ್ರೀಣಯಿತಾರ ಇತ್ಯರ್ಥಃ | ಯತ ಏವಮತಃ ಕಾರಣಾತ್ ಹೇ ಇಂದ್ರ ತೂಯಂ ಕ್ಷಿಪ್ರಮೇಹಿ | ಅಸ್ಮತ್ಸಮೀಪಮಾಗಚ್ಛ | ಆಗತ್ಯ ಚ ದ್ರವ | ಸೋಮಾ ಯಸ್ಮಿನ್ನುತ್ತರವೇದಿಲಕ್ಷಣೇ ಸ್ಥಾನೇ ಹೂಯಂತೇ ತಂ ದೇಶಂ ಶೀಘ್ರಂ ಗಚ್ಛ || ದ್ರು ಗತಾವಿತಿ ಧಾತುಃ | ದ್ವ್ಯಚೋಽತಸ್ತಿಙ ಇತಿ ಸಾಂಹಿತಿಕೋ ದೀರ್ಘಃ || ತದನಂತರಮಧ್ವರ್ಯುಣಾ ದತ್ತಂ ಸೋಮಂ ಪಿಬ | ತೇನ ಸೋಮೇನ ಸಮ್ಯಕ್ ಸ್ವೋದರಂ ಪೂರಯೇತ್ಯರ್ಥಃ ||

| ಪ್ರತಿಪದಾರ್ಥ |

ವೃಷಾ—ಕಾಮವರ್ಷಕನಾದ ಇಂದ್ರನು | ಸವ್ಯಾಂ—ಎಡಗಡೆಯ | ಸ್ಫಿಗ್ಯಂ—ಪೃಷ್ಠಭಾಗದಿಂದ | ಅನು ವವಸೇ—ಸಕಲ ಜಗತ್ತನ್ನೂ ಆವರಿಸುತ್ತಾನೆ | ದಾನಃ—ಇದನ್ನು ಭೇದಿಸಲೆತ್ನಿಸುವವನಾರೂ | ಅಸ್ಯ—ಈ ಇಂದ್ರನನ್ನು | ನ ರೋಷತಿ—ಕೋಪಗೊಳಿಸುವುದಿಲ್ಲ (ಅಥವಾ ಹವಿರ್ದಾತನಾದ ಯಜಮಾನರಾರೂ ಇವನ ಮನಸ್ಸನ್ನು ನೋಯಿಸುವುದಿಲ್ಲ) (ಎಲೈ ಇಂದ್ರನೇ) | ಸಾರಘೇಣ—ದುಂಬಿಯ | ಮಧ್ವಾ—ಮಧುವಿನೊಂದಿಗೆ | ಸಂಪೃಕ್ತಾಃ—ಮಿಶ್ರಿತವಾದವೂ | ಧೇನವಃ—ಪ್ರೀತಿಕಾರಕವೂ ಆದ ಸೋಮರಸಗಳು ಸಿದ್ಧವಾಗಿವೆ | ತೂಯಂ—ಕ್ಷಿಪ್ರವಾಗಿ | ಏಹಿ—ದಯಮಾಡು | ದ್ರವ—ತ್ವರೆಗೊಳಿಸು | ಪಿಬ—ಈ ರಸವನ್ನು ಪಾನಮಾಡು.

| ಭಾವಾರ್ಥ |

ಕಾಮವರ್ಷಕನಾದ ಇಂದ್ರನು ಎಡಗಡೆಯ ಪೃಷ್ಠಭಾಗದಿಂದ ಸಕಲ ಜಗತ್ತನ್ನೂ ಆವರಿಸುತ್ತಾನೆ. ಯಜಮಾನರಲ್ಲಾರೂ ಇವನ ಮನಸ್ಸನ್ನು ನೋಯಿಸುವುದಿಲ್ಲ. ಎಲೈ ಇಂದ್ರನೇ, ಮಧುಕರದ ಮಧುವಿನೊಂದಿಗೆ ಮಿಶ್ರಿತವಾದವೂ, ಪ್ರೀತಿಕಾರಕವೂ ಆದ ಸೋಮರಸಗಳು ಸಿದ್ಧವಾಗಿವೆ. ಕ್ಷಿಪ್ರವಾಗಿ ದಯಮಾಡು, ತ್ವರೆಗೊಳಿಸು. ಈ ರಸವನ್ನು ಪಾನಮಾಡು.

## English Translation

The showerer (of benefits) with his left hip covers (the world), no tearer (of it) angers him : the delightful (Soma juices) are mixed with the weet honey of the bee ; come quickly hither, hasten, drink.

। ಸಂಹಿತಾಪಾಠಃ ।

ಅಶ್ವೀ ರಥೀ ಸುರೂಪ ಇದ್ಗೋಮಾँ ಇದಿಂದ್ರ ತೇ ಸಖಾ ।
ಶ್ವಾತ್ರಭಾಜಾ ವಯಸಾ ಸಚತೇ ಸದಾ ಚಂದ್ರೋ ಯಾತಿ ಸಭಾಮುಪ ॥

। ಪದಪಾಠಃ ।

ಅಶ್ವೀ । ರಥೀ । ಸುऽರೂಪಃ । ಇತ್ । ಗೋऽಮಾನ್ । ಇತ್ । ಇಂದ್ರ । ತೇ । ಸಖಾ ।
ಶ್ವಾತ್ರऽಭಾಜಾ । ವಯಸಾ । ಸಚತೇ । ಸದಾ । ಚಂದ್ರಃ । ಯಾತಿ । ಸಭಾಂ । ಉಪ ॥ ೯ ॥

। ಸಾಯಣಭಾಷ್ಯಂ ।

ಹೇ ಇಂದ್ರ ತೇ ತವ ಸಖಾ ಮಿತ್ರಭೂತಃ ಪುರುಷೋऽಶ್ವಾದಿಗುಣವಿಶಿಷ್ಟ ಏವ ಭವತಿ । ಇಚ್ಛಬ್ದಃ ಪ್ರತ್ಯೇಕಮಭಿಸಂಬಧ್ಯತೇ । ಅಶ್ವೀದ್ಬಹುಭಿರಶ್ವೈರುಪೇತ ಏವ ಭವತಿ । ನ ಕದಾಚಿದಶ್ವೈರ್ವಿಯುಜ್ಯತೇ । ರಥೀ ರಥವಾನೇವ ಸ ಭವತಿ । ಸುರೂಪ ಇಚ್ಛೋಭನರೂಪಃ ಶೋಭನಾವಯವ ಏವ ಸ ಭವತಿ । ಗೋಮಾँ ಇದ್ಬಹ್ವೀಭಿರ್ಗೋಭಿರ್ಯುಕ್ತ ಏವ ಸ ಭವತಿ । ನ ಕದಾಚಿದೇತೈರ್ವಿಯುಜ್ಯತ ಇತ್ಯರ್ಥಃ । ಅಪಿ ಚ ಶ್ವಾತ್ರಭಾಜಾ । ಶ್ವಾತ್ರಮಿತಿ ಧನನಾಮ । ಅತ್ಯಂತನೀಯಂ ಶೀಘ್ರಂ ಪ್ರಾಪ್ತವ್ಯಂ ಶೋಭನಂ ಧನಂ ಸಂಭಜತೇದೃಗ್ಧನ ಸಂಯುಕ್ತೇನ ವಯಸಾ । ಅನ್ನನಾಮೈತತ್ । ಅನ್ನೇನ ಸ ಸರ್ವದಾ ಸಚತೇ । ಸಮವೈತಿ । ಸಂಗಚ್ಛತೇ । ಷಚ ಸಮವಾಯೇ ॥ ಅತ ಏವ ಚಂದ್ರಃ ಸರ್ವೇಷಾಮಾಹ್ಲಾದಕಃ ಸನ್ ಸಭಾಂ ಜನಸಂಸದಮುಪ ಯಾತಿ । ಉಪಗಚ್ಛತಿ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಸಖಾ—ಮಿತ್ರನಾದ ಪುರುಷನು । ಅಶ್ವೀ ಇತ್—ಅಶ್ವಯುಕ್ತನಾಗಿಯೇ ಇರುತ್ತಾನೆ । ರಥೀ—ರಥಕ್ಕೆ ಯಜಮಾನನಾಗಿರುತ್ತಾನೆ । ಸುರೂಪಃ ಇತ್—ಆಕರ್ಷಕವಾದ ರೂಪವನ್ನು ಹೊಂದುತ್ತಾನೆ । ಗೋಮಾನ್ ಇತ್—ಗೋವುಗಳಿಂದ ಕೂಡಿರುತ್ತಾನೆ । ಶ್ವಾತ್ರಭಾಜಾ—ಶೀಘ್ರವಾಗಿ ಹೊಂದಬಹುದಾದ ಧನದೊಂದಿಗಿರುವ । ವಯಸಾ—ಅನ್ನದೊಂದಿಗೆ । ಸಚತೇ—ಸೇರಿಕೊಳ್ಳುತ್ತಾನೆ । ಚಂದ್ರಃ—ಆಹ್ಲಾದಕರವಾದ ವ್ಯಕ್ತಿತ್ವವನ್ನು ಹೊಂದಿ । ಸಭಾಂ—ವಿದ್ವಜ್ಜನರ ಸಭೆಗೆ । ಉಪ ಯಾತಿ—ಪ್ರವೇಶಿಸುತ್ತಾನೆ

। ಭಾವಾರ್ಥ ।

ಎಲೈ ಇಂದ್ರನೇ, ನಿನ್ನ ಮಿತ್ರನಾದ ಪುರುಷನು ಅಶ್ವಯುಕ್ತನಾಗಿಯೇ ಇರುತ್ತಾನೆ. ರಥಕ್ಕೆ ಸ್ವಾಮಿಯಾಗುತ್ತಾನೆ. ಆಕರ್ಷಕವಾದ ರೂಪವನ್ನು ಹೊಂದುತ್ತಾನೆ. ಗೋವುಗಳಿಂದ ಕೂಡಿರುತ್ತಾನೆ. ಶೀಘ್ರವಾಗಿ ಹೊಂದ

ಬಹುದಾದ ಧನಯುಕ್ತವಾದ ಅನ್ನದೊಂದಿಗೆ ಹೊಂದಿಕೊಳ್ಳುತ್ತಾನೆ. ಆಹ್ಲಾದಕರವಾದ ವ್ಯಕ್ತಿತ್ವವನ್ನು ಹೊಂದಿ ವಿದ್ವಜ್ಜನರ ಸಭೆಗೆ ಪ್ರವೇಶಿಸುತ್ತಾನೆ.

English translation

He who is your friend, Indra, is verily possessed of horses, of cars, of cattle, and is of goodly form: he is ever supplied with food-comprising riches, and delighting all, he enters an assembly.

। ಸಂಹಿತಾಪಾಠಃ ।

ಋಶ್ಯೋ ನ ತೃಷ್ಯನ್ನವಪಾನಮಾ ಗಹಿ ಪಿಬಾ ಸೋಮಂ ವಶಾँ ಅನು ।
ನಿಮೇಘಮಾನೋ ಮಘವನ್ದಿವೇದಿವ ಓಜಿಷ್ಠಂ ದಧಿಷೇ ಸಹಃ ॥ ೧೦ ॥

। ಪದಪಾಠಃ ।

ಋಶ್ಯಃ । ನ । ತೃಷ್ಯನ್ । ಅವऽಪಾನಂ । ಆ । ಗಹಿ । ಪಿಬ । ಸೋಮಂ । ವಶಾನ್ । ಅನು ।
ನಿऽಮೇಘಮಾನಃ । ಮಘऽವನ್ । ದಿವೇऽದಿವೇ । ಓಜಿಷ್ಠಂ । ದಧಿಷೇ । ಸಹಃ ॥ ೧೦ ॥

। ಸಾಯಣಭಾಷ್ಯಂ ।

ಹೇ ಇಂದ್ರ ಋಶ್ಯೋ ನಶ್ಯಾರ್ಋಶ್ಯೋ ಮೃಗ ಇವ ತೃಷ್ಯನ್ ಪಿಪಾಸಂಸ್ತ್ವಮವಪಾನಮವನೀತಂ ಗ್ರಹಚಮಸಾದಿಷು ಪಾತ್ರೇಷ್ವಾನೀತಂ ಪಾತವ್ಯಂ ಸೋಮಮಾ ಗಹಿ । ಅಭಿಗಚ್ಛ । ಗತ್ವಾ ಚ ತಮಸ್ಮದೀಯಂ ಸೋಮಂ ವಶಾँ ಅನ್ವನುಕಾಮಂ ಯಥಾಕಾಮಂ ಪಿಬ। ಯಾವತಾ ಪೀತೇನ ಪರ್ಯಾಪ್ತಿರ್ಜಾಯತೇ ತಾವತಾ ಸೋಮೇನ ಸ್ವೋದರಂ ಪೂರಯೇತ್ಯರ್ಥಃ । ಅತ ಏವ ಸೋಮಪಾನಾತ್ ಪ್ರಾಪ್ತಬಲಸ್ತ್ವಂ ದಿವೇ ದಿವೇ ಪ್ರತಿದಿವಸಂ ನಿಮೇಘಮಾನೋ ನ್ಯಂಚ್ಯಮಾಮ್ಯೂಹಾನಿ ವೃಷ್ಟ್ಯುದಕಾನಿ ಸಿಂಚನ್ ಹೇ ಮಘವನ್ನಿಂದ್ರ ಓಜಿಷ್ಠಮೋಜಸ್ವಿತಮಮುದ್ಗೂರ್ಣತಮಂ ಸಹೋ ಬಲಂ ದಧಿಷೇ । ಧಾರಯಸಿ ॥ ಓಜಸ್ವಿಶಬ್ದಾದಿಷ್ಠನಿ ವಿನ್ಮತೋರ್ಲುಗಿತಿ ವಿನೋ ಲುಕ್ । ಟೇರಿತಿ ಟಿಲೋಪಃ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) ಋಶ್ಯೋ ನ—ಬಾಯಾರಿದಾಗ ಋಶ್ಯಸಂಜ್ಞಕವಾದ ಮೃಗವು ಜಲಾಶಯಕ್ಕೆ ಇಳಿದು ಜಲಪಾನಮಾಡುವಂತೆ । ತೃಷ್ಯನ್—ಬಾಯಾರಿಕೆಯುಳ್ಳ ನೀನು । ಅವಪಾನಂ—ಚಮಸಾದಿ ಪಾತ್ರೆಗಳಲ್ಲಿ ತರಲ್ಪಟ್ಟ ಸೋಮಕ್ಕೆ। ಆ ಗಹಿ-ಅಭಿಮುಖವಾಗಿ ಬಾ। ಸೋಮಂ—ಸೋಮವನ್ನು। ವಶಾನ್ ಅನು—ನಿನ್ನ ಇಷ್ಟಬಂದಷ್ಟು। ಪಿಬ—ಪಾನಮಾಡು । ಮಘವನ್—ಧನವಂತನಾದ ಎಲೈ ಇಂದ್ರನೇ । ದಿವೇದಿವೇ—ಪ್ರತಿದಿನವೂ । ನಿಮೇ

ಘುಮಾನಃ—ಮೇಘಗಳಿಂದ ವೃಷ್ಟಿಯನ್ನು ಸುರಿಸುತ್ತಾ । ಓಜಿಷ್ಠಂ—ಅತ್ಯಧಿಕವಾದ ವೀರ್ಯವುಳ್ಳ । ಸಹಃ—ನಿನ್ನ ಶಕ್ತಿಯನ್ನು । ದಧಿಷೇ—ಹೊಂದಿರುತ್ತೀಯೆ.

। ಭಾವಾರ್ಥ ।

ಎಲೈ ಇಂದ್ರನೇ, ಋಶ್ಯಸಂಜ್ಞಕವಾದ ಮೃಗವು (ಜಿಂಕೆಯು) ಬಾಯಾರಿದಾಗ ಜಲಾಶಯಕ್ಕೆ ಬಂದು ಜಲಪಾನಮಾಡುವಂತೆ ಬಾಯಾರಿಕೆಯುಳ್ಳ ನೀನು ಚಮಸಾದಿ ಪಾತ್ರೆಗಳಲ್ಲಿ ತರಲ್ಪಟ್ಟ ಸೋಮಕ್ಕೆ ಅಭಿಮುಖವಾಗಿ ಬಾ. ಸೋಮವನ್ನು ನಿನ್ನಿಷ್ಟಬಂದಷ್ಟು ಪಾನಮಾಡು. ಧನವಂತನಾದ ಎಲೈ ಇಂದ್ರನೇ, ಪ್ರತಿದಿವಸವೂ ಮೇಘಗಳಿಂದ ವೃಷ್ಟಿಯನ್ನು ಸುರಿಸುತ್ತಾ ಅತ್ಯಧಿಕವಾದ ವೀರ್ಯವುಳ್ಳ ನಿನ್ನ ಶಕ್ತಿಯನ್ನು ಹೊಂದಿರುತ್ತೀಯೆ. (ಪ್ರಕಟಿಸುತ್ತೀಯೆ)

English Translation

Come like a thirsty deer to the watering place, drink at will of the Soma, whence, daily driving down the clouds, you sustain, Maghavan, most vigorous strength.

॥ ಸಂಹಿತಾಪಾಠಃ ॥

ಅಧ್ವ॑ರ್ಯೋ ದ್ರಾ॒ವಯಾ॒ ತ್ವಂ ಸೋಮ॒ಮಿಂದ್ರಃ॑ ಪಿಪಾಸತಿ ।

ಉಪ॑ ನೂ॒ನಂ ಯು॑ಯುಜೇ॒ ವೃಷ॑ಣಾ॒ ಹರೀ॒ ಆ ಚ॑ ಜಗಾಮ ವೃತ್ರ॒ಹಾ ॥

। ಪದಪಾಠಃ ।

ಅಧ್ವ॑ರ್ಯೋ॒ ಇತಿ॑ । ದ್ರ॒ವಯ॑ । ತ್ವಂ । ಸೋಮ॑ಂ । ಇಂದ್ರಃ॑ । ಪಿ॒ಪಾ॒ಸ॒ತಿ॒ ।

ಉಪ॑ । ನೂ॒ನಂ । ಯು॒ಯು॒ಜೇ॒ । ವೃಷ॑ಣಾ । ಹರೀ॒ ಇತಿ॑ । ಆ । ಚ॒ । ಜ॒ಗಾ॒ಮ॒ । ವೃ॒ತ್ರ॒ಽಹಾ ॥ ೧೧ ॥

। ಸಾಯಣಭಾಷ್ಯಂ ।

ಹೇ ಅಧ್ವರ್ಯೋ ಅಧ್ವರಸ್ಯ ನೇತಃ ತ್ವಂ ಸೋಮಂ ದ್ರಾವಯ । ಉತ್ತರವೇದಿಲಕ್ಷಣಂ ಸ್ಥಾನಂ ಪ್ರಾಪಯ । ಯದ್ವಾ । ರಸಾತ್ಮನಾ ದ್ರವಣಶೀಲಂ ಕುರು । ಅಭಿಷುಣ್ವಿತ್ಯರ್ಥಃ । ಕಿಂ ಕಾರಣಮಿತಿ ಚೇತ್ । ಇಂದ್ರಃ ಪಿಪಾಸತಿ । ಇಮಂ ಸೋಮಂ ಪಾತುಮಿಚ್ಛತಿ । ತ್ವಯ್ಯೈತತ್ಕಥಮವಗತಮಿತಿ ಚೇತ್ ತತ್ರಾಹ । ವೃಷಣಾ ವರ್ಷಿತಾರೌ ಯುವಾನೌ ವಾ ಹರೀ ಅಶ್ವೌ ನೂನಮದ್ಯ ಯುಯುಜೇ । ಉಪಗಮ್ಯ ಸಾರಥಿರ್ಯೋಜಿತವಾನ್ರಥೇ । ವೃತ್ರಹಾ ವೃತ್ರಸ್ಯ ಹಂತೇಂದ್ರಶ್ಚಾ ಜಗಾಮ । ಆಗತವಾನ್ ॥

। ಪ್ರತಿಪದಾರ್ಥ ॥

ಅಧ್ವರ್ಯೋ—ಎಲೈ ಅಧ್ವರ್ಯುವೇ । ತ್ವಂ—ನೀನು । ಸೋಮಂ—ಸೋಮವನ್ನು । ದ್ರಾವಯ—

ಆಹುತಿರೂಪದಲ್ಲಿ ಅರ್ಪಿಸು । ಇಂದ್ರಃ—ಇಂದ್ರನು । ಪಿಪಾಸತಿ—ಪಾನಮಾಡಲಿಚ್ಛಿಸುತ್ತಾನೆ । ವೃಷಣಾ—ತಾರುಣ್ಯವನ್ನು ಹೊಂದಿರುವ । ಹರೀ—ಅಶ್ವಗಳನ್ನು । ನೂನಂ—ಈಗಲೇ । ಉಪ ಯುಯುಜೇ—ತನ್ನ ರಥಕ್ಕೆ ಯೋಜಿಸಿದ್ದಾನೆ । ವೃತ್ರಹಾ ಚ—ವೃತ್ರಹಂತಕನಾದ ಇಂದ್ರನು । ಆ ಜಗಾಮ—ಬಂದಿದ್ದಾನೆ.

। ಭಾವಾರ್ಥ ।

ಎಲೈ ಅಧ್ವರ್ಯುವೇ, ಸೋಮಪಾನವನ್ನಿಚ್ಛಿಸಿದ ಇಂದ್ರನು ತನ್ನ ರಥಕ್ಕೆ ತನ್ನ ನಿತ್ಯತರುಣವಾದ ಅಶ್ವಗಳನ್ನು ಯೋಜಿಸಿದ್ದಾನೆ. ಆ ನಿಮಿತ್ತದಿಂದಲೇ ವೃತ್ರಹಂತಕನಾದ ಇಂದ್ರನು ಇಲ್ಲಿ ಬಂದಿದ್ದಾನೆ. ಅವನಿಗೆ ಆಹುತಿರೂಪದಲ್ಲಿ ಸೋಮರಸವನ್ನು ಧಾರಾಕಾರವಾಗಿ ಅರ್ಪಿಸು.

## English Translation

Quickly, priest, pour forth the Soma, for Indra is thirsty; verily he has harnessed his vigorous steeds, the slayer of Vritra has arrived.

। ಸಂಹಿತಾಪಾಠಃ ।

ಸ್ವಯಂ ಚಿತ್ಸ ಮನ್ಯತೇ ದಾಶುರಿರ್ಜನೋ ಯತ್ರಾ ಸೋಮಸ್ಯ ತೃಂಪಸಿ ।
ಇದಂ ತೇ ಅನ್ನಂ ಯುಜ್ಯಂ ಸಮುಕ್ಷಿತಂ ತಸ್ಯೇಹಿ ಪ್ರ ದ್ರವಾ ಪಿಬ ॥ ೧೧ ॥

। ಪದಪಾಠಃ ।

ಸ್ವಯಂ । ಚಿತ್ । ಸಃ । ಮನ್ಯತೇ । ದಾಶುರಿಃ । ಜನಃ । ಯತ್ರ । ಸೋಮಸ್ಯ । ತೃಂಪಸಿ ।
ಇದಂ । ತೇ । ಅನ್ನಂ । ಯುಜ್ಯಂ । ಸಂಽಉಕ್ಷಿತಂ । ತಸ್ಯ । ಆ । ಇಹಿ । ಪ್ರ । ದ್ರವ । ಪಿಬ ॥ ೧೨ ॥

। ಸಾಯಣಭಾಷ್ಯಂ ।

ದಾಶುರಿರ್ದಾಶ್ವಾನ್ ॥ ದಾಶತೇರೌಣಾದಿಕ ಉರಿನ್ ॥ ಹವಿಷಾಂ ದಾತಾ ಸ ಯಜಮಾನಲಕ್ಷಣೋ ಜನಃ ಸ್ವಯಂ ಚಿತ್ ಸ್ವಯಮೇವಾತ್ಮನೈವ ಮನ್ಯತೇ । ಸರ್ವಂ ಜಾನಾತಿ । ಪರಾಯತ್ತಪ್ರಜ್ಞೋ ನ ಭವತೀತ್ಯರ್ಥಃ । ಯತ್ರ ಯಸ್ಮಿನ್ಯಜ್ಞೇ ಸೋಮಸ್ಯ ಪಾನೇನ ಹೇ ಇಂದ್ರ ತ್ವಂ ತೃಂಪಸಿ ತೃಪ್ಯಸಿ ॥ ತೃಪ ತೃಪ್ತೌ । ತೌದಾದಿಕಃ । ಶೇ ತೃಂಫಾದೀನಾಂ । ಪಾ. ೭-೧-೫೯-೧ । ಇತಿ ನುಮ್ ॥ ತೇ ತ್ವದೀಯಂ ಯುಜ್ಯಂ ಯೋಗ್ಯಮಿದಮಸ್ಮದೀಯಂ ಸೋಮಲಕ್ಷಣಮನ್ನಂ ಸಮುಕ್ಷಿತಂ ಸಮ್ಯಕ್ ಪಾತ್ರೇಷ್ವಾಸಿಕ್ತಂ ॥ ಉಕ್ಷ ಸೇಚನೇ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥ ಅತಸ್ತಂ ತಾದೃಶಂ ಸೋಮಮೇಹಿ । ಅಭಿಗಚ್ಛ । ಪ್ರ ದ್ರವ । ಶೀಘ್ರಂ ಪ್ರಾಪ್ನುಹಿ । ತದನಂತರಂ ಪಿಬ ಪಾನಂ ಕುರು ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯತ್ರ**—ಯಾವ ಯಜಮಾನನಲ್ಲಿ। **ಸೋಮಸ್ಯ**—ಸೋಮಪಾನದಿಂದ। **ತೃಂಪಸಿ**—ನೀನು ತೃಪ್ತಿಯನ್ನು ಹೊಂದುವೆಯೋ। **ದಾಶುಷಃ**—ಹವಿಸ್ಸನ್ನರ್ಪಿಸತಕ್ಕ। **ಸಃ ಜನಃ**—ಅದೇ ಯಜಮಾನನು। **ಸ್ವಯಂ ಚಿತ್**—ಆತ್ಮಪ್ರೇರಣೆಯಿಂದಲೇ। **ಮನ್ಯತೇ**—ಕರ್ತವ್ಯಜ್ಞಾನವನ್ನು ಹೊಂದಿರುತ್ತಾನೆ। **ತೇ**—ನಿನಗೆ। **ಯುಜ್ಯಂ**—ಯೋಗ್ಯವಾದ। **ಇದಂ ಅನ್ನಂ**—ಸೋಮರೂಪವಾದ ಈ ಅನ್ನವು। **ಸುಮುಕ್ಷಿತಂ**—ಪಾತ್ರೆಯಲ್ಲಿ ಸುರಿದು ಸಿದ್ಧವಾಗಿದೆ। **ಏಹಿ**—ದಯಮಾಡು। **ಪ್ರ ದ್ರವ**—ತ್ವರೆಗೊಳಿಸು। **ತಸ್ಯ**—ಅದನ್ನು। **ಪಿಬ**—ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಯಜಮಾನನಲ್ಲಿ ಸೋಮಪಾನದಿಂದ ನೀನು ತೃಪ್ತಿಯನ್ನು ಹೊಂದುವೆಯೋ, ಹವಿಸ್ಸನ್ನರ್ಪಿಸತಕ್ಕ ಅದೇ ಯಜಮಾನನು ಆತ್ಮಪ್ರೇರಣೆಯಿಂದಲೇ ಕರ್ತವ್ಯಜ್ಞಾನವನ್ನು ಹೊಂದಿರುತ್ತಾನೆ. ನಿನಗೆ ಯೋಗ್ಯವಾದ. ಸೋಮರೂಪವಾದ ಅನ್ನವು ಪಾತ್ರೆಯಲ್ಲಿ ಸುರಿದು ಸಿದ್ಧವಾಗಿದೆ. ದಯಮಾಡು. ತ್ವರೆಯಿಂದ ಬಂದು ಅದನ್ನು ಪಾನಮಾಡು.

English Translation

The man who is the donor (of the oblation), he with (the gift of whose) libation you are satisfied, possesses of himself understanding; this your appropriate food is ready; come, hasten, drink of it.

॥ ಸಂಹಿತಾಪಾಠಃ ॥

ರಥೇಷ್ಠಾಯಾಧ್ವರ್ಯವಃ ಸೋಮಮಿಂದ್ರಾಯ ಸೋತನ ।
ಅಧಿ ಬ್ರಧ್ನಸ್ಯಾದ್ರಯೋ ವಿ ಚಕ್ಷತೇ ಸುನ್ವಂತೋ ದಾಶ್ವಧ್ವರಂ ॥ ೧೩ ॥

॥ ಪದಪಾಠಃ ॥

ರಥೇಽಸ್ಥಾಯ । ಅಧ್ವರ್ಯವಃ । ಸೋಮಂ । ಇಂದ್ರಾಯ । ಸೋತನ ।
ಅಧಿ । ಬ್ರಧ್ನಸ್ಯ । ಅದ್ರಯಃ । ವಿ । ಚಕ್ಷತೇ । ಸುನ್ವಂತಃ । ದಾಶುಽಅಧ್ವರಂ ॥ ೧೩ ॥

॥ ಸಾಯಣಭಾಷ್ಯಂ ॥

ರಥೇಷ್ಠಾಯ । ರಥೇ ತಿಷ್ಠತೀತಿ ರಥೇಷ್ಠಾಃ ॥ ಸುಪಿ ಸ್ಥ ಇತಿ ಕಪ್ರತ್ಯಯಃ । ತತ್ಪುರುಷೇ ಕೃತಿ ಬಹುಲಮಿತಿ ಸಪ್ತಮ್ಯಾ ಅಲುಕ್ ॥ ಏವಂಲಕ್ಷಣಾಯೇಂದ್ರಾಯ ಹೇ ಅಧ್ವರ್ಯವಃ ಸೋಮಂ ಸೋತನ।

ಅಭಿಷುಣುತ ॥ ಷುಞ್ ಅಭಿಷವೇ । ಸಪ್ತನಪ್ತನಥನಾಶ್ಚೇತಿ ತನಬಾದೇಶಃ ॥ ಬ್ರಧ್ನಸ್ಯ ಬುಧ್ನಸ್ಯ ಮೂಲಸ್ಯಾಭಿಷವಾರ್ಥಂ ಚರ್ಮಣಿ ಸ್ಥಾಪಿತಸ್ಯೋಪರಾತ್ಮಸ್ಯ ವಿಸ್ತೃತಸ್ಯಾತ್ಮನೋಽಧ್ಯುಪರ್ಯದ್ರಯೋಽನ್ಯೇ ಗ್ರಾವಾಣಶ್ಚತಸೃಷು ದಿಕ್ಷು ವರ್ತಮಾನಾ ದಾಶ್ವಧ್ವರಂ ದಾಶೋರ್ದಾತುರ್ಯಜಮಾನಸ್ಯಾಧ್ವರೋ ಯಾಗೋ ಯೇನ ನಿಷ್ಪದ್ಯತೇ ತಾದೃಶಂ ಸೋಮಂ ಸುನ್ವಂತ ಉತ್ತಿಷ್ಠಾರಪೇಕ್ಷಂ ಸ್ವಯಮೇವಾಭಿಷುಣ್ವಂತೋ ವಿ ಚಕ್ಷತೇ । ವಿಶೇಷೇಣ ಪ್ರಕಾಶಂತೇ । ಸೋಮಾಭಿಷವೇಽತಿಶಯೇನಾನುಕೂಲಾ ವರ್ತಂತ ಇತ್ಯರ್ಥಃ ॥ ಅಥವಾದ್ರಯಸ್ತ್ರ್ಯರದ್ರಿಭಿರ್ಹೇ ಅಧ್ವರ್ಯವಃ ಸೋಮಮಭಿಷುಣುತೇತಿ ಯೋಜ್ಯಂ ॥

। ಪ್ರತಿಪದಾರ್ಥ ।

ಅಧ್ವರ್ಯವಃ—ಎಲೈ ಅಧ್ವರ್ಯುಗಳೇ । ರಥೇಷ್ಠಾಯ—ರಥದಲ್ಲಿ ಕುಳಿತಿರುವ । ಇಂದ್ರಾಯ—ಇಂದ್ರನನ್ನುದ್ದೇಶಿಸಿ । ಸೋಮಂ—ಸೋಮರಸವನ್ನು । ಸೋತನ—ಹಿಂಡಿ ಅರ್ಪಿಸಿರಿ । ಬ್ರಧ್ನಸ್ಯ—ಅಭಿಷವಕರ್ಮಕ್ಕಾಗಿ ಚರ್ಮದಮೇಲಿಟ್ಟಿರುವ ಹಿಂಡುವ ಕಲ್ಲಿನ । ಅಧಿ–ಮೇಲ್ಭಾಗದಲ್ಲಿ । ಅದ್ರಯಃ—ಅದಕ್ಕೆ ಸಾಹಾಯಕವಾಗುವ ಇತರ ಕಲ್ಲುಗಳು । ದಾಶ್ವಧ್ವರಂ—ಯಜಮಾನನ ಯಾಗಕ್ಕೆ ಮುಖ್ಯಸಾಧನವಾದ ಸೋಮವನ್ನು । ಸುನ್ವಂತಃ—ಹಿಂಡುತ್ತಿರುವುದು । ವಿ ಚಕ್ಷತೇ—ಗೋಚರವಾಗುತ್ತಿದೆ.

। ಭಾವಾರ್ಥ ।

ಎಲೈ ಅಧ್ವರ್ಯುಗಳೇ, ರಥದಲ್ಲಿ ಕುಳಿತಿರುವ ಇಂದ್ರನನ್ನುದ್ದೇಶಿಸಿ ಸೋಮರಸವನ್ನು ಹಿಂಡಿ ಅರ್ಪಿಸಿರಿ. ಅಭಿಷವಕರ್ಮಕ್ಕಾಗಿ ಚರ್ಮದ ಮೇಲಿಟ್ಟಿರುವ ಹಿಂಡುವ ಕಲ್ಲಿನ ಮೇಲ್ಭಾಗದಲ್ಲಿ ಅದಕ್ಕೆ ಸಾಹಾಯ್ಯಕವಾಗುವ ಇತರ ಕಲ್ಲುಗಳು ಯಜಮಾನನ ಯಾಗಕ್ಕೆ ಮುಖ್ಯಸಾಧನವಾದ ಸೋಮವನ್ನು ಹಿಂಡುತ್ತಿರುವುದು ಗೋಚರವಾಗುತ್ತಿದೆ.

English Translation

Pour out, priests, the Soma libation to Indra in his chariot: the stones, placed upon their bases, are, behold effusing the Soma for the sacrifice of the offerer.

। ಸಂಹಿತಾಪಾಠಃ ।

ಉಪ ಬ್ರಧ್ನಂ ವಾವಾತಾ ವೃಷಣಾ ಹರೀ ಇಂದ್ರಮಪಸು ವಕ್ಷತಃ ।

ಅರ್ವಾಂಚಂ ತ್ವಾ ಸಪ್ತಯೋಽಧ್ವರಶ್ರಿಯೋ ವಹಂತು ಸವನೇದುಪ ॥೧೪॥

। ಪದಪಾಠಃ ।

ಉಪ । ಬ್ರಧ್ನಂ । ವವಾತಾ । ವೃಷಣಾ । ಹರೀ ಇತಿ । ಇಂದ್ರಂ । ಅಪಸು । ವಕ್ಷತಃ ।

ಅರ್ವಾಂಚಂ । ತ್ವಾ । ಸಪ್ತ್ಯಃ । ಅಧ್ವರಶ್ರಿಯಃ । ವಹಂತು । ಸವನಾ । ಇತ್ । ಉಪ ॥ ೧೪ ॥

। ಸಾಯಣಭಾಷ್ಯಂ ।

ಬ್ರಧ್ನಮಂತರಿಕ್ಷಂ ವಾವಾತಾ ಸಂಭಕ್ತವಂತೌ ॥ ವನತೇರ್ನಿಷ್ಠಾಯಾಂ ಛಾಂದಸಂ ದ್ವಿರ್ವಚನ-ಮಿಡಭಾವ ಆತ್ವಂ ಧಾತುಸ್ವರಶ್ಚ । ಅನ್ಯೇಷಾಮಪಿ ದೃಶ್ಯತ ಇತಿ ಸಾಂಹಿತಿಕೋಽಭ್ಯಾಸದೀರ್ಘಃ ॥ ಯದ್ವಾ । ವಾವಾತಾ ಪುನಃಪುನರ್ಗತೌ ॥ ವಾ ಗತಿಗಂಧನಯೋಃ । ಅಸ್ಮಾದ್ಯಙ್ಲುಗಂತಾತ್ಕರ್ತರಿ ನಿಷ್ಠಾ ॥ ವೃಷಣಾ ವೃಷಣೌ ಸ್ತೋತಾರೌ ಹರೀ ಹರಣಶೀಲಾವಶ್ವಾವುಕ್ತಗುಣೌ ಸಂತಾವಪಸ್ಸ್ವದೀಯೇಷು ಕರ್ಮಸು ॥ ಅಪಸ್ಸಬ್ದಃ ಸಕಾರಾಂತಃ ಕರ್ಮವಚನಃ । ಸೀವ್ಯೋಃಪವಸನಾನಾಂ ಛಂದಸಿ ಲೋಪೋ ವಕ್ತವ್ಯಃ । ಮ. ೬-೩-೧೦೯-೬ । ಇತೀಹ ಸಕಾರಲೋಪ ಲುಪ್ಯತೇ ॥ ತತ್ರೇಮಮಿಂದ್ರಮುಪ ವಕ್ಷತಃ । ಉಪವಹತಾಂ । ಉಪಾನಯತಾಂ ॥ ವಹತೇರ್ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ ॥ ಅಪಿ ಚಾಧ್ವರಶ್ರಿಯೋಽಧ್ವರಂ ಸೇವಮಾನಾಃ ಸಪ್ತಯಃ ಸರ್ಪಣಶೀಲಾ ಅನ್ಯೇಽಪಿ ತ್ವದೀಯಾ ಅಶ್ವಾಃ ಸವನಾ ಸವನಾನಿ ಪ್ರಾತಃಸವನಾದೀನ್ಯಸ್ಮದ್ಯಾಗಸಂಬಂಧೀನಿ ಪ್ರತಿ ಹೇ ಇಂದ್ರ ತ್ವಾಮರ್ವಾಂಚಮಭಿಮುಖಮುಪ ವಹಂತು । ಉಪಗಮಯಂತು । ಇದಿತಿ ಪೂರಕಃ ॥

। ಪ್ರತಿಪದಾರ್ಥ ।

ಬ್ರಧ್ನಂ—ಅಂತರಿಕ್ಷದಲ್ಲೆಲ್ಲಾ । ವಾವಾತಾ—ಸಂಚರಿಸುವುವೂ । ವೃಷಣಾ—ವೃಷ್ಟಿಕಾರಕವೂ ಆದ । ಹರೀ—ಇಂದ್ರನ ಅಶ್ವಗಳು । ಅಪಸು—ನಮ್ಮ ಕರ್ಮಗಳಿಗೆ । ಇಂದ್ರಂ—ಇಂದ್ರನನ್ನು । ಉಪ ವಕ್ಷತಃ—ಕರೆತರಲಿ (ಎಲೈ ಇಂದ್ರನೇ!) । ಅಧ್ವರಶ್ರಿಯಃ—ಯಜ್ಞವನ್ನು ಸೇವಿಸುವ । ಸಪ್ತಯಃ—ನಿನ್ನ ಇತರ ಅಶ್ವಗಳೂ ಸಹ । ಸವನಾ—ನಮ್ಮ ಪ್ರಾತಃಸವನಾದಿಗಳಿಗೆ । ಅರ್ವಾಂಚಂ—ಅಭಿಮುಖವಾಗಿ । ತ್ವಾ—ನಿನ್ನನ್ನು । ಉಪ ವಹಂತು—ಕರೆತರಲಿ.

। ಭಾವಾರ್ಥ ।

ಅಂತರಿಕ್ಷದಲ್ಲೆಲ್ಲಾ ಸಂಚರಿಸುವುವೂ, ವೃಷ್ಟಿಕಾರಕವೂ ಆದ ಇಂದ್ರನ ಅಶ್ವಗಳು ನಮ್ಮ ಕರ್ಮಗಳಿಗೆ ಇಂದ್ರನನ್ನು ಕರೆತರಲಿ. ಎಲೈ ಇಂದ್ರನೇ, ಯಜ್ಞವನ್ನು ಸೇವಿಸುವ ನಿನ್ನ ಇತರ ಅಶ್ವಗಳೂ ಸಹ ನಮ್ಮ ಪ್ರಾತಃಸವನಾದಿಗಳಿಗೆ ಅಭಿಮುಖವಾಗಿ ನಿನ್ನನ್ನು ಕರೆತರಲಿ.

## English Translation

May his vigorous horses, repeatedly traversing the firmament, bring Indra to our rites; may your steeds, glorious through sacrifice, bring you down indeed to the (daily) ceremonials.

। ಸಂಹಿತಾಪಾಠಃ ।

ಪ್ರ ಪೂಷಣಂ ವೃಣೀಮಹೇ ಯುಜ್ಯಾಯ ಪುರೂವಸುಂ ।
ಸ ಶಕ್ರ ಶಿಕ್ಷ ಪುರುಹೂತ ನೋ ಧಿಯಾ ತುಜೇ ರಾಯೇ ವಿಮೋಚನ ॥

। ಪದಪಾಠಃ ।

ಪ್ರ । ಪೂಷಣಂ । ವೃಣೀಮಹೇ । ಯುಜ್ಯಾಯ । ಪುರುಽವಸುಂ ।
ಸಃ । ಶಕ್ರ । ಶಿಕ್ಷ । ಪುರುಽಹೂತ । ನಃ । ಧಿಯಾ । ತುಜೇ । ರಾಯೇ । ವಿಽಮೋಚನ ॥ ೧೫ ॥

। ಸಾಯಣಭಾಷ್ಯಂ ।

ಇದಮಾದ್ಯಾಸು ಚತಸೃಷು ಪೂಷ್ಣ ಇಂದ್ರಸ್ಯ ಚ ಲಿಂಗಸದ್ಭಾವಾದೇತಾ ಉಭಯಥಾ ವ್ಯಾಖ್ಯಾಯಂತೇ । ಪುರೂವಸುಂ ಬಹುಧನಂ ಪೂಷಣಂ ಪೋಷಕಮಿಂದ್ರಂ ಯದ್ವೈತತ್ಸಂಜ್ಞಂ ದೇವಂ ಪ್ರ ವೃಣೀಮಹೇ । ಪ್ರಕರ್ಷೇಣ ಸಂಭಜಾಮಹೇ । ಕಿಮರ್ಥಂ । ಯುಜ್ಯಾಯ । ಯುಂಕ್ತ ಇತಿ ಯುಜ್ ಸಖಾ । ತಸ್ಯ ಭಾವಾಯ । ಸಖಿತ್ವಾಯೇತ್ಯರ್ಥಃ । ಹೇ ಶಕ್ರ ಶಕ್ತ ಪುರುಹೂತ ಬಹುಭಿರಾಹೂತ ಹೇ ವಿಮೋಚನ ಪಾಪಾದ್ವಿಮೋಚಯಿತರಿಂದ್ರ ಪೂಷನ್ವಾ ಸ ತ್ವಂ ನೋಽಸ್ಮಾನ್ ಧಿಯಾತ್ಮೀಯಯಾ ಬುದ್ಧ್ಯಾ ಶಿಕ್ಷ । ಶಕ್ತಾನ್ ಕರ್ತುಮಿಚ್ಛ । ಕಿಮರ್ಥಂ । ರಾಯೇ ಧನಾಯ ಧನಪ್ರಾಪ್ತ್ಯರ್ಥಂ ತುಜೇ ಶತ್ರೂಂಸ್ತೋಜಯಿತುಂ ಹಿಂಸಿತುಂ ॥ ತುಜ ಹಿಂಸಾಯಾಂ । ಅಸ್ಮಾತ್ಕ್ವಿತ್ಯರ್ಥೇ ಕೇನ್ಪ್ರತ್ಯಯಃ ॥ ಯದ್ವಾ । ರಾಯ ಇತಿ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ । ಜಾತಾವೇಕವಚನಂ ॥ ರಾಯೋ ಧನಾನಿ ಧಿಯಾ ಸ್ತುತ್ಯಾ ಪ್ರೀತಃ ಸನ್ನಸ್ಮಭ್ಯಂ ಶಿಕ್ಷ । ದೇಹಿ ॥ ಶಿಕ್ಷತಿರ್ದಾನ ಕರ್ಮಾ । ಊಡಿದಮಿತಿ ರಾಯೋ ವಿಭಕ್ತಿರುದಾತ್ತಾ ॥

। ಪ್ರತಿಪದಾರ್ಥ ।

ಪುರೂವಸುಂ—ಪ್ರಭೂತವಾದ ಧನವುಳ್ಳ । ಪೂಷಣಂ—ಪೂಷದೇವನನ್ನು (ಅಥವಾ ಜಗತ್ಪೋಷಕನಾದ ಇಂದ್ರನನ್ನು) । ಯುಜ್ಯಾಯ—ಅವನೊಡನೆ ಸಖಿತ್ವಸಂಪಾದನೆಗಾಗಿ । ಪ್ರ ವೃಣೀಮಹೇ— ಪ್ರಾರ್ಥಿಸುತ್ತಾ ಆರಾಧಿಸುತ್ತೇವೆ । ಶಕ್ರ—ಶಕ್ತಿಯುತನಾದವನೂ । ಪುರುಹೂತ—ಅನೇಕರ ಆಹ್ವಾನಕ್ಕೆ ಪಾತ್ರನೂ । ವಿಮೋಚನ—ಪಾಪದಿಂದ ಬಿಡುಗಡೆಮಾಡುವವನೂ ಆದ ಎಲೈ ದೇವನೇ । ಸಃ—ಅಂತಹ ನೀನು । ನಃ—ನಮ್ಮನ್ನು । ಧಿಯಾ—ನಿನ್ನ ಉತ್ತಮಬುದ್ಧಿಯಿಂದ । ರಾಯೇ—ಧನಸಂಪಾದನೆಗೂ । ತುಜೇ—ಶತ್ರುಗಳನ್ನು ಹಿಂಸಿಸುವುದಕ್ಕೂ । ಶಿಕ್ಷ—ಶಕ್ತರನ್ನಾಗಿ ಮಾಡು.

। ಭಾವಾರ್ಥ ।

ಪ್ರಭೂತವಾದ ಧನವುಳ್ಳ ಪೂಷದೇವನನ್ನು ಅವನೊಡನೆ ಸಖಿತ್ವಸಂಪಾದನೆಗಾಗಿ ಪ್ರಾರ್ಥಿಸುತ್ತಾ ಆರಾಧಿಸು

ತ್ರೇವೆ. ಶಕ್ತಿಯುತನೂ, ಅನೇಕರ ಆಹ್ವಾನಕ್ಕೆ ಪಾತ್ರನೂ ಪಾಪದಿಂದ ಬಿಡುಗಡೆಮಾಡುವವನೂ ಆದ ಎಲೈ ದೇವನೇ, ಅಂತಹ ಪ್ರಸಿದ್ಧನಾದ ನೀನು ನಮ್ಮನ್ನು ನಿನ್ನ ಉತ್ತಮವಾದ ಬುದ್ಧಿಯಿಂದ ಧನಸಂಪಾದನೆಗೂ, ಶತ್ರುಗಳನ್ನು ಹಿಂಸಿಸುವುದಕ್ಕೂ ಶಕ್ತರನ್ನಾಗಿ ಮಾಡು.

## Englisn Translation

We have recourse to the opulent Pushan for his alliance; you Shakra, the adored of many, the liberator (from iniquity), enable us to acquire by our intelligence, wealth and victory.

। ಸಂಹಿತಾಪಾಠಃ ।

ಸಂ ನಃ ಶಿಶೀಹಿ ಭುರಿಜೋರಿವ ಕ್ಷುರಂ ರಾಸ್ವ ರಾಯೋ ವಿಮೋಚನ ।

ತ್ವೇ ತನ್ನಃ ಸುವೇದಮುಸ್ರಿಯಂ ವಸು ಯಂ ತ್ವಂ ಹಿನೋಷಿ ಮರ್ತ್ಯಂ ॥

। ಪದಪಾಠಃ ।

ಸಂ । ನಃ । ಶಿಶೀಹಿ । ಭುರಿಜೋಃऽಇವ । ಕ್ಷುರಂ । ರಾಸ್ವ । ರಾಯಃ । ವಿऽಮೋಚನ ।

ತ್ವೇ ಇತಿ । ತತ್ । ನಃ । ಸುऽವೇದಂ । ಉಸ್ರಿಯಂ । ವಸು । ಯಂ । ತ್ವಂ । ಹಿನೋಷಿ । ಮರ್ತ್ಯಂ ॥

। ಸಾಯಣಭಾಷ್ಯಂ ।

ಹೇ ಇಂದ್ರ ಪೂಷನ್ವಾ ನೋऽಸ್ಮಾನ್ ಸಂ ಶಿಶೀಹಿ । ಸಮ್ಯಕ್ಛಾಧಿ । ತೀಕ್ಷ್ಣಬುದ್ಧೀನ್ ಕುರು । ಭುರಿಜೋರಿವ । ಬಾಹುನಾಮೈತತ್ । ನಾಪಿತಸ್ಯ ಬಾಹ್ವೋರಿವ ಸ್ಥಿತಂ ಕ್ಷುರಮಿವ । ಅಪಿ ಚ ಹೇ ವಿಮೋಚನ ಪಾಪಾದ್ವಿಮೋಚನ ಪಾಪಾದ್ವಿಮೋಚಯಿತಃ ರಾಯೋ ಧನಾನಿ ರಾಸ್ವ । ಅಸ್ಮಭ್ಯಂ ದೇಹಿ ॥ ರಾ ದಾನೇ ॥ ತತ್ಕಸ್ಯ ಹೋತೋಃ । ತ್ವೇ ತ್ವಯಿ ಖಲೂಸ್ರಿಯಂ । ಉಸ್ರಾ ಗಾವಃ । ತತ್ಸಂಬದ್ಧಂ ತದ್ವಸು ನಿವಾಸಕಂ ಧನಂ ನೋऽಸ್ಮಾಕಂ ಸುವೇದಂ ಸುಲಭಂ ನಾನ್ಯೇಷು ದೇವೇಷು । ಯಂ ಧನಸಮೂಹಂ ಮರ್ತ್ಯಂ ಮನುಷ್ಯಂ ಸ್ತೋತಾರಂ ಪ್ರತಿ ತ್ವಂ ಹಿನೋಷಿ ಪ್ರೇರಯಸಿ ತದ್ವಸು ತ್ವಯಿ ಆತ್ಮನ್ಯಸ್ತಿ ಯತಃ ॥ ಯತ ಏವಂ ತಸ್ಮಾದ್ರಾಸ್ವೇತಿ ಯೋಜ್ಯಂ ॥

। ಪ್ರತಿಪದಾರ್ಥ ।

(ಎಲೈ ಪೂಷದೇವನೇ) ಭುರಿಜೋಃ—ಕ್ಷೌರಕನ । ಕ್ಷುರಂ ಇವ—ಕತ್ತಿಯು ಅತ್ಯಂತ ತೀಕ್ಷ್ಣವಾಗಿರುವಂತೆ । ನಃ—ನಮ್ಮನ್ನು । ಸಂ ಶಿಶೀಹಿ—ತೀಕ್ಷ್ಣಬುದ್ಧಿಯುಳ್ಳವರನ್ನಾಗಿ ಮಾಡು । ವಿಮೋಚನ—ಪಾಪದಿಂದ ಬಿಡುಗಡೆಮಾಡತಕ್ಕ ಎಲೈ ದೇವನೇ । ಯಂ— ಯಾವ ಧನಸಮೂಹವನ್ನು । ಮರ್ತ್ಯಂ—ಸ್ತುತಿಕರ್ತನಾದ

ಮಾನವನಿಗೆ । ತ್ವಂ—ನೀನು । ಹಿನೋಷಿ—ಕಳುಹಿಸಿ ಕೊಡುವೆಯೋ । ತತ್—ಅಂತಹ । ಉಸ್ರಿಯಂ—ಗೋಸಂಬಂಧಿಯಾದ । ವಸು—ಧನವು । ನಃ—ನಮಗೆ । ತ್ವೇ—ನಿನ್ನಲ್ಲಿಯೇ । ಸುವೇದಂ—ಸುಲಭವಾಗಿ ಸಿಕ್ಕತಕ್ಕದ್ದಾಗಿದೆ । ರಾಯಃ—ಅದೇ ಧನಗಳನ್ನು । ರಾಸ್ವ—ನಮಗೆ ಒದಗಿಸು.

। ಭಾವಾರ್ಥ ।

ಎಲೈ ಪೂಷದೇವನೇ, ಕ್ಷೌರಕನ ಕತ್ತಿಯು ಅತ್ಯಂತ ತೀಕ್ಷ್ಣವಾಗಿರುವಂತೆ ನಮ್ಮನ್ನು ತೀಕ್ಷ್ಣಬುದ್ಧಿಯುಳ್ಳವರನ್ನಾಗಿ ಮಾಡು. ಪಾಪದಿಂದ ಬಿಡುಗಡೆಮಾಡತಕ್ಕ ಎಲೈ ದೇವನೇ, ಯಾವ ಧನಸಮೂಹವನ್ನು ಸ್ತುತಿಕರ್ತನಾದ ಮಾನವನಿಗೆ ನೀನು ಕಳುಹಿಸಿಕೊಡುವೆಯೋ ಅಂತಹ ಗೋಸಂಬಂಧಿಯಾದ ಧನವು ನಮಗೆ ನಿನ್ನಲ್ಲಿಯೇ ಸುಲಭವಾಗಿ ಸಿಕ್ಕತಕ್ಕದ್ದಾಗಿದೆ. ಅದೇ ಧನಗಳನ್ನು ನಮಗೆ ಒದಗಿಸಿಕೊಡು.

## English Translation

Sharpen us like a razor in the hands (of a barber): grant us riches, liberator (from iniquity), the wealth of cattle easily obtained by us from you, such wealth as you bestow upon the (pious) mortal.

॥ ಸಂಹಿತಾಪಾಠಃ ॥

ವೇಮಿ ತ್ವಾ ಪೂಷನ್ನೃಂಜಸೇ ವೇಮಿ ಸ್ತೋತವ ಆಘೃಣೇ ।
ನ ತಸ್ಯ ವೇಮ್ಯರಣಂ ಹಿ ತದ್ವಸೋ ಸ್ತುಷೇ ಪಜ್ರಾಯ ಸಾಮ್ನೇ ॥ ೯ ॥

। ಪದಪಾಠಃ ।

ವೇಮಿ । ತ್ವಾ । ಪೂಷನ್ । ಋಂಜಸೇ । ವೇಮಿ । ಸ್ತೋತವೇ । ಆಘೃಣೇ ।
ನ । ತಸ್ಯ । ವೇಮಿ । ಅರಣಂ । ಹಿ । ತತ್ । ವಸೋ ಇತಿ । ಸ್ತುಷೇ । ಪಜ್ರಾಯ । ಸಾಮ್ನೇ ॥ ೧೬ ॥

। ಸಾಯಣಭಾಷ್ಯಂ ।

ಹೇ ಪೂಷನ್ ಪೋಷಕೇಂದ್ರ ಏತತ್ಸಂಜ್ಞ ವಾ ದೇವ ತ್ವಾ ತ್ವಾಮೃಂಜಸೇ ಪ್ರಸಾಧಯಿತುಂ ವೇಮಿ । ಕಾಮಯೇ । ಆಘೃಣೇ ಆಗತದೀಪ್ತೇ ಸ್ತೋತವೇ ತ್ವಾಂ ಸ್ತೋತುಂ ವೇಮಿ । ಕಾಮಯೇ । ಯತ್ತ್ವದ್ವ್ಯತಿರಿಕ್ತಂ ದೇವತಾಂತರಂ ತಸ್ಯ ಸ್ತೋತ್ರಂ ನ ವೇಮಿ । ನ ಕಾಮಯೇ । ತತ್ಕುತ ಇತಿ ಚೇತ್ । ಹಿ ಯಸ್ಮಾದರಣಮರಣಮಸುಖಕರಂ । ಅತಸ್ತ್ವಮೇವ ಸ್ತೋತುಂ ಕಾಮಯ ಇತ್ಯರ್ಥಃ । ಹೇ ವಸೋ ವಾಸಕ ಸ್ತುಷೇ ಸ್ತುವತೇ ಪಜ್ರಾಯ ಪ್ರಾರ್ಜಕಾಯ ಸ್ತೋತ್ರಾಣಾಂ ಸಾಮ್ನೇ । ಸಾಮ ಸ್ತೋತ್ರಂ । ಸಾಮಶಬ್ದಾದತ್ರ ತದ್ವಾನ್ಲಕ್ಷ್ಯತೇ । ತದ್ವತೇ । ಯದ್ವಾ । ಪಜ್ರ ಇತಿ ಕಕ್ಷೀವತ ಆಖ್ಯಾ ।

ಅಮ್ನಾತಂ ಹಿ । ಯದ್ವಾಂ ಪಜ್ರಾಸೋ ಅಶ್ವಿನಾ ಹವಂತೇ । ಋಗ್ವೇ. ೧.೧೧೭-೧೦ । ಇತಿ ತಸ್ಯ ಕಕ್ಷೀವತ ಇವ ಮಹ್ಯಂ । ಸಾಮರ್ಥ್ಯಾದುಪಮಾರ್ಥೋ ಲಭ್ಯತೇ । ಅಪೇಕ್ಷಿತಂ ಧನಂ ದೇಹೀತಿ ಶೇಷಃ ॥

॥ ಪ್ರತಿಪದಾರ್ಥ ॥

**ಪೂಷನ್**—ಎಲೈ ಪೂಷದೇವನೇ । **ತ್ವಾ**—ನಿನ್ನನ್ನು । **ಯುಂಜಸೇ**—ಆರಾಧಿಸಲು । **ವೇಮಿ**—ನಾನು ಇಚ್ಛಿಸುತ್ತೇನೆ । **ಆಘೃಣೇ**—ಅಧಿಕವಾದ ಪ್ರಭಾಯುತನಾದ ಎಲೈ ದೇವನೇ । **ಸ್ತೋತವೇ**—ನಿನ್ನನ್ನು ಸ್ತುತಿಸಲು। **ವೇಮಿ**—ನಾನು ಇಚ್ಛಿಸುತ್ತೇನೆ । **ತಸ್ಯ**—ನೀನಲ್ಲದೇ ಬೇರೆ ದೇವನ ಸ್ತುತಿಯನ್ನು । **ನ ವೇಮಿ**—ನಾನು ಇಚ್ಛಿಸುವುದಿಲ್ಲ । **ಹಿ**—ಏತಕ್ಕೆಂದರೆ । **ತತ್ ಅರಣಂ**—ಅದು ಸುಖಸಾಧನವಾದುದಲ್ಲ । **ವಸೋ**—ವಸತಿದಾಯಕನಾದ ಎಲೈ ಪೂಷನೇ। **ಸ್ತುಷೇ**—ಸ್ತುತಿಸುವವನಿಗೂ। **ಪಜ್ರಾಯ**—ಸ್ತುತಿನಿರ್ಮಾಪಕನಿಗೂ । **ಸಾಮ್ನೇ**—ಸಾಮಗಾನಗಳನ್ನು ಪಠಿಸುವವನಿಗೂ (ಧನವನ್ನು ಒದಗಿಸು).

॥ ಭಾವಾರ್ಥ ॥

ಎಲೈ ಪೂಷದೇವನೇ, ನಿನ್ನನ್ನು ಆರಾಧಿಸಲು ನಾನು ಇಚ್ಛಿಸುತ್ತೇನೆ. ಅತ್ಯಧಿಕವಾಗಿ ಪ್ರಭೆಯನ್ನು ಹೊಂದಿರುವ ಎಲೈ ದೇವನೇ, ನಿನ್ನನ್ನು ಸ್ತುತಿಸಲು ನಾನು ಇಚ್ಛಿಸುತ್ತೇನೆ. ನೀನಲ್ಲದೇ, ಬೇರೆ ಯಾವ ದೇವನ ಸ್ತುತಿಯನ್ನೂ ನಾನು ಇಚ್ಛಿಸುವುದಿಲ್ಲ. ಏತಕ್ಕೆಂದರೆ ಅದು ಸುಖಸಾಧನವಾದುದಲ್ಲ. ವಸತಿದಾಯಕನಾದ ಎಲೈ ಪೂಷನೇ, ಸ್ತುತಿಸುವವನಿಗೂ, ಸ್ತುತಿನಿರ್ಮಾಪಕನಿಗೂ ಮತ್ತು ಸಾಮಪಾಠಕನಿಗೂ ಧನವನ್ನು ಒದಗಿಸಿಕೊಡು.

## English Translation

I desire, Pushan, to propitiate you; I desire, illustrious deity, to glorify you: I desire not (to offer) ungracious praise to any other; (grant riches), bestower of wealth, to him who praises, eulogises, and glorifies you.

॥ ಸಂಹಿತಾಪಾಠಃ ॥

ಪರಾ ಗಾವೋ ಯವಸಂ ಕಚ್ಚಿದಾಘೃಣೇ ನಿತ್ಯಂ ರೇಕ್ಣೋ ಅಮರ್ತ್ಯ ।
ಅಸ್ಮಾಕಂ ಪೂಷನ್ನವಿತಾ ಶಿವೋ ಭವ ಮಂಹಿಷ್ಠೋ ವಾಜಸಾತಯೇ ॥೧೮॥

॥ ಪದಪಾಠಃ ॥

ಪರಾ । ಗಾವಃ । ಯವಸಂ । ಕತ್ । ಚಿತ್ । ಆಘೃಣೇ । ನಿತ್ಯಂ । ರೇಕ್ಣಃ । ಅಮರ್ತ್ಯ ।
ಅಸ್ಮಾಕಂ । ಪೂಷನ್ । ಅವಿತಾ । ಶಿವಃ । ಭವ । ಮಂಹಿಷ್ಠಃ । ವಾಜ್ಯಸಾತಯೇ ॥ ೧೮ ॥

। ಸಾಯಣಭಾಷ್ಯಂ ।

ಹೇ ಆಘೃಣ ಆಗತದೀಪ್ತೇ ಪೂಷನ್ನಿಂದ್ರ ವಾ ಕಚ್ಚಿತ್ ಕಸ್ಮಿಂಶ್ಚಿತ್ಕಾಲೇಽಸ್ಮದೀಯಾ ಗಾವೋ ಯವಸಂ ತೃಣಂ ಭಕ್ಷಿತುಂ ಪರಾ ಗಚ್ಛಂತಿ । ಹೇ ಅಮರ್ತ್ಯಾಮರಣ ದೇವ ತದಾನೀಂ ರೇಕ್ಣಸ್ತದ್ಗೋರೂಪಂ ಧನಂ ನಿತ್ಯಮಸ್ಮಾಕಂ ಧ್ರುವಮಸ್ತು । ಚೋರವ್ಯಾಘ್ರಾದಿಭಿರ್ಹಿಂಸಿತಂ ಮಾ ಭೂತ್ । ಅಪಿ ಚ ಹೇ ಪೂಷನ್ ಪೋಷಯಿತಃ ಅಸ್ಮಾಕಮವಿತಾ ರಕ್ಷಿತಾ ಭೂತ್ವಾ ಶಿವಃ ಸುಖಕರೋ ಭವ । ತಥಾ ವಾಜಸಾತಯೇ ವಾಜಸ್ಯಾನ್ನಸ್ಯ ಬಲಸ್ಯ ವಾ ಸಂಭಜನಾರ್ಥಂ ಮಂಹಿಷ್ಠೋ ದಾತೃತಮೋ ಭವ ॥

॥ ಪ್ರತಿಪದಾರ್ಥ ॥

ಆಘೃಣೇ—ಅತ್ಯಧಿಕವಾದ ಪ್ರಭೆಯುಳ್ಳ ಎಲೈ ಪೂಷದೇವನೇ । ಕಚ್ಚಿತ್—ಕೆಲವು ವೇಳೆಗಳಲ್ಲಿ । ಗಾವಃ—ನಮ್ಮ ಗೋವುಗಳು । ಯವಸಂ-ತೃಣವನ್ನು ಭಕ್ಷಿಸಲು । ಪರಾ-ಹೊರಕ್ಕೆ ಹೋಗುತ್ತವೆ । ಅಮರ್ತ್ಯ—ಮರಣ ಧರ್ಮರಹಿತನಾದ ಎಲೈ ದೇವನೇ । ರೇಕ್ಣಃ-ಗೋರೂಪವುಳ್ಳ ಆ ಧನವನ್ನು । ನಿತ್ಯಂ-ನಮಗೆ ಶಾಶ್ವತವಾಗಿರುವಂತೆ ಮಾಡು । ಪೂಷನ್—ಪೋಷಕನಾದ ಎಲೈ ದೇವನೇ । ಅಸ್ಮಾಕಂ—ನಮಗೆ । ಅವಿತಾ—ರಕ್ಷಕನಾಗಿಯೂ । ಶಿವಃ—ಮಂಗಳಕರನಾಗಿಯೂ । ಭವ—ಆಗಿರು । ವಾಜಸಾತಯೇ—ಅನ್ನಲಾಭಾರ್ಥವಾಗಿ । ಮಂಹಿಷ್ಠಃ—ಅತ್ಯಧಿಕವಾದ ಉದಾರಿಯಾಗಿ ದಾನಮಾಡು.

। ಭಾವಾರ್ಥ ।

ಅತ್ಯಧಿಕವಾದ ಪ್ರಭೆಯುಳ್ಳ ಎಲೈ ಪೂಷದೇವನೇ, ನಮ್ಮ ಗೋವುಗಳು ತೃಣವನ್ನು ಭಕ್ಷಿಸಲು ಕೆಲವು ವೇಳೆ ಹೊರಕ್ಕೆ ಹೋಗುತ್ತವೆ. ಮರಣಧರ್ಮರಹಿತನಾದ ಎಲೈ ದೇವನೇ, ಗೋರೂಪವುಳ್ಳ ಆ ಧನವನ್ನು ನಮಗೆ ಶಾಶ್ವತವಾಗಿರುವಂತೆ ಮಾಡು. ಪೋಷಕನಾದ ಎಲೈ ದೇವನೇ, ನಮಗೆ ರಕ್ಷಕನಾಗಿಯೂ, ಮಂಗಳಕರನಾಗಿಯೂ ಆಗಿರು ಅನ್ನಲಾಭಾರ್ಥವಾಗಿ ಅತ್ಯಧಿಕವಾದ ಉದಾರಿಯಾಗಿ ದಾನಮಾಡುವವನಾಗಿರು

## English Translation

Illustrious (Pushan), my cattle go forth occasionally to pasture, may that wealth (of herds), immortal deity, be permanent ; being my protector, Pushan, be the granter of felicity, be most bountiful in bestowing food.

। ಸಂಹಿತಾಪಾಠಃ ।

ಸ್ಥೂರಂ ರಾಧಃ ಶತಾಶ್ವಂ ಕುರುಂಗಸ್ಯ ದಿವಿಷ್ಟಿಷು ।
ರಾಜ್ಞಸ್ತ್ವೇಷಸ್ಯ ಸುಭಗಸ್ಯ ರಾತಿಷು ತುರ್ವಶೇಷ್ವಮನ್ಮಹಿ ॥ ೧೯ ॥

॥ ಪದಪಾಠಃ ॥

ಸ್ಥೂರಂ । ರಾಧಃ । ಶತಽಅಶ್ವಂ । ಕುರುಂಗಸ್ಯ । ದಿವಿಷ್ಟಿಷು ।

ರಾಜ್ಞಃ । ತ್ವೇಷಸ್ಯ । ಸುಭಗಸ್ಯ । ರಾತಿಷು । ತುರ್ವಶೇಷು । ಅಮನ್ಮಹಿ ॥ ೧೯ ॥

॥ ಸಾಯಣಭಾಷ್ಯಂ ॥

ಇದಮಾದಿಕೇನ ತೃಚೇನ ದೇವಾತಿಥಿಃ ಕುರುಂಗನಾಮ್ನೋ ರಾಜ್ಞೋ ದಾನಂ ಸ್ತೌತಿ । ಕುರುಂಗಸ್ಯ । ಕುರೂಞ್ಶತ್ರೂಂಗಚ್ಛತಿ ಕುಲಂ ಗಚ್ಛತೀತಿ ವಾ ಕುರುಂಗಃ ॥ ಡೋಽನ್ಯತ್ರಾಪಿ ದೃಶ್ಯತ ಇತಿ ಗಮೇರ್ಡಃ । ಪೃಷೋದರಾದಿಃ ॥ ಏತತ್ಸಂಜ್ಞಸ್ಯ ತ್ವೇಷಸ್ಯ ದೀಪ್ತಸ್ಯ ಸುಭಗಸ್ಯ ಶೋಭನಧನಸ್ಯ ಏವಂಭೂತಸ್ಯ ರಾಜ್ಞಃ ಸಂಬಂಧಿನೀಷು ದಿವಿಷ್ಟಿಷು ದಿವಃ ಸ್ವರ್ಗಸ್ಯೈಷಣೀಷು ಪ್ರಾಪ್ತಿಹೇತುಭೂತಾಸು ಯಾಗಕ್ರಿಯಾಸು ರಾತಿಷು ದಾನೇಷು ದಕ್ಷಿಣಾರೂಪೇಷು ಸತ್ಸು ತುರ್ವಶೇಷು । ಮನುಷ್ಯನಾಮೈತತ್ ॥ ನಿರ್ಧಾರಣೇ ಸಪ್ತಮೀ ॥ ಮನುಷ್ಯೇಷು ಮಧ್ಯೇ ವಯಂ ಸ್ಥೂರಂ ಸ್ಥೂಲಂ ಪ್ರಭೂತಂ ಶತಾಶ್ವಮಶ್ವಾನಾಂ ಶತೇನ ಯುಕ್ತಂ ರಾಧೋ ಧನಮಮನ್ಮಹಿ । ಅಜ್ಞಾಸಿಷ್ಮ । ಅಲಭಾಮಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ತ್ವೇಷಸ್ಯ**—ಕಾಂತಿಯುತನೂ । **ಸುಭಗಸ್ಯ**—ಉತ್ತಮವಾದ ಧನವುಳ್ಳವನೂ । **ಕುರುಂಗಸ್ಯ**—ಕುರುಂಗ ಸಂಜ್ಞಕನೂ ಆದ । **ರಾಜ್ಞಃ**—ರಾಜನ । **ದಿವಿಷ್ಟಿಷು**—ಸ್ವರ್ಗಪ್ರಾಪಕವಾದ ಯಾಗಕಾಲದಲ್ಲಿ ಆಚರಿಸಿದ । **ರಾತಿಷು**—ದಕ್ಷಿಣಾರೂಪವಾದ ದಾನಗಳಲ್ಲಿ । **ತುರ್ವಶೇಷು**—ಉಳಿದೆಲ್ಲಾ ಜನರಲ್ಲಿಯೂ ನಾವೇ । **ಸ್ಥೂರಂ**—ಪ್ರಭೂತವಾದುದೂ । **ಶತಾಶ್ವಂ**—ಶತಸಂಖ್ಯಾಕವಾದ ಅಶ್ವವುಳ್ಳದ್ದೂ ಆದ । **ರಾಧಃ**—ಧನವನ್ನು । **ಅಮನ್ಮಹಿ**—ಪಡೆದಿದ್ದೇವೆ.

॥ ಭಾವಾರ್ಥ ॥

ಕಾಂತಿಯುತನೂ, ಉತ್ತಮವಾದ ಧನವುಳ್ಳವನೂ, ತುರಂಗಸಂಜ್ಞಕನೂ ಆದ ರಾಜನಿಂದ ನೆರವೇರಲ್ಪಟ್ಟುದೂ ಸ್ವರ್ಗಪ್ರಾಪಕವೂ ಆದ ಯಾಗಕಾಲದಲ್ಲಿ ಆಚರಿಸಿದ ದಕ್ಷಿಣಾರೂಪವಾದ ದಾನಗಳಲ್ಲಿ ಉಳಿದೆಲ್ಲ ಜನರ ನಡುವೆ ನಾವೇ ಪ್ರಭೂತವಾದುದೂ, ಶತಸಂಖ್ಯಾಕವಾದುದೂ ಆದ ಧನವನ್ನು ಪಡೆದಿದ್ದೇವೆ.

## English Translation

We acknowledge the substantial wealth (of the gift) of a hundred horses, the donation made to us amongst men at the holy solemnities of the illustrious and auspicious Raja Kuranga.

॥ ವಿಶೇಷವಿಷಯಗಳು ॥

ಈ ಋಕ್ಕಿನ ಪೂರ್ವಾರ್ಧಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ದಿವಿಷ್ಟಿಷು ದಿವ ಏಷಣೇಷು । ಸ್ಫೂರಂ ರಾಧಃ ಶತಾಶ್ವಂ ಕುರುಂಗಸ್ಯ ದಿವಿಷ್ಟಿಷು । ಸ್ಫೂರಃ ಸಮಾಶ್ರಿತಮಾತ್ರೋ ಮಹಾನ್ ಭವತ್ಯಣುರನು ಸ್ಥವೀಯಾಂಸಮುಪಸರ್ಗೋ ಲುಪ್ತನಾಮಕರಣೋ ಯಥಾ ಸಂಪ್ರತಿ । ಕುರುಂಗೋ ರಾಜಾ ಬಭೂವ ಕುರುಗಮನಾದ್ವಾ ಕುಲಗಮನಾದ್ವಾ । ಕುರುಃ ಕೃಂತತೇಃ । ಕೂರಮಿತ್ಯಪ್ಯಸ್ಯ ಭವತಿ । ಕುಲಂ ಕುಷ್ಣಾತೇರ್ವಿಕುಷಿತಂ ಭವತಿ ॥**

(ನಿ. ೬-೨೨)

**ದಿವಿಷ್ಟಿಷು** ಎಂಬ ಶಬ್ದಕ್ಕೆ ಸ್ವರ್ಗವನ್ನು ಹೊಂದುವುದಕ್ಕೆ ಸಾಧನವಾದ (ಯಜ್ಞಾದಿ) ಕರ್ಮಗಳು ಎಂದರ್ಥವು. ಈ ಶಬ್ದದ ಅರ್ಥವನ್ನು ವಿವರಿಸುವುದಕ್ಕಾಗಿ ಪ್ರಕೃತ ಋಕ್ಕಿನ—**ಸ್ಫೂರಂ ರಾಧಃ ಶತಾಶ್ವಂ ಕುರುಂಗಸ್ಯ ದಿವಿಷ್ಟಿಷು** ಎಂಬ ಪೂರ್ವಾರ್ಧವನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅದಕ್ಕೂ ನಿರ್ವಚನವನು ಹೇಳಿದಾರೆ. ಎಂದರೆ ಕುರುಂಗರಾಜನು ಮಾಡಿದ ಯಜ್ಞದಲ್ಲಿ ನೂರಾರು ಅಶ್ವಗಳೂ, ಇತರವಸ್ತುಗಳೂ, ಧನಗಳೂ ಮೊದಲಾದುವುಗಳಿಂದ ಕೂಡಿದ ಅತ್ಯಧಿಕವಾದ ಧನದಾನವು (ಸಂಪತ್ತು) ಎಂದರ್ಥವು. ಸ್ಫೂರವೆಂದರೆ ನಾನಾವಿಧವಾದ ಅನೇಕ ವಸ್ತುಗಳು ಒಟ್ಟಾಗಿ ಸೇರಿ ಆಗುವುದರಿಂದ ಉಂಟಾಗುವ ಬಹಳವಾದ ರಾಶಿಯು ಎಂದರ್ಥವು. ಇಲ್ಲಿ ಅಶ್ವಗಳೇ ಮೊದಲಾದ ಅನೇಕ ವಸ್ತುಗಳು ಸೇರಿ ಆಗಿರುವ ಮಹಾಧನವು ಎಂದರ್ಥವು. ಈ ಶಬ್ದಕ್ಕೆ ವ್ಯತಿರಿಕ್ತವಾಗಿ ಅಣು ಎಂಬ ಶಬ್ದವಿರುವುದು. ಅಣು ಶಬ್ದಕ್ಕೆ ಬಹಳ ಸ್ವಲ್ಪವಾದುದು, ಹೆಚ್ಚಾಗಿರುವುದಿಲ್ಲ ಎಂದರ್ಥವು. ಅಣು ಎಂಬುವುದು ಉಪಸರ್ಗವು. ಆದರೂ ನಾಮವಾಚಕದಂತೆ ಇದಕ್ಕೆ ಸಂಪೂರ್ಣಾರ್ಥವಿರುವುದು. ಸಂಪ್ರತಿ ಎಂಬ ಶಬ್ದವೇ ಇದಕ್ಕೆ ಉದಾಹರಣೆಯು. ಇಂತಹ ಶಬ್ದಗಳಿಗೆ ಲುಪ್ತನಾಮಕರಣವೆಂದು ಹೆಸರು. ಕುರುಂಗ ಎಂಬುದು ಒಬ್ಬ ರಾಜನ ಹೆಸರು ಕುರು ಎಂಬ ಜನಾಂಗದವರ ಮೇಲೆ ದಂಡೆತ್ತಿಹೋಗಿ ಯುದ್ಧಮಾಡಿ ಜಯಶೀಲನಾದುದರಿಂದ ಇವನಿಗೆ **ಕುರುಂಗ** ಎಂಬ ಹೆಸರು ಬಂದಿದೆ. ಅಥವಾ ಶತ್ರುಕುಲಗಳನ್ನು ಜಯಿಸಲು ಯುದ್ಧಕ್ಕಾಗಿ ಹೊರಡುವವನಾದ್ದರಿಂದ ಇವನಿಗೆ ಕುರುಂಗನೆಂಬ ಹೆಸರು. **ಕುರುಃ** ಎಂಬ ಶಬ್ದವು ಕೃತ್ (ಕೃಂತತಿ) ಕತ್ತರಿಸು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿದೆ. ಕ್ರೂರಶಬ್ದವೂ ಇದರಂತೆಯೇ ಕೃಂತತಿಧಾತುವಿನಿಂದಲೇ ನಿಷ್ಪನ್ನವಾಗಿವೆ. ಕುಲ ಎಂದರೆ ಒಂದು ವಂಶಕ್ಕೆ ಅಥವಾ ಮುಖ್ಯ ಪುರುಷನ ವಂಶಕ್ಕೆ ಸೇರಿದ ಎಂದರ್ಥವು. ಈ ಶಬ್ದವು ಕುಸ್ (ಕುಷ್ಣಾತಿ) ವಿಸ್ತರಿಸು ಎಂಬರ್ಥವುಳ್ಳ ಧಾತುವಿನಿಂದ ನಿಷ್ಪನ್ನವಾಗಿದೆ ಎಂದು ನಿರ್ವಚನದ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

**ಧೀಭಿಃ ಸಾತಾನಿ ಕಾಣ್ವಸ್ಯ ವಾಜಿನಃ ಪ್ರಿಯಮೇಧೈರಭಿದ್ಯುಭಿಃ ।**

**ಷಷ್ಟಿಂ ಸಹಸ್ರಾನು ನಿರ್ಮಜಾಮಜೇ ನಿಯೂಥಾನಿ ಗವಾಮೃಷಿಃ ॥೨೦॥**

॥ ಪದಪಾಠಃ ॥

ಧೀಭಿಃ । ಸಾತಾನಿ । ಕಾಣ್ವಸ್ಯ । ವಾಜಿನಃ । ಪ್ರಿಯಽಮೇಧೈಃ । ಅಭಿದ್ಯುಽಭಿಃ ।

ಷಷ್ಟಿಂ । ಸಹಸ್ರಾ । ಅನು । ನಿಃಽಮಜಾಂ । ಅಜೇ । ನಿಃ । ಯೂಥಾನಿ । ಗವಾಂ । ಋಷಿಃ ॥ ೨೦ ॥

॥ ಸಾಯಣಭಾಷ್ಯಂ ॥

ಕಾಣ್ವಸ್ಯ ಕಣ್ವಪುತ್ರಸ್ಯ ವಾಜಿನೋ ಹವಿಷ್ಮತೋ ಮೇಧಾತಿಥೇಃ ಸಂಬಂಧಿಭಿರ್ಧೀಭಿರ್ಧಾರ್ಯ-ತೃಭಿಃ ಸ್ತೋತೃಭಿಃ ಸಾತಾನಿ ಸಂಭಕ್ತಾನ್ಯಭಿದ್ಯುಭಿರಭಿಗತದೀಪ್ತಿಭಿಃ ಪ್ರಿಯಮೇಧೈರೇತತ್ಸಂಜ್ಞೈರೃಷಿಭಿಃ ಸೇವಿತಾನಿ ನಿರ್ಮಜಾಂ ನಿಃಶೇಷೇಣ ಶುದ್ಧಾನಾಂ ಗವಾಂ ಷಷ್ಟಿಂ ಸಹಸ್ರಾ ಷಷ್ಟಿಸಂಖ್ಯಾಕಾನಿ ಸಹಸ್ರಾಣಿ ಯೂಥಾನ್ಯೃಷಿರ್ದೇವಾತಿಥಿರಹಮನು ಪಶ್ಚಾತ್ ನಿರಜೇ । ನಿಃ ಶೇಷೇಣಾಗಚ್ಛಂ । ಸಾಕಲ್ಯೇನ ಪ್ರಾಪ್ತವಾನಸ್ಮಿ ॥ ಅಜ ಗತಿಕ್ಷೇಪಣಯೋಃ ॥ ಯಥಾ ಪ್ರಿಯಮೇಧಾನಾಂ ಕಾಣ್ವಾನಾಂ ಚ ಗವಾಂ ಯೂಥಾನಿ ರಾಜ್ಞಾ ದತ್ತಾನಿ ತತ್ಪ್ರತಿಗೃಹೀತಂ ಏವಂ ತೇನ ದತ್ತಾನಿ ಮಯಾ ಪ್ರತಿಗೃಹ್ಯಂತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಕಾಣ್ವಸ್ಯ**—ಕಣ್ವಪುತ್ರನೂ । **ವಾಜಿನಃ**—ಹವಿಸ್ಸನ್ನು ಹೊಂದಿದವನೂ ಆದ ಮೇಧಾತಿಥಿಯ । **ಧೀಭಿಃ**—ಸ್ತುತಿಕರ್ಮಗಳಿಂದ । **ಸಾತಾನಿ**—ಹೊಂದಲ್ಪಟ್ಟವೂ । **ಅಭಿದ್ಯುಭಿಃ**—ಪ್ರಕಾಶಮಾನರಾದ । **ಪ್ರಿಯಮೇಧೈಃ**—ಪ್ರಿಯಮೇಧಸಂಜ್ಞಕರಾದ ಋಷಿಗಳಿಂದ ಸೇವಿಸಲ್ಪಟ್ಟವೂ । **ನಿರ್ಮಜಾಂ**—ಪರಿಶುದ್ಧವೂ ಆದ । **ಗವಾಂ**—ಗೋವುಗಳ । **ಷಷ್ಟಿಂ ಸಹಸ್ರಾ**—ಅರವತ್ತು ಸಹಸ್ರ ಸಂಖ್ಯಾತ್ಮಕವಾದ । **ಯೂಥಾನಿ**—ಸಮೂಹಗಳನ್ನು । **ಋಷಿಃ**—ದೇವಾತಿಥಿನಾಮಕನಾದ ನಾನು । **ಅನು**—ಅನಂತರ । **ನಿಃ ಅಜೇ**—ಸ್ವೀಕರಿಸಿದೆನು.

॥ ಭಾವಾರ್ಥ ॥

ಕಣ್ವಪುತ್ರನೂ, ಹವಿಸ್ಸನ್ನು ಹೊಂದಿದವನೂ ಆದ ಮೇಧಾತಿಥಿಯ ಸ್ತುತಿಕರ್ಮಗಳಿಂದ ಹೊಂದಲ್ಪಟ್ಟವೂ, ಪ್ರಕಾಶಮಾನರೂ, ಪ್ರಿಯಮೇಧಸಂಜ್ಞಕರೂ ಆದ ಋಷಿಗಳಿಂದ ಸೇವಿಸಲ್ಪಟ್ಟವೂ ಪರಿಶುದ್ಧವೂ ಆದ ಗೋವುಗಳ ಅರವತ್ತು ಸಹಸ್ರ ಸಂಖ್ಯಾಕವಾದ ಸಮೂಹಗಳನ್ನು ದೇವಾತಿಥಿನಾಮಕನಾದ ನಾನು ಅನಂತರ ಸ್ವೀಕರಿಸಿದೆನು.

## English Translation

I, the Rishi (Devatithi) have received subsequently the complete donation: the sixty thousand herds of pure cattle merited by the devotions of the pious son of Kanwa, and by the illustrious Priyamedhas.

|| ಸಂಹಿತಾಪಾಠಃ ||

ವೃಕ್ಷಾಶ್ಚಿನ್ಮೇ ಅಭಿಪಿತ್ವೇ ಅರಾರಣುಃ ।
ಗಾಂ ಭಜಂತ ಮೇಹನಾಶ್ವಂ ಭಜಂತ ಮೇಹನಾ ॥ ೨೧ ॥

|| ಪದಪಾಠಃ ||

ವೃಕ್ಷಾಃ । ಚಿತ್ । ಮೇ । ಅಭಿऽಪಿತ್ವೇ । ಅರರಣುಃ ।
ಗಾಂ । ಭಜಂತ । ಮೇಹನಾ । ಅಶ್ವಂ । ಭಜಂತ । ಮೇಹನಾ ॥ ೨೧ ॥

|| ಸಾಯಣಭಾಷ್ಯಂ ||

ಮೇ ಮಯಾಭಿಪಿತ್ವೇ ಪೂರ್ವೋಕ್ತೇ ಧನೇऽಭಿಪ್ರಾಪ್ತೇ ಸತಿ ವೃಕ್ಷಾಶ್ಚಿದ್ವೃಕ್ಷಾ ಅಪ್ಯರಾರಣುಃ । ಅಶಬ್ದಯನ್ । ಕಥಮಿತಿ ತದಾಹ । ಇಮ ಋಷಯೋ ಮೇಹನಾ ಮಂಹನೀಯಾಂ ಪ್ರಶಸ್ಯಾಂ ಗಾಂ ಭಜಂತ । ಅಸೇವಂತ । ಅಲಭಂತ । ಮೇಹನಾ ಮಂಹನೀಯಮಶ್ವಂ ಚ ಭಜಂತ । ಅಲಭಂತೇತಿ ॥ ಗಾಮಶ್ವಮಿತಿ ಜಾತ್ಯಭಿಪ್ರಾಯಮೇಕವಚನಂ ॥ ಯದ್ವಾ । ಮೇಹನೇತಿ ಮ ಇಹ ನೇತಿ ಪದತ್ರಯಾತ್ಮಕ. ಮೇಕಂ ಪದಂ । ಯದಾಹ ಯಾಸ್ಕಃ । ಯದಿಂದ್ರ ಚಿತ್ರಂ ಚಾಯನೀಯಂ ಮಂಹನೀಯಂ ಧನಮಸ್ತಿ । ಯನ್ಮ ಇಹ ನಾಸ್ತೀತಿ ವಾ ತ್ರೀಣಿ ಮಧ್ಯಮಾನಿ ಪದಾನಿ । ನಿ. ೪-೪ । ತದ್ವೈವಂ ವ್ಯಾಖ್ಯೇಯಂ । ಇಮ ಋಷಯೋ ಗಾಮಶ್ವಂ ಚಾಲಭಂತ । ಇಹಾಸ್ಮಿನ್ರಾಜನಿ ಪ್ರಶಸ್ತಸ್ಯ ಧನಸ್ಯ ಶದ್ದಾನಂ ಮಮ ನಾಸೀನ್ನಮ ನಾಸೀದಿತಿ ವೃಕ್ಷಪ್ರಮುಖಾ ಸರ್ವೇऽಪಿ ಜನಾಃ ಪ್ರೋಚುರಿತ್ಯರ್ಥಃ ॥

|| ಪ್ರತಿಪದಾರ್ಥ ||

ಮೇ—ನನ್ನಿಂದ । ಅಭಿಪಿತ್ವೇ—ಹಿಂದೆ ವರ್ಣಿತವಾದ ಧನವು ಪ್ರಾಪ್ತವಾದಾಗ । ವೃಕ್ಷಾಶ್ಚಿತ್—ವೃಕ್ಷಗಳೂ ಕೂಡ । ಅರಾರಣುಃ—ಅವನ್ನು ಪ್ರಶಂಸಿಸುತ್ತಾ ಶಬ್ದಮಾಡಿದವು ಹೇಗೆಂದರೆ । ಮೇಹನಾ—ಪ್ರಶಸ್ಯವಾದ । ಗಾಂ—ಗೋವುಗಳನ್ನು । ಭಜಂತ—(ಈ ಋಷಿಗಳು) ಪಡೆದಿದ್ದಾರೆ । ಮೇಹನಾ—ಪೂಜ್ಯವಾದ । ಅಶ್ವಂ (ಚ)—ಅಶ್ವಗಳನ್ನೂ । ಭಜಂತ—ಹೊಂದಿದ್ದಾರೆ (ಎಂದು ಪ್ರಶಂಸಿಸಿದವು).

|| ಭಾವಾರ್ಥ ||

ಹಿಂದೆ ವರ್ಣಿತವಾದ ಧನಗಳನ್ನು ನಾನು ಹೊಂದಿದಾಗ ವೃಕ್ಷಗಳೂ ಸಹ ಹೀಗೆಂದು ಆ ಧನಗಳನ್ನು ಪ್ರಶಂಸಿಸಿದವು. "ಈ ಋಷಿಗಳು ಪ್ರಶಸ್ಯವಾದ ಗೋವುಗಳನ್ನೂ, ಪೂಜ್ಯವಾದ ಅಶ್ವಗಳನ್ನೂ ದಾನವಾಗಿ ಪಡೆದು ಅವುಗಳ ಫಲವನ್ನು ಅನುಭವಿಸುತ್ತಿದ್ದಾರೆ."

## English Translation

Upon the acceptance of this donation to me, the very trees have exclaimed: (See these Rishis) have acquired excellent cows, excellent horses.

ಇಲ್ಲಿಗೆ ನಾಲ್ಕನೆಯ ಸೂಕ್ತವು ಮುಗಿದುದು.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲ-
ಸಾಮ್ರಾಜ್ಯಧುರಂಧರೇಣ ಸಾಯಣಾಮಾತ್ಯೇನ ವಿರಚಿತೇ ಮಾಧವೀಯೇ
ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪಂಚಮಾಷ್ಟಕೇ
ಸಪ್ತಮೋಽಧ್ಯಾಯಃ ಸಮಾಪ್ತಂ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯಲ್ಲಿ
ಐದನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥





॥ ಶ್ರೀಃ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ



## ಪಂಚಮಾಷ್ಟಕೇಽಷ್ಟಮೋಽಧ್ಯಾಯಃ

### ಐದನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯವು.

---

## ಎಂಟನೆಯ ಮಂಡಲದಲ್ಲಿ ಐದನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಅಥಾಷ್ಟಮೋ ವ್ಯಾಖ್ಯಾತುಮಾರಭ್ಯತೇ । ಅಷ್ಟಮೇ ಮಂಡಲೇ ಪ್ರಥಮೇಽನುವಾಕೇ ಚತ್ವಾರಿ ಸೂಕ್ತಾನಿ ವ್ಯಾಖ್ಯಾತಾನಿ । ದೂರಾದಿತ್ಯೇಕೋನಚತ್ವಾರಿಂಶದೃಚಂ ಪಂಚಮಂ ಸೂಕ್ತಂ ಕಣ್ವಗೋತ್ರಸ್ಯ ಬ್ರಹ್ಮಾತಿಥೇರಾರ್ಷಂ । ಆದಿತಃ ಷಡ್ತ್ರಿಂಶದ್ಗಾಯತ್ರ್ಯಃ । ತತೋ ದ್ವೇ ಬೃಹತ್ಯೌ । ಅಂತಿಮಾನುಷ್ಟುಪ್ । ಅಂತ್ಯೇಷು ಪಂಚಸ್ವರ್ಧರ್ಚೇಷು ಚೇದಿಪುತ್ರಸ್ಯ ಕಶುನಾಮ್ನೋ ರಾಜ್ಞೋ ದಾನಂ ಸ್ತೂಯತೇ। ಅತಸ್ತದ್ದೇವತಾಕಾಃ । ಶಿಷ್ಟಾ ಆಶ್ವಿನ್ಯಃ । ತಥಾ ಚಾನುಕ್ರಾಂತಂ । ದೂರಾದೇಕಾನ್ನಚತ್ವಾರಿಂಶದ್ಬ್ರಹ್ಮಾತಿಥಿರಾಶ್ವಿನಂ ದ್ವಿಬೃಹತ್ಯನುಷ್ಟುಬಂತಮಂತ್ಯಾಃ ಪಂಚಾರ್ಧರ್ಚಾಶ್ಚೈದ್ಯಸ್ಯ ಕಶೋರ್ದಾನಸ್ತುತಿರಿತಿ ॥

**ಪ್ರಾತರನುವಾಕ ಆಶ್ವಿನಶಸ್ತ್ರಯೋರಾಶ್ವಿನೇ ಕ್ರತೌ ಗಾಯತ್ರೇ ಛಂದಸ್ಯಂತ್ಯತೃಚವರ್ಜಮಿದಂ ಸೂಕ್ತಂ । ಸೂತ್ರ್ಯತೇ ಹಿ । ದೂರಾದಿಹೇವೇತಿ ತಿಸ್ರ ಉತ್ತಮಾ ಉದ್ಧರೇತ್ । ಆ. ೪-೧೫ । ಇತಿ ॥**

## ಐದನೆಯ ಸೂಕ್ತವು.

ಅನುವಾದವು—ಈಗ ಋಗ್ವೇದಸಂಹಿತೆಯ ಐದನೆಯ ಅಷ್ಟಕದಲ್ಲಿ ಎಂಟನೆಯ ಅಧ್ಯಾಯದ ವ್ಯಾಖ್ಯಾನವು ಆರಂಭಿಸಲ್ಪಡುವುದು. ಎಂಟನೆಯ ಮಂಡಲದ ಮೊದಲನೆಯ ಅನುವಾಕದಲ್ಲಿ ಇದುವರೆಗೆ ಎಂದರೆ ಹಿಂದಿನ ಅಧ್ಯಾಯದಲ್ಲಿ ನಾಲ್ಕು ಸೂಕ್ತಗಳ ವ್ಯಾಖ್ಯಾನವು ಮುಗಿದಿರುವುದರಿಂದ ಈಗ ಐದನೆಯ ಸೂಕ್ತದಿಂದ ಮುಂದಕ್ಕೆ ವಿವರಿಸಲಾಗುವುದು. **ದೂರಾದಿವ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಮೂವತ್ತೊಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರೋದ್ಭವನಾದ ಬ್ರಹ್ಮಾತಿಥಿ ಎಂಬುವನು ಋಷಿಯು. ಈ ಸೂಕ್ತದಲ್ಲಿ ಮೊದಲನೆಯ ಋಕ್ಕಿನಿಂದ ಮೂವತ್ತಾರನೆಯ ಋಕ್ಕಿನವರೆಗೆ ಇರುವ ಮಂತ್ರಗಳು ಗಾಯತ್ರೀಛಂದಸ್ಸಿನವು. ಅಲ್ಲಿಂದ ಮುಂದಕ್ಕೆ ಎರಡು ಋಕ್ಕುಗಳು (೩೭-೩೮ನೇ ಋಕ್ಕುಗಳು) ಬೃಹತೀಛಂದಸ್ಕವು; ಕೊನೆಯ ಋಕ್ಕು ಅನುಷ್ಟುಪ್ ಛಂದಸ್ಕವು. ಈ ಸೂಕ್ತದ ಕೊನೆಯ ಭಾಗದ ಐದು ಅರ್ಧ ಋಕ್ಕುಗಳಲ್ಲಿ ಚೇದಿ ಎಂಬುವನ ಪುತ್ರನಾದ ಕಶು ಎಂಬ ರಾಜನು ಮಾಡಿದ ದಾನಸ್ತುತಿಯನ್ನು ಪ್ರಶಂಸಿಸಲಾಗಿದೆ. ಆದ್ದರಿಂದ ಆ ಋಕ್ಕುಗಳಿಗೆ ಆ ದಾನಸ್ತುತಿಯೇ ದೇವತೆಯು; ಉಳಿದ ಋಕ್ಕುಗಳಿಗೆ ಅಶ್ವಿನೀದೇವತೆಗಳೇ ದೇವತೆಯು. ಅನುಕ್ರಮಣಿಕೆಯಲ್ಲಿ—**ದೂರಾದೇಕಾನ್ನಚತ್ವಾರಿಂಶದ್ಬ್ರಹ್ಮಾತಿಥಿರಾಶ್ವಿನಂ ದ್ವಿಬೃಹತ್ಯನುಷ್ಟುಬಂತಮಂತ್ಯಾಃ ಪಂಚಾರ್ಧರ್ಚಾಶ್ಚೈದ್ಯಸ್ಯ ಕಶೋರ್ದಾನಸ್ತುತಿಃ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ಗಾಯತ್ರೀಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ಕೊನೆಯ ಮೂರು ಋಕ್ಕುಗಳನ್ನು ಬಿಟ್ಟು ಉಳಿದ ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ದೂರಾದಿಹೇವೇತಿ ತಿಸ್ರ ಉತ್ತಮಾ ಉದ್ಧರೇತ್** ಎಂಬ ಸೂತ್ರದಿಂದ (ಆ. ೪-೧೫) ವಿಸ್ತೃತವಾಗಿರುವುದು.

### ಸೂಕ್ತ—೫

ಮಂಡಲ—೮ । ಅನುವಾಕ—೧ । ಸೂಕ್ತ—೫ ।
ಅಷ್ಟಕ—೫ । ಅಧ್ಯಾಯ—೮ । ವರ್ಗ—೧, ೨, ೩, ೪, ೫, ೬, ೭, ೮ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೩೯ ।
ಋಷಿಃ—ಬ್ರಹ್ಮಾತಿಥಿಃ ಕಾಣ್ವಃ ।
ದೇವತಾ—೧-೩೬, ೩೭ ರಲ್ಲಿ ಪೂರ್ವಾರ್ಧ. ಅಶ್ವಿನೌ । ೩೭ ರಲ್ಲಿ ಉತ್ತರಾರ್ಧ, ೩೮-೩೯. ಚೈದ್ಯಸ್ಯ ಕಶೋರ್ದಾನಸ್ತುತಿಃ ।
ಛಂದಃ—೧-೩೬. ಗಾಯತ್ರೀ । ೩೭-೩೮. ಬೃಹತೀ । ೩೯. ಅನುಷ್ಟುಪ್ ।

। ಸಂಹಿತಾಪಾಠಃ ।

**ದೂರಾದಿಹೇವ ಯತ್ಸತ್ಯರುಣಪ್ಸುರಶಿಶ್ವಿತತ್ ।**
**ವಿ ಭಾನುಂ ವಿಶ್ವಧಾತನತ್ ॥ ೧ ॥**

॥ ಪದಪಾಠಃ ॥

ದೂರಾತ್ । ಇಹಽಇವ । ಯತ್ । ಸತೀ । ಅರುಣಽಪ್ಸುಃ । ಅಶಿಶ್ವಿತತ್ ।

ವಿ । ಭಾನುಂ । ವಿಶ್ವಧಾ । ಅತನತ್ ॥ ೧ ॥

॥ ಸಾಯಣಭಾಷ್ಯಂ ॥

ದೂರಾದ್ದೂರತ ಏವ ವಿಪ್ರಕೃಷ್ಟ ಏವ ನಭಸಃ ಪ್ರಾಕ್ಪ್ರದೇಶೇ ವರ್ತಮಾನೇಹೇವ ಸತೀಹ ಸಮೀಪೇ ವಿದ್ಯಮಾನೇವ ॥ ಅಸ್ತೇಃ ಶತರಿ ಶ್ನಸೋರಲ್ಲೋಪ ಉಗಿತಶ್ಚೇತಿ ಙೀಪ್ । ಶತುರನುಮ ಇತಿ ನದ್ಯಾ ಉದಾತ್ತತ್ವಂ ॥ ಅರುಣಪ್ಸುರಾರೋಚಮಾನರೂಪಾ ಈದೃಶ್ಯುಷಾ ಯದ್ಯದಾಶಿಶ್ವಿತತ್ ಅಶ್ವೇತಯತ್ ॥ ಶ್ವಿತಾ ವರ್ಣೇ । ಅಸ್ಮಾಣ್ಣ್ಯಂತಾಲ್ಲುಙಿ ಚಙಿ ರೂಪಂ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ ॥ ತದಾ ಭಾನುಂ ದೀಪ್ತಿಂ ವಿಶ್ವಧಾ ಬಹುವಿಧಂ ವ್ಯತನತ್ । ವಿಸ್ತಾರಿತವತೀ ॥ ತನೋತೇರ್ವ್ಯತ್ಯಯೇನ ಶಪ್ ॥ ಈದೃಶೀಮುಷಸಂ ಹೇ ಅಶ್ವಿನೌ ನಚೇಥ ಇತ್ಯುತ್ತರಯೈಕವಾಕ್ಯತಾ । ಯದ್ವಾ । ಪ್ರಾತರನುವಾಕ್ಯ ಉಷಸ್ಯೇನ ಕಾಂಡೇನೋಷಾಃ ಸ್ತುತಾ ಸತೀ ಪ್ರಾದುರ್ಬಭೂವ । ಹೇ ಅಶ್ವಿನೌ ಶಂಸಿಷ್ಯಮಾಣಮಾಶ್ವಿನಂ ಕ್ರತುಂ ಶ್ರೋತುಂ ಯುವಾಮಪಿ ಪ್ರಾದುರ್ಭವತಮಿತ್ಯಧ್ಯಾಹಾರೇಣ ವಾಕ್ಯಂ ಪೂರಣೀಯಂ ॥

॥ ಪ್ರತಿಪದಾರ್ಥ ॥

**ದೂರಾತ್**—ಅಂತರಿಕ್ಷದಲ್ಲಿ ಬಹುದೂರಪ್ರದೇಶದಲ್ಲಿರುವಾಗಲೂ । **ಇಹೇವ ಸತೀ**—ಹತ್ತಿರದಲ್ಲಿಯೇ ಇರುವಂತೆ । **ಅರುಣಪ್ಸುಃ**—ಆಕರ್ಷಕವಾದ ಹೊಂಬಣ್ಣದ ರೂಪವುಳ್ಳ ಉಷೋದೇವಿಯು । **ಯತ್**—ಯಾವಾಗ । **ಅಶಿಶ್ವಿತತ್**—ಜಗತ್ತನ್ನೆಲ್ಲಾ ಬೆಳಗಿಸಿದಳೋ ಆಗ । **ಭಾನುಂ**—ತನ್ನ ಕಾಂತಿಯನ್ನು । **ವಿಶ್ವಧಾ**—ಎಲ್ಲಾ ಪ್ರದೇಶಗಳಲ್ಲೂ । **ವಿ ಅತನತ್**—ವಿಸ್ತೃತವಾಗಿ ಹರಡಿದ್ದಾಳೆ.

॥ ಭಾವಾರ್ಥ ॥

ಅಂತರಿಕ್ಷದಲ್ಲಿ ಬಹುದೂರಪ್ರದೇಶದಲ್ಲಿರುವಾಗಲೂ ಹತ್ತಿರದಲ್ಲಿಯೇ ಇರುವಂತೆ ಆಕರ್ಷಕವಾದ ಹೊಂಬಣ್ಣದ ರೂಪವುಳ್ಳ ಉಷೋದೇವಿಯು ಯಾವಾಗ ಜಗತ್ತನ್ನೆಲ್ಲಾ ಬೆಳಗಿಸಿದಳೋ ಆಗ ತನ್ನ ಕಾಂತಿಯನ್ನು ಎಲ್ಲಾ ಪ್ರದೇಶಗಳಲ್ಲೂ ವಿಸ್ತೃತವಾಗಿ ಹರಡಿದ್ದಾಳೆ.

## English Translation

When the shining dawn, advancing hither from afar, whitens (all things), she spreads the light on all sides.

॥ ಸಂಹಿತಾಪಾಠಃ ॥

ಆವದ್ಧಸ್ತ್ವಾ ಮನೋಯುಜಾ ರಥೇನ ಪೃಥುಪಾಜಸಾ ।

ಸಚೇಥೇ ಅಶ್ವಿನೋಷಸಂ ॥ ೨ ॥

॥ ಪದಪಾಠಃ ॥

ನೃऽವತ್ । ದಸ್ರಾ । ಮನಃऽಯುಜಾ । ರಥೇನ । ಪೃಥುऽಪಾಜಸಾ ।

ಸಚೇಥೇ ಇತಿ । ಅಶ್ವಿನಾ । ಉಷಸಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ದಸ್ರಾ ದಸ್ರೌ ದರ್ಶನೀಯೌ ಶತ್ರೂಣಾಮುಪಕ್ಷಪಯಿತಾರೌ ವಾ ॥ ಸುಪಾಂ ಸುಲುಗಿತ್ಯಾಕಾರಃ ॥ ಈದೃಶೌ ಹೇ ಅಶ್ವಿನಾಶ್ವಿನೌ ನೃವನ್ನೃಭಿರ್ನೇತೃಭಿಸ್ತುಲ್ಯಂ ವರ್ತಮಾನೌ ಯುವಾಂ ॥ ತೇನ ತುಲ್ಯಮಿತಿ ಪ್ರಥಮಾರ್ಥೇ ವತಿಃ ॥ ಯದ್ವಾ । ನೃವತೀಂ ॥ ನೃಶಬ್ದಾನ್ಮತುಪಶ್ಛಾಂದಸತ್ವಂ । ರಶ್ರುತಿಸಾಮಾನ್ಯಾದ್ವಾ ಛಂದಸೀರ ಇತಿ ವತ್ವಂ । ಜೀಪಶ್ಛಾಂದಸೋ ಲುಕ್ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ ॥ ಈದೃಶೀಮುಷಸಂ ರಥೇನಾತ್ಮೀಯೇನ ವಾಹನೇನ ಸಚೇಥೇ । ಸಮ್ಯಗಾಗಚ್ಛಥಃ ॥ ಷಚ ಸಮವಾಯೇ ॥ ಯದ್ವಾ । ಸಚತಿಃ ಸೇವನಾರ್ಥಃ । ಸಚೇಥೇ । ಸೇವೇಥೇ । ತದಾಹ ಯಾಸ್ಕಃ । ಸಚಸ್ವಾ ನಃ ಸ್ವಸ್ತಯೇ ಸೇವಸ್ವ ನಃ ಸ್ವಸ್ತಯೇ । ನಿ ೩-೨೧ । ಇತಿ । ಕೀದೃಶೇನ ರಥೇನ । ಮನೋಯುಜಾ ಮನಸೈವ ವ್ಯಾಪಾರಾಂತರನಿರಪೇಕ್ಷೇಣ ಸ್ಮರಣಮಾತ್ರೇಣಾಶ್ವೈರ್ಯುಜ್ಯಮಾನೇನ ಪೃಥುಪಾಜಸಾ ವಿಸ್ತೀರ್ಣಬಲೇನ ಬಹ್ವನ್ನೇನ ವಾ । ಉಷಸೋऽನಂತರಮಶ್ವಿನೋಃ ಸ್ತೂಯಮಾನತ್ವಾತ್ತಾವಶ್ವಿನೌ ಗಚ್ಛತ ಇತ್ಯುಚ್ಯತೇ ॥

॥ ಪ್ರತಿಪದಾರ್ಥ ॥

ದಸ್ರಾ—ಆಕರ್ಷಕವಾದ ರೂಪವುಳ್ಳ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ನೃವತ್—ನೇತೃಗಳಂತೆ ಪ್ರಶಸ್ಯರಾದ ನೀವು । ಮನೋಯುಜಾ—ಸಂಕಲ್ಪಮಾತ್ರದಿಂದಲೇ ಅಶ್ವಗಳೊಡನೆ ಸೇರಿಕೊಳ್ಳತಕ್ಕದ್ದೂ । ಪೃಥುಪಾಜಸಾ—ಅತ್ಯಧಿಕವಾದ ಬಲವುಳ್ಳದ್ದೂ ಆದ । ರಥೇನ—ರಥದೊಡನೆ । ಉಷಸಂ—ಉಷೋದೇವಿಯನ್ನು । ಸಚೇಥೇ—ಸೇರಿಕೊಂಡು ಬಿಟ್ಟಿಗಿರುತ್ತೀರಿ.

॥ ಭಾವಾರ್ಥ ॥

ಆಕರ್ಷಕವಾದ ರೂಪವುಳ್ಳ ಎಲೈ ಅಶ್ವಿನೀದೇವತೆಗಳೇ, ನೇತೃಗಳಂತೆ ಪ್ರಶಸ್ಯರಾದ ನೀವು ಸಂಕಲ್ಪಮಾತ್ರದಿಂದಲೇ ಅಶ್ವಗಳೊಡನೆ ಸೇರಿಕೊಳ್ಳತಕ್ಕದ್ದೂ, ಅತ್ಯಧಿಕವಾದ ಬಲವುಳ್ಳದ್ದೂ ಆದ ರಥದೊಡನೆ ಉಷೋದೇವಿಯನ್ನು ಸೇರಿಕೊಂಡು ಬಿಟ್ಟಿಗಿರುತ್ತೀರಿ.

## English Translation

And you, Aswins, of goodly aspect, accompany the dawn like leaders with your mighty chariot harnessed at a thought.

॥ ಸಂಹಿತಾಪಾಠಃ ॥

ಯುವಾಭ್ಯಾಂ ವಾಜಿನೀವಸೂ ಪ್ರತಿ ಸ್ತೋಮಾ ಅದೃಕ್ಷತ ।
ವಾಚಂ ದೂತೋ ಯಥೋಹಿಷೇ ॥ ೩ ॥

॥ ಪದಪಾಠಃ ॥

ಯುವಾಭ್ಯಾಂ । ವಾಜಿನೀವಸೂ ಇತಿ ವಾಜಿನೀऽವಸೂ । ಪ್ರತಿ । ಸ್ತೋಮಾಃ । ಅದೃಕ್ಷತ ।
ವಾಚಂ । ದೂತಃ । ಯಥಾ । ಓಹಿಷೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ವಾಜಿನೀವಸೂ । ವಾಜೋ ಹವಿರ್ಲಕ್ಷಣಮನ್ನಂ । ತದ್ಯುಕ್ತಾ ಯಾಗಕ್ರಿಯಾ ವಾಜಿನೀ । ತಸ್ಯಾಂ ವಸು ಧನಂ ಯಯೋರಸ್ತಿ ತೌ ತಥೋಕ್ತೌ । ಯದ್ವಾ । ಅನ್ನಯುಕ್ತಂ ಸ್ತೋತೃಭ್ಯೋ ದೇಯಂ ವಸು ಧನಂ ಯಯೋರಸ್ತಿ ತಾದೃಶೌ । ಹೇ ಅಶ್ವಿನೌ ಯುವಾಭ್ಯಾಂ ಸ್ತೋಮಾ ಅಸ್ಮಾಭಿಃ ಕೃತಾನಿ ಸ್ತೋತ್ರಾಣಿ ಪ್ರತ್ಯದೃಕ್ಷತ । ಪ್ರತಿದೃಶ್ಯಂತಾಂ ॥ ದೃಶೇಶ್ಛಾಂದಸಃ ಕರ್ಮಣಿ ಲುಙ್ । ಲಿಙ್ಸಿಚಾವಾತ್ಮನೇಪದೇಷ್ವಿತಿ ಕಿತ್ತ್ವಾತ್ಸೃಜಿದೃಶೋರಿತ್ಯಮಭಾವಃ । ಷತ್ವಕತ್ವಷತ್ವಾನಿ ॥ ಅಹಂ ಚ ಯಥಾ ಯೇನ ಪ್ರಕಾರೇಣ ದೂತಃ ಪ್ರೇಷ್ಯೋ ವಾಚಂ ಸ್ವಾಮಿನೋ ವಾಕ್ಯಂ ಯಾಚತೇ ತಥಾ ಯುವಯೋಃ ಪ್ರೀತಿಪೂರ್ವಿಕಾಂ ವಾಚಮೋಹಿಷೇ । ಪುರುಷವ್ಯತ್ಯಯಃ । ಯಾಚೇ ॥ ಊಹಿರರ್ದನೇ । ಯಾಚನ ಇತ್ಯರ್ಥಃ । ವ್ಯತ್ಯಯೇನಾತ್ಮನೇಪದಂ ॥ ಯದ್ವಾ । ದೂತೋ ಯಥಾ ಸ್ವಾಮಿನೋಕ್ತಾಂ ವಾಚಂ ವಿದೇಶಸ್ಥಮನ್ಯಂ ಪ್ರಾಪಯತಿ ಏವಮಹಮಪಿ ಸ್ತುತಿರೂಪಾಂ ವಾಚಮೋಹಿಷೇ । ವಹೇ । ಯುವಾಂ ಪ್ರಾಪಯಾಮಿ ॥ ವಹೇರ್ವ್ಯತ್ಯಯೇನ ಮಧ್ಯಮಃ । ಛಾಂದಸಂ ಸಂಪ್ರಸಾರಣಂ । ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದಿಡಾಗಮಃ । ಶಬಭಾವೋ ಲಘೂಪಧಗುಣಶ್ಚ । ಏಙಿ ಪರರೂಪಮಿತಿ ಪರರೂಪತ್ವಂ ॥

॥ ಪ್ರತಿಪದಾರ್ಥ ॥

ವಾಜಿನೀವಸೂ—ಹವಿಸ್ಸಿನ ರೂಪದ ಅನ್ನಸಂಪತ್ತುಳ್ಳ ಎಲೈ ಅಶ್ವಿನೀದೇವತೆಗಳೇ । ಯುವಾಭ್ಯಾಂ—ನಿಮ್ಮಿಬ್ಬರನ್ನು ಉದ್ದೇಶಿಸಿ ಅರ್ಪಿತವಾದ । ಸ್ತೋಮಾಃ—ಸ್ತುತಿವಾಕ್ಯಗಳು । ಪ್ರತ್ಯದೃಕ್ಷತ—ಒಂದೊಂದೂ ಪ್ರತ್ಯೇಕವಾಗಿ ಸ್ವೀಕರಿಸಲ್ಪಡಲಿ । ಯಥಾ—ಯಾವ ಪ್ರಕಾರವಾಗಿ । ದೂತಃ—ದೂತನು ಯಜಮಾನನ ಸಂದೇಶವನ್ನು ವಹಿಸುವನೋ ಅದರಂತೆಯೇ । (ಅಹಂ—ನಾನೂ ಸಹ) । ವಾಚಂ—ನಿಮ್ಮನ್ನು ಪ್ರಶಂಸಿಸುವ ಯಜಮಾನನ ಸ್ತುತಿವಾಕ್ಯಗಳನ್ನು । ಓಹಿಷೇ—ಭಕ್ತಿಯಿಂದ ವಹಿಸುತ್ತೇನೆ.

॥ ಭಾವಾರ್ಥ ॥

ಹವಿಸ್ಸಿನ ರೂಪದ ಅನ್ನಸಂಪತ್ತನ್ನು ಹೊಂದಿರುವ ಎಲೈ ಅಶ್ವಿನೀದೇವತೆಗಳೇ, ನಿಮ್ಮಿಬ್ಬರನ್ನೂ ಉದ್ದೇಶಿಸಿ

ಅರ್ಪಿತವಾದ ಸ್ತುತಿವಾಕ್ಯಗಳು ಒಂದೊಂದೂ ಪ್ರತ್ಯೇಕವಾಗಿ ಸ್ವೀಕರಿಸಲ್ಪಡಲಿ. ಯಾವ ಪ್ರಕಾರವಾಗಿ ದೂತನು ಯಜಮಾನನ ಸಂದೇಶವಾಕ್ಯವನ್ನು ವಹಿಸುವನೋ ಅದರಂತೆಯೇ ನಾನೂ ಸಹ ನಿಮ್ಮನ್ನು ಪ್ರಶಂಸಿಸುವ ಯಜಮಾನನ ಸ್ತುತಿವಾಕ್ಯಗಳನ್ನು ಭಕ್ತಿಯಿಂದ ವಹಿಸುತ್ತೇನೆ.

### English Translation

By you, affluent in sacrifices, may our praises be severally accepted : I bear the words (of the worshipper) like a messenger (to you).

॥ ಸಂಹಿತಾಪಾಠಃ ॥

ಪುರುಪ್ರಿಯಾ ಣ ಊತಯೇ ಪುರುಮಂದ್ರಾ ಪುರೂವಸೂ ।
ಸ್ತುಷೇ ಕಣ್ವಾಸೋ ಅಶ್ವಿನಾ ॥ ೪ ॥

॥ ಪದಪಾಠಃ ॥

ಪುರುಽಪ್ರಿಯಾ । ನಃ । ಊತಯೇ । ಪುರುಽಮಂದ್ರಾ । ಪುರುವಸೂ ಇತಿ ಪುರುಽವಸೂ ।
ಸ್ತುಷೇ । ಕಣ್ವಾಸಃ । ಅಶ್ವಿನಾ ॥ ೪ ॥

॥ ಸಾಯಣಭಾಷ್ಯಂ ॥

ಪುರುಪ್ರಿಯಾ ಬಹೂನಾಂ ಪ್ರಿಯೌ ಪುರುಮಂದ್ರಾ ಬಹುಮದೌ ಬಹೂನಾಂ ಮೋದಯಿತಾರೌ ವಾ । ಯದ್ವಾ । ಪುರು ಬಹುಲಂ ಮಾದ್ಯಂತೌ । ಪುರುವಸೂ ಬಹುಧನೌ ಈದೃಶಾವಶ್ವಿನಾಶ್ವಿನೌ ನೋಽಸ್ಮಾಕಮೂತಯೇ ರಕ್ಷಣಾಯ ಕಣ್ವಾಸಃ ಕಣ್ವಗೋತ್ರಾ ವಯಂ ಸ್ತುಷೇ । ಸ್ತುಮಹೇ ॥ ಪುರುಷವಚನಯೋರ್ವ್ಯತ್ಯಯಃ ॥ ಯದ್ವಾ । ಕಣ್ವಾಸ ಇತಿ ಪೂಜಾರ್ಥಂ ಬಹುವಚನಂ । ಋಷಿರಾತ್ಮಾನಂ ಸಂಬೋಧ್ಯ ಬ್ರೂತೇ । ಹೇ ಅಂತರಾತ್ಮನ್ ಕಣ್ವಾಸಃ ಕಣ್ವಗೋತ್ರಸ್ತ್ವಂ ಸ್ತುಷೇ । ಅಶ್ವಿನೌ ಸ್ತುಹಿ ॥

॥ ಪ್ರತಿಪದಾರ್ಥ ॥

ಪುರುಪ್ರಿಯಾ—ಅನೇಕರ ಪ್ರೀತಿಗೆ ಪಾತ್ರರೂ । ಪುರುಮಂದ್ರಾ—ಅನೇಕರಿಗೆ ಹರ್ಷವನ್ನುಂಟುಮಾಡುವವರೂ । ಪುರುವಸೂ—ಅತ್ಯಧಿಕವಾದ ಧನವುಳ್ಳವರೂ ಆದ । ಅಶ್ವಿನಾ—ಅಶ್ವಿನೀದೇವತೆಗಳನ್ನು । ನಃ—ನಮ್ಮ । ಊತಯೇ—ರಕ್ಷಣಾರ್ಥವಾಗಿ । ಕಣ್ವಾಸಃ—ಕಣ್ವವಂಶೋತ್ಪನ್ನರಾದ ನಾವು । ಸ್ತುಷೇ—ಪ್ರಾರ್ಥಿಸಿ ಪ್ರಶಂಸಿಸುತ್ತೇವೆ.

॥ ಭಾವಾರ್ಥ ॥

ಅನೇಕರ ಪ್ರೀತಿಗೆ ಪಾತ್ರರೂ ಅನೇಕರಿಗೆ ಹರ್ಷವನ್ನುಂಟುಮಾಡುವವರೂ, ಅತ್ಯಧಿಕವಾದ ಧನವುಳ್ಳವರೂ

ಆದ ಅಶ್ವಿನೀದೇವತೆಗಳನ್ನು ನಮ್ಮ ರಕ್ಷಣಾರ್ಥವಾಗಿ ಕಣ್ವವಂಶೋತ್ಪನ್ನರಾದ ನಾವು ಪ್ರಾರ್ಥಿಸಿ ಪ್ರಶಂಸಿಸುತ್ತೇವೆ.

**English Translation**

We Kanwas, praise for our protection the many-loved, the many-delighting Aswins, abounding in wealth.

। ಸಂಹಿತಾಪಾಠಃ ।

ಮಂಹಿಷ್ಠಾ ವಾಜಸಾತಮೇಷಯಂತಾ ಶುಭಸ್ಪತೀ ।

ಗಂತಾರಾ ದಾಶುಷೋ ಗೃಹಂ ॥ ೫ ॥

। ಪದಪಾಠಃ ।

ಮಂಹಿಷ್ಠಾ । ವಾಜsಸಾತಮಾ । ಇಷಯಂತಾ । ಶುಭಃ । ಪತೀ ಇತಿ ।

ಗಂತಾರಾ । ದಾಶುಷಃ । ಗೃಹಂ ॥ ೫ ॥

। ಸಾಯಣಭಾಷ್ಯಂ ।

ಮಂಹಿಷ್ಠಾ ಮಂಹಿಷ್ಠೌ ಮಂಹನೀಯೌ ಪೂಜನೀಯೌ ಯದ್ವಾ ದಾತೃತಮೌ ವಾಜಸಾತಮಾ । ವಾಜೋsನ್ನಂ ಬಲಂ ವಾ । ತಸ್ಯಾತಿಶಯೇನ ದಾತಾರೌ । ಯದ್ವಾ । ವಾಜೋ ಹವಿರ್ಲಕ್ಷಣಮನ್ನಂ । ತಸ್ಯ ಸಂಭಕ್ತೃತಮೌ ॥ ಸನೋತೇಃ ಸನತೇರ್ವಾ ಜನಸನೇತಿ ವಿಟ್ । ವಿಡ್ವನೋರನುನಾಸಿಕಸ್ಯಾತ್ವಂ ॥ ಇಷಯಂತಾ ಸ್ತೋತೃಭ್ಯ ಇಷಮನ್ನಂ ಕುರ್ವಂತೌ ॥ ಇಟ್ ಶಬ್ದಾತ್ತತ್ಕರೋತೀತಿ ಣಿಚ್ । ಣೇರಿಷ್ಠ-ವದ್ಭಾವೇನ ಟಿಲೋಪೇ ಪ್ರಾಪ್ತೇ ಪ್ರಕೃತ್ಯೈಕಾಜಿತಿ ಪ್ರಕೃತಿಭಾವಃ ॥ ಯದ್ವಾ । ಇಷಯಂತೈಷಯಂತೌ ಶ್ರೇಯಾಂಸಿ ಪ್ರಾಪಯಂತೌ ॥ ಇಷ ಗತೌ । ಅಸ್ಮಾದ್ಧೇತುಮಣ್ಣಿಚ್ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯ-ತ್ವಾದ್ಗುಣಾಭಾವಃ । ಶುಭಃ ಶೋಭನಸ್ಯ ಧನಸ್ಯೋದಕಸ್ಯ ವಾ ಪತೀ ಸ್ವಾಮಿನೌ ॥ ಷಷ್ಠ್ಯಾಃ ಪತಿಪುತ್ರೇತಿ ವಿಸರ್ಜನೀಯಸ್ಯ ಸತ್ವಂ ॥ ದಾಶುಷಶ್ಚರುಪುರೋಡಾಶಾದೀನಿ ದತ್ತವತೋ ಯಜಮಾನಸ್ಯ ಗೃಹಂ ಗಂತಾರಾ ಗಮನಶೀಲೌ ॥ ಗಮೇಸ್ತಾಚ್ಛೀಲಿಕಸ್ತೃನ್ । ಅತೋ ನ ಲೋಕಾವ್ಯಯೇತಿ ಕರ್ಮಣಿ ಷಷ್ಠ್ಯಾಃ ಪ್ರತಿಷೇಧಃ ॥ ಈದೃಶಾವಶ್ವಿನೌ ಸ್ತುಮ ಇತಿ ಶೇಷಃ ॥

। ಪ್ರತಿಪದಾರ್ಥ ।

ಮಂಹಿಷ್ಠಾ—ಅತ್ಯಂತ ಪೂಜ್ಯರೂ । ವಾಜಸಾತಮಾ—ಅತ್ಯಧಿಕವಾದ ಅನ್ನದಾತರೂ । ಇಷಯಂತಾ—ಸ್ತೋತೃಗಳಿಗೆ ಅನ್ನವನ್ನು ಉತ್ಪನ್ನಮಾಡುವವರೂ । ಶುಭಃ—ಕಲ್ಯಾಣಕರವಾದ ಉದಕಕ್ಕೆ । ಪತೀ—ಒಡೆಯರೂ। ದಾಶುಷಃ—ಹವಿಸ್ಸನ್ನರ್ಪಿಸುವ ಯಜಮಾನನ । ಗೃಹಂ—ಯಜ್ಞಗೃಹಕ್ಕೆ । ಗಂತಾರಾ—ಹೋಗತಕ್ಕವರೂ ಆದ (ಅಶ್ವಿನೀದೇವತೆಗಳನ್ನು ಸ್ತುತಿಸುತ್ತೇನೆ).

। ಭಾವಾರ್ಥ ।

ಅತ್ಯಂತ ಪೂಜ್ಯರೂ, ಅತ್ಯಧಿಕವಾದ ಅನ್ನದಾತರೂ, ಸ್ತೋತೃಗಳಿಗೆ ಅನ್ನವನ್ನು ಉತ್ಪನ್ನಮಾಡುವವರೂ, ಕಲ್ಯಾಣಕರವಾದ ಉದಕಕ್ಕೆ ಒಡೆಯರೂ, ಹವಿಸ್ಸನ್ನರ್ಪಿಸುವ ಯಜಮಾನನ ಯಜ್ಞಗೃಹಕ್ಕೆ ಹೋಗತಕ್ಕವರೂ ಆದ ಅಶ್ವಿನೀದೇವತೆಗಳನ್ನು ಸ್ತುತಿಸುತ್ತೇನೆ.

## English Translation

Most adorable bestower of strength, distributors of food, lords of opulance, repairers to the dwelling of the donor (of the oblation)

। ಸಂಹಿತಾಪಾಠಃ ।

ತಾ ಸುದೇವಾಯ ದಾಶುಷೇ ಸುಮೇಧಾಮವಿತಾರಿಣೀಂ ।

ಘೃತೈರ್ಗವ್ಯೂತಿಮುಕ್ಷತಂ ॥ ೬ ॥

। ಪದಪಾಠಃ ।

ತಾ । ಸುऽದೇವಾಯ । ದಾಶುಷೇ । ಸುऽಮೇಧಾಂ । ಅವಿऽತಾರಿಣೀಂ ।

ಘೃತೈಃ । ಗವ್ಯೂತಿಂ । ಉಕ್ಷತಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ತಾ ತೌ ತಾದೃಶೌ ಯುವಾಂ ಸುದೇವಾಯ । ಶೋಭನಾ ದೇವಾ ಯೇನ ಯಷ್ಟವ್ಯಾಃ ಸ ತಥೋಕ್ತಃ ॥ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥ ತಸ್ಮೈ ದಾಶುಷೇ ಹವಿರ್ದತ್ತವತೇ ಯಜಮಾನಾಯ ॥ ತಾದರ್ಥ್ಯೇ ಚತುರ್ಥೀ ॥ ಈದೃಗ್ಯಜಮಾನಾರ್ಥಂ ಸುಮೇಧಾಂ ಶೋಭನಯಜ್ಞಾಮವಿತಾರಿಣೀಂ । ವಿತರಣಂ ವಿಗಮನಮಪಾಯಃ । ಅನಪಾಯಿನೀಂ ॥ ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ ॥ ಈದೃಶೀಂ ಗವ್ಯೂತಿಂ । ಗಾವೋ ಯೂಯಂತೇ ಸಂಯುಜ್ಯಂತೇಽತ್ರೇತಿ ಗವ್ಯೂತಿರ್ಗೋಸಂಚಾರಭೂಮಿಃ ॥ ಗೋರ್ಯೂತೌ ಛಂದಸಿ । ಪಾ. ೬-೧-೭೯-೨ । ಇತ್ಯವಾದೇಶಃ ॥ ತಾಂ ಘೃತೈಃ ಕ್ಷರಣಶೀಲೈರುದಕೈರುಕ್ಷತಂ । ಸಿಂಚತಂ ॥ ಉಕ್ಷ ಸೇಚನೇ ।

। ಪ್ರತಿಪದಾರ್ಥ ।

(ಎಲೈ ಅಶ್ವಿನೀದೇವತೆಗಳೇ) ತಾ—ಪ್ರಸಿದ್ಧರಾದ ನೀವು । ಸುದೇವಾಯ—ಉತ್ತಮವಾದ ದೇವಪೂಜಾ ಕಾರ್ಯದಲ್ಲಿ ನಿರತನಾದವನೂ। ದಾಶುಷೇ—ಹವಿಸ್ಸನ್ನರ್ಪಿಸುವವನೂ ಆದ ಯಜಮಾನನ ಹಿತಕ್ಕಾಗಿ । ಸುಮೇಧಾಂ—ಅತ್ಯಂತ ಪೂಜ್ಯವಾದುದೂ (ಶುದ್ಧವಾದುದೂ) । ಅವಿತಾರಿಣೀಂ—ಅಪಾಯರಹಿತವಾದುದೂ ಆದ । ಗವ್ಯೂತಿಂ—

ಗೋವಿನ ಸಂಚಾರಭೂಮಿಯನ್ನು (ಹುಲ್ಲುಗಾವಲನ್ನು) | ಘೃತೈಃ—ಉದಕಗಳಿಂದ | ಉಕ್ಷತಂ—ತೊಯ್ಯುವಂತೆ ಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಪ್ರಸಿದ್ಧರಾದ ನೀವು ಉತ್ತಮವಾದ ದೇವಪೂಜಾಕಾರ್ಯದಲ್ಲಿ ನಿರತನಾದವನೂ, ಹವಿಸ್ಸನ್ನರ್ಪಿಸುವವನೂ ಆದ ಯಜಮಾನನ ಸಲುವಾಗಿ ಅತ್ಯಂತ ಶುದ್ಧವಾದುದೂ, ಅಪಾಯರಹಿತವಾದುದೂ ಆದ ಗೋವಿನ ಸಂಚಾರಭೂಮಿಯನ್ನು (ಹುಲ್ಲುಗಾವಲನ್ನು) ಉದಕಗಳಿಂದ ತೊಯ್ಯುವಂತೆ ಮಾಡಿರಿ.

## English Translation

Sprinkle well with water the pure unfailing pasturage (of his cattle) for the devout donor (of the oblation).

॥ ಸಂಹಿತಾಪಾಠಃ ॥

ಆ ನಃ ಸ್ತೋಮಮುಪ ದ್ರವತ್ತೂಯಂ ಶ್ಯೇನೇಭಿರಾಶುಭಿಃ ।
ಯಾತಮಶ್ವೇಭಿರಶ್ವಿನಾ ॥ ೭ ॥

॥ ಪದಪಾಠಃ ॥

ಆ । ನಃ । ಸ್ತೋಮಂ । ಉಪ । ದ್ರವತ್ । ತೂಯಂ । ಶ್ಯೇನೇಭಿಃ । ಆಶುಭಿಃ ।
ಯಾತಂ । ಅಶ್ವೇಭಿಃ । ಅಶ್ವಿನಾ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ನೋಽಸ್ಮಾಕಂ ಸ್ತೋಮಂ ಸ್ತೋತ್ರಮಶ್ವೇಭಿರಶ್ವೈಃ । ದ್ರವತ್ ತೂಯಮಿತ್ಯುಭೇ ಕ್ಷಿಪ್ರನಾಮನೀ । ಏಕಃ ಪೂರಕಃ । ತೂಯಂ ಕ್ಷಿಪ್ರಮುಪಾ ಯಾತಂ । ಉಪಗಚ್ಛತಂ । ಯದ್ವಾ । ದ್ರವದಿತಿ ಸ್ತೋಮವಿಶೇಷಣಂ । ದ್ರವಚ್ಛೀಘ್ರಂ ಪ್ರವರ್ತಮಾನಂ ಸ್ತೋಮಮಿತ್ಯರ್ಥಃ । ಕೀದೃಶೈರಶ್ವೈಃ । ಶ್ಯೇನೇಭಿಃ ಶಂಸನೀಯಗಾಮಿಭಿಃ ಪ್ರಶಸ್ಯಗಮನೈರಾಶುಭಿಃ ಶೀಘ್ರಗೈಃ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಶ್ಯೇನೇಭಿಃ—ಪ್ರಶಂಸನೀಯವಾದ ಗಮನವುಳ್ಳವೂ (ಶ್ಯೇನಪಕ್ಷಿಗಳಂತೆ ಗಮನವುಳ್ಳವೂ) । ಆಶುಭಿಃ—ವೇಗಗಾಮಿಗಳೂ ಆದ । ಅಶ್ವೇಭಿಃ—ಅಶ್ವಗಳೊಡನೆ । ದ್ರವತ್—ಶೀಘ್ರವಾಗಿಯೇ ಪಠಿತವಾಗುವ । ನಃ—ನಮ್ಮ । ಸ್ತೋಮಂ—ಸ್ತೋತ್ರಕ್ಕಭಿಮುಖವಾಗಿ । ತೂಯಂ—ಕ್ಷಿಪ್ರವಾಗಿ । ಉಪ ಆ ಯಾತಂ ದಯಮಾಡಿ ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಪ್ರಶಂಸನೀಯವಾದ (ಶ್ಯೇನಪಕ್ಷಿಯಂತೆ) ಗಮನವುಳ್ಳವೂ, ವೇಗಗಾಮಿಗಳೂ ಆದ ಅಶ್ವಗಳೊಡನೆ ಕೂಡಿಕೊಂಡು ಶೀಘ್ರವಾಗಿಯೇ ಪಠಿತವಾಗುವ ನಮ್ಮ ಸ್ತೋತ್ರಕ್ಕಭಿಮುಖವಾಗಿ ಕ್ಷಿಪ್ರವಾಗಿ ಬನ್ನಿರಿ.

English Translation

Come, Aswins, to our adoration, hastening quickly with your rapid falcon-like horses.

। ಸಂಹಿತಾಪಾಠಃ ।

ಯೇಭಿಸ್ತಿಸ್ರಃ ಪರಾವತೋ ದಿವೋ ವಿಶ್ವಾನಿ ರೋಚನಾ ॥
ತ್ರೀಁರಕ್ತೂನ್ಪರಿದೀಯಥಃ ॥ ೮ ॥

॥ ಪದಪಾಠಃ ॥

ಯೇಭಿಃ । ತಿಸ್ರಃ । ಪರಾಽವತಃ । ದಿವಃ । ವಿಶ್ವಾನಿ । ರೋಚನಾ ।
ತ್ರೀನ್ । ಅಕ್ತೂನ್ । ಪರಿಽದೀಯಥಃ ॥ ೮ ॥

। ಸಾಯಣಭಾಷ್ಯಂ ।

ಹೇ ಅಶ್ವಿನೌ ತಿಸ್ರೋ ದಿವಸ್ತ್ರೀನ್ದಿವಸಾಂಸ್ತ್ರೀನಕ್ತೂಂಸ್ತಿಸ್ರೋ ರಾತ್ರೀಶ್ಚ ॥ ಅತ್ಯಂತಸಂಯೋಗೇ ದ್ವಿತೀಯಾ ॥ ಏತಾವಂತಂ ಕಾಲಂ ವಿಶ್ವಾನಿ ಸರ್ವಾಣಿ ವ್ಯಾಪ್ತಾನಿ ವಾ ರೋಚನಾ ರೋಚಮಾನಾನಿ ನಕ್ಷತ್ರರೂಪಾಣಿ ದೇವಗೃಹಾಣಿ ಪರಾವತೋ ದೂರದೇಶಾದ್ಯೇಭಿರ್ಯೈರಶ್ವೈಃ ಪರಿದೀಯಥಃ ಪರಿಗಚ್ಛಥಃ। ದೀಯತಿರ್ಗತಿಕರ್ಮಾ । ತೈರಸ್ಮಾಕಂ ಸ್ತೋತ್ರಮುಪಯಾತಮಿತಿ ಪೂರ್ವತ್ರಾನ್ವಯಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) ತಿಸ್ರಃ—ಮೂರು । ದಿವಃ—ದಿವಸಗಳಲ್ಲಿಯೂ । ತ್ರೀನ್—ಮೂರು । ಅಕ್ತೂನ್—ರಾತ್ರಿಗಳಲ್ಲಿಯೇ । ರೋಚನಾ—ನಕ್ಷತ್ರಾದಿಗಳಿಂದ ಪ್ರಕಾಶಮಾನವಾದ । ವಿಶ್ವಾನಿ—ಸಮಸ್ತ ದೇವಲೋಕಗಳನ್ನೂ । ಪರಾವತಃ—ಅತ್ಯಂತ ದೂರದೇಶದಿಂದಲೇ । ಯೇಭಿಃ—ಯಾವ ಅಶ್ವಗಳೊಡನೆ । ಪರಿದೀಯಥಃ—ಸಂಚರಿಸುವಿರೋ (ಆ ಅಶ್ವಗಳೊಡನೆ ನಮ್ಮ ಸ್ತುತಿಗಳನ್ನು ಸ್ವೀಕರಿಸಲು ಬನ್ನಿರಿ).

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಕೇವಲ ಮೂರು ಅಹಸ್ಸು ಮತ್ತು ಮೂರು ರಾತ್ರಿಗಳಲ್ಲಿಯೇ ನಕ್ಷತ್ರಾದಿಗಳಿಂದ

ಪ್ರಕಾಶಿಸುವ ಸಕಲ ದೇವಲೋಕಗಳನ್ನೂ ಅತ್ಯಂತ ದೂರದೇಶದಿಂದಲೇ ಯಾವ ಅಶ್ವಗಳೊಡನೆ ಸಂಚರಿಸುವಿರೋ ಆ ಅಶ್ವಗಳೊಡನೆ ನಮ್ಮ ಸ್ತುತಿಗಳನ್ನು ಸ್ವೀಕರಿಸಲು ಬನ್ನಿರಿ.

## English Translation

With which in three days and three nights you traverse from afar all the brilliant (constellations).

॥ ಸಂಹಿತಾಪಾಠಃ ॥

ಉತ ನೋ ಗೋಮತೀರಿಷ ಉತ ಸಾತೀರಹರ್ವಿದಾ ।
ವಿ ಪಥಃ ಸಾತಯೇ ಸಿತಂ ॥ ೯ ॥

॥ ಪದಪಾಠಃ ॥

ಉತ । ನಃ । ಗೋಽಮತೀಃ । ಇಷಃ । ಉತ । ಸಾತೀಃ । ಅಹಃಽವಿದಾ ।
ವಿ । ಪಥಃ । ಸಾತಯೇ । ಸಿತಂ ॥ ೯ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಅಹರ್ವಿದಾಹ್ನೋ ಲಂಭಯಿತಾರೌ । ಯದ್ವಾ । ಅಹ್ನಿ ಪ್ರಭಾತಸಮಯೇ ವೇದಿತವ್ಯೌ ಸ್ತೋತವ್ಯೌ । ನೋಽಸ್ಮಭ್ಯಂ ಗೋಮತೀರ್ಬಹುಭಿರ್ಗೋಭಿರ್ಯುಕ್ತಾ ಇಷೋಽನ್ನಾನಿ ದತ್ತಮಿತಿ ಶೇಷಃ। ಉತಾಪಿ ಚ ಸಾತೀಃ ಸಂಭಜನೀಯಾ ದಾತವ್ಯಾ ವಾ ರಾಯಶ್ಚಾಸ್ಮಭ್ಯಂ ದತ್ತಂ॥ ಸನತೇಃ ಸನೋತೇರ್ವಾ ಕರ್ಮಣಿ ಕ್ತಿನ್ । ಜನಸನಖನಾಮಿತ್ಯಾತ್ವಂ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ ನಿಪಾತ್ಯತೇ॥ ಅಪಿ ಚಾಸ್ಮಾಕಂ ಸಾತಯ ಉಕ್ತಾನಾಂ ಗವಾದೀನಾಂ ಲಾಭಾಯ ಸಂಭಜನಾಯ ವಾ ಪಥಸ್ತದುಪಾಯರೂಪಾನ್ಮಾರ್ಗಾನ್ ವಿ ಸಿತಂ । ವಿಶೇಷೇಣ ಬಧ್ನೀತಂ । ಯಥಾನ್ಯೇ ನ ಪ್ರವಿಶಂತಿ ತಥಾ ಕುರುತಮಿತ್ಯರ್ಥಃ॥ ಷಿಞ್ ಬಂಧನೇ । ಛಾಂದಸೋ ವಿಕರಣಸ್ಯ ಲುಕ್ ॥ ಯದ್ವಾ । ಉಪಸರ್ಗವಶಾದಯಂ ಧಾತುಃ ಸ್ವಾರ್ಥವಿಪರೀತೇ ಬಂಧನಾಭಾವೇ ವರ್ತತೇ । ಪ್ರಸ್ಮರಣಂ ಪ್ರಸ್ಥಾನಮಿತಿ ಯಥಾ। ಪಥೋ ಮಾರ್ಗಾನ್ ವಿ ಸಿತಂ । ವಿಮುಂಚತಂ । ಪ್ರದರ್ಶಯತಮಿತ್ಯರ್ಥಃ ॥ ಪಥಿಶಬ್ದೋಽಂತೋದಾತ್ತಃ । ತಸ್ಯ ಶಸಿ ಟಿಲೋಪೇ ಉದಾತ್ತನಿವೃತ್ತಿಸ್ವರೇಣ ಶಸ ಉದಾತ್ತತ್ವಂ॥

॥ ಪ್ರತಿಪದಾರ್ಥ ॥

ಉತ—ಮತ್ತು । ಅಹರ್ವಿದಾ—ಪ್ರಭಾತಸಮಯದಲ್ಲಿ ಗೋಚರರಾಗಿ ಸ್ತುತಿಗೆ ಪಾತ್ರರಾಗುವ ಎಲೈ ಅಶ್ವಿನೀ ದೇವತೆಗಳೇ। ನಃ—ನಮಗೆ । ಗೋಮತೀಃ—ಅನೇಕ ಗೋವುಗಳಿಂದ ಕೂಡಿದ । ಇಷಃ—ಅನ್ನಗಳನ್ನು (ಕೊಡಿರಿ)।

ಉತ—ಮತ್ತು | ಸಾತೀಃ—ಭೋಗಯೋಗ್ಯವಾದ ಧನಗಳನ್ನು ಕೊಡಿರಿ | ಸಾತಯೇ—ನಮ್ಮ ಇಷ್ಟಾರ್ಥ ಲಾಭಕ್ಕಾಗಿ | ಪಥಃ—ಅವುಗಳ ಸಾಧಕವಾದ ಮಾರ್ಗಗಳನ್ನು | ವಿ ಸಿತಂ—ಶತ್ರುಗಳ ಪ್ರವೇಶವಿಲ್ಲದಂತೆ ತಡೆಯಿರಿ.

॥ ಭಾವಾರ್ಥ ॥

ಪ್ರಭಾತಸಮಯದಲ್ಲಿ ಗೋಚರರಾಗಿ ನಮ್ಮ ಸ್ತುತಿಗೆ ಪಾತ್ರರಾಗುವ ಎಲೈ ಅಶ್ವಿನೀದೇವತೆಗಳೇ, ನಮಗೆ ಅನೇಕ ಗೋವುಗಳಿಂದ ಕೂಡಿದ ಅನ್ನಗಳನ್ನು ಕೊಡಿರಿ ಮತ್ತು ಭೋಗಯೋಗ್ಯವಾದ ಧನಗಳನ್ನೂ ಕೊಡಿರಿ. ನಮ್ಮ ಇಷ್ಟಾರ್ಥಲಾಭಕ್ಕಾಗಿ ಅವುಗಳ ಸಾಧಕವಾದ ಮಾರ್ಗಗಳನ್ನು ಶತ್ರುಗಳ ಪ್ರವೇಶವಿಲ್ಲದಂತೆ ತಡೆಯಿರಿ.

## English Translation

Bringers of the day, (bestow) upon us food with cattle, or donations of wealth ; and close the path (against aggression) upon our gains.

॥ ಸಂಹಿತಾಪಾಠಃ ॥

ಆ ನೋ ಗೋಮಂತಮಶ್ವಿನಾ ಸುವೀರಂ ಸುರಥಂ ರಯಿಂ ।
ವೋಳ್ಹಮಶ್ವಾವತೀರಿಷಃ ॥ ೧೦ ॥

॥ ಪದಪಾಠಃ ॥

ಆ । ನಃ । ಗೋಽಮಂತಂ । ಅಶ್ವಿನಾ । ಸುಽವೀರಂ । ಸುಽರಥಂ । ರಯಿಂ ।
ವೋಳ್ಹಂ । ಅಶ್ವಽವತೀಃ । ಇಷಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ನೋಽಸ್ಮಭ್ಯಂ ರಯಿಂ ಧನಮಾ ವೋಳ್ಹಂ । ಆವಹತಂ । ಆಹರತಂ ॥ ವಹೇರ್ಲೋಟಿ ಛಾಂದಸಃ ಶಪೋ ಲುಕ್ । ಢತ್ವಧತ್ವಷ್ಟುತ್ವಢಲೋಪೇಷು ಕೃತೇಷು ಸಹಿವಹೋರೋದವರ್ಣಸ್ಯೇತ್ಯೋತ್ವಂ ॥ ಕೀದೃಶಂ ರಯಿಂ । ಗೋಮಂತಂ ಬಹ್ವೀಭಿರ್ಗೋಭಿರ್ಯುಕ್ತಂ ಸುವೀರಂ । ವೀರ್ಯಾಜ್ಜಾಯಂತ ಇತಿ ವೀರಾಃ ಪುತ್ರಾಃ । ಶೋಭನೈಸ್ತೈರುಪೇತಂ । ವಿವಿಧಮೀರಯಂತಿ ಶತ್ರೂನಿತಿ ವಾ ವೀರಾಃ ಶೂರಾಃ । ತೈರುಪೇತಂ । ಸುರಥಂ ಶೋಭನರಥೇನ ಯುಕ್ತಂ । ಅಪಿ ಚಾಶ್ವಾವತೀರಶ್ವಯುಕ್ತಾಃ ॥ ಮಂತ್ರೇ ಸೋಮಾಶ್ವೇತಿ ಮತೌ ದೀರ್ಘಃ ॥ ಇಷ ಇಷ್ಯಮಾಣಾನ್ಯನ್ನಾನಿ ಚಾಸ್ಮಭ್ಯಮಾವಹತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ನಃ—ನಮಗೆ । ಗೋಮಂತಂ—ಗೋವುಗಳಿಂದ ಕೂಡಿದುದೂ ।

ಸುವೀರಂ—ವೀರಪುತ್ರರಿಂದ ಕೂಡಿದುದೂ। ಸುರಥಂ—ಉತ್ತಮವಾದ ರಥದಿಂದ ಕೂಡಿದುದೂ। ಅಶ್ವಾವತೀಃ—ಅಶ್ವಯುಕ್ತವಾದುದೂ ಆದ । ರಯಿಂ—ಧನವನ್ನು । ಆ ವೋಳ್ಹಂ—ತಂದೊದಗಿಸಿರಿ। ಇಷಃ—ಅನ್ನವನ್ನೂ ತಂದೊದಗಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಮಗೆ ಗೋವುಗಳಿಂದ ಕೂಡಿದುದೂ, ವೀರಪುತ್ರರಿಂದ ಕೂಡಿದುದೂ, ಉತ್ತಮವಾದ ರಥದಿಂದ ಕೂಡಿದುದೂ, ಅಶ್ವಯುಕ್ತವಾದುದೂ ಆದ ಧನವನ್ನು ತಂದೊದಗಿಸಿರಿ. ಅನ್ನವನ್ನೂ ತಂದೊದಗಿಸಿರಿ.

## English Translation

Bring to us, Aswins, riches comprising cattle, male offspring, chariots, horses, food.

॥ ಸಂಹಿತಾಪಾಠಃ ॥

ವಾವೃಧಾನಾ ಶುಭಸ್ಪತೀ ದಸ್ರಾ ಹಿರಣ್ಯವರ್ತನೀ ।
ಪಿಬತಂ ಸೋಮ್ಯಂ ಮಧು ॥ ೧೧ ॥

॥ ಪದಪಾಠಃ ॥

ವವೃಧಾನಾ । ಶುಭಃ । ಪತೀ ಇತಿ । ದಸ್ರಾ । ಹಿರಣ್ಯವರ್ತನೀ ಇತಿ ಹಿರಣ್ಯऽವರ್ತನೀ ।
ಪಿಬತಂ । ಸೋಮ್ಯಂ । ಮಧು ॥ ೧೧ ॥

॥ ಸಾಯಣಭಾಷ್ಯಂ ॥

ದ್ವಿದೇವತ್ಯಸ್ಯಾಶ್ವಿನ ಗ್ರಹಸ್ಯ ವಾವೃಧಾನೇತ್ಯೇಷಾ ಯಾಜ್ಯಾ। ಸೂತ್ರ್ಯತೇ ಹಿ। ಹೋತಾ ಯಕ್ಷದಶ್ವಿನಾ ನಾಸತ್ಯಾ ವಾವೃಧಾನಾ ಶುಭಸ್ಪತೀ । ಆ. ೫-೫ । ಇತಿ ॥

ಹೇ ಶುಭಸ್ಪತೀ ಶುಭಃ ಶೋಭನಸ್ಯಾಲಂಕಾರಸ್ಯೋದಕಸ್ಯ ವಾ ಪತೀ ಸ್ವಾಮಿನೌ ಹೇ ಅಶ್ವಿನೌ ॥ ಸುಬಾಮಂತ್ರಿತ ಇತಿ ಷಷ್ಠ್ಯಂತಸ್ಯ ಪರಾಂಗವದ್ಭಾವಾತ್ ಷಷ್ಠ್ಯಾಮಂತ್ರಿತಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ ॥ ದಸ್ರಾ ದರ್ಶನೀಯೌ ಶತ್ರೂಣಾಮುಪಕ್ಷಪಯಿತಾರೌ ವಾ ಹಿರಣ್ಯವರ್ತನೀ ಹಿರಣ್ಮಯಮಾರ್ಗೌ । ಯದ್ವಾ । ವರ್ತತೇಽಸ್ಮಿನ್ನಿತಿ ವರ್ತನೀ ರಥಃ । ಹಿರಣ್ಮಯೋ ರಥೋ ಯಯೋ-ಸ್ತೌ । ಯದ್ವಾ । ವರ್ತನಿ ವರ್ತನಮಾಚರಣಂ । ಹಿತರಮಣೀಯಾಚರಣೌ । ವವೃಧಾನಾ ಪ್ರವೃದ್ಧೌ ॥ ವೃಧೇರ್ಲಿಟಃ ಕಾನಚ್ ॥ ಈದೃಶೌ ಯುವಾಂ ಸೋಮ್ಯಂ ಸೋಮಮಯಂ ಮಧು ಮಾಧುರ್ಯೋ-ಪೇತಂ ಮದಕರಂ ವಾ ರಸಂ ಪಿಬತಂ ॥

॥ ಪ್ರತಿಪದಾರ್ಥ ॥

ಶುಭಸ್ಪತೀ—ಮಂಗಳಕರವಾದ ಉದಕಕ್ಕೆ ಈಶ್ವರರೂ । ದಸ್ರಾ—ಆಕರ್ಷಕವಾದ ರೂಪವುಳ್ಳವರೂ । ಹಿರಣ್ಯವರ್ತನೀ—ಸುವರ್ಣಮಯವಾದ ರಥವುಳ್ಳವರೂ । ವಾವೃಧಾನಾ—ಪ್ರವೃದ್ಧರೂ ಆದ ಎಲೈ ಅಶ್ವಿನೀ ದೇವತೆಗಳೇ । ಮಧು—ಮಾಧುರ್ಯದಿಂದ ಕೂಡಿದ । ಸೋಮ್ಯಂ—ಸೋಮರಸವನ್ನು । ಪಿಬತಂ—ಪಾನಮಾಡಿರಿ.

॥ ಭಾವಾರ್ಥ ॥

ಮಂಗಳಕರವಾದ ಉದಕಕ್ಕೆ ಈಶ್ವರರೂ, ಆಕರ್ಷಕವಾದ ರೂಪವುಳ್ಳವರೂ, ಸುವರ್ಣಮಯವಾದ ರಥವುಳ್ಳವರೂ, ಪ್ರವೃದ್ಧರೂ ಆದ ಎಲೈ ಅಶ್ವಿನೀದೇವತೆಗಳೇ, ಮಾಧುರ್ಯದಿಂದ ಕೂಡಿದ ಸೋಮರಸವನ್ನು ಪಾನಮಾಡಿರಿ.

## English translation

Magnificent lords of good fortune, handsome Aswins, riding in a golden chariot, drink the sweet Soma beverage

॥ ವಿಶೇಷವಿಷಯಗಳು ॥

ದ್ವಿದೇವತ್ಯಗ್ರಹವಾದ ಆಶ್ವಿನಗ್ರಹಸಂಬಂಧವಾದ ಹೋಮದಲ್ಲಿ ವಾವೃಧಾನಾ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಹೋತಾ ಯಕ್ಷದಶ್ವಿನಾ ನಾಸತ್ಯಾ ವಾವೃಧಾನಾ ಶುಭಸ್ಪತೀ ಎಂಬ ಸೂತ್ರದಿಂದ (ಆ. ೫-೫) ವಿಸ್ತೃತವಾಗಿರುವುದು.

॥ ಸಂಹಿತಾಪಾಠಃ ॥

ಅಸ್ಮಭ್ಯಂ ವಾಜಿನೀವಸೂ ಮಘವದ್ಭ್ಯಶ್ಚ ಸಪ್ರಥಃ ।
ಛರ್ದಿರ್ಯಂತಮದಾಭ್ಯಂ ॥ ೧೨ ॥

॥ ಪದಪಾಠಃ ॥

ಅಸ್ಮಭ್ಯಂ । ವಾಜಿನೀವಸೂ ಇತಿ ವಾಜಿನೀऽವಸೂ । ಮಘವತ್ऽಭ್ಯಃ । ಚ । ಸऽಪ್ರಥಃ ।
ಛರ್ದಿಃ । ಯಂತಂ । ಅದಾಭ್ಯಂ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ವಾಜಿನೀವಸೂ । ವಾಜಿನೀ ಹವಿರ್ಯುಕ್ತಾ ಯಾಗಕ್ರಿಯಾ । ತಸ್ಯಾಂ ವಸು ಧನಂ ಹವಿರ್ಭಾಗಲಕ್ಷಣಂ ಯಯೋಸ್ತಥಾವಿಧೌ ಹೇ ಅಶ್ವಿನೌ ಅಸ್ಮಭ್ಯಂ ಸ್ತೋತೃಭ್ಯೋ ಮಘವದ್ಭ್ಯಃ । ಮಘಂ ಧನಂ ಹವಿರ್ಲಕ್ಷಣಂ । ತದ್ವದ್ಭ್ಯೋ ಯಜಮಾನೇಭ್ಯಶ್ಚ ಸಪ್ರಥಃ ಸರ್ವತಃ ಪೃಥು ವಿಸ್ತೀರ್ಣಮದಾಭ್ಯಂ

ಕೇನಾಪ್ಯಹಿಂಸ್ಯಂ ಛರ್ದಿಃ। ಗೃಹನಾಮೈತತ್। ಗೃಹಂ ಯಂತಂ। ನಿಯಚ್ಛತಂ। ದತ್ತಮಿತಿ ಯಾವತ್॥ ಯಮೇಶ್ಛಾಂದಸಃ ಶಪೋ ಲುಕ್। ಛಂದಸ್ಯುಭಯಥೇತ್ಯಾರ್ಧಧಾತುಕತ್ವೇನ ಙಿತ್ತ್ವಾಭಾವಾದನುನಾಸಿಕಲೋಪಾಭಾವಃ॥

। ಪ್ರತಿಪದಾರ್ಥ ।

ವಾಜಿನೀವಸೂ—ಹವಿಸ್ಸಿನ ರೂಪದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ । ಮಘವದ್ಭ್ಯಃ—ಹವಿಸ್ಸನ್ನು ಹಿಡಿದು ಅರ್ಪಿಸುವ ಯಜಮಾನನಿಗೂ । ಅಸ್ಮಭ್ಯಂ ಚ—ನಮಗೂ ಸಹ । ಸಪ್ರಥಃ—ಸರ್ವತ್ರ ವ್ಯಾಪಿಸಿ ವಿಸ್ತರಿಸಿರುವುದೂ । ಅದಾಭ್ಯಂ—ಅಹಿಂಸಿತವಾದುದೂ ಆದ । ಛರ್ದಿಃ—ಗೃಹವನ್ನು । ಯಂತಂ—ಕೊಡಿರಿ.

। ಭಾವಾರ್ಥ ।

ಹವಿಸ್ಸಿನ ರೂಪದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ, ಹವಿಸ್ಸನ್ನು ಅರ್ಪಿಸುವ ಯಜಮಾನನಿಗೂ ನಮಗೂ ಸಹ ಸರ್ವತ್ರ ವ್ಯಾಪಿಸಿ ವಿಸ್ತರಿಸಿರುವುದೂ ಅಹಿಂಸಿತವಾದುದೂ ಆದ ಗೃಹವನ್ನು ಕೊಡಿರಿ.

## English Translation

Affluent in sacrifices, grant to us who are opulent (in oblations) a spacious unassailable dwelling

। ಸಂಹಿತಾಪಾಠಃ ।

ನಿ ಷು ಬ್ರಹ್ಮ ಜನಾನಾಂ ಯಾವಿಷ್ಟಂ ತೂಯುಮಾ ಗತಂ ।
ಮೋ ಷ್ವ೧ನ್ಯಾಁ ಉಪಾರತಂ ॥ ೧೩ ॥

॥ ಪದಪಾಠಃ ॥

ನಿ । ಸು । ಬ್ರಹ್ಮ । ಜನಾನಾಂ । ಯಾ । ಅವಿಷ್ಟಂ । ತೂಯಂ । ಆ । ಗತಂ ।
ಮೋ ಇತಿ । ಸು । ಅನ್ಯಾನ್ । ಉಪ । ಅರತಂ ॥ ೧೩ ॥

। ಸಾಯಣಭಾಷ್ಯಂ ।

ಹೇ ಅಶ್ವಿನೌ ಯಾ ಯೌ ಯುವಾಂ ಜನಾನಾಂ ಪ್ರಾಣಿನಾಂ ಮಧ್ಯೇ ಬ್ರಹ್ಮ ಬ್ರಾಹ್ಮಣಜಾತಿಂ ಸು ಸುಷ್ಠು ನಿ ನಿತರಾಮವಿಷ್ಟಂ ಅರಕ್ಷಿಷ್ಟಂ । ಯದ್ವಾ । ಜನಾನಾಂ ಯಜಮಾನಾನಾಂ ಬ್ರಹ್ಮ ಪರಿವೃಢಂ ಸ್ತೋತ್ರಂ ಹವಿರ್ಲಕ್ಷಣಮನ್ನಂ ವಾ ಯೌ ಯುವಾಂ ನ್ಯವಿಷ್ಟಂ ನ್ಯಗಚ್ಛತಂ । ಅವತಿರ್ಗತ್ಯರ್ಥಃ । ತೌ ಯುವಾಂ ತೂಯಂ ಕ್ಷಿಪ್ರಮಾ ಗತಂ । ಅಸ್ಮಾನಪ್ಯಾಗಚ್ಛತಂ । ಅನ್ಯಾನಸ್ಮದ್ವ್ಯತಿರಿಕ್ತಾನ್ಯಜಮಾನಾನ್

ಮೋ ಷ್ವಿವ ಸೂಪಾರತಂ । ಉಪಗಮನಂ । ಕದಾಚಿದಪಿ ಮ್ಯೆವ ಪ್ರಾಪ್ನುತಮಿತ್ಯರ್ಥಃ ॥ ಅತೇರ್ಮಾರ್ಗಣ ಲುಙಾಙಾಸತೇರ್ಶಾಸ್ತ್ರ್ಯರ್ಭ್ಯಶ್ಛೀತಿ ಚ್ಲೇರಙಾದೇಶಃ ॥

। ಪ್ರತಿಪದಾರ್ಥ ।

ಯಾ—ಯಾವ ನೀವು । ಜನಾನಾಂ—ಯಜಮಾನರ । ಬ್ರಹ್ಮ—ಸ್ತುತಿಯನ್ನು ಕುರಿತು । ಸು—ಉತ್ತಮವಾಗಿಯೂ । ನಿ—ವಿಶೇಷರೀತಿಯಲ್ಲಿಯೂ । ಅವಿಷ್ಟಂ—ಬರುವಿರೋ (ಅಂತಹ ನೀವು) । ತೂಯಂ—ಕ್ಷಿಪ್ರವಾಗಿ । ಆ ಗತಂ—ನಮ್ಮಲ್ಲಿಗೆ ಬನ್ನಿರಿ । ಅನ್ಯಾನ್—ನಮ್ಮನ್ನು ಬಿಟ್ಟು-ಉಳಿದ ಯಜಮಾನರಲ್ಲಿಗೆ । ಮೋ ಸು ಉಪಾರತಂ—ಹೋಗಲೇ ಬೇಡಿರಿ.

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ಯಾವ ನೀವು ಯಜಮಾನರ ಸ್ತುತಿಯನ್ನು ಸ್ವೀಕರಿಸಲು ಅತ್ಯುತ್ತಮವಾದ ರೀತಿಯಲ್ಲಿ ಬರುವಿರೋ ಅಂತಹ ನೀವು ನಮ್ಮಲ್ಲಿಗೆ ಕ್ಷಿಪ್ರವಾಗಿ ಬನ್ನಿರಿ. ನಮ್ಮನ್ನು ಬಿಟ್ಟು ಉಳಿದ ಯಜಮಾನರಲ್ಲಿಗೆ ಹೋಗಲೇಬೇಡಿರಿ.

## English Translation

You who ever carefully protect the Brahman amongst men, come quickly: tarry not with other (worshippers).

। ಸಂಹಿತಾಪಾಠಃ ।

ಅಸ್ಯ ಪಿಬತಮಶ್ವಿನಾ ಯುವಂ ಮದಸ್ಯ ಚಾರುಣಃ ।

ಮಧ್ವೋ ರಾತಸ್ಯ ಧಿಷ್ಣ್ಯಾ ॥ ೧೪ ॥

। ಪದಪಾಠಃ ।

ಅಸ್ಯ । ಪಿಬತಂ । ಅಶ್ವಿನಾ । ಯುವಂ । ಮದಸ್ಯ । ಚಾರುಣಃ ।

ಮಧ್ವಃ । ರಾತಸ್ಯ । ಧಿಷ್ಣ್ಯಾ ॥ ೧೪ ॥

। ಸಾಯಣಭಾಷ್ಯಂ ।

ಅಪರಾಹ್ಣಿಕೇ ಪ್ರವರ್ಗ್ಯೇ ಘರ್ಮಸ್ಯ ಹವಿಷೋಽಸ್ಯ ಪಿಬತಮಿತಿ ದ್ವಿತೀಯಾ ಯಾಜ್ಯಾ । ಸೂತ್ರಿತಂ ಚ । ಅಸ್ಯ ಪಿಬತಮಶ್ವಿನೇತಿ ವಾ ಪ್ರೇಷಿತೋ ಹೋತಾ । ಆ. ೪-೭ । ಇತಿ ॥

ಹೇ ಅಶ್ವಿನಾಶ್ವಿನೌ ಹೇ ಧಿಷ್ಣ್ಯಾ । ಧಿಷಣಾ ಸ್ತುತಿಃ । ತದರ್ಹೌ ಯುವಂ ಯುವಾಂ ಮದಸ್ಯ ಮದಕರಸ್ಯ ಚಾರುಣಃ ಶೋಭನಸ್ಯ ರಾತಸ್ಯಾಸ್ಮಾಭಿರ್ದತ್ತಸ್ಯಾಸ್ಯ ಮಧ್ವೋ ಮಧುರಸ್ಯ ಸೋಮಸ್ಯ ಸ್ವಾಂಶಲಕ್ಷಣಂ ಭಾಗಂ ಪಿಬತಂ । ಯದ್ವಾ । ದ್ವಿತೀಯಾರ್ಥೇ ಷಷ್ಠೀ । ಇಮಂ ಸೋಮಂ ಪಿಬತಃ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಧಿಷ್ಣ್ಯಾ—ಪ್ರಶಂಸೆಗೆ ಅರ್ಹರಾದ । ಯುವಂ—ನೀವು । ಮದಸ್ಯ—ಮದಕಾರಕವಾದವೂ । ಚಾರುಣಃ—ಶ್ರೇಷ್ಠವಾದುದೂ । ರಾತಸ್ಯ—ನಮ್ಮಿಂದ ದತ್ತವಾದುದೂ । ಅಸ್ಯ ಮಧ್ವಃ—ಮಧುರವಾದುದೂ ಆದ ಈ ಸೋಮರಸವನ್ನು । ಪಿಬತಂ—ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಪ್ರಶಂಸಾರ್ಹರಾದ ನೀವು ಮದಕಾರಕವಾದುದೂ, ಶ್ರೇಷ್ಠವಾದುದೂ, ನಮ್ಮಿಂದ ದತ್ತವಾದುದೂ, ಮಧುರವಾದುದೂ ಆದ ಈ ಸೋಮರಸವನ್ನು ಪಾನಮಾಡಿರಿ

## English Translation

Adorable Aswins, drink of this exhilarating, delightful, sweet (Soma beverage) presented by us.

॥ ವಿಶೇಷವಿಷಯಗಳು ॥

ಪ್ರವರ್ಗ್ಯ ಎಂಬ ಯಾಗದಲ್ಲಿ ಅಪರಾಹ್ಣಕಾಲದಲ್ಲಿ ಮಾಡುವ ಘರ್ಮವೆಂಬ ಹವಿರ್ಹೋಮದಲ್ಲಿ ಅಸ್ಯ ಪಿಬತಂ ಎಂಬ ಈ ಋಕ್ಕನ್ನು ಎರಡನೆಯ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ—ಅಸ್ಯ ಪಿಬತಮಶ್ವಿನೇತಿ ಚಾಪ್ರೇಷಿತೋ ಹೋತಾ ಎಂಬ ಸೂತ್ರದಿಂದ (ಆ. ೪-೭) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಅಸ್ಮೇ ಆ ವಹತಂ ರಯಿಂ ಶತವಂತಂ ಸಹಸ್ರಿಣಂ ।
ಪುರುಕ್ಷುಂ ವಿಶ್ವಧಾಯಸಂ ॥ ೧೫ ॥

॥ ಪದಪಾಠಃ ॥

ಅಸ್ಮೇ ಇತಿ । ಆ । ವಹತಂ । ರಯಿಂ । ಶತऽವಂತಂ । ಸಹಸ್ರಿಣಂ ।
ಪುರುऽಕ್ಷುಂ । ವಿಶ್ವऽಧಾಯಸಂ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಅಸ್ಮೇ ಅಸ್ಮಭ್ಯಂ ರಯಿಂ ಧನಮಾ ವಹತಂ । ಆನಯತಂ । ಕೀದೃಶಂ । ಶತವಂತಂ ಶತಸಂಖ್ಯೋಪೇತಂ ಸಹಸ್ರಿಣಂ ಸಹಸ್ರಸಂಖ್ಯೋಪೇತಂ ಚ ಪುರುಕ್ಷುಂ ಬಹುನಿವಾಸಂ ಯದ್ವಾ

ಪುರುಭಿರ್ಬಹುಭಿಃ ಸ್ತುತ್ಯಂ ವಿಶ್ವಧಾಯಸಂ ವಿಶ್ವೇಷಾಂ ಸರ್ವೇಷಾಮಸ್ಮದೀಯಾನಾಂ ಧಾರಕಂ ॥ ವಹಿಹಾಧಾಞ್ಭ್ಯಶ್ಛಂದಸೀತಿ ದಧಾತೇರಸುನ್ । ಣಿದಿತ್ಯನುವೃತ್ತೇರ್ಣಿದ್ವದ್ಭಾವೇನ ಯುಗಾಗಮಃ ॥

। ಪ್ರತಿಪದಾರ್ಥ ।

(ಎಲೈ ಅಶ್ವಿನೀದೇವತೆಗಳೇ) ಶತವಂತಂ—ಶತಸಂಖ್ಯಾಕವಾದುದೂ । ಸಹಸ್ರಿಣಂ—ಸಹಸ್ರಸಂಖ್ಯಾಕವಾದುದೂ । ಪುರುಕ್ಷುಂ—ಅನೇಕರಿಂದ ಪ್ರಶಂಸಿತವಾಗುವುದೂ । ವಿಶ್ವಧಾಯಸಂ—ಸಕಲರನ್ನೂ ಧರಿಸುವ ಶಕ್ತಿಯುಳ್ಳದ್ದೂ ಆದ । ರಯಿಂ—ಧನವನ್ನು । ಅಸ್ಮೇ—ನಮಗೆ । ಆ ವಹತಂ—ತಂದೊದಗಿಸಿರಿ.

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ಶತಸಂಖ್ಯಾಕವಾದುದೂ, ಸಹಸ್ರಸಂಖ್ಯಾಕವಾದುದೂ, ಅನೇಕರಿಂದ ಪ್ರಶಂಸಿತವಾಗುವುದೂ, ಸಕಲರನ್ನೂ ಧರಿಸುವ ಶಕ್ತಿಯುಳ್ಳದ್ದೂ ಆದ ಧನವನ್ನು ನಮಗೆ ತಂದೊದಗಿಸಿರಿ.

## English Translation

Bring unto us riches by hundreds and by thousands, desired by many, sustaining all.

। ಸಂಹಿತಾಪಾಠಃ ।

ಪುರುತ್ರಾ ಚಿದ್ಧಿ ವಾಂ ನರಾ ವಿಹ್ವಯಂತೇ ಮನೀಷಿಣಃ ।
ವಾಘದ್ಭಿರಶ್ವಿನಾ ಗತಂ ॥ ೧೬ ॥

। ಪದಪಾಠ ।

ಪುರುಽತ್ರಾ । ಚಿತ್ । ಹಿ । ವಾಂ । ನರಾ । ವಿಽಹ್ವಯಂತೇ । ಮನೀಷಿಣಃ ।
ವಾಘತ್ಽಭಿಃ । ಅಶ್ವಿನಾ । ಆ । ಗತಂ ॥ ೧೬ ॥

। ಸಾಯಣಭಾಷ್ಯಂ ।

ಹೇ ನರಾ ನರೌ ಸ್ತೋತೄಣಾಂ ಧನಸ್ಯ ನೇತಾರಾವಶ್ವಿನೌ ಮನೀಷಿಣೋ ಮನಸ ಈಶಿತಾರಃ ಸ್ತೋತಾರೋ ವಾಂ ಯುವಾಂ ಪುರುತ್ರಾ ಚಿದ್ಧಿ ಬಹುಷು ಹಿ ದೇಶೇಷು ವಿಹ್ವಯಂತೇ । ವಿವಿಧಮಾಹ್ವಯಂತಿ । ತಥಾ ಸತಿ ಹೇ ಅಶ್ವಿನೌ ವಾಘದ್ಭಿರ್ವಾಹಕೈರಶ್ವೈರಾ ಗತಂ । ಅಸ್ಮಾನೇವಾಗಚ್ಛತಂ ॥

। ಪ್ರತಿಪದಾರ್ಥ ।

ನರಾ—ಸ್ತೋತೃಗಳಿಗೆಲ್ಲಾ ನೇತೃರೂಪವಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಮನೀಷಿಣಃ ।

ಧ್ಯಾನಾತ್ಮಕವಾದ ಸ್ತುತಿಕರ್ತರು | ವಾಂ—ನಿಮ್ಮನ್ನು | ಪುರುತ್ರಾ ಚಿದ್ಧಿ—ಅನೇಕ ಪ್ರದೇಶಗಳಲ್ಲಿ | ವಿಹ್ವಯಂತೇ—ಅನೇಕ ವಿಧದಲ್ಲಿ ಪ್ರಾರ್ಥಿಸಿ ಕರೆಯುತ್ತಾರೆ (ಆದುದರಿಂದ) | ವಾಜೇಭಿಃ—ನಿಮ್ಮನ್ನು ವಹಿಸತಕ್ಕ ಅಶ್ವಗಳೊಂದಿಗೆ | ಆ ಗತಂ—ದಯಮಾಡಿರಿ.

॥ ಭಾವಾರ್ಥ ॥

ಸ್ತೋತೃಗಳಿಗೆಲ್ಲಾ ನೇತೃರೂಪರಾದ ಎಲೈ ಅಶ್ವಿನೀದೇವತೆಗಳೇ, ಧ್ಯಾನಾತ್ಮಕವಾದ ಸ್ತುತಿಗಳನ್ನು ನಿರ್ಮಿಸುವ ಸ್ತುತಿಕರ್ತರು ನಿಮ್ಮನ್ನು ಅನೇಕ ಪ್ರದೇಶಗಳಲ್ಲಿ ಅನೇಕ ವಿಧದಲ್ಲಿ ಪ್ರಾರ್ಥಿಸಿ ಕರೆಯುತ್ತಾರೆ. ಆದುದರಿಂದ ನಿಮ್ಮನ್ನು ವಹಿಸತಕ್ಕ ಅಶ್ವಗಳೊಡನೆ ದಯಮಾಡಿರಿ.

## English Translation

Leaders (of rites), wise men worship you in many places: come to us with your steeds.

॥ ಸಂಹಿತಾಪಾಠಃ ॥

ಜನಾಸೋ ವೃಕ್ತಬರ್ಹಿಷೋ ಹವಿಷ್ಮಂತೋ ಅರಂಕೃತಃ ।
ಯುವಾಂ ಹವಂತೇ ಅಶ್ವಿನಾ ॥ ೧೭ ॥

॥ ಪದಪಾಠಃ ॥

ಜನಾಸಃ । ವೃಕ್ತಽಬರ್ಹಿಷಃ । ಹವಿಷ್ಮಂತಃ । ಅರಂಽಕೃತಃ ।
ಯುವಾಂ । ಹವಂತೇ । ಅಶ್ವಿನಾ ॥ ೧೭ ॥

॥ ಸಾಯಣಭಾಷ್ಯಂ ॥

ವೃಕ್ತಬರ್ಹಿಷಃ । ವೃಕ್ತಂ ಛಿನ್ನಂ ಬರ್ಹಿರ್ಯೈಸ್ತೇ ತಥೋಕ್ತಾಃ । ಹವಿಷ್ಮಂತೋ ಹವಿರ್ಭಿರ್ಯುಕ್ತಾ ಅರಂಕೃತಃ ಪರ್ಯಾಪ್ತಕಾರಿಣಃ ಯದ್ವಾ ಹವಿರಾದೀನಾಮಲಂಕರ್ತಾರೋ ಜನಾಸ ಋತ್ವಿಗ್ಲಕ್ಷಣಾ ಜನಾ ಹೇ ಅಶ್ವಿನಾಶ್ವಿನೌ ಯುವಾಂ ಹವಂತೇ । ಆಹ್ವಯಂತಿ । ಅತ ಆಗಚ್ಛತಮಿತಿ ಶೇಷಃ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ | ವೃಕ್ತಬರ್ಹಿಷಃ—ಕತ್ತರಿಸಿ ಸಿದ್ಧಮಾಡಿದ ದರ್ಭಾಸನವನ್ನರ್ಪಿಸುವವರೂ | ಹವಿಷ್ಮಂತಃ—ಹವಿಸ್ಸನ್ನು ಹೊಂದಿರುವವರೂ | ಅರಂಕೃತಃ—ನಿಮಗೆ ತೃಪ್ತಿಯನ್ನುಂಟುಮಾಡುವಷ್ಟು ಹವಿರಾದಿಗಳನ್ನುಳ್ಳವರೂ (ಅಥವಾ ಹವಿರಾದಿಗಳನ್ನು ಘೃತಾದಿಗಳಿಂದ ಅಲಂಕರಿಸುವವರೂ) ಆದ | ಜನಾಸಃ—ಋತ್ವಿಗಾದಿಗಳು | ಯುವಾಂ—ನಿಮ್ಮನ್ನು | ಹವಂತೇ—ಪ್ರಾರ್ಥಿಸಿ ಕರೆಯುತ್ತಾರೆ.

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ಕತ್ತರಿಸಿ ಸಿದ್ಧಮಾಡಿದ ದರ್ಭಾಸನವನ್ನಪೇಕ್ಷಿಸುವವರೂ, ಹವಿಸ್ಸನ್ನು ಹೊಂದಿರುವವರೂ, ನಿಮಗೆ ತೃಪ್ತಿಯನ್ನುಂಟುಮಾಡುವಷ್ಟು ಹವಿರಾದಿಗಳನ್ನುಳ್ಳವರೂ, (ಹವಿಸ್ಸುಗಳನ್ನು ಘೃತಾದಿಗಳಿಂದ ಅಲಂಕರಿಸುವವರೂ) ಆದ ಋತ್ವಿಗಾದಿಗಳು ನಿಮ್ಮನ್ನು ಪ್ರಾರ್ಥಿಸಿ ಕರೆಯುತ್ತಾರೆ.

## English Translation

Men bearing the clipped sacred grass, presenting oblations, and completely fulfilling (their functions), worship you, Aswins.

। ಸಂಹಿತಾಪಾಠಃ ।

ಅಸ್ಮಾಕಮದ್ಯ ವಾಮಯಂ ಸ್ತೋಮೋ ವಾಹಿಷ್ಠೋ ಅಂತಮಃ ।
ಯುವಾಭ್ಯಾಂ ಭೂತ್ವಶ್ವಿನಾ ॥ ೧೮ ॥

। ಪದಪಾಠಃ ।

ಅಸ್ಮಾಕಂ । ಅದ್ಯ । ವಾಂ । ಅಯಂ । ಸ್ತೋಮಃ । ವಾಹಿಷ್ಠಃ । ಅಂತಮಃ ।
ಯುವಾಭ್ಯಾಂ । ಭೂತು । ಅಶ್ವಿನಾ ॥ ೧೮ ॥

। ಸಾಯಣಭಾಷ್ಯಂ ।

ಅದ್ಯೇದಾನೀಮಸ್ಮಾಕಮಯಂ ಸ್ತೋಮೋಽಸ್ಮದೀಯಂ ಸ್ತೋತ್ರಂ ಹೇ ಅಶ್ವಿನಾ ವಾಂ ಯುವಯೋರ್ವಾಹಿಷ್ಠೋ ವಾಹಯಿತೃತಮಃ ಪ್ರಾಪಯಿತೃತಮಃ ಸನ್ ಯುವಾಭ್ಯಾಮಂತಮೋಽಂತಿಕತಮೋಽತಿಶಯೇನ ಸಮೀಪವರ್ತೀ ಭೂತು । ಭವತು ॥ ತಮೇ ತಾದೇಶ್ಚ । ಪಾ. ೬-೪.೧೪೯-೯ । ಇತ್ಯಂತಿಕಶಬ್ದಸ್ಯ ತಾದಿಲೋಪಃ ಸ್ಮೃತಃ । ಭವತೇಶ್ಛಾಂದಸಃ ಶಪೋ ಲುಕ್ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಅದ್ಯ—ಈಗ । ಅಸ್ಮಾಕಂ—ನಮ್ಮಿಂದ ಪಠಿತವಾಗುವ । ಅಯಂ ಸ್ತೋಮಃ—ಈ ಸ್ತೋತ್ರವು । ವಾಂ—ನಿಮ್ಮನ್ನು । ವಾಹಿಷ್ಠಃ—ಉತ್ತಮವಾಗಿ ಸಮಾಪಿಸುವಯೋಗ್ಯತೆಯುಳ್ಳದ್ದಾಗಿ । ಯುವಾಭ್ಯಾಂ—ನಿಮ್ಮಿಬ್ಬರ । ಅಂತಮಃ—ಸಾನ್ನಿಧ್ಯವನ್ನು ಹೊಂದುವುದಾಗಿ । ಭೂತು—ಆಗಿರಲಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಈಗ ನಮ್ಮಿಂದ ಪಠಿತವಾಗುವ ಈ ಸ್ತೋತ್ರವು ನಿಮ್ಮನ್ನು ಉತ್ತಮವಾಗಿ ಸಮೀಪಿಸುವ ಯೋಗ್ಯತೆಯುಳ್ಳದ್ದಾಗಿ ನಿಮ್ಮಿಬ್ಬರ ಸಾನ್ನಿಧ್ಯವನ್ನು ಹೊಂದಲಿ.

English Translation

May this our praise to-day be conveyed successfully to you, Aswins and be most nigh to you.

॥ ಸಂಹಿತಾಪಾಠಃ ॥

ಯೋ ಹ ವಾಂ ಮಧುನೋ ದೃತಿರಾಹಿತೋ ರಥಚರ್ಷಣೇ ।
ತತಃ ಪಿಬತಮಶ್ವಿನಾ ॥ ೧೯ ॥

॥ ಪದಪಾಠಃ ॥

ಯಃ । ಹ । ವಾಂ । ಮಧುನಃ । ದೃತಿಃ । ಆಽಹಿತಃ । ರಥಽಚರ್ಷಣೇ ।
ತತಃ । ಪಿಬತಂ । ಅಶ್ವಿನಾ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾವಶ್ವಿನೌ ರಥಚರ್ಷಣೇ ರಥಸ್ಯ ಚರ್ಷಣೇ ದ್ರಷ್ಟವ್ಯೇ ಮಧ್ಯೇ ದೇಶೇ ಯೋ ದೃತಿರ್ಮಧುನೋ ಮಧುರಸ್ಯಾಸ್ಯಾಭಿರ್ದತ್ತಸ್ಯ ಸೋಮಸ್ಯ ಸಂಬಂಧೀ ತೇನ ಮಧುನಾ ಪೂರ್ಣ ಆಹಿತಃ ಸ್ಥಾಪಿತೋ ವರ್ತತೇ ತತೋ ದೃತೇಃ ಸಕಾಶಾತ್ಸೋಮಂ ಪಿಬತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ರಥಚರ್ಷಣೇ—ಎಲ್ಲರಿಗೂ ಗೋಚರವಾಗುವ ರಥದ ಮಧ್ಯ ಪ್ರದೇಶದಲ್ಲಿ । ವಾಂ ಹ—ನಿಮಗಾಗಿಯೇ । ಯಃ—ಯಾವ । ದೃತಿಃ—ಚರ್ಮದ ಚೀಲವು । ಮಧುನಃ—ಮಧುರವಾದ ಸೋಮದಿಂದ ಪೂರ್ಣವಾಗಿ । ಆಹಿತಃ—ಸ್ಥಾಪಿತವಾಗಿದೆಯೋ । ತತಃ—ಅದೇ ಚರ್ಮಚೀಲದಿಂದ । ಪಿಬತಂ—ಸೋಮವನ್ನು ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಎಲ್ಲರಿಗೂ ಗೋಚರವಾಗಿರುವ ರಥದ ಮಧ್ಯಪ್ರದೇಶದಲ್ಲಿ ನಿಮಗೋಸ್ಕರವಾಗಿಯೇ ಯಾವ ಚರ್ಮದ ಚೀಲವು ಮಧುರವಾದ ಸೋಮದಿಂದ ಪೂರ್ಣವಾಗಿ ಸ್ಥಾಪಿತವಾಗಿದೆಯೋ ಅದೇ ಚರ್ಮದ ಚೀಲದಿಂದ ಸೋಮವನ್ನು ಪಾನಮಾಡಿರಿ.

### English Translation

Drink, Aswins, from the skin (filled) with the sweet (Soma juice) which is suspended in view of your car.

॥ ಸಂಹಿತಾಪಾಠಃ ॥

ತೇನ ನೋ ವಾಜಿನೀವಸೂ ಪಶ್ವೇ ತೋಕಾಯ ಶಂ ಗವೇ ।
ವಹತಂ ಪೀವರೀರಿಷಃ ॥ ೨೦ ॥

॥ ಪದಪಾಠಃ ॥

ತೇನ । ನಃ । ವಾಜಿನೀವಸೂ ಇತಿ ವಾಜಿನೀಽವಸೂ । ಪಶ್ವೇ । ತೋಕಾಯ । ಶಂ । ಗವೇ ।
ವಹತಂ । ಪೀವರೀಃ । ಇಷಃ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ವಾಜಿನೀವಸೂ । ವಾಜೋಽನ್ನಂ ಬಲಂ ವಾ । ತದ್ಯುಕ್ತಧನೌ ನೋಽಸ್ಮಾಕಂ ಪಶ್ವೇ ಪಶವೇಽಶ್ವಾದಿಲಕ್ಷಣಾಯ ॥ ಜಸಾದಿಷು ಛಂದಸಿ ವಾವಚನಮಿತಿ ಘೇರ್ಙಿತೀತಿ ಗುಣಸ್ಯ ವಿಕಲ್ಪಿತತ್ವಾದ್ಯಣ್ ॥ ತೋಕಾಯ ಪುತ್ರಾಯ ಗವೇ ಚ ॥ ಜಾತ್ಯಭಿಪ್ರಾಯಂ ಸರ್ವತ್ರೈಕವಚನಂ ॥ ಪಶುಪ್ರಭೃತಿಭ್ಯಃ ಶಂ ಸುಖಂ ಯಥಾ ಭವತಿ ತಥಾ ಪೀವರೀಃ ಪ್ರವೃದ್ಧಾನೀಷೋಽನ್ನಾನಿ ತೇನ ಭವದೀಯೇನ ರಥೇನ ವಹತಂ । ಆವಹತಂ । ಪ್ರಾಪಯತಂ । ದತ್ತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ವಾಜಿನೀವಸೂ—ಶಕ್ತಿರೂಪವಾದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ । ನಃ—ನಮಗೆ । ಪಶ್ವೇ—ಅಶ್ವಾದಿರೂಪಗಳಾದ ಪಶುಗಳಿಗಾಗಿಯೂ। ತೋಕಾಯ—ಪುತ್ರಾರ್ಥವಾಗಿಯೂ। ಗವೇ—ಗೋವುಗಳಿಗಾಗಿಯೂ। ಶಂ—(ಇವುಗಳನ್ನು ಪಡೆಯಲು ಬೇಕಾದ) ಸುಖಸ್ಥಿತಿಯುಂಟಾಗಲು । ಪೀವರೀಃ—ಪುಷ್ಕಲವಾದ । ಇಷಃ—ಅನ್ನಗಳನ್ನು । ತೇನ—ನಿಮ್ಮ ರಥದಲ್ಲಿ । ವಹತಂ—ವಹಿಸಿಕೊಂಡು ಬನ್ನಿರಿ.

॥ ಭಾವಾರ್ಥ ॥

ಶಕ್ತಿರೂಪವಾದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ, ಅಶ್ವಾದಿರೂಪವಾದ ಪಶುಗಳನ್ನೂ, ಪುತ್ರರನ್ನೂ, ಗವಾದಿಗಳನ್ನೂ ಪಡೆಯಲು ಯಾವ ಸುಸ್ಥಿತಿಯುಂಟೋ ಆ ಸ್ಥಿತಿಯಲ್ಲಿರಿಸಲು ಪ್ರಭೂತವಾದ ಅನ್ನಗಳನ್ನು ನಿಮ್ಮ ರಥದಲ್ಲಿ ವಹಿಸಿಕೊಂಡು ಬನ್ನಿರಿ.

## English Translation

Affluent in oblations, bring to us with that (chariot) abundant food, so that there may be prosperity in horses, progeny, and cattle.

॥ ಸಂಹಿತಾಪಾಠಃ ॥

ಉತ ನೋ ದಿವ್ಯಾ ಇಷ ಉತ ಸಿಂಧೂँರಹರ್ವಿದಾ ।
ಅಪ ದ್ವಾರೇವ ವರ್ಷಥಃ ॥ ೨೧ ॥

॥ ಪದಪಾಠಃ ॥

ಉತ । ನಃ । ದಿವ್ಯಾಃ । ಇಷಃ । ಉತ । ಸಿಂಧೂನ್ । ಅಹಃऽವಿದಾ ।
ಅಪ । ದ್ವಾರಾऽಇವ । ವರ್ಷಥಃ ॥ ೨೧ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಅಹರ್ವಿದಾಹ್ನೋ ಲಂಭಯಿತಾರೌ । ಯದ್ವಾ । ಅಹ್ನಿ ಪ್ರಭಾತಸಮಯೇ ವೇದಿತವ್ಯೌ ಸ್ತೋತವ್ಯಾವಶ್ವಿನೌ । ದಿವ್ಯಾ ದಿವಿ ಭವಾ ಇಷ ಇಷ್ಯಮಾಣಾ ಅಪೋ ನೋಽಸ್ಮದರ್ಥಂ ದ್ವಾರೇವ ದ್ವಾರೇಣೇವ ಛಿದ್ರೇಣೇವಾಪ ವರ್ಷಥಃ । ಮೇಘಾದಪಕೃಷ್ಯ ಯುವಾಂ ಸಿಂಚಥಃ । ಉತಾಪಿ ಚ ಸಿಂಧೂನ್ ಸ್ಯಂದನಶೀಲಾ ನದೀರ್ವೃಷ್ಟ್ಯುತ್ಸೃಷ್ಟೈರುದಕೈರಸ್ಮಾಕಂ ಸ್ನಾನಪಾನಾದಿಕಾರ್ಯಾಯ ಕೃತವಂತಾವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಹರ್ವಿದಾ**—ಪ್ರಭಾತಸಮಯದಲ್ಲಿ ಸ್ತುತ್ಯರಾದ ಎಲೈ ಅಶ್ವಿನೀದೇವತೆಗಳೇ । **ಉತ**—ಮೇಲೆ ವರ್ಣಿತವಾದ ಕಾರ್ಯಗಳಲ್ಲದೇ । **ದಿವ್ಯಾಃ**—ದ್ಯುಲೋಕೋತ್ಪನ್ನವಾದವೂ । **ಇಷಃ**—ನಮ್ಮಿಂದ ಅಪೇಕ್ಷಿತವಾದವೂ ಆದ ಉದಕಗಳನ್ನು । **ನಃ**—ನಮಗಾಗಿ । **ದ್ವಾರೇವ**—ದ್ವಾರದಂತಿರುವ ಮೇಘಗಳಮೂಲಕ । **ಅಪವರ್ಷಯಃ**—ವೃಷ್ಟಿರೂಪದಲ್ಲಿ ಸುರಿಸಿದ್ದೀರಿ । **ಉತ**—ಮತ್ತು । **ಸಿಂಧೂನ್**—ಪ್ರವಹಿಸುವ ನದಿಗಳನ್ನೂ ನಮಗಾಗಿ ನಿರ್ಮಿಸಿದ್ದೀರಿ.

॥ ಭಾವಾರ್ಥ ॥

ಪ್ರಭಾತಸಮಯದಲ್ಲಿ ಸ್ತುತ್ಯರಾದ ಎಲೈ ಅಶ್ವಿನೀದೇವತೆಗಳೇ, ಮೇಲೆ ವರ್ಣಿತವಾದ ಕಾರ್ಯಗಳಲ್ಲದೇ, ದ್ಯುಲೋಕೋತ್ಪನ್ನವಾದವೂ, ನಮ್ಮಿಂದ ಅಪೇಕ್ಷಿತವಾದವೂ ಆದ ಉದಕಗಳನ್ನು ನಮಗಾಗಿ ಅಂತರಿಕ್ಷದ ದ್ವಾರದಂತಿರುವ ಮೇಘಗಳ ಮೂಲಕ ವೃಷ್ಟಿರೂಪದಲ್ಲಿ ಸುರಿಸಿದ್ದೀರಿ. ಮತ್ತು ಪ್ರವಹಿಸುವ ನದಿಗಳನ್ನೂ ನಮಗಾಗಿ ನಿರ್ಮಿಸಿದ್ದೀರಿ.

## English Translation

Bringers of the day, you rain upon us by the (open) door (of the clouds) the waters of heaven, or (with them fill) the rivers.

॥ ಸಂಹಿತಾಪಾಠಃ ॥

ಕದಾ ವಾಂ ತೌಗ್ರ್ಯೋ ವಿಧತ್ಸಮುದ್ರೇ ಜಹಿತೋ ನರಾ ।
ಯದ್ವಾಂ ರಥೋ ವಿಭಿಷ್ಪತಾತ್ ॥ ೨೨ ॥

॥ ಪದಪಾಠಃ ॥

ಕದಾ । ವಾಂ । ತೌಗ್ರ್ಯಃ । ವಿಧತ್ । ಸಮುದ್ರೇ । ಜಹಿತಃ । ನರಾ ।
ಯತ್ । ವಾಂ । ರಥಃ । ವಿಽಭಿಃ । ಪತಾತ್ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ನರಾ ನರೌ ನೇತಾರಾವಶ್ವಿನೌ ತೌಗ್ರ್ಯಸ್ತುಗ್ರಪುತ್ರೋ ಭುಜ್ಯುಃ ಸಮುದ್ರೇ ಜಲಧೌ ಜಹಿತೋಽಸುರೈಃ ಪ್ರಕ್ಷಿಪ್ತಃ ಸನ್ ಕದಾ ಕಸ್ಮಿನ್ಕಾಲೇ ವಾಂ ಯುವಾಂ ವಿಧತ್ । ಅವಿಧತ್ । ಸ್ತುತಿಭಿಃ ಪರ್ಯಚರತ್ । ಯದ್ಯದಾ ವಾಂ ಯುವಯೋರ್ವಿಭಿರ್ಗಂತೃಭಿರಶ್ವೈರುಪೇತೋ ರಥಃ ಪತಾತ್ ತಂ ಭುಜ್ಯುಮಾನೇತುಂ ಪತೇತ್ ಗಚ್ಛೇತ್ ತದಾನೀಂ ಭುಜ್ಯುರಸ್ತೌದಿತಿ ಪೂರ್ವೇಣಾರ್ಧೇನ ಪೃಷ್ಟಸ್ಯ ಪ್ರತಿವಚನಂ ॥

॥ ಪ್ರತಿಪದಾರ್ಥ ॥

ನರಾ—ನೇತೃಗಳಾದ ಎಲೈ ಅಶ್ವಿನೀದೇವತೆಗಳೇ । ತೌಗ್ರ್ಯಃ—ತುಗ್ರಪುತ್ರನಾದ ಭುಜ್ಯುವು । ಸಮುದ್ರೇ—ಸಮುದ್ರದಲ್ಲಿ । ಜಹಿತಃ—ಅಸುರರಿಂದ ಎಸೆಯಲ್ಪಟ್ಟು । ಕದಾ—ಯಾವಾಗ । ವಾಂ—ನಿಮ್ಮಿಬ್ಬರನ್ನೂ । ವಿಧತ್—ಉಪಚರಿಸಿದನೋ । ಯತ್—ಆಗ । ವಾಂ—ನಿಮ್ಮ । ವಿಭಿಃ—ಅಶ್ವಯುಕ್ತವಾದ । ರಥಃ—ರಥವು । ಪತಾತ್—ಆ ಭುಜ್ಯುವನ್ನು ರಕ್ಷಿಸಲು ಕೆಳಕ್ಕಿಳಿಯಿತು.

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ತುಗ್ರಪುತ್ರನಾದ ಭುಜ್ಯುವು ಅಸುರರಿಂದ ಸಮುದ್ರದಲ್ಲಿ ಎಸೆಯಲ್ಪಟ್ಟು ಯಾವಾಗ ನಿಮ್ಮಿಬ್ಬರನ್ನೂ ಉಪಚರಿಸಿದನೋ ಆಗ ನಿಮ್ಮ ಅಶ್ವಯುಕ್ತವಾದ ರಥವು ಆ ಭುಜ್ಯುವನ್ನು ರಕ್ಷಿಸಲು ಕೆಳಕ್ಕಿಳಿಯಿತು.

## English Translation

When the son of Tugra, thrown into the ocean glorified you, leaders, (of rites), then your chariot and horses descended.

॥ ಸಂಹಿತಾಪಾಠಃ ॥

ಯುವಂ ಕಣ್ವಾಯ ನಾಸತ್ಯಾಪಿರಿಪ್ತಾಯ ಹರ್ಮ್ಯೇ ।
ಶಶ್ವದೂತೀರ್ದಶಸ್ಯಥಃ ॥ ೨೩ ॥

॥ ಪದಪಾಠಃ ॥

ಯುವಂ । ಕಣ್ವಾಯ । ನಾಸತ್ಯಾ । ಅಪಿऽರಿಪ್ತಾಯ । ಹರ್ಮ್ಯೇ ।
ಶಶ್ವತ್ । ಊತೀಃ । ದಶಸ್ಯಥಃ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾ । ಸತ್ಸು ಸಾಧೂ ಸತ್ಯಾ । ನ ಸತ್ಯಾವಸತ್ಯಾ । ನ ಅಸತ್ಯಾ ನಾಸತ್ಯಾ ॥ ನಭ್ರಾಣ್ನಪಾದಿತಿ ನಞಃ ಪ್ರಕೃತಿಭಾವಃ ॥ ಯದ್ವಾ । ಸತ್ಯಸ್ಯ ನೇತಾರೌ ನಾಸಿಕಾಪ್ರಭವೌ ವಾ । ಉಕ್ತಂ ಚ ಭಗವತಾ ಯಾಸ್ಕೇನ। ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭಃ। ಸತ್ಯಸ್ಯ ಪ್ರಣೇತಾರಾವಿತ್ಯಾಗ್ರಾಯಣಃ। ನಾಸಿಕಾಪ್ರಭವೌ ಬಭೂವತುರಿತಿ ವಾ । ನಿ. ೬-೧೩ । ಇತಿ । ತೌ ಯುವಾಂ ಕಣ್ವಾಯೈತತ್ಸಂಜ್ಞಾಯರ್ಷಯೇ ಹರ್ಮ್ಯೇ ಹರ್ಮ್ಯತಲೇಽಪಿರಿಪ್ತಾಯಾಸುರೈರ್ಬಾಧಿತಾಯ ಶಶ್ವಚ್ಛಶ್ವತೀರ್ಬಹ್ವೀರೂತೀಃ ರಕ್ಷಾ ದಶಸ್ಯಥಃ। ದತ್ತವಂತೌ। ಯುವಂ ಕಣ್ವಾಯಾಪಿರಿಪ್ತಾಯ ಚಕ್ಷುಃ ಪ್ರತ್ಯಧತ್ತಂ । ಋ. ೧-೧೧೮-೭ । ಇತ್ಯತ್ರೇತಿಹಾಸ ಉಕ್ತಃ । ಸೋಽತ್ರ ದ್ರಷ್ಟವ್ಯಃ ॥

॥ ಪ್ರತಿಪದಾರ್ಥ ॥

ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । ಯುವಂ—ನೀವು । ಹರ್ಮ್ಯೇ—ಅವನ ಗೃಹದಲ್ಲಿ । ಅಪಿರಿಪ್ತಾಯ—ಅಸುರರಿಂದ ಹಿಂಸಿತನಾದ । ಕಣ್ವಾಯ—ಕಣ್ವಋಷಿಗೆ । ಶಶ್ವತ್—ಅನೇಕವಾದ । ಊತೀಃ—ರಕ್ಷಣೆಗಳನ್ನು । ದಶಸ್ಯಥಃ—ನೀಡಿದ್ದೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಸುರರು ಕಣ್ವನ ಕಣ್ಣನ್ನು ಕಿತ್ತು ಅವನನ್ನು ಅವನ ಗೃಹದಲ್ಲೇ ಅತಿಯಾಗಿ ಹಿಂಸಿಸಿದಾಗ ಆ ಕಣ್ವನಿಗೆ ಅನೇಕ ವಿಧವಾದ ರಕ್ಷಣೆಗಳನ್ನು ನೀಡಿದ್ದೀರಿ.

## English Translation

To Kanwa when blinded (by the Asuras) in his dwelling, you rendered, Nasatyas, effectual aid.

|| ಸಂಹಿತಾಪಾಠಃ ||

ತಾಭಿರಾ ಯಾತಮೂತಿಭಿರ್ನವ್ಯಸೀಭಿಃ ಸುಶಸ್ತಿಭಿಃ ।
ಯದ್ವಾಂ ವೃಷಣ್ವಸೂ ಹುವೇ ॥ ೨೪ ॥

|| ಪದಪಾಠಃ ||

ತಾಭಿಃ । ಆ । ಯಾತಂ । ಊತಿऽಭಿಃ । ನವ್ಯಸೀಭಿ । ಸುಶಸ್ತಿऽಭಿಃ ।
ಯತ್ । ವಾಂ । ವೃಷಣ್ವಸೂ ಇತಿ ವೃಷಣ್ऽವಸೂ । ಹುವೇ ॥ ೨೪ ॥

|| ಸಾಯಣಭಾಷ್ಯಂ ||

ಹೇ ವೃಷಣ್ವಸೂ ವರ್ಷಣಧನೌ ॥ ವೃಷಣ್ವಸ್ವಶ್ವಯೋರುಪಸಂಖ್ಯಾನಂ । ಪಾ. ೧-೪-೧೮-೪ । ಇತಿ ವೃಷಣ್ವಸ್ವೋ ನಿಪಾತ್ಯತೇ ॥ ತಾದಾನೀಂ ತಾಭಿಃ ಪೂರ್ವೋಕ್ತಾಭಿರ್ನವ್ಯಸೀಭಿರ್ನವತರಾಭಿಃ ಸುಶಸ್ತಿಭಿಃ ಸುಪ್ರಶಸ್ತಾಭಿರೂತಿಭೀ ರಕ್ಷಾಭಿಃ ಸಾರ್ಧಮಾ ಯಾತಂ । ಆಗಚ್ಛತಂ । ಯದ್ಯದಾ ವಾಂ ಹುವೇ ಸ್ತುತಿಭಿರಾಹ್ವಯಾಮಿ ॥

|| ಪ್ರತಿಪದಾರ್ಥ ||

ವೃಷಣ್ವಸೂ—ಅಪೇಕ್ಷಿತವಾದ ಸಂಪತ್ತುಗಳನ್ನೊದಗಿಸತಕ್ಕ ಎಲೈ ಅಶ್ವಿನೀದೇವತೆಗಳೇ । ತಾಭಿಃ—ಹಿಂದೆಲ್ಲಾ ವರ್ಣಿತವಾಗಿ ಪ್ರಸಿದ್ಧವಾದವೂ । ನವ್ಯಸೀಭಿಃ—ನೂತನವಾದವೂ । ಸುಶಸ್ತಿಭಿಃ—ಪ್ರಶಸ್ತವಾದವೂ ಆದ । ಊತಿಭಿಃ—ರಕ್ಷಣೆಗಳೊಡನೆ । ಯತ್—ಯಾವಾಗ । ವಾಂ—ನಿಮ್ಮನ್ನು । ಹುವೇ—ಸ್ತುತಿಸಿ ಕರೆಯುವೆನೋ (ಆಗ) । ಆ ಯಾತಂ—ದಯಮಾಡಿರಿ.

|| ಭಾವಾರ್ಥ ||

ಅಪೇಕ್ಷಿತವಾದ ಸಂಪತ್ತುಗಳನ್ನೊದಗಿಸತಕ್ಕ ಎಲೈ ಅಶ್ವಿನೀದೇವತೆಗಳೇ, ಹಿಂದೆಲ್ಲಾ ವರ್ಣಿತವಾಗಿ ಪ್ರಸಿದ್ಧವಾದವೂ, ನೂತನವಾದವೂ, ಪ್ರಶಸ್ತವಾದವೂ ಆದ ರಕ್ಷಣೆಗಳೊಡನೆ, ನಾನು ನಿಮ್ಮನ್ನುಸ್ತುತಿಸಿ ಕರೆದ ಕಾಲದಲ್ಲೆಲ್ಲಾ ದಯಮಾಡಿರಿ.

English Translatian

Rich in showers, come with your newest and most excellent protections when I call upon you.

। ಸಂಹಿತಾಪಾಠಃ ।

ಯಥಾ ಚಿತ್ಕಣ್ವಮಾವತಂ ಪ್ರಿಯಮೇಧಮುಪಸ್ತುತಂ ।
ಅತ್ರಿಂ ಶಿಂಜಾರಮಶ್ವಿನಾ ॥ ೨೫ ॥

॥ ಪದಪಾಠಃ ॥

ಯಥಾ । ಚಿತ್ । ಕಣ್ವಂ । ಆವತಂ । ಪ್ರಿಯऽಮೇಧಂ । ಉಪऽಸ್ತುತಂ ।
ಅತ್ರಿಂ । ಶಿಂಜಾರಂ । ಅಶ್ವಿನಾ ॥ ೨೫ ॥

। ಸಾಯಣಭಾಷ್ಯಂ ।

ಹೇ ಅಶ್ವಿನಾಶ್ವಿನೌ ಯಥಾ ಚಿದ್ಯೇನ ಖಲು ಪ್ರಕಾರೇಣ ಕಣ್ವಮೇತತ್ಸಂಜ್ಞಮೃಷಿಮಾವತಂ ಅರಕ್ಷತಂ ಪ್ರಿಯಮೇಧಂ ಪ್ರಿಯಯಜ್ಞಮೇತತ್ಸಂಜ್ಞಂ ಚೋಪಸ್ತುತಮೇತದಾಖ್ಯಂ ಚ ಶಿಂಜಾರಂ ಶಬ್ದಯಂತಂ ಸ್ತುವಂತಮತ್ರಿಮೇತಾನೃಷೀಂಶ್ಚ ಯೇನ ಪ್ರಕಾರೇಣಾರಕ್ಷತಂ ತಥಾಸ್ಮಾನಪಿ ರಕ್ಷತಮಿತಿ ಶೇಷಃ । ಯದ್ವಾ । ಏತಾವದ್ಭ್ಯಾಂ ವೃಷಣ್ವಸೂ ಇತ್ಯನಯೈಕವಾಕ್ಯತಾ ॥

। ಪ್ರತಿಪದಾರ್ಥ ।

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯಥಾ ಚಿತ್—ಯಾವ ಪ್ರಕಾರವಾಗಿ । ಕಣ್ವಂ—ಕಣ್ವಋಷಿಯನ್ನೂ । ಪ್ರಿಯಮೇಧಂ—ಪ್ರಿಯಮೇಧಸಂಜ್ಞಕನಾದ ಋಷಿಯನ್ನೂ । ಉಪಸ್ತುತಂ—ಉಪಸ್ತುತನನ್ನೂ । ಶಿಂಜಾರಂ—ಸ್ತುತಿರೂಪವಾದ ಶಬ್ದವನ್ನುಂಟುಮಾಡುವ । ಅತ್ರಿಂ—ಅತ್ರಿಋಷಿಯನ್ನೂ । ಆವತಂ—ರಕ್ಷಿಸಿದಿರೋ (ಅದೇ ರೀತಿಯಾಗಿ ನಮ್ಮನ್ನೂ ರಕ್ಷಿಸಿ).

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ರಕ್ಷಣೆಗಳೊಡನೆ ನೀವು ಕಣ್ವಋಷಿಯನ್ನೂ, ಪ್ರಿಯಮೇಧಸಂಜ್ಞಕನಾದ ಋಷಿಯನ್ನೂ, ಉಪಸ್ತುತನನ್ನೂ, ಸ್ತುತಿಯನ್ನು ಪಠಿಸುವ ಅತ್ರಿಋಷಿಯನ್ನೂ ರಕ್ಷಿಸಿದಿರೋ ಅದೇ ರೀತಿಯಾಗಿ ನಮ್ಮನ್ನೂ ರಕ್ಷಿಸಿ.

English Translation

In like manner as you protected Kanwa, Priyamedha, Upastuta, and the praise-repeating Atri.

। ಸಂಹಿತಾಪಾಠಃ ।

ಯಥೋತ ಕೃತ್ವ್ಯೇ ಧನೇಽಂಶುಂ ಗೋಷ್ವಗಸ್ತ್ಯಂ ।

ಯಥಾ ವಾಜೇಷು ಸೋಭರಿಂ ॥ ೨೬ ॥

। ಪದಪಾಠಃ ।

ಯಥಾ । ಉತ । ಕೃತ್ವ್ಯೇ । ಧನೇ । ಅಂಶುಂ । ಗೋಷು । ಅಗಸ್ತ್ಯಂ ।

ಯಥಾ । ವಾಜೇಷು । ಸೋಭರಿಂ ॥ ೨೬ ॥

। ಸಾಯಣಭಾಷ್ಯಂ ।

ಉತಾಪಿ ಚ ಯಥಾ ಯೇನ ಪ್ರಕಾರೇಣ ಧನೇ ಕೃತ್ವ್ಯೇ ಕರ್ತವ್ಯೇ ಪ್ರಾಪ್ತವ್ಯೇ ಸತ್ಯಂಶುಮೇತತ್ಸಂಜ್ಞಂ ಸ್ತೋತಾರಮಾವತಂ ಅರಕ್ಷತಂ । ಗೋಷು ಚ ಲಬ್ಧವ್ಯಾಸು ಯಥಾಗಸ್ತ್ಯಮೃಷಿಮರಕ್ಷತಂ । ವಾಜೇಷ್ವನ್ನೇಷು ಲಬ್ಧವ್ಯೇಷು ಯಥಾ ಯೇನ ಪ್ರಕಾರೇಣ ಸೋಭರಿಮೇತತ್ಸಂಜ್ಞಮೃಷಿಂ ಚಾರಕ್ಷತಂ । ಅತ್ರಾಪಿ ಪೂರ್ವವದ್ವಾಕ್ಯಶೇಷ ಉತ್ತರಯೈಕವಾಕ್ಯತಾ ವಾ ॥

। ಪ್ರತಿಪದಾರ್ಥ ।

**ಉತ**—ಮತ್ತು (ಎಲೈ ಅಶ್ವಿನೀದೇವತೆಗಳೇ) । **ಯಥಾ**—ಯಾವ ಪ್ರಕಾರವಾಗಿ । **ಧನೇ**—ಧನವು । **ಕೃತ್ವ್ಯೇ**—ಹೊಂದಲ್ಪಡಬೇಕಾದ ಸಂದರ್ಭದಲ್ಲಿ । **ಅಂಶುಂ**—ಅಂಶುವೆಂಬ ಸ್ತುತಿಕರ್ತನನ್ನು ರಕ್ಷಿಸಿದಿರೋ । **ಗೋಷು**—ಗೋವುಗಳು ಹಿಂತಿರುಗಬೇಕಾದ ಸಂದರ್ಭದಲ್ಲಿ। **ಯಥಾ**—ಯಾವ ರೀತಿ। **ಅಗಸ್ತ್ಯಂ**—ಅಗಸ್ತ್ಯನನ್ನು ರಕ್ಷಿಸಿದಿರೋ । **ವಾಜೇಷು**—ಅನ್ನವು ಪ್ರಾಪ್ತವಾಗಬೇಕಾದ ಕಾಲದಲ್ಲಿ । **ಸೌಭರಿಂ**—ಸೌಭರಿಯೆಂಬ ಋಷಿಯನ್ನು ಯಾವ ರೀತಿ ರಕ್ಷಿಸಿದಿರೋ (ಆ ರಕ್ಷಣೆಯನ್ನು ನಮಗೂ ನೀಡಿರಿ).

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ಧನವು ಹೊಂದಲ್ಪಡಬೇಕಾದಾಗ ಯಾವ ರೀತಿ ಅಂಶುವೆಂಬ ಸ್ತುತಿಕರ್ತನನ್ನು ರಕ್ಷಿಸಿದಿರೋ, ಗೋವುಗಳು ಹಿಂತಿರುಗಬೇಕಾದ ಸಂದರ್ಭದಲ್ಲಿ ಯಾವ ರೀತಿ ಅಗಸ್ತ್ಯನನ್ನು ರಕ್ಷಿಸಿದಿರೋ, ಅನ್ನವು ಪ್ರಾಪ್ತವಾಗಬೇಕಾದ ಕಾಲದಲ್ಲಿ ಸೌಭರಿಯೆಂಬ ಋಷಿಯನ್ನು ಯಾವ ರೀತಿ ರಕ್ಷಿಸಿದಿರೋ ಅದೇ ರಕ್ಷಣೆಯನ್ನು ಅದೇ ಪ್ರಕಾರವಾಗಿ ನಮಗೂ ನೀಡಿರಿ.

**English Translation**

**And in like manner as (you protected) Anshu when wealth was to be bestowed, and Agastya when his cattle (were to be recovered), and Sobhari when food (was to be supplied to him).**

॥ ಸಂಹಿತಾಪಾಠಃ ॥

ಏತಾವದ್ವಾಂ ವೃಷಣ್ವಸೂ ಅತೋ ವಾ ಭೂಯೋ ಅಶ್ವಿನಾ ।
ಗೃಣಂತಃ ಸುಮ್ನಮೀಮಹೇ ॥ ೨೬ ॥

॥ ಪದಪಾಠಃ ॥

ಏತಾವತ್ । ವಾಂ । ವೃಷಣ್ವಸೂ ಇತಿ ವೃಷಣ್ऽವಸೂ । ಅತಃ । ವಾ । ಭೂಯಃ । ಅಶ್ವಿನಾ ।
ಗೃಣಂತಃ । ಸುಮ್ನಂ । ಈಮಹೇ ॥ ೨೬ ॥

॥ ಸಾಯಣಭಾಷ್ಯಂ ॥

ಹೇ ವೃಷಣ್ವಸೂ ವರ್ಷಣಧನಾವಶ್ವಿನಾಶ್ವಿನೌ ಗೃಣಂತಃ ಸ್ತುವಂತೋ ವಯಮೇತಾವತ್ ಯಥಾ ಚಿತ್ ಕಣ್ವಮಿತ್ಯಾದಿನಾ ಯಾವದನುಕ್ರಾಂತಮೇತಚ್ಛರಿವಾಣಾಂ ಸುಮ್ನಂ ಸುಖಮತೋ ವಾಸ್ಮಾದ್ವಾ ಭೂಯೋ ಬಹುತರಮಧಿಕಂ ಸುಮ್ನಂ ವಾಂ ಯುವಾಮೀಮಹೇ । ಯಾಚಾಮಹೇ ॥

॥ ಪ್ರತಿಪದಾರ್ಥ ॥

ವೃಷಣ್ವಸೂ—ಅಪೇಕ್ಷಿತವಾದ ಧನವನ್ನು ಕೊಡತಕ್ಕ । ಅಶ್ವಿನಾ-ಎಲೈ ಅಶ್ವಿನೀದೇವತೆಗಳೇ । ಗೃಣಂತಃ—ಈ ಪ್ರಕಾರವಾಗಿ ನಿಮ್ಮನ್ನು ಸ್ತುತಿಸುವ ನಾವು । ಏತಾವತ್—ಹಿಂದಿನ ಋಷಿಗಳಿಗೆ ಕೊಟ್ಟಂತಹ । ಸುಮ್ನಂ—ಸುಖವನ್ನು । ಅತೋ ವಾ— ಅಥವಾ ಅದಕ್ಕಿಂತಲೂ । ಭೂಯಃ—ಅಧಿಕತರವಾದ ಸುಖವನ್ನು । ವಾಂ—ನಿಮ್ಮಿಂದ । ಈಮಹೇ—ಯಾಚಿಸುತ್ತೇವೆ.

॥ ಭಾವಾರ್ಥ ॥

ಅಪೇಕ್ಷಿತವಾದ ಧನವನ್ನು ಕೊಡತಕ್ಕ ಎಲೈ ಅಶ್ವಿನೀದೇವತೆಗಳೇ, ಈ ಪ್ರಕಾರವಾಗಿ ನಿಮ್ಮನ್ನು ಸ್ತುತಿಸುವ ನಾವು ಹಿಂದಿನ ಋಷಿಗಳಿಗೆ ನೀವು ಅನುಗ್ರಹಿಸಿದ ಸುಖವನ್ನು ಅಥವಾ ಅದಕ್ಕಿಂತಲೂ ಅಧಿಕತರವಾದ ಸುಖವನ್ನು ನಿಮ್ಮಿಂದ ಯಾಚಿಸುತ್ತೇವೆ.

## English Translation

So praising you, Aswins, rich in showers, we solicit of you happiness as great or greater than that (which they obtained).

॥ ಸಂಹಿತಾಪಾಠಃ ॥

ರಥಂ ಹಿರಣ್ಯವಂಧುರಂ ಹಿರಣ್ಯಾಭೀಶುಮಶ್ವಿನಾ ।

ಆ ಹಿ ಸ್ಥಾಥೋ᳚ ದಿವಿಸ್ಪೃಶಂ ॥ ೨೮ ॥

॥ ಪದಪಾಠಃ॥

ರಥಂ । ಹಿರಣ್ಯऽವಂಧುರಂ । ಹಿರಣ್ಯऽಅಭೀಶುಂ । ಅಶ್ವಿನಾ ।

ಆ । ಹಿ । ಸ್ಥಾಥಃ । ದಿವಿऽಸ್ಪೃಶಂ ॥ ೨೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಹಿರಣ್ಯವಂಧುರಂ । ಸಾರಥಿಸ್ಥಾನಂ ವಂಧುರಂ । ಹಿರಣ್ಮಯಸಾರಥಿಸ್ಥಾನಂ ಹಿರಣ್ಯಾಭೀಶುಂ ಹಿರಣ್ಮಯಪ್ರಗ್ರಹಂ ದಿವಿಸ್ಪೃಶಮತ್ಯುನ್ನತತ್ವಾದ್ದಿವಂ ಸ್ಪೃಶಂತಂ ॥ ಸ್ಪೃಶೇಃ ಕ್ವಿನ್ । ಗಿರ್ಶಬ್ದಾದ್ದ್ವಿತೀಯಾರ್ಥೇ ಸಪ್ತಮೀ । ಹೃದ್ದ್ಯುಭ್ಯಾಂ ಙೇರುಪಸಂಖ್ಯಾನಮಿತ್ಯಲುಕ್ ॥ ಈದೃಶಂ ರಥಮಾ ಹಿ ಸ್ಥಾಥಃ । ಯುವಾಮಾತಿಷ್ಠಥ ಏವ । ಹಿರವಧಾರಣೇ । ಅಸ್ಮದೀಯಾಂ ಸ್ತುತಿಂ ಶ್ರೋತುಂ ಶೀಘ್ರಂ ರಥಮಾಸ್ಥಾಯಾಗತಮಿತಿ ಭಾವಃ ॥ ಷ್ಠಾ ಗತಿನಿವೃತ್ತೌ । ಲಟಿ ಛಾಂದಸಃ ಶಪೋ ಲುಕ್ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಹಿರಣ್ಯವಂಧುರಂ—ಸುವರ್ಣನಿರ್ಮಿತವಾದ ಆಸನಸ್ಥಾನವುಳ್ಳದ್ದೂ । ಹಿರಣ್ಯಾಭೀಶುಂ—ಸುವರ್ಣಮಯವಾದ ರಶ್ಮಿಗಳುಳ್ಳದ್ದೂ (ಕಡಿವಾಣ) । ದಿವಿಸ್ಪೃಶಂ—ಅಂತರಿಕ್ಷವನ್ನು ಸ್ಪರ್ಶಿಸತಕ್ಕದ್ದೂ ( ಅಂತರಿಕ್ಷದಲ್ಲಿ ಸಂಚರಿಸುವ ಸಾಮರ್ಥ್ಯವುಳ್ಳದ್ದೂ ) ಆದ । ರಥಂ—ರಥವನ್ನು । ಆ ಹಿ ಸ್ಥಾಥಃ—ಹತ್ತಿ ಕುಳಿತುಕೊಳ್ಳಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಸುವರ್ಣನಿರ್ಮಿತವಾದ ಆಸನಸ್ಥಾನವುಳ್ಳದ್ದೂ, ಸುವರ್ಣಮಯವಾದ ಕಡಿವಾಣಗಳುಳ್ಳದ್ದೂ, ಅಂತರಿಕ್ಷದಲ್ಲಿ ಸಂಚರಿಸುವ ಶಕ್ತಿಯುಳ್ಳದ್ದೂ ಆದ ರಥವನ್ನು ಹತ್ತಿ ಕುಳಿತುಕೊಳ್ಳಿರಿ.

**English Translation**

Ascend, Aswins, your sky-touching chariot with a golden seat and golden reins.

॥ ಸಂಹಿತಾಪಾಠಃ ॥

ಹಿರಣ್ಯಯೀ᳚ ವಾಂ ರಭಿರೀ᳚ಷಾ ಅಕ್ಷೋ᳚ ಹಿರಣ್ಯಯಃ ।

ಉಭಾ ಚಕ್ರಾ ಹಿರಣ್ಯಯಾ ॥ ೨೯ ॥

॥ ಪದಪಾಠಃ ॥

ಹಿರಣ್ಯಯೀ । ವಾಂ । ರಭಿಃ । ಈಷಾ । ಅಕ್ಷಃ । ಹಿರಣ್ಯಯಃ ।

ಉಭಾ । ಚಕ್ರಾ । ಹಿರಣ್ಯಯಾ ॥ ೨೯ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾಂ ಯುವಯೋಃ ರಭಿರಾರಂಭಣೀಯಾಲಂಬನಭೂತಾ ರಥಸ್ಯೇಷಾ ಹಿರಣ್ಯಯೀ ಹಿರಣ್ಮಯೀ ಹಿರಣ್ಯವಿಕಾರಾ । ಅಕ್ಷಶ್ಚ ಹಿರಣ್ಯಯೋ ಹಿರಣ್ಮಯೋ ಹಿರಣ್ಯನಿರ್ಮಿತಃ ॥ ಈಷಾ ಅಕ್ಷಾದಿಷು ಚ್ಛಂದಸಿ । ಪಾ. ೬-೧-೧೨೭-೨ । ಇತಿ ಪ್ರಕೃತಿಭಾವಃ ॥ ಅಪಿ ಚೋಭೋಭೇ ದ್ವೇ ಅಪಿ ಚಕ್ರಾ ಚಕ್ರೇ ರಥಚರಣೇ ಹಿರಣ್ಯಯಾ ಹಿರಣ್ಮಯೀ ಸುವರ್ಣನಿರ್ಮಿತೇ ॥ ಸುಪಾಂ ಸುಲುಗಿತಿ ದ್ವಿವಚನಸ್ಯಾಕಾರಃ । ಋತ್ವ್ಯವಾಸ್ತ್ವ್ಯವಾಸ್ತ್ವೇತ್ಯಾದಿನಾ ಹಿರಣ್ಯಶಬ್ದಾನ್ಮಯಟೋ ಮಲೋಪೋ ನಿಪಾತ್ಯತೇ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) ವಾಂ—ನಿಮ್ಮ । ರಭಿಃ—ರಥಕ್ಕೆ ಆಧಾರಭೂತವಾದ । ಈಷಾ—ದಂಡವು (ಮೂಕೀಮರವು)। ಹಿರಣ್ಯಯೀ—ಸುವರ್ಣನಿರ್ಮಿತವಾಗಿದೆ । ಅಕ್ಷಃ—ಇರುಚಿಯೂ । ಹಿರಣ್ಯಯಃ—ಸುವರ್ಣ ನಿರ್ಮಿತವಾಗಿದೆ । ಉಭಾ ಚಕ್ರಾ—ಎರಡು ಚಕ್ರಗಳೂ ಸಹ । ಹಿರಣ್ಯಯಾ—ಸುವರ್ಣನಿರ್ಮಿತವಾಗಿಯೇ ಇವೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಥಕ್ಕೆ ಆಧಾರಭೂತವಾದ ದಂಡವು (ಮೂಕೀಮರವು) ಸುವರ್ಣನಿರ್ಮಿತವಾಗಿದೆ. ಇರುಚಿಯೂ ಸುವರ್ಣನಿರ್ಮಿತವಾಗಿದೆ. ಎರಡು ಚಕ್ರಗಳೂ ಸಹ ಸುವರ್ಣನಿರ್ಮಿತವಾಗಿಯೇ ಇವೆ.

## English Translation

Golden is its supporting shaft, golden the axle, golden both the wheels.

॥ ಸಂಹಿತಾಪಾಠಃ ॥

ತೇನ ನೋ ವಾಜಿನೀವಸೂ ಪರಾವತಶ್ಚಿದಾ ಗತಂ ।

ಉಪೇಮಾಂ ಸುಷ್ಟುತಿಂ ಮಮ ॥ ೩೦ ॥

|| ಪದಪಾಠಃ ||

ತೇನ | ನಃ | ವಾಜಿನೀವಸೂ ಇತಿ ವಾಜಿನೀವಸೂ | ಪರಾಽವತಃ | ಚಿತ್ | ಆ | ಗತಂ |

ಉಪ | ಇಮಾಂ | ಸುಽಸ್ತುತಿಂ | ಮಮ || ೩೦ ||

॥ ಸಾಯಣಭಾಷ್ಯಂ ॥

ಹೇ ವಾಜಿನೀವಸೂ ಅನ್ನವದ್ಧನಾವಶ್ವಿನೌ ಯ ಉಕ್ತೋ ಹಿರಣ್ಯಯಸರ್ವಾವಯವೋ ರಥಃ ತೇನ ರಥೇನ ನೋಽಸ್ಮಾನ್ಪರಾವತಶ್ಚಿದ್ದೂರದೇಶಾದಪ್ಯಾ ಗತಂ | ಆಗಚ್ಛತಂ || ಗಮೇಶ್ಛಾಂದಸಃ ಶಪೋ ಲುಕ್ | ಅನುದಾತ್ತೋಪದೇಶೇತ್ಯನುನಾಸಿಕಲೋಪಃ || ಇದಾನೀಮೃಷಿರೇಕವದಾಹ |, ಮಮ ಮದೀಯಾಮಿಮಾಮಿದಾನೀಂ ಕ್ರಿಯಮಾಣಾಂ ಸುಷ್ಟುತಿಂ ಶೋಭನಾಂ ಸ್ತುತಿಂ ಚೋಪಗಚ್ಛತಂ ||

|| ಪ್ರತಿಪದಾರ್ಥ ||

ವಾಜಿನೀವಸೂ—ಅನ್ನಸಂಪತ್ತುಳ್ಳ ಎಲೈ ಅಶ್ವಿನೀದೇವತೆಗಳೇ | ತೇನ—ಪ್ರಸಿದ್ಧವಾದ ನಿಮ್ಮ ರಥದೊಡನೆ| ನಃ—ನಮ್ಮ ಯಜ್ಞಾಭಿಮುಖವಾಗಿ | ಪರಾವತಶ್ಚಿತ್—ಅತ್ಯಂತ ದೂರಪ್ರದೇಶದಿಂದಲೂ | ಆ ಗತಂ—ದಯಮಾಡಿರಿ | ಮಮ—ನನ್ನಿಂದ ಪಠಿತವಾಗುವ | ಇಮಾಂ ಸುಷ್ಟುತಿಂ—ಉತ್ತಮವಾದ ಈ ಸ್ತುತಿಯುಸಮಾಪಕ್ಕೆ | ಉಪ (ಆಗತಂ)—ದಯಮಾಡಿರಿ.

|| ಭಾವಾರ್ಥ ||

ಅನ್ನಸಂಪತ್ತುಳ್ಳ ಎಲೈ ಅಶ್ವಿನೀದೇವತೆಗಳೇ, ಪ್ರಸಿದ್ಧವಾದ ನಿಮ್ಮ ರಥದೊಡನೆ ನಮ್ಮ ಯಜ್ಞಾಭಿಮುಖವಾಗಿ ಅತ್ಯಂತ ದೂರಪ್ರದೇಶದಿಂದಲೂ ದಯಮಾಡಿರಿ. ನನ್ನಿಂದ ಪಠಿತವಾಗುವ ಈ ಉತ್ತಮವಾದ ಸ್ತುತಿಯ ಸಮೀಪಕ್ಕೆ ದಯಮಾಡಿರಿ.

## English Translation

Come to us, affluent in sacrifices, from afar, come to this my adoration.

॥ ಸಂಹಿತಾಪಾಠಃ ॥

ಆ ವಹೇಥೇ ಪರಾಕಾತ್ಪೂರ್ವೀರಶ್ನಂತಾವಶ್ವಿನಾ |

ಇಷೋ ದಾಸೀರಮರ್ತ್ಯಾ || ೩೧ ||

॥ ಪದಪಾಠಃ ॥

ಆ । ವಹೇಥೇ ಇತಿ । ಪರಾಕಾತ್ । ಪೂರ್ವೀಃ । ಅಶ್ನಂತೌ । ಅಶ್ವಿನಾ ।

ಇಷಃ । ದಾಸೀಃ । ಅಮರ್ತ್ಯಾ ॥ ೩೧ ॥

॥ ಸಾಯಣಭಾಷ್ಯಂ ॥

ಹೇ ಅಮರ್ತ್ಯಾಮರಣಾವಶ್ವಿನಾಶ್ವಿನೌ ದಾಸೀಃ । ದಾಸಾ ಉಪಕ್ಷಪಯಿತಾರೋಽಸುರಾಃ । ತತ್ಸಂಬಂಧಿನೀಃ ಪೂರ್ವೀಃ ಪುರೀರಶ್ನಂತೌ ಭಕ್ಷಯಂತೌ ಭಂಜಂತೌ ಯುವಾಮಿಷೋಽನ್ನಾನಿ ಪರಾಕಾತ್ಪರಾಗತಾದ್ದೂರದೇಶಾದಾ ವಹೇಥೇ । ಅಸ್ಮಾನ್ಪ್ರಾಪಯಥಃ । ಯದ್ವಾ । ಅಶ್ನಂತೌ ವ್ಯಾಪ್ನುವಂತೌ ॥ ಅಶೂ ವ್ಯಾಪ್ತೌ । ಅಸ್ಮಾದ್ವ್ಯತ್ಯಯೇನ ಶ್ನಾ ಪರಸ್ಮೈಪದಂ ಚ ॥ ಪೂರ್ವೀರ್ಬಹ್ವೀರ್ದಾಸೀರ್ದಾಸಸ್ಯೋಪಕ್ಷಪಯಿತುಃ ಶತ್ರೋಃ ಸಂಬಂಧಿನೀರಿಷೋಽನ್ನಾನಿ ಶತ್ರುಭ್ಯೋಽಪಹೃತ್ಯಾಸ್ಮಾನ್ಪ್ರಾಪಯಥಃ ॥

॥ ಪ್ರತಿಪದಾರ್ಥ ॥

ಅಮರ್ತ್ಯಾ—ಮರಣಧರ್ಮರಹಿತರಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ದಾಸೀಃ—ಹಿಂಸಕರಾದ ಅಸುರರ । ಪೂರ್ವೀಃ—ಪಟ್ಟಣಗಳನ್ನು । ಅಶ್ನಂತಾ—ನಾಶಮಾಡತಕ್ಕ ನೀವು । ಇಷಃ—ಅನ್ನಗಳನ್ನು । ಪರಾಕಾತ್—ಅತ್ಯಂತ ದೂರದೇಶದಿಂದಲೂ । ಆವಹೇಥೇ—ನಮಗಾಗಿ ತೆಗೆದುಕೊಂಡು ಬನ್ನಿರಿ.

॥ ಭಾವಾರ್ಥ ॥

ಮರಣಧರ್ಮರಹಿತರಾದ ಎಲೈ ಅಶ್ವಿನೀದೇವತೆಗಳೇ, ಹಿಂಸಕರಾದ ಅಸುರರ ಪಟ್ಟಣಗಳನ್ನು ನಾಶಮಾಡತಕ್ಕ ನೀವು ನಮಗಾಗಿ ಅತ್ಯಂತ ದೂರದೇಶದಿಂದಲೂ ಅನ್ನವನ್ನು ತೆಗೆದುಕೊಂಡು ಬನ್ನಿರಿ.

## English Translation

Immortal Aswins, Destroyers of the cities of the Dasas, bring to us food from afar.

॥ ಸಂಹಿತಾಪಾಠಃ ॥

ಆ ನೋ ದ್ಯುಮ್ನೈರಾ ಶ್ರವೋಭಿರಾ ರಾಯಾ ಯಾತಮಶ್ವಿನಾ ।
ಪುರುಶ್ಚಂದ್ರಾ ನಾಸತ್ಯಾ ॥ ೩೨ ॥

॥ ಪದಪಾಠಃ ॥

ಆ । ನಃ । ದ್ಯುಮ್ನೈಃ । ಆ । ಶ್ರವಃಽಭಿಃ । ಆ । ರಾಯಾ । ಯಾತಂ । ಅಶ್ವಿನಾ ।

ಪುರುಽಶ್ಚಂದ್ರಾ । ನಾಸತ್ಯಾ ॥ ೩೨ ॥

। ಸಾಯಣಭಾಷ್ಯಂ ।

ಹೇ ಪುರುಶ್ಚಂದ್ರಾ ಬಹುಹಿರಣ್ಯೌ ಯದ್ವಾ ಪುರೂಣಾಂ ಬಹೂನಾಮಾಹ್ಲಾದಕೌ ॥ ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರ ಇತಿ ಸುಟ್ । ಪಾದಾದಿತ್ವಾತ್ವಾಷ್ಟಿಕಮಾಮಂತ್ರಿತಾದ್ಯುದಾತ್ತತ್ವಂ ॥ ಹೇ ನಾಸತ್ಯಾ ಸತ್ಯಸ್ವಭಾವೌ ಸತ್ಯಸ್ಯ ನೇತಾರೌ ನಾಸಿಕಾಪ್ರಭವೌ ವಾ ॥ ಆಮಂತ್ರಿತಂ ಪೂರ್ವಮವಿದ್ಯಮಾನವದಿತಿ ಪೂರ್ವಸ್ಯಾಮಂತ್ರಿತಸ್ಯಾವಿದ್ಯಮಾನವದ್ಭಾವಾದಿದಮಪ್ಯಾಮಂತ್ರಿತಮಾದ್ಯುದಾತ್ತಂ । ನ ಚ ನಾಮಂತ್ರಿತೇ ಸಮಾನಾಧಿಕರಣ ಇತ್ಯವಿದ್ಯಮಾನವತ್ತ್ವನಿಷೇಧಃ ಪುರುಶ್ಚಂದ್ರೇತ್ಯಸ್ಯ ವಿಶೇಷವಚನತ್ವಾತ್॥ ಈದೃಶೌ ಹೇ ಅಶ್ವಿನಾಶ್ವಿನೌ ದ್ಯುಮ್ನೈರ್ದ್ಯೋತಮಾನೈರನ್ನೈರ್ದಾತವ್ಯೈಃ ಸಾರ್ಧಂ ನೋಽಸ್ಮಾನಾಯಾತಂ । ಆಗಚ್ಛತಂ । ತಥಾ ಶ್ರವೋಭಿಃ ಶ್ರವಣೀಯೈರ್ಯಶೋಭಿಶ್ಚಾಸ್ಮಾನಾಗಚ್ಛತಂ । ತಥಾ ರಾಯಾ ಧನೇನ ಚಾಸ್ಮಾನಾಗಚ್ಛತಂ ॥

। ಪ್ರತಿಪದಾರ್ಥ ।

ಪುರುಶ್ಚಂದ್ರಾ—ಅನೇಕರಿಗೆ ಹರ್ಷವನ್ನುಂಟುಮಾಡತಕ್ಕವರೂ । ನಾಸತ್ಯಾ—ಸತ್ಯಾತ್ಮಕರೂ ಆದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ದ್ಯುಮ್ನೈಃ—ಪ್ರಕಾಶಮಾನವಾದ ಅನ್ನಗಳೊಡನೆ । ಆ ಯಾತಂ—ದಯಮಾಡಿರಿ । ಶ್ರವೋಭಿಃ—ಯಶಸ್ಸುಗಳೊಡನೆಯೂ । ರಾಯಾ—ಧನದೊಂದಿಗೂ । ನಃ—ನಮ್ಮಲ್ಲಿಗೆ । ಆ (ಯಾತಂ)—ದಯಮಾಡಿರಿ.

॥ ಭಾವಾರ್ಥ ॥

ಅನೇಕರಿಗೆ ಹರ್ಷವನ್ನುಂಟುಮಾಡತಕ್ಕವರೂ, ಸತ್ಯಾತ್ಮಕರೂ ಆದ ಎಲೈ ಅಶ್ವಿನೀದೇವತೆಗಳೇ, ಪ್ರಕಾಶಮಾನವಾದ ಅನ್ನಗಳೊಡನೆಯೂ, ಯಶಸ್ಸುಗಳೊಡನೆಯೂ ಧನದೊಂದಿಗೂ ನಮ್ಮಲ್ಲಿಗೆ ದಯಮಾಡಿರಿ.

## English Translation

Come to us, Aswins, with food, wi‘h fame, with riches, Nasatyas, delighters of many.

। ಸಂಹಿತಾಪಾಠಃ ।

ಏಹ ವಾಂ ಪ್ರುಷಿತಪ್ಸವೋ ವಯೋ ವಹಂತು ಪರ್ಣಿನಃ ।

ಅಚ್ಛಾ ಸ್ವಧ್ವರಂ ಜನಂ ॥ ೩೩ ॥

॥ ಪದಪಾಠಃ ॥

ಆ । ಇಹ । ವಾಂ । ಪ್ರುಷಿತಽಪ್ಸವಃ । ವಯಃ । ವಹಂತು । ಪರ್ಣಿನಃ ।

ಅಚ್ಛ । ಸುಽಅಧ್ವರಂ । ಜನಂ ॥ ೩೩ ॥

। ಸಾಯಣಭಾಷ್ಯಂ ।

ಹೇ ಅಶ್ವಿನೌ ಇಹಾಸ್ಮಿನ್ಯಾಗೇ ವಾಂ ಯುವಾಂ ಪೃಷಿತಪ್ಸವಃ । ಪೃಷಿಃ ಸ್ನೇಹನಕರ್ಮಾ । ಸ್ನಿಗ್ಧರೂಪಾಃ ಪರ್ಣಿನಃ ಪಕ್ಷೋಪೇತಾಃ । ಯದ್ವಾ । ಲುಪ್ತೋಪಮಮೇತತ್ । ಪಕ್ಷಿಣ ಇವ ಶೀಘ್ರಗಾಮಿನಃ । ವಯೋಗಂತಾರೋಽಶ್ವಾಃ ಸ್ವಧ್ವರಂ ಶೋಭನಯಜ್ಞಂ ಯಜಮಾನಲಕ್ಷಣಂ ಜನಮಚ್ಛಾಭಿಮುಖಮಾ ವಹಂತು । ಆನಯಂತು ॥

। ಪ್ರತಿಪದಾರ್ಥ ।

(ಎಲೈ ಅಶ್ವಿನೀದೇವತೆಗಳಿರಾ) ಪೃಷಿತಪ್ಸವಃ—ನುಣುಪಾದ ದೇಹವುಳ್ಳವೂ । ಪರ್ಣಿನಃ—ಪಕ್ಷಿಗಳಂತೆ ರೆಕ್ಕೆಗಳುಳ್ಳವೂ । ವಯಃ—ಶೀಘ್ರಗಾಮಿಗಳೂ ಆದ ಅಶ್ವಗಳು । ವಾಂ—ನಿಮ್ಮನ್ನು । ಇಹ—ಇಲ್ಲಿಗೆ । ಸ್ವಧ್ವರಂ—ಉತ್ತಮವಾದ ಯಜ್ಞನಿರತನಾದ । ಜನಂ ಅಚ್ಛ—ಯಜಮಾನನಿಗಭಿಮುಖವಾಗಿ । ಆ ವಹಂತು—ಕರೆತರಲಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳಿರಾ, ನುಣುಪಾದ ದೇಹವುಳ್ಳವೂ ಪಕ್ಷಿಗಳಂತೆ ರೆಕ್ಕೆಗಳುಳ್ಳವೂ, ಶೀಘ್ರಗಾಮಿಗಳೂ ಆದ ಅಶ್ವಗಳು ನಿಮ್ಮನ್ನು ಇಲ್ಲಿಗೆ ಉತ್ತಮವಾದ ಯಜ್ಞದಲ್ಲಿ ನಿರತನಾದ ಯಜಮಾನನಿಗಭಿಮುಖವಾಗಿ ಕರೆತರಲಿ.

## English Translation

Let your sleek, winged, rapid (horses) bring you to the presence of the man offering holy sacrifice.

। ಸಂಹಿತಾಪಾಠಃ ।

ರಥಂ ವಾಮನುಗಾಯಸಂ ಯ ಇಷಾ ವರ್ತತೇ ಸಹ ।

ನ ಚಕ್ರಮಭಿ ಬಾಧತೇ ॥ ೩೪ ॥

॥ ಪದಪಾಠಃ ।

ರಥಂ । ವಾಂ । ಅನುಽಗಾಯಸಂ । ಯಃ । ಇಷಾ । ವರ್ತತೇ । ಸಹ ।

ನ । ಚಕ್ರಂ । ಅಭಿ । ಬಾಧತೇ ॥ ೩೪ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯೋ ರಥೋಽಸ್ಮಭ್ಯಂ ದೇಯೇನಾನ್ನೇನ ಸಹ ವರ್ತತೇ ವಾಂ ಯುವಯೋಃ ಸ್ವಭೂತಮನುಗಾಯಸಂ ಸ್ತೋತೃಭಿರನುಗಾತವ್ಯಂ ತಂ ರಥಂ ಚಕ್ರಂ ಪರಸೈನ್ಯಂ ನಾಭಿ ಬಾಧತೇ । ನಾಭಿಹಂತಿ । ಯದ್ವಾ । ಚಕ್ರಂ ವೀರ್ಯಕರ್ಮಸಾಧನಂ ॥ ಘಞರ್ಥೇ ಕವಿಧಾನಮಿತಿ ಕಃ । ಕೃಞಾದೀನಾಂ ಕೇ । ಕಾ. ೬-೧-೧೨-೧ । ಇತಿ ದ್ವಿರ್ವಚನಂ । ಅಸ್ಮಿನ್ಪಕ್ಷೇಽನ್ಯಃ ಶತ್ರುರಿತಿ ಕರ್ತೃಪದಮಧ್ಯಾಹರ್ತವ್ಯಂ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) ಯಃ—ಯಾವ ನಿಮ್ಮ ರಥವು । ಇಷಾ ಸಹ—ನಮಗೆ ಕೊಡಬೇಕಾದ ಅನ್ನದೊಡಗೂಡಿ । ವರ್ತತೇ—ಇರುವುದೋ ಅಂತಹ । ವಾಂ—ನಿಮ್ಮ । ಅನುಗಾಯಸಂ—ಸ್ತೋತೃಗಳಿಂದ ಪ್ರಶಂಸಿಸಲ್ಪಡುವ । ರಥಂ—ರಥವನ್ನು । ಚಕ್ರಂ—ಶತ್ರುಸೈನ್ಯವು । ನ ಅಭಿ ಬಾಧತೇ—ಖಂಡಿತವಾಗಿಯೂ ಹಿಂಸಿಸಲಾರದು.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಯಾವ ನಿಮ್ಮ ರಥವು ನಮಗೆ ಕೊಡಬೇಕಾದ ಅನ್ನದೊಡಗೂಡಿ ಇರುವುದೋ ಅಂತಹುದೂ ಸ್ತೋತೃಗಳಿಂದ ಪ್ರಶಂಸಿಸಲ್ಪಡುವುದೂ ಆದ ನಿಮ್ಮ ರಥವನ್ನು ಶತ್ರುಸೈನ್ಯವು ಖಂಡಿತವಾಗಿಯೂ ಹಿಂಸಿಸಲಾರದು.

## English Translation

No hostile force arrests that car of yours which is hymned (by the devout), and which is laden with food.

॥ ಸಂಹಿತಾಪಾಠಃ ॥

ಹಿರಣ್ಯಯೇನ ರಥೇನ ದ್ರವತ್ಪಾಣಿಭಿರಶ್ವೈಃ ।
ಧೀಜವನಾ ನಾಸತ್ಯಾ ॥ ೩೫ ॥

॥ ಪದಪಾಠಃ ॥

ಹಿರಣ್ಯಯೇನ । ರಥೇನ । ದ್ರವತ್ಪಾಣಿಽಭಿಃ । ಅಶ್ವೈಃ ।
ಧೀಽಜವನಾ । ನಾಸತ್ಯಾ ॥ ೩೫ ॥

॥ ಸಾಯಣಭಾಷ್ಯಂ ॥

ಹೇ ಧೀಜವನಾ ಮನೋವದ್ವೇಗವಂತೌ ॥ ಆಮಂತ್ರಿತಾದ್ಯುದಾತ್ತತ್ವಂ ॥ ಹೇ ನಾಸತ್ಯಾ ಸತ್ಯಸ್ವಭಾವೌ ಸತ್ಯಸ್ಯ ನೇತಾರೌ ವಾ ॥ ಆಮಂತ್ರಿತಂ ಪೂರ್ವಮವಿದ್ಯಮಾನವದಿತಿ ಪೂರ್ವಸ್ಯಾವಿದ್ಯಮಾನತ್ವೇನ ಪದಾದಪರತ್ವಾದಾಷ್ಟಮಿಕನಿಘಾತಾಭಾವಃ । ನ ಚ ನಾಮಂತ್ರಿತವಿದ್ಯಮಾನವತ್ತ್ವನಿಷೇಧೋ ಧೀಜವನೇತ್ಯಸ್ಯ ವಿಶೇಷಣತ್ವೇನ ಸಾಮಾನ್ಯವಚನತ್ವಾಭಾವಾತ್ । ವ್ಯಾವರ್ತಕಂ ಹಿ ವಿಶೇಷಣಂ ॥ ಈದೃಶೌ ಯುವಾಂ ದ್ರವತ್ಪಾಣಿಭಿಃ ಶೀಘ್ರಗಮನಪದ್ಭಿರಶ್ವ್ಯೈರ್ಯುಕ್ತೇನ ಹಿರಣ್ಯಯೇನ ಹಿರಣ್ಮಯೇನ ಸ್ವರ್ಣಮಯೇನ ರಥೇನಾಗತಮಿತಿ ಶೇಷಃ । ಯದ್ವಾ ॥ ಧೀಜವನಾ ನಾಸತ್ಯೇತ್ಯೇತದ್ದ್ವಯಮಪಿ ಪ್ರಥಮಾಂತಮೇವ ನಾಮಂತ್ರಿತಂ । ಧಿಯೋ ಜವ ಇವ ಜವೋ ಯಯೋಸ್ತೌ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥ ಈದೃಶೇನ ರಥೇನ ಶೀಘ್ರಗಮನೌ ನಾಸತ್ಯಾವಶ್ವಿನಾವಾಗಚ್ಛತಮಿತಿ ಶೇಷಃ ॥

॥ ಪ್ರತಿಪದಾರ್ಥ ॥

ಧೀಜವನಾ—ಮನೋವೇಗದಂತೆ ವೇಗವುಳ್ಳವರೂ । ನಾಸತ್ಯಾ—ಸತ್ಯಾತ್ಮಕರೂ ಆದ ಎಲೈ ಅಶ್ವಿನೀದೇವತೆಗಳೇ । ದ್ರವತ್ಪಾಣಿಭಿಃ—ವೇಗವಾಗಿ ಓಡುವ ಪಾದಗಳುಳ್ಳ । ಅಶ್ವ್ಯೈಃ—ಅಶ್ವಗಳೊಡನೆ ಕೂಡಿದುದೂ । ಹಿರಣ್ಯಯೇನ—ಸುವರ್ಣನಿರ್ಮಿತವಾದುದೂ ಆದ । ರಥೇನ—ರಥದೊಡನೆ ದಯಮಾಡಿರಿ.

॥ ಭಾವಾರ್ಥ ॥

ಮನೋವೇಗದಂತೆ ವೇಗವುಳ್ಳವರೂ ಸತ್ಯಾತ್ಮಕರೂ ಆದ ಎಲೈ ಅಶ್ವಿನೀದೇವತೆಗಳೇ, ವೇಗವಾಗಿ ಓಡುವ ಪಾದಗಳುಳ್ಳ ಅಶ್ವಗಳೊಡನೆ ಕೂಡಿದುದೂ, ಸುವರ್ಣನಿರ್ಮಿತವಾದುದೂ ಆದ ರಥದೊಡನೆ ದಯಮಾಡಿರಿ.

## English Translation

Rapid as thought, Nasatyas, (come) with your golden chariot drawn by quick-footed steeds.

॥ ಸಂಹಿತಾಪಾಠಃ ॥

ಯುವಂ ಮೃಗಂ ಜಾಗೃವಾಂಸಂ ಸ್ವದಥೋ ವಾ ವೃಷಣ್ವಸೂ ।
ತಾ ನಃ ಪೃಂಕ್ತಮಿಷಾ ರಯಿಂ ॥ ೪೬ ॥

॥ ಪದಪಾಠಃ ॥

ಯುವಂ । ಮೃಗಂ । ಜಾಗೃऽವಾಂಸಂ । ಸ್ವದಥಃ । ವಾ । ವೃಷಣ್ವಸೂ ಇತಿ ವೃಷಣ್ऽವಸೂ ।
ತಾ । ನಃ । ಪೃಂಕ್ತಂ । ಇಷಾ । ರಯಿಂ ॥ ೪೬ ॥

॥ ಸಾಯಣಭಾಷ್ಯಂ ॥

ವಾಶಬ್ದಃ ಸಮುಚ್ಚಯೇ । ಅಪಿ ಚ ಹೇ ವೃಷಣ್ವಸೂ ವರ್ಷಣಧನಾವಶ್ವಿನೌ ಯುವಂ ಯುವಾಂ ಜಾಗೃವಾಂಸಂ ಜಾಗರಣಶೀಲಂ ಸ್ವಕಾರ್ಯೇ ಮದಜನನೇಽವ್ಯಗ್ರಂ ಮೃಗಂ ಮೃಗ್ಯಮನ್ವೇಷಣೀಯಂ ಸೋಮಂ ಸ್ವದಥಃ । ಆಸ್ವಾದಯಥಃ । ಯದ್ವಾ । ಜಾಗೃವಾಂಸಂ ಜಾಗ್ರತಂ ಮೃಗಂ ಮೃಗನಾಮಾನಮಸುರಂ ಸ್ವದಥಃ । ಸ್ವಾದಯಥಃ । ಹಿಂಸ್ಥ ಇತ್ಯರ್ಥಃ । ತಾ ತೌ ಯುವಾಂ ನೋಽಸ್ಮದರ್ಥಮಿಷಾನ್ನೇನ ರಯಿಂ ಧನಂ ಪೃಂಕ್ತಂ । ಸಂಪೃಕ್ತಂ । ಕುರುತಂ । ಈದೃಶಂ ಧನಮಸ್ಮಭ್ಯಂ ಪ್ರಯಚ್ಛತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ವೃಷಣ್ವಸೂ—ನಮಗೆ ಇಷ್ಟಬಂದಷ್ಟು ಕೊಡಲು ಸಾಕಾಗುವ ಸಂಪತ್ತುಳ್ಳ ಎಲೈ ಅಶ್ವಿನೀದೇವತೆಗಳೇ । ಯುವಂ—ನೀವು । ಜಾಗೃವಾಂಸಂ—ನಿಮ್ಮ ಸೇವನೆಗಾಗಿಯೇ ನಿರತವಾಗಿರುವ । ಮೃಗಂ—ಸೋಮವನ್ನು । ಸ್ವದಥಃ—ಪಾನಮಾಡಿದ್ದೀರಿ । ತಾ—ನೀವು । ನಃ—ನಮಗಾಗಿ । ಇಷಾ—ಅನ್ನದೊಡನೆ । ರಯಿಂ—ಧನಸಂಪತ್ತನ್ನು । ಪೃಂಕ್ತಂ—ಒಟ್ಟಿಗೆ ಸಂಯೋಜಿಸಿ.

॥ ಭಾವಾರ್ಥ ॥

ಯಥೇಚ್ಛವಾಗಿ ಕೊಡಲು ಧನಸಂಪತ್ತುಳ್ಳ ಎಲೈ ಅಶ್ವಿನೀದೇವತೆಗಳೇ, ನೀವು ನಿಮ್ಮ ಸೇವನೆಗಾಗಿಯೇ ಸಿದ್ಧವಾಗಿರುವ ಸೋಮವನ್ನು ಪಾನಮಾಡಿದ್ದೀರಿ. ನಮಗಾಗಿ ಅನ್ನದೊಡನೆ ಧನಸಂಪತ್ತನ್ನು ಒಟ್ಟಿಗೆ ಸಂಯೋಜಿಸಿ. (ಕೊಡಿ)

English Translation

Affluent in showers, taste the wakeful desirable Soma : combine for us riches with food.

॥ ಸಂಹಿತಾಪಾಠಃ ॥

ತಾ ಮೇ ಅಶ್ವಿನಾ ಸನೀನಾಂ ವಿದ್ಯಾತಂ ನವಾನಾಂ ।
ಯಥಾ ಚಿಚ್ಚೈದ್ಯಃ ಕಶುಃ ಶತಮುಷ್ಟ್ರಾನಾಂ ದದತ್ಸಹಸ್ರಾ
ದಶ ಗೋನಾಂ ॥ ೩೭ ॥

॥ ಪದಪಾಠಃ ॥

ತಾ । ಮೇ । ಅಶ್ವಿನಾ । ಸನೀನಾಂ । ವಿದ್ಯಾತಂ । ನವಾನಾಂ ।

ಯಥಾ । ಚಿತ್ । ಚೈದ್ಯಃ । ಕಶುಃ । ಶತಂ । ಉಷ್ಟ್ರಾನಾಂ । ದದತ್ । ಸಹಸ್ರಾ ।
ದಶ । ಗೋನಾಂ ॥ ೩೭ ॥

। ಸಾಯಣಭಾಷ್ಯಂ ।

ಹೇ ಅಶ್ವಿನಾವಶ್ವಿನೌ ತಾ ತಾದೃಶೌ ಯುವಾಂ ನವಾನಾಮಭಿನವಾನಾಂ ಶ್ರೇಷ್ಠಾನಾಂ ಸನೀನಾಂ ಸಂಭಜನೀಯಾನಾಂ ಧನಾನಾಂ ॥ ಕರ್ಮಣಿ ಷಷ್ಠೀ ॥ ಈದೃಶಾನಿ ಧನಾನಿ ಮೇ ಮಹ್ಯಂ ದಾಪಯಿತುಂ ವಿದ್ಯಾತಂ । ಜಾನೀತಂ । ಯಥಾ ಚಿದ್ಯೇನ ಖಲು ಪ್ರಕಾರೇಣ ಚೈದ್ಯಶ್ಚೇದಿಪುತ್ರಃ ಕಶುರೇತತ್ಸಂಜ್ಞೋ ರಾಜೋಷ್ಟ್ರಾನಾಂ ಶತಂ ತಥಾ ಗೋನಾಂ ಗವಾಂ ದಶ ಸಹಸ್ರಾ ದಶಸಂಖ್ಯಾನಿ ಸಹಸ್ರಾಣಿ ದದತ್ ದದ್ಯಾತ್ ತಥಾ ವಿದ್ಯಾತಮಿತಿ ಪೂರ್ವತ್ರಾನ್ವಯಃ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ತಾ—ಪ್ರಸಿದ್ಧರಾದ ನೀವು । ಯಥಾ ಚಿತ್—ಯಾವ ಪ್ರಕಾರವಾಗಿ । ಚೈದ್ಯಃ—ಚೇದಿಪುತ್ರನಾದ । ಕಶುಃ—ಕಶುವೆಂಬ ರಾಜನು । ಮೇ—ನನಗೆ । ಉಷ್ಟ್ರಾನಾಂ ಶತಂ—ಶತಸಂಖ್ಯಾಕವಾದ ಉಷ್ಟ್ರಗಳನ್ನೂ (ಒಂಟೆಗಳನ್ನೂ) । ಗೋನಾಂ ದಶಸಹಸ್ರಾ—ಹತ್ತುಸಾವಿರ ಸಂಖ್ಯೆಯುಳ್ಳ ಗೋವುಗಳನ್ನೂ । ದದತ್—ಕೊಟ್ಟಿರುವನೋ ಅಂತಹ । ನವಾನಾಂ—ನೂತನವಾದುದೂ । ಸನೀನಾಂ—ಭೋಗಯೋಗ್ಯವಾದುದೂ ಆದ ಧನವನ್ನು (ಕೊಡಿಸಬೇಕೆಂದು) । ವಿದ್ಯಾತಂ—ನೀವೂ ತಿಳಿಯಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಯಾವ ಪ್ರಕಾರವಾಗಿ ಚೇದಿಪುತ್ರನಾದ ಕಶುವೆಂಬ ರಾಜನು ನನಗೆ ಶತಸಂಖ್ಯಾಕವಾದ ಒಂಟೆಗಳನ್ನೂ, ಹತ್ತುಸಾವಿರ ಸಂಖ್ಯೆಯುಳ್ಳ ಗೋವುಗಳನ್ನೂ ಕೊಟ್ಟಿರುವನೋ ಅದೇ ರೀತಿ ನೂತನವಾದುದೂ ಭೋಗಯೋಗ್ಯವಾದುದೂ ಆದ ಧನವನ್ನು ಪ್ರಸಿದ್ಧರಾದ ನೀವೂ ಕೊಡಬೇಕೆಂದರಿಯಿರಿ.

## English Translation

Become apprised, Aswins, of my recent gifts, how that Kashu, the son of Chedi, has presented me with a hundred camels and ten thousand cows.

। ಸಂಹಿತಾಪಾಠಃ ।

ಯೋ ಮೇ ಹಿರಣ್ಯಸಂದೃಶೋ ದಶ ರಾಜ್ಞೋ ಅಮಂಹತ ।
ಅಧಸ್ಪದಾ ಇಚ್ಚೈದ್ಯಸ್ಯ ಕೃಷ್ಟಯಶ್ಚರ್ಮಮ್ನಾ ಅಭಿತೋ ಜನಾಃ ॥

॥ ಪದಪಾಠಃ ॥

ಯಃ । ಮೇ । ಹಿರಣ್ಯಽಸಂದೃಶಃ । ದಶ । ರಾಜ್ಞಃ । ಅಮಂಹತ ।

ಅಧಃಽಪದಾ । ಇತ್ । ಚೈದ್ಯಸ್ಯ । ಕೃಷ್ಟಯಃ । ಚರ್ಮಽಮ್ನಾಃ । ಅಭಿತಃ । ಜನಾಃ ॥೩೮॥

॥ ಸಾಯಣಭಾಷ್ಯಂ ॥

ಯಃ ಕಶುಸಂಜ್ಞೋ ರಾಜಾ ಮೇ ಮಹ್ಯಂ ಹಿರಣ್ಯಸಂದೃಶೋ ಹಿರಣ್ಯಸಂದರ್ಶನಾನ್ ಹಿರಣ್ಯಸಮಾನತೇಜಸ್ಕಾನ್ ದಶ ರಾಜ್ಞೋಽಮಂಹತ ಪರಿಚರಣಾರ್ಥಂ ದತ್ತವಾನ್ । ದಶಸಂಖ್ಯಾಕಾನ್ರಾಜ್ಞೋ ಯುದ್ಧೇ ಪರಾಜಿತಾನ್ ಗೃಹೀತ್ವಾ ದಾಸತ್ವೇನಾಸ್ಮೈ ದತ್ತವಾನಿತ್ಯರ್ಥಃ । ನನ್ವೀದೃಶಾನಾಂ ಬಹುವಿಧಾನಾಂ ರಾಜ್ಞಾಂ ದಾನ ಏಕಃ ಕಥಂ ಶಕ್ನುಯಾದಿತಿ ತತ್ರಾಹ । ಕೃಷ್ಟಯಃ ಸರ್ವಾಃ ಪ್ರಜಾಸ್ತಸ್ಯ ಚೈದ್ಯಸ್ಯ ಚೇದಿಪುತ್ರಸ್ಯ ಕಶೋರಧಸ್ಪದಾ ಇತ್ ಪಾದಯೋರಧಸ್ತಾದೇವ ವರ್ತಂತೇ । ನ ಕಶ್ಚಿದಪಿ ತತ್ಸಮಾನಸ್ತದಧಿಕೋ ವಾ ವಿದ್ಯತೇ । ಅಭಿತಃ ಸರ್ವತೋ ವರ್ತಮಾನಾ ಜನಾಶ್ಚರ್ಮಮ್ನಾಶ್ಚರ್ಮಮಯಸ್ಯ ಕವಚಾದೇರ್ಧಾರಣೇ ಕೃತಾಭ್ಯಾಸಾಃ । ಯದ್ವಾ । ಚರ್ಮಾಣಿ ಚರಣಸಾಧನಾನ್ಯಶ್ವಾದೀನಿ ವಾಹನಾನಿ । ತೇಷು ಮನಂತ್ಯಭ್ಯಸ್ಯಂತೀತಿ ಚರ್ಮಮ್ನಾಃ ॥ ಮ್ನಾ ಅಭ್ಯಾಸೇ । ಆತೋ ಮನಿನ್ನಿತಿ ವಿಚ್ ॥ ಸರ್ವೇ ಮನುಷ್ಯಾಸ್ತಸ್ಯ ಭಟಾ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಯಃ—ಅದೇ ಕಶುವೆಂಬ ರಾಜನು । ಮೇ—ನನಗೆ । ಹಿರಣ್ಯಸಂದೃಶಃ—ಸುವರ್ಣದಂತೆ ಪ್ರಕಾಶಮಾನರಾದ । ದಶ ರಾಜ್ಞಃ—ಹತ್ತು ಜನ ರಾಜರನ್ನು । ಅಮಂಹತ—ನನ್ನ ಸೇವೆಗಾಗಿ ಕಳುಹಿಸಿಕೊಟ್ಟನು । ಕೃಷ್ಟಯಃ—ಸಕಲಪ್ರಜೆಗಳೂ । ಚೈದ್ಯಸ್ಯ—ಚೇದಿಪುತ್ರನಾದ ಆ ಕಶುವಿಗೆ । ಅಧಸ್ಪದಾ ಇತ್—ಸೇವೆಮಾಡುವ ಸ್ಥಾನಗಳಲ್ಲಿಯೇ ಇರುತ್ತಾರೆ । ಅಭಿತಃ—ಅವನ ಸುತ್ತಲೂ ಇರುವ । ಜನಾಃ—ಪರಿವಾರದವರು । ಚರ್ಮಮ್ನಾಃ—ಚರ್ಮಮಯವಾದ ಕವಚವನ್ನು ಧರಿಸತಕ್ಕವರೇ ಆಗಿದ್ದಾರೆ.

॥ ಭಾವಾರ್ಥ ॥

ನನಗೆ ಉದಾರವಾಗಿ ದಾನಮಾಡಿದ ಅದೇ ಕಶುವೆಂಬ ರಾಜನು ನನಗೆ ಸುವರ್ಣದಂತೆ ಪ್ರಕಾಶಮಾನರಾದ ಹತ್ತು ಜನ ರಾಜರನ್ನು ನನ್ನ ಸೇವೆಗಾಗಿ ಕಳುಹಿಸಿಕೊಟ್ಟನು. ಸಕಲಪ್ರಜೆಗಳೂ ಚೇದಿಪುತ್ರನಾದ ಆ ಕಶುವಿಗೆ ಸೇವೆಮಾಡುವ ಸ್ಥಾನಗಳಲ್ಲಿಯೇ ಇರುತ್ತಾರೆ. ಅವನ ಸುತ್ತಲೂ ಇರುವ ಪರಿವಾರಜನರು ಚರ್ಮಮಯವಾದ ಕವಚವನ್ನು ಧರಿಸತಕ್ಕವರೇ ಆಗಿದ್ದಾರೆ.

English Translation

The son of Chedi, who has given me for servants ten Rajas, bright as gold, for all men are beneath his feet; all those around him wear cuirasses of leather.

॥ ಸಂಹಿತಾಪಾಠಃ ॥

ಮಾಕಿರೇನಾ ಪಥಾ ಗಾದ್ಯೇನೇಮೇ ಯಂತಿ ಚೇದಯಃ ।
ಅನ್ಯೋ ನೇತ್ಸೂರಿರೋಹತೇ ಭೂರಿದಾವತ್ತರೋ ಜನಃ ॥ ೩೯ ॥

॥ ಪದಪಾಠಃ ॥

ಮಾಕಿಃ । ಏನಾ । ಪಥಾ । ಗಾತ್ । ಯೇನ । ಇಮೇ । ಯಂತಿ । ಚೇದಯಃ ।
ಅನ್ಯಃ । ನ । ಇತ್ । ಸೂರಿಃ । ಓಹತೇ । ಭೂರಿದಾವತ್ಽತರಃ । ಜನಃ ॥ ೩೯ ॥

॥ ಸಾಯಣಭಾಷ್ಯಂ ॥

ಯೇನ ಮಾರ್ಗೇಣೇಮೇ ಚೇದಯೋಽಸ್ಯ ರಾಜ್ಞಃ ಪಿತೃಪಿತಾಮಹಾದಯೋ ಯಂತಿ ಗಚ್ಛಂತಿ ಏನಾನೇನ ಪಥಾ ಮಾರ್ಗೇಣ ಮಾಕಿರ್ಗಾತ್ । ಅನ್ಯೋ ನ ಗಂತುಂ ಶಕ್ನೋತಿ । ಅಪಿ ಚಾಸ್ಮಾದ್ರಾಜ್ಞೋಽನ್ಯೋ ಭೂರಿದಾವತ್ತರೋ ಬಹುದಾತೃತಮಃ ಸೂರಿರ್ವಿದ್ವಾನ್ ಸಂಜ್ಞನೋ ನೇನ್ನೈವೌಹತೇ । ವಹತಿ । ಸ್ತೋತೃಭ್ಯೋ ಧನಂ ಪ್ರಾಪಯತಿ । ಯದ್ವಾ । ಬಹುದಾತೃಜನೋ ಯೋ ಜನಃ ಕಶುರ್ನಾಮ ಅಸ್ಮಾದನ್ಯಃ ॥ ವ್ಯತ್ಯಯೇನ ಪ್ರಥಮಾ ॥ ಅನ್ಯಂ ಸೂರಿಃ ಸ್ತೋತಾ ನೇದೋಹತೇ । ನೈವ ಯಾಚತೇ । ಓಹಿರ್ಯಾಚ್ಞಾಕರ್ಮಾ । ಯಥಾನ್ಯಂ ನ ಯಾಚತೇ ತಥಾ ಬಹು ಧನಂ ಪ್ರಯಚ್ಛತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಯೇನ—ಯಾವ ಮಾರ್ಗದಿಂದ । ಇಮೇ ಚೇದಯಃ—ಇದೇ ಚೇದಿವಂಶದವರು । ಯಂತಿ—ಸಂಚರಿಸುವರೋ । ಏನಾ ಪಥಾ—ಆ ಮಾರ್ಗದಿಂದ । ಮಾಕಿಃ ಗಾತ್—ಇತರರಾರೂ ಸಂಚರಿಸುವುದಿಲ್ಲ । ಭೂರಿದಾವತ್ತರಃ—ಕಶುವಿಗಿಂತಲೂ ಅಧಿಕವಾಗಿ ದಾನಮಾಡುವ । ಅನ್ಯಃ ಸೂರಿಃ ಜನಃ—ಬೇರೊಬ್ಬ ಪ್ರಾಜ್ಞನು । ನ ಓಹತೇ ಇತ್—ಸ್ತುತಿಕರ್ತರಿಗೆ ಉದಾರವಾಗಿ ದಾನಮಾಡತಕ್ಕವನೇ ಇಲ್ಲ.

॥ ಭಾವಾರ್ಥ ॥

ಈ ಚೇದಿವಂಶದವರು ಯಾವ ಮಾರ್ಗದಿಂದ ಸಂಚರಿಸುವರೋ ಅದೇ ಮಾರ್ಗದಿಂದ ಇತರರಾರೂ ಸಂಚರಿಸುವುದಿಲ್ಲ. ಇವರಿಗಿರುವ ವೈಶಿಷ್ಟ್ಯವು ಇತರರಿಗಾರಿಗೂ ಇಲ್ಲ. ಕಶುವಿಗಿಂತಲೂ ಪ್ರಾಜ್ಞನೂ ಬೇರೊಬ್ಬನಿಲ್ಲ. ಇವನಷ್ಟು ಉದಾರವಾಗಿ ದಾನಮಾಡುವ ಪುರುಷನೂ ಬೇರೊಬ್ಬನಿಲ್ಲವೇ ಇಲ್ಲ.

## English Translation

No one proceeds by that path which the Chedis follow, no other

pious man as a more liberal benefactor confers (favour on those who praise him).



## ಆರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ದ್ವಿತೀಯೇಽನುವಾಕೇ ಸಪ್ತ ಸೂಕ್ತಾನಿ । ತತ್ರ ಮಹಾँ ಇಂದ್ರ ಇತ್ಯಷ್ಟಾಚತ್ವಾರಿಂಶದೃಚಂ ಪ್ರಥಮಂ ಸೂಕ್ತಂ ಕಾಣ್ವಸ್ಯ ವತ್ಸಸ್ಯಾರ್ಷಂ ಗಾಯತ್ರಂ । ಅಂತ್ಯತೃಚವರ್ಜಮೈಂದ್ರಂ । ತಸ್ಮಿನ್ಪರಶು-ನಾಮ್ನೋ ರಾಜ್ಞಃ ಪುತ್ರಸ್ಯ ತಿರಿಂದಿರಸ್ಯ ದಾನಂ ಸ್ತೂಯತೇ । ಅತಃ ಸ ತೃಚಸ್ತದ್ದೇವತಾಕಃ । ತಥಾ ಚಾನುಕ್ರಾಂತಂ । ಮಹಾ ಇಂದ್ರೋಽಷ್ಟಾಚತ್ವಾರಿಂಶದ್ವತ್ಸಸ್ತ್ರ್ಯೃಚೋಽಂತ್ಯಸ್ತಿರಿಂದಿರಸ್ಯ ಪಾರಶವ್ಯಸ್ಯ ದಾನಸ್ತುತಿರಿತಿ ॥ ಮಹಾವ್ರತೇ ಗಾಯತ್ರತೃಚಾಶೀತಾವಂತ್ಯತೃಚವರ್ಜಮಿದಂ ಸೂಕ್ತಂ । ತಥೈವ ಪಂಚ-ಮಾರಣ್ಯಕೇ ಸೂತ್ರ್ಯತೇ । ಮಹಾँ ಇಂದ್ರೋ ಯ ಓಜಸೇತಿ ತಿಸ್ರ ಉತ್ತಮಾ ಉದ್ಧರತಿ । ಐ. ಆ. ೫-೨-೨ । ಇತಿ ॥ ಪ್ರಾತಃ ಸವನೇ ಸೋಮಾತಿರೇಕೇ ಮಹಾನಿತ್ಯಾದಿಕಾಃ ಸ್ತೋಮಾತಿಶಂಸನಾರ್ಥಾಃ । ಸೂತ್ರಿತಂ ಚ । ಮಹಾँ ಇಂದ್ರೋ ಯ ಓಜಸಾತೋ ದೇವಾ ಅವಂತು ನ ಇತ್ಯೈಂದ್ರೀಭಿರ್ವೈಷ್ಣವೀಭಿಶ್ಚ ಸ್ತೋಮಮತಿಶಸ್ಯ । ಆ. ೬.೭ । ಇತಿ ॥ ತೃತೀಯೇ ಪರ್ಯಾಯೇ ಹೋತುಃ ಶಸ್ತ್ರೇ ಮಹಾँ ಇಂದ್ರ ಇತಿ ತೃಚೋಽನುರೂಪಃ । ಸೂತ್ರಿತಂ ಚ । ಮಹಾँ ಇಂದ್ರೋ ಯ ಓಜಸಾ ಸಮಸ್ಯ ಮನ್ಯವೇ ವಿಶ ಇತಿ । ಆ. ೬-೪ । ಇತಿ ॥ ಅಪ್ತೋರ್ಯಾಮೇ ಬ್ರಹ್ಮಣೋಽತಿರಿಕ್ತೋಕ್ಥೇ ಅಯಮೇವ ತೃಚೋಽನುರೂಪಃ । ಸೂತ್ರ್ಯತೇ ಹಿ । ಮಹಾँ ಇಂದ್ರೋ ಯ ಓಜಸಾ ನೂನಮಶ್ವಿನಾ । ಆ. ೯-೧೧ । ಇತಿ ದರ್ಶಯಾಗೇ ಮಹೇಂದ್ರಯಾಜಿನಃ ಸಾಂನಾಯ್ಯಸ್ಯ ಮಹಾನಿತ್ಯೇಷಾನುವಾಕ್ಯಾ । ಸೂತ್ರ್ಯತೇ ಹಿ । ಮಹಾँ ಇಂದ್ರೋ ಯ ಓಜಸಾ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್ । ಆ. ೧-೬ । ಇತಿ ॥

ಎಂಟನೆಯ ಮಂಡಲದ ಎರಡನೆಯ ಅನುವಾಕದಲ್ಲಿ ಏಳು ಸೂಕ್ತಗಳಿರುವವು. ಅವುಗಳಲ್ಲಿ ಮಹಾँ ಇಂದ್ರಃ ಎಂಬ ಸೂಕ್ತವು ಮೊದಲನೆಯದು. ಇದರಲ್ಲಿ ನಲವತ್ತೆಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರೋ ದ್ಭವನಾದ ವತ್ಸನೆಂಬುವನು ಋಷಿಯು; ಈ ಸೂಕ್ತದ ಕೊನೆಯ ಒಂದು ತೃಚವನ್ನು (ಮೂರು ಋಕ್ಕುಗಳನ್ನು) ಬಿಟ್ಟು ಉಳಿದ ಋಕ್ಕುಗಳಿಗೆ ಇಂದ್ರನು ದೇವತೆಯು ; ಕೊನೆಯ ಮೂರು ಋಕ್ಕುಗಳಲ್ಲಿ ಪರಶು ಎಂಬ ರಾಜನ ಪುತ್ರ ನಾದ ತಿರಿಂದಿರ ಎಂಬ ರಾಜಪುತ್ರನು ಮಾಡಿದ ದಾನದ ಪ್ರಶಂಸೆ ಇರುವುದು. ಆದ್ದರಿಂದ ಆ ಮೂರು ಋಕ್ಕುಗಳಿಗೆ ತಿರಿಂದಿರನ ದಾನಸ್ತುತಿಯೇ ದೇವತೆಯು ; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ–ಮಹಾँ ಇಂದ್ರೋಽಷ್ಟಾಚ-ತ್ವಾರಿಂಶದ್ವತ್ಸಸ್ತ್ರ್ಯೃಚೋಽನ್ತ್ಯಸ್ತಿರಿಂದಿರಸ್ಯ ಪಾರಶವ್ಯಸ್ಯ ದಾನಸ್ತುತಿಃ ಎಂದು ಹೇಳಿರುವುದು. ಮಹಾ ವ್ರತೇಷ್ಟಿಯಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳ ಪಠನೆಗಾಗಿ ಈ ಸೂಕ್ತದ ಕೊನೆಯ ಮೂರು ಋಕ್ಕುಗಳನ್ನು ಬಿಟ್ಟು

ಉಳಿದ ಋಕ್ಕುಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಮಹಾಁ ಇಂದ್ರೋ ಯ ಓಜಸೇತಿ ತಿಸ್ರ ಉತ್ತಮಾ ಉದ್ಧರತಿ** ಎಂಬ ವಾಕ್ಯದಿಂದ (ಐ. ಆ. ೫-೨-೩) ನಿರ್ದಿಷ್ಟವಾಗಿರುವುದು. ಮತ್ತು ಪ್ರಾತಸ್ಸವನಕಾಲದಲ್ಲಿ ಸೋಮಾತಿರೇಕಸಂದರ್ಭದಲ್ಲಿ ಮಹಾನ್ ಎಂದು ಮೊದಲಾಗುವ ಈ ಸೂಕ್ತದ ಋಕ್ಕುಗಳನ್ನು ಸೋಮಾತಿಶಂಸನಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಮಹಾಁ ಇಂದ್ರೋ ಯ ಓಜಸಾತೋ ದೇವಾ ಅವಂತು ನ ಇತ್ಯೈಂದ್ರೀಭಿರ್ವೈಷ್ಣವೀಭಿಶ್ಚ ಸ್ತೋಮಮತಿಶಸ್ಯ** ಎಂಬ ಸೂತ್ರದಿಂದ (ಆ. ೬-೭) ವಿವೃತವಾಗಿರುವುದು. ತೃತೀಯಪರ್ಯಾಯದಲ್ಲಿ ಹೋತೃವು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಮಹಾಁ ಇಂದ್ರಃ ಎಂಬ ತೃಚವನ್ನು (ಮೂರು ಋಕ್ಕುಗಳನ್ನು) ಅನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಮಹಾಁ ಇಂದ್ರೋ ಯ ಓಜಸಾ ಸಮಸ್ಯ ಮನ್ಯವೇ ವಿಶ ಇತಿ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು. ಅಪ್ತೋರ್ಯಾಮವೆಂಬ ಯಾಗದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸಬೇಕಾದ ಅತಿರಿಕ್ತೋಕ್ಥ ಮಂತ್ರಗಳಲ್ಲಿ ಮಹಾಁ ಇಂದ್ರಃ ಎಂಬ ಈ ತೃಚವನ್ನೇ ಅನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—**ಮಹಾಁ ಇಂದ್ರೋ ಯ ಓಜಸಾ ನೂನಮಶ್ವಿನಾ** ಎಂಬ ಸೂತ್ರದಿಂದ (ಆ. ೯-೧೧) ವಿವೃತವಾಗಿರುವುದು. ದರ್ಶಯಾಗದಲ್ಲಿಯೂ ಸಹ ಮಹೇಂದ್ರದೇವತೆಯನ್ನುದ್ದೇಶಿಸಿ ಮಾಡುವ ಸಾನ್ನಾಯ್ಯಹೋಮದಲ್ಲಿ **ಮಹಾನ್** ಎಂಬ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಮಹಾಁ ಇಂದ್ರೋ ಯ ಓಜಸಾ ಭುವಸ್ತ್ವಮಿಂದ್ರ ಬ್ರಹ್ಮಣಾ ಮಹಾನ್** ಎಂಬ ಸೂತ್ರದಿಂದ (ಆ. ೧-೬) ವಿವೃತವಾಗಿರುವುದು.

## ಸೂಕ್ತ—೬

ಮಂಡಲ—೮ । ಅನುವಾಕ—೨ । ಸೂಕ್ತ—೬ ।
ಅಷ್ಟಕ—೫ । ಅಧ್ಯಾಯ—೮ ॥ ವರ್ಗ—೯, ೧೦, ೧೧, ೧೨, ೧೩, ೧೪, ೧೫, ೧೬, ೧೭ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೪೮ ।
ಋಷಿಃ—ವತ್ಸಃ ಕಾಣ್ವಃ ।
ದೇವತಾ—೧-೪೫. ಇಂದ್ರಃ । ೪೬-೪೮. ತಿರಿಂದಿರಸ್ಯ ಪಾರಶವ್ಯಸ್ಯ ದಾನಸ್ತುತಿಃ ।
ಛಂದಃ— ಗಾಯತ್ರೀ ॥

। ಸಂಹಿತಾಪಾಠಃ ।

**ಮಹಾಁ ಇಂದ್ರೋ ಯ ಓಜಸಾ ಪರ್ಜನ್ಯೋ ವೃಷ್ಟಿಮಾಁ ಇವ ।**
**ಸ್ತೋಮೈರ್ವತ್ಸಸ್ಯ ವಾವೃಧೇ ॥ ೧ ॥**

॥ ಪದಪಾಠಃ ।

ಮಹಾನ್ । ಇಂದ್ರಃ । ಯಃ । ಓಜಸಾ । ಪರ್ಜನ್ಯಃ । ವೃಷ್ಟಿಮಾನ್ಽಇವ ।
ಸ್ತೋಮೈಃ । ವತ್ಸಸ್ಯ । ವವೃಧೇ ॥ ೧ ।

। ಸಾಯಣಭಾಷ್ಯಂ ।

ಯ ಇಂದ್ರ ಓಜಸಾ ಬಲೇನ ಮಹಾನ್ ಸರ್ವೇಭ್ಯೋಽಧಿಕಃ । ಕ ಇವ । ವೃಷ್ಟಿಮಾನಿವ । ಯಥಾ ವೃಷ್ಟ್ಯಾ ಯುಕ್ತಃ ಪರ್ಜನ್ಯೋ ರಸಾನಾಂ ಪ್ರಾರ್ಜಯಿತಾ ದೇವೋ ಮಹಾನ್ ಸ ಇವೇತ್ಯರ್ಥಃ । ಸ ಇಂದ್ರೋ ವತ್ಸಸ್ಯ ಪುತ್ರಸ್ಥಾನೀಯಸ್ಯ ಸ್ತೋತುರ್ವತ್ಸನಾಮ್ನ ಋಷೇಃ ಸ್ತೋಮೈರ್ವವೃಧೇ । ಪ್ರವರ್ಧತೇ ॥

। ಪ್ರತಿಪದಾರ್ಥ ।

ವೃಷ್ಟಿಮಾನ್ ಇವ—ವೃಷ್ಟಿಯೊಡಗೂಡಿದ । ಪರ್ಜನ್ಯಃ—ಪರ್ಜನ್ಯದೇವನಂತೆ । ಯಃ—ಯಾವ । ಇಂದ್ರಃ—ಇಂದ್ರನು। ಓಜಸಾ-ತನ್ನ ಬಲದಿಂದ । ಮಹಾನ್—ಅತ್ಯಧಿಕವಾದ ಮಹತ್ತ್ವವುಳ್ಳವನಾಗಿ ಇರುವನೋ (ಅದೇ ಇಂದ್ರನು) । ವತ್ಸಸ್ಯ—ತನ್ನ ಪುತ್ರನಂತಿರುವ ವತ್ಸಋಷಿಯ । ಸ್ತೋಮೈಃ—ಸ್ತೋತ್ರಗಳಿಂದ । ವವೃಧೇ—ವೃದ್ಧಿಯನ್ನು ಹೊಂದುತ್ತಾನೆ.

। ಭಾವಾರ್ಥ ।

ವೃಷ್ಟಿಯಿಂದ ಕೂಡಿದ ಪರ್ಜನ್ಯದೇವನಂತೆ ಯಾವ ಇಂದ್ರನು ತನ್ನ ಬಲದಿಂದ ಅತ್ಯಧಿಕವಾದ ಮಹತ್ತ್ವವುಳ್ಳವನಾಗಿರುವನೋ ಅದೇ ಇಂದ್ರನು ಪುತ್ರಪ್ರಾಯನಾದ ವತ್ಸಋಷಿಯ ಸ್ತೋತ್ರಗಳಿಂದ ವೃದ್ಧಿಯನ್ನು ಹೊಂದುತ್ತಾನೆ.

## English Translation

Indra, who is great in might like Parjanya the distributor of rain, is magnified by the praises of Vatsa.

। ಸಂಹಿತಾಪಾಠಃ ।

ಪ್ರಜಾಮೃತಸ್ಯ ಪಿಪ್ರತಃ ಪ್ರ ಯದ್ಭರಂತ ವಹ್ನಯಃ ।
ವಿಪ್ರಾ ಋತಸ್ಯ ವಾಹಸಾ ॥ ೨ ॥

। ಪದಪಾಠಃ ।

ಪ್ರಽಜಾಂ । ಋತಸ್ಯ । ಪಿಪ್ರತಃ । ಪ್ರ । ಯತ್ । ಭರಂತ । ವಹ್ನಯಃ ।
ವಿಪ್ರಾಃ । ಋತಸ್ಯ । ವಾಹಸಾ ॥ ೨ ॥

। ಸಾಯಣಭಾಷ್ಯಂ ।

ಋತಸ್ಯ ಯಜ್ಞಸ್ಯ ಸತ್ಯಸ್ಯ ವಾ ಪ್ರಜಾಂ ಪ್ರಕರ್ಷೇಣ ಜಾತಮಿಂದ್ರಂ ಪಿಪ್ರತೋ ನಭಸಃ ಪ್ರದೇಶಾನ್ ಪೂರಯಂತೋ ವಹ್ನಯೋ ವಾಹಕಾ ಅಶ್ವಾ ಯದ್ಯದಾ ಪ್ರ ಭರಂತ ಪ್ರಕರ್ಷೇಣ ಭರಂತಿ

ವಹಂತಿ ತದಾ ವಿಪ್ರಾ ಮೇಧಾವಿನ ಋತಸ್ಯ ಯಜ್ಞಸ್ಯ ವಾಹಸಾ ಪ್ರಾಪಕೇಣ ಸ್ತೋತ್ರೇಣ ತಮಿಂದ್ರಂ ಸ್ತುವಂತೀತಿ ಶೇಷಃ ||

। ಪ್ರತಿಪದಾರ್ಥ ।

ಋತಸ್ಯ—ಯಜ್ಞಕ್ಕೆ । ಪ್ರಜಾಂ—ಪುತ್ರರೂಪನಾದ ಇಂದ್ರನನ್ನು । ಪಿಪ್ರತೀಃ—ಅಂತರಿಕ್ಷವನ್ನೆಲ್ಲಾ ವ್ಯಾಪಿಸಿರತಕ್ಕವೂ । ವಹ್ನಯಃ—ಇಂದ್ರನ ವಾಹಕಗಳೂ ಆದ ಅಶ್ವಗಳು । ಯತ್—ಯಾವಾಗ । ಪ್ರ ಭರಂತ—ಅತಿಶಯವಾಗಿ ವಹಿಸುವುವೋ (ಆಗ) । ವಿಪ್ರಾಃ—ಮೇಧಾವಿಗಳಾದ ಋತ್ವಿಕ್ಕುಗಳು । ಋತಸ್ಯ—ಯಜ್ಞದ । ವಾಹಸಾ—ವಾಹಕವಾದ ಸ್ತುತಿಯಿಂದ ಇಂದ್ರನನ್ನು ಪ್ರಶಂಸಿಸುತ್ತಾರೆ.

। ಭಾವಾರ್ಥ ।

ಯಜ್ಞಕ್ಕೆ ಪುತ್ರರೂಪನಾದ ಇಂದ್ರನನ್ನು ಅಂತರಿಕ್ಷವನ್ನೆಲ್ಲಾ ವ್ಯಾಪಿಸತಕ್ಕವೂ, ಇಂದ್ರನ ವಾಹಕಗಳೂ ಆದ ಅಶ್ವಗಳು ಯಾವಾಗ ಅತಿಶಯವಾಗಿ ವಹಿಸುವುವೋ ಆಗ ಮೇಧಾವಿಗಳಾದ ಋತ್ವಿಕ್ಕುಗಳು ಯಜ್ಞದ ವಾಹಕವಾದ ಸ್ತುತಿಯಿಂದ ಇಂದ್ರನನ್ನು ಪ್ರಶಂಸಿಸುತ್ತಾರೆ.

## English Translation

When his steeds filling (the heavens) bear onwards the progeny of the sacrifice, then the pious (magnify him) with the hymns of the rite.

॥ ಸಂಹಿತಾಪಾಠಃ ॥

ಕಣ್ವಾ ಇಂದ್ರಂ ಯದಕ್ರತ ಸ್ತೋಮೈರ್ಯಜ್ಞಸ್ಯ ಸಾಧನಂ ।
ಜಾಮಿ ಬ್ರುವತ ಆಯುಧಂ ॥ ೩ ॥

॥ ಪದಪಾಠಃ ॥

ಕಣ್ವಾಃ । ಇಂದ್ರಂ । ಯತ್ । ಅಕ್ರತ । ಸ್ತೋಮೈಃ । ಯಜ್ಞಸ್ಯ । ಸಾಧನಂ ।
ಜಾಮಿ । ಬ್ರುವತೇ । ಆಯುಧಂ ॥ ೩ ॥

। ಸಾಯಣಭಾಷ್ಯಂ ।

ಕಣ್ವಾಃ । ಸ್ತೋತೃನಾಮೈತತ್ । ಸ್ತೋತಾರಃ ಕಣ್ವಗೋತ್ರಾ ವೇಂದ್ರಂ ಸ್ತೋಮೈಃ ಸ್ತೋತ್ರೈ-ರ್ಯಜ್ಞಸ್ಯ ಯಾಗಸ್ಯ ಸಾಧನಂ ಸಾಧಯಿತಾರಂ ನಿಷ್ಪಾದಕಂ ಯದ್ಯದಾಕ್ರತ ಅಕೃಷತ॥ ಕರೋತೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ ॥ ತದಾನೀಮಾಯುಧಂ ಶತ್ರೂಣಾಂ ಹಿಂಸಕಂ ಬಾಣಾದಿಕಂ ಜಾಮಿ । ಅತಿರೇಕನಾಮೈತತ್ । ಅತಿರಿಕ್ತಮಹಿತಂ ಪ್ರಯೋಜನರಹಿತಂ ಬ್ರುವತೇ । ಕಥಯಂತಿ । ಆಯುಧಸಾ-

ಥ್ಯಸ್ಯ ಸರ್ವಕಾರ್ಯಸ್ಯೇಂದ್ರೇಣ ಕೃತತ್ವಾದಾಯುಧಂ ನಿಷ್ಪ್ರಯೋಜನಮಿತ್ಯರ್ಥಃ । ಯದ್ವಾ। ಆಯುಧ—ಮಾಯೋಧನಶೀಲಮಿಂದ್ರಂ ಜಾಮಿ ಜಾಮಿಂ ಭ್ರಾತರಂ ಬ್ರುವತೇ । ವದಂತಿ । ಸರ್ವಕಾರ್ಯೇಷು ಭ್ರಾತೃವದ್ವರ್ತತೇ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । ಕಣ್ವಾಃ—ಕಣ್ವವಂಶೋತ್ಪನ್ನರಾದ ಋಷಿಗಳು । ಇಂದ್ರಂ—ಇಂದ್ರನನ್ನು । ಸ್ತೋಮೈಃ—ಸ್ತೋತ್ರಗಳಿಂದ । ಯಜ್ಞಸ್ಯ—ಯಾಗದ । ಸಾಧನಂ—ನಿರ್ವಾಹಕನನ್ನಾಗಿ । ಅಕ್ರತ—ಮಾಡಿದರೋ (ಆಗ) ಆಯುಧಂ—ಶತ್ರುಗಳ ಮೇಲೆ ಪ್ರಯೋಗಿಸಬೇಕಾದ ಆಯುಧಗಳನ್ನು । ಜಾಮಿ—ಅಪ್ರಯೋಜಕವೆಂದು । ಬ್ರುವತೇ—ಹೇಳುತ್ತಾರೆ.

॥ ಭಾವಾರ್ಥ ॥

ಕಣ್ವವಂಶೋತ್ಪನ್ನರಾದ ಋಷಿಗಳು ಯಾವಾಗ ಇಂದ್ರನನ್ನು ಸ್ತೋತ್ರಗಳಿಂದ ಯಾಗದ ನಿರ್ವಾಹಕನನ್ನಾಗಿ ಮಾಡಿದರೋ ಆಗ ಶತ್ರುಗಳಮೇಲೆ ಪ್ರಯೋಗಿಸಬೇಕಾದ ಆಯುಧಗಳನ್ನು ಅಪ್ರಯೋಜಕವೆಂದು ತಿಳಿಯುತ್ತಾರೆ. ಇಂದ್ರನೇ ಸಹಾಯಕ್ಕಿರುವಾಗ ಉಳಿದ ಆಯುಧಗಳ ಅವಶ್ಯಕತೆಯೇ ಇರುವುದಿಲ್ಲ.

## English Translation

When the Kanwas by their praises have made Indra the accomplisher of the sacrifice, they declare all weapons needless.

॥ ಸಂಹಿತಾಪಾಠಃ ॥

ಸಮಸ್ಯ ಮನ್ಯವೇ ವಿಶೋ ವಿಶ್ವಾ ನಮಂತ ಕೃಷ್ಟಯಃ ।

ಸಮುದ್ರಾಯೇವ ಸಿಂಧವಃ ॥ ೪ ॥

॥ ಪದಪಾಠಃ ॥

ಸಂ । ಅಸ್ಯ । ಮನ್ಯವೇ । ವಿಶಃ । ವಿಶ್ವಾಃ । ನಮಂತ । ಕೃಷ್ಟಯಃ ।

ಸಮುದ್ರಾಯಽಇವ । ಸಿಂಧವಃ ॥ ೪ ॥

॥ ಸಾಯಣಭಾಷ್ಯಂ ॥

ತೃತೀಯೇ ಪರ್ಯಾಯೇ ಹೋತುಃ ಶಸ್ತ್ರೇ ಸಮಸ್ಯ ಮನ್ಯವ ಇತ್ಯಾದ್ಯಾ ದ್ವಿಚತ್ವಾರಿಂಶದೃಚಃ । ಸೂತ್ರ್ಯತೇ ಹಿ । ಸಮಸ್ಯ ಮನ್ಯವೇ ವಿಶ ಇತಿ ದ್ವಿಚತ್ವಾರಿಂಶದ್ವಿಶ್ವಜಿತೇ । ಆ. ೬-೪ । ಇತಿ ॥

ವಿಶೋ ವಿಶಂತ್ಯೋ ವಿಶ್ವಾಃ ಸರ್ವಾಃ ಕೃಷ್ಟಯಃ ಪ್ರಜಾಃ ಅಸ್ಯೇಂದ್ರಸ್ಯ ಮನ್ಯವೇ ಕ್ರೋಧಾಯ।

ಯದ್ವಾ । ಮನ್ಯುರ್ಮನನಸಾಧನಂ ಸ್ತೋತ್ರಂ । ತದರ್ಥಂ । ಸಂ ನಮಂತ । ಸಮ್ಯಕ್ ಸ್ತುತೇ ಏವ ನಮಂತಿ ॥ ನಮತೇಃ ಕರ್ಮಕರ್ತರಿ ಛಾಂದಸೋ ಲಙ್ । ನ ದುಹಸ್ನುನಮಾಮಿತಿ ಯಕ್ಚಿಣೋಃ ಪ್ರತಿ-ಷೇಧಃ ॥ ಪ್ರಹ್ವೀಭವಂತಿ । ತತ್ರ ದೃಷ್ಟಾಂತಃ । ಸಮುದ್ರಾಯೇವ ಯಥಾ ಸಮುದ್ರಮುದಧಿಂ ಪ್ರತಿ ಸಿಂಧವಃ ಸ್ಯಂದನಶೀಲಾ ನದ್ಯಃ ಸ್ವಯಮೇವ ನಮಂತೇ ತದ್ವತ್ ॥

। ಪ್ರತಿಪದಾರ್ಥ ।

ಸಮುದ್ರಾಯ ಇವ—ಸಮುದ್ರಕ್ಕೆ ಹೋಗಿ ಸೇರುವಾಗ । ಸಿಂಧವಃ—ನದಿಗಳು ನಮ್ರವಾಗಿ ಬಾಗಿಹೋಗಿ ಸೇರುವಂತೆ । ಅಸ್ಯ—ಈ ಇಂದ್ರನ । ಮನ್ಯವೇ—ಕೋಪಕ್ಕೆ ಬೆದರಿ । ವಿಶಃ—ಇಂದ್ರನನ್ನು ಸಮಾಪಿಸುವ । ವಿಶ್ವಾಃ—ಸಮಸ್ತವಾದ । ಕೃಷ್ಟಯಃ—ಪ್ರಜೆಗಳೂ । ಸಂ ನಮಂತ—ಬಾಗಿ ನಮ್ರರಾಗಿ ಸಮಾಪಿಸುತ್ತಾರೆ.

। ಭಾವಾರ್ಥ ।

ಸಮುದ್ರಕ್ಕೆ ಹೋಗಿ ಸೇರುವಾಗ ನದಿಗಳು ನಮ್ರವಾಗಿ ಬಾಗಿ ಹೋಗಿ ಸೇರುವಂತೆ ಈ ಇಂದ್ರನ ಕೋಪಕ್ಕೆ ಬೆದರಿ ಇಂದ್ರನನ್ನು ಸಮಾಪಿಸುವ ಸಕಲ ಪ್ರಜೆಗಳೂ ಬಾಗಿ ನಮ್ರರಾಗಿ ಇಂದ್ರನನ್ನು ಸಮಾಪಿಸುತ್ತಾರೆ.

## English Translation

All people, (all) men bow down before his anger, as rivers (decline) towards the sea.

। ವಿಶೇಷವಿಷಯಗಳು ।

ಮೂರನೆಯ ಪರ್ಯಾಯದಲ್ಲಿ ಹೋತೃವೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಸಮಸ್ಯ ಮನ್ಯವೇ ಎಂಬ ಋಕ್ಕಿನಿಂದ ಮುಂದಿನ ನಲವತ್ತೆರಡು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—ಸಮಸ್ಯ ಮನ್ಯವೇ ವಿಶ ಇತಿ ದ್ವಿಚತ್ವಾರಿಂಶದ್ವಿಶ್ವಜಿತೇ ಎಂಬ ಸೂತ್ರದಿಂದ (ಆ. ೬–೪) ವಿವೃತವಾಗಿರುವುದು.

। ಸಂಹಿತಾಪಾಠಃ ।

ಓಜಸ್ತದಸ್ಯ ತಿತ್ವಿಷ ಉಭೇ ಯತ್ಸಮವರ್ತಯತ್ ।
ಇಂದ್ರಶ್ಚರ್ಮೇವ ರೋದಸೀ ॥ ೫ ॥

। ಪದಪಾಠಃ ।

ಓಜಃ । ತತ್ । ಅಸ್ಯ । ತಿತ್ವಿಷೇ । ಉಭೇ ಇತಿ । ಯತ್ । ಸಂऽಅವರ್ತಯತ್ ।
ಇಂದ್ರಃ । ಚರ್ಮऽಇವ । ರೋದಸೀ ಇತಿ ॥ ೫ ॥

। ಸಾಯಣಭಾಷ್ಯಂ ।

ಅಸ್ಯೇಂದ್ರಸ್ಯ ತದೋಜೋ ಬಲಂ ತಿತ್ವಿಷೇ । ದಿದೀಪೇ ॥ ತ್ವಿಷ ದೀಪ್ತೌ ॥ ಯದ್ಯೇನೌಜಸಾಯಮಿಂದ್ರ ಉಭೇ ರೋದಸೀ ದ್ಯಾವಾಪೃಥಿವ್ಯೌ ಚರ್ಮೇವ ಸಮವರ್ತಯತ್ ಸಮ್ಯಗ್ವರ್ತಯತಿ । ಯಥಾ ಕಶ್ಚಿತ್ಕಿಂಚಿಚ್ಚರ್ಮ ಕದಾಚಿದ್ವಿಸ್ತಾರಯತಿ ಕದಾಚಿತ್ಸಂಕೋಚಯತಿ ಏವಂ ತದಧೀನೇ ಅಭೂತಾಮಿತ್ಯರ್ಥಃ ॥

। ಪ್ರತಿಪದಾರ್ಥ ।

ಯತ್—ಯಾವ ಓಜಸ್ಸಿನಿಂದ । ಇಂದ್ರಃ—ಇಂದ್ರನು । ಉಭೇ ರೋದಸೀ—ದ್ಯಾವಾಪೃಥಿವಿಗಳೆರಡನ್ನೂ । ಚರ್ಮೇವ—ಚರ್ಮವನ್ನು ಸುಲಭವಾಗಿ ಮಡಿಸಿಯೂ ಬೇಕಾದಾಗ ಹರಡಿಯೂ ಇಟ್ಟುಕೊಳ್ಳುವಂತೆ । ಸಮವರ್ತಯತ್—ತನ್ನ ಇಷ್ಟಬಂದಾಗ ವಿಸ್ತೃತವನ್ನಾಗಿಯೂ ಅಥವಾ ಸಂಕುಚಿತವಾದುದನ್ನಾಗಿಯೂ ಮಾಡುವನೋ ಅಂತಹ । ಅಸ್ಯ—ಈ ಇಂದ್ರನ । ತತ್—ಪ್ರಸಿದ್ಧವಾದ । ಓಜಃ—ವೀರ್ಯವು । ತಿತ್ವಿಷೇ—ಪ್ರಕಾಶಿಸುತ್ತದೆ.

। ಭಾವಾರ್ಥ ।

ಚರ್ಮವನ್ನು ಸುಲಭವಾಗಿ ಮಡಿಸಿಯೂ, ಬೇಕಾದಾಗ ಹರಡಿಯೂ ಇಟ್ಟುಕೊಳ್ಳುವಂತೆ ಇಂದ್ರನು ಯಾವ ಓಜಸ್ಸಿನಿಂದ ದ್ಯಾವಾಪೃಥಿವಿಗಳೆರಡನ್ನೂ ತನ್ನ ಇಷ್ಟಬಂದಾಗ ವಿಸ್ತೃತವಾದುದನ್ನಾಗಿಯೂ ಅಥವಾ ಸಂಕುಚಿತವಾದುದನ್ನಾಗಿಯೂ ಮಾಡುವನೋ ಅಂತಹ ಈ ಇಂದ್ರನ ಪ್ರಸಿದ್ಧವಾದ ವೀರ್ಯವು (ತೇಜಸ್ಸು) ಪ್ರಕಾಶಿಸುತ್ತದೆ.

## English Translation

**His might is manifest, for Indra folds and unfolds both heaven and earth, as (one spreads or rolls up) a skin.**

। ಸಂಹಿತಾಪಾಠಃ ।

ವಿ ಚಿದ್ವೃತ್ರಸ್ಯ ದೋಧತೋ ವಜ್ರೇಣ ಶತಪರ್ವಣಾ ।
ಶಿರೋ ಬಿಭೇದ ವೃಷ್ಣಿನಾ ॥ ೬ ॥

। ಪದಪಾಠಃ ॥

ವಿ । ಚಿತ್ । ವೃತ್ರಸ್ಯ । ದೋಧತಃ । ವಜ್ರೇಣ । ಶತಽಪರ್ವಣಾ ।
ಶಿರಃ । ಬಿಭೇದ । ವೃಷ್ಣಿನಾ ॥ ೬ ॥

॥ ಸಾಯಣಭಾಷ್ಯಂ ॥

ಚಿಚ್ಛಬ್ದೋऽಪ್ಯರ್ಥೇ । ಸ ಚ ಭಿನ್ನಕ್ರಮಃ । ವೃತ್ರಸ್ಯ ಚಿದಾವರಕಸ್ಯಾಪಿ ದೋಧತೋऽತ್ಯರ್ಥಂ ಜಗತ್ಕಂಪಯತೋऽಸುರಸ್ಯ ಶಿರೋ ಮೂರ್ಧಾನಂ ಶತಪರ್ವಣಾ ಶತಸಂಖ್ಯಾಪರ್ವಾಣಿ ಧಾರಾ ಯಸ್ಯ ತಾದೃಶೇನ ವೃಷ್ಣಿನಾ ವೀರ್ಯವತಾ ವಜ್ರೇಣೇಂದ್ರೋ ವಿ ಬಿಭೇದ । ವಿಚಿಚ್ಛೇದ ॥

॥ ಪ್ರತಿಪದಾರ್ಥ ॥

ವೃತ್ರಸ್ಯ ಚಿತ್—ಜಗತ್ತನ್ನೆಲ್ಲಾ ಆವರಿಸಿದ್ದರೂ ಸಹ । ದೋಧತಃ—ಎಲ್ಲವನ್ನೂ ಕಂಪಿಸುವಂತೆ ಮಾಡುತ್ತಿದ್ದ ಅಸುರನ । ಶಿರಃ—ತಲೆಯನ್ನು । ಶತಪರ್ವಣಾ—ಶತಸಂಖ್ಯಾಕವಾದ ಪರ್ವವುಳ್ಳದ್ದೂ (ಅಲಗುಳ್ಳದ್ದೂ) । ವೃಷ್ಣಿನಾ—ವೀರ್ಯವತ್ತಾದುದೂ ಆದ । ವಜ್ರೇಣ—ವಜ್ರಾಯುಧದಿಂದ । ವಿ ಬಿಭೇದ—ಸೀಳಿಹಾಕಿದನು.

॥ ಭಾವಾರ್ಥ ॥

ಜಗತ್ತನ್ನೆಲ್ಲಾ ಆವರಿಸಿದ್ದರೂ ಸಹ ಎಲ್ಲವನ್ನೂ ಕಂಪಿಸುವಂತೆ ಮಾಡುತ್ತಿದ್ದ ಅಸುರನ ತಲೆಯನು ಶತಸಂಖ್ಯಾಕವಾದ ಅಲಗುಳ್ಳದ್ದೂ, ವೀರ್ಯವತ್ತಾದುದೂ ಆದ ವಜ್ರಾಯುಧದಿಂದ ಸೀಳಿಹಾಕಿದನು.

## English Translation

He has cloven with the powerful hundred-edged thunderbolt the head of the turbulent Vritra.

॥ ಸಂಹಿತಾಪಾಠಃ ॥

ಇಮಾ ಅಭಿ ಪ್ರ ಣೋನುಮೋ ವಿಪಾಮಗ್ರೇಷು ಧೀತಯಃ ।
ಅಗ್ನೇಃ ಶೋಚಿರ್ನ ದಿದ್ಯುತಃ ॥ ೭ ॥

॥ ಪದಪಾಠಃ ॥

ಇಮಾಃ । ಅಭಿ । ಪ್ರ । ನೋನುಮಃ । ವಿಪಾಂ । ಅಗ್ರೇಷು । ಧೀತಯಃ ।
ಅಗ್ನೇಃ । ಶೋಚಿಃ । ನ । ದಿದ್ಯುತಃ ॥ ೭ ॥

॥ ಸಾಯಣಭಾಷ್ಯಂ ॥

ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಪ್ರಶಾಸ್ತುಃ ಶಸ್ತ್ರ ಇಮಾ ಅಭೀತಿ ತೃಚೋ ವೈಕಲ್ಪಿಕೋऽನುರೂಪಃ । ಸೂತ್ರಿತಂ ಚ । ಇಮಾ ಅಭಿ ಪ್ರ ಣೋನುಮ ಇತ್ಯಥ ಬ್ರಾಹ್ಮಣಾಚ್ಛಂಸಿನಃ । ಆ. ೭-೮ । ಇತಿ ॥

ವಿಪಾಂ ಸ್ತೋತೄಣಾಮಗ್ರೇಷು ಪುರಸ್ತಾದಿಮಾ ಅಸ್ಮದೀಯಾ ಧೀತಯೋ ಧಿಯಃ ಸ್ತೋತ್ರಾಣ್ಯಭಿ ಪ್ರ ಣೋನುಮಃ । ಅಭಿಮುಖ್ಯೇನ ಪುನಃ ಪುನಃ ಪ್ರವದಾಮಃ ॥ ಣು ಶಬ್ದೇ ॥ ಕೀದೃಶೀಃ ಸ್ತುತೀಃ । ಅಗ್ನೇಃ ಶೋಚಿರ್ನ ದೀಪ್ತಿರಿವ ದಿದ್ಯುತೋ ದೀಪ್ಯಮಾನಾ ವೇದಿರೂಪಾಃ ॥

। ಪ್ರತಿಪದಾರ್ಥ ।

ವಿಪಾಂ—ಸ್ತೋತೃಗಳ । ಅಗ್ರೇಷು—ಮುಂಭಾಗಗಳಲ್ಲಿ । ಅಗ್ನೇಃ—ಅಗ್ನಿಯ । ಶೋಚಿರ್ನ—ಪ್ರಭೆಯಂತೆ । ದಿದ್ಯುತಃ—ಪ್ರಕಾಶಮಾನವಾದವೂ । ಇಮಾಃ—ಇಂದ್ರನನ್ನುದ್ದೇಶಿಸಿದವೂ ಆದ । ಧೀತಯಃ—ಸ್ತುತಿಗಳನ್ನು । ಅಭಿ ಪ್ರ ಣೋನುಮಃ—ಪದೇ ಪದೇ ಪಠಿಸುತ್ತೇವೆ.

। ಭಾವಾರ್ಥ ।

ಸ್ತೋತೃಗಳ ಮುಂಭಾಗಗಳಲ್ಲಿ ಅಗ್ನಿಯ ಪ್ರಭೆಯಂತೆ ಪ್ರಕಾಶಮಾನವಾದವೂ, ಇಂದ್ರನನ್ನುದ್ದೇಶಿಸಿದವೂ ಆದ ಸ್ತುತಿಗಳನ್ನು ಪದೇ ಪದೇ ಪಠಿಸುತ್ತೇವೆ.

## English Translation

In front of the worshippers we repeatedly utter our praises, radiant as the flame of fire.

॥ ವಿಶೇಷವಿಷಯಗಳು ॥

ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ತೃತೀಯಸವನಕಾಲದಲ್ಲಿ ಪ್ರಶಾಸ್ತೃವೆಂಬ ಋತ್ವಿಜನು ಶಸ್ತ್ರ ಮಂತ್ರಗಳನ್ನು ಪಠಿಸುವಾಗ ಇಮಾ ಅಭಿ ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೭-೯ ಋಕ್ಕುಗಳನ್ನು) ವೈಕಲ್ಪಿಕಾನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಇಮಾ ಅಭಿ ಪ್ರ ಣೋನುಮ ಇತ್ಯೇಕ ಬ್ರಾಹ್ಮಣಾಚ್ಛಂಸಿನಃ** ಎಂಬ ಸೂತ್ರದಿಂದ (ಆ. ೭-೮) ವಿವೃತವಾಗಿರುವುದು.

। ಸಂಹಿತಾಪಾಠಃ ।

ಗುಹಾ ಸತೀರುಪ ತ್ಮನಾ ಪ್ರ ಯಚ್ಛೋಚಂತ ಧೀತಯಃ ।

ಕಣ್ವಾ ಋತಸ್ಯ ಧಾರಯಾ ॥ ೮ ॥

॥ ಪದಪಾಠಃ ॥

ಗುಹಾ । ಸತೀಃ । ಉಪ । ತ್ಮನಾ । ಪ್ರ । ಯತ್ । ಶೋಚಂತ । ಧೀತಯಃ ।

ಕಣ್ವಾಃ । ಋತಸ್ಯ । ಧಾರಯಾ ॥ ೮ ॥

॥ ಸಾಯಣಭಾಷ್ಯಂ ॥

ಗುಹಾ ಗುಹಾಯಾಂ ಸತೀಃ ಸತ್ಯೋ ಭವಂತ್ಯೋ ಯದ್ವಾ ಧೀತಯಃ ಸ್ತುತಯಃ ಕರ್ಮಾಣಿ ವಾ ತ್ಮನಾತ್ಮನಾ ಸ್ವೇನೇಂದ್ರೇಣೋಪಗಮ್ಯಮಾನಾಃ ಪ್ರಶೋಚಂತ ಪ್ರಾದೀಪ್ಯಂತ । ಯದ್ವಾ । ಆತ್ಮನಾ ಸ್ವತ ಏವೇಂದ್ರಮುಪಗಚ್ಛಂತ್ಯಃ ಪ್ರದೀಪ್ಯಂತೇ । ತಾಃ ಸ್ತುತೀಃ ಕಣ್ವಾಃ ಕಣ್ವಗೋತ್ರಾ ಋಷಯ ಋತಸ್ಯೋದಕಸ್ಯ ಸೋಮಾತ್ಮಕಸ್ಯ ಧಾರಯಾ ಸಹಿತಾಃ ಕುರ್ವಂತೀತಿ ಶೇಷಃ ॥

॥ ಪ್ರತಿಪದಾರ್ಥ ॥

**ಗುಹಾ**—ರಹಸ್ಯವಾಗಿ । **ಸತೀಃ**—ಅರ್ಪಿಸಿದ । **ಯತ್**—ಯಾವ । **ಧೀತಯಃ**—ಸ್ತುತಿಗಳು । **ತ್ಮನಾ ಉಪ**—ತಾವಾಗಿಯೇ ಇಂದ್ರನನ್ನು ಸಮೀಪಿಸಿ । **ಪ್ರ ಶೋಚಂತ**—ಪ್ರಕಾಶಿಸಿದವೋ (ಅಂತಹ ಸ್ತುತಿಗಳನ್ನು) । **ಕಣ್ವಾಃ**—ಕಣ್ವಗೋತ್ರೋತ್ಪನ್ನರಾದ ಋಷಿಗಳು । **ಋತಸ್ಯ**—ಸೋಮರೂಪವಾದ ಉದಕದ । **ಧಾರಯಾ**—ಪ್ರವಾಹದೊಡನೆ ಮಿಶ್ರಮಾಡಿದರು.

॥ ಭಾವಾರ್ಥ ॥

ರಹಸ್ಯವಾಗಿ ಅರ್ಪಿಸಿದ ಯಾವ ಸ್ತುತಿಗಳು ತಾವಾಗಿಯೇ ಇಂದ್ರನನ್ನು ಸಮೀಪಿಸಿ ಅತ್ಯಂತವಾಗಿ ಪ್ರಕಾಶಿಸಿದವೋ ಅಂತಹ ಸ್ತುತಿಗಳನ್ನು ಕಣ್ವಗೋತ್ರೋತ್ಪನ್ನರಾದ ಋಷಿಗಳು ಸೋಮರೂಪವಾದ ಉದಕದ ಪ್ರವಾಹದೊಡನೆ ಮಿಶ್ರಮಾಡಿದರು. (ಇಂದ್ರನಿಗೆ ಅರ್ಪಿಸಿದರು)

## English translation

The praises that are offered in secret shine brightly when approahing (Indra) of their own will : the Kanwas (combine them) with the stream of the Soma

॥ ಸಂಹಿತಾಪಾಠಃ ॥

ಪ್ರ ತಮಿಂದ್ರ ನಶೀಮಹಿ ರಯಿಂ ಗೋಮಂತಮಶ್ವಿನಂ ।
ಪ್ರ ಬ್ರಹ್ಮ ಪೂರ್ವಚಿತ್ತಯೇ ॥ ೯ ॥

॥ ಪದಪಾಠಃ ॥

ಪ್ರ । ತಂ । ಇಂದ್ರ । ನಶೀಮಹಿ । ರಯಿಂ । ಗೋಽಮಂತಂ । ಅಶ್ವಿನಂ ।
ಪ್ರ । ಬ್ರಹ್ಮ । ಪೂರ್ವಽಚಿತ್ತಯೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಗೋಮಂತಂ ಗೋಭಿರ್ಯುಕ್ತಮಶ್ವಿನಮಶ್ವೈರುಪೇತಂ ತಂ ಪ್ರಸಿದ್ಧಂ ರಯಿಂ

ತ್ವದೀಯಂ ಧನಂ ಪ್ರ ನಶೀಮಹಿ । ಪ್ರಾಪ್ನುಯಾಮ । ತಥಾ ಬೃಹ್ಯ ಪರಿವೃಢಮನ್ನಂ ಚ ಪೂರ್ವ-ಚಿತ್ತ್ಯೇಽನ್ಯೇಭ್ಯಃ ಪೂರ್ವಮೇವ ಜ್ಞಾನಾಯ ಪ್ರಾಪ್ನವಾಮ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಗೋಮಂತಂ—ಗೋವುಗಳಿಂದ ಕೂಡಿದುದೂ । ಅಶ್ವಿನಂ—ಅಶ್ವಯುಕ್ತವಾದುದೂ । ತಂ—ಪ್ರಸಿದ್ಧವಾದುದೂ ಆದ । ರಯಿಂ—ಧನವನ್ನು । ಪೂರ್ವಚಿತ್ತಯೇ—ಇತರರ ತಿಳುವಳಿಕೆಗೆ ಬರುವುದಕ್ಕೆ ಪೂರ್ವಭಾವಿಯಾಗಿಯೇ । ಪ್ರ ನಶೀಮಹಿ—ನಾವು ಪಡೆಯುವಂತೆ ಮಾಡು । ಬೃಹ್ಯ—ಅನ್ನವನ್ನೂ ಸಹ । ಪ್ರ—ಹೊಂದುವಂತಾಗಲಿ.

। ಭಾವಾರ್ಥ ।

ಎಲೈ ಇಂದ್ರನೇ, ಗೋವುಗಳಿಂದ ಕೂಡಿದುದೂ, ಅಶ್ವಯುಕ್ತವಾದುದೂ, ಪ್ರಸಿದ್ಧವಾದುದೂ ಆದ ಧನವನ್ನು ಇತರರ ತಿಳುವಳಿಕೆಗೆ ಬರುವುದಕ್ಕೆ ಪೂರ್ವಭಾವಿಯಾಗಿಯೇ ನಾವು ಪಡೆಯುವಂತೆ ಮಾಡು. ಪ್ರಭೂತವಾದ ಅನ್ನವನ್ನು ನಾವು ಹೊಂದುವಂತಾಗಲಿ.

English Translation

May we obtain, Indra, that wealth which compraises cattle, horses, and food, before it be known to others.

। ಸಂಹಿತಾಪಾಠಃ ।

ಅಹಮಿದ್ಧಿ ಪಿತುಷ್ಪರಿ ಮೇಧಾಮೃತಸ್ಯ ಜಗ್ರಭ ।

ಅಹಂ ಸೂರ್ಯ ಇವಾಜನಿ ॥ ೧೦ ॥

। ಪದಪಾಠಃ ।

ಅಹಂ । ಇತ್ । ಹಿ । ಪಿತುಃ । ಪರಿ । ಮೇಧಾಂ । ಋತಸ್ಯ । ಜಗ್ರಭ ।

ಅಹಂ । ಸೂರ್ಯಃಽಇವ । ಅಜನಿ ॥ ೧೦ ॥

। ಸಾಯಣಭಾಷ್ಯಂ ।

ಪಿತುಃ ಪಾಲಕಸ್ಯರ್ತಸ್ಯ ಸತ್ಯಸ್ಯಾವಿತಥಸ್ಯೇಂದ್ರಸ್ಯ ಮೇಧಾಮನುಗ್ರಹಾತ್ಮಿಕಾಂ ಬುದ್ಧಿಮಹಮಿದಹಮೇವ ಪರಿ ಜಗ್ರಭ । ಪರಿಗೃಹೀತವಾನಸ್ಮಿ ನಾನ್ಯೇ । ಹಿ ಯಸ್ಮಾದೇವಂ ತಸ್ಮಾದಹಂ ಸೂರ್ಯ ಇವಾಜನಿ ಸೂರ್ಯೋ ಯಥಾ ಪ್ರಕಾಶಮಾನಃ ಸನ್ ಪ್ರಾದುರ್ಭವತಿ ತಥಾಜನಿಷಂ । ಪ್ರಾದುರಭೂವಂ ॥

। ಪ್ರತಿಪದಾರ್ಥ ।

ಪಿತುಃ—ಪಾಲಕನೂ । ಋತಸ್ಯ—ಸತ್ಯಾತ್ಮನೂ ಆದ ಇಂದ್ರನ । ಮೇಧಾಂ—ಅನುಗ್ರಹಾತ್ಮಕವಾದ

ಬುದ್ಧಿಯನ್ನು । ಅಹಮಿತ್—ನಾನೊಬ್ಬನೇ । ಪರಿ ಜಗ್ರಭ—ಪಡೆದಿದ್ದೇನೆ । ಹಿ—ಆದುದರಿಂದಲೇ । ಅಹಂ—ನಾನು । ಸೂರ್ಯ ಇವ—ಸೂರ್ಯನಂತೆ ಪ್ರಕಾಶಮಾನನಾಗಿ । ಅಜನಿ—ಆಗಿದ್ದೇನೆ.

॥ ಭಾವಾರ್ಥ ॥

ಜಗತ್ಪಾಲಕನೂ ಸತ್ಯಾತ್ಮನೂ ಆದ ಇಂದ್ರನ ಅನುಗ್ರಹಾತ್ಮಕವಾದ ಬುದ್ಧಿಯನ್ನು (ಅವನ ಅನುಗ್ರಹವನ್ನು) ನಾನೊಬ್ಬನೇ ಪಡೆದಿದ್ದೇನೆ. ಆದುದರಿಂದಲೇ ನಾನು ಸೂರ್ಯನಂತೆ ಪ್ರಕಾಶಮಾನನಾಗಿ ಆಗಿದ್ದೇನೆ.

## English Translation

I have verily acquired the favour of the true protector (Indra): I have become (bright) as the sun,

॥ ಸಂಹಿತಾಪಾಠಃ ॥

ಅಹಂ ಪ್ರತ್ನೇನ ಮನ್ಮನಾ ಗಿರಃ ಶುಂಭಾಮಿ ಕಣ್ವವತ್ ।
ಯೇನೇಂದ್ರಃ ಶುಷ್ಮಮಿದ್ದಧೇ ॥ ೧೧ ॥

॥ ಪದಪಾಠಃ ॥

ಅಹಂ । ಪ್ರತ್ನೇನ । ಮನ್ಮನಾ । ಗಿರಃ । ಶುಂಭಾಮಿ । ಕಣ್ವಽವತ್ ।

ಯೇನ । ಇಂದ್ರಃ । ಶುಷ್ಮಂ । ಇತ್ । ದಧೇ ॥ ೧೧ ॥

॥ ಸಾಯಣಭಾಷ್ಯಂ ॥

ಕಣ್ವವನ್ಮಮ ಜನಕಃ ಕಣ್ವ ಇವಾಹಂ ಪ್ರತ್ನೇನ ನಿತ್ಯೇನ ವೇದರೂಪೇಣ ಮನ್ಮನಾ ಮನನಸಾಧನೇನೇಂದ್ರವಿಷಯೇಣ ಸ್ತೋತ್ರೇಣ ಗಿರೋ ವಾಚಃ ಶುಂಭಾಮಿ । ಅಲಂಕರೋಮಿ । ಯದಾ ಹೀಂದ್ರವಿಷಯೋ ಪ್ರಯುಜ್ಯಂತೇ ತದಾನೀಂ ಯಥಾರ್ಥತ್ವಾದ್ವಾಚೋಽಲಂಕೃತಾ ಭವಂತಿ । ಯೇನ ಖಲು ಸ್ತೋತ್ರೇಣೇಂದ್ರಃ ಶುಷ್ಮಂ ಶತ್ರೂಣಾಂ ಶೋಷಕಂ ಬಲಂ ದಧ ಇತ್ ಧತ್ತ ಏವ ಧಾರಯತ್ಯೇವ । ಯತ್ಸ್ತೋತ್ರಮಿಂದ್ರ ಈದೃಶಂ ಬಲಮವಶ್ಯಂ ಜನಯತಿ ತೇನ ಮನ್ಮನೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಯೇನ—ಯಾವ ಸ್ತೋತ್ರದಿಂದ (ಪ್ರಭಾವದಿಂದ) । ಇಂದ್ರಃ—ಇಂದ್ರನು । ಶುಷ್ಮಂ—ಶತ್ರುನಾಶಕವಾದ ಬಲವನ್ನು । ದಧೇ ಇತ್—ಧರಿಸುವನೋ ಅಂತಹ । ಪ್ರತ್ನೇನ—ಪುರಾತನವೂ ವೇದರೂಪವೂ ಆದುದೂ । ಮನ್ಮನಾ—ಧ್ಯಾನಾತ್ಮಕವಾದುದೂ ಆದ ಸ್ತುತಿಯಿಂದ । ಗಿರಃ—ನನ್ನ ವಾಕ್ಯಗಳನ್ನು । ಕಣ್ವವತ್—ನಮ್ಮ

ಪಿತೃವಾದ ಕಣ್ವಋಷಿಯು ಹಿಂದೆ ತನ್ನ ವಾಕ್ಕನ್ನು ಸಂಸ್ಕರಿಸಿದಂತೆ | ಅಹಂ—ನಾನು | ಶುಂಭಾಮಿ—ಸಂಸ್ಕೃತವಾದುದನ್ನಾಗಿ ಮಾಡುತ್ತೇನೆ.

॥ ಭಾವಾರ್ಥ ॥

ನಮ್ಮ ಪಿತೃವಾದ ಕಣ್ವನು ಹಿಂದೆ ತನ್ನ ವಾಕ್ಕನ್ನು ಸಂಸ್ಕರಿಸಿದಂತೆ, ಯಾವ ಸ್ತುತಿಯ ಪ್ರಭಾವದಿಂದ ಇಂದ್ರನು ಶತ್ರುನಾಶಕವಾದ ತನ್ನ ಬಲವನ್ನು ಧರಿಸುವನೋ ಅಂತಹ ಪುರಾತನವೂ, ವೇದರೂಪವೂ ಆದುದೂ, ಧ್ಯಾನಾತ್ಮಕವಾದುದೂ ಆದ ಸ್ತುತಿಯಿಂದ ನನ್ನ ವಾಕ್ಕುಗಳನ್ನು ನಾನು ಸಂಸ್ಕೃತವಾದುದನ್ನಾಗಿ ಮಾಡುತ್ತೇನೆ.

## English Translation

I grace my words with ancient praise, like Kanwa; whereby Indra assuredly enjoys vigour.

॥ ಸಂಹಿತಾಪಾಠಃ ॥

ಯೇ ತ್ವಾಮಿಂದ್ರ ನ ತುಷ್ಟುವುರ್ಋಷಯೋ ಯೇ ಚ ತುಷ್ಟುವುಃ ।
ಮಮೇದ್ವರ್ಧಸ್ವ ಸುಷ್ಟುತಃ ॥ ೧೨ ॥

॥ ಪದಪಾಠಃ ॥

ಯೇ । ತ್ವಾಂ । ಇಂದ್ರ । ನ । ತುಸ್ತುವುಃ । ಋಷಯಃ । ಯೇ । ಚ । ತುಸ್ತುವುಃ ।
ಮಮ । ಇತ್ । ವರ್ಧಸ್ವ । ಸುऽಸ್ತುತಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯೇ ಜನಾಸ್ತ್ವಾಂ ನ ತುಷ್ಟುವುಃ ನ ಸ್ತುವಂತಿ ಯೇ ಚರ್ಷಯೋ ಮಂತ್ರಾಣಾಂ ದ್ರಷ್ಟಾರೋ ಜನಾಸ್ತುಷ್ಟುವುಃ ತ್ವಾಂ ಸ್ತುವಂತಿ ಉಭಯೇಷಾಂ ಮಧ್ಯೇ ಮಮೇನ್ಮಮೈವ ಸ್ತೋತ್ರೇಣ ಸುಷ್ಟುತಃ ಶೋಭನಂ ಸ್ತುತಃ ಸನ್ ವರ್ಧಸ್ವ । ವೃದ್ಧೋ ಭವ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯೇ—ಯಾವ ಮಾನವರು । ತ್ವಾಂ—ನಿನ್ನನ್ನು । ನ ತುಷ್ಟುವುಃ—ಸ್ತುತಿಸುವುದಿಲ್ಲವೋ । ಯೇ ಚ ಋಷಯಃ—ಯಾವ ಋಷಿಗಳು । ತುಷ್ಟುವುಃ—ನಿನ್ನನ್ನು ಸ್ತುತಿಸುವರೋ ಅವರ ಮಧ್ಯದಲ್ಲೆಲ್ಲಾ । ಮಮೇತ್—ನನ್ನ ಸ್ತುತಿಯಿಂದ ಮಾತ್ರವೇ । ಸುಷ್ಟುತಃ—ಅತಿಶಯವಾಗಿ ಪ್ರಶಂಸಿತನಾಗಿ । ವರ್ಧಸ್ವ—ಪ್ರವೃದ್ಧನಾಗು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಮಾನವರು ನಿನ್ನನ್ನು ಸ್ತುತಿಸುವುದಿಲ್ಲವೋ, ಯಾವ ಋಷಿಗಳು ನಿನ್ನನ್ನು ಸ್ತುತಿಸುವರೋ ಅವರ ಮಧ್ಯದಲ್ಲೆಲ್ಲಾ ಕೇವಲ ನನ್ನ ಸ್ತುತಿಯಿಂದ ಮಾತ್ರವೇ ಪ್ರಶಂಸಿತನಾಗಿ ಪ್ರವೃದ್ಧನಾಗು.

## English Translation

Amid those who do not praise you Indra, amid the Rishis who praise you, by my praise being glorified, you increase.

॥ ಸಂಹಿತಾಪಾಠಃ ॥

ಯದಸ್ಯ ಮನ್ಯುರಧ್ವನೀದ್ವಿ ವೃತ್ರಂ ಪರ್ವಶೋ ರುಜನ್ ।
ಅಪಃ ಸಮುದ್ರಮೈರಯತ್ ॥ ೧೩ ॥

॥ ಪದಪಾಠಃ ॥

ಯತ್ । ಅಸ್ಯ । ಮನ್ಯುಃ । ಅಧ್ವನೀತ್ । ವಿ । ವೃತ್ರಂ । ಪರ್ವ್ऽಶಃ । ರುಜನ್ ।
ಅಪಃ । ಸಮುದ್ರಂ । ಐರಯತ್ ॥ ೧೩ ॥

॥ ಸಾಯಣಭಾಷ್ಯಂ ॥

ಅಸ್ಯೇಂದ್ರಸ್ಯ ಮನ್ಯುಃ ಕ್ರೋಧೋ ವೃತ್ರಮಾವೃತ್ಯ ತಿಷ್ಠಂತಮಸುರಂ ಮೇಘಂ ವಾ ಪರ್ವಶಃ ಪರ್ವಣಿ ಪರ್ವಣಿ ಪರುಷಿ ಪರುಷಿ ವಿ ರುಜನ್ ವಿಭಂಜನ್ ಯದ್ಯದಾಧ್ವನೀತ್ ಸ್ತನಯಿತ್ನುಲಕ್ಷಣಂ ಶಬ್ದಮಕರೋತ್ ತದಾನೀಂ ಸಮುದ್ರಂ ಸಮುಂದನೀಯಮುದಧಿಂ ಪ್ರತ್ಯಪೋ ವೃಷ್ಟ್ಯುದಕಾನ್ಯೈರಯತ್ । ಸ ಇಂದ್ರಃ ಪ್ರೇರಿತವಾನ್ ॥

॥ ಪ್ರತಿಪದಾರ್ಥ ॥

ಅಸ್ಯ—ಈ ಇಂದ್ರನ । ಮನ್ಯುಃ—ಕ್ರೋಧವು । ವೃತ್ರಂ—ಆವರಕವಾದ ಮೇಘವನ್ನು । ಪರ್ವಶಃ—ತುಂಡು ತುಂಡಾಗಿ । ವಿ ರುಜನ್—ಸೀಳಿಹಾಕುತ್ತಾ । ಯತ್—ಯಾವಾಗ । ಅಧ್ವನೀತ್—ಗುಡುಗಿನ ರೂಪದಲ್ಲಿ ಗರ್ಜಿಸಿತೋ (ಆಗ) । ಅಪಃ—ವೃಷ್ಟ್ಯುದಕಗಳನ್ನು । ಸಮುದ್ರಂ—ಸಮುದ್ರಕ್ಕಭಿಮುಖವಾಗಿ ಹರಿಯುವಂತೆ । ಐರಯತ್—ಇಂದ್ರನು ಪ್ರೇರಿಸಿದನು

॥ ಭಾವಾರ್ಥ ॥

ಈ ಇಂದ್ರನ ಕ್ರೋಧವು ಆವರಕವಾದ ಮೇಘವನ್ನು ತುಂಡುತುಂಡಾಗಿ ಸೀಳಿಹಾಕುತ್ತಾ ಯಾವಾಗ ಗುಡುಗಿನ ರೂಪದಲ್ಲಿ ಗರ್ಜಿಸಿತೋ ಆಗ ಇಂದ್ರನು ವೃಷ್ಟ್ಯುದಕಗಳನ್ನು ಸುರಿಸಿ ಸಮುದ್ರದ ಕಡೆಗೆ ಪ್ರವಹಿಸುವಂತೆ ಮಾಡಿದನು.

## English Translation

When his wrath thundered, dividing Vritra joint by joint, then he drove the waters to the ocean.

॥ ಸಂಹಿತಾಪಾಠಃ ॥

ನಿ ಶುಷ್ಣ ಇಂದ್ರ ಧರ್ಣಸಿಂ ವಜ್ರಂ ಜಘಂಥ ದಸ್ಯವಿ ।
ವೃಷಾ ಹ್ಯುಗ್ರ ಶೃಣ್ವಿಷೇ ॥ ೧೪ ॥

॥ ಪದಪಾಠಃ ॥

ನಿ । ಶುಷ್ಣೇ । ಇಂದ್ರ । ಧರ್ಣಸಿಂ । ವಜ್ರಂ । ಜಘಂಥ । ದಸ್ಯವಿ ।
ವೃಷಾ । ಹಿ । ಉಗ್ರ । ಶೃಣ್ವಿಷೇ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಶುಷ್ಣೇ ಶೋಷಕ ಏತತ್ಸಂಜ್ಞೇ ದಸ್ಯವ್ಯುಪಕ್ಷಪಯಿತರ್ಯಸುರೇ ಧರ್ಣಸಿಂ ಧಾರಯಿತವ್ಯಂ ವಜ್ರಂ ಕುಲಿಶಂ ತ್ವಂ ನಿ ಜಘಂಥ । ನಿಹತವಾನಸಿ । ವಜ್ರೇಣ ತಮಸುರಂ ನ್ಯವಧೀರಿತ್ಯರ್ಥಃ । ಹೇ ಉಗ್ರೋದ್ಗೂರ್ಣಬಲೇಂದ್ರ ವೃಷಾ ಕಾಮಾನಾಂ ವರ್ಷಿತೇತಿ ಹಿ ಶೃಣ್ವಿಷೇ । ಶ್ರೂಯಸೇ । ಅತೋಽಸ್ಮದಪೇಕ್ಷಿತಂ ಧನಂ ದೇಹೀತಿ ಶೇಷಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಶುಷ್ಣೇ—ಜಗತ್ತನ್ನು ಶೋಷಿಸುವುದರಿಂದಲೇ ಶುಷ್ಣಸಂಜ್ಞಕನಾದ । ದಸ್ಯವಿ—ಅಸುರನ ಮೇಲೆ । ಧರ್ಣಸಿಂ—ನಿನ್ನಿಂದ ಧರಿಸಲ್ಪಡುವ । ವಜ್ರಂ—ವಜ್ರಾಯುಧವನ್ನು । ನಿ ಜಘಂಥ—ನೀನು ಪ್ರಯೋಗಿಸಿ ಅವನನ್ನು ನಾಶಪಡಿಸಿದ್ದೀಯೆ । ಉಗ್ರ—ಅತ್ಯಧಿಕವಾದ ಬಲವುಳ್ಳ ಎಲೈ ಇಂದ್ರನೇ । ವೃಷಾ—ಇಷ್ಟಾರ್ಥಪ್ರದನೆಂದು । ಶೃಣ್ವಿಷೇ ಹಿ—ನೀನು ಪ್ರಸಿದ್ಧನಾಗಿದ್ದೀಯಲ್ಲವೇ.

॥ ಭಾವಾರ್ಥ ॥

ಎಲೈ ಇಂದ್ರನೇ, ಜಗತ್ತನ್ನು ಶೋಷಿಸುವುದರಿಂದಲೇ ಶುಷ್ಣಸಂಜ್ಞಕನಾದ ಅಸುರನ ಮೇಲೆ ನಿನ್ನಿಂದ ಧರಿಸಲ್ಪಡುವ ವಜ್ರಾಯುಧವನ್ನು ನೀನು ಪ್ರಯೋಗಿಸಿ ಅವನನ್ನು ನಾಶಪಡಿಸಿದ್ದೀಯೆ. ಅತ್ಯಧಿಕವಾದ ಬಲವುಳ್ಳ ಎಲೈ ಇಂದ್ರನೇ, ನೀನು ಇಷ್ಟಾರ್ಥಪ್ರದನೆಂದು ಪ್ರಸಿದ್ಧನಾಗಿದ್ದೀಯೆ.

## English Translation

You have hurled your wielded thunderbolt upon the impious Shushna; you are renowned, fierce Indra, as the showerer (of benefits)

। ಸಂಹಿತಾಪಾಠಃ ।

ನ ದ್ಯಾವ ಇಂದ್ರಮೋಜಸಾ ನಾಂತರಿಕ್ಷಾಣಿ ವಜ್ರಿಣಂ ।
ನ ವಿವ್ಯಚಂತ ಭೂಮಯಃ ॥ ೧೫ ॥

॥ ಪದಪಾಠಃ ॥

ನ । ದ್ಯಾವಃ । ಇಂದ್ರಂ । ಓಜಸಾ । ನ । ಅಂತರಿಕ್ಷಾಣಿ । ವಜ್ರಿಣಂ ।
ನ । ವಿವ್ಯಚಂತ । ಭೂಮಯಃ ॥ ೧೫ ॥

। ಸಾಯಣಭಾಷ್ಯಂ ।

ದ್ಯಾವೋ ದ್ಯುಲೋಕಾ ಇಮಮಿಂದ್ರಮೋಜಸಾ ಬಲೇನ ನ ವಿವ್ಯಚಂತೇ । ನ ವ್ಯಾಪ್ನುವಂತಿ । ದ್ಯುಲೋಕೇಭ್ಯೋಽಪ್ಯಸ್ಯ ಬಲಮಧಿಕಮಿತ್ಯರ್ಥಃ । ತಥಾಂತರಿಕ್ಷಾಣ್ಯಂತರಾ ಕ್ಷಾಂತಾನಿ ದ್ಯಾವಾಪೃಥಿವ್ಯೋರ್ಮಧ್ಯೇ ವರ್ತಮಾನಾ ಲೋಕಾ ವಜ್ರಿಣಂ ವಜ್ರವಂತಮಿಂದ್ರಂ ನ ವ್ಯಾಪ್ನುವಂತಿ । ತಥಾ ಭೂಮಯೋ ಭೂಲೋಕಾಶ್ಚ ತಮಿಂದ್ರಂ ನ ವ್ಯಾಪ್ನುವಂತಿ । ತ್ರಯೋ ವಾ ಇಮೇ ತ್ರಿವೃತೋ ಲೋಕಾಃ । ಐ. ಆ ೧-೧-೨ । ಇತಿ ಬ್ರಾಹ್ಮಣಾದೇಕೈಕಸ್ಯ ಲೋಕಸ್ಯ ತ್ರಿತ್ವಂ । ತಿಸ್ರೋ ಭೂಮೀಃ । ಋ ೨.೨೭-೮। ಇತ್ಯಾದಿನಿಗಮಾಚ್ಚ ॥

। ಪ್ರತಿಪದಾರ್ಥ ।

ದ್ಯಾವಃ—ದ್ಯುಲೋಕಗಳೂ । ಇಂದ್ರಂ—ಇಂದ್ರನನ್ನು । ಓಜಸಾ—ಶಕ್ತಿಯಿಂದ । ನ ವಿವ್ಯಚಂತ—ವ್ಯಾಪಿಸಲಾರವು (ಇಂದ್ರನ ಶಕ್ತಿಯನ್ನು ಹೊಂದಲಾರವು) । ಅಂತರಿಕ್ಷಾಣಿ—ಅಂತರಿಕ್ಷಗಳೂ ಸಹ । ವಜ್ರಿಣಂ ನ—ವಜ್ರಾಯುಧಧಾರಿಯಾದ ಇಂದ್ರನಿಗೆ ಸಮನಾಗಲಾರವು । ಭೂಮಯಃ—ಭೂಲೋಕಗಳೂ । ನ—ಇಂದ್ರನಿಗೆ ಸಮಾನವಾಗಲಾರವು.

। ಭಾವಾರ್ಥ ।

ಇಂದ್ರನ ಶಕ್ತಿಯು ಅತ್ಯಪಾರವಾದುದು. ದ್ಯುಲೋಕಗಳು ಇಂದ್ರನ ಶಕ್ತಿಯನ್ನು ಹೊಂದಿ ಅವನಿಗೆ ಸಮಾನವಾಗಲಾರವು. ಅಂತರಿಕ್ಷಗಳೂ ಸಹ ವಜ್ರಾಯುಧಧಾರಿಯಾದ ಇಂದ್ರನಿಗೆ ಸಮಾನವಾಗಲಾರವು. ಇಂದ್ರನ ಶಕ್ತಿಯನ್ನು ಪಡೆಯಲು ಭೂಲೋಕಗಳಿಗೂ ಸಾಧ್ಯವಿಲ್ಲ.

## English Translation

Neither the heavens, nor the realms of the firmament, nor the regions of the earth, equal the thunderer Indra in strength.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ದ್ಯಾವಃ ಭೂಮಯಃ ಎಂಬ ಶಬ್ದಗಳನ್ನು ಸ್ವರ್ಗ ಮತ್ತು ಭೂಲೋಕಗಳಲ್ಲಿರುವ ಪ್ರಭೇದಗಳನ್ನು ಸೂಚಿಸುವುದಕ್ಕಾಗಿ ಬಹುವಚನಪ್ರಯೋಗ ಮಾಡಲಾಗಿದೆ. ಸ್ವರ್ಗಲೋಕದಲ್ಲಿಯೂ, ಭೂಲೋಕದಲ್ಲಿಯೂ ಮೂರು ಪ್ರತ್ಯೇಕವಾದ ಅಂತಸ್ತುಗಳಿವೆಯೆಂದು **ತ್ರಯೋ ವಾ ಇಮೇ ತ್ರಿವೃತೋ ಲೋಕಾಃ** ಎಂದು ಐತರೇಯ ಆರಣ್ಯಕದಲ್ಲಿಯೂ (ಐ.ಆ. ೧-೧-೨) **ತಿಸ್ರೋ ಭೂಮೀಃ** ಎಂದು ಋಗ್ವೇದಸಂಹಿತೆಯಲ್ಲಿಯೂ (ಋ. ಸಂ. ೨-೨೭-೮) ಹೇಳಿರುವ ಶ್ರುತಿವಾಕ್ಯಗಳನ್ನು ಭಾಷ್ಯಕಾರರು ಉದಾಹರಿಸಿದ್ದಾರೆ.

॥ ಸಂಹಿತಾಪಾಠಃ ॥

ಯಸ್ತ ಇಂದ್ರ ಮಹೀರಪಃ ಸ್ತಭೂಯಮಾನ ಆಶಯತ್ ।

ನಿ ತಂ ಪದ್ಯಾಸು ಶಿಶ್ನಥಃ ॥ ೧೬ ॥

॥ ಪದಪಾಠಃ ॥

ಯಃ । ತೇ । ಇಂದ್ರ । ಮಹೀಃ । ಅಪಃ । ಸ್ತಭುಯಮಾನಃ । ಆ । ಅಶಯತ್ ।

ನಿ । ತಂ । ಪದ್ಯಾಸು । ಶಿಶ್ನಥಃ ॥ ೧೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಸಂಬಂಧಿನೀರ್ಮಹೀರ್ಮಹತೀರಪ ಅಂತರಿಕ್ಷ್ಯಾಣ್ಯುದಕಾನಿ ಯೋ ವೃತ್ರಃ ಸ್ತಭೂಯಮಾನಃ ಸ್ತಂಭಯನ್ ಯಥಾಧೋ ನ ಪತಂತಿ ತಥಾ ಕುರ್ವನ್ನಾಶಯನ್ ಆವೃತ್ಯಾಶೇತ ತಮಸುರಂ ಪದ್ಯಾಸು ಗಮನಶೀಲಾಸ್ವಪ್ಸು ಮಧ್ಯೇ ನಿ ಶಿಶ್ನಥಃ । ನ್ಯಹಿಂಸೀಃ । ಶ್ನಥಿರ್ಹಿಂಸಾರ್ಥಃ । ವಜ್ರೇಣ ತಮಸುರಂ ಹತ್ವಾ ನದೀಷು ಪಾತಿತವಾನಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ— ಎಲೈ ಇಂದ್ರನೇ । ಯಃ—ಯಾವ ವೃತ್ರನು । ತೇ—ನಿನಗೆ ಸೇರಿದವೂ । ಮಹೀಃ—ಮಹತ್ಸ್ವರೂಪವುಳ್ಳವೂ ಆದ । ಅಪಃ—ಉದಕಗಳನ್ನು । ಸ್ತಭೂಯಮಾನಃ—ಪ್ರವಹಿಸದಂತೆ ತಡೆದು । ಆ ಅಶಯತ್—ವ್ಯಾಪಿಸಿ ಮಲಗಿದನೋ । ತಂ—ಆ ಅಸುರನನ್ನು । ಪದ್ಯಾಸು—ಪ್ರವಾಹಯೋಗ್ಯಗಳಾದ ಉದಕಗಳ ಮಧ್ಯದಲ್ಲಿ । ನಿ ಶಿಶ್ನಥಃ—ನಾಶಮಾಡಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ವೃತ್ರನು ನಿನಗೆ ಸೇರಿದವೂ, ಮಹತ್ಸ್ವರೂಪವುಳ್ಳವೂ ಆದ ಉದಕಗಳನ್ನು ಪ್ರವಹಿಸದಂತೆ ತಡೆದು ವ್ಯಾಪಿಸಿ ಮಲಗಿದ್ದನೋ ಆ ಅಸುರನನ್ನು ಪ್ರವಾಹಯೋಗ್ಯಗಳಾದ ಉದಕಗಳ ಮಧ್ಯೆ ನಾಶ ಮಾಡಿ ಉದಕಗಳನ್ನು ಪ್ರವಹಿಸುವಂತೆ ಮಾಡಿದೆ.

## English Translation

You, Indra, have cast into the rushing streams, him who lay obstructing your copious waters.

॥ ಸಂಹಿತಾಪಾಠಃ ॥

ಯ ಇಮೇ ರೋದಸೀ ಮಹೀ ಸಮೀಚೀ ಸಮಜಗ್ರಭೀತ್ ।
ತಮೋಭಿರಿಂದ್ರ ತಂ ಗುಹಃ ॥ ೧೭ ॥

॥ ಪದಪಾಠಃ ॥

ಯಃ । ಇಮೇ ಇತಿ । ರೋದಸೀ ಇತಿ । ಮಹೀ ಇತಿ । ಸಮೀಚೀ ಇತಿ ಸಂऽಈಚೀ ।
ಸಂऽಅಜಗ್ರಭೀತ್ ।
ತಮಃऽಭಿಃ । ಇಂದ್ರ । ತಂ । ಗುಹಃ ॥ ೧೭ ॥

॥ ಸಾಯಣಭಾಷ್ಯಂ ॥

ಯೋ ವೃತ್ರೋ ಮಹೀ ಮಹತ್ಯೌ ವಿಸ್ತೀರ್ಣೇ ಸಮೀಚೀ ಸಂಗತೇ ಇಮೇ ಪ್ರತ್ಯಕ್ಷತ ಉಪಲಭ್ಯಮಾನೇ ರೋದಸೀ ದ್ಯಾವಾಪೃಥಿವ್ಯೌ ಸಮಜಗ್ರಭೀತ್ ಸಮ್ಯಗಗ್ರಹೀತ್ । ಅವೃಣೋದಿತ್ಯರ್ಥಃ । ತಮಸುರಂ ಹೇ ಇಂದ್ರ ತ್ವಂ ತಮೋಭಿರಂಧಕಾರೈರ್ಗುಹಃ। ಸಂವೃತಮಕರೋಃ। ಅನಾದ್ಯನಂತಂ ಮರಣಲಕ್ಷಣಂ ತಮಃ ಪ್ರಾವೇಶಯ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯಃ—ಯಾವ ವೃತ್ರನು । ಮಹೀ—ಅತ್ಯಂತ ವಿಸ್ತೃತವಾದವೂ । ಸಮೀಚೀ—ಒಟ್ಟುಗೂಡಿರುವುವೂ । ಇಮೇ—ಪ್ರತ್ಯಕ್ಷಗೋಚರವಾಗಿರುವುವೂ ಆದ । ರೋದಸೀ—ದ್ಯಾವಾಪೃಥಿವಿಗಳೆರಡನ್ನೂ । ಸಮಜಗ್ರಭೀತ್—ಆವರಿಸಿ ಮಲಗಿದ್ದನೋ । ತಂ—ಆ ಅಸುರನನ್ನು । ತಮೋಭಿಃ—ಕಗ್ಗತ್ತಲೆಗಳಿಂದ । ಗುಹಃ—ಮುಚ್ಚಿಕೊಳ್ಳುವಂತೆ ಮಾಡಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ವೃತ್ರಾಸುರನು ಅತ್ಯಂತ ವಿಸ್ತೃತವಾದವೂ, ಒಟ್ಟುಗೂಡಿರುವುವೂ, ಪ್ರತ್ಯಕ್ಷ ಗೋಚರವಾಗಿರುವುವೂ ಆದ ದ್ಯಾವಾಪೃಥಿವಿಗಳೆರಡನ್ನೂ ಆವರಿಸಿ ಮಲಗಿದ್ದನೋ ಆ ಅಸುರನನ್ನು ಕಗ್ಗತ್ತಲೆಗಳಿಂದ ಮುಚ್ಚಿಕೊಳ್ಳುವಂತೆ ಮಾಡಿದೆ.

## English Translation

You have enveloped with darkness, Indra, him who had seized upon these spacious aggregated (realms of) heaven and earth.

॥ ಸಂಹಿತಾಪಾಠಃ ॥

ಯ ಇಂದ್ರ ಯತಯಸ್ತ್ವಾ ಭೃಗವೋ ಯೇ ಚ ತುಷ್ಟುವುಃ ।
ಮಮೇದುಗ್ರ ಶ್ರುಧೀ ಹವಂ ॥ ೧೮ ॥

॥ ಪದಪಾಠಃ ॥

ಯೇ । ಇಂದ್ರ । ಯತಯಃ । ತ್ವಾ । ಭೃಗವಃ । ಯೇ । ಚ । ತುಸ್ತುವುಃ ।
ಮಮ । ಇತ್ । ಉಗ್ರ । ಶ್ರುಧಿ । ಹವಂ ॥ ೧೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯೇ ಯತಯೋ ನಿಯತಾ ಅಂಗಿರಸಸ್ತ್ವಾಂ ತುಷ್ಟುವುಃ ಯೇ ಚ ಭೃಗವೋ ಭೃಗುಗೋತ್ರಾಸ್ತ್ವಾಂ ತುಷ್ಟುವುಃ ಸ್ತುವಂತಿ ತೇಷು ಮಧ್ಯೇ ಮಮೇನ್ಮಮೈವ ಹವಂ ಸ್ತೋತ್ರಂ ಹೇ ಉಗ್ರೌಜಸ್ವಿನ್ನಿಂದ್ರ ಶ್ರುಧಿ । ಶೃಣು ॥

॥ ಪ್ರತಿಪದಾರ್ಥ ॥

ಉಗ್ರ—ಶತ್ರುಭಯಂಕರವಾದ ಶಕ್ತಿಯುಳ್ಳ । ಇಂದ್ರ—ಎಲೈ ಇಂದ್ರನೇ । ಯೇ—ಯಾವ । ಯತಯಃ—ನಿಯತಾತ್ಮರಾದ ಅಂಗಿರಸ್ಸುಗಳು । ತ್ವಾ—ನಿನ್ನನ್ನು । ತುಷ್ಟುವುಃ—ಸ್ತುತಿಸಿದರೋ । ಯೇ ಚ—ಯಾವ । ಭೃಗವಃ—ಭೃಗುಋಷಿಗಳೂ ನಿನ್ನನ್ನು ಸ್ತುತಿಸಿದರೋ (ಅವರ ಮಧ್ಯದಲ್ಲಿ) । ಮಮೇತ್—ನನ್ನದೇ ಆದ । ಹವಂ—ಸ್ತುತಿರೂಪವಾದ ಆಹ್ವಾನವನ್ನು । ಶ್ರುಧಿ—ಕೇಳು.

॥ ಭಾವಾರ್ಥ ॥

ಶತ್ರುಗಳಿಗೆ ಭಯವನ್ನುಂಟುಮಾಡುವ ಶಕ್ತಿಯುಳ್ಳ ಎಲೈ ಇಂದ್ರನೇ, ಯಾವ ನಿಯತಾತ್ಮರಾದ ಅಂಗಿರಸ್ಸು

ಗಳು ನಿನ್ನನ್ನು ಸ್ತುತಿಸಿದರೋ, ಯಾವ ಭೃಗುಋಷಿಗಳೂ ನಿನ್ನನ್ನು ಸ್ತುತಿಸಿದರೋ ಅವರ ಮಧ್ಯದಲ್ಲಿ ನನ್ನ ಸ್ತುತಿ ರೂಪವಾದ ಆಹ್ವಾನವನ್ನೇ ಕೇಳು.

## English Translation

Amidst those pious sages, amidst these Brigus, who have glorified you, hear also, fierce Indra, my Invocation.

॥ ಸಂಹಿತಾಪಾಠಃ ॥

ಇಮಾಸ್ತ ಇಂದ್ರ ಪೃಶ್ನಯೋ ಘೃತಂ ದುಹತ ಆಶಿರಂ ।
ಏನಾಮೃತಸ್ಯ ಪಿಪ್ಯುಷೀಃ ॥ ೧೯ ॥

॥ ಪದಪಾಠಃ ॥

ಇಮಾಃ । ತೇ । ಇಂದ್ರ । ಪೃಶ್ನಯಃ । ಘೃತಂ । ದುಹತೇ । ಆಽಶಿರಂ ।
ಏನಾಂ । ಋತಸ್ಯ । ಪಿಪ್ಯುಷೀಃ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವದೀಯಾ ಇಮಾಃ ಪೃಶ್ನಯಃ ಪ್ರಾಪ್ಸುವರ್ಣಾ ಗಾವೋ ಘೃತಂ ಕ್ಷರಣಶೀಲಮೇನಾಮಾಶಿರಮಾಶ್ರಯಣದ್ರವ್ಯಂ ಪಯೋ ದುಹತೇ । ದುಹಂತಿ । ಕ್ಷಾರಯಂತಿ। ಕೀದೃಶ್ಯಃ ಪೃಶ್ನಯಃ। ಋತಸ್ಯ ಸತ್ಯಸ್ಯಾವಿತಥಸ್ಯೇಂದ್ರಸ್ಯ ಯಜ್ಞಸ್ಯ ವಾ ಪಿಪ್ಯುಷೀರ್ವರ್ಧಯಿತ್ರ್ಯಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಋತಸ್ಯ—ಯಜ್ಞಕ್ಕೆ । ಪಿಪ್ಯುಷೀಃ—ವೃದ್ಧಿಕಾರಕಗಳೂ । ತೇ—ನಿನಗೆ ಸೇರಿದವೂ । ಇಮೇ—ಪ್ರಸಿದ್ಧವಾದವೂ । ಪೃಶ್ನಯಃ—ಮಿಶ್ರವರ್ಣವುಳ್ಳವೂ ಆದ ಗೋವುಗಳು। ಘೃತಂ—ಧಾರಾರೂಪವುಳ್ಳದ್ದೂ । ಏನಾಂ ಆಶಿರಂ—ಆಶ್ರಯಣದ್ರವ್ಯವಾದುದೂ ಆದ ಕ್ಷೀರವನ್ನು । ದುಹತೇ—ಕರೆಯುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ವೃದ್ಧಿಕಾರಕಗಳೂ, ನಿನಗೆ ಸೇರಿದವೂ, ಪ್ರಸಿದ್ಧವಾದವೂ, ಮಿಶ್ರವರ್ಣವುಳ್ಳದ್ದೂ ಆದ ಗೋವುಗಳು ಧಾರಾರೂಪವುಳ್ಳದ್ದೂ, ಆಶ್ರಯಣದ್ರವ್ಯವಾದುದೂ ಆದ ಕ್ಷೀರವನ್ನು ಕರೆಯುತ್ತವೆ.

## English Translation

These, your spotted cows, the nourishers of the sacrifice, yield, Indra, their butter, and this mixture (of milk and curds).

॥ ಸಂಹಿತಾಪಾಠಃ ॥

ಯಾ ಇಂದ್ರ ಪ್ರಸ್ವಸ್ತ್ವಾಸಾ ಗರ್ಭಮಚಕ್ರಿರನ್ ।

ಪರಿ ಧರ್ಮೇವ ಸೂರ್ಯಂ ॥ ೨೦ ॥

॥ ಪದಪಾಠಃ ॥

ಯಾಃ । ಇಂದ್ರ । ಪ್ರಽಸ್ವಃ । ತ್ವಾ । ಆಸಾ । ಗರ್ಭಂ । ಅಚಕ್ರಿರನ್ ।

ಪರಿ । ಧರ್ಮಾಽಇವ । ಸೂರ್ಯಂ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪ್ರಸ್ವಃ । ಪ್ರಸುವತೇ ಗರ್ಭಂ ವಿಮುಂಚಂತೀತಿ ಪ್ರಸ್ವಃ ॥ ಸೂತೇಃ ಸತ್ಸೂದ್ವಿಷೇತಿ ಕ್ವಿಪ್ ॥ ಈದೃಶ್ಯೋ ಯಾ ಗಾವ ಆಸಾಸ್ಯೇನ ತ್ವಾ ತ್ವದೀಯಂ ವೀರ್ಯಂ ವೃತ್ರವಧಾನಂತರಮೋಷಧ್ಯಾದಿರೂಪೇಣ ಪರಿಣತಂ ಭಕ್ಷಯಿತ್ವಾ ಗರ್ಭಮಚಕ್ರಿರನ್ ಅಕುರ್ವನ್ ತ್ವದೀಯಂ ವೀರ್ಯಮಂತರಧಾರಯನ್ । ತತ್ರ ದೃಷ್ಟಾಂತಃ । ಸೂರ್ಯಂ ಪರಿತಃ ಸೂರ್ಯಮಂಡಲಸ್ಯೋಪರಿ ಧರ್ಮೇವ ಧಾರಕಂ ಪೋಷಕಮುದಕಂ ಯಥಾ ರಶ್ಮಯೋ ಗರ್ಭರೂಪೇಣ ಬಿಭ್ರತಿ ತದ್ವತ್ । ಯದ್ವಾ । ಪರಿ ಧರ್ಮೇವ ಪರಿತೋ ಧಾರಯಿತಾರಂ ಸೂರ್ಯಮಿವ । ಯಥಾ । ಸೂರ್ಯಃ ಪರಿತಃ ಸರ್ವಂ ಜಗದ್ಧತ್ತೇ ತದ್ವತ್ । ಕೃತ್ಸ್ನಸ್ಯ ಜಗತೋ ಧಾರಕಮಿಂದ್ರಸ್ಯ ವೀರ್ಯಮಿತ್ಯರ್ಥಃ । ಓಷಧ್ಯಾದಿರೂಪೇಣ ಪರಿಣತಸ್ಯೇಂದ್ರವೀರ್ಯಸ್ಯ ಗೋಭಿರಾತ್ಮನಿ ಧಾರಣಮಿಂದ್ರಸ್ಯ ವೃತ್ರಂ ಜಘ್ನುಷ ಇತ್ಯಾರಭ್ಯ ತೈತ್ತಿರೀಯಕೇ ವಿಸ್ಪಷ್ಟಮಾಮ್ನಾತಂ । ತತ್ಪಶವ ಓಷಧೀಭ್ಯೋಽಧ್ಯಾತ್ಮನ್ಸಮನಯನ್ ತತ್ಪ್ರತ್ಯದುಹನ್ । ತೈ. ಸಂ. ೨-೫-೩-೩ । ಇತಿ । ಪಯೋರೂಪೇಣ ಪರಿಣತಂ ತದ್ವೀರ್ಯಮಿಮಾ ಗಾವ ಆಶಿರಾರ್ಥಂ ದುಹತ ಇತಿ ಪೂರ್ವಸ್ಯಾಮೃಚ್ಯನ್ವಯಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಪ್ರಸ್ವಃ—ಸಂತಾನಯೋಗ್ಯವಾದ । ಯಾಃ—ಯಾವ ಗೋವುಗಳಿವೆಯೋ ಅವು । ಆಸಾ—ತಮ್ಮ ಮುಖದಿಂದ । ಸೂರ್ಯಂ ಪರಿ—ಸೂರ್ಯಮಂಡಲದ ಸುತ್ತಲೂ ಇರುವ । ಧರ್ಮೇವ—ಪೋಷಕವಾದ ಉದಕಕ್ಕೆ ಸಮಾನವಾದ। ತ್ವಾ—ನಿನ್ನ ವೀರ್ಯವನ್ನು ಭಕ್ಷಿಸಿ। ಗರ್ಭಂ—ಗರ್ಭವನ್ನು । ಅಚಕ್ರಿರನ್—ಉದರದಲ್ಲಿ ಧರಿಸಿದವು.

॥ ಭಾವಾರ್ಥ ॥

ಎಲೈ ಇಂದ್ರನೇ, ಸಂತಾನಯೋಗ್ಯವಾದ ಯಾವ ಗೋವುಗಳಿವೆಯೋ ಅವು ತಮ್ಮ ಮುಖದಿಂದ ಸೂರ್ಯ ಮಂಡಲದ ಸುತ್ತಲೂ ಇರುವ ಜಗತ್ಪೋಷಕವಾದ ಉದಕಕ್ಕೆ ಸಮಾನವಾದ ನಿನ್ನ ವೀರ್ಯವನ್ನು ಭಕ್ಷಿಸಿ ಗರ್ಭವನ್ನು ತಮ್ಮ ಉದರದಲ್ಲಿ ಧರಿಸಿದವು.

## English Translation

These prolific cattle became pregnant, having taken into their mouths, Indra, (the products of your vigour) like the all-sustaining sun.

॥ ಸಂಹಿತಾಪಾಠಃ ॥

ತ್ವಾಮಿಚ್ಛವಸಸ್ಪತೇ ಕಣ್ವಾ ಉಕ್ಥೇನ ವಾವೃಧುಃ ।
ತ್ವಾಂ ಸುತಾಸ ಇಂದವಃ ॥ ೨೧ ॥

॥ ಪದಪಾಠಃ ॥

ತ್ವಾಂ । ಇತ್ । ಶವಸಃ । ಪತೇ । ಕಣ್ವಾಃ । ಉಕ್ಥೇನ । ವವೃಧುಃ ।
ತ್ವಾಂ । ಸುತಾಸಃ । ಇಂದವಃ ॥ ೨೧ ॥

॥ ಸಾಯಣಭಾಷ್ಯಂ ॥

ವಾಜಪೇಯೇಽತಿರಿಕ್ತೋಕ್ಥೇ ತ್ವಾಮಿಚ್ಛವಸಸ್ಪತ ಇತ್ಯೇಷಾ । ಸೂತ್ರಿತಂ ಚ । ತ್ವಾಮಿಚ್ಛವಸಸ್ಪತೇ ತಂ ಪ್ರತ್ನಥಾ । ಆ. ೯-೯ । ಇತಿ ॥

ಹೇ ಶವಸಸ್ಪತೇ ಬಲಸ್ಯ ಸ್ವಾಮಿನ್ನಿಂದ್ರ ತ್ವಾಮೇವ ಕಣ್ವಾಃ ಸ್ತೋತಾರಃ ಕಣ್ವಗೋತ್ರಾ ವರ್ಷಯ ಉಕ್ಥೇನ ಶಸ್ತ್ರೇಣ ವವೃಧುಃ । ವರ್ಧಯಂತಿ । ಸುತಾಸೋಽಧ್ವರ್ಯುಭಿರಭಿಷುತಾ ಇಂದವಃ ಸೋಮಾಶ್ಚ ತ್ವಾಮೇವ ವರ್ಧಯಂತಿ ॥

॥ ಪ್ರತಿಪದಾರ್ಥ ॥

ಶವಸಸ್ಪತೇ—ಶಕ್ತಿಗಳಿಗೆಲ್ಲಾ ಒಡೆಯನಾದ ಎಲೈ ಇಂದ್ರನೇ । ತ್ವಾಂ ಇತ್—ನಿನ್ನನ್ನೇ । ಕಣ್ವಾಃ—ಕಣ್ವವಂಶೋತ್ಪನ್ನರಾದ ಋಷಿಗಳು । ಉಕ್ಥೇನ—ಉಕ್ಥರೂಪವಾದ ಸ್ತೋತ್ರದಿಂದ । ವವೃಧುಃ—ಪ್ರವೃದ್ಧನಾಗುವಂತೆ ಮಾಡುತ್ತಾರೆ । ಸುತಾಸಃ-ಹಿಂಡಿ ಸಿದ್ಧವಾಗಿರುವ । ಇಂದವಃ—ಈ ಸೋಮರಸಗಳೂ । ತ್ವಾಂ—ನಿನ್ನನ್ನೇ ಪ್ರವೃದ್ಧನಾಗುವಂತೆ ಮಾಡುತ್ತವೆ.

॥ ಭಾವಾರ್ಥ ॥

ಶಕ್ತಿಗಳಿಗೆಲ್ಲಾ ಒಡೆಯನಾದ ಎಲೈ ಇಂದ್ರನೇ, ಕಣ್ವವಂಶೋತ್ಪನ್ನರಾದ ಋಷಿಗಳು ನಿನ್ನನ್ನೇ ಉಕ್ಥರೂಪವಾದ ಸ್ತೋತ್ರದಿಂದ ಸ್ತುತಿಸಿ ಪ್ರವೃದ್ಧನಾಗುವಂತೆ ಮಾಡುತ್ತಾರೆ. ಹಿಂಡಿ ಸಿದ್ಧವಾಗಿರುವ ಈ ಸೋಮರಸಗಳೂ ಸಹ ನಿನ್ನನ್ನೇ ಪ್ರವೃದ್ಧನಾಗುವಂತೆ ಮಾಡುತ್ತವೆ.

## English Translation

Lord of strength, the Kanwas verily invigorate you by praise: the effused Soma juices (invigorate) you.

॥ ವಿಶೇಷವಿಷಯಗಳು ॥

ವಾಜಪೇಯವೆಂಬ ಯಾಗದಲ್ಲಿ ಅತಿರಿಕ್ತೋಕ್ಥಮಂತ್ರಗಳ ಮಧ್ಯದಲ್ಲಿ ತ್ವಾಮಿಚ್ಛವಸಸ್ಪತೇ ಎಂಬ ಋಕ್ಕನ್ನು ಸೇರಿಸಿ ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ—ತ್ವಾಮಿಚ್ಛವಸಸ್ಪತೇ ತಂ ಪ್ರತ್ನಥಾ ಎಂಬ ಸೂತ್ರದಿಂದ (ಆ. ೯-೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ತವೇದಿಂದ್ರ ಪ್ರಣೀತಿಷೂತ ಪ್ರಶಸ್ತಿರದ್ರಿವಃ ।

ಯಜ್ಞೋ ವಿತಂತಸಾಯ್ಯಃ ॥ ೨೨ ॥

॥ ಪದಪಾಠಃ ॥

ತವ । ಇತ್ । ಇಂದ್ರ । ಪ್ರಽನೀತಿಷು । ಉತ । ಪ್ರಽಶಸ್ತಿಃ । ಅದ್ರಿಽವಃ ।

ಯಜ್ಞಃ । ವಿತಂತಸಾಯ್ಯಃ ॥ ೨೨ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಅದ್ರಿವಃ । ಆದೃಣಾತ್ಯನೇನೇತ್ಯದ್ರಿರ್ವಜ್ರಃ । ತದ್ವನ್ನಿಂದ್ರ ತವೇತ್ತವೈವ ಪ್ರಣೀತಿಷು ಪ್ರಕೃಷ್ಟೇಷು ನಯನೇಷು ಧನಪ್ರದಾನೇಷು ಸತ್ಸು ಪ್ರಶಸ್ತಿಃ ಪ್ರಕೃಷ್ಟಾ ಸ್ತುತಿಃ ಕ್ರಿಯತೇ । ತಥಾ ವಿತಂತಸಾಯ್ಯೋ ವಿಸ್ತೃತತಮಃ ॥ ತನೋತೇಶ್ಛಾಂದಸಮೇತದ್ರೂಪಂ । ಯದ್ವಾ । ತಂತಸಿಃ ಕಂಡ್ವಾದಿರ್ವೃದ್ಧ್ಯರ್ಥಃ । ತಸ್ಮಾದೌಣಾದಿಕ ಆಯ್ಯಪ್ರತ್ಯಯಃ ॥ ಪ್ರವೃದ್ಧೋ ಯಜ್ಞಶ್ಚ ತವೈವ ಕ್ರಿಯತೇ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಅದ್ರಿವಃ—ವಜ್ರಾಯುಧಧಾರಿಯಾದ । ಇಂದ್ರ—ಎಲೈ ಇಂದ್ರನೇ । ಪ್ರಣೀತಿಷು—ಉತ್ತಮವಾದ ಮಾರ್ಗದರ್ಶನಕ್ಕೆ ಯೋಗ್ಯವಾದ ಧನದಾನಮಾಡುವುದರಿಂದ । ತವೇತ್—ನಿನ್ನನ್ನೇ ಉದ್ದೇಶಿಸಿದ ।

ಪ್ರಶಸ್ತಿಃ—ಉತ್ತಮವಾದ ಸ್ತುತಿಯು ಪಠಿತವಾಗುತ್ತದೆ । ವಿತಂತಸಾಯ್ಯಃ—ವಿಸ್ತೃತವಾದ ಕ್ರಿಯಾಕಲಾಪ ಗಳುಳ್ಳ । ಯಜ್ಞಃ—ಯಜ್ಞವೂ ಸಹ (ನಿನ್ನನ್ನುದ್ದೇಶಿಸಿಯೇ ನೆರವೇರಿಸಲ್ಪಡುತ್ತದೆ).

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಉತ್ತಮವಾದ ಮಾರ್ಗದರ್ಶನಕ್ಕೆ ಯೋಗ್ಯವಾದ ಧನದಾನ ಮಾಡುವುದರಿಂದ ನಿನ್ನನ್ನೇ ಉದ್ದೇಶಿಸಿದ ಸ್ತುತಿಯು ಪಠಿತವಾಗುತ್ತದೆ. ವಿಸ್ತೃತವಾದ ಕ್ರಿಯಾಕಲಾಪಗಳುಳ್ಳ ಯಜ್ಞವೂ ಸಹ ನಿನ್ನನ್ನುದ್ದೇಶಿಸಿಯೇ ನೆರವೇರಿಸಲ್ಪಡುತ್ತದೆ.

## English Translation

Indra, wielder of the thunderbolt, excellent praise (is addressed to you) on account of your good guidance, as is most extended sacrifice.

॥ ಸಂಹಿತಾಪಾಠಃ ॥

ಆ ನ ಇಂದ್ರ ಮಹೀಮಿಷಂ ಪುರಂ ನ ದರ್ಷಿ ಗೋಮತೀಂ ।

ಉತ ಪ್ರಜಾಂ ಸುವೀರ್ಯಂ ॥ ೨೩ ॥

॥ ಪದಪಾಠಃ ॥

ಆ । ನಃ । ಇಂದ್ರ । ಮಹೀಂ । ಇಷಂ । ಪುರಂ । ನ । ದರ್ಷಿ । ಗೋऽಮತೀಂ ।

ಉತ । ಪ್ರऽಜಾಂ । ಸುऽವೀರ್ಯಂ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನೋऽಸ್ಮಭ್ಯಮಸ್ಮದರ್ಥಂ ಮಹೀಂ ಮಹತೀಂ ಗೋಮತೀಂ ಗೋಭಿರ್ಯುಕ್ತಾ-ಮಿಷಮನ್ನಮಾ ದರ್ಷಿ । ಆದ್ರಿಯಸ್ವ । ದಾತುಂ ಕಾಮಯಸ್ವ । ನಶಬ್ದಶ್ಚಾರ್ಥೇ । ಪುರಂ ನ । ಪಾಲನಂ ಪೂಃ । ಪಾಲನಂ ರಕ್ಷಣಂ ಚಾಸ್ಮಭ್ಯಂ ಕರ್ತುಮಾದ್ರಿಯಸ್ವ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ನಃ—ನಮಗೆ । ಮಹೀಂ—ಮಹತ್ಪ್ರಭಾವವುಳ್ಳದ್ದೂ । ಗೋಮತೀಂ—ಗೋಯುಕ್ತವಾದುದೂ ಆದ । ಇಷಂ—ಅನ್ನವನ್ನು । ಆ ದರ್ಷಿ—ತುಂಬಿಕೊಡು । ಪುರಂ ನ—ಪಾಲನ ಮತ್ತು ರಕ್ಷಣೆಗಳನ್ನೂ ನೀಡು । ಉತ—ಮತ್ತು । ಸುವೀರ್ಯಂ—ಶಕ್ತ್ಯತಿಶಯದಿಂದ ಕೂಡಿದ । ಪ್ರಜಾಂ—ಸಂತತಿಯನ್ನು ಕೊಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನಮಗೆ ಮಹತ್ಪ್ರಭಾವವುಳ್ಳದ್ದೂ ಗೋಯುಕ್ತವಾದದ್ದೂ ಆದ ಅನ್ನವನ್ನು ತುಂಬಿಕೊಡು. ಪಾಲನ ಮತ್ತು ರಕ್ಷಣೆಗಳನ್ನು ನೀಡು. ಮತ್ತು ಶಕ್ತ್ಯತಿಶಯದಿಂದ ಕೂಡಿದ ಸಂತತಿಯನ್ನೂ ಕೊಡು.

**English Translation**

Be willing to grant us abundant food with cattle: (to grant us) protection, progeny, and vigour.

॥ ಸಂಹಿತಾಪಾಠಃ ॥

ಉತ ತ್ಯದಾಶ್ವಶ್ವ್ಯಂ ಯದಿಂದ್ರ ನಾಹುಷೀಷ್ವಾ ।
ಅಗ್ರೇ ವಿಕ್ಷು ಪ್ರದೀದಯತ್ ॥ ೨೪ ॥

॥ ಪದಪಾಠಃ ॥

ಉತ । ತ್ಯತ್ । ಆಶುಽಅಶ್ವ್ಯಂ । ಯತ್ । ಇಂದ್ರ । ನಾಹುಷೀಷು । ಆ ।
ಅಗ್ರೇ । ವಿಕ್ಷು । ಪ್ರಽದೀದಯತ್ ॥ ೨೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನಾಹುಷೀಷು । ನಹುಷಾ ಇತಿ ಮನುಷ್ಯನಾಮ । ತತ್ಸಂಬಂಧಿನೀಷು । ಯದ್ವಾ । ನಾಹುಷೋ ನಾಮ ಕಶ್ಚಿದ್ರಾಜಾ । ತದೀಯಾಸು । ವಿಕ್ಷು ಪ್ರಜಾಸ್ವಗ್ರೇ ಪುರಸ್ತಾದ್ಯದಾಶ್ವಶ್ವ್ಯಂ ಶೀಘ್ರಗಾಮ್ಯಶ್ವಸಂಘಾತ್ಮಕಂ ಬಲಂ ಪ್ರದೀದಯತ್ ಪ್ರಾದೀಪ್ಯತ ಉತಾಪಿ ಚ ತ್ಯತ್ತದಪ್ಯಸ್ಮಭ್ಯಂ ದೇಹೀತಿ ಶೇಷಃ । ಆಕಾರಃ ಪೂರಕಃ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಇಂದ್ರ—ಎಲೈ ಇಂದ್ರನೇ । ನಾಹುಷೀಷು—ಮನುಷ್ಯಸಂಬಂಧಿಯಾದ । ವಿಕ್ಷು—ಪ್ರಜೆಗಳಲ್ಲಿ । ಅಗ್ರೇ—ಪೂರ್ವದಲ್ಲಿ । ಯತ್—ಯಾವ । ಆಶ್ವಶ್ವ್ಯಂ—ಶೀಘ್ರಗಾಮಿಗಳಾದ ಅಶ್ವಗಳ ಸಂಘರೂಪವಾದ ಶಕ್ತಿಯನ್ನು । ಪ್ರದೀದಯತ್—ತುಂಬಿಕೊಟ್ಟಿಯೋ । ತ್ಯತ್—ಅದನ್ನೇ ನಮಗೂ ಒದಗಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಮಾನವಸಂಬಂಧಿಯಾದ ಪ್ರಜೆಗಳಲ್ಲಿ ಪೂರ್ವದಲ್ಲಿ ಯಾವ ಶೀಘ್ರಗಾಮಿಗಳಾದ ಅಶ್ವಗಳ ಸಂಘರೂಪವಾದ ಶಕ್ತಿಯನ್ನು ತುಂಬಿಕೊಟ್ಟಿಯೋ ಅದನ್ನೇ ನಮಗೂ ಕೊಡು.

## English Translation

May that herd of swift horses, which formerly shone among the people of Nahusha, (be granted), Indra to us.

॥ ಸಂಹಿತಾಪಾಠಃ ॥

ಅಭಿ ವ್ರಜಂ ನ ತತ್ನಿಷೇ ಸೂರ ಉಪಾಕಚಕ್ಷಸಂ ।
ಯದಿಂದ್ರ ಮೃಳಯಾಸಿ ನಃ ॥ ೨೫ ॥

॥ ಪದಪಾಠಃ ॥

ಅಭಿ । ವ್ರಜಂ । ನ । ತತ್ನಿಷೇ । ಸೂರಃ । ಉಪಾಕಽಚಕ್ಷಸಂ ।
ಯತ್ । ಇಂದ್ರ । ಮೃಳಯಾಸಿ । ನಃ ॥ ೨೫ ॥

॥ ಸಾಯಣಭಾಷ್ಯಂ ॥

ನ ಸಂಪ್ರತ್ಯರ್ಥೇ । ನ ಸಂಪ್ರತೀದಾನೀಂ ಹೇ ಇಂದ್ರ ಸೂರಃ ಪ್ರಾಜ್ಞಸ್ತ್ವಂ ವ್ರಜಂ ಗೋಷ್ಠಮುಪಾಕಚಕ್ಷಸಂ । ಉಪಾಕ ಇತ್ಯಂತಿಕನಾಮ । ಅಂತಿಕೇ ದ್ರಷ್ಟವ್ಯಮಭಿ ತತ್ನಿಷೇ । ಅಭಿತನೋಷಿ । ಅಭಿವಿಸ್ತಾರಯಸಿ । ಗೋಭಿಃ ಪೂರ್ಣಂ ಕರೋಷೀತ್ಯರ್ಥಃ ॥ ತನೋತೇಶ್ಛಾಂದಸೇ ಲಿಟಿ ತನಿಪತ್ಯೋಶ್ಛಂದಸೀತ್ಯುಪಧಾಲೋಪಃ ॥ ಯದ್ಯದಾ ಹೇ ಇಂದ್ರ ತ್ವಂ ನೋಽಸ್ಮಾನ್ ಮೃಳಯಾಸಿ ಮೃಳಯಸಿ ಸುಖಯಸಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯತ್—ಯಾವಾಗ । ನಃ—ನಮ್ಮನ್ನು । ಮೃಳಯಾಸಿ—ಸುಖಕ್ಕೆ ಪಾತ್ರರನ್ನಾಗಿ ಮಾಡಬೇಕೆಂದು ಇಚ್ಛಿಸುವೆಯೋ ಆಗ (ಎಂದರೆ) । ನ—ಪ್ರಕೃತದಲ್ಲಿ । ಸೂರಃ—ಪ್ರಾಜ್ಞನಾದ ನೀನು । ವ್ರಜಂ—ಗೋಸಮೂಹವನ್ನು । ಉಪಾಕಚಕ್ಷಸಂ—ಹತ್ತಿರದಲ್ಲಿಯೇ ಕಾಣುತ್ತಿರುವ ಹುಲ್ಲುಗಾವಲುಗಳಲ್ಲಿ । ಅಭಿ ತತ್ನಿಷೇ—ಹರಡುತ್ತೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಪ್ರಾಜ್ಞನಾದ ನೀನು ನಮ್ಮನ್ನು ಸುಖಪಡಿಸಬೇಕೆಂದಿಚ್ಛಿಸಿರುವ ಈ ಕಾಲದಲ್ಲಿ ಗೋಸಮೂಹಗಳನ್ನು ನಮ್ಮ ಹತ್ತಿರದಲ್ಲಿಯೇ ಕಾಣುತ್ತಿರುವ ಈ ಹುಲ್ಲುಗಾವಲುಗಳಲ್ಲಿ ಹರಡುತ್ತೀಯೆ.

## English Translation

Sage Indra, you spread (the cattle) over the adjacent pastures when you are favourably inclined toward us.

॥ ಸಂಹಿತಾಪಾಠಃ ॥

ಯದಂಗ ತವಿಷೀಯಸ ಇಂದ್ರ ಪ್ರರಾಜಸಿ ಕ್ಷಿತೀಃ ।

ಮಹಾಁ ಅಪಾರ ಓಜಸಾ । ೨೬ ॥

॥ ಪದಪಾಠಃ ॥

ಯತ್ । ಅಂಗ । ತವಿಷೀಽಯಸೇ । ಇಂದ್ರ । ಪ್ರಽರಾಜಸಿ । ಕ್ಷಿತೀಃ ।

ಮಹಾನ್ । ಅಪಾರಃ । ಓಜಸಾ ॥ ೨೬ ॥

॥ ಸಾಯಣಭಾಷ್ಯಂ ॥

ಅಂಗೇತ್ಯಭಿಮುಖೀಕರಣೇ । ಹೇ ಇಂದ್ರ ಯದ್ಯಸ್ತ್ವಂ ತವಿಷೀಯಸೇ । ತವಿಷೀತಿ ಬಲನಾಮ । ಬಲಮಿವಾಚರಸಿ । ಹಸ್ತ್ಯಶ್ವರಥಾದಿಕಂ ಬಲಂ ಯಥಾ ಸರ್ವಂ ಶತ್ರುಜಾತಂ ಮನಕ್ತಿ ತದ್ವತ್ತ್ವಮಸಹಾಯ ಏವ ಸನ್ ಸರ್ವಮೇವ ಶತ್ರುಜಾತಂ ಮಾರಯಸೀತ್ಯರ್ಥಃ । ಯಚ್ಚ ತ್ವಂ ಕ್ಷಿತೀಃ । ಮನುಷ್ಯನಾಮ್ಯೇತತ್ । ಮನುಷ್ಯಾನ್ ಪ್ರರಾಜಸಿ ಪ್ರಕರ್ಷೇಣೇಶಿಷೇ । ರಾಜತಿರೈಶ್ವರ್ಯಕರ್ಮಾ ॥ ಅಸ್ಮಾಪಿ ಯದ್ವೃತ್ತಯೋಗಾನ್ನ ನಿಘಾತಃ ॥ ಸ ಇಂದ್ರ ಓಜಸಾ ಬಲೇನ ಮಹಾನ್ ಸರ್ವೇಭ್ಯೋಽಧಿಕಃ ಅತ ಏವಾಪಾರಃ ಪಾರರಹಿತಃ । ಕೇನಾಪ್ಯವಸಾನಂ ಪ್ರಾಪಯಿತುಮಶಕ್ಯ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಂಗ ಇಂದ್ರ—ಎಲೈ ಇಂದ್ರನೇ । ಯತ್—ಯಾವಾಗ । ತವಿಷೀಯಸೇ—ನಿನ್ನ ಬಲವನ್ನು ಪ್ರಕಾಶಪಡಿಸುತ್ತೀಯೋ (ಆಗ) । ಕ್ಷಿತೀಃ—ಮಾನವರಮೇಲೆಲ್ಲಾ । ಪ್ರರಾಜಸಿ—ಅತಿಶಯವಾದ ಪ್ರಭುತ್ವವನ್ನು ಮಾಡುತ್ತೀಯೆ (ಮತ್ತು) । ಓಜಸಾ—ನಿನ್ನ ಶಕ್ತಿಯಿಂದ । ಮಹಾನ್—ಅತ್ಯಧಿಕನಾಗಿಯೂ । ಅಪಾರಃ—ಅನಂತವಾದ ಸ್ವರೂಪವುಳ್ಳವನಾಗಿಯೂ ಇರುತ್ತೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವಾಗ ನೀನು ನಿನ್ನ ಬಲವನ್ನು ಪ್ರಕಾಶಪಡಿಸುತ್ತೀಯೋ ಆಗ ಮಾನವರ ಮೇಲೆಲ್ಲಾ ಅತಿಶಯವಾದ ಪ್ರಭುತ್ವವನ್ನು ಮಾಡುತ್ತೀಯೆ. ಮತ್ತು ನಿನ್ನ ಶಕ್ತಿಯಿಂದ ಅತ್ಯಧಿಕನಾಗಿಯೂ ಅನಂತವಾದ ಸ್ವರೂಪವುಳ್ಳವನಾಗಿಯೂ ಇರುತ್ತೀಯೆ.

## English Translation

When you put forth your might, you reign, Indra, over mankind: surpassing are you, and unlimited in strength.

॥ ಸಂಹಿತಾಪಾಠಃ ॥

ತಂ ತ್ವಾ ಹವಿಷ್ಮತೀರ್ವಿಶ ಉಪ ಬ್ರುವತ ಊತಯೇ ।

ಉರುಜ್ರಯಸಮಿಂದುಭಿಃ ॥ ೨೭ ॥

॥ ಪದಪಾಠಃ ॥

ತಂ । ತ್ವಾ । ಹವಿಷ್ಮತೀಃ । ವಿಶಃ । ಉಪ । ಬ್ರುವತೇ । ಊತಯೇ ।

ಉರುಽಜ್ರಯಸಂ । ಇಂದುಭಿಃ ॥ ೨೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತಂ ಪೂರ್ವೋಕ್ತಗುಣಮುರುಜ್ರಯಸಂ ವಿಸ್ತೀರ್ಣವ್ಯಾಪಿನಂ ತ್ವಾಂ ಹವಿಷ್ಮತೀರ್ಹವಿರ್ಭಿಶ್ಚರುಪುರೋಡಾಶಾದಿಭಿರ್ಯುಕ್ತಾ ವಿಶಃ ಪ್ರಜಾ ಉಪ ಬ್ರುವತೇ । ಉಪೇತ್ಯ ಸ್ತುವಂತಿ । ಕಿಮರ್ಥಂ । ಇಂದುಭಿಃ ಸೋಮೈರೂತಯೇ ತರ್ಪಣಾಯ । ಯದ್ವಾ । ಇಂದುಭಿಃ ಸೋಮೈರುರುಜ್ರಯಸಂ ವಿಸ್ತೀರ್ಣಜವಮೂತಯೇ ರಕ್ಷಣಾಯ ಸ್ತುವಂತಿ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತಂ—ಹಿಂದೆ ವರ್ಣಿತನಾಗಿ ಪ್ರಸಿದ್ಧನಾದವನೂ । ಸೋಮೈಃ—ಸೋಮಪಾನಗಳಿಂದ। ಉರುಜ್ರಯಸಂ—ವಿಸ್ತೃತವಾದ ಶಕ್ತಿಯುಳ್ಳವನೂ ಆದ । ತ್ವಾ— ನಿನ್ನನ್ನು । ಹವಿಷ್ಮತೀಃ—ನಿನಗರ್ಪಿಸಲು ಹವಿಸ್ಸನ್ನು ಹಿಡಿದು ಸಿದ್ಧವಾಗಿರುವ । ವಿಶಃ—ಪ್ರಜೆಗಳು । ಊತಯೇ—ರಕ್ಷಣಾರ್ಥವಾಗಿ । ಉಪ ಬ್ರುವತೇ—ಸಮೀಪಿಸಿ ಸ್ತುತಿಸುತ್ತಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂದೆಲ್ಲಾ ವರ್ಣಿತನಾಗಿ ಪ್ರಸಿದ್ಧನಾದವನೂ, ಸೋಮಪಾನಗಳಿಂದ ವಿಸ್ತೃತವಾದ ಶಕ್ತಿಯುಳ್ಳವನೂ ಆದ ನಿನ್ನನ್ನು ನಿನಗರ್ಪಿಸಲು ಹವಿಸ್ಸನ್ನು ಹಿಡಿದು ಸಿದ್ಧವಾಗಿರುವ ಪ್ರಜೆಗಳು ರಕ್ಷಣಾರ್ಥವಾಗಿ ಸಮೀಪಿಸಿ ಸ್ತುತಿಸುತ್ತಾರೆ.

## English Translation

The people offering oblations call upon you, the pervader of space, with libations for protection.

॥ ಸಂಹಿತಾಪಾಠಃ ॥

ಉಪಹ್ವರೇ ಗಿರೀಣಾಂ ಸಂಗಥೇ ಚ ನದೀನಾಂ ।

ಧಿಯಾ ವಿಪ್ರೋ ಅಜಾಯತ ॥ ೨೮ ॥

॥ ಪದಪಾಠಃ ॥

ಉಪऽಹ್ವರೇ । ಗಿರೀಣಾಂ । ಸಂऽಗಥೇ । ಚ । ನದೀನಾಂ ।

ಧಿಯಾ । ವಿಪ್ರಃ । ಅಜಾಯತ ॥ ೨೮ ॥

॥ ಸಾಯಣಭಾಷ್ಯಂ ॥

ಗಿರೀಣಾಂ ಪರ್ವತಾನಾಮುಪಹ್ವರ ಉಪಹ್ವರ್ತವ್ಯೇ ಪ್ರಾಂತೇ ನದೀನಾಂ ಸರಿತಾಂ ಸಂಗಥೇ ಸಂಗಮನೇ ಚ ಈದೃಗ್ವಿಧೇ ದೇಶೇ ಕ್ರಿಯಮಾಣಯಾ ಧಿಯಾ ಯಾಗಕ್ರಿಯಯಾ ಸ್ತುತ್ಯಾ ವಾ ವಿಪ್ರೋ ಮೇಧಾವೀಂದ್ರೋऽಜಾಯತ । ಪ್ರಾದುರ್ಭವತಿ । ಅತೋ ವಯಮಪಿ ತಾದೃಶೇ ದೇಶೇ ಯಜಾಮಃ ಸ್ತುಮೋ ವೇತಿ ಭಾವಃ ॥ ಗಿರೀಣಾಮಿತ್ಯತ್ರ ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಗಿರೀಣಾಂ**—ಪರ್ವತಗಳ । **ಉಪಹ್ವರೇ**—ತಪ್ಪಲುಪ್ರದೇಶಗಳಲ್ಲಿಯೂ । **ನದೀನಾಂ**—ನದಿಗಳ । **ಸಂಗಥೇ ಚ**—ಸಂಗಮಪ್ರದೇಶಗಳಲ್ಲಿಯೂ । **ವಿಪ್ರಃ**—ಮೇಧಾವಿಯಾದ ಇಂದ್ರನು । **ಧಿಯಾ**—ಯಜ್ಞಕ್ರಿಯೆಗಳ ಫಲವಾಗಿ । **ಅಜಾಯತ**—ಪ್ರಾದುರ್ಭಾವವನ್ನು ಹೊಂದುತ್ತಾನೆ.

॥ ಭಾವಾರ್ಥ ॥

ಪರ್ವತಗಳ ತಪ್ಪಲುಪ್ರದೇಶಗಳಲ್ಲಿಯೂ, ನದಿಗಳ ಸಂಗಮಪ್ರದೇಶಗಳಲ್ಲಿಯೂ ಮೇಧಾವಿಯಾದ ಇಂದ್ರನು ಯಜ್ಞಕ್ರಿಯೆಗಳ ಫಲವಾಗಿ ಪ್ರಾದುರ್ಭಾವವನ್ನು ಹೊಂದುತ್ತಾನೆ. (ಗೋಚರಿಸುತ್ತಾನೆ)

## English Translation

The wise (Indra) has been engendered by holy rites on the skirts of the mountains, at the confluence of rivers.

॥ ಸಂಹಿತಾಪಾಠಃ ॥

ಅತಃ ಸಮುದ್ರಮುದ್ವತಶ್ಚಿಕಿತ್ವಾँ ಅವ ಪಶ್ಯತಿ ।

ಯತೋ ವಿಪಾನ ಏಜತಿ ॥ ೨೯ ॥

॥ ಪದಪಾಠಃ ॥

ಅತಃ । ಸಮುದ್ರಂ । ಉತ್ಽವತಃ । ಚಿಕಿತ್ವಾನ್ । ಅವ । ಪಶ್ಯತಿ ।

ಯತಃ । ವಿಽಪಾನಃ । ಏಜತಿ ॥ ೨೯ ॥

॥ ಸಾಯಣಭಾಷ್ಯಂ ॥

ಯತೋ ಯಸ್ಮಿನ್ದ್ಯುಲೋಕೇ ವಿಪಾನೋ ವ್ಯಾಪ್ನುವನ್ ವಿಶಿಷ್ಟಪಾನಯುಕ್ತೋ ವೇಂದ್ರ ಏಜತಿ ಚೇಷ್ಟತೇ ಉದ್ವತ ಉದ್ಗತಾತ್॥ ಉಪಸರ್ಗಾಚ್ಛಂದಸಿ ಧಾತ್ವರ್ಥೇ ಇತಿ ವತಿಃ ॥ ಅತೋಽಸ್ಮಾದ್ದ್ಯು-ಲೋಕಾಚ್ಚಿಕಿತ್ವಾಞ್ಜ್ಞಾನವಾನ್ ಸ ಇಂದ್ರಃ ಸಮುದ್ರಂ ಸಮುಂದನಶೀಲಂ ಯಜಮಾನೈರ್ದೀಯಮಾನಂ ಸೋಮಮವ ಪಶ್ಯತಿ । ಅವಾಙ್ಮುಖಃ ಸನ್ನೀಕ್ಷತೇ । ಯದ್ವಾ । ಸೂರ್ಯಾತ್ಮನೇಂದ್ರಃ ಸ್ತೂಯತೇ । ಯಸ್ಮಿನ್ನಭಸಿ ವಿಪಾನೋ ವ್ಯಾಪ್ನುವನ್ ಸೂರ್ಯಾತ್ಮೇಂದ್ರ ಏಜತಿ ವರ್ತತೇ ಚಿಕಿತ್ವಾಞ್ಜ್ಞಾನವಾನ್ ವಿದ್ವಾನ್ವಾ ಸ ಇಂದ್ರ ಉದ್ವತ ಉದ್ಗತಾದತೋಽಸ್ಮಾದಂತರಿಕ್ಷಾತ್ಸಮುದ್ರಂ । ಉಪಲಕ್ಷಣಮೇತತ್ । ಸಮುದ್ರೋಪಲಕ್ಷಿತಂ ಸರ್ವಂ ಜಗದವ ಪಶ್ಯತಿ । ಅವಾಙ್ಮುಖಂ ಪ್ರಸೃತೈಃ ಕಿರಣೈಃ ಪ್ರಕಾಶಯತಿ ॥

॥ ಪ್ರತಿಪದಾರ್ಥ ॥

**ಯತಃ**—ಯಾವ ದ್ಯುಲೋಕದಲ್ಲಿ । **ವಿಪಾನಃ**—ವ್ಯಾಪಿಸಿರುವ ಇಂದ್ರನು । **ಏಜತಿ**—ವ್ಯವಹರಿಸುವನೋ । **ಉದ್ವತಃ**—ಅತ್ಯಂತ ಎತ್ತರದ ಪ್ರದೇಶವಾದ । **ಅತಃ**—ಆದೇ ದ್ಯುಲೋಕದಿಂದ (ನೋಡುತ್ತಾ) । **ಚಿಕಿತ್ವಾನ್**—ಯಜಮಾನರ ಯಾಗಕ್ರಿಯಾದಿಗಳನ್ನು ತಿಳಿದವನಾಗಿ । **ಸಮುದ್ರಂ**—ಯಜಮಾನರಿಂದ ಧಾರಾರೂಪದಲ್ಲಿ ಅರ್ಪಿತವಾದ ಸೋಮವನ್ನು । **ಅವ ಪಶ್ಯತಿ**—ಬಗ್ಗಿ ನೋಡುತ್ತಾನೆ.

॥ ಭಾವಾರ್ಥ ॥

ಯಾವ ದ್ಯುಲೋಕದಲ್ಲಿ ವ್ಯಾಪಿಸಿರುವ ಇಂದ್ರನು ವ್ಯವಹರಿಸುವನೋ ಅತ್ಯಂತ ಎತ್ತರದ ಪ್ರದೇಶವಾದ ಆದೇ ದ್ಯುಲೋಕದಿಂದ ನೋಡುತ್ತಾ ಯಜಮಾನರ ಯಾಗಕ್ರಿಯಾದಿಗಳನ್ನು ತಿಳಿದವನಾಗಿ ಯಜಮಾನರಿಂದ ಧಾರಾರೂಪದಲ್ಲಿ ಅರ್ಪಿತವಾದ ಸೋಮವನ್ನು ಬಗ್ಗಿ ನೋಡುತ್ತಾನೆ.

English Translation

From the lofty region in which pervading he abides, Indra the intelligent looks down upon the offered libation.

॥ ಸಂಹಿತಾಪಾಠಃ ॥

ಆದಿತ್ಪ್ರ॒ತ್ನಸ್ಯ॒ ರೇತ॑ಸೋ॒ ಜ್ಯೋತಿ॑ಷ್ಪಶ್ಯಂತಿ ವಾಸ॒ರಂ ।
ಪ॒ರೋ ಯ॒ದಿಧ್ಯತೇ॑ ದಿ॒ವಾ ॥ ೩೦ ॥

॥ ಪದಪಾಠಃ ॥

ಆತ್ । ಇತ್ । ಪ್ರ॒ತ್ನಸ್ಯ॑ । ರೇತ॑ಸಃ । ಜ್ಯೋತಿಃ॑ । ಪ॒ಶ್ಯಂ॒ತಿ॒ । ವಾ॒ಸ॒ರಂ ।
ಪ॒ರಃ । ಯತ್ । ಇ॒ಧ್ಯತೇ॑ । ದಿ॒ವಾ ॥ ೩೦ ॥

॥ ಸಾಯಣಭಾಷ್ಯಂ ॥

ಪರೋ ದಿವಾ ದಿವಃ ಪರಸ್ತಾದ್ದ್ಯುಲೋಕಸ್ಯೋಪರಿ ಯದ್ಯದಾಯಮಿಂದ್ರಃ ಸೂರ್ಯಾತ್ಮನೇ-ದ್ಯತೇ ದೀಪ್ಯತೇ ಆದಿದನಂತರಮೇವ ಪ್ರತ್ನಸ್ಯ ಚಿರಂತನಸ್ಯ ರೇತಸೋ ಗಂತುಃ॥ ರೀ ಗತಿರೇಷಣಯೋಃ । ಅಸ್ಮಾತ್ ಸ್ರುರೀಭ್ಯಾಂ ತುಟ್ಚ । ಉ- ೪-೨೦೧ । ಇತ್ಯಸುನ್ ತುಡಾಗಮಶ್ಚ ॥ ಯದ್ವಾ । ರೇತ ಇತ್ಯುದಕ-ನಾಮ । ರೇತಸ್ವಿನ ಉದಕವತಃ । ಸಾಮರ್ಥ್ಯಾನ್ಮತ್ವರ್ಥೋ ಲಕ್ಷ್ಯತೇ । ಈದೃಶಸ್ಯೇಂದ್ರಸ್ಯ ಸೂರ್ಯಾ-ತ್ಮನೋ ವಾಸರಂ ನಿವಾಸಕಂ ವಾಸರಸ್ಯ ನಿವಾಸಸ್ಯ ಹೇತುಭೂತಂ ವಾ ಜ್ಯೋತಿರ್ದ್ಯೋತಮಾನಂ ತೇಜಃ ಪಶ್ಯಂತಿ ಸರ್ವೇ ಜನಾಃ । ಯದ್ವಾ । ವಾಸರಮಿತ್ಯತ್ಯಂತಸಂಯೋಗೇ ದ್ವಿತೀಯಾ । ಕೃತ್ಸ್ನಮಹರುದ-ಯಪ್ರಭೃತ್ಯಾಸ್ತಮನಂ ಯಾವಜ್ಜ್ಯೋತಿಷ್ಪಶ್ಯಂತೀತ್ಯರ್ಥಃ ॥ ಇಸುಸೋಃ ಸಾಮರ್ಥ್ಯ ಇತಿ ವಿಸರ್ಜ-ನೀಯಸ್ಯ ಷತ್ವಂ ॥

॥ ಪ್ರತಿಪದಾರ್ಥ ॥

ಪರಃ ದಿವಾ—ದ್ಯುಲೋಕದ ಮೇಲ್ಭಾಗದಲ್ಲಿ । ಯತ್—ಯಾವಾಗ । ಇಧ್ಯತೇ—ಈ ಇಂದ್ರನು ಸೂರ್ಯ ರೂಪದಲ್ಲಿ ಪ್ರಕಾಶಿಸುವನೋ । ಆದಿತ್—ಆ ಒಡನೆಯೇ । ಪ್ರತ್ನಸ್ಯ—ಪುರಾತನನೂ। ರೇತಸಃ—ಉದಕಭರಿತನೂ ಆದ ಈ ಇಂದ್ರನ । ವಾಸರಂ—ದೈನಂದಿನದ । ಜ್ಯೋತಿಃ—ಪ್ರಭೆಯನ್ನು । ಪಶ್ಯಂತಿ—ಸಕಲ ಮಾನವರೂ ನೋಡುತ್ತಾರೆ.

॥ ಭಾವಾರ್ಥ ॥

ದ್ಯುಲೋಕದ ಮೇಲ್ಭಾಗದಲ್ಲಿ ಯಾವಾಗ ಈ ಇಂದ್ರನು ಸೂರ್ಯರೂಪದಲ್ಲಿ ಪ್ರಕಾಶಿಸುವನೋ ಆ ಒಡನೆಯೇ ಪುರಾತನನೂ ಉದಕಭರಿತನೂ ಆದ ಈ ಇಂದ್ರನ ದೈನಂದಿನದ ಪ್ರಭೆಯನ್ನು ಸಕಲ ಮಾನವರೂ ನೋಡುತ್ತಾರೆ.

## English Translation

Then (men) behold the daily light of the ancient shedder of water, when he shines above the heaven.

॥ ಸಂಹಿತಾಪಾಠಃ ॥

ಕಣ್ವಾಸ ಇಂದ್ರ ತೇ ಮತಿಂ ವಿಶ್ವೇ ವರ್ಧಂತಿ ಪೌಂಸ್ಯಂ ।

ಉತೋ ಶವಿಷ್ಠ ವೃಷ್ಣ್ಯಂ ॥ ೩೧ ॥

॥ ಪದಪಾಠಃ ॥

ಕಣ್ವಾಸಃ । ಇಂದ್ರ । ತೇ । ಮತಿಂ । ವಿಶ್ವೇ । ವರ್ಧಂತಿ । ಪೌಂಸ್ಯಂ ।

ಉತೋ ಇತಿ । ಶವಿಷ್ಠ । ವೃಷ್ಣ್ಯಂ ॥ ೩೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವದೀಯಾಂ ಮತಿಂ ಬುದ್ಧಿಂ ಪೌಂಸ್ಯಂ । ಬಲನಾಮೈತತ್ । ಬಲಂ ಚ ವಿಶ್ವೇ ಸರ್ವೇ ಕಣ್ವಾಸಃ ಕಣ್ವಾಃ ಸ್ತೋತಾರಃ ಕಣ್ವಗೋತ್ರಾ ವರ್ಷಯೋ ವರ್ಧಂತಿ । ವರ್ಧಯಂತಿ ॥ ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ ॥ ಉತೋ ಅಪಿ ಚ ಹೇ ಶವಿಷ್ಠ ಶವಸ್ವಿತಮ ಬಲವತ್ತಮ ॥ ವಿನ್ಮತೋರ್ಲುಕ್ । ಟೇರಿತಿ ಟಿಲೋಪಃ ॥ ಈದೃಶೇಂದ್ರ ವೃಷ್ಣ್ಯಂ ತ್ವದೀಯಂ ವೀರ್ಯಂ ಬಲಕರ್ಮ ಚ ಕಣ್ವಾಸೋ ವರ್ಧಯಂತ್ಯೇವ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಮತಿಂ—ವಿವೇಕಯುತವಾದ ಬುದ್ಧಿಯನ್ನೂ । ಪೌಂಸ್ಯಂ—ಬಲವನ್ನೂ । ವಿಶ್ವೇ—ಸಮಸ್ತರಾದ । ಕಣ್ವಾಸಃ—ಕಣ್ವಸಂತತಿಯ ಋಷಿಗಳೂ ಸಹ । ವರ್ಧಂತಿ—ವೃದ್ಧಿಯಾಗುವಂತೆ ಮಾಡುತ್ತಾರೆ । ಶವಿಷ್ಠ—ಅತ್ಯಂತ ಬಲಯುತನಾದ ಎಲೈ ಇಂದ್ರನೇ । ಉತೋ—ಹಾಗೆಯೇ । ವೃಷ್ಣ್ಯಂ—ನಿನ್ನ ವೀರ್ಯವನ್ನೂ ಬೆಳೆಯುವಂತೆ ಮಾಡುತ್ತಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ವಿವೇಕಯುತವಾದ ಬುದ್ಧಿಯನ್ನೂ ಬಲವನ್ನೂ ಕಣ್ವಸಂತತಿಯ ಸಮಸ್ತ ಋಷಿಗಳೂ ಸಹ ವೃದ್ಧಿಯಾಗುವಂತೆ ಮಾಡುತ್ತಾರೆ. ಅತ್ಯಂತ ಬಲಯುತನಾದ ಎಲೈ ಇಂದ್ರನೇ, ಹಾಗೆಯೇ ನಿನ್ನ ವೀರ್ಯವೂ ಬೆಳೆಯುವಂತೆ ಮಾಡುತ್ತಾರೆ.

## English Translation

All the Kanwas, Indra, magnify your wisdom, your manhood, and, most mighty one, your strength.

॥ ಸಂಹಿತಾಪಾಠಃ ॥

ಇಮಾಂ ಮ ಇಂದ್ರ ಸುಷ್ಟುತಿಂ ಜುಷಸ್ವ ಪ್ರ ಸು ಮಾಮವ ।
ಉತ ಪ್ರ ವರ್ಧಯಾ ಮತಿಂ ॥ ೩೨ ॥

॥ ಪದಪಾಠಃ ॥

ಇಮಾಂ । ಮೇ । ಇಂದ್ರ । ಸುಽಸ್ತುತಿಂ । ಜುಷಸ್ವ । ಪ್ರ । ಸು । ಮಾಂ । ಅವ ।
ಉತ । ಪ್ರ । ವರ್ಧಯ । ಮತಿಂ ॥ ೩೨ ॥

॥ ಸಾಯಣಭಾಷ್ಯಂ॥

ಹೇ ಇಂದ್ರ ಇಮಾಂ ಪುರೋವರ್ತಿನೀಂ ಮೇ ಮದೀಯಾಂ ಸುಷ್ಟುತಿಂ ಶೋಭನಾಂ ಸ್ತುತಿಂ ಜುಷಸ್ವ । ಸೇವಸ್ವ । ಸೇವಿತ್ವಾ ಚ ಸ್ತೋತಾರಂ ಮಾಂ ಸು ಶೋಭನಂ ಪ್ರಾವ । ಪ್ರಕರ್ಷೇಣ ರಕ್ಷ । ಉತಾಪಿ ಚ ಮತಿಮಸ್ಮದೀಯಾಂ ಬುದ್ಧಿಂ ಪ್ರ ವರ್ಧಯ । ಪ್ರವೃದ್ಧಾಂ ಕುರು । ಯಥಾ ಬಹ್ವರ್ಥದರ್ಶಿನೀ ಭವತಿ ತಥಾ ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಇಮಾಂ—ಇಲ್ಲಿ ಅರ್ಪಿತವಾಗುವ । ಮೇ—ನನ್ನ । ಸುಷ್ಟುತಿಂ—ಉತ್ತಮವಾದ ಸ್ತುತಿಯನ್ನು । ಜುಷಸ್ವ—ಸೇವಿಸು । ಮಾಂ—ನನ್ನನ್ನು । ಸು—ಉತ್ತಮವಾಗಿಯೂ । ಪ್ರ ಅವ—ಪೂರ್ಣವಾಗಿಯೂ ರಕ್ಷಿಸು । ಉತ—ಮತ್ತು । ಮತಿಂ—ನಮ್ಮಲ್ಲಿ ಸದ್ಬುದ್ಧಿಯನ್ನು । ಪ್ರ ವರ್ಧಯ—ಬೆಳೆಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಇಲ್ಲಿ ಅರ್ಪಿತವಾಗುವ ನನ್ನ ಉತ್ತಮವಾದ ಸ್ತುತಿಯನ್ನು ಸೇವಿಸು. ನನ್ನನ್ನು ಉತ್ತಮವಾಗಿಯೂ ಪೂರ್ಣವಾಗಿಯೂ ರಕ್ಷಿಸು. ಮತ್ತು ನಮ್ಮಲ್ಲಿ ಸದ್ಬುದ್ಧಿಯನ್ನು ಬೆಳೆಸು.

## English Translatian

Be propitiated, Indra, by this my praise; carefully protect me, and give increase to my understanding.

॥ ಸಂಹಿತಾಪಾಠಃ ॥

ಉತ ಬ್ರಹ್ಮಣ್ಯಾ ವಯಂ ತುಭ್ಯಂ ಪ್ರವೃದ್ಧ ವಜ್ರಿವಃ ।

ವಿಪ್ರಾ ಅತಕ್ಷ್ಮ ಜೀವಸೇ ॥ ೩೩ ॥

। ಪದಪಾಠಃ ।

ಉತ । ಬ್ರಹ್ಮಣ್ಯಾ । ವಯಂ । ತುಭ್ಯಂ । ಪ್ರऽವೃದ್ಧ । ವಜ್ರಿऽವಃ ।

ವಿಪ್ರಾಃ । ಅತಕ್ಷ್ಮ । ಜೀವಸೇ ॥ ೩೩ ॥

। ಸಾಯಣಭಾಷ್ಯಂ ।

ಉತಾಪಿ ಚ ಹೇ ಪ್ರವೃದ್ಧ ಸ್ತುತಿಭಿಃ ಪ್ರಕೃಷ್ಟಾಂ ಬುದ್ಧಿಂ ಪ್ರಾಪ್ತ ಹೇ ವಜ್ರಿವೋ ವಜ್ರವನ್ನಿಂದ್ರ ॥ ಏಕೋ ಮತ್ವರ್ಥೀಯೋಽನುವಾದಃ । ಯದ್ವಾ । ವಜ್ರೋಽಸ್ಯಾಸ್ತೀತಿ ವಜ್ರೀ ಹಸ್ತಃ । ತದ್ವಾನ್ । ಛಂದಸೀರ ಇತಿ ಮತುಪೋ ವತ್ವಂ । ಮತುವಸೋ ರುರಿತಿ ಮಕಾರಸ್ಯ ರುತ್ವಂ ॥ ಈದೃಶೇಂದ್ರ ತುಭ್ಯಂ ತ್ವದರ್ಥಂ ವಿಪ್ರಾ ಮೇಧಾವಿನೋ ಬ್ರಹ್ಮಣ್ಯಾ ಬ್ರಹ್ಮಾಣಿ ಸ್ತೋತ್ರಾಣಿ ಹವಿರ್ಲಕ್ಷಣಾನ್ಯನ್ನಾನಿ ವಾ ॥ ಸುಪಾಂ ಸುಲುಗಿತಿ ಸುಪೋ ಯಾಜಾದೇಶಃ ॥ ಜೀವಸೇ ಜೀವನಾರ್ಥಮತಕ್ಷ್ಮ । ಅಕಾರ್ಷ್ಮ ॥ ತಕ್ಷೂ ತ್ವಕ್ಷೂ ತನೂಕರಣೇ । ಲಙಿ ಛಾಂದಸಃ ಶಪೋ ಲುಕ್ ॥

। ಪ್ರತಿಪದಾರ್ಥ ।

**ಉತ**—ಮತ್ತು । **ಪ್ರವೃದ್ಧ**—ನಮ್ಮ ಸ್ತುತಿಗಳಿಂದ ವೃದ್ಧಿಹೊಂದಲ್ಪಟ್ಟ ಬುದ್ಧಿಯುಳ್ಳವನೂ । **ವಜ್ರಿವಃ**—ವಜ್ರಾಯುಧವನ್ನು ಹಿಡಿದಿರುವವನೂ ಆದ ಎಲೈ ಇಂದ್ರನೇ । **ತುಭ್ಯಂ**—ನಿನ್ನನ್ನುದ್ದೇಶಿಸಿ । **ವಿಪ್ರಾಃ**—ಮೇಧಾವಿಗಳಾದ । **ವಯಂ**—ನಾವು । **ಬ್ರಹ್ಮಣ್ಯಾ**—ಉತ್ತಮವಾದ ಸ್ತುತಿಗಳನ್ನು । **ಜೀವಸೇ**—ನಮ್ಮ ರಕ್ಷಣಾರ್ಥವಾಗಿ । **ಅತಕ್ಷ್ಮ**—ನಿರ್ಮಿಸಿದ್ದೇವೆ.

। ಭಾವಾರ್ಥ ।

ನಮ್ಮ ಸ್ತುತಿಗಳಿಂದ ವೃದ್ಧಿಹೊಂದಲ್ಪಟ್ಟ ಬುದ್ಧಿಯುಳ್ಳವನೂ, ವಜ್ರಾಯುಧವನ್ನು ಹಿಡಿದಿರುವವನೂ ಆದ ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಮೇಧಾವಿಗಳಾದ ನಾವು ಉತ್ತಮವಾದ ಸ್ತುತಿಗಳನ್ನು ನಮ್ಮ ರಕ್ಷಣಾರ್ಥವಾಗಿ ನಿರ್ಮಿಸಿದ್ದೇವೆ.

## English Translation

Wielder of the thunderbolt, magnified (by our praises), we your worshippers have offered to you these prayers for our existence.

। ಸಂಹಿತಾಪಾಠಃ ।

ಅಭಿ ಕಣ್ವಾ ಅನೂಷತಾಪೋ ನ ಪ್ರವತಾ ಯತೀಃ ।

ಇಂದ್ರಂ ವನನ್ವತೀ ಮತಿಃ ॥ ೩೪ ॥

। ಪದಪಾಠಃ ।

ಅಭಿ । ಕಣ್ವಾಃ । ಅನೂಷತ । ಆಪಃ । ನ । ಪ್ರಽವತಾ । ಯತೀಃ ।

ಇಂದ್ರಂ । ವನನ್ಽವತೀ । ಮತಿಃ ॥ ೩೪ ॥

। ಸಾಯಣಭಾಷ್ಯಂ ।

ಕಣ್ವಾಃ ಕಣ್ವಗೋತ್ರಾ ಋಷಯೋಽಭ್ಯನೂಷತ । ಇಂದ್ರಮಭಿಷ್ಟುವಂತಿ ॥ ಣೂ ಸ್ತುತೌ । ಕುಟಾದಿಃ ॥ ಪ್ರವತಾ ಪ್ರವಣೇನ ಮಾರ್ಗೇಣ ಯತೀರ್ಗಚ್ಛಂತ್ಯ ಆಪೋ ನಾಪ ಇವ ಮತಿರ್ಮನನೀಯಾ ಕಣ್ವೈಃ ಕ್ರಿಯಮಾಣಾ ಸ್ತುತಿಃ ಸ್ತುತ್ಯಮಿಂದ್ರಂ ವನನ್ವತೀ ಸ್ವಯಮೇವ ಸಂಭಜನವತೀ ಭವತಿ ॥

। ಪ್ರತಿಪದಾರ್ಥ ।

ಕಣ್ವಾಃ—ಕಣ್ವವಂಶೋತ್ಪನ್ನರಾದ ಋಷಿಗಳು । ಅಭ್ಯನೂಷತ—ಇಂದ್ರನನ್ನು ಅತಿಶಯವಾಗಿ ಸ್ತುತಿಸುತ್ತಾರೆ । ಪ್ರವತಾ—ತಗ್ಗುಪ್ರದೇಶಗಳಲ್ಲಿ । ಯತೀಃ—ಪ್ರವಹಿಸುವ । ಆಪೋ ನ—ಉದಕಪ್ರವಾಹಗಳು ಎಷ್ಟು ವೇಗವಾಗಿ ಹೋಗುವುವೋ ಹಾಗೆ । ಮತೀ—ಧ್ಯಾನಾತ್ಮಕವಾದ ಕಣ್ವನ ಸ್ತುತಿಗಳು । ಇಂದ್ರಂ—ಇಂದ್ರನಿಗಭಿಮುಖವಾಗಿ । ವನನ್ವತೀ—ಸ್ವಯಂಸೇವೆಗಾಗಿ ಮುನ್ನುಗ್ಗುತ್ತದೆ.

। ಭಾವಾರ್ಥ ।

ಕಣ್ವವಂಶೋತ್ಪನ್ನರಾದ ಋಷಿಗಳು ಇಂದ್ರನನ್ನು ಅತಿಶಯವಾಗಿ ಸ್ತುತಿಸುತ್ತಾರೆ. ತಗ್ಗುಪ್ರದೇಶಗಳಲ್ಲಿ ಪ್ರವಹಿಸುವ ಉದಕಪ್ರವಾಹಗಳು ಎಷ್ಟು ವೇಗವಾಗಿ ಹೋಗುವುವೋ ಹಾಗೆ ಧ್ಯಾನಾತ್ಮಕವಾದ ಕಣ್ವನ ಸ್ತುತಿಗಳು ಇಂದ್ರನಿಗಭಿಮುಖವಾಗಿ ಸ್ವಯಂಸೇವೆಗಾಗಿ ಮುನ್ನುಗ್ಗುತ್ತದೆ.

## English Translation

The Kanwas glorify Indra; like waters rushing down a declivity, praise spontaneously seeks Indra.

। ಸಂಹಿತಾಪಾಠಃ ।

ಇಂದ್ರಮುಕ್ಥಾನಿ ವಾವೃಧುಃ ಸಮುದ್ರಮಿವ ಸಿಂಧವಃ ।

ಅನುತ್ತಮನ್ಯುಮಜರಂ ॥ ೩೫ ॥

। ಪದಪಾಠಃ ।

ಇಂದ್ರಂ । ಉಕ್ಥಾನಿ । ವವೃಧುಃ । ಸಮುದ್ರಂಽಇವ । ಸಿಂಧವಃ ।

ಅನುತ್ತ್ಽಮನ್ಯುಂ । ಅಜರಂ ॥ ೩೫ ॥

। ಸಾಯಣಭಾಷ್ಯಂ ।

ಉಕ್ಥಾನಿ ಶಸ್ತ್ರಾಣ್ಯಸ್ಮಾಭಿಃ ಶಸ್ಯಮಾನಾನೀಂದ್ರಂ ವವೃಧುಃ । ವರ್ಧಯಂತಿ । ಸಿಂಧವಃ ಸ್ಯಂದನಶೀಲಾ ನದ್ಯಃ ಸಮುದ್ರಮಿವ ಸಮುದ್ರಂ ಜಲಧಿಂ ಯಥಾ ವರ್ಧಯಂತಿ ತದ್ವತ್ । ಕೀದೃಶಮಿಂದ್ರಂ । ಅನುತ್ತಮನ್ಯುಂ । ಅನುತ್ತೋಽಪ್ರೇರಿತಃ ಪರೈರನಭಿಭೂತೋ ಮನ್ಯುಃ ಕ್ರೋಧೋ ಯಸ್ಯ ತಾದೃಶಂ ॥ ನುದವಿದೋಂದತ್ರೀತ್ಯಾದಿನಾ । ಪಾ. ೮-೨-೫೬ । ವಿಕಲ್ಪಿತತ್ವಾನ್ನಿಷ್ಠಾನತ್ವಾಭಾವಃ ॥ ಅಜರಂ ಜರಾರಹಿತಂ ॥ ಬಹುವ್ರೀಹೌ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಸಿಂಧವಃ—ಪ್ರವಹಿಸುವ ನದಿಗಳು । ಸಮುದ್ರಮಿವ—ಸಮುದ್ರವನ್ನು ತುಂಬುವಂತೆ । ಅನುತ್ತಮನ್ಯುಂ—ಇತರರಿಂದ ಎದುರಿಸಲಾಗದ ಕ್ರೋಧವುಳ್ಳವನೂ । ಅಜರಂ—ಜರಾರಹಿತನೂ ಆದ । ಇಂದ್ರಂ—ಇಂದ್ರನನ್ನು । ಉಕ್ಥಾನಿ—ನಮ್ಮಿಂದ ಪಠಿತವಾದ ಶಸ್ತ್ರಮಂತ್ರಗಳು । ವವೃಧುಃ—ಬೆಳೆಯುವಂತೆ ಮಾಡುತ್ತವೆ.

। ಭಾವಾರ್ಥ ।

ಪ್ರವಹಿಸುವ ನದಿಗಳು ಸಮುದ್ರವನ್ನು ತುಂಬುವಂತೆ ನಮ್ಮಿಂದ ಪಠಿತವಾದ ಶಸ್ತ್ರಮಂತ್ರಗಳು ಇತರರಿಂದ ಎದುರಿಸಲಾಗದ ಕ್ರೋಧವುಳ್ಳವನೂ, ಜರಾರಹಿತನೂ ಆದ ಇಂದ್ರನನ್ನು ಬೆಳೆಯುವಂತೆ ಮಾಡುತ್ತವೆ.

## English Translation

Holy praises magnify Indra, the imperishable, the implacable, as rivers (swell) the ocean.

। ಸಂಹಿತಾಪಾಠಃ ॥

ಆ ನೋ ಯಾಹಿ ಪರಾವತೋ ಹರಿಭ್ಯಾಂ ಹರ್ಯತಾಭ್ಯಾಂ ।

ಇಮಮಿಂದ್ರ ಸುತಂ ಪಿಬ ॥ ೩೬ ॥

॥ ಪದಪಾಠಃ ॥

ಆ । ನಃ । ಯಾಹಿ । ಪರಾऽವತಃ । ಹರಿऽಭ್ಯಾಂ । ಹರ್ಯತಾಭ್ಯಾಂ ।

ಇಮಂ । ಇಂದ್ರ । ಸುತಂ । ಪಿಬ ॥ ೩೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪರಾವತಃ ಪರಾಗತಾದ್ದೂರೇ ವರ್ತಮಾನಾದ್ದ್ಯುಲೋಕಾದ್ಧರ್ಯತಾಭ್ಯಾಂ ಕಾಂತಾಭ್ಯಾಂ ಹರಿಭ್ಯಾಮಶ್ವಾಭ್ಯಾಂ ನೋऽಸ್ಮಾನಾ ಯಾಹಿ । ಆಗಚ್ಛ । ಆಗತ್ಯ ಚೇಮಮಸ್ಮದೀಯಂ ಸುತಮಭಿಷುತಂ ಸೋಮಂ ಪಿಬ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಪರಾವತಃ-ಅತ್ಯಂತ ದೂರಪ್ರದೇಶವಾದ ದ್ಯುಲೋಕದಿಂದ । ಹರ್ಯತಾಭ್ಯಾಂ—ಆಕರ್ಷಕವಾದ ರೂಪವುಳ್ಳ । ಹರಿಭ್ಯಾಂ—ಅಶ್ವಗಳೊಡಗೂಡಿ । ನಃ—ನಮ್ಮಲ್ಲಿಗೆ । ಆ ಯಾಹಿ—ದಯಮಾಡು । ಇಮಂ—ನಮ್ಮಿಂದ ಅರ್ಪಿತವಾದುದೂ । ಸುತಂ—ಹಿಂಡಿ ಸಿದ್ಧವಾಗಿರುವುದೂ ಆದ ಸೋಮವನ್ನು । ಪಿಬ—ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಅತ್ಯಂತ ದೂರಪ್ರದೇಶವಾದ ದ್ಯುಲೋಕದಿಂದಲೂ ಸಹ ಆಕರ್ಷಕವಾದ ರೂಪವುಳ್ಳ ಅಶ್ವಗಳೊಡಗೂಡಿ ನಮ್ಮಲ್ಲಿಗೆ ದಯಮಾಡು. ನಮ್ಮಿಂದ ಅರ್ಪಿತವಾದುದೂ, ಹಿಂಡಿ ಸಿದ್ಧವಾಗಿರುವುದೂ ಆದ ಸೋಮವನ್ನು ಪಾನಮಾಡು.

English Translation

. Come to us from afar with your beloved horses: drink, Indra, this libation.

॥ ಸಂಹಿತಾಪಾಠಃ ॥

ತ್ವಾಮಿದ್ವೃತ್ರಹಂತಮ ಜನಾಸೋ ವೃಕ್ತಬರ್ಹಿಷಃ ।

ಹವಂತೇ ವಾಜಸಾತಯೇ ॥ ೩೭ ॥

॥ ಪದಪಾಠಃ ॥

ತ್ವಾಂ । ಇತ್ । ವೃತ್ರಹನ್ऽತಮ । ಜನಾಸಃ । ವೃಕ್ತऽಬರ್ಹಿಷಃ ।

ಹವಂತೇ । ವಾಜऽಸಾತಯೇ ॥ ೩೭ ॥

॥ ಸಾಯಣಭಾಷ್ಯಂ ॥

ಹೇ ವೃತ್ರಹಂತಮಾತಿಶಯೇನ ವೃತ್ರಾಣಾಮಾವೃಣ್ವತಾಂ ಶತ್ರೂಣಾಂ ಹಂತಃ ತ್ವಾಮಿತ್ತ್ವಾಮೇವ ವೃಕ್ತಬರ್ಹಿಷೋ ವೃಕ್ತಂ ಯಾಗಾರ್ಥಂ ಛಿನ್ನಂ ಬರ್ಹಿರ್ಯೈಸ್ತಾಂ ತಥಾವಿಧೋಕ್ತಾಃ ಪ್ರವೃತ್ತಯಜ್ಞಾ ಜನಾಸೋ ಜನಾ ಋತ್ವಿಗ್ಲಕ್ಷಣಾ ಹವಂತೇ । ಆಹ್ವಯಂತಿ ॥ ಹ್ವೇಞಃ ಶಪಿ ಬಹುಲಂ ಛಂದಸೀತಿ ಸಂಪ್ರಸಾರಣಂ ॥ ಕಿಮರ್ಥಂ । ವಾಜಸಾತಯೇ ವಾಜಸ್ಯಾನ್ನಸ್ಯ ಬಲಸ್ಯ ವಾ ಸಾತಯೇ ಲಾಭಾಯ । ಯದ್ವಾ । ಸಂಗ್ರಾಮನಾಮೈತತ್ । ವಾಜಸ್ಯ ಸಾತಿರ್ಯಸ್ಮಿನ್ ಸಂಗ್ರಾಮೇ ತತ್ರ ಸಾಹಾಯ್ಯಾಯ ತ್ವಾಮಾಹ್ವಯಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ವೃತ್ರಹಂತಮ—ವೃತ್ರನನ್ನು ಪೂರ್ಣವಾಗಿ ನಾಶಮಾಡತಕ್ಕ ಎಲೈ ಇಂದ್ರನೇ । ವೃಕ್ತಬರ್ಹಿಷಃ—ದರ್ಭಾಸನವನ್ನು ಸಂಸ್ಕರಿಸಿ ಸಿದ್ಧಮಾಡಿರುವ । ಜನಾಸಃ—ಋತ್ವಿಗಾದಿಗಳು । ವಾಜಸಾತಯೇ—ಅನ್ನ ಲಾಭಾರ್ಥವಾಗಿ । ತ್ವಾಂ ಇತ್—ನಿನ್ನನ್ನು ಮಾತ್ರವೇ । ಹ್ವಯಂತೇ—ಸ್ತುತಿಸಿ ಕರೆಯುತ್ತಾರೆ.

॥ ಭಾವಾರ್ಥ ॥

ವೃತ್ರನನ್ನು ಪೂರ್ಣವಾಗಿ ನಾಶಮಾಡತಕ್ಕ ಎಲೈ ಇಂದ್ರನೇ, ದರ್ಭಾಸನವನ್ನು ಸಂಸ್ಕರಿಸಿ ಸಿದ್ಧಮಾಡಿರುವ ಋತ್ವಿಗಾದಿಗಳು ಅನ್ನಲಾಭಾರ್ಥವಾಗಿ ನಿನ್ನನ್ನು ಮಾತ್ರವೇ ಸ್ತುತಿಸಿ ಕರೆಯುತ್ತಾರೆ.

## English Translation

Destroyer of Vritra, men strewing the clipped secred grass invoke you for the obtaining of food.

॥ ಸಂಹಿತಾಪಾಠಃ ॥

ಅನು ತ್ವಾ ರೋದಸೀ ಉಭೇ ಚಕ್ರಂ ನ ವರ್ತ್ಯೇತಶಂ ।
ಅನು ಸುವಾನಾಸ ಇಂದವಃ ॥ ೩೮ ॥

॥ ಪದಪಾಠಃ ॥

ಅನು । ತ್ವಾ । ರೋದಸೀ ಇತಿ । ಉಭೇ ಇತಿ । ಚಕ್ರಂ । ನ । ವರ್ತಿ । ಏತಶಂ ।
ಅನು । ಸುವಾನಾಸಃ । ಇಂದವಃ ॥ ೩೮ ॥

। ಸಾಯಣಭಾಷ್ಯಂ ।

ಹೇ ಇಂದ್ರ ತ್ವಾ ತ್ವಾಮುಭೇ ರೋದಸೀ ದ್ಯಾವಾಪೃಥಿವ್ಯಾವನುವರ್ತೇತೇ । ತ್ವದಧೀನೇ ಭವತ ಇತ್ಯರ್ಥಃ । ತತ್ರ ದೃಷ್ಟಾಂತಃ । ಚಕ್ರಂ ನ ಯಥಾ ರಥಚಕ್ರಮೇತಶಂ । ಅಶ್ವನಾಮೈತತ್ । ಪುರೋ ಗಚ್ಛಂತಮಶ್ವಮನು ವರ್ತ ಅನುವರ್ತತೇ ತದ್ವತ್ । ಅಪಿ ಚ ಸುವಾನಾಸ ಋತ್ವಿಗ್ಭಿರಭಿಷೂಯಮಾಣಾ ಇಂದವಃ ಸೋಮಾಶ್ಚ ತ್ವಾಮನುವರ್ತಂತೇ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) ತ್ವಾ—ನಿನ್ನನ್ನು । ಉಭೇ ರೋದಸೀ—ದ್ಯಾವಾಪೃಥಿವಿಗಳೆರಡೂ ಸಹ । ಚಕ್ರಂ—ರಥಚಕ್ರವು । ಏತಶಂ ನ—ರಥದ ಅಶ್ವವನ್ನೇ ಹಿಂಬಾಲಿಸುವಂತೆ । ಅನು ವರ್ತ—ಅನುಸರಿಸಿ ವ್ಯವಹರಿಸುತ್ತವೆ । ಸುವಾನಾಸಃ—ಋತ್ವಿಕ್ಕುಗಳಿಂದ ಹಿಂಡಲ್ಪಟ್ಟ । ಇಂದವಃ—ಸೋಮರಸಗಳೂ ಸಹ । ಅನು—ನಿನ್ನನ್ನೇ ಹಿಂಬಾಲಿಸುತ್ತವೆ.

। ಭಾವಾರ್ಥ ॥

ಎಲೈ ಇಂದ್ರನೇ, ರಥದ ಚಕ್ರಗಳು ರಥಕ್ಕೆ ಯೋಜಿತವಾಗಿರುವ ಅಶ್ವಗಳ ಮಾರ್ಗವನ್ನೇ ಹಿಂಬಾಲಿಸುವಂತೆ ದ್ಯಾವಾಪೃಥಿವಿಗಳೆರಡೂ ಸಹ ನಿನ್ನ ಮಾರ್ಗವನ್ನೇ ಅನುಸರಿಸಿ ವ್ಯವಹರಿಸುತ್ತವೆ. ಋತ್ವಿಕ್ಕುಗಳಿಂದ ಹಿಂಡಲ್ಪಟ್ಟ ಸೋಮರಸಗಳೂ ಸಹ ನಿನ್ನನ್ನೇ ಹಿಂಬಾಲಿಸುತ್ತವೆ.

## English Translation

Both heaven and earth follow you as the wheels (of a car follow) the horse; the streams of the Soma poured forth (by the priests) follow (you),

। ಸಂಹಿತಾಪಾಠಃ ।

ಮಂದಸ್ವಾ ಸು ಸ್ವರ್ಣರ ಉತೇಂದ್ರ ಶರ್ಯಣಾವತಿ ।
ಮತ್ಸ್ವಾ ವಿವಸ್ವತೋ ಮತೀ ॥ ೩೯ ॥

। ಪದಪಾಠಃ ।

ಮಂದಸ್ವ । ಸು । ಸ್ವಃಽನರೇ । ಉತ । ಇಂದ್ರ । ಶರ್ಯಣಾಽವತಿ ।
ಮತ್ಸ್ವ । ವಿವಸ್ವತಃ । ಮತೀ ॥ ೩೯ ॥

। ಸಾಯಣಭಾಷ್ಯಂ ।

ಉತಾಪಿ ಚ ಹೇ ಇಂದ್ರ ಶರ್ಯಣಾವತಿ । ಶರ್ಯಣಾ ನಾಮ ಕುರುಕ್ಷೇತ್ರವರ್ತಿನೋ ದೇಶಾಃ । ತೇಷಾಮದೂರಭವಂ ಸರಃ ಶರ್ಯಣಾವತ್ ॥ ಮಧ್ವಾದಿಭ್ಯಶ್ಚೇತಿ ಸ್ವಾರ್ಥಿಕೋ ಮತುಪ್ । ಮತೌ ಬಹ್ವಚ ಇತಿ ದೀರ್ಘಃ । ಸಂಜ್ಞಾಯಾಮಿತಿ ವತ್ವಂ ॥ ತಸ್ಮಿನ್ ಸರಸಿ ವಿದ್ಯಮಾನೇ ಸ್ವರ್ಣರೇ ಸರ್ವೈರ್ಋತ್ವಿಗ್ಭಿರ್ನೇತವ್ಯೇ ಯಜ್ಞೇ ಸು ಸುಷ್ಠು ಮಂದಸ್ವ । ಮಾದ್ಯ । ತೃಪ್ತೋ ಭವ । ಅಪಿ ಚ ವಿವಸ್ವತಃ ಪರಿಚರಣವತೋ ಯಜಮಾನಸ್ಯ ಮತೀ ಮತ್ಯಾ ಚ ಮತ್ಸ್ವ । ಮದಂ ಪ್ರಾಪ್ನುಹಿ ॥ ಮತಿಶಬ್ದಾತ್ತೃತೀಯಾಯಾಃ ಸುಪಾಂ ಸುಲುಗಿತಿ ಪೂರ್ವಸವರ್ಣದೀರ್ಘಃ ॥

। ಪ್ರತಿಪದಾರ್ಥ ।

ಉತ—ಮತ್ತು । ಇಂದ್ರ—ಎಲೈ ಇಂದ್ರನೇ । ಶರ್ಯಣಾವತಿ—ಶರ್ಯಣಾವತ್ತೆಂಬ ಸರಸ್ಸಿನ ತೀರದಲ್ಲಿ ನೆರವೇರತಕ್ಕದ್ದೂ । ಸ್ವರ್ಣರೇ—ಸಕಲ ಋತ್ವಿಕ್ಕುಗಳಿಂದ ನಿರ್ವಹಿಸಲ್ಪಡತಕ್ಕದ್ದೂ (ಅಥವಾ ಸ್ವರ್ಗಕ್ಕೆ ಸಾಧಕವಾದುದೂ) ಆದ ಯಜ್ಞದಲ್ಲಿ । ಸು—ಅತಿಶಯವಾಗಿ । ಮಂದಸ್ವ—ತೃಪ್ತಿಯನ್ನು ಹೊಂದು । ವಿವಸ್ವತಃ—ನಿನ್ನನ್ನು ಆರಾಧಿಸುವ ಯಜಮಾನನ । ಮತೀ—ಸ್ತುತಿಯಿಂದಲೂ ಸಹ । ಮತ್ಸ್ವ—ಹರ್ಷವನ್ನು ಹೊಂದು.

। ಭಾವಾರ್ಥ ।

ಎಲೈ ಇಂದ್ರನೇ, ಶರ್ಯಣಾವತ್ತೆಂಬ ಸರಸ್ಸಿನ ತೀರದಲ್ಲಿ ನೆರವೇರತಕ್ಕದ್ದೂ, ಸಕಲ ಋತ್ವಿಕ್ಕುಗಳಿಂದ ನಿರ್ವಹಿಸಲ್ಪಡತಕ್ಕದ್ದೂ ಆದ ಯಜ್ಞದಲ್ಲಿ ಅತಿಶಯವಾಗಿ ತೃಪ್ತಿಯನ್ನು ಹೊಂದು. ನಿನ್ನನ್ನು ಆರಾಧಿಸುವ ಯಜಮಾನನ ಸ್ತುತಿಯಿಂದಲೂ ಸಹ ಹರ್ಷವನ್ನು ಹೊಂದು

## English Translation

Rejoice, Indra, at the heaven-guiding sacrifice at Saryanavat; be exhilarated by the praise of the worshipper.

। ಸಂಹಿತಾಪಾಠಃ ।

ವಾವೃಧಾನ ಉಪ ದ್ಯವಿ ವೃಷಾ ವಜ್ರ್ಯರೋರವೀತ್ ।
ವೃತ್ರಹಾ ಸೋಮಪಾತಮಃ ॥ ೪೦ ॥

। ಪದಪಾಠಃ ।

ವವೃಧಾನಃ । ಉಪ । ದ್ಯವಿ । ವೃಷಾ । ವಜ್ರೀ । ಅರೋರವೀತ್ ।
ವೃತ್ರಽಹಾ । ಸೋಮಽಪಾತಮಃ ॥ ೪೦ ॥

। ಸಾಯಣಭಾಷ್ಯಂ ।

ವಾವೃಧಾನೋ ವೃದ್ಧೋ ವಜ್ರೀ ವಜ್ರವಾನ್ ಅತ ಏವ ವೃತ್ರಹಾ ವೃತ್ರಸ್ಯ ಮೇಘಸ್ಯಾಸುರಸ್ಯ ವಾ ಹಂತಾ ಸೋಮಪಾತಮೋಽತಿಶಯೇನ ಸೋಮಸ್ಯ ಪಾತೇಂದ್ರೋ ವೃಷೋದಕಾನಾಂ ವರ್ಷಿತಾ ದ್ಯವಿ ದ್ಯುಲೋಕೇಽಂತರಿಕ್ಷ ಉಪ ಸಮೀಪೇ ಯಥಾಸ್ಮಾಭಿಃ ಶ್ರೂಯತೇ ತಥಾರೋರವೀತ್ । ಭೃಶಂ ಸ್ತನಯಿತ್ನುಲಕ್ಷಣಂ ಶಬ್ದಮಕರೋತ್ । ಮೇಘೇನ ವಜ್ರಹಸ್ತೇನೇದೃಶಂ ಶಬ್ದಮುಚ್ಚೈಃಕರದಿತ್ಯರ್ಥಃ ।

। ಪ್ರತಿಪದಾರ್ಥ ।

ವಾವೃಧಾನಃ—ಅಸಾಧಾರಣವಾಗಿ ಬೆಳೆದಿರುವವನೂ । ವಜ್ರೀ—ವಜ್ರಾಯುಧಧಾರಿಯೂ । ವೃತ್ರಹಾ—ವೃತ್ರಹಂತಕನೂ । ಸೋಮಪಾತಮಃ—ಅತಿಶಯವಾಗಿ ಸೋಮಪಾನವನ್ನು ಮಾಡುವವನೂ । ವೃಷಾ—ಇಷ್ಟಾರ್ಥಪ್ರದನೂ ಆದ ಇಂದ್ರನು । ದ್ಯವಿ—ಅಂತರಿಕ್ಷದಲ್ಲಿ । ಉಪ—ಅತ್ಯಂತ ಸಮೀಪದಲ್ಲಿಯೇ । ಅರೋರವೀತ್—(ನಮಗೆ ಕೇಳುವಂತೆಯೇ) ಗುಡುಗಿನ ರೂಪದ ಶಬ್ದವನ್ನು ಮಾಡಿದನು.

। ಭಾವಾರ್ಥ ।

ಅಸಾಧಾರಣವಾದ ಬೆಳವಣಿಗೆಯುಳ್ಳವನೂ, ವಜ್ರಾಯುಧಧಾರಿಯೂ, ವೃತ್ರಹಂತಕನೂ, ಅತಿಶಯವಾಗಿ ಸೋಮಪಾನವನ್ನು ಮಾಡುವವನೂ, ಇಷ್ಟಾರ್ಥಪ್ರದನೂ ಆದ ಇಂದ್ರನು ಅಂತರಿಕ್ಷದಲ್ಲಿ ಅತ್ಯಂತ ಸಮೀಪದಲ್ಲಿಯೇ ನಮಗೆ ಕೇಳುವಂತೆಯೇ ಗುಡುಗಿನ ರೂಪದ ಶಬ್ದವನ್ನು ಮಾಡಿದನು.

## English Translation

The vast wielder of the thunderbolt, the slayer of Vritra, the deep quaffer of the Soma, the showerer, roars near at hand in the sky.

। ಸಂಹಿತಾಪಾಠಃ ।

ಋಷಿರ್ಹಿ ಪೂರ್ವಜಾ ಅಸ್ಯೇಕ ಈಶಾನ ಓಜಸಾ ।
ಇಂದ್ರ ಚೋಷ್ಕೂಯಸೇ ವಸು ॥ ೪೧ ॥

। ಪದಪಾಠಃ ।

ಋಷಿಃ । ಪೂರ್ವಽಜಾಃ । ಅಸಿ । ಏಕಃ । ಈಶಾನಃ । ಓಜಸಾ ।
ಇಂದ್ರ । ಚೋಷ್ಕೂಯಸೇ । ವಸು ॥ ೪೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಪೂರ್ವಜಾಃ ಸರ್ವೇಭ್ಯೋ ದೇವೇಭ್ಯಃ ಪೂರ್ವಂ ಜಾತ ಉತ್ಪನ್ನಃ । ಯದ್ವಾ । ಯಜ್ಞೇಷು ಪ್ರಥಮಮೇವ ಪ್ರಾದುರ್ಭೂತಃ । ತ್ವಮೃಷಿರ್ದ್ರಷ್ಟಾ ಸರ್ವಜ್ಞಃ ಖಲ್ವಸಿ । ಭವಸಿ । ಅಪಿ ಚ ಸರ್ವೇಷು ದೇವೇಷು ಮಧ್ಯೇ ಏಕೋ ಮುಖ್ಯ ಓಜಸಾ ಬಲೇನೇಶಾನ ಈಶ್ವರೋ ಭವಸಿ । ಯದ್ವಾ । ಏಕೋಽಸಹಾಯ ಏವ ಸನ್ನೋಜಸಾತ್ಮೀಯೇನೈವ ಬಲೇನೇಶಾನಃ ಸರ್ವಸ್ಯ ಜಗತ ಈಶ್ವರೋ ಭವಸಿ । ಸ ತ್ವಂ ವಸು ಧನಂ ಚೋಷ್ಕೂಯಸೇ । ಪುನಃ ಪುನಃ ಸ್ತೋತೃಭ್ಯೋ ದದಾಸಿ ॥ ಸ್ಕುಞ್ ಆಪ್ರವಣ ಇಹ ದಾನಾರ್ಥಃ । ತಥಾ ಚೋಕ್ತಂ । ಚೋಷ್ಕೂಯಮಾಣ ಇಂದ್ರ ಭೂರಿ ವಾಮಂ ದದದಿಂದ್ರ ಬಹು ವನನೀಯಂ । ನಿ. ೬-೨೨ । ಇತಿ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಪೂರ್ವಜಾಃ**—ಸಕಲಭೂತಗಳಿಗಿಂತಲೂ ಮೊದಲೇ ಉತ್ಪನ್ನನಾದ ನೀನು । **ಋಷಿಃ**—ಸರ್ವಜ್ಞನಾದ ಋಷಿಯಾಗಿಯೇ । **ಅಸಿ**—ಆಗಿದ್ದೀಯೆ । **ಏಕಃ**—ಸಕಲದೇವತೆಗಳಲ್ಲಿಯೂ ಮುಖ್ಯನಾದ ನೀನು । **ಓಜಸಾ**—ನಿನ್ನ ಬಲದಿಂದ । **ಈಶಾನಃ**—ಪ್ರಭುವಾಗಿದ್ದೀಯೆ । **ವಸು**—ಧನವನ್ನು । **ಚೋಷ್ಕೂಯಸೇ**—ಸ್ತೋತೃಗಳಿಗೆ ಪದೇಪದೇ ಕೊಡುತ್ತೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸಕಲಭೂತಗಳಿಗಿಂತಲೂ ಮೊದಲೇ ಉತ್ಪನ್ನನಾದ ನೀನು, ಸರ್ವಜ್ಞನಾದ ಋಷಿಯಾಗಿಯೇ ಇದ್ದೀಯೆ. ಸಕಲದೇವತೆಗಳಲ್ಲಿಯೂ ಮುಖ್ಯನಾದ ನೀನು ನಿನ್ನ ಬಲದಿಂದ ಸಕಲರಿಗೂ ಪ್ರಭುವಾಗಿದ್ದೀಯೆ. ಸ್ತೋತೃಗಳಿಗೆ ಪದೇಪದೇ ಧನವನ್ನು ಕೊಡುತ್ತೀಯೆ.

## English Translation

You are a Rishi, the first born (of the gods), the chief, the ruler (over all) by your strength : you give repeatedly, Indra, wealth,

॥ ವಿಶೇಷವಿಷಯಗಳು ॥

**ಚೋಷ್ಕೂಯಸೇ**—ಸ್ತೋತೃಗಳಿಗೆ ಪುನಃಪುನಃ ಕೊಡುತ್ತೀಯೆ. ಈ ಶಬ್ದಕ್ಕೆ ಯಾಸ್ಕರು-ಚೋಷ್ಕೂಯಮಾಣ ಇಂದ್ರ ಭೂರಿ ವಾಮಂ ದದದಿಂದ್ರ ಬಹು ವನನೀಯಂ (ನಿ. ೬-೨೨) ಎಂದು ನಿರ್ವಚನವನ್ನು ಹೇಳಿದಾರೆ. ಈ ಶಬ್ದದ ಅರ್ಥವಿವರಣೆಯನ್ನು ನಾವು ಹಿಂದೆಯೇ ಮಾಡಿದೇವೆ.

॥ ಸಂಹಿತಾಪಾಠಃ ॥

ಅಸ್ಮಾಕಂ ತ್ವಾ ಸುತಾँ ಉಪ ವೀತಪೃಷ್ಠಾ ಅಭಿ ಪ್ರಯಃ ।

ಶತಂ ವಹಂತು ಹರಯಃ ॥ ೪೨ ॥

॥ ಪದಪಾಠಃ ॥

ಅಸ್ಮಾಕಂ । ತ್ವಾ । ಸುತಾನ್ । ಉಪ । ವೀತಽಪೃಷ್ಠಾಃ । ಅಭಿ । ಪ್ರಯಃ ।

ಶತಂ । ವಹಂತು । ಹರಯಃ ॥ ೪೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಅಸ್ಮಾಕಮಸ್ಮದೀಯಾನ್ ಸೋಮಾನುಪಲಕ್ಷ್ಯ ಪ್ರಯಃ । ಅನ್ನನಾಮೈತತ್ । ಧಾನಾಕರಂಭಾದಿಹವಿರ್ಲಕ್ಷಣಮನ್ನಂ ಚಾಭಿಲಕ್ಷ್ಯ ವೀತಪೃಷ್ಠಾಃ ಪ್ರಶಸ್ತೋಪರಿಭಾಗಾಃ ಶತಂ ಶತಸಂಖ್ಯಾಕಾ ಹರಯೋಽಶ್ವಾಸ್ತ್ವಾಂ ವಹಂತು । ಪ್ರಾಪಯಂತು ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ವೀತಪೃಷ್ಠಾಃ—ಪ್ರಶಸ್ತವಾದ ಪೃಷ್ಠಭಾಗಗಳುಳ್ಳವೂ । ಶತಂ—ಶತಸಂಖ್ಯಾಕವೂ ಆದ । ಹರಯಃ—ಅಶ್ವಗಳು । ಅಸ್ಮಾಕಂ—ನಮ್ಮ । ಸುತಾನ್ ಉಪ—ಸೋಮರಸಕ್ಕೆ ಅಭಿಮುಖವಾಗಿಯೂ । ಪ್ರಯಃ ಅಭಿ—ಹವಿಸ್ಸಿನ ರೂಪದ ಅನ್ನಕ್ಕಭಿಮುಖವಾಗಿಯೂ । ತ್ವಾ—ನಿನ್ನನ್ನು । ವಹಂತು—ಕರೆತರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಪ್ರಶಸ್ತವಾದ ಪೃಷ್ಠಭಾಗಗಳುಳ್ಳವೂ, ಶತಸಂಖ್ಯಾಕವೂ ಆದ ಅಶ್ವಗಳು ನಮ್ಮ ಸೋಮ ರಸಕ್ಕೆ ಅಭಿಮುಖವಾಗಿಯೂ ಹವಿಸ್ಸಿನ ರೂಪದ ಅನ್ನಕ್ಕಭಿಮುಖವಾಗಿಯೂ ನಿನ್ನನ್ನು ಕರೆತರಲಿ.

## English Translation

May your hundred sleek-backed horses bring you to our libations, to our (sacrificial) food.

॥ ಸಂಹಿತಾಪಾಠಃ ॥

ಇಮಾಂ ಸು ಪೂರ್ವ್ಯಾಂ ಧಿಯಂ ಮಧೋರ್ಘೃತಸ್ಯ ಪಿಪ್ಯುಷೀಂ ।

ಕಣ್ವಾ ಉಕ್ಥೇನ ವಾವೃಧುಃ ॥ ೪೩ ॥

। ಪದಪಾಠಃ ।

ಇಮಾಂ । ಸು । ಪೂರ್ವ್ಯಾಂ । ಧಿಯಂ । ಮಧೋಃ । ಘೃತಸ್ಯ । ಪಿಪ್ಯುಷೀಂ ।

ಕಣ್ವಾಃ । ಉಕ್ಥೇನ । ವವೃಧುಃ ॥ ೪೩ ॥

। ಸಾಯಣಭಾಷ್ಯಂ ।

ಇಮಾಮಿದಾನೀಂ ಕ್ರಿಯಮಾಣಾಂ ಸು ಸುಷ್ಠು ಪೂರ್ವ್ಯಾಂ ಪೂರ್ವೈಃ ಪಿತ್ರಾದಿಭಿಃ ಕೃತಾಂ ಮಧೋರ್ಮಧುರಸ್ಯ ಘೃತಸ್ಯ ಕ್ಷರಣಶೀಲಸ್ಯೋದಕಸ್ಯ ಪಿಪ್ಯುಷೀಂ ವರ್ಧಯಿತ್ರೀಂ । ಯದ್ವಾ । ಮಧುರೇಣ ಘೃತೇನಾಜ್ಯೇನ ಪ್ರವೃದ್ಧಾಂ ಧಿಯಂ ಯಾಗಕ್ರಿಯಾಂ ಕಣ್ವಾಃ ಕಣ್ವಗೋತ್ರಾ ಋಷಯ ಉಕ್ಥೇನ ಶಸ್ತ್ರೇಣ ವಾವೃಧುಃ । ಇಂದ್ರಾರ್ಥಂ ವರ್ಧಯಂತಿ । ಉಕ್ಥೈರ್ಹಿ ಯಾಗೋ ವರ್ಧತೇ । ಅಗ್ನಿಷ್ಟೋಮಾದಿಷೂತ್ತರಾಸು ಸಂಸ್ಥಾಸು ಶಸ್ತ್ರವೃದ್ಧೇರ್ದೃಷ್ಟತ್ವಾತ್ । ಯದ್ವಾ । ಪೂರ್ವ್ಯಾಂ ಚಿರಂತನೀಮಿಮಾಮಿಂದ್ರಸ್ಯ ಧಿಯಮನುಗ್ರಹಬುದ್ಧಿಂ ಕ್ಷರಣಶೀಲೇನ ಮಧುರೇಣ ಸೋಮೇನ ಪಿಪ್ಯುಷೀಂ ವರ್ಧನೀಯಾಮುಕ್ಥೇನ ಸ್ತೋತ್ರೇಣ ವಾವೃಧುಃ । ವರ್ಧಯಂತಿ ॥

। ಪ್ರತಿಪದಾರ್ಥ ।

ಸು—ಅತಿಶಯವಾಗಿ । ಪೂರ್ವ್ಯಾಂ—ನಮ್ಮ ಪಿತ್ರಾದಿಗಳಿಂದ ನಿರ್ವಹಿಸಲ್ಪಟ್ಟುದೂ । ಮಧೋಃ—ಮಧುರವಾದ । ಘೃತಸ್ಯ—ಉದಕಕ್ಕೆ । ಪಿಪ್ಯುಷೀಂ—ವರ್ಧಕವಾದುದೂ ಆದ । ಇಮಾಂ ಧಿಯಂ—ನಮ್ಮ ಈ ಯಾಗಕ್ರಿಯೆಯನ್ನು । ಕಣ್ವಾಃ—ಕಣ್ವವಂಶೋತ್ಪನ್ನರಾದ ಋಷಿಗಳು । ಉಕ್ಥೇನ—ಶಸ್ತ್ರಮಂತ್ರಗಳಿಂದ । ವಾವೃಧುಃ—ವೃದ್ಧಿಯಾಗುವಂತೆ ಮಾಡಿದರು.

। ಭಾವಾರ್ಥ ।

ಅತಿಶಯವಾಗಿ ನಮ್ಮ ಪಿತ್ರಾದಿಗಳಿಂದ ನಿರ್ವಹಿಸಲ್ಪಟ್ಟುದೂ, ಮಧುರವಾದ ಉದಕಕ್ಕೆ ವರ್ಧಕವಾದುದೂ ಆದ ನಮ್ಮ ಈ ಯಾಗಕ್ರಿಯೆಯನ್ನು ಕಣ್ವವಂಶೋತ್ಪನ್ನರಾದ ಋಷಿಗಳು ಶಸ್ತ್ರಮಂತ್ರಗಳಿಂದ ವೃದ್ಧಿಯಾಗುವಂತೆ ಮಾಡಿದರು.

## English Translation

The Kanwas augment by praise this ancient rite intended (to obtain) an abundance of sweet water.

। ಸಂಹಿತಾಪಾಠಃ ।

ಇಂದ್ರಮಿದ್ವಿಮಹೀನಾಂ ಮೇಧೇ ವೃಣೀತ ಮರ್ತ್ಯಃ ।

ಇಂದ್ರಂ ಸನಿಷ್ಯುರೂತಯೇ ॥ ೪೪ ॥

। ಪದಪಾಠಃ ।

ಇಂದ್ರಂ । ಇತ್ । ವಿऽಮಹೀನಾಂ । ಮೇಧೇ । ವೃಣೀತ । ಮರ್ತ್ಯಃ ।

ಇಂದ್ರಂ । ಸನಿಷ್ಯುಃ । ಊತಯೇ ॥ ೪೪ ॥

। ಸಾಯಣಭಾಷ್ಯಂ ।

ವಿಮಹೀನಾಂ ವಿಶೇಷೇಣ ಮಹತಾಂ ದೇವಾನಾಂ ಮಧ್ಯ ಇಂದ್ರಮಿದಿಂದ್ರಮೇವ ಮೇಧೇ ಯಜ್ಞೇ ಮರ್ತ್ಯೋ ಮನುಷ್ಯೋ ಹೋತಾ ವೃಣೀತ । ಸ್ತುತಿಭಿಃ ಸಂಭಜತೇ । ತಥಾ ಸನಿಷ್ಯುರ್ಧನಕಾಮಶ್ಚ ಸ್ತೋತೋತಯೇ ರಕ್ಷಣಾಯೇಂದ್ರಮೇವ ವೃಣೀತೇ । ಸ್ತುತ್ಯಾ ಸಂಭಜತೇ ॥

। ಪ್ರತಿಪದಾರ್ಥ ।

ವಿಮಹೀನಾಂ—ಅತ್ಯಧಿಕವಾದ ಮಾಹಾತ್ಮ್ಯವುಳ್ಳ ದೇವತೆಗಳ ನಡುವೆ । ಇಂದ್ರಮಿತ್—ಇಂದ್ರನನ್ನೇ । ಮೇಧೇ—ಯಜ್ಞದಲ್ಲಿ । ಮರ್ತ್ಯಃ—ಮಾನವನು । ವೃಣೀತ—ಸ್ತುತಿಸಿ ಆರಿಸುತ್ತಾನೆ । ಸನಿಷ್ಯುಃ—ಧನವನ್ನು ಅಪೇಕ್ಷಿಸುವ ಸ್ತೋತೃವೂ ಸಹ । ಊತಯೇ—ರಕ್ಷಣಾರ್ಥವಾಗಿ । ಇಂದ್ರಂ—ಇಂದ್ರನನ್ನೇ (ಆರಿಸುತ್ತಾನೆ).

। ಭಾವಾರ್ಥ ।

ಅತ್ಯಧಿಕವಾದ ಮಾಹಾತ್ಮ್ಯವುಳ್ಳ ದೇವತೆಗಳ ನಡುವೆ ಮಾನವನು ಇಂದ್ರನನ್ನೇ ಯಜ್ಞದಲ್ಲಿ ಸ್ತುತಿಸಿ ತನ್ನ ಪೂಜೆಗಾಗಿ ಆರಿಸುತ್ತಾನೆ. ಧನವನ್ನು ಅಪೇಕ್ಷಿಸುವ ಸ್ತೋತೃವೂ ಸಹ ರಕ್ಷಣಾರ್ಥವಾಗಿ ಇಂದ್ರನನ್ನೇ ಆರಿಸುತ್ತಾನೆ.

## English Translation

The mortal (adorer) selects at the sacrifice Indra from among the mighty (gods): he who is desirous of wealth (worships) Indra for protection.

। ಸಂಹಿತಾಪಾಠಃ ।

ಅರ್ವಾಂಚಂ ತ್ವಾ ಪುರುಷ್ಟುತ ಪ್ರಿಯಮೇಧಸ್ತುತಾ ಹರೀ ।

ಸೋಮಪೇಯಾಯ ವಕ್ಷತಃ ॥ ೪೫ ॥

॥ ಪದಪಾಠಃ ॥

ಅರ್ವಾಂಚಂ । ತ್ವಾ । ಪುರುಽಸ್ತುತ । ಪ್ರಿಯಮೇಧಽಸ್ತುತಾ । ಹರೀ ಇತಿ ।

ಸೋಮಽಪೇಯಾಯ । ವಕ್ಷತಃ ॥ ೪೫ ॥

॥ ಸಾಯಣಭಾಷ್ಯಂ ॥

ಹೇ ಪುರುಷ್ಟುತ ಬಹುಭಿಃ ಸ್ತುತೇಂದ್ರ ಪ್ರಿಯಮೇಧಸ್ತುತಾ ಪ್ರಿಯಮೇಧೈಃ ಪ್ರಿಯಯಜ್ಞೈರೃಷಿಭಿಃ ಸ್ತುತೌ ॥ ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಸುಪಾಂ ಸುಲುಗಿತ್ಯಾಕಾರಃ ॥ ಈದೃಶೌ ಹರೀ ಅಶ್ವೌ ಸೋಮಪೇಯಾಯ ಸೋಮಪಾನಾರ್ಥಂ ತ್ವಾಮರ್ವಾಂಚಮಸ್ಮದಭಿಮುಖಂ ವಕ್ಷತಃ । ವಹತಾಂ ॥

॥ ಪ್ರತಿಪದಾರ್ಥ ॥

ಪುರುಷ್ಟುತ—ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ । ಪ್ರಿಯಮೇಧಸ್ತುತಾ—ನಿನಗೆ ಪ್ರಿಯರಾದ ಋತ್ವಿಕ್ಕುಗಳಿಂದ ಸ್ತುತವಾದ । ಹರೀ—ನಿನ್ನ ಅಶ್ವಗಳು । ತ್ವಾ—ನಿನ್ನನ್ನು । ಸೋಮಪೇಯಾಯ—ಸೋಮಪಾನಾರ್ಥವಾಗಿ । ಅರ್ವಾಂಚಂ—ನಮಗಭಿಮುಖವಾಗಿ । ವಕ್ಷತಃ—ಕರೆತರಲಿ.

॥ ಭಾವಾರ್ಥ ॥

ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ, ನಿನಗೆ ಪ್ರಿಯರಾದ ಋತ್ವಿಕ್ಕುಗಳಿಂದ ಸ್ತುತವಾದ ನಿನ್ನ ಅಶ್ವಗಳು ನಿನ್ನನ್ನು ಸೋಮಪಾನಾರ್ಥವಾಗಿ ನಮಗಭಿಮುಖವಾಗಿ ಕರೆತರಲಿ.

## English Translation

May your horses, praised by the pious priests, bring you, who are the praised of many, down to drink the Soma.

॥ ಸಂಹಿತಾಪಾಠಃ ॥

ಶತಮಹಂ ತಿರಿಂದಿರೇ ಸಹಸ್ರಂ ಪರ್ಶಾವಾ ದದೇ ।

ರಾಧಾಂಸಿ ಯಾದ್ವಾನಾಂ ॥ ೪೬ ॥

॥ ಪದಪಾಠಃ ॥

ಶತಂ । ಅಹಂ । ತಿರಿಂದಿರೇ । ಸಹಸ್ರಂ । ಪರ್ಶೌ । ಆ । ದದೇ ।

ರಾಧಾಂಸಿ । ಯಾದ್ವಾನಾಂ ॥ ೪೬ ॥

। ಸಾಯಣಭಾಷ್ಯಂ ।

ಇದಮಾದಿಕೇನ ತೃಚೇನ ತಿರಿಂದಿರಸ್ಯ ರಾಜ್ಞೋ ದಾನಂ ಸ್ತೂಯತೇ । ಪರ್ಶೌ ಪರಶುನಾಮ್ನಃ ಪುತ್ರೇ ॥ ಉಪಚಾರಾತ್ತಸ್ಮಿನ್ ಜನಕಶಬ್ದಃ ॥ ತಿರಿಂದಿರ ಏತತ್ಸಂಜ್ಞೇ ರಾಜನಿ ಯಾದ್ವಾನಾಂ । ಯದುರಿತಿ ಮನುಷ್ಯನಾಮ । ಯದವ ಏವ ಯಾದ್ವಾಃ ॥ ಸ್ವಾರ್ಥಿಕಸ್ತದ್ಧಿತಃ ॥ ತೇಷಾಂ ಮಧ್ಯೇಽಹಂ ಶತಂ ಶತ-ಸಂಖ್ಯಾಕಾನಿ ಸಹಸ್ರಂ ಸಹಸ್ರಸಂಖ್ಯಾಕಾನಿ ಚ ರಾಧಾಂಸಿ ಧನಾನ್ಯಾ ದದೇ । ಸ್ವೀಕರೋಮಿ । ಯದ್ವಾ । ಯಾದ್ವಾನಾಂ ಯದುಕುಲಜಾನಾಮನ್ಯೇಷಾಂ ರಾಜ್ಞಾಂ ಸ್ವಭೂತಾನಿ ರಾಧಾಂಸಿ ಬಲಾದಪಹೃತಾನಿ ತಿರಿಂದಿರೇ ವರ್ತಮಾನಾನ್ಯಹಂ ಪ್ರಾಪ್ನೋಮಿ ॥

। ಪ್ರತಿಪದಾರ್ಥ ।

ಪರ್ಶೌ—ಪರಶುವಿನ ಪುತ್ರನೂ । ತಿರಿಂದಿರೇ—ತಿರಿಂದಿರಸಂಜ್ಞಕನೂ ಆದ ರಾಜನಿಂದ । ಯಾದ್ವಾನಾಂ—ಮಾನವರ ಮಧ್ಯದಲ್ಲೆಲ್ಲಾ । ಅಹಂ—ನಾನೊಬ್ಬನೇ । ಶತಂ—ಶತಸಂಖ್ಯಾಕವಾದುದೂ । ಸಹಸ್ರಂ—ಸಹಸ್ರ ಸಂಖ್ಯಾಕವಾದುದೂ ಆದ । ರಾಧಾಂಸಿ—ಧನಗಳನ್ನು । ಆ ದದೇ—ಸ್ವೀಕರಿಸುತ್ತೇನೆ.

। ಭಾವಾರ್ಥ ।

ಪರಶುವಿನ ಪುತ್ರನೂ, ತಿರಿಂದಿರಸಂಜ್ಞಕನೂ ಆದ ರಾಜನಿಂದ ಮಾನವರ ಮಧ್ಯದಲ್ಲೆಲ್ಲಾ ನಾನೊಬ್ಬನೇ ಶತಸಂಖ್ಯಾಕವಾದುದೂ, ಸಹಸ್ರಸಂಖ್ಯಾಕವಾದುದೂ ಆದ ಧನಗಳನ್ನು ಸ್ವೀಕರಿಸುತ್ತೇನೆ.

## English Translation

I have accepted from Tirindira, the son of Parsu, hundreds and thousands of the treasures of men.

। ಸಂಹಿತಾಪಾಠಃ ।

ತ್ರೀಣಿ ಶತಾನ್ಯರ್ವತಾಂ ಸಹಸ್ರಾ ದಶ ಗೋನಾಂ ।
ದದುಷ್ಪಜ್ರಾಯ ಸಾಮ್ನೇ ॥ ೪೭ ॥

। ಪದಪಾಠಃ ।

ತ್ರೀಣಿ । ಶತಾನಿ । ಅರ್ವತಾಂ । ಸಹಸ್ರಾ । ದಶ । ಗೋನಾಂ ।
ದದುಃ । ಪಜ್ರಾಯ । ಸಾಮ್ನೇ ॥ ೪೭ ॥

। ಸಾಯಣಭಾಷ್ಯಂ ।

ಪೂರ್ವಸ್ಯಾಮೃಚಿ ಸ್ವಸಂಪ್ರದಾನಕಂ ದಾನಮುಕ್ತಂ । ಅಧುನಾನ್ಯೇಭ್ಯೋಽಪ್ಯೃಷಿಭ್ಯಸ್ತಿರಿಂದಿರೋ ಬಹು ದಾನಂ ದತ್ತವಾನಿತ್ಯಾಹ। ಅರ್ವತಾಂ ಗಂತ್ರೀಣಾಮಶ್ವಾನಾಂ ತ್ರೀಣಿ ಶತಾನಿ ಗೋನಾಂ ಗವಾಂ ದಶ ದಶಗುಣಿತಾನಿ ಸಹಸ್ರಾ ಸಹಸ್ರಾಣಿ ಚ ಪಜ್ರಾಯ ಸ್ತುತೀನಾಂ ಪ್ರಾರ್ಜಕಾಯ ಸಾಮ್ನ ಏತತ್ಸಂಜ್ಞಾಯರ್ಷಯೇ। ಯದ್ವಾ। ಸಾಮ್ನೇ। ಸಾಮ ಸ್ತೋತ್ರಂ। ತದ್ವತೇ । ಪಜ್ರಾಯ ಪಜ್ರಕುಲಜಾತಾಯ ಕಕ್ಷೀವತೇ ದದುಃ। ತಿರಿಂದಿರಾಖ್ಯಾ ರಾಜಾನೋ ದತ್ತವಂತಃ॥

। ಪ್ರತಿಪದಾರ್ಥ ।

ಅರ್ವತಾಂ—ಅಶ್ವಗಳ । ತ್ರೀಣಿ ಶತಾನಿ—ಮುನ್ನೂರು ಸಂಖ್ಯೆಗಳನ್ನೂ । ಗೋನಾಂ—ಗೋವುಗಳ । ದಶ ಸಹಸ್ರಾ—ಹತ್ತು ಸಹಸ್ರಸಂಖ್ಯೆಗಳನ್ನೂ । ಪಜ್ರಾಯ—ಪಜ್ರನೆಂಬ । ಸಾಮ್ನೇ—ಸ್ತುತಿಕರ್ತನಾದ ಋಷಿಗೆ । ದದುಃ—ತಿರಿಂದಿರರೆಂಬ ರಾಜರು ಕೊಟ್ಟರು.

। ಭಾವಾರ್ಥ ।

ತಿರಿಂದಿರಸಂಜ್ಞಕರಾದ ರಾಜರು ಪಜ್ರನೆಂಬ ಸ್ತುತಿಕರ್ತನಾದ ಋಷಿಗೆ ಮುನ್ನೂರು ಅಶ್ವಗಳನ್ನೂ ಹತ್ತು ಸಹಸ್ರ ಗೋವುಗಳನ್ನೂ ದಾನಮಾಡಿದರು.

English translation

(These princes) have given to the chaunter Pajra three hundred horses, ten thousand cattle.

॥ ಸಂಹಿತಾಪಾಠಃ ॥

ಉದಾನಟ್ಕಕುಹೋ ದಿವಮುಷ್ಟ್ರಾಞ್ಚತುರ್ಯುಜೋ ದದತ್।

ಶ್ರವಸಾ ಯಾದ್ವಂ ಜನಂ ॥ ೪೮ ॥

॥ ಪದಪಾಠಃ ॥

ಉತ್ । ಆನಟ್ । ಕಕುಹಃ । ದಿವಂ । ಉಷ್ಟ್ರಾನ್ । ಚತುಃಽಯುಜಃ । ದದತ್ ।

ಶ್ರವಸಾ । ಯಾದ್ವಂ । ಜನಂ ॥ ೪೮ ॥

। ಸಾಯಣಭಾಷ್ಯಂ ।

ಅಯಂ ರಾಜಾ ಕಕುಹ ಉಚ್ಛ್ರಿತಃ ಸಞ್ಛ್ರವಸಾ ಕೀರ್ತ್ಯಾ ದಿವಂ ಸ್ವರ್ಗಮುದಾನಟ್ ।

**ಉತ್ಕೃಷ್ಟತರಂ ವ್ಯಾಪ್ನೋತ್ । ಕಿಂ ಕುರ್ವನ್ । ಚತುರ್ಯುಜಶ್ಚತುರ್ಭಿಃ ಸ್ವರ್ಣಭಾರೈರ್ಯುಕ್ತಾನುಷ್ಟ್ರಾನ್ ದದತ್ ಪ್ರಯಚ್ಛನ್ । ತಥಾ ಯಾದ್ವಂ ಜನಂ ಚ ದಾಸತ್ವೇನ ಪ್ರಯಚ್ಛನ್ ।**

॥ ಪ್ರತಿಪದಾರ್ಥ ॥

**ಚತುರ್ಯುಜಃ**—ನಾಲ್ಕು ಸುವರ್ಣಭಾರಗಳನ್ನು ಹೊತ್ತಿರುವ | **ಉಷ್ಟ್ರಾನ್**—ಒಂಟೆಗಳನ್ನು | **ದದತ್**—ದಾನಮಾಡುತ್ತಲೂ | **ಯಾದ್ವಂ ಜನಂ**—ಯಾದ್ವಸಂಜ್ಞಕರಾದ ಜನರನ್ನು ನಮಗೆ ದಾಸರನ್ನಾಗಿ ಮಾಡುತ್ತಲೂ (ತತ್ಫಲವಾಗಿ) | **ತಿರಿಂದಿರಃ**—ತಿರಿಂದಿರನೆಂಬ ರಾಜನು | **ಕಕುಹಃ**—ಉಚ್ಚಾಸ್ಥಿತಿಯನ್ನು ಹೊಂದಿ | **ಶ್ರವಸಾ**—ಕೀರ್ತಿಯುತನಾಗಿ | **ದಿವಂ**—ಸ್ವರ್ಗವನ್ನು | **ಉದಾನಟ್**—ಪಡೆದನು.

॥ ಭಾವಾರ್ಥ ॥

ನಾಲ್ಕು ಸುವರ್ಣಭಾರಗಳನ್ನು ಹೊತ್ತಿರುವ ಒಂಟೆಗಳನ್ನು ದಾನಮಾಡುತ್ತಲೂ, ಯಾದ್ವಸಂಜ್ಞಕರಾದ ಜನರನ್ನು ನಮಗೆ ದಾಸರನ್ನಾಗಿ ಮಾಡುತ್ತಲೂ ತತ್ಫಲವಾಗಿ ತಿರಿಂದಿರನೆಂಬ ರಾಜನು ಉಚ್ಚಾಸ್ಥಿತಿಯನ್ನು ಹೊಂದಿ ಕೀರ್ತಿಯುತನಾಗಿ ಸ್ವರ್ಗವನ್ನು ಪಡೆದನು.

## English Translation

The exalted (prince) has been raised by fame to heaven, for he has given camels laden with four (loads of gold), and Yadava people (as slaves).



## ಏಳನೆಯ ಸೂಕ್ತವು.

॥ ಸಾಯಣಭಾಷ್ಯಂ ॥

**ಪ್ರ ಯದ್ವ ಇತಿ ಷಟ್ತ್ರಿಂಶದೃಚಂ ದ್ವಿತೀಯಂ ಸೂಕ್ತಂ ಕಣ್ವಗೋತ್ರಸ್ಯ ಪುನರ್ವತ್ಸಸ್ಯಾರ್ಷಂ ಮಾರುತಂ ಗಾಯತ್ರಂ । ತಥಾ ಚಾನುಕ್ರಾಂತಂ । ಪ್ರ ಯದ್ವಃ ಷಟ್ತ್ರಿಂಶತ್ಪುನರ್ವತ್ಸೋ ಮಾರುತಮಿತಿ ॥ ವ್ಯೂಳ್ಹೇ ದಶರಾತ್ರೇ ಪ್ರಥಮೇ ಛಂದೋಮ ಆಗ್ನಿಮಾರುತಶಸ್ತ್ರ ಇದಂ ಸೂಕ್ತಂ ಮಾರುತನಿವಿದ್ಧಾನಂ । ಸೂತ್ರಿತಂ ಚ । ಪ್ರ ಯದ್ವಸ್ತ್ರಿಷ್ಟುಭಂ ದೂತಂ ವ ಇತ್ಯಾಗ್ನಿಮಾರುತಂ । ಆ. ೮-೯ । ಇತಿ ॥**

ಅನುವಾದವು—**ಪ್ರ ಯದ್ವಃ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಮೂವತ್ತಾರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರದ ಪುನರ್ವತ್ಸನೆಂಬುವನು ಋಷಿಯು; ಮರುತ್ತುಗಳು ದೇವತೆಯು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪ್ರ ಯದ್ವಃ ಷಟ್ತ್ರಿಂಶತ್ಪುನರ್ವತ್ಸೋ ಮಾರುತಂ** ಎಂದು ಹೇಳಿರುವುದು. ವ್ಯೂಳ್ಹವೆಂಬ ದಶರಾತ್ರಯಾಗದಲ್ಲಿ ಪ್ರಥಮಛಂದೋಮಮಂತ್ರಪಠನಕಾಲದಲ್ಲಿ ಆಗ್ನಿಮಾರುತಶಸ್ತ್ರಮಂತ್ರಗಳ ಮಧ್ಯದಲ್ಲಿ ಈ ಸೂಕ್ತವನ್ನು ಮರುದ್ದೇವತಾಕವಾದ ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ಯದ್ವಸ್ತ್ರಿಷ್ಟುಭಂ ದೂತಂ ವ ಇತ್ಯಾಗ್ನಿಮಾರುತಂ** ಎಂಬ ಸೂತ್ರದಿಂದ (ಆ. ೮-೯) ವಿನ್ಯಸ್ತವಾಗಿರುವುದು.

## ಸೂಕ್ತ—೭

ಮಂಡಲ—೮ । ಅನುವಾಕ—೨ । ಸೂಕ್ತ—೭ ।
ಅಷ್ಟಕ—೫ । ಅಧ್ಯಾಯ—೮ । ವರ್ಗ—೧೮, ೧೯, ೨೦, ೨೧, ೨೨, ೨೩, ೨೪, ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೩೬ ।
ಋಷಿಃ—ಪುನರ್ವತ್ಸಃ ಕಾಣ್ವಃ ।
ದೇವತಾ—ಮರುತಃ ।
ಛಂದಃ—ಗಾಯತ್ರೀ ॥

। ಸಂಹಿತಾಪಾಠಃ ।

ಪ್ರ ಯದ್ವಸ್ತ್ರಿಷ್ಟುಭಮಿಷಂ ಮರುತೋ ವಿಪ್ರೋ ಅಕ್ಷರತ್ ।
ವಿ ಪರ್ವತೇಷು ರಾಜಥ ॥ ೧ ॥

॥ ಪದಪಾಠಃ ॥

ಪ್ರ । ಯತ್ । ವಃ । ತ್ರಿಽಸ್ತುಭಂ । ಇಷಂ । ಮರುತಃ । ವಿಪ್ರಃ । ಅಕ್ಷರತ್ ।
ವಿ । ಪರ್ವತೇಷು । ರಾಜಥ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮರುತೋ ಮಿತರಾವಿಣೋ ಮಿತರೋಚಿನೋ ವಾ ಏತತ್ಸಂಜ್ಞಾ ಮಾಧ್ಯಮಿಕಾ ದೇವಗಣಾಃ ॥ ಪಾದಾದಿತ್ವಾದಪಾದಾದಾವಿತಿ ಪರ್ಯುದಾಸಾದಾಷ್ಟಮಿಕನಿಘಾತಾಭಾವೇ ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ ॥ ವೋ ಯುಷ್ಮಭ್ಯಂ ವಿಪ್ರೋ ಮೇಧಾವೀ ಸ್ತೋತಾ ತ್ರಿಷ್ಟುಭಂ ತ್ರಿಷು ಸವನೇಷು ಪ್ರಶಸ್ಯಾಂ ತ್ರಿಭಿರ್ದೇವೈಃ ಸ್ತುತಾಂ ವಾ ಯದ್ವಾ ತ್ರಿಷ್ಟುಪ್ಛಂದಸಾ ಸುಬದ್ಧಾಂ ಮಾಧ್ಯಂದಿನಸವನಿಕೀಮಿಷಂ ಸೋಮಲಕ್ಷಣಮನ್ನಂ ಯದ್ಯದಾ ಪ್ರಾಕ್ಷರತ್ ಪ್ರಾಸಿಂಚತ್ ಅಗ್ನೌ ಪ್ರಾಕ್ಷಿಪತ್ । ಯದ್ವಾ । ತ್ರಿಷ್ಟುಭಂ ತ್ರಿಷ್ಟುಪ್ಛಂದಸ್ಕಂ ಸ್ತೋತ್ರಮಿಷಂ ಸೋಮಂ ಚೇತಿ ಯೋಜ್ಯಂ । ತದಾನೀಂ ಯೂಯಂ ಪರ್ವತೇಷು ಪರ್ವವತ್ಸು ಶಿಲೋಚ್ಚಯೇಷು ವಿ ರಾಜಥ । ತೇನ ಸೋಮೇನ ಲಬ್ಧಬಲಾಃ ಸಂತೋ ವಿಶೇಷೇಣ ದೀಪ್ತಾ ಭವಥ ॥

। ಪ್ರತಿಪದಾರ್ಥ ।

ಮರುತಃ—ಎಲೈ ಮರುತ್ತುಗಳೇ । ವಃ—ನಿಮ್ಮನ್ನುದ್ದೇಶಿಸಿ । ವಿಪ್ರಃ—ಮೇಧಾವಿಯಾದ ಆರಾಧಕನು । ತ್ರಿಷ್ಟುಭಂ—ಮೂರು ಸವನಕಾಲಗಳಲ್ಲೂ ಪ್ರಶಂಸಿತವಾಗುವ । ಇಷಂ—ಸೋಮರಸವಾದ ಅನ್ನವನ್ನು । ಯತ್—ಯಾವಾಗ । ಪ್ರ ಅಕ್ಷರತ್—ಅರ್ಪಿಸುವನೋ (ಆಗ) । ಪರ್ವತೇಷು—ಪರ್ವತಪ್ರದೇಶಗಳಲ್ಲಿ । ವಿ ರಾಜಥ—ನೀವು ಪ್ರಕಾಶಿಸುತ್ತೀರಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ನಿಮ್ಮನ್ನುದ್ದೇಶಿಸಿ ಮೇಧಾವಿಯಾದ ಆರಾಧಕನು ಮೂರು ಸವನಕಾಲಗಳಲ್ಲಿಯೂ ಪ್ರಶಂಸಿತವಾಗುವ ಸೋಮರೂಪವಾದ ಅನ್ನವನ್ನು ಯಾವಾಗ ಅರ್ಪಿಸುವನೋ, ಆಗ ಪರ್ವತಪ್ರದೇಶಗಳಲ್ಲಿ ನೀವು ಪ್ರಭುತ್ವಮಾಡುತ್ತಾ ಪ್ರಕಾಶಿಸುತ್ತೀರಿ.

## English Translation

When the pious worshipper offers you, Maruts, food at the three diurnal rites, then you have sovereignty over the mountains.

॥ ಸಂಹಿತಾಪಾಠಃ ॥

ಯದಂಗ ತವಿಷೀಯವೋ ಯಾಮಂ ಶುಭ್ರಾ ಅಚಿಧ್ವಂ ।
ನಿ ಪರ್ವತಾ ಅಹಾಸತ ॥ ೨ ॥

॥ ಪದಪಾಠಃ ॥

ಯತ್ । ಅಂಗ । ತವಿಷೀಽಯವಃ । ಯಾಮಂ । ಶುಭ್ರಾಃ । ಅಚಿಧ್ವಂ ।
ನಿ । ಪರ್ವತಾಃ । ಅಹಾಸತ ॥ ೨ ॥

॥ ಸಾಯಣಭಾಷ್ಯಂ ॥

ಹೇ ತವಿಷೀಯವಃ । ತವಿಷೀತಿ ಬಲನಾಮ । ತಾಂ ಕಾಮಯಮಾನಾಃ । ಯದ್ವಾ । ಬಲಿಯುಕ್ತಾಃ । ಹೇ ಶುಭ್ರಾಃ । ಶೋಭಮಾನಾ ಅಂಗ ಹೇ ಮರುತಃ ಯಾಮಂ । ಯಾತಿ ಗಚ್ಛತೀತಿ ಯಾಮೋ ರಥಃ । ತಂ ಯದ್ಯದಾಚಿಧ್ವಂ ಸಮಚಿನುಧ್ವಂ ಅಶ್ವಾದಿಭಿಃ ಸಾಧನೈಃ ಸಂಚಿತಂ ಸಂಶ್ಲಿಷ್ಟಂ ಕುರುಥ ಗಮನಾರ್ಥಂ ತದಾನೀಂ ಪರ್ವತಾ ಗಿರಯೋಽಪಿ ನ್ಯಹಾಸತ । ನಿತರಾಂ ಗಚ್ಛಂತಿ । ಯುಷ್ಮದ್ರಥವೇಗಾದ್ಭೀತಾಃ ಸಂತಃ ಸ್ವಸ್ಥಾನಾತ್ಪ್ರಚಲಂತಿ ॥ ಓಹಾಙ್ ಗತೌ । ಛಾಂದಸೋ ಲುಙ್ ॥

॥ ಪ್ರತಿಪದಾರ್ಥ ॥

ತವಿಷೀಯವಃ—ಅಧಿಕವಾದ ಬಲವುಳ್ಳವರೂ । ಶುಭ್ರಾಃ—ಪ್ರಕಾಶಿಸುವವರೂ ಆದ । ಅಂಗ—ಎಲೈ ಮರುತ್ತುಗಳೇ । ಯಾಮಂ—ಗಮನಸಾಧನವಾದ ನಿಮ್ಮ ರಥವನ್ನು । ಯತ್—ಯಾವಾಗ । ಅಚಿಧ್ವಂ –ಅಶ್ವಾದಿಗಳೊಡನೆ ಯೋಜಿಸುವಿರೋ ಆಗ । ಪರ್ವತಾಃ—ಪರ್ವತಗಳೂ ಸಹ । ನಿ ಅಹಾಸತ—ನಿಮಗೆ ದಾರಿಬಿಡಲು ಚಲಿಸುತ್ತವೆ

॥ ಭಾವಾರ್ಥ ॥

ಅಧಿಕವಾದ ಬಲವುಳ್ಳವರೂ, ಪ್ರಕಾಶಿಸುವವರೂ ಆದ ಎಲೈ ಮರುತ್ತುಗಳೇ, ಗಮನಸಾಧನವಾದ ನಿಮ್ಮ ರಥವನ್ನು ಯಾವಾಗ ಅಶ್ವಾದಿಗಳೊಡನೆ ಯೋಜಿಸುವಿರೋ ಆಗ ಪರ್ವತಗಳೂ ಸಹ ನಿಮಗೆ ದಾರಿಬಿಡಲು ಚಲಿಸುತ್ತವೆ.

## English Translation

When, glorious and powerful (Maruts), you fit out your chariot, the mountains depart (from their places).

॥ ಸಂಹಿತಾಪಾಠಃ ॥

ಉದೀರಯಂತ ವಾಯುಭಿರ್ವಾಶ್ರಾಸಃ ಪೃಶ್ನಿಮಾತರಃ ।
ಧುಕ್ಷಂತ ಪಿಪ್ಯುಷೀಮಿಷಂ ॥ ೩ ॥

॥ ಪದಪಾಠಃ ॥

ಉತ್ । ಈರಯಂತ । ವಾಯುಽಭಿಃ । ವಾಶ್ರಾಸಃ । ಪೃಶ್ನಿಽಮಾತರಃ ।
ಧುಕ್ಷಂತ । ಪಿಪ್ಯುಷೀಂ । ಇಷಂ ॥ ೩ ॥

॥ ಸಾಯಣಭಾಷ್ಯಂ ॥

ವಾಶ್ರಾಸೋ ವಾಶನಶೀಲಾಃ ಶಬ್ದಕಾರಿಣಃ ಪೃಶ್ನಿಮಾತರಃ । ಪೃಶ್ನಿರ್ಮಾಧ್ಯಮಿಕಾ ವಾಕ್ । ಸಾ ಮಾತಾ ಜನನೀ ಯೇಷಾಂ ತೇ ತಥೋಕ್ತಾಃ ॥ ಋತಶ್ಛಂದಸೀತಿ ಕಪಃ ಪ್ರತಿಷೇಧಃ ॥ ಈದೃಶಾ ಮರುತೋ ವಾಯುಭಿಃ । ವಾಂತಿ ಗಚ್ಛಂತೀತಿ ವಾಯವಃ ಪೃಷತ್ಯಃ । ಪೃಷತೀಭಿರ್ವಾಹನಭೂತಾಭಿಃ ಸ್ವಾಯವಯಭೂತೈರ್ವಾಯುಭಿರೇವ ವೋದೀರಯಂತ । ಉದ್ಗಮಯಂತಿ ಮೇಘಾದಿಕಂ । ತಥಾ ಪಿಪ್ಯುಷೀಂ ವರ್ಧಯಿತ್ರೀಮಿ ಷಮನ್ನಂ ಚ ಸ್ತೋತೃಭ್ಯೋ ಧುಕ್ಷಂತ । ದುಹಂತಿ ॥

॥ ಪ್ರತಿಪದಾರ್ಥ ॥

ವಾಶ್ರಾಸಃ—ಶಬ್ದಮಾಡತಕ್ಕವರೂ । ಪೃಶ್ನಿಮಾತರಃ—ಪೃಶ್ನಿಪುತ್ರರೂ ಆದ ಮರುತ್ತುಗಳು । ವಾಯುಭಿಃ—ತಮ್ಮದೇ ಅವಯವಗಳಾದ ವಾಯುಗಳೊಂದಿಗೆ । ಉದೀರಯಂತ—ಗುಡುಗಿನ ರೂಪದ ಶಬ್ದವನ್ನು ಮಾಡುತ್ತಾರೆ । ಪಿಪ್ಯುಷೀಂ—ವರ್ಧಕವಾದ । ಇಷಂ—ಅನ್ನವನ್ನು । ಧುಕ್ಷಂತ—ಸ್ತೋತೃಗಳಿಗೆ ಕೊಡುತ್ತಾರೆ.

॥ ಭಾವಾರ್ಥ ॥

ಶಬ್ದಮಾಡತಕ್ಕವರೂ, ಪೃಶ್ನಿಪುತ್ರರೂ ಆದ ಮರುತ್ತುಗಳು ತಮ್ಮದೇ ಅವಯವಗಳಾದ ವಾಯುಗಳೊಂದಿಗೆ

ಗುಡುಗಿನ ರೂಪದ ಶಬ್ದವನ್ನು ಮಾಡುತ್ತಾರೆ. ಮತ್ತು ಅವರು ವರ್ಧಕವಾದ ಅನ್ನವನ್ನು ಸ್ತೋತೃಗಳಿಗೆ ಕೊಡುತ್ತಾರೆ.

## English Translation

The loud-sounding sons of Prishni drive with their breezes (the clouds), they milk forth nutritious sustenance.

। ಸಂಹಿತಾಪಾಠಃ ।

ವಪಂತಿ ಮರುತೋ ಮಿಹಂ ಪ್ರ ವೇಪಯಂತಿ ಪರ್ವತಾನ್ ॥
ಯದ್ಯಾಮಂ ಯಾಂತಿ ವಾಯುಭಿಃ ॥ ೪ ॥

॥ ಪದಪಾಠಃ ॥

ವಪಂತಿ । ಮರುತಃ । ಮಿಹಂ । ಪ್ರ । ವೇಪಯಂತಿ । ಪರ್ವತಾನ್ ।
ಯತ್ । ಯಾಮಂ । ಯಾಂತಿ । ವಾಯುಽಭಿಃ ॥ ೪ ॥

॥ ಸಾಯಣಭಾಷ್ಯಂ ॥

ಮರುತ ಏತತ್ಸಂಜ್ಞಾ ದೇವಾ ಮಿಹಂ ವೃಷ್ಟಿಂ ವಪಂತಿ । ವಿಕಿರಂತಿ । ವಿಕ್ಷಿಪಂತಿ । ತಥಾ ಪರ್ವತಾನ್ ಗಿರೀನ್ ಪ್ರ ವೇಪಯಂತಿ । ಪ್ರಕಂಪಯಂತಿ । ಅಯಮರ್ಥಃ ಕದೇತಿ ಚೇತ್ । ಯದ್ಯದಾ ವಾಯುಭಿಃ ಸಾರ್ಧಂ ಯಾಮಂ ರಥಂ ಗಮನಂ ವಾ ಯಾಂತಿ ಪ್ರಾಪ್ನುವಂತಿ ತದಾನೀ-ಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । ವಾಯುಭಿಃ—ವಾಯುಗಳೊಡಗೂಡಿ । ಯಾಮಂ—ತಮ್ಮ ರಥವನ್ನು । ಯಾಂತಿ—ಹತ್ತುವರೋ (ಆಗ) । ಮರುತಃ—ಮರುತ್ತುಗಳು । ಮಿಹಂ—ವೃಷ್ಟಿಯನ್ನು । ವಪಂತಿ—ಸುರಿಸುತ್ತಾರೆ । ಪರ್ವತಾನ್—ಪರ್ವತಗಳನ್ನು । ಪ್ರ ವೇಪಯಂತಿ—ನಡುಗುವಂತೆ ಮಾಡುತ್ತಾರೆ.

॥ ಭಾವಾರ್ಥ ॥

ವಾಯುಗಳೊಡಗೂಡಿ ಮರುತ್ತುಗಳು ಯಾವಾಗ ತಮ್ಮ ರಥವನ್ನು ಹತ್ತುವರೋ, ಆಗ ಅವರು ವೃಷ್ಟಿಯನ್ನು ಸುರಿಸುತ್ತಾರೆ. ಪರ್ವತಗಳನ್ನು ನಡುಗುವಂತೆ ಮಾಡುತ್ತಾರೆ.

## English Translation

The Maruts scatter the rain, they shake the mountains, when they mount their chariot, with the winds.

॥ ಸಂಹಿತಾಪಾಠಃ ॥

ನಿ ಯದ್ಯಾಮಾಯ ವೋ ಗಿರಿರ್ನಿ ಸಿಂಧವೋ ವಿಧರ್ಮಣೇ ।

ಮಹೇ ಶುಷ್ಮಾಯ ಯೇಮಿರೇ ॥ ೫ ॥

॥ ಪದಪಾಠಃ ॥

ನಿ । ಯತ್ । ಯಾಮಾಯ । ವಃ । ಗಿರಿಃ । ನಿ । ಸಿಂಧವಃ । ವಿಽಧರ್ಮಣೇ ।

ಮಹೇ । ಶುಷ್ಮಾಯ । ಯೇಮಿರೇ ॥ ೫ ॥

॥ ಸಾಯಣಭಾಷ್ಯಂ ॥

ಹೇ ಮರುತಃ ವೋ ಯುಷ್ಮಾಕಂ ಯಾಮಾಯ ರಥಾಯ ಗಮನಾಯ ವಾ ಗಿರಿಃ ॥ ಸುಪಾಂ ಸುಲುಗಿತಿ ಜಸಃ ಸುಃ ॥ ಗಿರಯಃ ಪರ್ವತಾ ಯದ್ಯದಾ ನಿ ಯೇಮಿರೇ ಸ್ವಯಮೇವ ನಿಯಮ್ಯಂತೇ ತಥಾ ಸಿಂಧವಃ ಸ್ಯಂದನಶೀಲಾಃ ಸಮುದ್ರಾ ನದ್ಯೋ ವಾ ವಿಧರ್ಮಣೇ ವಿಧರಣಾಯ ಮಹೇ ಮಹತೇ ಶುಷ್ಮಾಯ ಶೋಷಕಾಯ ಯುಷ್ಮದೀಯಾಯ ಬಲಾಯ ನಿ ಯೇಮಿರೇ ಸ್ವಯಮೇವ ನಿಯಮ್ಯಂತೇ । ಗಿರಯೋ ನದ್ಯಶ್ಚ ಯುಷ್ಮದ್ಯಾಮಾದ್ಬಲಾಚ್ಚ ಭೀತ್ಯೈಕತ್ರೈಕಸ್ಥಾನೇ ನಿಯತಾ ವರ್ತಂತ ಇತ್ಯರ್ಥಃ । ತದಾನೀಂ ವಪಂತಿ ಮರುತೋ ಮಿಹಮಿತಿ ಶೇಷಃ ॥ ಯಮೇಃ ಕರ್ಮಕರ್ತರಿ ಲಿಟ್ । ಯದ್ವೃತ್ತಾನ್ನಿತ್ಯಮಿತಿ ನಿಘಾತಪ್ರತಿಷೇಧಃ ॥

॥ ಪ್ರತಿಪದಾರ್ಥ ॥

(ಎಲೈ ಮರುತ್ತುಗಳೇ) ವಃ—ನಿಮ್ಮ । ಯಾಮಾಯ—ಸಂಚಾರಕ್ಕಾಗಿ । ಯತ್—ಯಾವ ರೀತಿ । ಗಿರಿಃ—ಪರ್ವತಗಳು । ನಿ ಯೇಮಿರೇ—ನಮ್ರವಾಗುವುವೋ (ಅದೇ ರೀತಿ) । ಮಹೇ—ಮಹತ್ತಾದ । ಶುಷ್ಮಾಯ—ನಿಮ್ಮ ಬಲದ । ವಿಧರ್ಮಣೇ—ಸಮರ್ಥನೆಗಾಗಿ । ಸಿಂಧವಃ—ನದಿಗಳೂ ಸಹ । ನಿ (ಯೇಮಿರೇ)—ನಿಯಮಿತವಾದ ಪ್ರವಾಹಗಳುಳ್ಳವಾಗುತ್ತವೆ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ನಿಮ್ಮ ಸಂಚಾರಕ್ಕಾಗಿ ಯಾವ ರೀತಿ ಪರ್ವತಗಳು ನಮ್ರವಾಗುವುವೋ ಅದೇ ರೀತಿ ಮಹತ್ತಾದ ನಿಮ್ಮ ಬಲದ ಸಮರ್ಥನೆಗಾಗಿ ನದಿಗಳೂ ಸಹ ನಿಯಮಿತವಾದ ಪ್ರವಾಹಗಳುಳ್ಳವಾಗಿರುತ್ತವೆ.

## English Translation

The mountains are curbed, the rivers are restrained at your coming, for the upholding of your great strength

॥ ಸಂಹಿತಾಪಾಠಃ ॥

ಯುಷ್ಮಾ ಉ ನಕ್ತಮೂತಯೇ ಯುಷ್ಮಾನ್ದಿವಾ ಹವಾಮಹೇ ।
ಯುಷ್ಮಾನ್ಪ್ರಯತ್ಯಧ್ವರೇ ॥ ೬ ॥

॥ ಪದಪಾಠಃ ॥

ಯುಷ್ಮಾನ್ । ಊಂ ಇತಿ । ನಕ್ತಂ । ಊತಯೇ । ಯುಷ್ಮಾನ್ । ದಿವಾ । ಹವಾಮಹೇ ।
ಯುಷ್ಮಾನ್ । ಪ್ರSಯತಿ । ಅಧ್ವರೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯುಷ್ಮಾ ಉ ಯುಷ್ಮಾನೇವ ನಕ್ತಂ ರಾತ್ರಾವೂತಯೇ ರಕ್ಷಣಾರ್ಥಂ ಹವಾಮಹೇ । ದಿವಾಹ್ನಿ ಚ ಯುಷ್ಮಾನೇವಾಹ್ವಯಾಮಹೇ । ಅಧ್ವರೇ । ಧ್ವರೋ ನಾಸ್ತ್ಯಸ್ಮಿನ್ನಿತ್ಯಧ್ವರೋ ಯಾಗಃ ॥ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥ ಯಾಗೇ ಪ್ರಯತಿ ಪ್ರಗಚ್ಛತಿ ಪ್ರವರ್ತಮಾನೇ ಸತಿ ರಕ್ಷಣಾರ್ಥಂ ಯುಷ್ಮಾನೇವಾಹ್ವಯಾಮಹೇ ॥

॥ ಪ್ರತಿಪದಾರ್ಥ ॥

(ಎಲೈ ಮರುತ್ತುಗಳೇ) ಯುಷ್ಮಾನ್ ಉ—ನಿಮ್ಮನ್ನೇ । ನಕ್ತಂ—ರಾತ್ರಿಕಾಲದಲ್ಲೂ । ಊತಯೇ—ರಕ್ಷಣಾರ್ಥವಾಗಿ । ಹವಾಮಹೇ—ಕರೆಯುತ್ತೇವೆ । ಯುಷ್ಮಾನ್—ನಿಮ್ಮನ್ನೇ । ದಿವಾ—ಹಗಲುಕಾಲದಲ್ಲಿಯೂ ಕರೆಯುತ್ತೇವೆ । ಅಧ್ವರೇ-ಯಜ್ಞವು । ಪ್ರಯತಿ-ಪ್ರಾರಂಭವಾಗಿ ನಡೆಯುತ್ತಿರುವ ಕಾಲದಲ್ಲೂ । ಯುಷ್ಮಾನ್—ನಿಮ್ಮನ್ನೇ (ಕರೆಯುತ್ತೇವೆ).

॥ ಭಾವಾರ್ಥ ॥

ಎಲೈ ಮರುತ್ತುಗಳೇ, ರಾತ್ರಿಕಾಲದಲ್ಲೂ ರಕ್ಷಣಾರ್ಥವಾಗಿ ನಿಮ್ಮನ್ನೇ ಕರೆಯುತ್ತೇವೆ. ಹಗಲುಕಾಲದಲ್ಲೂ ನಿಮ್ಮನ್ನೇ ಕರೆಯುತ್ತೇವೆ. ಯಜ್ಞವು ಪ್ರಾರಂಭವಾಗಿ ನಡೆಯುತ್ತಿರುವ ಕಾಲದಲ್ಲೂ ನಿಮ್ಮನ್ನೇ ಕರೆಯುತ್ತೇವೆ.

## English Translation

We invoke you for protection by night, (we invoke) you by day, (we invoke) you when the sacrifice is in progress.

। ಸಂಹಿತಾಪಾಠಃ ।

ಉದು ತ್ಯೇ ಅರುಣಪ್ಸವಶ್ಚಿತ್ರಾ ಯಾಮೇಭಿರೀರತೇ ।

ವಾಶ್ರಾ ಅಧಿ ಷ್ಣುನಾ ದಿವಃ ॥ ೭ ॥

। ಪದಪಾಠಃ ।

ಉತ್ । ಊಂ ಇತಿ । ತ್ಯೇ । ಅರುಣऽಪ್ಸವಃ । ಚಿತ್ರಾಃ । ಯಾಮೇಭಿಃ । ಈರತೇ ।

ವಾಶ್ರಾಃ । ಅಧಿ । ಸ್ನುನಾ । ದಿವಃ ॥ ೭ ॥

। ಸಾಯಣಭಾಷ್ಯಂ ।

ತ್ಯೇ ತೇ ಪೂರ್ವೋಕ್ತಗುಣಾ ಅರುಣಪ್ಸವೋಽರುಣವರ್ಣರೂಪಾಶ್ಚಿತ್ರಾಶ್ಚಾಯನೀಯಾ ಆಶ್ಚರ್ಯಭೂತಾ ವಾ ವಾಶ್ರಾಃ ಶಬ್ದಕಾರಿಣಃ ಏವಂಭೂತಾ ಮರುತೋ ಯಾಮೇಭಿರ್ಯಾನ್ಯೈರ್ಯಾ-ನ್ಯೈರ್ದಿವೋಽಧಿ ದ್ಯುಲೋಕಸ್ಯೋಪರಿ ಸ್ನುನಾ ಸಾನುನಾ ಸಮುಚ್ಛ್ರಿತಪ್ರದೇಶೇನೋದೀರತೇ । ಉದ್ಗಚ್ಛಂತಿ । ಉ ಇತಿ ಪೂರಣಃ ॥ ಪದಾದಿಷು ಮಾಂಸ್ಪೃತ್ಸ್ನೂನಾಮುಪಸಂಖ್ಯಾನಮಿತಿ ಸಾನು-ಶಬ್ದಸ್ಯ ಸ್ನುಭಾವಃ ॥

। ಪ್ರತಿಪದಾರ್ಥ ॥

ತ್ಯೇ—ಪ್ರಸಿದ್ಧರೂ । ಅರುಣಪ್ಸವಃ—ಹೊಂಬಣ್ಣದ ರೂಪವುಳ್ಳವರೂ । ಚಿತ್ರಾಃ—ಆಕರ್ಷಕರೂ । ವಾಶ್ರಾಃ—ಶಬ್ದವನ್ನುಂಟುಮಾಡುವವರೂ ಆದ ಮರುತ್ತುಗಳು । ಯಾಮೇಭಿಃ—ತಮ್ಮ ರಥಗಳೊಡನೆ । ದಿವಃ ಅಧಿ—ಅಂತರಿಕ್ಷದ ಮೇಲ್ಭಾಗದಲ್ಲಿ । ಸ್ನುನಾ—ಉತ್ಯುನ್ನತವಾದ ಪ್ರದೇಶಗಳಲ್ಲಿ । ಉದೀರತೇ ಉ—ಸಂಚಾರಾರ್ಥವಾಗಿ ಹೊರಡುತ್ತಾರೆ.

॥ ಭಾವಾರ್ಥ ॥

ಪ್ರಸಿದ್ಧರೂ, ಹೊಂಬಣ್ಣದ ರೂಪವುಳ್ಳವರೂ, ಆಕರ್ಷಕರೂ, ಶಬ್ದಕಾರರೂ ಆದ ಮರುತ್ತುಗಳು ತಮ್ಮ ರಥಗಳೊಡನೆ ಅಂತರಿಕ್ಷದ ಮೇಲ್ಭಾಗದಲ್ಲಿ ಅತ್ಯುನ್ನತವಾದ ಪ್ರದೇಶಗಳಲ್ಲಿ ಸಂಚಾರಾರ್ಥವಾಗಿ ಹೊರಡುತ್ತಾರೆ.

## English Translation

Truly these purple-hued, wonderful, clamorous Maruts proceed with their chariots in the height above the sky.

॥ ಸಂಹಿತಾಪಾಠಃ ॥

ಸೃಜಂತಿ ರಶ್ಮಿಮೋಜಸಾ ಪಂಥಾಂ ಸೂರ್ಯಾಯ ಯಾತವೇ ।
ತೇ ಭಾನುಭಿರ್ವಿ ತಸ್ಥಿರೇ ॥ ೮ ॥

॥ ಪದಪಾಠಃ ॥

ಸೃಜಂತಿ । ರಶ್ಮಿಂ । ಓಜಸಾ । ಪಂಥಾಂ । ಸೂರ್ಯಾಯ । ಯಾತವೇ ।
ತೇ । ಭಾನುಽಭಿಃ । ವಿ । ತಸ್ಥಿರೇ ॥ ೮ ॥

॥ ಸಾಯಣಭಾಷ್ಯಂ ॥

ಕಾರೀರ್ಯಾಂ ಸೌರ್ಯಸ್ಯ ಹವಿಷಃ ಸೃಜಂತಿ ರಶ್ಮಿಮಿತ್ಯೇಷಾನುವಾಕ್ಯಾ । ಸೂತ್ರ್ಯತೇ ಹಿ । ಸೃಜಂತಿ ರಶ್ಮಿಮೋಜಸಾ ವಹಿಷ್ಠೇಭಿರ್ವಿಹರನ್ಯಾಸಿ ತಂತುಂ । ಆ. ೨. ೧೩ । ಇತಿ ॥

ತಚ್ಛಬ್ದಶ್ರುತೇರ್ಯಚ್ಛಬ್ದಾಧ್ಯಾಹಾರಃ । ಯೇ ಮರುತಃ ಸೂರ್ಯಾಯ ಸೂರ್ಯಸ್ಯ ॥ ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯೇತಿ ಚತುರ್ಥೀ ॥ ಯಾತವೇ ಗಂತುಂ ರಶ್ಮಿಂ ವ್ಯಾಪ್ತಂ ॥ ಅಶೇ ರಶ ಚೇತ್ಯಶ್ನೋತೇರೌಣಾದಿಕೋ ಮಿಪ್ರತ್ಯಯೋ ರಶಾದೇಶಶ್ಚ ॥ ಯದ್ವಾ । ರಶ್ಮಿಭಿಸ್ತೇಜೋಭಿರ್ಯುಕ್ತಂ ಪಂಥಾಂ ಪಂಥಾನಮೋಜಸಾ ಬಲೇನ ಸೃಜಂತಿ ಉತ್ಪಾದಯಂತಿ । ವೃತ್ರಾದಿಭಿರಾವೃತಂ ಸೂರ್ಯಪಥಮಾವರಕಸ್ಯ ವೃತ್ರಾದೇರಪನಯನೇನ ಜನಯಂತೀತ್ಯರ್ಥಃ । ತೇ ಮರುತೋ ಭಾನುಭಿಸ್ತೇಜೋಭಿರ್ವಿ ತಸ್ಥಿರೇ । ಕೃತ್ಸ್ನಂ ಜಗದ್ವ್ಯಾಪ್ಯಾವತಿಷ್ಠಂತೇ ॥

॥ ಪ್ರತಿಪದಾರ್ಥ ॥

(ಯೇ—ಯಾವ ಮರುತ್ತುಗಳು) । ಓಜಸಾ—ತಮ್ಮ ವೀರ್ಯದಿಂದ । ಸೂರ್ಯಾಯ—ಸೂರ್ಯನ । ಯಾತವೇ—ಸಂಚಾರಾರ್ಥವಾಗಿ । ರಶ್ಮಿಂ—ತೇಜೋಯುಕ್ತವಾದ । ಪಂಥಾಂ—ಮಾರ್ಗವನ್ನು । ಸೃಜಂತಿ—ನಿರ್ಮಿಸುವರೋ । ತೇ –ಅದೇ ಮರುತ್ತುಗಳು । ಭಾನುಭಿಃ—ತಮ್ಮ ಪ್ರಭೆಗಳೊಡನೆ । ವಿ ತಸ್ಥಿರೇ—ಸಕಲ ಜಗತ್ತನ್ನೂ ವ್ಯಾಪಿಸುತ್ತಾರೆ

॥ ಭಾವಾರ್ಥ ॥

ಯಾವ ಮರುತ್ತುಗಳು ತಮ್ಮ ವೀರ್ಯದಿಂದ ಸೂರ್ಯನ ಸಂಚಾರಾರ್ಥವಾಗಿ ತೇಜೋಯುಕ್ತವಾದ ಮಾರ್ಗವನ್ನು ನಿರ್ಮಿಸುವರೋ ಅದೇ ಮರುತ್ತುಗಳು ತಮ್ಮ ಪ್ರಭೆಗಳೊಡನೆ ಸಕಲ ಜಗತ್ತನ್ನೂ ವ್ಯಾಪಿಸುತ್ತಾರೆ.

## English Translation

They, who by their might open a radiant path for the sun to travel, they pervade (the world) with lustre.

॥ ವಿಶೇಷವಿಷಯಗಳು ॥

ಕಾಠಕೇಷ್ಟಿಯಲ್ಲಿ ಸೂರ್ಯದೇವತಾಕವಾದ ಹವಿರ್ಹೋಮದಲ್ಲಿ ಸೃಜಂತಿ ರಶ್ಮಿಂ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಸೃಜಂತಿ ರಶ್ಮಿಮೋಜಸಾ ವಹಿಷ್ಠೇಭಿರ್ಹರಸ್ವಾಸಿ ತಂತೀಂ ಎಂಬ ಸೂತ್ರದಿಂದ (ಆ. ೨-೧೩) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಇಮಾಂ ಮೇ ಮರುತೋ ಗಿರಮಿಮಂ ಸ್ತೋಮಮೃಭುಕ್ಷಣಃ ।
ಇಮಂ ಮೇ ವನತಾ ಹವಂ ॥ ೯ ॥

॥ ಪದಪಾಠಃ ॥

ಇಮಾಂ । ಮೇ । ಮರುತಃ । ಗಿರಂ । ಇಮಂ । ಸ್ತೋಮಂ । ಋಭುಕ್ಷಣಃ ।
ಇಮಂ । ಮೇ । ವನತ । ಹವಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಇಮಾಂ ಪುರೋವರ್ತಿನೀಂ ಮೇ ಮಮ ಗಿರಂ ಸ್ತುತಿರೂಪಾಂ ವಾಚಂ ವನತ । ಸಂಭಜತ । ಹೇ ಋಭುಕ್ಷಣಃ । ಮಹನ್ನಾಮೈತತ್ । ಮಹಾಂತಃ ॥ ಜಸಿಕೃತೋಽತ್ಸರ್ವನಾಮಸ್ಥಾನ ಇತ್ಯಕಾರಃ । ವಾ ಷಪೂರ್ವಸ್ಯ ನಿಗಮ ಇತಿ ದೀರ್ಘಾಭಾವಃ ॥ ತೇ ಯೂಯಮಿಮಂ ಸ್ತೋಮಂ ಸ್ತೋತ್ರಂ ಪ್ರಗೀತಮಂತ್ರಸಾಧ್ಯಂ ಮೇ ಮಮೇಮಂ ಪುರೋವರ್ತಿನಂ ಹವಮಾಹ್ವಾನರೂಪಂ ಚ ಯಜುಸ್ಸಂ ಮಂತ್ರಂ ವನತ । ಸಂಭಜತ । ಸೇವಧ್ವಂ ॥

॥ ಪ್ರತಿಪದಾರ್ಥ ॥

ಮರುತಃ—ಎಲೈ ಮರುತ್ತುಗಳಿರ । ಮೇ—ನನ್ನ । ಇಮಾಂ ಗಿರಂ—ಈ ಸ್ತುತಿರೂಪವಾದ ವಾಕ್ಕನ್ನು । ವನತ—ಸೇವಿಸಿರಿ । ಋಭುಕ್ಷಣಃ—ಮಹಾತ್ಮರಾದ ಎಲೈ ಮರುತ್ತುಗಳಿರ । ಇಮಂ ಸ್ತೋಮಂ—ಈ ಸ್ತೋತ್ರವನ್ನೂ । ಮೇ—ನನ್ನ । ಇಮಂ ಹವಂ—ಈ ಆಹ್ವಾನವನ್ನೂ ಮನ್ನಿಸಿರಿ.

॥ ಭಾವಾರ್ಥ ॥

ಎಲೈ ಮರುತ್ತುಗಳಿರ, ಸ್ತುತಿರೂಪವಾದ ನನ್ನ ಈ ಪ್ರಶಂಸಾವಾಕ್ಯಗಳನ್ನು ಸೇವಿಸಿರಿ. ಮಹಾತ್ಮರಾದ ಎಲೈ ಮರುತ್ತುಗಳಿರ, ಈ ನನ್ನ ಸ್ತೋತ್ರವನ್ನೂ ಆಹ್ವಾನವನ್ನೂ ಮನ್ನಿಸಿರಿ.

## English Translation

Accept, Maruts, this my praise, (accept), mighty ones, this my adoration, (accept) this my invocation.

॥ ಸಂಹಿತಾಪಾಠಃ ॥

ತ್ರೀಣಿ ಸರಾಂಸಿ ಪೃಶ್ನಯೋ ದುದುಹ್ರೇ ವಜ್ರಿಣೇ ಮಧು ।
ಉತ್ಸಂ ಕವಂಧಮುದ್ರಿಣಂ ॥ ೧೦ ॥

॥ ಪದಪಾಠಃ ॥

ತ್ರೀಣಿ । ಸರಾಂಸಿ । ಪೃಶ್ನಯಃ । ದುದುಹ್ರೇ । ವಜ್ರಿಣೇ । ಮಧು ।
ಉತ್ಸಂ । ಕವಂಧಂ । ಉದ್ರಿಣಂ ॥ ೧೦ ॥

॥ ಸಾಯಣಭಾಷ್ಯಂ ॥

ಪೃಶ್ನಯೋ ಮರುನ್ಮಾತೃಭೂತಾ ಗಾವೋ ವಜ್ರಿಣೇ ವಜ್ರವತ ಇಂದ್ರಾಯ ॥ ತಾದರ್ಥ್ಯೇ ಚತುರ್ಥೀ ॥ ಇಂದ್ರಾರ್ಥಂ ಮಧು ಮಧುರಂ ಕ್ಷೀರಾದಿಕಮಾಶ್ರಯಣದ್ರವ್ಯಂ ತ್ರೀಣಿ ಸರಾಂಸಿ ಸರ ಇವ ಸೋಮೈಃ ಪೂರಿತಾನಿ ತ್ರೀಣಿ ಸವನಾನಿ ತಿಷ್ವಪಿ ಸವನೇಷು ಶ್ರಯಣಾರ್ಥಂ ದುದುಹ್ರೇ । ದುದುಹಿರೇ । ಯದ್ವಾ । ಮಧು ಮಧುರಂ ಸೋಮಂ ವಜ್ರಿಣೇ ವಜ್ರಯುಕ್ತಾಯ ಮರುದ್ಗಣಾಯ ತ್ರೀಣಿ ಸರಾಂಸಿ ದ್ರೋಣಕಲಶಾಧವನೀಯಪೂತಭೃಲ್ಲಕ್ಷಣಾನಿ ಪ್ರತಿ ಪೃಶ್ನಯೋ ಮಾಧ್ಯಮಿಕಾ ವಾಚೋ ದುದುಹ್ರೇ । ವೃಷ್ಟಿದ್ವಾರಾ ದುಹಂತಿ । ಯದ್ವಾ । ಪೃಶ್ನಯ ಇತಿ ಮಾತೃವಾಚಿನಾ ಶಬ್ದೇನ ಪುತ್ರಾ ಉಚ್ಯಂತೇ । ಪೃಶ್ನಿಮಾತರೋ ಮರುತ ಇಂದ್ರಾರ್ಥಂ ತ್ರೀಣಿ ಸರಾಂಸಿ ದ್ರೋಣಕಲಶಾದೀನಿ ಮಧು ಮಧುನಾ ಸೋಮೇನ ಪೂರಯಿತುಮುತ್ಸಮುತ್ಸ್ರವಣಶೀಲಂ ಕವಂಧಮುದಕಮುದ್ರಿಣಮುದಕವಂತಂ ಮೇಘಂ ದುದುಹ್ರೇ । ದುಹತೇಃ ॥ ದುಹೇಶ್ಛಂದಸೋ ಲಿಟ್ । ಇರಯೋ ರ ಇತಿ ರೇಭಾವಃ । ಪಾದಾದಿತ್ವಾದನಿಘಾತಃ ॥

॥ ಪ್ರತಿಪದಾರ್ಥ ॥

ಪೃಶ್ನಯಃ—ಮರುತ್ತಿನ ಮಾತೃಗಳಾದ ಪೃಶ್ನಿಗಳು (ಗೋವುಗಳು) । ವಜ್ರಿಣೇ—ವಜ್ರಾಯುಧಧಾರಿಯಾದ ಇಂದ್ರನಿಗಾಗಿ । ಮಧು—ಮಧುರವಾದ ಕ್ಷೀರವನ್ನು । ತ್ರೀಣಿ ಸರಾಂಸಿ—ಮೂರು ಸರಸ್ಸುಗಳು ತುಂಬುವಹಾಗೆ । ದುದುಹ್ರೇ—ಕರೆದಿದ್ದಾರೆ । ಉತ್ಸಂ—ಸ್ರವಾಹಶೀಲವಾದ । ಕವಂಧಂ—ಉದಕವನ್ನೂ । ಉದ್ರಿಣಂ—ಉದಕಭರಿತವಾದ ಮೇಘವನ್ನೂ ಕರೆದಿದ್ದಾರೆ.

॥ ಭಾವಾರ್ಥ ॥

ಮರುತ್ತಿನ ಮಾತೃಗಳಾದ ಪೃಶ್ನಿಗಳು ವಜ್ರಾಯುಧಧಾರಿಯಾದ ಇಂದ್ರನಿಗಾಗಿ ಮಧುರವಾದ ಕ್ಷೀರವನ್ನು ಮೂರು ಸರಸ್ಸುಗಳು ತುಂಬುವಷ್ಟು ಕರೆದಿದ್ದಾರೆ. [ಮೂರು ಸವನಕಾಲಗಳಿಗೂ ಪರ್ಯಾಪ್ತವಾಗುವಂತೆ ಕರೆದಿದ್ದಾರೆ). ಪ್ರವಾಹಶೀಲವಾದ ಉದಕವನ್ನೂ, ಉದಕಭರಿತವಾದ ಮೇಘವನ್ನೂ ಕರೆದಿದ್ದಾರೆ.

## English Translation

The milch cows have filled for the thunderer three lakes of the sweet (beverage) from the dripping water-bearing cloud,

॥ ಸಂಹಿತಾಪಾಠಃ ॥

ಮರುತೋ ಯದ್ಧ ವೋ ದಿವಃ ಸುಮ್ನಾಯಂತೋ ಹವಾಮಹೇ।
ಆ ತೂ ನ ಉಪ ಗಂತನ ॥ ೧೧ ॥

॥ ಪದಪಾಠಃ ॥

ಮರುತಃ । ಯತ್ । ಹ । ವಃ । ದಿವಃ । ಸುಮ್ನಽಯಂತಃ । ಹವಾಮಹೇ ।
ಆ । ತು । ನಃ । ಉಪ । ಗಂತನ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯದ್ಧ ಯದಾ ಖಲು ವೋ ಯುಷ್ಮಾನ್ ಸುಮ್ನಾಯಂತಃ ಸುಮ್ನಂ ಸುಖಮಾತ್ಮನ ಇಚ್ಛಂತೋ ವಯಂ ದಿವೋ ದ್ಯುಲೋಕಾದ್ಧವಾಮಹೇ । ಸ್ತುತಿಭಿರಾಹ್ವಯಾಮಹೇ ಆ ತ್ವನಂತರಮೇವ ಶೀಘ್ರಂ ನೋಽಸ್ಮಾನುಪ ಗಂತನ । ಉಪಗಚ್ಛತ ॥ ಗಮೇರ್ಲೋಟಿ ತಪ್ತನಪ್ತನಥನಾಶ್ಚೇತಿ ತನಬಾದೇಶಃ ॥

॥ ಪ್ರತಿಪದಾರ್ಥ ॥

ಮರುತಃ—ಎಲೈ ಮರುತ್ತುಗಳೇ । ಸುಮ್ನಾಯಂತಃ—ಸುಖಾಪೇಕ್ಷಿಗಳಾದ ನಾವು । ಯದ್ಧ—ಯಾವಾಗ । ವಃ—ನಿಮ್ಮನ್ನು । ಹವಾಮಹೇ—ಕರೆಯುವೆವೋ । ಆ ತು—ಆ ಒಡನೆಯೇ । ದಿವಃ—ದ್ಯುಲೋಕದಿಂದ । ನಃ—ನಮ್ಮ ಅಭಿಮುಖವಾಗಿ । ಉಪ ಗಂತನ—ಬನ್ನಿರಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಸುಖಾಪೇಕ್ಷಿಗಳಾದ ನಾವು ಯಾವಾಗ ನಿಮ್ಮನ್ನು ಕರೆಯುವೆವೋ ಆ ಒಡನೆಯೇ, ದ್ಯುಲೋಕದಿಂದ ನಮ್ಮ ಸಮೀಪಕ್ಕೆ ದಯಮಾಡಿರಿ.

## English Translation

When, maruts, desirous of felicity, we invoke you from heaven, come unto us quickly.

॥ ಸಂಹಿತಾಪಾಠಃ ॥

ಯೂಯಂ ಹಿ ಷ್ಠಾ ಸುದಾನವೋ ರುದ್ರಾ ಋಭುಕ್ಷಣೋ ದಮೇ ।
ಉತ ಪ್ರಚೇತಸೋ ಮದೇ ॥ ೧೨ ॥

॥ ಪದಪಾಠಃ ॥

ಯೂಯಂ । ಹಿ । ಸ್ಥ । ಸುಽದಾನವಃ । ರುದ್ರಾಃ । ಋಭುಕ್ಷಣಃ । ದಮೇ ।
ಉತ । ಪ್ರಽಚೇತಸಃ । ಮದೇ ॥ ೧೨ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಸುದಾನವಃ ಶೋಭನದಾನಾ ಹೇ ರುದ್ರಾ ರುದ್ರಪುತ್ರಾಃ॥ ಪಾದಾದಿತ್ವಾದಾಮಂತ್ರಿತ ನಿಘಾತಾಭಾವಃ ॥ ಹೇ ಋಭುಕ್ಷಣೋ ಮಹಾಂತ ಉರುತೇಜಸ್ಕಾ ವಾ ಈದೃಶಾ ಹೇ ಮರುತಃ ಯೂಯಂ ಹಿ ಖಲು ದಮೇ ಯಜ್ಞಗೃಹೇ ಮದೇ ಮದಕರೇ ಸೋಮೇ ಪೀತೇ ಸತಿ ಪ್ರಚೇತಸಃ ಸ್ಥ । ಪ್ರಕೃಷ್ಟಜ್ಞಾನಾ ಭವಥ ॥

॥ ಪ್ರತಿಪದಾರ್ಥ ॥

**ಉತ**—ಮತ್ತು । **ಸುದಾನವಃ**—ಉದಾರವಾದ ದಾನಿಗಳೂ । **ರುದ್ರಾಃ**—ರುದ್ರಪುತ್ರರೂ । **ಋಭುಕ್ಷಣಃ**—ಅತಿಶಯವಾದ ತೇಜಸ್ಸುಳ್ಳವರೂ ಆದ ಎಲೈ ಮರುತ್ತುಗಳೇ । **ದಮೇ**—ಯಜ್ಞಗೃಹದಲ್ಲಿ । **ಯೂಯಂ ಹಿ**—ನೀವೇ । **ಮದೇ**—ಸೋಮಪಾನದಿಂದ ತೃಪ್ತಿಯುಂಟಾದಾಗ । **ಪ್ರಚೇತಸಃ**—ಉತ್ಕೃಷ್ಟವಾದ ಜ್ಞಾನವುಳ್ಳವರಾಗಿ । **ಸ್ಥ**—ಇರುತ್ತೀರಿ.

॥ ಭಾವಾರ್ಥ ॥

ಉದಾರವಾದ ದಾನಿಗಳೂ, ರುದ್ರಪುತ್ರರೂ, ಅತಿಶಯವಾದ ತೇಜಸ್ಸುಳ್ಳವರೂ ಆದ ಎಲೈ ಮರುತ್ತುಗಳೇ, ಯಜ್ಞಗೃಹದಲ್ಲಿ ಸೋಮಪಾನದಿಂದ ಹರ್ಷವುಂಟಾದಾಗ ನೀವೇ ಉತ್ಕೃಷ್ಟವಾದ ಜ್ಞಾನವುಳ್ಳವರಾಗಿರುತ್ತೀರಿ.

## English Translation

Munificent mighty Rudras, you in the sacrificial hall are wise (even) in the exhilaration (of the Soma)

॥ ಸಂಹಿತಾಪಾಠಃ ॥

ಆ ನೋ᳚ ರ॒ಯಿಂ ಮ॑ದ॒ಚ್ಯುತಂ᳚ ಪುರು॒ಕ್ಷುಂ ವಿ॒ಶ್ವಧಾ᳚ಯಸಂ ।

ಇಯ॑ರ್ತಾ ಮರುತೋ ದಿ॒ವಃ ॥ ೧೩ ॥

॥ ಪದಪಾಠಃ ॥

ಆ । ನಃ॒ । ರ॒ಯಿಂ । ಮ॒ದ॒ಽಚ್ಯುತ॑ಂ । ಪು॒ರು॒ಽಕ್ಷುಂ । ವಿ॒ಶ್ವಽಧಾ॑ಯಸಂ ।

ಇಯ॑ರ್ತ । ಮ॒ರು॒ತಃ॒ । ದಿ॒ವಃ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಮರುತಃ ನೋಽಸ್ಮಾಕಂ ರಯಿಂ ಧನಂ ದಿವೋ ದ್ಯುಲೋಕಾದೇಯರ್ತ । ಆಗಮಯತ ॥ ಋ ಗತಾವಿತ್ಯಸ್ಮಾದಂತರ್ಭಾವಿತಣ್ಯರ್ಥಾಜ್ಜುಹೋತ್ಯಾದಿಕಾಲ್ಲೋಟಿ ತಸ್ಯ ತಪ್ತನಪ್ತನೇತಿ ತಬಾದೇಶಃ । ಅನುದಾತ್ತೇ ಚೇತ್ಯಭ್ಯಸ್ತಾದ್ಯುದಾತ್ತತ್ವಂ ॥ ಕೀದೃಶಂ ರಯಿಂ । ಮದಚ್ಯುತಂ ಮದಂ ಸ್ರವಂತಂ ಯದ್ವಾ ಶಾತ್ರವಸ್ಯ ಮದಸ್ಯ ಚ್ಯಾವಯಿತಾರಂ ಪುರುಕ್ಷುಂ ಬಹುನಿವಾಸಂ ಬಹುಭಿಃ ಸ್ತೂಯಮಾನಂ ವಾ ವಿಶ್ವಧಾಯಸಂ ವಿಶ್ವೇಷಾಂ ಸರ್ವೇಷಾಮಸ್ಮದೀಯಾನಾಂ ಧಾರಣಾಯ ಪೋಷಣಾಯ ಪರ್ಯಾಪ್ತಂ ॥

॥ ಪ್ರತಿಪದಾರ್ಥ ॥

ಮರುತಃ—ಎಲೈ ಮರುತ್ತುಗಳೇ । ನಃ—ನಮಗೆ । ಮದಚ್ಯುತಂ—ಹರ್ಷೋತ್ಪಾದಕವಾದುದೂ । ಪುರುಕ್ಷುಂ—ಅನೇಕರಿಂದ ಪ್ರಶಂಸಿತವಾದುದೂ । ವಿಶ್ವಧಾಯಸಂ—ಸಮಸ್ತವನ್ನೂ ಧರಿಸಲು ಶಕ್ತಿಯುಳ್ಳದ್ದೂ ಆದ । ರಯಿಂ—ಧನವನ್ನು । ದಿವಃ—ದ್ಯುಲೋಕದಿಂದ । ಆ ಇಯರ್ತ—ಕಳುಹಿಸಿಕೊಡಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ನಮಗೆ ಹರ್ಷೋತ್ಪಾದಕವಾದುದೂ, ಅನೇಕರಿಂದ ಪ್ರಶಂಸಿತವಾದುದೂ, ಸಮಸ್ತವನ್ನೂ ಧರಿಸಲು ಶಕ್ತಿಯುಳ್ಳದ್ದೂ ಆದ ಧನವನ್ನು ದ್ಯುಲೋಕದಿಂದ ಕಳುಹಿಸಿಕೊಡಿ.

## English Translation

Send us, Maruts, from heaven exhilarating, many-lauded, all-sustaining riches.

॥ ಸಂಹಿತಾಪಾಠಃ ॥

ಅಧೀವ ಯದ್ಗಿರೀಣಾಂ ಯಾಮಂ ಶುಭ್ರಾ ಅಚಿಧ್ವಂ ।
ಸುವಾನೈರ್ಮಂದಧ್ವ ಇಂದುಭಿಃ ॥ ೧೪ ॥

॥ ಪದಪಾಠಃ ॥

ಅಧಿಽಇವ । ಯತ್ । ಗಿರೀಣಾಂ । ಯಾಮಂ । ಶುಭ್ರಾಃ । ಅಚಿಧ್ವಂ ।
ಸುವಾನೈಃ । ಮಂದಧ್ವೇ । ಇಂದುಽಭಿಃ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಶುಭ್ರಾಃ ಶೋಭಮಾನಾ ಮರುತಃ ಗಿರೀಣಾಂ ಪರ್ವತಾನಾಮಧೀವೋಪರೀವ ಯದ್ಯದಾ ಯಾಮಂ ಯುಷ್ಮದೀಯಂ ರಥಮಚಿಧ್ವಂ ಗಮನಸಾಧನೈರಶ್ವಾದಿಭಿರುಪಚಿತಂ ಕುರುಥ ತದಾನೀಂ ಸುವಾನೈರಭಿಷೂಯಮಾಣೈರಿಂದುಭಿಃ ಸೋಮೈರ್ಮಂದಧ್ವೇ । ಮಾದಯಧ್ವೇ ॥

॥ ಪ್ರತಿಪದಾರ್ಥ ॥

ಶುಭ್ರಾಃ—ಪ್ರಕಾಶಮಾನರಾದ ಎಲೈ ಮರುತ್ತುಗಳೇ । ಗಿರೀಣಾಂ—ಪರ್ವತಗಳ । ಅಧೀವ—ಉಪರಿಭಾಗದಲ್ಲಿ । ಯತ್—ಯಾವಾಗ । ಯಾಮಂ—ನಿಮ್ಮ ರಥವನ್ನು । ಅಚಿಧ್ವಂ—ಅಶ್ವಾದಿಗಳೊಂದಿಗೆ ಯೋಜಿಸುವಿರೋ ಆಗ । ಸುವಾನೈಃ—ಹಿಂಡಲ್ಪಡುವ । ಇಂದುಭಿಃ—ಸೋಮರಸಗಳಿಂದ । ಮಂದಧ್ವೇ—ಹರ್ಷಗೊಳ್ಳುತ್ತೀರಿ.

॥ ಭಾವಾರ್ಥ ॥

ಪ್ರಕಾಶಮಾನರಾದ ಎಲೈ ಮರುತ್ತುಗಳೇ, ಪರ್ವತಗಳ ಉಪರಿಭಾಗಗಳಲ್ಲಿ ಯಾವಾಗ ನಿಮ್ಮ ರಥವನ್ನು ಅಶ್ವಾದಿಗಳೊಂದಿಗೆ ಯೋಜಿಸುವಿರೋ ಆಗ, ಹಿಂಡಲ್ಪಡುವ ಸೋಮರಸಗಳಿಂದ ಹರ್ಷಗೊಳ್ಳುತ್ತೀರಿ.

## English Translation

When, bright (Maruts), you harness your car over the mountains, then you exhilarate (yourselves) with the effusing Soma juices.

॥ ಸಂಹಿತಾಪಾಠಃ ॥

ಏತಾವತಶ್ಚಿದೇಷಾಂ ಸುಮ್ನಂ ಭಿಕ್ಷೇತ ಮರ್ತ್ಯಃ ।
ಅದಾಭ್ಯಸ್ಯ ಮನ್ಮಭಿಃ ॥ ೧೫ ॥

॥ ಪದಪಾಠಃ ॥

ಏತಾವತಃ । ಚಿತ್ । ಏಷಾಂ । ಸುಮ್ನಂ । ಭಿಕ್ಷೇತ । ಮರ್ತ್ಯಃ ।
ಅದಾಭ್ಯಸ್ಯ । ಮನ್ಮಽಭಿಃ ॥ ೧೫ ॥

॥ ಸಾಯಣಭಾಷ್ಯಂ ॥

ಮರ್ತ್ಯೋ ಮನುಷ್ಯಃ ಸ್ತೋತಾ ಮನ್ಮಭಿಃ ಸ್ತೋತ್ರೈಃ ಸುಮ್ನಂ ಸುಖಂ ಧನಂ ವೈಷಾಂ ಮರುತಾಂ ಸ್ವಭೂತಂ ಭಿಕ್ಷೇತ । ಯಾಚೇತ । ಇದಾನೀಂ ಗಣಾಭಿಪ್ರಾಯೇಣೈಕವದಾಹ । ಏತಾವತಶ್ಚಿದ್ಯತ್ಪರಿಮಾಣಸ್ಯ ಚಾದಾಭ್ಯಸ್ಯ ಕೇನಾಪಿ ಹಿಂಸಿತುಮಶಕ್ಯಸ್ಯ ಮರುದ್ಗಣಸ್ಯ ಸುಮ್ನಂ ಭಿಕ್ಷೇತ ॥ ಏತಚ್ಛಬ್ದಾತ್ ಯತ್ತದೇತೇಭ್ಯ ಇತಿ ಪರಿಮಾಣೇಽರ್ಥೇ ವತುಪ್ । ಆ ಸರ್ವನಾಮ್ನ ಇತ್ಯಾತ್ವಂ ॥

॥ ಪ್ರತಿಪದಾರ್ಥ ॥

ಮರ್ತ್ಯಃ—ಮಾನವನಾದ ಸ್ತುತಿಕರ್ತನು । ಏತಾವತಶ್ಚಿತ್—ಇಂತಹ ಅಸಾಧಾರಣವಾದ ಸ್ವರೂಪವುಳ್ಳವರೂ । ಅದಾಭ್ಯಸ್ಯ—ಯಾರಿಂದಲೂ ಹಿಂಸಿತರಾಗದವರೂ ಆದ । ಏಷಾಂ—ಈ ಮರುತ್ತುಗಳ ಸಂಘಕ್ಕೆ ಸೇರಿದ । ಸುಮ್ನಂ—ಧನವನ್ನು । ಮನ್ಮಭಿಃ—ಧ್ಯಾನಾತ್ಮಕವಾದ ಸ್ತುತಿಗಳಿಂದ । ಭಿಕ್ಷೇತ—ಯಾಚಿಸುತ್ತಾರೆ.

॥ ಭಾವಾರ್ಥ ॥

ಮಾನವನಾದ ಸ್ತುತಿಕರ್ತನು ಇಂತಹ ಅಸಾಧಾರಣವಾದ ಸ್ವರೂಪವುಳ್ಳವರೂ, ಯಾರಿಂದಲೂ ಹಿಂಸಿತರಾಗದವರೂ ಆದ ಈ ಮರುತ್ತುಗಳ ಸಂಘಕ್ಕೆ ಸೇರಿದ ಧನವನ್ನು ಧ್ಯಾನಾತ್ಮಕವಾದ ಸ್ತುತಿಗಳಿಂದ ಯಾಚಿಸುತ್ತಾರೆ.

English Translatian

A man should solicit happiness of them with praises of such an unconquerable (company),

॥ ಸಂಹಿತಾಪಾಠಃ ॥

ಯೇ ದ್ರಪ್ಸಾ ಇವ ರೋದಸೀ ಧಮಂತ್ಯನು ವೃಷ್ಟಿಭಿಃ ।
ಉತ್ಸಂ ದುಹಂತೋ ಅಕ್ಷಿತಂ ॥ ೧೬ ॥

॥ ಪದಪಾಠಃ ॥

ಯೇ । ದ್ರಪ್ಸಾಃऽಇವ । ರೋದಸೀ ಇತಿ । ಧಮಂತಿ । ಅನು । ವೃಷ್ಟಿऽಭಿಃ ।
ಉತ್ಸಂ । ದುಹಂತಃ । ಅಕ್ಷಿತಂ ॥ ೧೬ ॥

॥ ಸಾಯಣಭಾಷ್ಯಂ ॥

ಯೇ ಮರುತೋ ದ್ರಪ್ಸಾ ಇವೋದಬಿಂದವ ಇವ ರೋದಸೀ ದ್ಯಾವಾಪೃಥಿವ್ಯೌ ವೃಷ್ಟಿಭಿರ್ವರ್ಷಜಲೈರನು ಧಮಂತಿ ಅನುಗಚ್ಛಂತಿ ಸಾಕಲ್ಯೇನ ವ್ಯಾಪ್ನುವಂತಿ । ಯದ್ವಾ । ಅನುಧ್ಮಾತೀ ಉಚ್ಛ್ವಸಿತಾವಯವೇ ಕುರ್ವಂತಿ । ಕಿಂ ಕುರ್ವಂತಃ । ಅಕ್ಷಿತಮಕ್ಷೀಣಮುದಕಮುತ್ಸಂ ಮೇಘಂ ದುಹಂತಃ ಪೂರಯಂತೋ ಮೇಘಾದವಾಙ್ಮುಖಂ ಪಾತಯಂತಃ ॥ ದುಹೇರ್ಲಕ್ಷಣಹೇತ್ವೋಃ । ಪಾ. ೩. ೨. ೧೨೬ । ಇತಿ ಹೇತೌ ಶತೃಪ್ರತ್ಯಯಃ ॥ ಯತ ಏವಂ ದುಹಂತಿ ತತೋ ರೋದಸೀ ಅನುಧಮಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಕ್ಷಿತಂ— ಕ್ಷಯರಹಿತವಾದ । ಉತ್ಸಂ—ಮೇಘವನ್ನು ॥ ದುಹಂತಃ—ಕರೆಯುತಕ್ಕ । ಯೇ—ಯಾವ ಮರುತ್ತುಗಳು । ದ್ರಪ್ಸಾ ಇವ—ಉದಕಬಿಂದುಗಳಂತೆ । ರೋದಸೀ—ದ್ಯಾವಾಪೃಥಿವಿಗಳನ್ನು । ವೃಷ್ಟಿಭಿಃ—ವೃಷ್ಟಿಗಳಿಂದ । ಅನು ಧಮಂತಿ—ಪೂರ್ಣವಾಗಿ ತೊಯ್ಯುವಂತೆ ಮಾಡುವರೋ (ಅಂತಹ ಮರುತ್ತುಗಳನ್ನು-ಧನಾರ್ಥವಾಗಿ ಯಾಚಿಸುವರು)

॥ ಭಾವಾರ್ಥ ॥

ಕ್ಷಯರಹಿತವಾದ ಮೇಘವನ್ನು ಕರೆಯುತಕ್ಕ ಯಾವ ಮರುತ್ತುಗಳು ಉದಕಬಿಂದುಗಳಂತೆ ದ್ಯಾವಾಪೃಥಿವಿಗಳನ್ನು ವೃಷ್ಟಿಗಳಿಂದ ಪೂರ್ಣವಾಗಿ ತೊಯ್ಯುವಂತೆ ಮಾಡುವರೋ ಅಂತಹ ಮರುತ್ತುಗಳನ್ನು ಯಾಚಿಸುವರು.

**English Translation**

They who, like dropping showers, inflate heaven and earth with rain, milking the inexhaustible cloud.

॥ ಸಂಹಿತಾಪಾಠಃ ॥

ಉದು ಸ್ವಾನೇಭಿರೀರತ ಉದ್ರಥೈರುದು ವಾಯುಭಿಃ ।

ಉತ್ಸ್ತೋಮೈಃ ಪೃಶ್ನಿಮಾತರಃ ॥ ೧೭ ॥

॥ ಪದಪಾಠಃ ॥

ಉತ್ । ಊಂ ಇತಿ । ಸ್ವಾನೇಭಿಃ । ಈರತೇ । ಉತ್ । ರಥೈಃ । ಉತ್ । ಊಂ ಇತಿ । ವಾಯುಽಭಿಃ ।

ಉತ್ । ಸ್ತೋಮೈಃ । ಪೃಶ್ನಿಽಮಾತರಃ ॥ ೧೭ ॥

॥ ಸಾಯಣಭಾಷ್ಯಂ ॥

ಸ್ವಾನೇಭಿಃ ಸ್ವಾನೈಃ ಶಬ್ದೈರ್ಮರುತ ಉದೀರತೇ । ಉದ್ಗಚ್ಛಂತಿ ॥ ಸ್ವನ ಶಬ್ದೇ । ಸ್ವನಹಸೋರ್ವಾ । ಪಾ. ೩-೩-೬೨ । ಇತ್ಯಪೋ ವಿಕಲ್ಪಿತತ್ವಾತ್ಪಕ್ಷೇ ಘಞ್ । ಕರ್ಷಾತ್ವತ ಇತ್ಯಂತೋದಾತ್ತತ್ವಂ । ಬಹುಲಂ ಛಂದಸೀತಿ । ಭಿಸ ಐಸಭಾವಃ ॥ ಉ ಇತಿ ಪೂರಣಃ । ತಥಾ ರಥೈ ರಥಪ್ರಮುಖೈರ್ವಾಹನೈಶ್ಚೋದೀರತೇ । ಪೃಶ್ನಿಮಾತರಃ .... .... .... .... ॥

॥ ಪ್ರತಿಪದಾರ್ಥ ॥

ಪೃಶ್ನಿಮಾತರಃ—ಪೃಶ್ನಿಪುತ್ರರಾದ ಮರುತ್ತುಗಳು । ಸ್ವಾನೇಭಿಃ—ಶಬ್ದಗಳೊಡನೆ ಕೂಡಿದವರಾಗಿ । ಉದೀರತೇ—ಉದ್ಭವಿಸುತ್ತಾರೆ । ರಥೈಃ—ರಥಗಳೊಡಗೂಡಿ । ಉತ್—ಮೇಲಕ್ಕೆ ಏರುತ್ತಾರೆ । ವಾಯುಭಿಃ—ವಾಯುಗಳೊಡಗೂಡಿ । ಉತ್—ಅಂತರಿಕ್ಷದಲ್ಲಿ ಸಂಚರಿಸುತ್ತಾರೆ । ಸ್ತೋಮೈಃ—ಸ್ತೋತ್ರಗಳೊಡಗೂಡಿ । ಉತ್—ಹರ್ಷಿಸುತ್ತಾರೆ

॥ ಭಾವಾರ್ಥ ॥

ಪೃಶ್ನಿಪುತ್ರರಾದ ಮರುತ್ತುಗಳು ಶಬ್ದಗಳೊಡನೆ ಕೂಡಿ ಉದ್ಭವಿಸುತ್ತಾರೆ. ರಥಗಳೊಡಗೂಡಿ ಮೇಲಕ್ಕೆ ಏರುತ್ತಾರೆ. ವಾಯುಗಳೊಡಗೂಡಿ ಅಂತರಿಕ್ಷದಲ್ಲಿ ಸಂಚರಿಸುತ್ತಾರೆ. ಸ್ತೋತ್ರಗಳೊಡಗೂಡಿ ಹರ್ಷಿಸುತ್ತಾರೆ.

## English translation

The sons of Prishni rise up with shouts, with chariots, with winds, with praises.

। ಸಂಹಿತಾಪಾಠಃ ।

ಯೇನಾವ ತುರ್ವಶಂ ಯದುಂ ಯೇನ ಕಣ್ವಂ ಧನಸ್ಪೃತಂ ।
ರಾಯೇ ಸು ತಸ್ಯ ಧೀಮಹಿ ॥ ೧೮ ॥

। ಪದಪಾಠಃ ।

ಯೇನ । ಅವ । ತುರ್ವಶಂ । ಯದುಂ । ಯೇನ । ಕಣ್ವಂ । ಧನಽಸ್ಪೃತಂ ।
ರಾಯೇ । ಸು । ತಸ್ಯ । ಧೀಮಹಿ ॥ ೧೮ ॥

। ಸಾಯಣಭಾಷ್ಯಂ ।

ಯೇನಾತ್ರೀಯೇನ ರಕ್ಷಣೇನ ತುರ್ವಶಮೇತತ್ಸಂಜ್ಞಂ ಯದುಮೇತತ್ಸಂಜ್ಞಂ ಚ ರಾಜರ್ಷಿಮಾವ ಯೂಯಂ ರಕ್ಷಿತವಂತಃ ಸ್ಥ ॥ ಅವತೇರ್ಲಿಟಿ ಮಧ್ಯಮಬಹುವಚನೇ ರೂಪಮೇತತ್ ॥ ಯೇನ ಚ ಧನಸ್ಪೃತಂ ಧನಕಾಮಂ ಕಣ್ವಮೃಷಿಂ ರಕ್ಷಿತವಂತಃ ಸ್ಥ ತಸ್ಯ ಯುಷ್ಮದೀಯಂ ರಕ್ಷಣಂ ರಾಯೇ ಧನಾರ್ಥಂ ಸು ಧೀಮಹಿ । ಶೋಭನಂ ಧ್ಯಾಯಾಮ ॥

। ಪ್ರತಿಪದಾರ್ಥ ।

(ಎಲೈ ಮರುತ್ತುಗಳೇ) ಯೇನ—ಯಾವ ನಿಮ್ಮ ರಕ್ಷಣದಿಂದ । ತುರ್ವಶಂ—ತುರ್ವಶನೆಂಬ ರಾಜರ್ಷಿಯನ್ನೂ । ಯದುಂ—ಯದುವೆಂಬ ರಾಜರ್ಷಿಯನ್ನೂ । ಅವ—ನೀವು ರಕ್ಷಿಸಿದಿರೋ । ಯೇನ—ಯಾವ ರಕ್ಷಣೆಯಿಂದ । ಧನಸ್ಪೃತಂ—ಧನಕಾಮನಾದ । ಕಣ್ವಂ—ಕಣ್ವಋಷಿಯನ್ನು ರಕ್ಷಿಸಿದಿರೋ । ತಸ್ಯ—ಅಂತಹ ನಿಮ್ಮ ರಕ್ಷಣೆಯನ್ನು । ರಾಯೇ—ಧನಾರ್ಥವಾಗಿ । ಸು ಧೀಮಹಿ—ನಾವು ಧ್ಯಾನಿಸಿ ಸ್ತುತಿಸುತ್ತೇವೆ.

। ಭಾವಾರ್ಥ ।

ಎಲೈ ಮರುತ್ತುಗಳೇ, ಯಾವ ನಿಮ್ಮ ರಕ್ಷಣಾದಿಂದ ತುರ್ವಶನೆಂಬ ರಾಜರ್ಷಿಯನ್ನೂ, ಯದುವೆಂಬ ರಾಜರ್ಷಿಯನ್ನೂ ನೀವು ರಕ್ಷಿಸಿದಿರೋ ಯಾವ ರಕ್ಷಣೆಯಿಂದ ಧನಕಾಮನಾದ ಕಣ್ವಋಷಿಯನ್ನು ರಕ್ಷಿಸಿದಿರೋ ಅಂತಹ ನಿಮ್ಮ ರಕ್ಷಣೆಯನ್ನು ನಾವು ಧನಾರ್ಥವಾಗಿ ಧ್ಯಾನಿಸಿ ಯಾಚಿಸುತ್ತೇವೆ. ಅದನ್ನು ಪ್ರಶಂಸಿಸುತ್ತೇವೆ.

## English Translation

We meditate on that (generosity) whereby for (the sake of granting them) riches you have protected Turvasha and Yadu and the wealth-desiring Kanwa.

। ಸಂಹಿತಾಪಾಠಃ ।

ಇಮಾ ಉ ವಃ ಸುದಾನವೋ ಘೃತಂ ನ ಪಿಪ್ಯುಷೀರಿಷಃ ।
ವರ್ಧಾನ್ಕಾಣ್ವಸ್ಯ ಮನ್ಮಭಿಃ ॥ ೧೯ ॥

। ಪದಪಾಠಃ ।

ಇಮಾಃ । ಊಂ ಇತಿ । ವಃ । ಸುಽದಾನವಃ । ಘೃತಂ । ನ । ಪಿಪ್ಯುಷೀಃ । ಇಷಃ ।
ವರ್ಧಾನ್ । ಕಾಣ್ವಸ್ಯ । ಮನ್ಮಽಭಿಃ ॥ ೧೯ ॥

। ಸಾಯಣಭಾಷ್ಯಂ ।

ಹೇ ಸುದಾನವಃ ಶೋಭನದಾನಾ ಮರುತಃ ಘೃತಂ ನ ಘೃತಮಿವ ಪಿಪ್ಯುಷೀರ್ವರ್ಧಯಿತ್ರ್ಯಃ ಶರೀರಪುಷ್ಟಿಹೇತುಭೂತಾ ಇಮಾ ಇದಾನೀಂ ಪ್ರದೀಯಮಾನಾ ಇಷೋಽನ್ನಾನಿ ಸೋಮಲಕ್ಷಣಾನಿ ಕಾಣ್ವಸ್ಯ ಕಣ್ವಗೋತ್ರಸ್ಯ ಮಮ ಸಂಬಂಧಿಭಿರ್ಮನ್ಮಭಿಃ ಸ್ತೋತ್ರೈಃ ಸಾರ್ಧಂ ವೋ ಯುಷ್ಮಾನ್ ವರ್ಧಾನ್ ವರ್ಧಯಂತು ॥ ವೃಧೇರ್ಣ್ಯಂತಾಲ್ಲೇಟಿ ರೂಪಮೇತತ್ । ಉ ಇತಿ ಪೂರಣಃ ॥

। ಪ್ರತಿಪದಾರ್ಥ ।

ಸುದಾನವಃ—ಉದಾರವಾದ ದಾನಿಗಳಾದ ಎಲೈ ಮರುತ್ತುಗಳೇ । ಘೃತಂ ನ—ಘೃತದಂತೆ । ಪಿಪ್ಯುಷೀಃ—ಶರೀರಕ್ಕೆ ಪುಷ್ಟಿದಾಯಕವೂ । ಇಮಾಃ—ಈಗ ಅರ್ಪಿತವಾಗತಕ್ಕವೂ ಆದ । ಇಷಃ—ಸೋಮರೂಪವಾದ ಅನ್ನಗಳು । ಕಾಣ್ವಸ್ಯ—ಕಣ್ವವಂಶೋತ್ಪನ್ನನಾದ ನನ್ನಿಂದ ನಿರ್ಮಿತವಾದ । ಮನ್ಮಭಿಃ—ಸ್ತುತಿಗಳೊಡನೆ ಕೂಡಿ । ವಃ—ನಿಮ್ಮನ್ನು । ವರ್ಧಾನ್—ಬೆಳೆಸಲಿ (ಪುಷ್ಟರನ್ನಾಗಿ ಮಾಡಲಿ).

। ಭಾವಾರ್ಥ ।

ಉದಾರವಾದ ದಾನಿಗಳಾದ ಎಲೈ ಮರುತ್ತುಗಳೇ, ಘೃತದಂತೆ ಶರೀರಕ್ಕೆ ಪುಷ್ಟಿದಾಯಕವೂ, ಈಗ ಅರ್ಪಿತವಾಗತಕ್ಕವೂ ಆದ ಸೋಮರೂಪವಾದ ಅನ್ನಗಳು ಕಣ್ವವಂಶೋತ್ಪನ್ನನಾದ ನನ್ನಿಂದ ನಿರ್ಮಿತವಾದ ಸ್ತುತಿಗಳೊಡಗೂಡಿ ನಿಮ್ಮನ್ನು ಪುಷ್ಟರನ್ನಾಗಿ ಮಾಡಲಿ.

## English Translation

Munificent (Maruts), may these (sacrificial) viands, nutritious as butter, together with the praises of the descendent of Kanwa, afford you augmentation.

। ಸಂಹಿತಾಪಾಠಃ ।

ಕ್ವ ನೂನಂ ಸುದಾನವೋ ಮದಥಾ ವೃಕ್ತಬರ್ಹಿಷಃ ।

ಬ್ರಹ್ಮಾ ಕೋ ವಃ ಸಪರ್ಯತಿ ॥ ೨೦ ॥

। ಪದಪಾಠಃ ।

ಕ್ವ । ನೂನಂ । ಸುಽದಾನವಃ । ಮದಥ । ವೃಕ್ತಽಬರ್ಹಿಷಃ ।
ಬ್ರಹ್ಮಾ । ಕಃ । ವಃ । ಸಪರ್ಯತಿ ॥ ೨೦ ॥

। ಸಾಯಣಭಾಷ್ಯಂ ।

ಮರುದಾಗಮನಸ್ಯ ವಿಲಂಬಮಸಹಮಾನ ಋಷಿರನಯಾ ವಿತರ್ಕಯತಿ । ಸುದಾನವಃ ಶೋಭನದಾನಾ ಹೇ ವೃಕ್ತಬರ್ಹಿಷಃ। ವೃಕ್ತಂ ವೃಕ್ಣಂ ಛಿನ್ನಂ ಬರ್ಹಿರ್ಯೇಷಾಂ ಯಾಗಾಯ। ಯದ್ವಾ। ಬರ್ಹಿರಿತಿ ಯಜ್ಞನಾಮ । ವೃಕ್ತಃ ಪ್ರವೃತ್ತೋ ಯಜ್ಞೋ ಯೇಷಾಂ ತೇ ತಥೋಕ್ತಾಃ । ಹೇ ಈದೃಶಾ ಮರುತಃ ಕ್ವ ಕುತ್ರ ದೇಶೇ ನೂನಮಿದಾನೀಂ ಮದಥ । ಮಾದ್ಯಥ ॥ ಮದೀ ಹರ್ಷೇ । ವ್ಯತ್ಯಯೇನ ಶಪ್ ॥ ಕಶ್ಚ ಬ್ರಹ್ಮಾ ಬ್ರಾಹ್ಮಣಃ ಸ್ತೋತಾ ವೋ ಯುಷ್ಮಾನ್ ಸಪರ್ಯತಿ । ಪರಿಚರತಿ । ಕಿಂಕಾರಣಂ ಬಹುಶಃ ಸ್ತುತೈರಪಿ ಭವದ್ಭಿರಿದಾನೀಂ ನಾಗಮ್ಯತ ಇತಿ ನ ಜಾನೀಮಃ ॥

। ಪ್ರತಿಪದಾರ್ಥ ।

**ಸುದಾನವಃ**—ಉದಾರವಾದ ದಾನಿಗಳೂ । **ವೃಕ್ತಬರ್ಹಿಷಃ**—ಯಾರಿಗಾಗಿ ದರ್ಭಾಸನವು ಸಂಸ್ಕೃತವಾಗಿ ಸಿದ್ಧವಾಗಿರುವುದೋ ಅಂತಹವರೂ ಆದ ಎಲೈ ಮರುತ್ತುಗಳೇ । **ನೂನಂ**—ಈಗ । **ಕ್ವ**—ಯಾವ ಪ್ರದೇಶದಲ್ಲಿ । **ಮದಥ**—ಹರ್ಷಿಸುತ್ತಿದ್ದೀರಿ । **ಕಃ**—ಯಾವ । **ಬ್ರಹ್ಮಾ**—ಸ್ತುತಿಕರ್ತನು । **ವಃ**—ನಿಮ್ಮನ್ನು । **ಸಪರ್ಯತಿ**—ಪೂಜಿಸುತ್ತಾ ತಡೆದು ನಿಲ್ಲಿಸಿಕೊಂಡಿದ್ದಾನೆ ?

। ಭಾವಾರ್ಥ ।

ಉದಾರವಾದ ದಾನಿಗಳೂ, ಯಾರಿಗಾಗಿ ದರ್ಭಾಸನವು ಸಂಸ್ಕೃತವಾಗಿ ಸಿದ್ಧವಾಗಿರುವುದೋ ಅಂತಹವರೂ ಆದ ಎಲೈ ಮರುತ್ತುಗಳೇ, ಈಗ ನೀವು ಯಾವ ಪ್ರದೇಶದಲ್ಲಿ ಹರ್ಷಿಸುತ್ತಿದ್ದೀರಿ ? ಯಾವ ಸ್ತುತಿಕರ್ತನು ನಿಮ್ಮನ್ನು ಪೂಜಿಸುತ್ತಾ ಅಲ್ಲಿಯೇ ತಡೆದು ನಿಲ್ಲಿಸಿಕೊಂಡಿದ್ದಾನೆ ?

## English Translation

Munificent (Maruts), for whom the sacred grass has been trimmed where now are you being exhilarated ? What pious worshipper (detains you as he) adores you ?

॥ ಸಂಹಿತಾಪಾಠಃ ॥

ನಹಿ ಷ್ಮ ಯದ್ಧ ವಃ ಪುರಾ ಸ್ತೋಮೇಭಿರ್ವೃಕ್ತಬರ್ಹಿಷಃ ।
ಶರ್ಧಾಁ ಋತಸ್ಯ ಜಿನ್ವಥ ॥ ೨೧ ॥

॥ ಪದಪಾಠಃ ॥

ನಹಿ । ಸ್ಮ । ಯತ್ । ಹ । ವಃ । ಪುರಾ । ಸ್ತೋಮೇಭಿಃ । ವೃಕ್ತಽಬರ್ಹಿಷಃ ।
ಶರ್ಧಾನ್ । ಋತಸ್ಯ । ಜಿನ್ವಥ ॥ ೨೧ ॥

॥ ಸಾಯಣಭಾಷ್ಯಂ ॥

ಪೂರ್ವಯಾ ವಿತರ್ಕ್ಯೇದಾನೀಂ ನಿಶ್ಚಿನೋತಿ। ಹೇ ವೃಕ್ತಬರ್ಹಿಷಃ ಪ್ರವೃತ್ತಯಜ್ಞಕಾ ಮರುತಃ ನಹಿ ಷ್ಮ । ತನ್ನ ಖಲು ಸಂಭವತಿ । ಯೋ ಯೂಯಂ ಪುರಾಸ್ಮತ್ತಃ ಪೂರ್ವಮೇವ ಕೃತೈಃ ಸ್ತೋಮೈರನ್ಯದೀಯೈಃ ಸ್ತೋತ್ರೈರ್ಋತಸ್ಯೋದಕಸ್ಯ ಸತ್ಯಸ್ಯ ಯಜ್ಞಸ್ಯ ವಾ ಸಂಬಧಿನಃ ಶರ್ಧಾನಾತ್ಮೀಯಾನಿ ಬಲಾನಿ ಜಿನ್ವಥ ಪ್ರೀಣಯಥೇತಿ ಯದ್ಧ ಯತ್ಖಲು ತನ್ನ ಸಂಭವತ್ಯೇವ । ಅತಃ ಶೀಘ್ರಮಾಗಚ್ಛತೇತ್ಯರ್ಥಃ । ಯದ್ವಾ । ವೃಕ್ತಬರ್ಹಿಷ ಇತ್ಯೃತ್ವಿಜ್ನಾಮ । ಹೇ ಋತ್ವಿಜಃ ಯೋ ಯುಷ್ಮಾಕಂ ಸಂಬಂಧಿಭಿಃ ಸ್ತೋಮೇಭಿಃ ಸ್ತೋತ್ರೈರ್ಋತಸ್ಯ ಯಜ್ಞಸ್ಯ ಸಂಬಂಧಿನೋ ಯಾಗಾರ್ಹಾಞ್ಛರ್ಧಾನ್ ಮಾರುತಾನಿ ಬಲಾನಿ ಪುರಾನ್ಯೇಭ್ಯಃ ಸ್ತೋತೃಭ್ಯಃ ಪೂರ್ವಂ ಯುಷ್ಮತ್ಸಾತ್ಕಾರಣಾಜ್ಜಿನ್ವಥ ಯೂಯಂ ಪ್ರೀಣಯಥ ॥ ಜಿವಿಃ ಪ್ರೀಣನಾರ್ಥಃ ॥ ತಸ್ಮಾದನ್ಯದೀಯೈಃ ಸ್ತೋತ್ರೈರ್ನಹಿ ಷ್ಮ ನ ಖಲು ತೇ ಮರುತೋ ವಶೀಭವಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ವೃಕ್ತಬರ್ಹಿಷಃ—ಸುಸಂಸ್ಕೃತವಾದ ದರ್ಭಾಸನವುಳ್ಳ ಎಲೈ ಮರುತ್ತುಗಳೇ । ಯದ್ಧ—ಯಾವ ಕಾರಣದಿಂದ । ವಃ—ನೀವು । ಪುರಾ—ಪೂರ್ವದಲ್ಲಿ ನಮ್ಮಿಂದ ಅರ್ಪಿತವಾದ । ಸ್ತೋಮೇಭಿಃ—ಸ್ತುತಿಗಳಿಂದ । ಋತಸ್ಯ—ಯಜ್ಞಸಂಬಂಧವಾದ । ಶರ್ಧಾನ್—ನಿಮ್ಮ ಶಕ್ತಿಗಳನ್ನು । ಜಿನ್ವಥ—ಪೋಷಿಸಿಕೊಂಡಿರೋ (ಅದುದರಿಂದಲೇ) । ನಹಿ ಷ್ಮ—ನೀವು ಬೇರೆಕಡೆ ದೀರ್ಘಕಾಲ ನಿಂತಿರಲು ಸಾಧ್ಯವಿಲ್ಲ.

॥ ಭಾವಾರ್ಥ ॥

ಸುಸಂಸ್ಕೃತವಾದ ದರ್ಭಾಸನವುಳ್ಳ ಎಲೈ ಮರುತ್ತುಗಳೇ, ಯಾವ ಕಾರಣದಿಂದ ನೀವು ಪೂರ್ವದಲ್ಲಿ ನಮ್ಮಿಂದ ಅರ್ಪಿತವಾದ ಸ್ತುತಿಗಳಿಂದ ಯಜ್ಞಸಂಬಧವಾದ ನಿಮ್ಮ ಶಕ್ತಿಗಳನ್ನು ವೃದ್ಧಿಪಡಿಸಿಕೊಂಡಿರೋ ಆ ಕಾರಣದಿಂದಲೇ ಈಗ ನೀವು ನಮ್ಮನ್ನು ಬಿಟ್ಟು ಬೇರೆ ಕಡೆ ದೀರ್ಘಕಾಲ ನಿಲ್ಲಲು ಸಾಧ್ಯವಿಲ್ಲ.

## English Translation

(Maruts), for whom the sacred grass is trimmed, it cannot be (that you submit to be detained), for you have derived strength from the sacrifice, formerly (accompanied) by our praises.

। ಸಂಹಿತಾಪಾಠಃ ।

ಸಮು ತ್ಯೇ ಮಹತೀರಪಃ ಸಂ ಕ್ಷೋಣೀ ಸಮು ಸೂರ್ಯಂ ।
ಸಂ ವಜ್ರಂ ಪರ್ವಶೋ ದಧುಃ ॥ ೨೨ ॥

॥ ಪದಪಾಠಃ ॥

ಸಂ । ಊಂ ಇತಿ । ತ್ಯೇ । ಮಹತೀಃ । ಅಪಃ । ಸಂ । ಕ್ಷೋಣೀ ಇತಿ । ಸಂ । ಊಂ ಇತಿ । ಸೂರ್ಯಂ ।
ಸಂ । ವಜ್ರಂ । ಪರ್ವಽಶಃ । ದಧುಃ ॥ ೨೨ ॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯೇ ಮಹಾವೀರೇ ಪಯಸೋರಾಸಿಕ್ತಯೋಃ ಸತೋಃ ಸಮು ತ್ಯೇ ಮಹತೀರಪ ಇತ್ಯೇಷಾನುವಕ್ತವ್ಯಾ । ಸೂತ್ರಿತಂ ಹಿ । ಆಸಿಕ್ತಯೋಃ ಸಮು ತ್ಯೇ ಮಹತೀರಪ ಇತಿ ಮಹಾವೀರಮಾದಾಯೋತ್ತಿಷ್ಠತ್ಸು । ಆ. ೪-೭ । ಇತಿ ॥

ತ್ಯೇ ತೇ ಪೂರ್ವೋಕ್ತಗುಣಾ ಮರುತೋ ಮಹತೀರ್ಬಹ್ವೀರಪೋ ವೃಷ್ಟ್ಯುದಕಾನಿ ಸಮು ದಧುಃ । ಸಂದಧತಿ । ಓಷಧ್ಯಾದಿಭಿಃ ಸಂಯೋಜಯಂತಿ । ಯದ್ವಾ । ಘರ್ಮಕಾಲೇ ಸೂರ್ಯರಶ್ಮಿಭಿರಾಹೃತಾ ಉಪರಿ ಸಮ್ಯಗ್ಧಾರಯಂತಿ ॥ ಬೃಹನ್ಮಹತೋರುಪಸಂಖ್ಯಾನಮಿತಿ ಮಹತಃ ಪರಸ್ಯ ಙೀಪ ಉದಾತ್ತತ್ವಂ । ಊಡಿದಮಿತ್ಯಾದಿನಾಪ್‌ಶಬ್ದಾತ್ಪರಃ ಶಸ್ ಉದಾತ್ತಃ । ತಥಾ ಕ್ಷೋಣೀ ಕ್ಷೋಣ್ಯೌ ದ್ಯಾವಾಪೃಥಿವ್ಯೌ ಚ ತೇ ಮರುತಃ ಸಂ ದಧುಃ । ಯಥಾ ಸ್ವೇ ಸ್ವೇ ಸ್ಥಾನೇಽವತಿಷ್ಠೇತೇ ತಥಾ ಧಾರಯಂತಿ । ಸೂತ್ರಾತ್ಮನಾ ವಾಯುನಾ ಸರ್ವಂ ಜಗದ್ಧಾರ್ಯತೇ । ತಥಾ ಚ ಶ್ರೂಯತೇ । ವಾಯುರ್ವೈ ಗೋತಮ ತತ್ಸೂತ್ರಂ ವಾಯುನಾ ವೈ ಗೋತಮ ಸೂತ್ರೇಣಾಯಂ ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವಂತಿ । ಬೃ. ಉ. ೩-೭-೨ । ಇತಿ । ತಥಾ ಸೂರ್ಯಂ ಸರ್ವಸ್ಯ ಪ್ರೇರಕಮಾದಿತ್ಯಂ ಚಾಂತರಿಕ್ಷೇ ಸಂ ದಧುಃ । ಸಮ್ಯಗ್ಧಾರಯಂತಿ । ಉಶಬ್ದಃ ಸಮುಚ್ಚಯೇ । ಈದೃಶಾಸ್ತೇ ಮರುತೋ ವಜ್ರಮಾತ್ಮೀಯಮಾಯುಧಂ

ಪರ್ವಶಃ ಪರ್ವಣಿ ಪರ್ವಣಿ ವೃತ್ರಸ್ಯ ಸರ್ವೇಷ್ವವಯವಸಂಬಂಧಿಷು ಹನನಾರ್ಥಂ ಸಂ ದಧುಃ । ಸಮುಯೂಯುಜನ್ ॥

। ಪ್ರತಿಪದಾರ್ಥ ।

ತ್ಯೇ—ಪ್ರಸಿದ್ಧರಾದ ಮರುತ್ತುಗಳು । ಮಹತೀಃ—ಪ್ರಭೂತಗಳಾದ । ಅಪಃ—ವೃಷ್ಟ್ಯುದಕಗಳನ್ನು । ಸಮು ದಧುಃ—ಓಷಧ್ಯಾದಿಗಳೊಂದಿಗೆ ಸಂಯೋಜಿಸುತ್ತಾರೆ । ಕ್ಷೋಣೀ—ದ್ಯಾವಾಪೃಥಿವಿಗಳನ್ನು । ಸಂ (ದಧುಃ)—ಒಟ್ಟಿಗೆ ಸೇರಿಸುತ್ತಾರೆ । ಸೂರ್ಯಂ—ಸೂರ್ಯನನ್ನು (ಅಂತರಿಕ್ಷದಲ್ಲಿ) । ಸಮು—ಸ್ಥಾಪಿಸಿದ್ದಾರೆ । ವಜ್ರಂ—ತಮ್ಮ ವಜ್ರಾಯುಧವನ್ನು । ಪರ್ವಶಃ—ವೃತ್ರಾಸುರನ ಅಂಗದ ಪ್ರತಿಯೊಂದು ಪರ್ವದಲ್ಲಿಯೂ । ಸಂ ದಧುಃ—ಸಂಯೋಜಿಸಿದ್ದಾರೆ (ಅದರಿಂದ ಕತ್ತರಿಸಿದ್ದಾರೆ).

। ಭಾವಾರ್ಥ ।

ಪ್ರಸಿದ್ಧರಾದ ಮರುತ್ತುಗಳು ಪ್ರಭೂತಗಳಾದ ವೃಷ್ಟ್ಯುದಕಗಳನ್ನು ಓಷಧ್ಯಾದಿಗಳೊಂದಿಗೆ ಸಂಯೋಜಿಸುತ್ತಾರೆ. ದ್ಯಾವಾಪೃಥಿವಿಗಳನ್ನು ಒಟ್ಟಿಗೆ ಸೇರಿಸುತ್ತಾರೆ. ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದ್ದಾರೆ. ತಮ್ಮ ವಜ್ರಾಯುಧವನ್ನು ವೃತ್ರಾಸುರನ ಅಂಗದ ಪ್ರತಿಯೊಂದು ಪರ್ವದಲ್ಲಿಯೂ ಯೋಜಿಸಿ ಅವನ್ನು ಪೂರ್ಣವಾಗಿ ಕತ್ತರಿಸಿದ್ದಾರೆ.

## English Translation

They have concentrated the abundant waters, they have held together the heaven and earth, they have sustained the sun, they have divided (Vritra) joint by joint with the thunderbolt.

॥ ವಿಶೇಷವಿಷಯಗಳು ॥

ಪ್ರವರ್ಗ್ಯೇಷ್ಟಿಯಲ್ಲಿ ಸಮು ತ್ಯೇ ಮಹತೀರಪಃ ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಆಸಿಕ್ತಯೋಃ ಸಮು ತ್ಯೇ ಮಹತೀರಪ ಇತಿ ಮಹಾವೀರವಾದಾಯೋತ್ತಿಷ್ಠತ್ಸು ಎಂಬ ಸೂತ್ರದಿಂದ (ಆ. ೪-೭) ವಿಸ್ತೃತವಾಗಿರುವುದು.

। ಸಂಹಿತಾಪಾಠಃ ।

ವಿ ವೃತ್ರಂ ಪರ್ವಶೋ ಯಯುರ್ವಿ ಪರ್ವತಾँ ಅರಾಜಿನಃ ।
ಚಕ್ರಾಣಾ ವೃಷ್ಣಿ ಪೌಂಸ್ಯಂ ॥ ೨೩ ॥

॥ ಪದಪಾಠಃ ॥

ವಿ । ವೃತ್ರಂ । ಪರ್ವಽಶಃ । ಯಯುಃ । ವಿ । ಪರ್ವತಾನ್ । ಅರಾಜಿನಃ ।

ಚಕ್ರಾಣಾಃ । ವೃಷ್ಣಿ । ಪೌಂಸ್ಯಂ ॥ ೨೩ ॥

। ಸಾಯಣಭಾಷ್ಯಂ ।

ಅರಾಜಿನೋ ರಾಜ್ಞಾ ಕೇನಚಿತ್ಸ್ವಾಮಿನಾನಧಿಷ್ಠಿತಾಃ । ಯದ್ವಾ । ರಾಜಾ ಸ್ವಾಮ್ಯಸ್ಯ ನ ವಿದ್ಯತ ಇತ್ಯರಾಜೀಂದ್ರಃ । ತದ್ಯುಕ್ತಾಃ । ವೃಷ್ಣಿ ವೀರ್ಯವತ್ಪೌಂಸ್ಯಂ ಬಲಂ ಚಕ್ರಾಣಾಃ ಕುರ್ವಾಣಾ ಮರುತೋ ವೃತ್ರಮಾವರಕಮಸುರಂ ಮೇಘಂ ವಾ ಪರ್ವಶಃ ಪರ್ವಣಿ ಪರ್ವಣಿ ಭೇದೇನ ವಿ ಯಯುಃ । ವಿಶಿಷ್ಟಂ ವಧಮಗಮಯನ್ । ತಥಾ ಪರ್ವತಾನ್ ಗಿರೀಂಶ್ಚ ವಿಶಿಷ್ಟಂ ವಧಂ ಪ್ರಾಪಯನ್ ॥

। ಪ್ರತಿಪದಾರ್ಥ ।

ಅರಾಜಿನಃ—ಯಾರ ಪ್ರಭುತ್ವಕ್ಕೂ ಒಳಗಾಗದೇ ತಾವೇ ಸ್ವಯಂಪ್ರಭುಗಳಾದವರೂ । ವೃಷ್ಣಿ—ವೀರ್ಯವತ್ತಾದ । ಪೌಂಸ್ಯಂ—ತಮ್ಮ ಬಲವನ್ನು । ಚಕ್ರಾಣಾಃ—ಪ್ರಕಟಿಸುವವರೂ ಆದ ಮರುತ್ತುಗಳು । ವೃತ್ರಂ—ವೃತ್ರಾಸುರನನ್ನು । ಪರ್ವಶಃ—ಅವನ ಅವಯುವದ ಪ್ರತಿಯೊಂದು ಪರ್ವದಲ್ಲಿಯೂ । ವಿ ಯಯುಃ—ಭೇದಿಸಿ ಸಾಯಿಸಿದ್ದಾರೆ । ಪರ್ವತಾನ್—ಪರ್ವತಗಳನ್ನು । ವಿ—ಕತ್ತರಿಸಿದ್ದಾರೆ.

। ಭಾವಾರ್ಥ ।

ಯಾರ ಪ್ರಭುತ್ವಕ್ಕೂ ಒಳಗಾಗದೇ, ತಾವೇ ಸ್ವಯಂಪ್ರಭುಗಳಾದವರೂ ವೀರ್ಯವತ್ತಾದ ತಮ್ಮ ಬಲವನ್ನು ಪ್ರಕಟಿಸುವವರೂ ಆದ ಮರುತ್ತುಗಳು ವೃತ್ರಾಸುರನನ್ನು ಅವನ ಅವಯವದ ಪ್ರತಿಯೊಂದು ಪರ್ವದಲ್ಲಿಯೂ ಭೇದಿಸಿ ಸಾಯಿಸಿದ್ದಾರೆ. ಪರ್ವತಗಳನ್ನು ಕತ್ತರಿಸಿದ್ದಾರೆ.

## English Translation

Independent of a ruler, they have divided Vritra joint by joint: they have shattered the mountains, manifesting manly vigour.

। ಸಂಹಿತಾಪಾಠಃ ।

ಅನು ತ್ರಿತಸ್ಯ ಯುಧ್ಯತಃ ಶುಷ್ಮಮಾವನ್ನುತ ಕ್ರತುಂ ।
ಅನ್ವಿಂದ್ರಂ ವೃತ್ರತೂರ್ಯೇ ॥ ೨೪ ॥

। ಪದಪಾಠಃ ।

ಅನು । ತ್ರಿತಸ್ಯ । ಯುಧ್ಯತಃ । ಶುಷ್ಮಂ । ಆವನ್ । ಉತ । ಕ್ರತುಂ ।
ಅನು । ಇಂದ್ರಂ । ವೃತ್ರ್ಽತೂರ್ಯೇ ॥ ೨೪ ॥

॥ ಸಾಯಣಭಾಷ್ಯಂ ॥

ತ್ರಿತಸ್ಯಾತ್ರ್ಯಸ್ಯೈತತ್ಸಂಜ್ಞಸ್ಯ ಯುಧ್ಯತಃ ಶತ್ರೂನ್ ಸಂಪ್ರಹರತೋ ರಾಜರ್ಷೇಃ ಶುಷ್ಮಂ ಪರೇಷಾಂ ಶೋಷಕಂ ಬಲಂ ಮರುತೋಽನ್ವಾವನ್ । ಸಾಹಾಯ್ಯಾರ್ಥಮನ್ವಗಚ್ಛನ್ । ಯದ್ವಾ । ಅನುಗುಣಮರಕ್ಷನ್ । ಉತಾಪಿ ಚ ಕ್ರತುಂ ತದೀಯಂ ಕರ್ಮ ಚಾರಕ್ಷನ್ । ಅಪಿ ಚ ವೃತ್ರತೂರ್ಯೇ ವೃತ್ರವಧಾರ್ಥೇ ಸಂಗ್ರಾಮ ಇಂದ್ರಂ ಚಾನ್ವಾವನ್ । ಅರಕ್ಷನ್ ॥

॥ ಪ್ರತಿಪದಾರ್ಥ ॥

ಯುಧ್ಯತಃ—ಶತ್ರುಗಳೊಂದಿಗೆ ಯುದ್ಧಮಾಡುತ್ತಿದ್ದ । ತ್ರಿತಸ್ಯ—ತ್ರಿತನೆಂಬ ರಾಜರ್ಷಿಯ । ಶುಷ್ಮಂ—ಬಲವನ್ನು । ಅನು ಅವನ್—ಮರುತ್ತುಗಳು ಹಿಂಬಾಲಿಸಿ ರಕ್ಷಿಸಿದರು । ಉತ—ಮತ್ತು । ಕ್ರತುಂ—ಅವನ ಕರ್ಮವನ್ನೂ ರಕ್ಷಿಸಿದರು । ವೃತ್ರತೂರ್ಯೇ—ಸಂಗ್ರಾಮದಲ್ಲಿ । ಇಂದ್ರಂ—ಇಂದ್ರನನ್ನೂ । ಅನು ( ಅವನ್ )—ಸಹಾಯಮಾಡಿ ರಕ್ಷಿಸಿದರು.

॥ ಭಾವಾರ್ಥ ॥

ಶತ್ರುಗಳೊಂದಿಗೆ ಯುದ್ಧಮಾಡುತ್ತಿದ್ದ ತ್ರಿತನೆಂಬ ರಾಜರ್ಷಿಯ ಬಲವನ್ನು ಮರುತ್ತುಗಳು ಹಿಂಬಾಲಿಸಿ ರಕ್ಷಿಸಿದರು. ಮತ್ತು ಅವನ ಕರ್ಮವನ್ನೂ ರಕ್ಷಿಸಿದರು. ಸಂಗ್ರಾಮದಲ್ಲಿ ಇಂದ್ರನನ್ನೂ ಸಹಾಯಮಾಡಿ ರಕ್ಷಿಸಿದರು.

## English Translation

They have come to the aid of the warring Trita, invigorating his strength, and (animating) his acts; they have come to the aid of Indra, for the destruction of Vritra,

॥ ಸಂಹಿತಾಪಾಠಃ ॥

ವಿದ್ಯುದ್ಧಸ್ತಾ ಅಭಿದ್ಯವಃ ಶಿಪ್ರಾಃ ಶೀರ್ಷನ್ಹಿರಣ್ಯಯೀಃ ।
ಶುಭ್ರಾ ವ್ಯಂಜತ ಶ್ರಿಯೇ ॥ ೨೫ ॥

॥ ಪದಪಾಠಃ ॥

ವಿದ್ಯುತ್ಽಹಸ್ತಾಃ । ಅಭಿಽದ್ಯವಃ । ಶಿಪ್ರಾಃ । ಶೀರ್ಷನ್ । ಹಿರಣ್ಯಯೀಃ ।
ಶುಭ್ರಾಃ । ವಿ । ಅಂಜತ । ಶ್ರಿಯೇ ॥ ೨೫ ॥

॥ ಸಾಯಣಭಾಷ್ಯಂ ॥

ವಿದ್ಯುದ್ಧಸ್ತಾ ವಿದ್ಯೋತಮಾನಾಯುಧಬಾಹವೋಽಭಿದ್ಯವೋಽಭಿಗತ ದೀಪ್ತಯಃ ಶುಭ್ರಾಃ ಶೋಭಮಾನಾ ಮರುತಃ ಶೀರ್ಷಞ್ಛೀರ್ಷ್ಣಿ ಶಿರಸ್ಯಾತ್ಮೀಯೇಷು ಶಿರಃಸು ಹಿರಣ್ಯಯೀರ್ಹಿರಣ್ಮಯೀಃ

ಸ್ವರ್ಣಮಯಾನಿ ಶಿಪ್ರಾಃ ಶಿರಸ್ತ್ರಾಣಾನಿ ಶ್ರಿಯೇ ಶೋಭಾರ್ಥಂ ವ್ಯಂಜತ । ವ್ಯಂಜಯಂತಿ । ವ್ಯಕ್ತೀಕುರ್ವಂತಿ । ಧಾರಯಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ವಿದ್ಯುದ್ಧಸ್ತಾಃ—ಕೈಯಿನಲ್ಲಿ ವಿದ್ಯುದ್ರೂಪವಾದ ಆಯುಧವನ್ನು ಹಿಡಿದಿರುವವರೂ । ಅಭಿದ್ಯವಃ—ಪ್ರಭೆಯನ್ನು ವಹಿಸಿರುವವರೂ । ಶುಭ್ರಾಃ—ಪ್ರಕಾಶಮಾನರೂ ಆದ ಮರುತ್ತುಗಳು । ಶೀರ್ಷನ್—ತಮ್ಮ ಶಿರಸ್ಸುಗಳ ಮೇಲೆ । ಹಿರಣ್ಯಯೀಃ—ಸುವರ್ಣನಿರ್ಮಿತಗಳಾದ । ಶಿಪ್ರಾಃ—ಕಿರೀಟಗಳನ್ನು । ಶ್ರಿಯೇ—ಕಾಂತ್ಯರ್ಥವಾಗಿ । ವ್ಯಂಜತ—ಪ್ರಕಟಿಸುತ್ತಾರೆ.

॥ ಭಾವಾರ್ಥ ॥

ಕೈಯಿನಲ್ಲಿ ವಿದ್ಯುದ್ರೂಪವಾದ ಆಯುಧವನ್ನು ಹಿಡಿದಿರುವವರೂ, ಪ್ರಭೆಯನ್ನು ವಹಿಸಿರುವವರೂ, ಪ್ರಕಾಶಮಾನರೂ ಆದ ಮರುತ್ತುಗಳು ತಮ್ಮ ಶಿರಸ್ಸುಗಳ ಮೇಲೆ ಸುವರ್ಣನಿರ್ಮಿತಗಳಾದ ಕಿರೀಟಗಳನ್ನು ಕಾಂತ್ಯರ್ಥವಾಗಿ ಧರಿಸಿ ಪ್ರಕಟಿಸುತ್ತಾರೆ.

## English Translation

The brilliant (Maruts), bearing the lightning in their hands, radiant above all, gloriously display their golden helmets on their heads.

॥ ಸಂಹಿತಾಪಾಠಃ ॥

ಉಶನಾ ಯತ್ಪರಾವತ ಉಕ್ಷ್ಣೋ ರಂಧ್ರಮಯಾತನ ।
ದ್ಯೌರ್ನ ಚಕ್ರದದ್ಭಿಯಾ ॥ ೨೬ ॥

॥ ಪದಪಾಠಃ ॥

ಉಶನಾ । ಯತ್ । ಪರಾವತಃ । ಉಕ್ಷ್ಣಃ । ರಂಧ್ರಂ । ಅಯಾತನ ।
ದ್ಯೌಃ । ನ । ಚಕ್ರದತ್ । ಭಿಯಾ ॥ ೨೬ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಉಶನಾಃ । ವ್ಯತ್ಯಯೇನ ಪ್ರಥಮಾ ॥ ಉಶನಸಾ ಕಾವ್ಯೇನರ್ಷಿಣಾ ಸ್ತೂಯಮಾನಾ ಯೂಯಂ । ಯದ್ವಾ ॥ ಉಶನಃಶಬ್ದಾತ್ಸುಪಾಂ ಸುಲುಗಿತಿ ಜಸಃ ಸುಃ ॥ ಉಶನಸಃ ಸ್ತೋತೄನ್ ಕಾಮಯಮಾನಾ ಯೂಯಂ। ಉಕ್ಷ್ಣಃ ಸೇಕ್ತುಃ ಕಾಮಾನಾಂ ವರ್ಷಿತುರಾತ್ಮೀಯಸ್ಯ ರಥಸ್ಯ ವೃಷ್ಟಿಹೇತೋರಂತರಿಕ್ಷಸ್ಯ ವಾ ರಂಧ್ರಂ ಮಧ್ಯಂ ಪರಾವತೋ ದೂರದೇಶಾದ್ಯದ್ಯದಾ ಯಾತನ ಅಗಚ್ಛತ ॥ ಯಾತೇರ್ಲೋಟಿ ಮಧ್ಯಮಬಹುವಚನಸ್ಯ ತಪ್ತನಪ್ತನಥನಾಶ್ಚೇತಿ ತನಾದೇಶಃ ॥ ತದಾನೀಂ ದ್ಯೌರ್ನ । ಅತ್ರ

ದ್ಯುಶಬ್ದೇನ ತತ್ರತ್ಯೋ ಜನಸಂಘೋ ಲಕ್ಷ್ಯತೇ । ದ್ಯುಲೋಕೇ ವರ್ತಮಾನೋ ಜನಸಂಘ ಇವ ಪಾರ್ಥಿವಮಪಿ ಸರ್ವಂ ಭೂತಜಾತಂ ಭಿಯಾ ಯುಷ್ಮದ್ವೇಗಜನಿತಯಾ ಭೀತ್ಯಾ ಚಕ್ರದತ್ । ಅಶಬ್ದಯತ್ ಆಕಂಪತ ವಾ ॥

। ಪ್ರತಿಪದಾರ್ಥ ।

(ಎಲೈ ಮರುತ್ತುಗಳೇ), ಉಶನಾ।—ಉಶನಸ್ಸೆಂಬ ಋಷಿಯಿಂದ ಪ್ರಶಂಸಿತರಾದ ನೀವು । ಉಕ್ಷ್ಣಃ—ವೃಷ್ಟಿಯನ್ನು ಸುರಿಸುವ ಅಂತರಿಕ್ಷದ । ರಂಧ್ರಂ—ಮಧ್ಯಭಾಗವನ್ನು । ಪರಾವತಃ—ಅತ್ಯಂತ ದೂರದೇಶದಿಂದ । ಯತ್—ಯಾವಾಗ । ಅಯಾತನ—ಬಂದು ಪ್ರವೇಶಿಸುವಿರೋ ಆಗ । ದ್ಯೌರ್ನ—ದ್ಯುಲೋಕವನ್ನು ನಡುಗಿಸುವಂತೆಯೇ । ಭಿಯಾ—ನಿಮ್ಮ ಬೆದರಿಕೆಯಿಂದ । ಚಕ್ರದತ್—( ಪೃಥ್ವಿಯನ್ನೂ ) ನಡುಗುವಂತೆ ಮಾಡುತ್ತೀರಿ.

। ಭಾವಾರ್ಥ ।

ಎಲೈ ಮರುತ್ತುಗಳೇ! ಉಶನಸ್ಸೆಂಬ ಋಷಿಯಿಂದ ಪ್ರಶಂಸಿತರಾದ ನೀವು ವೃಷ್ಟಿಯನ್ನು ಸುರಿಸುವ ಅಂತರಿಕ್ಷದ ಮಧ್ಯಭಾಗವನ್ನು ಅತ್ಯಂತ ದೂರದೇಶದಿಂದ ಯಾವಾಗ ಬಂದು ಪ್ರವೇಶಿಸುವಿರೋ, ಆಗ ದ್ಯುಲೋಕವನ್ನು ನಡಗಿಸುವಂತೆಯೇ, ಪೃಥ್ವಿಯನ್ನೂ ನಿಮ್ಮ ಬೆದರಿಕೆಯಿಂದ ನಡುಗುವಂತೆ ಮಾಡುತ್ತೀರಿ.

## English Translation

Glorified, (Maruts), by Usanas, when you approach from afar to the opening of the rainy (firmament), then (the dwellers on earth), like those in heaven, are clamorous through fear.

। ಸಂಹಿತಾಪಾಠಃ ।

ಆ ನೋ ಮಖಸ್ಯ ದಾವನೇಽಶ್ವೈರ್ಹಿರಣ್ಯಪಾಣಿಭಿಃ ।

ದೇವಾಸ ಉಪ ಗಂತನ ॥ ೨೭ ॥

॥ ಪದಪಾಠಃ ॥

ಆ । ನಃ । ಮಖಸ್ಯ । ದಾವನೇ । ಅಶ್ವೈಃ । ಹಿರಣ್ಯಪಾಣಿಽಭಿಃ ।

ದೇವಾಸಃ । ಉಪ । ಗಂತನ ॥ ೨೭ ॥

। ಸಾಯಣಭಾಷ್ಯಂ ।

ಹೇ ದೇವಾಸೋ ದಾನಾದಿಗುಣಯುಕ್ತಾ ಮರುತಃ ನೋಽಸ್ಮಾಕಂ ಮಖಸ್ಯ ಯಜ್ಞಸ್ಯ ದಾವನೇ ದಾನಾಯ ॥ ದದಾತೇರೌಣಾದಿಕೋ ಭಾವೇ ವನಿಃ ॥ ಹಿರಣ್ಯಪಾಣಿಭಿಃ ಸ್ವರ್ಣಮಯಪಾದೈಃ ಸ್ವರ್ಣಾಲಂಕೃತೈರ್ಹಿರಣ್ಮಯಪಾದೈರ್ವಾಶ್ವೈರುಪ ಗಂತನ । ಉಪಾಗಚ್ಛತ । ಪ್ರಾಪ್ನುತ ॥ ಗಮೇರ್ಲೋಟಿ ಛಾಂದಸಃ ಶಪೋ ಲುಕ್ । ತಪ್ತನಪ್ತನಥನಾಶ್ಚೇತಿ ತನಬಾದೇಶಃ । ಅತ ಏವ ಙಿತ್ತ್ವಾಭಾವಾದನುನಾಸಿಕಲೋಪೋ ನ ಕ್ರಿಯತೇ ॥

। ಪ್ರತಿಪದಾರ್ಥ ।

ದೇವಾಸಃ—ದಾನಾದಿಗುಣಯುಕ್ತರಾದ ಎಲೈ ಮರುತ್ತುಗಳೇ । ನಃ—ನಮ್ಮ । ಮಖಸ್ಯ—ಯಜ್ಞಕ್ಕೆ । ದಾವನೇ—ಉದಾರವಾಗಿ ದಾನಮಾಡಲು । ಹಿರಣ್ಯಪಾಣಿಭಿಃ—ಸುವರ್ಣಮಯವಾದ ಪಾದಗಳುಳ್ಳ । ಅಶ್ವೈಃ—ಅಶ್ವಗಳೊಡನೆ । ಆ ಉಪ ಗಂತನ—ದಯಮಾಡಿರಿ.

। ಭಾವಾರ್ಥ ।

ದಾನಾದಿಗುಣಯುಕ್ತರಾದ ಎಲೈ ಮರುತ್ತುಗಳೇ, ನಮಗೆ ಉದಾರವಾಗಿ ದಾನಮಾಡಲು ಸುವರ್ಣಮಯವಾದ ಪಾದಗಳುಳ್ಳ ಅಶ್ವಗಳೊಡನೆ ನಮ್ಮ ಯಜ್ಞಕ್ಕೆ ದಯಮಾಡಿರಿ.

English Translation

Come, gods, to (show your) liberality at our sacrifice with your golden-footed steeds.

। ಸಂಹಿತಾಪಾಠಃ ।

ಯದೇಷಾಂ ಪೃಷತೀ ರಥೇ ಪ್ರಷ್ಟಿರ್ವಹತಿ ರೋಹಿತಃ ।
ಯಾಂತಿ ಶುಭ್ರಾ ರಿಣನ್ನಪಃ ॥ ೨೮ ॥

। ಪದಪಾಠಃ ।

ಯತ್ । ಏಷಾಂ । ಪೃಷತೀಃ । ರಥೇ । ಪ್ರಷ್ಟಿಃ । ವಹತಿ । ರೋಹಿತಃ ।
ಯಾಂತಿ । ಶುಭ್ರಾಃ । ರಿಣನ್ । ಅಪಃ ॥ ೨೮ ॥

। ಸಾಯಣಭಾಷ್ಯಂ ।

ಏಷಾಂ ಮರುತಾಂ ರಥೇ ಪೃಷತೀಃ ಪೃಷದ್ಭಿಃ ಶ್ವೇತಬಿಂದುಭಿರ್ಯುಕ್ತಾ ಮೃಗ್ಯೋ ಯದ್ಯದಾ ವಹಂತಿ ಯದಾ ಚ ಪ್ರಷ್ಟಿಃ ಪ್ರಾಶುಃ ಶೀಘ್ರಗಾಮೀ । ಯದ್ವಾ । ಪ್ರಮುಖೇ ಯುಜ್ಯಮಾನಃ ಸನ್ ।

ರೋಹಿತಃ ಪೃಷತಃ ಪೃಷದ್ಭಿರ್ಯುಕ್ತೋ ಮೃಗೋ ವಹತಿ ತದಾನೀಂ ಶುಭ್ರಾಃ ಶೋಭಮಾನಾ ಮರುತೋ ಯಾಂತಿ । ಗಚ್ಛಂತಿ । ತೇಷಾಂ ಗಮನೇ ಚ ಸತ್ಯಪ ಉದಕಾನಿ ವೃಷ್ಟಿಲಕ್ಷಣಾನಿ ರಿಣನ್ । ಅರಿಣನ್ । ಅಗಚ್ಛನ್ । ಸರ್ವತ್ರ ಪ್ರವಹಂತಿ ॥ ರೀ ಗತಿರೇಷಣಯೋಃ । ಕ್ರ್ಯಾದಿಃ । ಪ್ವಾದೀನಾಂ ಹ್ರಸ್ವಃ । ಛಾಂದಸೋಽಡಭಾವಃ । ಸಮಾನವಾಕ್ಯೇ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾಃ । ಪಾ. ೮-೧-೧೮-೫ । ಇತಿ ವಚನಾದತ್ರ ಪೂರ್ವಪದಸ್ಯ ವಾಕ್ಯಾಂತರಗತತ್ವಾತ್ತಿಙ್ಙತಿಙ ಇತಿ ನಿಘಾತಾಭಾವಃ ॥

॥ ಪ್ರತಿಪದಾರ್ಥ ॥

ಏಷಾಂ—ಈ ಮರುತ್ತುಗಳನ್ನು । ರಥೇ—ರಥದಲ್ಲಿ ಕುಳ್ಳಿರಿಸಿ । ಪೃಷತೀಃ—ಚುಕ್ಕಿಗಳಿಂದ ಕೂಡಿದ ಹೆಣ್ಣುಜಿಂಕೆಗಳು । ಯತ್—ಯಾವಾಗ ವಹಿಸುವುವೋ । (ಯತ್—ಯಾವಾಗ) । ಪ್ರಷ್ಟಿಃ—ಶೀಘ್ರಗಾಮಿಯಾದುದೂ । ರೋಹಿತಃ—ಹೊಂಬಣ್ಣವುಳ್ಳದ್ದೂ ಆದ ಗಂಡು ಜಿಂಕೆಯೂ । ವಹತಿ—ಇವರನ್ನು ವಹಿಸುವುದೋ (ಆಗ) । ಶುಭ್ರಾಃ—ಪ್ರಕಾಶಮಾನರಾದ ಮರುತ್ತುಗಳು । ಯಾಂತಿ—ಸಂಚರಿಸುತ್ತಾರೆ (ಆ ಕಾಲದಲ್ಲಿ) । ಅಪಃ—ಉದಕಗಳು । ರಿಣನ್—ಪ್ರವಹಿಸುತ್ತವೆ.

॥ ಭಾವಾರ್ಥ ॥

ಯಾವಾಗ ಈ ಮರುತ್ತುಗಳನ್ನು ರಥದಲ್ಲಿ ಕುಳ್ಳಿರಿಸಿ ಬಿಂದುಯುಕ್ತಗಳಾದ ಹೆಣ್ಣುಜಿಂಕೆಗಳು ವಹಿಸುವುವೋ ಮತ್ತು ಯಾವಾಗ ಶೀಘ್ರಗಾಮಿಯಾದುದೂ, ಹೊಂಬಣ್ಣವುಳ್ಳದ್ದೂ ಆದ ಗಂಡು ಜಿಂಕೆಯೂ ಇವರನ್ನು ವಹಿಸುವುದೋ ಆಗ ಪ್ರಕಾಶಮಾನರಾದ ಮರುತ್ತುಗಳು ಸಂಚರಿಸುತ್ತಾರೆ. ಆ ಕಾಲದಲ್ಲಿ ಉದಕಗಳು ಪ್ರವಹಿಸುತ್ತವೆ.

## English Translation

When the spotted antelope or the swift tawny deer conveys them in their chariot, then the brilliant (Maruts) depart, and the rains have gone.

॥ ಸಂಹಿತಾಪಾಠಃ ॥

ಸುಷೋಮೇ ಶರ್ಯಣಾವತ್ಯಾರ್ಜೀಕೇ ಪಸ್ತ್ಯಾವತಿ ।

ಯಯುರ್ನಿಚಕ್ರಯಾ ನರಃ ॥ ೨೯ ॥

॥ ಪದಪಾಠಃ ॥

ಸುಽಸೋಮೇ । ಶರ್ಯಣಾಽವತಿ । ಆರ್ಜೀಕೇ । ಪಸ್ತ್ಯಽವತಿ ।

ಯಯುಃ । ನಿಽಚಕ್ರಯಾ । ನರಃ ॥ ೨೯ ॥

॥ ಸಾಯಣಭಾಷ್ಯಂ ॥

ಸುಷೋಮೇ ಶೋಭನಸೋಮಯುಕ್ತೇ ಆರ್ಜೀಕೇ । ಋಜೀಕಾ ನಾಮ ದೇಶಾಃ । ತತ್ಸಂಬಂಧಿನಿ ಶರ್ಯಣಾವತಿ ಕುರುಕ್ಷೇತ್ರಸ್ಯ ಜಘನಾರ್ಧೇ ಶರ್ಯಣಾವತ್ಸಂಜ್ಞೇ ಸರಸಿ ಪಸ್ತ್ಯಾವತಿ । ಪಸ್ತ್ಯಮಿತಿ ಗೃಹನಾಮ । ಯಜ್ಞಗೃಹೋಪೇತೇ ಸೋಮಪಾನಾಯ ನರೋ ನೇತಾರೋ ಮರುತೋ ನಿಚಕ್ರಯಾ ನೀಚೀನಚಕ್ರಯಾವಾಙ್ಮುಖಂ ಪ್ರವರ್ತಮಾನಯಾ ರಥಕಟ್ಯಾ ಯಯುಃ । ಯಾಂತಿ । ಗಚ್ಛಂತಿ ॥ ಯಾತೇಶ್ಛಾಂದಸೋ ಲಿಟ್ ॥ ಯದ್ವಾ । ನರೋ ನೇತಾರ ಋತ್ವಿಜ ಉಕ್ತಗುಣವಿಶಿಷ್ಟೇ ಶರ್ಯಣಾವತಿ ಮರುದ್ಯಾಗಾಯ ಸೋಮಮಾಹರ್ತುಂ ನಿಚಕ್ರಯಾ ನೀಚೀನಚಕ್ರಯಾ ಶಕಟ್ಯಾ ಯಯುಃ । ಗಚ್ಛಂತಿ ॥

॥ ಪ್ರತಿಪದಾರ್ಥ ॥

ಪಸ್ತ್ಯಾವತಿ—ಯಜ್ಞಗೃಹಗಳಿಂದ ಕೂಡಿದುದೂ । ಸುಷೋಮೇ—ಉತ್ತಮವಾದ ಸೋಮರಸಗಳಿಂದ ತುಂಬಿದುದೂ । ಆರ್ಜೀಕೇ—ಋಜೀಕಸಂಜ್ಞಕವಾದ ದೇಶಕ್ಕೆ ಸೇರಿದುದೂ । ಶರ್ಯಣಾವತಿ—ಶರ್ಯಣಾವತ್ತೆಂಬ ಹೆಸರುಳ್ಳದ್ದೂ ಆದ ಸರಸ್ಸಿನ ದಡಕ್ಕೆ । ನರಃ—ನೇತೃಗಳಾದ ಮರುತ್ತುಗಳು । ನಿಚಕ್ರಯಾ—ಅಧೋಮುಖವಾಗಿ ಉರುಳುವ ಚಕ್ರಗಳುಳ್ಳ ರಥಗಳಲ್ಲಿ । ಯಯುಃ—ಬರುತ್ತಾರೆ.

॥ ಭಾವಾರ್ಥ ॥

ಯಜ್ಞಗೃಹಗಳಿಂದ ಕೂಡಿದುದೂ, ಉತ್ತಮವಾದ ಸೋಮರಸಗಳಿಂದ ತುಂಬಿದುದೂ, ಋಜೀಕಸಂಜ್ಞಕವಾದ ದೇಶಕ್ಕೆ ಸೇರಿದುದೂ, ಶರ್ಯಣಾವತ್ತೆಂಬ ಹೆಸರುಳ್ಳದ್ದೂ ಆದ ಸರಸ್ಸಿನ ದಡಕ್ಕೆ ನೇತೃಗಳಾದ ಮರುತ್ತುಗಳು ಅಧೋಮುಖವಾಗಿ ಉರುಳುವ ಚಕ್ರಗಳುಳ್ಳ ರಥಗಳಲ್ಲಿ ಸೋಮಪಾನಾರ್ಥವಾಗಿ ಇಳಿದುಬರುತ್ತಾರೆ.

English Translation

The leaders of rites have proceeded with downward chariot-wheels to the Rijika country, where lies the Sharyanavat, abounding in dwellings, and where Soma is plentifui.

॥ ಸಂಹಿತಾಪಾಠಃ ॥

ಕದಾ ಗಚ್ಛಾಥ ಮರುತ ಇತ್ಥಾ ವಿಪ್ರಂ ಹವಮಾನಂ ।
ಮಾರ್ಡೀಕೇಭಿರ್ನಾಧಮಾನಂ ॥ ೩೦ ॥

॥ ಪದಪಾಠಃ ॥

ಕದಾ । ಗಚ್ಛಾಥ । ಮರುತಃ । ಇತ್ಥಾ । ವಿಪ್ರಂ । ಹವಮಾನಂ ।
ಮಾರ್ಡೀಕೇಭಿಃ । ನಾಧಮಾನಂ ॥ ೩೦ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಇತ್ಥೇತ್ಥಮನೇನ ಪ್ರಕಾರೇಣ ಹವಮಾನಮಾಹ್ವಯಂತಂ ಸ್ತುವಂತಂ ನಾಧಮಾನಂ. ಯಾಚಮಾನಂ ವಿಪ್ರಂ ಮೇಧಾವಿನಂ ಸ್ತೋತಾರಂ ಮಾಂ ಕದಾ ಕಸ್ಮಿನ್ಕಾಲೇ ಮಾರ್ಡೀಕೇಭಿಃ ಸುಖಹೇತುಭಿರ್ಧನೈಃ ಸಾರ್ಧಂ ಗಚ್ಛಾಥ । ಗಚ್ಛಥ । ವಿಲಂಬಂ ಮಾ ಕೃಷತ ಶೀಘ್ರಮಾಗಚ್ಛತೇತಿ ಭಾವಃ ॥

॥ ಪ್ರತಿಪದಾರ್ಥ ॥

ಮರುತಃ—ಎಲೈ ಮರುತ್ತುಗಳೇ । ಇತ್ಥಾ—ಈ ಪ್ರಕಾರವಾಗಿ । ಹವಮಾನಂ—ನಿಮ್ಮನ್ನು ಸ್ತುತಿಸಿ ಆಹ್ವಾನವನ್ನು ಕೊಡುವವನೂ । ನಾಧಮಾನಂ—ನಿಮ್ಮನ್ನು ಯಾಚಿಸುವವನೂ । ವಿಪ್ರಂ—ಮೇಧಾವಿಯೂ ಆದ ಸ್ತುತಿಕರ್ತನಲ್ಲಿಗೆ । ಕದಾ—ಯಾವಾಗ । ಮಾರ್ಡೀಕೇಭಿಃ—ಸುಖಸಾಧಕಗಳಾದ ಧನಗಳೊಡನೆ ಗಚ್ಛಾಥ—ಬರುತ್ತೀರಿ.

॥ ಭಾವಾರ್ಥ ॥

ಎಲೈ ಮರುತ್ತುಗಳೇ, ಈ ಪ್ರಕಾರವಾಗಿ ನಿಮ್ಮನ್ನು ಸ್ತುತಿಸಿ ಆಹ್ವಾನವನ್ನು ಕೊಡುವವನೂ, ನಿಮ್ಮನ್ನು ಯಾಚಿಸುವವನೂ, ಮೇಧಾವಿಯೂ ಆದ ಸ್ತುತಿಕರ್ತನಲ್ಲಿಗೆ ನೀವು ಸುಖಸಾಧಕಗಳಾದ ಧನಗಳೊಡನೆ ಯಾವಾಗ ಬರುವಿರಿ ?

English Translation

When, Maruts, will you repair with joy-bestowing riches to the sage thus adoring you, and soliciting (you for wealth)?

॥ ಸಂಹಿತಾಪಾಠಃ ॥

ಕದ್ಧ ನೂನಂ ಕಧಪ್ರಿಯೋ ಯದಿಂದ್ರಮಜಹಾತನ ।
ಕೋ ವಃ ಸಖಿತ್ವ ಓಹತೇ ॥ ೩೧ ॥

॥ ಪದಪಾಠಃ ॥

ಕತ್ । ಹ । ನೂನಂ । ಕಧಽಪ್ರಿಯಃ । ಯತ್ । ಇಂದ್ರಂ । ಅಜಹಾತನ ।
ಕಃ । ವಃ । ಸಖಿಽತ್ವೇ । ಓಹತೇ ॥ ೩೧ ॥

॥ ಸಾಯಣಭಾಷ್ಯಂ ॥

ಹೇ ಕಧಪ್ರಿಯಃ ಕಧಯಾ ಸ್ತುತ್ಯಾ ಪ್ರೀಯಮಾಣಾಃ ॥ ಕಥ ವಾಕ್ಯಪ್ರಬಂಧನೇ । ಅಸ್ಮಾದ್ಧಾವೇ ಚಿಂತಿಪೂಜೀತ್ಯಾದಿನಾಙ್ । ಟಾಪ್ । ಉತ್ತರಪದೇ ಙ್ಯಾಪೋಃ ಸಂಜ್ಞಾಛಂದಸೋರಿತಿ ಹ್ರಸ್ವತ್ವಂ ।

ಧತ್ವಂ ಛಾಂದಸಂ ॥ ಈದೃಶಾ ಹೇ ಮರುತಃ ವೃತ್ರೇಣ ಸಹ ಯುಧ್ಯಮಾನಮಿಂದ್ರಂ ನೂನಂ ಸತ್ಯಮ-ಜಹಾತನ ಪರ್ಯತ್ಯಜತೇತಿ ಯದೇತತ್ ತತ್ಕದ್ಧ ಕದಾ ಖಲು ಕಸ್ಮಿನ್ಕಾಲೇ ಜಾತಂ । ನ ಕದಾಚಿದ-ಪೀತ್ಯರ್ಥಃ । ತಥಾ ಚ ಬ್ರಾಹ್ಮಣಂ । ಮರುತೋ ಹ್ಯೇನಂ ನಾಜಹುಃ ಪ್ರಹರ ಭಗವೋ ಜಹಿ ವೀರಯಸ್ವ। ಐ. ಬ್ರಾ. ೩-೨೦ । ಇತಿ । ವೃತ್ರಸ್ಯ ತ್ವಾ ಶ್ವಸಥಾದೀಷಮಾಣಾಃ । ಋ. ೮.೯೬-೭ । ಇತ್ಯಾದಿ ಚ ನಿಗ-ಮಾಂತರಂ । ಯತ ಏವಮತಃ ಕಾರಣಾದ್ವೋ ಯುಷ್ಮಾಕಂ ಸಖಿತ್ವೇ ॥ ವ್ಯತ್ಯಯೇನ ಸಪ್ತಮೀ ॥ ಸಖಿ-ಭಾವಂ ಕಃ ಸ್ತೋತಾ ಓಹತೇ । ಯಾಚತೇ । ಯದ್ವಾ । ವಹತೇ । ಪ್ರಾಪ್ನೋತಿ । ಈದೃಶಮನಪಾಯಂ ಯುಷ್ಮತ್ಸಖಿತ್ವಂ ದುರ್ಲಭಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಕಧಪ್ರಿಯಃ—ಸ್ತುತಿಗಳಿಂದ ಪ್ರೀತರಾಗತಕ್ಕ ಎಲೈ ಮರುತ್ತುಗಳೇ । ಇಂದ್ರಂ—ವೃತ್ರನೊಂದಿಗೆ ಯುದ್ಧಮಾಡುತ್ತಿದ್ದ ಇಂದ್ರನನ್ನು । ನೂನಂ—ಖಂಡಿತವಾಗಿಯೂ । ಅಜಹಾತನ—ನೀವು ತ್ಯಜಿಸಿದಿರಿ ಎಂಬ । ಯತ್—ಯಾವ ಪ್ರವಾದವುಂಟೋ ಅದು । ಕದ್ಧ—ಯಾವಾಗ ಸಂಭವಿಸಿತು । ವಃ—ನಿಮ್ಮ । ಸಖಿತ್ವೇ—ಮಿತ್ರತ್ವವನ್ನು । ಕಃ—ಯಾವ ಸ್ತುತಿಕರ್ತನು । ಓಹತೇ—ಯಾಚಿಸಿ ಪಡೆಯಬಲ್ಲನು.

॥ ಭಾವಾರ್ಥ ॥

ಸ್ತುತಿಪ್ರಿಯರಾದ ಎಲೈ ಮರುತ್ತುಗಳೇ, ವೃತ್ರನೊಂದಿಗೆ ಯುದ್ಧಮಾಡುತ್ತಿದ್ದ ಇಂದ್ರನನ್ನು ಖಂಡಿತವಾಗಿಯೂ ನೀವು ತ್ಯಜಿಸಿದಿರಿ ಎಂಬ ಯಾವ ಪ್ರವಾದವುಂಟೋ ಅದು ಯಾವಾಗ ಸಂಭವಿಸಿತು ? (ಯಾವಾಗಲೂ ಇಲ್ಲ) ನಿಮ್ಮ ಮಿತ್ರತ್ವವನ್ನು ಯಾವ ಸ್ತುತಿಕರ್ತನು ಯಾಚಿಸಿ ಪಡೆಯಬಲ್ಲನು ?

## English Translation

When was it, Maruts, who are gratified by praise, that you really deserted Indra ? who is there that enjoys your friendship ?

॥ ಸಂಹಿತಾಪಾಠಃ ॥

ಸಹೋ ಷು ಣೋ ವಜ್ರಹಸ್ತೈಃ ಕಣ್ವಾಸೋ ಅಗ್ನಿಂ ಮರುದ್ಭಿಃ ।
ಸ್ತುಷೇ ಹಿರಣ್ಯವಾಶೀಭಿಃ ॥ ೩೨ ॥

॥ ಪದಪಾಠಃ ॥

ಸಹೋ ಇತಿ । ಸು । ನಃ । ವಜ್ರಽಹಸ್ತೈಃ । ಕಣ್ವಾಸಃ । ಅಗ್ನಿಂ । ಮರುತ್ಽಭಿಃ ।
ಸ್ತುಷೇ । ಹಿರಣ್ಯಽವಾಶೀಭಿಃ ॥ ೩೨ ॥

॥ ಸಾಯಣಭಾಷ್ಯಂ ॥

ವಜ್ರಹಸ್ತೈರ್ವಜ್ರಬಾಹುಭಿರ್ಹಿರಣ್ಯವಾಶೀಭಿಃ। ಹಿರಣ್ಮಯೀ ವಾಶೀ ತಕ್ಷಣಸಾಧನಮಾಯುಧಂ ಯೇಷಾಮಸ್ತಿ ತಾದೃಶೈಃ। ಮರುದ್ಭಿಃ ಸಹೋ ಸಹೈವ ವರ್ತಮಾನಮಗ್ನಿಂ ನೋಽಸ್ಮದೀಯಾ ಹೇ ಕಣ್ವಾಸಃ ಕಣ್ವಾಃ ಸ್ತೋತಾರಃ ಕಣ್ವಗೋತ್ರಾ ಋಷಯಃ ಯೂಯಂ ಸ್ತುಷೇ। ಸ್ತುಧ್ವಂ। ಯದ್ವಾ। ನ ಇತಿ ಪ್ರಥಮಾರ್ಥೇ ದ್ವಿತೀಯಾ। ನೋ ವಯಂ ಕಣ್ವಗೋತ್ರಾಃ॥ ಅಸ್ಮದೋ ದ್ವಯೋಶ್ಚ॥ ಪಾ. ೧-೨-೫೯। ಇತ್ಯೇಕಸ್ಮಿನ್ ಬಹುವಚನಂ। ಸವಿಶೇಷಣಸ್ಯ ಪ್ರತಿಷೇಧಃ। ಕಾ. ೧-೨-೫೯-೧। ಇತಿ ತು ವ್ಯತ್ಯಯೇನ ಪ್ರವರ್ತತೇ॥ ಸ್ತುಷೇ। ಸ್ತುವೇ॥ ಸ್ತೌತೇರುತ್ತಮಸ್ಯೈಕವಚನೇ ಸಿಬ್ಬಹುಲಮಿತಿ ಸಿಪ್॥

॥ ಪ್ರತಿಪದಾರ್ಥ ॥

ನಃ—ನಮಗೆ ಸೇರಿದವರೂ । ಕಣ್ವಾಸಃ—ಕಣ್ವಗೋತ್ರೋತ್ಪನ್ನರೂ ಆದ ಎಲೈ ಋಷಿಗಳೇ । ವಜ್ರಹಸ್ತೈಃ—ಬಾಹುಗಳಲ್ಲಿ ವಜ್ರಾಯುಧವುಳ್ಳವರೂ । ಹಿರಣ್ಯವಾಶೀಭಿಃ—ಸುವರ್ಣನಿರ್ಮಿತವಾದ ಚಾವಟಿಯುಳ್ಳವರೂ ಆದ । ಮರುದ್ಭಿಃ ಸಹೋ—ಮರುತ್ತುಗಳೊಡನೆ ಇರುವ । ಅಗ್ನಿಂ—ಅಗ್ನಿಯನ್ನು । ಸು ಸ್ತುಷೇ—ಅತಿಶಯವಾಗಿ ಸ್ತುತಿಸಿರಿ.

॥ ಭಾವಾರ್ಥ ॥

ನಮಗೆ ಸೇರಿದವರೂ, ಕಣ್ವಗೋತ್ರೋತ್ಪನ್ನರೂ ಆದ ಎಲೈ ಋಷಿಗಳೇ, ಬಾಹುಗಳಲ್ಲಿ ವಜ್ರಾಯುಧವನ್ನೂ ಸುವರ್ಣನಿರ್ಮಿತವಾದ ಚಾವಟಿಯನ್ನು ಹಿಡಿದಿರುವವರಾದ ಮರುತ್ತುಗಳೊಡನೆ ಇರುವ ಅಗ್ನಿಯನ್ನು ಅತಿಶಯವಾಗಿ ಸ್ತುತಿಸಿರಿ.

English Translation

You of our race of Kanwa, praise Agni together with the Maruts, bearing the thunderbolt in their hands, and armed with golden lances.

॥ ಸಂಹಿತಾಪಾಠಃ ॥

ಓ ಷು ವೃಷ್ಣಃ ಪ್ರಯಜ್ಯೂನಾ ನವ್ಯಸೇ ಸುವಿತಾಯ ।
ವವೃತ್ಯಾಂ ಚಿತ್ರವಾಜಾನ್ ॥ ೩೩ ॥

॥ ಪದಪಾಠಃ ॥

ಓ ಇತಿ । ಸು । ವೃಷ್ಣಃ । ಪ್ರಽಯಜ್ಯೂನ್ । ಆ । ನವ್ಯಸೇ । ಸುವಿತಾಯ ।
ವವೃತ್ಯಾಂ । ಚಿತ್ರಽವಾಜಾನ್ ॥ ೩೩ ॥

॥ ಸಾಯಣಭಾಷ್ಯಂ ॥

ವೃಷ್ಣಃ ವರ್ಷಿತೄನಭೀಷ್ಟಫಲದಾನ್ ಪ್ರಯಜ್ಯೂನ್ ಪ್ರಕರ್ಷೇಣ ಯಷ್ಟವ್ಯಾನ್ ಚಿತ್ರವಾಜಾನ್ ವಿಚಿತ್ರಗಮನಾನ್ ವಿಚಿತ್ರಬಲಾನ್ ವಿಚಿತ್ರಧನಾನ್ವಾ ಏವಂಭೂತಾನ್ಮರುತಃ ಸು ಸುಷ್ಠು ಆ ಉ ವವೃತ್ಯಾಂ । ಆವರ್ತಯಾಮಿ । ಅಸ್ಮದಭಿಮುಖಂ ಯಥಾ ಗಚ್ಛಂತಿ ತಥಾ ಕರೋಮಿ । ಅಪಿ ಚ ನವ್ಯಸೇ ನವೀಯಸೇ ನವತರಾಯಾತ್ಯಂತಂ ಪ್ರಶಸ್ತಾಯ ಸುವಿತಾಯ ಸುಷ್ಠು ಪ್ರಾಪ್ತವ್ಯಾಯ ಧನಾಯ ಚ ತಾನಾ ವವೃತ್ಯಾಂ । ಆವರ್ತಯಾಮಿ ॥

॥ ಪ್ರತಿಪದಾರ್ಥ ॥

ವೃಷ್ಣಃ—ಇಷ್ಟಾರ್ಥಪ್ರದರೂ । ಪ್ರಯಜ್ಯೂನ್—ಪ್ರಶಸ್ಯವಾದ ಪೂಜಾರ್ಹರೂ । ಚಿತ್ರವಾಜಾನ್—ಅನೇಕವಿಧವಾದ ಸಂಪತ್ತುಳ್ಳವರೂ ಆದ ಮರುತ್ತುಗಳನ್ನು । ಸು—ಅತಿಶಯವಾಗಿ । ಓ ವವೃತ್ಯಾಂ—ನಮಗಭಿಮುಖವಾಗಿ ಬರುವಂತೆ ಮಾಡುತ್ತೇನೆ । ನವ್ಯಸೇ—ಅತ್ಯಂತ ಪ್ರಶಸ್ಯವಾದ । ಸುವಿತಾಯ—ಧನಲಾಭಕ್ಕಾಗಿ । ಆ (ವವೃತ್ಯಾಂ)—ಅವರನ್ನು ಬರಮಾಡಿಕೊಳ್ಳುತ್ತೇನೆ.

॥ ಭಾವಾರ್ಥ ॥

ಇಷ್ಟಾರ್ಥಪ್ರದರೂ, ಪ್ರಶಸ್ಯವಾದ ಪೂಜಾರ್ಹರೂ, ಅನೇಕವಿಧವಾದ ಸಂಪತ್ತುಳ್ಳವರೂ ಆದ ಮರುತ್ತುಗಳನ್ನು ಅತಿಶಯವಾಗಿ ನಮಗಭಿಮುಖವಾಗಿ ಬರುವಂತೆ ಮಾಡುತ್ತೇನೆ. ಅತ್ಯಂತ ಪ್ರಶಸ್ಯವಾದ ಧನಲಾಭಕ್ಕಾಗಿ ಅವರನ್ನು ಬರಮಾಡಿಕೊಳ್ಳುತ್ತೇನೆ.

## English Translation

I bring to my presence, for the sake of most excellent prosperity, the showrers (of desires), the adorable (Maruts), the possessors of wonderful strength

॥ ಸಂಹಿತಾಪಾಠಃ ॥

ಗಿರಯಶ್ಚಿನ್ನಿ ಜಿಹತೇ ಪರ್ಶಾನಾಸೋ ಮನ್ಯಮಾನಾಃ ।

ಪರ್ವತಾಶ್ಚಿನ್ನಿ ಯೇಮಿರೇ ॥ ೩೪ ॥

॥ ಪದಪಾಠಃ ॥

ಗಿರಯಃ । ಚಿತ್ । ನಿ । ಜಿಹತೇ । ಪರ್ಶಾನಾಸಃ । ಮನ್ಯಮಾನಾಃ ।

ಪರ್ವತಾಃ । ಚಿತ್ । ನಿ । ಯೇಮಿರೇ ॥ ೩೪ ॥

॥ ಸಾಯಣಭಾಷ್ಯಂ ॥

ಮರುತ್ಸ್ವಾಗಚ್ಛತ್ಸು ಗಿರಿಯಶ್ಚಿದ್ಗಿರಯೋಽಪಿ ಶಿಲೋಚ್ಚಯಾ ಅಪಿ ಪರ್ಶಾನಾಸಃ ಪೀಡ್ಯಮಾನಾಃ । ಯದ್ವಾ । ಮರುದ್ಭಿಃ ಸ್ಪೃಶ್ಯಮಾನಾಃ । ಅತ ಏವ ಮನ್ಯಮಾನಾ ಅಭಿಮನ್ಯಮಾನಾ ಬಾಧ್ಯಮಾನಾಃ ಸಂತೋ ನಿ ಜಿಹತೇ । ನಿತರಾಂ ಗಚ್ಛಂತಿ । ಮರುದ್ವೇಗೇನ ಸ್ಥಾನಾತ್ ಪ್ರಚ್ಯವಂತೇ । ತಥಾ ಪರ್ವತಾಶ್ಚಿತ್ ಪರ್ವವಂತೋ ಮೇಘಾ ಅಪಿ ತದೀಯೇನ ಗಮನೇನ ನಿ ಯೇಮಿರೇ । ನಿಯಮ್ಯಂತೇ । ಯದ್ವಾ । ಗಿರಯಃ ಕ್ಷುದ್ರಾಃ ಶಿಲೋಚ್ಚಯಾ ಮಹಾಂತಃ ಪರ್ವತಾಃ ॥

॥ ಪ್ರತಿಪದಾರ್ಥ ॥

(ಈ ಮರುತ್ತುಗಳ ಆಗಮನಕಾಲದಲ್ಲಿ) ಗಿರಯಶ್ಚಿತ್—ಪರ್ವತಗಳೂ ಕೂಡ । ಪರ್ಶಾನಾಸಃ—ಕುಗ್ಗಿಸಲ್ಪಟ್ಟವಾಗಿಯೂ । ಮನ್ಯಮಾನಾಃ—ಅದುದರಿಂದಲೇ ಹಿಂಸಿತವಾಗಿಯೂ । ನಿ ಜಿಹತೇ—ತಮ್ಮ ಸ್ಥಾನಗಳಿಂದ ಚಲಿಸುತ್ತವೆ । ಪರ್ವತಾಶ್ಚಿತ್—ಮೇಘಗಳೂ ಸಹ । ನಿ ಯೇಮಿರೇ—ನಿಯಮಿತವಾದ ಗಮನವುಳ್ಳವಾಗುತ್ತವೆ.

॥ ಭಾವಾರ್ಥ ॥

ಈ ಮರುತ್ತುಗಳ ಸಂಚಾರಕಾಲದಲ್ಲಿ ಪರ್ವತಗಳೂ ಕೂಡ ಕುಗ್ಗಿಸಲ್ಪಟ್ಟು ಹಿಂಸಿತವಾಗಿ ತಮ್ಮ ಸ್ಥಾನಗಳಿಂದ ಚಲಿಸುತ್ತವೆ. ಮೇಘಗಳೂ ಸಹ ನಿಯಮಿತವಾದ ಗಮನವುಳ್ಳವಾಗುತ್ತವೆ.

## English Translation

The hills, oppressed and agitated by them, move (from their places); the mountains are restrained.

॥ ಸಂಹಿತಾಪಾಠಃ ॥

ಆಕ್ಷ್ಣಯಾವಾನೋ ವಹಂತ್ಯಂತರಿಕ್ಷೇಣ ಪತತಃ ।
ಧಾತಾರಃ ಸ್ತುವತೇ ವಯಃ ॥ ೩೫ ॥

॥ ಪದಪಾಠಃ ॥

ಆ । ಅಕ್ಷ್ಣಽಯಾವಾನಃ । ವಹಂತಿ । ಅಂತರಿಕ್ಷೇಣ । ಪತತಃ ।
ಧಾತಾರಃ । ಸ್ತುವತೇ । ವಯಃ ॥ ೩೫ ॥

॥ ಸಾಯಣಭಾಷ್ಯಂ ॥

ಅಕ್ಷ್ಣಯಾವಾನೋಽಕ್ಷ್ಣಂ ವ್ಯಾಪ್ತಂ ಗಚ್ಛಂತಃ । ಯದ್ವಾ । ಅಕ್ಷ್ಣಶ್ಚಕ್ಷುಷೋಽಪಿ ಶೀಘ್ರಂ ಯಾಂತೀತ್ಯಕ್ಷ್ಣಯಾವಾನಃ ॥ ಯಾತೇಃ ರಾತೋ ಮನಿನ್ನಿತಿ ವನಿಪ್ ॥ ಈದೃಶಾ ಅಶ್ವಾ ಅಂತರಿಕ್ಷೇಣಾ-

ಕಾಶಮಾರ್ಗೇಣ ಪತತೋ ಗಚ್ಛತೋ ಮರುತ ಆ ವಹಂತಿ । ಆನಯಂತಿ । ಯದ್ವಾ । ಪತತ ಇತ್ಯಶ್ವಾನಾಂ ವಿಶೇಷಣಂ । ಅಂತರಿಕ್ಷೇ ನಭಸಿ ಪತತೋ ಗಚ್ಛಂತಃ ॥ ಛಾಂದಸೋ ನುಮಭಾವಃ ॥ ಕಿಂ ಕುರ್ವಂತಃ । ಸ್ತುವತೇ ಸ್ತೋತ್ರಂ ಕುರ್ವತೇ ಜನಾಯ ವಯೋಽನ್ನಂ ಧಾತಾರೋ ವಿಧಾತಾರಃ ಕುರ್ವಾಣಾಃ ॥

॥ ಪ್ರತಿಪದಾರ್ಥ ॥

ಅಶ್ವ್ಯಾಯಾವಾನಃ—ಶೀಘ್ರವಾಗಿ ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ ಸಂಚರಿಸುವ ಅಶ್ವಗಳು । ಸ್ತುವತೇ—ಸ್ತುತಿಕರ್ತನಿಗೆ । ವಯಃ—ಅನ್ನವನ್ನು । ಧಾತಾರಃ—ವಹಿಸುತ್ತಾ । ಅಂತರಿಕ್ಷೇಣ—ಅಂತರಿಕ್ಷಮಾರ್ಗದಿಂದ । ಪತತಃ—ಸಂಚರಿಸುವ ಮರುತ್ತುಗಳನ್ನು । ಆ ವಹಂತಿ—ವಹಿಸಿಕೊಂಡು ಬರುತ್ತವೆ.

॥ ಭಾವಾರ್ಥ ॥

ಶೀಘ್ರವಾಗಿ ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ ಸಂಚರಿಸುವ ಅಶ್ವಗಳು ಸ್ತುತಿಕರ್ತನಿಗೆ ಅನ್ನವನ್ನು ವಹಿಸುತ್ತಾ ಅಂತರಿಕ್ಷಮಾರ್ಗದಿಂದ ಸಂಚರಿಸುವ ಮರುತ್ತುಗಳನ್ನು ವಹಿಸಿಕೊಂಡು ಬರುತ್ತವೆ.

## English Translation

(Their horses), quickly traversing (space), bear them travelling through the firmament, giving food to the worshipper.

॥ ಸಂಹಿತಾಪಾಠಃ ॥

ಅಗ್ನಿರ್ಹಿ ಜಾನಿ ಪೂರ್ವ್ಯಶ್ಛಂದೋ ನ ಸೂರೋ ಅರ್ಚಿಷಾ ।
ತೇ ಭಾನುಭಿರ್ವಿ ತಸ್ಥಿರೇ ॥ ೩೬ ॥

॥ ಪದಪಾಠಃ ॥

ಅಗ್ನಿಃ । ಹಿ । ಜನಿ । ಪೂರ್ವ್ಯಃ । ಛಂದಃ । ನ । ಸೂರಃ । ಅರ್ಚಿಷಾ ।
ತೇ । ಭಾನುಽಭಿಃ । ತಸ್ಥಿರೇ ॥ ೩೬ ॥

॥ ಸಾಯಣಭಾಷ್ಯಂ ॥

ಅಗ್ನಿರ್ಹ್ಯಗ್ನಿಃ ಖಲ್ವರ್ಚಿಷಾ ತೇಜಸಾ ಪೂರ್ವ್ಯಃ ಸರ್ವೇಷು ದೇವೇಷು ಮುಖ್ಯೋ ಜಾನಿ । ಅಜಾಯತ ॥ ದೀಪಜನೇತ್ಯಾದಿನಾ । ಪಾ. ೩-೧-೬೧ । ಕರ್ತರಿ ಲುಙ್ ಚ್ಲೇಶ್ಚಿಣಾದೇಶಃ ॥ ತತ್ರ ದೃಷ್ಟಾಂತಃ । ಛಂದ ಉಪಚ್ಛಂದನೀಯಃ ಸೂರೋ ನ ಸೂರ್ಯ ಇವ । ತದನಂತರಂ ತೇ ಪೂರ್ವೋಕ್ತಗುಣಾ ಮರುತೋ ಭಾನುಭಿರ್ದೀಪ್ತಿಭಿರ್ವಿ ತಸ್ಥಿರೇ । ವಿವಿಧಮವತಿಷ್ಠಂತೇ । ಅಗ್ನಿಮಾರುತೇ ಹ್ಯಗ್ನಿಃ

ಪೂರ್ವಂ ಸ್ತೂಯತೇ ಪಶ್ಚಾನ್ಮರುತಃ । ತದಪೇಕ್ಷಯಾ ಚ ಪೂರ್ವೋತ್ತರಯೋರರ್ಧರ್ಚಯೋಃ ಕ್ರಮೇ-ಣಾಗ್ನಿರ್ಮರುತಶ್ಚ ಸ್ತೂಯಂತೇ ॥

। ಪ್ರತಿಪದಾರ್ಥ ।

ಛಂದಃ—ಪ್ರಶಸ್ಯನೂ ಪ್ರಭಾಯುತನೂ ಆದ । ಸೂರಃ ನ-ಸೂರ್ಯನಂತೆ । ಅಗ್ನಿರ್ಹ—ಅಗ್ನಿಯಾದರೋ । ಅರ್ಚಿಷಾ—ತನ್ನ ತೇಜಸ್ಸಿನೊಡನೆ । ಪೂರ್ವ್ಯಃ—ಉಳಿದ ದೇವತೆಗಳಿಗೆಲ್ಲಾ ಮುಖ್ಯನಾಗಿ । ಜಾನಿ—ಉತ್ಪನ್ನ ನಾಗಿದ್ದಾನೆ (ಅನಂತರ) । ತೇ—ಮರುತ್ತುಗಳು । ಭಾನುಭಿಃ—ತಮ್ಮ ಪ್ರಭೆಗಳೊಡನೆ । ವಿ ತಸ್ಥಿರೇ—ಅವನನ್ನು ಸುತ್ತುವರಿದು ನಿಂತರು.

॥ ಭಾವಾರ್ಥ ॥

ಪ್ರಶಸ್ಯನೂ ಪ್ರಭಾಯುತನೂ ಆದ ಸೂರ್ಯನಂತೆ ಅಗ್ನಿಯು ತನ್ನ ತೇಜಸ್ಸಿನೊಡನೆ ಉಳಿದ ದೇವತೆಗಳಿಗೆಲ್ಲಾ ಮುಖ್ಯವಾಗಿ ಉತ್ಪನ್ನನಾಗಿದ್ದಾನೆ. ಅನಂತರ ಮರುತ್ತುಗಳು ತಮ್ಮ ಪ್ರಭೆಗಳೊಡನೆ ಅವನನ್ನು ಸುತ್ತುವರಿದು ನಿಂತರು.

## English Translation

Agni was born the first among the gods, like the brilliant sun in splendour: then they (the Maruts) stood round in their radiance.



## ಎಂಟನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಆ ನೋ ವಿಶ್ವಾಭಿರಿತಿ ತ್ರಯೋವಿಂಶತ್ಯೃಚಂ ತೃತೀಯಂ ಸೂಕ್ತಂ ಸಧ್ವಂಸಾಖ್ಯಸ್ಯ ಕಾಣ್ವಸ್ಯಾರ್ಷ-ಮಾನುಷ್ಟುಭಂ । ಏತದಾದೀನಿ ತ್ರೀಣಿ ಸೂಕ್ತಾನ್ಯಶ್ವಿದೇವತ್ಯಾನಿ । ತಥಾ ಚಾನುಕ್ರಾಂತಂ । ಆ ನಸ್ತ್ರ್ಯ-ಧಿಕಾ ಸಧ್ವಂಸ ಆಶ್ವಿನಂ ಹ್ಯಾನುಷ್ಟುಭಂ ತ್ವಿತಿ ॥ ಪ್ರಾತರನುವಾಕ ಆಶ್ವಿನೇ ಕ್ರತಾವಾನುಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚೈತತ್ಸೂಕ್ತಂ । ಸೂತ್ರ್ಯತೇ ಹಿ । ಆ ನೋ ವಿಶ್ವಾಭಿಸ್ತ್ರ್ಯಂ ಚಿದತ್ರಿಮಿತ್ಯಾನುಷ್ಟು-ಭಂ । ಆ. ೪.೧೫ । ಇತಿ ॥ ಅಪ್ತೋರ್ಯಾಮೇ ಪ್ರಶಾಸ್ತುರತಿರಿಕ್ತೋಕ್ಥೇಽಪ್ಯೇತತ್ । ಸೂತ್ರಿತಂ ಚ । ಆ ನೋ ವಿಶ್ವಾಭಿಃ ಪ್ರಾತರ್ಯಾವಾಣಾ । ಆ. ೯-೧೧ । ಇತಿ । ಚತುರ್ಥೇಽಹನಿ ಪ್ರಉಗಶಸ್ತ್ರ ಆ ನೋ ವಿಶ್ವಾಭಿರಿತ್ಯಾಶ್ವಿನಸ್ತೃಚಃ । ಸೂತ್ರಿತಂ ಚ । ಆ ನೋ ವಿಶ್ವಾಭಿರೂತಿಭಿಸ್ತ್ರ್ಯವಾ ವೋ ಅಪ್ರಹಣಂ । ಆ. ೭-೧೧ । ಇತಿ ॥

ಅನುವಾದವು—ಆ ನೋ ವಿಶ್ವಾಭಿಃ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಇಪ್ಪತ್ತಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರದ ಸಧ್ವಂಸನೆಂಬುವನು ಋಷಿಯು; ಅನುಷ್ಟುಪ್ ಛಂದಸ್ಸು. ಈ ಸೂಕ್ತದಿಂದ ಮುಂದಿನ ಮೂರು ಸೂಕ್ತಗಳಿಗೆ ಅಶ್ವಿನೀದೇವತೆಗಳು

ದೇವತೆಯು. ಅನುಕ್ರಮಣಿಕೆಯಲ್ಲಿ— **ಆ ನಸ್ತ್ರ್ಯಧಿಕಾ ಸಧ್ವಂಸ ಆಶ್ವಿನಂ ಹ್ಯಾನುಷ್ಟುಭಂ ತು** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ಅನುಷ್ಟುಪ್ ಛಂದಸ್ಸಿನ ಋಕ್ಕುಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಆ ನೋ ವಿಶ್ವಾಭಿಸ್ತ್ರ್ಯಂ ಚಿದತ್ರಿಮಿತ್ಯಾನುಷ್ಟುಭಂ** ಎಂಬ ಸೂತ್ರದಿಂದ (ಆ. ೪-೧೫) ವಿವೃತವಾಗಿರುವುದು. ಅಪ್ತೋರ್ಯಾಮವೆಂಬ ಯಾಗದಲ್ಲಿ ಪ್ರಶಾಸ್ತೃವೆಂಬ ಋತ್ವಿಜನು ಪಠಿಸುವ ಅತಿರಿಕ್ತೋಕ್ಥಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಆ ನೋ ವಿಶ್ವಾಭಿಃ ಪ್ರಾತರ್ಯಾವಾಣಾ** ಎಂಬ ಸೂತ್ರದಿಂದ (ಆ. ೯-೧೧) ವಿವೃತವಾಗಿರುವುದು. ಯಾಗದ ನಾಲ್ಕನೆಯ ದಿವಸ ಪ್ರಉಗಶಸ್ತ್ರಮಂತ್ರಗಳಲ್ಲಿ **ಆ ನೋ ವಿಶ್ವಾಭಿಃ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಆಶ್ವಿನತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ— **ಆ ನೋ ವಿಶ್ವಾಭಿರೂತಿಭಿಸ್ತ್ರ್ಯಮು ವೋ ಅಪ್ರಹಣಂ** ಎಂಬ ಸೂತ್ರದಿಂದ (ಆ. ೭-೧೧) ವಿವೃತವಾಗಿರುವುದು.

## ಸೂಕ್ತ—೮

ಮಂಡಲ—೮ ॥ ಅನುವಾಕ—೨ ॥ ಸೂಕ್ತ—೮ ॥
ಅಷ್ಟಕ—೫ ॥ ಅಧ್ಯಾಯ—೮ ॥ ವರ್ಗ—೨೫, ೨೬, ೨೭, ೨೮, ೨೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೩ ॥
ಋಷಿ—ಸಧ್ವಂಸಃ ಕಾಣ್ವಃ ॥
ದೇವತಾ—ಅಶ್ವಿನೌ ॥
ಛಂದಃ—ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಆ ನೋ ವಿಶ್ವಾಭಿರೂತಿಭಿರಶ್ವಿನಾ ಗಚ್ಛತಂ ಯುವಂ ।
ದಸ್ರಾ ಹಿರಣ್ಯವರ್ತನೀ ಪಿಬತಂ ಸೋಮ್ಯಂ ಮಧು ॥ ೧ ॥

॥ ಪದಪಾಠಃ ॥

ಆ । ನಃ । ವಿಶ್ವಾಭಿಃ । ಊತಿಽಭಿಃ । ಅಶ್ವಿನಾ । ಗಚ್ಛತಂ । ಯುವಂ ।
ದಸ್ರಾ । ಹಿರಣ್ಯವರ್ತನೀ ಇತಿ ಹಿರಣ್ಯಽವರ್ತನೀ । ಪಿಬತಂ । ಸೋಮ್ಯಂ । ಮಧು ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನಾವಶ್ನುವಾನೌ ಸರ್ವಂ ಜಗದ್ವ್ಯಾಪ್ನುವಂತೌ ಯದ್ವಾಶ್ವೈರ್ಯುಕ್ತೌ ಯುವಂ ಯುವಾಂ ವಿಶ್ವಾಭಿಃ ಸರ್ವಾಭಿರ್ವ್ಯಾಪ್ತಾಭಿರೂತಿಭಿಃ ರಕ್ಷಾಭಿರ್ದಾತವ್ಯಾಭಿಃ ಸಾರ್ಧಂ ನೋಽಸ್ಮಾನಾ ಗಚ್ಛತಂ । ಆಗತ್ಯ ಚ ಹೇ ದಸ್ರಾ ದಸ್ರೌ ದರ್ಶನೀಯೌ ಶತ್ರೂಣಾಮುಪಕ್ಷಪಯಿತಾರೌ ವಾ ಹೇ ಹಿರಣ್ಯ-

ವರ್ತನೀ ಹಿರಣ್ಮಯರಥೌ ಹಿತರಮಣೀಯಾಚರಣೌ ವಾ ಊದೃಶೌ ಹೇ ಅಶ್ವಿನೌ ಸೋಮ್ಯಂ ಸೋಮ-ಮಯಂ ಮಧು ಪಿಬತಂ ||

। ಪ್ರತಿಪದಾರ್ಥ ।

ಅಶ್ವಿನಾ—ಎಲೈ ಅಶ್ವಿನಿದೇವತೆಗಳೇ । ಯುವಂ—ನೀವಿಬ್ಬರೂ । ವಿಶ್ವಾಭಿಃ—ಸಮಸ್ತವಾದ । ಊತಿಭಿಃ—ರಕ್ಷಣೆಗಳೊಡನೆ । ನಃ—ನಮ್ಮಲ್ಲಿಗೆ । ಆ ಗಚ್ಛತಂ—ದಯಮಾಡಿರಿ । ದಸ್ರಾ—ಆಕರ್ಷಕವಾದ ರೂಪವುಳ್ಳವರೂ । ಹಿರಣ್ಯವರ್ತನೀ—ಸುವರ್ಣಮಯವಾದ ರಥವುಳ್ಳವರೂ ಆದ ಎಲೈ ಅಶ್ವಿನಿದೇವತೆಗಳೇ । ಸೋಮ್ಯಂ—ಸೋಮಮಯವಾದ । ಮಧು—ಮಧುವನ್ನು । ಪಿಬತಂ—ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ಸಮಸ್ತರಕ್ಷಣೆಗಳೊಡನೆಯೂ ನಮ್ಮಲ್ಲಿಗೆ ದಯಮಾಡಿರಿ. ಆಕರ್ಷಕವಾದ ರೂಪವುಳ್ಳವರೂ, ಸುವರ್ಣಮಯವಾದ ರಥವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ, ಸೋಮಮಯವಾದ ಮಧುವನ್ನು ಪಾನಮಾಡಿರಿ.

## English Translation

Come to us, Aswins, with all your protections: Dasras, riders in a golden chariot, drink the sweet Soma beverage.

। ಸಂಹಿತಾಪಾಠಃ ॥

ಆ ನೂನಂ ಯಾತಮಶ್ವಿನಾ ರಥೇನ ಸೂರ್ಯತ್ವಚಾ ।
ಭುಜೀ ಹಿರಣ್ಯಪೇಶಸಾ ಕವೀ ಗಂಭೀರಚೇತಸಾ ॥ ೨ ॥

॥ ಪದಪಾಠಃ ।

ಆ । ನೂನಂ । ಯಾತಂ । ಅಶ್ವಿನಾ । ರಥೇನ । ಸೂರ್ಯऽತ್ವಚಾ ।
ಭುಜೀ ಇತಿ । ಹಿರಣ್ಯऽಪೇಶಸಾ । ಕವೀ ಇತಿ । ಗಂಭೀರऽಚೇತಸಾ ॥ ೨ ॥

। ಸಾಯಣಭಾಷ್ಯಂ ।

ಹೇ ಭುಜೀ ಹವಿಷಾಂ ಭೋಕ್ತಾರೌ ಯದ್ವಾ ಸ್ತೋತೃಭಿರನ್ನಾನಾಂ ಭೋಜಯಿತಾರೌ ಸರ್ವಸ್ಯ ಜಗತಃ ಪಾಲಕೌ ವಾ ಹೇ ಹಿರಣ್ಯಪೇಶಸಾ ಹಿರಣ್ಮಯಾಲಂಕಾರೌ ಹಿರಣ್ಮಯಾವಯವೌ ವಾ ಹೇ ಕವೀ ಕ್ರಾಂತದರ್ಶಿನೌ ಸ್ತೋತವ್ಯೌ ವಾ ಹೇ ಗಂಭೀರಚೇತಸಾ ಪ್ರಶಸ್ತಜ್ಞಾನೌ ಈದೃಶೌ ಹೇ ಅಶ್ವಿನಾಶ್ವಿನೌ ಸೂರ್ಯತ್ವಚಾ ಸೂರ್ಯವದ್ವ್ಯಾಪ್ತವಮಾನೇನ ರಥೇನ ನೂನಮವಶ್ಯಮಸ್ಮಾನಾ ಯಾತಂ । ಆಗಚ್ಛತಂ ॥

॥ ಪ್ರತಿಪದಾರ್ಥ ॥

ಭುಜೇ—ಹವಿಸ್ಸನ್ನು ಭುಜಿಸುವವರೂ । ಹಿರಣ್ಯಪೇಶಸಾ—ಸುವರ್ಣಮಯವಾದ ಅಲಂಕಾರವುಳ್ಳವರೂ। ಕವೀ—ಕ್ರಾಂತದರ್ಶಿಗಳೂ । ಗಂಭೀರಚೇತಸಾ—ಪ್ರಶಸ್ತವಾದ ಜ್ಞಾನವುಳ್ಳವರೂ ಆದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಸೂರ್ಯತ್ವಚಾ—ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ । ರಥೇನ-ರಥದೊಡನೆ । ನೂನಂ-ಖಂಡಿತವಾಗಿ । ಆ ಯಾತಂ—ನಮ್ಮಲ್ಲಿಗೆ ದಯಮಾಡಿರಿ.

॥ ಭಾವಾರ್ಥ ॥

ಹವಿಸ್ಸನ್ನು ಭುಜಿಸುವವರೂ, ಸುವರ್ಣಮಯವಾದ ಅಲಂಕಾರವುಳ್ಳವರೂ, ಕ್ರಾಂತದರ್ಶಿಗಳೂ, ಪ್ರಶಸ್ತವಾದ ಜ್ಞಾನವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ, ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ರಥದೊಡನೆ ಖಂಡಿತವಾಗಿ ನಮ್ಮಲ್ಲಿಗೆ ದಯಮಾಡಿರಿ.

## English Translation

Aswins, partakers of sacrificial food, decorated with golden ornaments, wise, and endowed with profound intellect, come verily in your chariot, invested with solar radiance.

॥ ಸಂಹಿತಾಪಾಠಃ ॥

ಆ ಯಾತಂ ನಹುಷಸ್ಪರ್ಯಾಂತರಿಕ್ಷಾತ್ಸುವೃಕ್ತಿಭಿಃ ।
ಪಿಬಾಥೋ ಅಶ್ವಿನಾ ಮಧು ಕಣ್ವಾನಾಂ ಸವನೇ ಸುತಂ ॥ ೩ ॥

॥ ಪದಪಾಠಃ ॥

ಆ । ಯಾತಂ । ನಹುಷಃ । ಪರಿ । ಆ । ಅಂತರಿಕ್ಷಾತ್ । ಸುವೃಕ್ತಿಽಭಿಃ ।
ಪಿಬಾಥಃ । ಅಶ್ವಿನಾ । ಮಧು । ಕಣ್ವಾನಾಂ । ಸವನೇ । ಸುತಂ । ೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ನಹುಷಸ್ಪರಿ । ನಹುಷ ಇತಿ ಮನುಷ್ಯನಾಮ । ಸಾಮರ್ಥ್ಯಾಚ್ಚಾತ್ರ ತತ್ಸಂಬದ್ಧೋ ಲೋಕೋ ಲಕ್ಷ್ಯತೇ । ಮಾನುಷಾತ್ತಸ್ಮಾಲ್ಲೋಕಾತ್ ॥ ಪರಿ ಪಂಚಮ್ಯರ್ಥಾನುವಾದೀ ॥ ಸುವೃಕ್ತಿಭಿಃ ಸುಷ್ಠು ದೋಷವರ್ಜಿತಾಭಿಃ ಸುಪ್ರವೃತ್ತಾಭಿರ್ವಾ ಸ್ತುತಿಭಿರ್ಹೇತುಭೂತಾಭಿರಾ ಯಾತಂ । ಆಗಚ್ಛತಂ । ತಥಾಂತರಿಕ್ಷಾದಂತರಾ ಕ್ಷಾಂತಾನ್ಮಧ್ಯಮಾಲ್ಲೋಕಾದಪ್ಯಾಗಚ್ಛತಂ । ಆಗತ್ಯ ಚ ಕಣ್ವಾನಾಂ ಕಣ್ವಗೋತ್ರಾಣಾಮಸ್ಮಾಕಂ ಸವನೇ ಯಜ್ಞೇ ಪ್ರಾತಃಸವನಾದೌ ಸುತಮಭಿಷುತಂ ಮಧು ಮಧುರಂ ಸೋಮಂ ಹೇ ಅಶ್ವಿನೌ ಪಿಬಾಥಃ । ಪಿಬತಂ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳಿರಾ) ಸುವೃಕ್ತಿಭಿಃ—ನಮ್ಮ ಉತ್ತಮವಾದ ಸ್ತುತಿಗಳಿಂದ ಆಕೃಷ್ಟರಾಗಿ । ನಹುಷ-ಸ್ಪರಿ—ಮನುಷ್ಯಲೋಕದಿಂದ । ಆ ಯಾತಂ—ದಯಮಾಡಿರಿ । ಅಂತರಿಕ್ಷಾತ್—ಅಂತರಿಕ್ಷದಿಂದಲೂ (ಬಂದು) । ಕಣ್ವಾನಾಂ—ಕಣ್ವವಂಶೋತ್ಪನ್ನರಾದ ನಮ್ಮ । ಸವನೇ—ಯಜ್ಞದಲ್ಲಿ । ಸುತಂ—ಹಿಂಡಿರುವುದೂ । ಮಧು—ಮಧುರವಾದುದೂ ಆದ ಸೋಮವನ್ನು । ಪಿಬಾಥಃ—ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳಿರಾ, ನಮ್ಮ ಉತ್ತಮವಾದ ಸ್ತುತಿಗಳಿಂದ ಆಕೃಷ್ಟರಾಗಿ ಮನುಷ್ಯಲೋಕದಿಂದ ದಯಮಾಡಿರಿ. ಅಂತರಿಕ್ಷದಿಂದಲೂ ಬಂದು ಕಣ್ವವಂಶೋತ್ಪನ್ನರಾದ ನಮ್ಮ ಯಜ್ಞದಲ್ಲಿ ಹಿಂಡಿರುವುದೂ ಮಧುರವಾದುದೂ ಆದ ಸೋಮವನ್ನು ಪಾನಮಾಡಿರಿ.

## English Translation

Come from (the world of) man, come from the firmament, (attracted) by our pious praises; drink Aswins, the Soma offered at the sacrifice of the Kanwas.

॥ ಸಂಹಿತಾಪಾಠಃ ॥

ಆ ನೋ ಯಾತಂ ದಿವಸ್ಪರ್ಯಾಂತರಿಕ್ಷಾದಧಪ್ರಿಯಾ ।
ಪುತ್ರಃ ಕಣ್ವಸ್ಯ ವಾಮಿಹ ಸುಷಾವ ಸೋಮ್ಯಂ ಮಧು ॥ ೪ ॥

॥ ಪದಪಾಠಃ ॥

ಆ । ನಃ । ಯಾತಂ । ದಿವಃ । ಪರಿ । ಆ । ಅಂತರಿಕ್ಷಾತ್ । ಅಧऽಪ್ರಿಯಾ ।
ಪುತ್ರಃ । ಕಣ್ವಸ್ಯ । ವಾಂ । ಇಹ । ಸುಸಾವ । ಸೋಮ್ಯಂ । ಮಧು ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ದಿವಸ್ಪರಿ ದಿವೋಽಧಿ ದ್ಯುಲೋಕಾನ್ನೋಽಸ್ಮಾನಾ ಯಾತಂ । ಆಗಚ್ಛತಂ ॥ ಪಂಚಮ್ಯಾಃ ಪರಾವಧ್ಯರ್ಥ ಇತಿ ವಿಸರ್ಜನೀಯಸ್ಯ ಸತ್ವಂ॥ ಹೇ ಅಧಪ್ರಿಯಾಧೋಽಧಸ್ತಾದಸ್ಮಿಲ್ಲೋಕೇ ವಿದ್ಯಮಾನೇನ ಸೋಮೇನ ಪ್ರೀಯಮಾಣೌ । ಯದ್ವಾ । ಕಥಪ್ರಿಯಾ ॥ ಛಾಂದಸೋ ವರ್ಣಲೋಪಃ ॥ ಕಥಯಾ ಸ್ತುತ್ಯಾ ಪ್ರೀಯಮಾಣೌ । ಹೇ ಈದೃಶಾವಶ್ವಿನಾ ಅಂತರಿಕ್ಷಾವಸ್ಮಾನಗಚ್ಛತಂ । ಇಹಾಸ್ಮಿನ್ಯಜ್ಞೇ

ಕಣ್ವಸ್ಯರ್ಷೇಃ ಪುತ್ರಃ ಸೋಮ್ಯಂ ಸೋಮಮಯಂ ಮಧು ವಾಂ ಯುವಾಭ್ಯಾಂ ಯುವಯೋರರ್ಥಂ ಸುಷಾವ । ಅಭಿಷುಣೋತಿ । ಅತ ಆ ಯಾತಮಿತ್ಯನ್ವಯಃ ॥

। ಪ್ರತಿಪದಾರ್ಥ ।

(ಎಲೈ ಅಶ್ವಿನೀದೇವತೆಗಳೇ) ದಿವಸ್ಪರಿ—ದ್ಯುಲೋಕದ ಮೇಲ್ಭಾಗದಿಂದಲೂ । ನಃ—ನಮಗಭಿಮುಖವಾಗಿ । ಆ ಯಾತಂ—ದಯಮಾಡಿರಿ । ಅಧಪ್ರಿಯಾ—ಕೆಳಗಿನ ಭಾಗದ ಪೃಥ್ವಿಯಲ್ಲಿ ಪ್ರೀತಿಯುಳ್ಳ ಎಲೈ ಅಶ್ವಿನಿಗಳೇ । ಅಂತರಿಕ್ಷಾತ್ ಆ—ಅಂತರಿಕ್ಷದಿಂದಲೂ ಬನ್ನಿರಿ । ಇಹ—ನಮ್ಮ ಈ ಯಜ್ಞದಲ್ಲಿ । ಕಣ್ವಸ್ಯ—ಕಣ್ವಋಷಿಯ । ಪುತ್ರಃ—ಪುತ್ರನು । ಸೋಮ್ಯಂ—ಸೋಮಮಯವಾದ । ಮಧು—ಮಧುವನ್ನು । ವಾಂ—ನಿಮ್ಮಿಬ್ಬರನ್ನುದ್ದೇಶಿಸಿ । ಸುಷಾವ—ಹಿಂಡುತ್ತಾನೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ದ್ಯುಲೋಕದಿಂದಲೂ ನಮಗಭಿಮುಖರಾಗಿ ಬನ್ನಿರಿ. ಪೃಥ್ವಿಯನ್ನು ಪ್ರೀತಿಸತಕ್ಕ ಎಲೈ ಅಶ್ವಿನಿಗಳೇ, ಅಂತರಿಕ್ಷದಿಂದಲೂ ಬನ್ನಿರಿ. ನಮ್ಮ ಈ ಯಜ್ಞದಲ್ಲಿ ಕಣ್ವಋಷಿಯ ಪುತ್ರನು ನಿಮ್ಮಿಬ್ಬರನ್ನುದ್ದೇಶಿಸಿ ಸೋಮಮಯವಾದ ಮಧುವನ್ನು ಹಿಂಡುತ್ತಾನೆ.

English Translation

Come to us from above the heaven, you who love the (world) below, (come) from the firmament; the son of Kanwa has here poured forth for you the sweet Soma libation.

। ಸಂಹಿತಾಪಾಠಃ ।

ಆ ನೋ ಯಾತಮುಪಶ್ರುತ್ಯಶ್ವಿನಾ ಸೋಮಪೀತಯೇ ।

ಸ್ವಾಹಾ ಸ್ತೋಮಸ್ಯ ವರ್ಧನಾ ಪ್ರ ಕವೀ ಧೀತಿಭಿರ್ನರಾ ॥ ೫ ॥

। ಪದಪಾಠಃ ।

ಆ । ನಃ । ಯಾತಂ । ಉಪಽಶ್ರುತಿ । ಅಶ್ವಿನಾ । ಸೋಮಽಪೀತಯೇ ।

ಸ್ವಾಹಾ । ಸ್ತೋಮಸ್ಯ । ವರ್ಧನಾ । ಪ್ರ । ಕವೀ ಇತಿ । ಧೀತಿಽಭಿಃ । ನರಾ ॥ ೫ ॥

। ಸಾಯಣಭಾಷ್ಯಂ ।

ಹೇ ಅಶ್ವಿನಾಶ್ವಿನೌ ನೋಽಸ್ಮಾಕಮುಪಶ್ರುತಿ । ಶ್ರೂಯತ ಇತಿ ಶ್ರುತ್ ಸ್ತುತಿಃ । ಉಪಗತಾ ಶ್ರುದ್ಯಸ್ಮಿನ್ ತಸ್ಮಿನ್ಯಜ್ಞೇ ಸೋಮಪೀತಯೇ ಸೋಮಪಾನಾಯಾ ಯಾತಂ । ಆಗಚ್ಛತಂ । ಹೇ ವರ್ಧನಾ

ವರ್ಧನೌ ಕವೀ ಕ್ರಾಂತದರ್ಶಿನಾವಶ್ವಿನೌ ಸ್ವಾಹಾ ಸ್ವಾಹಾಕೃತೌ ಸ್ವಾಹಾಕಾರೇಣ ಸಮ್ಯಗಿಷ್ಟೌ ಸಂತೌ । ಯದ್ವಾ । ಸ್ವಾಹೇತಿ ವಾಙ್ನಾಮ । ಸ್ತುತಿರೂಪಯಾ ವಾಚಾ ಸ್ತುತೌ ವಾಚಾ ಸ್ತೋಮಸ್ಯ ಸ್ತೋತುಃ ಪ್ರವರ್ಧಕೌ ಭವತಂ । ತಥಾ ಹೇ ನರಾ ನೇತಾರಾವಶ್ವಿನೌ ಧೀತಿಭಿಃ ಕರ್ಮಭಿರ್ಯಷ್ಟೃಶ್ಚ ಪ್ರವರ್ಧಕೌ ಭವತಂ । ಯದ್ವಾ । ಸ್ವಾಹೇತ್ಯಾದೀನ್ಯಾಮಂತ್ರಿತಾನಿ । ಹೇ ಸ್ವಾಹಾ ಸ್ವಾಹಾಕೃತೌ ಸ್ತೋಮಸ್ಯ ಸ್ತೋತ್ರಸ್ಯ ಸ್ತೋತುರ್ವಾ ಹೇ ಪ್ರವರ್ಧನಾ ಪ್ರವರ್ಧಯಿತಾರೌ ಹೇ ಕವೀ ಕ್ರಾಂತದರ್ಶಿನೌ ಧೀತಿಭಿ-ರ್ಬುದ್ಧಿಭಿರಾತ್ಮೀಯೈಃ ಕರ್ಮಭಿರ್ವಾ ಹೇ ನರಾ ಸರ್ವೇಷಾಂ ನೇತಾರಾವಶ್ವಿನೌ ಸೋಮಪಾನಾಯಾ ಯಾತಮಿತ್ಯೇಕಮೇವ ವಾಕ್ಯಂ ॥ ಅಸ್ಮಿನ್ಪಕ್ಷೇ ಧೀತಿಭಿರಿತ್ಯಪರಾಂಗವತ್ತ್ವಾಭಾವಶ್ಛಾಂದಸಃ ॥ ಯದ್ವಾ । ಧೀತಿಭಿರ್ಧ್ಯಾತವ್ಯಾಭಿರ್ಯಷ್ಟೃದೀಯಾಭಿರೂತಿಭಿಃ ಸಾರ್ಧಮಾ ಯಾತಮಿತಿ ಕ್ರಿಯಯಾ ಸಂಬಂಧಃ ॥

॥ ಪ್ರತಿಪದಾರ್ಥ ॥

ಪ್ರ ವರ್ಧನಾ—ವೃದ್ಧಿಯನ್ನು ಹೊಂದುವವರೂ । ಕವೀ—ಕ್ರಾಂತದರ್ಶಿಗಳೂ । ಸ್ವಾಹಾ—ಸ್ವಾಹಾಕಾರಪೂರ್ವಕವಾಗಿ ಯಾಗವನ್ನು ಅರ್ಪಿಸಲ್ಪಡತಕ್ಕವರೂ । ಸ್ತೋಮಸ್ಯ—ಸ್ತುತಿಕರ್ತನ ಬೆಳವಣಿಗೆಗೆ ಕಾರಣರೂ । ನರಾ—ನೇತೃಗಳೂ ಆದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಧೀತಿಭಿಃ—ನಮ್ಮ ಕರ್ಮಗಳಿಂದ ಪ್ರೀತರಾಗಿ । ನಃ—ನಮ್ಮ । ಉಪಶ್ರುತಿ—ಸ್ತುತಿಯುಕ್ತವಾದ ಯಜ್ಞಕ್ಕೆ । ಸೋಮಪೀತಯೇ—ಸೋಮಪಾನಾರ್ಥವಾಗಿ । ಆ ಯಾತಂ—ದಯಮಾಡಿರಿ.

। ಭಾವಾರ್ಥ ।

ವೃದ್ಧಿಯನ್ನು ಹೊಂದುವವರೂ, ಕ್ರಾಂತದರ್ಶಿಗಳೂ, ಸ್ವಾಹಾಕಾರಪೂರ್ವಕವಾಗಿ ಯಾಗವನ್ನು ಅರ್ಪಿಸಲ್ಪಡತಕ್ಕವರೂ, ಸ್ತುತಿಕರ್ತನ ಬೆಳವಣಿಗೆಗೆ ಕಾರಣರೂ ನೇತೃಗಳೂ ಆದ ಎಲೈ ಅಶ್ವಿನೀದೇವತೆಗಳೇ, ನಮ್ಮ ಕರ್ಮಗಳಿಂದ ಪ್ರೀತರಾಗಿ, ನಮ್ಮ ಸ್ತುತಿಯುಕ್ತವಾದ ಯಜ್ಞಕ್ಕೆ ಸೋಮಪಾನಾರ್ಥವಾಗಿ ದಯಮಾಡಿರಿ.

## Engalish Translation

Come, Aswins, to drink the Soma at our sacrifice, you who are praised (by him) (and honoured) by his pious acts, benefactors of the worshipper, sages and leaders of rites.

॥ ಸಂಹಿತಾಪಾಠಃ ॥

ಯಚ್ಚಿದ್ಧಿ ವಾಂ ಪುರ ಋಷಯೋ ಜುಹೂರೇಽವಸೇ ನರಾ ।
ಆ ಯಾತಮಶ್ವಿನಾ ಗತಮುಪೇಮಾಂ ಸುಷ್ಟುತಿಂ ಮಮ ॥ ೬ ॥

॥ ಪದಪಾಠಃ ॥

ಯತ್ । ಚಿತ್ । ಹಿ । ವಾಂ । ಪುರಾ । ಋಷಯಃ । ಜುಹೂರೇ । ಅವಸೇ । ನರಾ ।

ಆ । ಯಾತಂ । ಅಶ್ವಿನಾ । ಗತಂ । ಉಪ । ಇಮಾಂ । ಸುಽಸ್ತುತಿಂ । ಮಮ । ೬ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರಾವಶ್ವಿನೌ ಯಚ್ಚಿದ್ಧಿ ಯದಾ ಖಲು ವಾಂ ಯುವಾಂ ಪುರಾ ಪೂರ್ವಸ್ಮಿನ್ಕಾಲ ಋಷಯೋಽತೀಂದ್ರಿಯಾರ್ಥದರ್ಶಿನಃ ಸ್ತೋತಾರೋಽವಸೇ ರಕ್ಷಣಾಯ ಜುಹೂರೇ ಜುಹುವಿರೇ ಸ್ತುತಿಭಿರಾಹ್ವಯನ್ ॥ ಹ್ವಯತೇರ್ಲಿಟ್ಯಭ್ಯಸ್ತಸ್ಯ ಚೇತಿ ಸಂಪ್ರಸಾರಣಂ । ಹಲ ಇತಿ ದೀರ್ಘಃ । ಇರಯೋ ರ ಇತಿ ರೇಭಾವಃ ॥ ತದಾನೀಂ ಹೇ ಅಶ್ವಿನೌ ಆ ಯಾತಂ । ಆಗಚ್ಛತಂ । ಆಗತವಂತೌ ಸ್ಥಃ । ಅತೋ ಮಮ ಮದೀಯಾಮಿಮಾಂ ಸುಷ್ಟುತಿಂ ಶೋಭನಾಂ ಸ್ತುತಿಮುಪ್ಯಪಾ ಗತಂ । ಉಪಾಗಚ್ಛತಂ ॥

॥ ಪ್ರತಿಪದಾರ್ಥ ॥

ನರಾ—ನೇತೃಗಳಾದ ಎಲೈ ಅಶ್ವಿನೀದೇವತೆಗಳೇ । ವಾಂ—ನಿಮ್ಮನ್ನು । ಪುರಾ—ಪೂರ್ವದಲ್ಲಿದ್ದ । ಯಚ್ಚಿದ್ಧಿ—ಯಾವ ಯಾವ ಕಾಲದಲ್ಲಿ । ಋಷಯಃ—ಸ್ತುತಿಕರ್ತರಾದ ಋಷಿಗಳು । ಅವಸೇ—ರಕ್ಷಣಾರ್ಥವಾಗಿ । ಜುಹೂರೇ—ಕರೆದರೋ ಆಗೆಲ್ಲಾ । ಆ ಯಾತಂ—ನೀವು ಬಂದಿರಿ (ಆದುದರಿಂದ) । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಮಮ—ನನ್ನ । ಇಮಾಂ ಸುಷ್ಟುತಿಂ ಉಪ—ಈಗ ಅರ್ಪಿತವಾಗುವ ಸ್ತುತಿಗೆ ಅಭಿಮುಖವಾಗಿ । ಆ ಗತಂ—ದಯಮಾಡಿರಿ

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಪೂರ್ವಕಾಲದಲ್ಲಿ ಋಷಿಗಳು ಯಾವಾಗ ತಮ್ಮ ರಕ್ಷಣಾರ್ಥವಾಗಿ ಕರೆದರೋ ಆಗೆಲ್ಲಾ ನೀವು ಬಂದಿರಿ. ಆದುದರಿಂದ ಎಲೈ ಅಶ್ವಿನೀದೇವತೆಗಳೇ, ಈಗ ನನ್ನಿಂದ ಅರ್ಪಿತವಾಗುವ ಸ್ತುತಿಗೆ ಅಭಿಮುಖವಾಗಿ ದಯಮಾಡಿರಿ.

## English Translation

Leaders of rites, when the Rishis formerly invoked you for protection, you came; so now, Aswins, come at my devout praises.

॥ ಸಂಹಿತಾಪಾಠಃ ॥

ದಿವಶ್ಚಿದ್ರೋಚನಾದಧ್ಯಾ ನೋ ಗಂತಂ ಸ್ವರ್ವಿದಾ ।

ಧೀಭಿರ್ವತ್ಸಪ್ರಚೇತಸಾ ಸ್ತೋಮೇಭಿರ್ಹವನಶ್ರುತಾ ॥ ೭ ॥

॥ ಪದಪಾಠಃ ॥

ದಿವಃ । ಚಿತ್ । ರೋಚನಾತ್ । ಅಧಿ । ಆ । ನಃ । ಗಂತಂ । ಸ್ವಃಽವಿದಾ ।

ಧೀಭಿಃ । ವತ್ಸಽಪ್ರಚೇತಸಾ । ಸ್ತೋಮೇಭಿಃ । ಹವನಽಶ್ರುತಾ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸ್ವರ್ವಿದಾ ಸ್ವಃ ಸೂರ್ಯಸ್ಯ ದ್ಯುಲೋಕಸ್ಯ ವಾ ಲಂಭಯಿತಾರಾವಶ್ವಿನೌ ದಿವಶ್ಚಿದ್ದ್ಯುಲೋಕಾಚ್ಚ ರೋಚನಾದಧಿ ರೋಚಮಾನಾದಂತರಿಕ್ಷಾಚ್ಚ ನೋಽಸ್ಮಾನಾ ಗಂತಂ । ಆಗಚ್ಛತಂ ॥ ಪೂರ್ವವದಧಿಃ ಪಂಚಮ್ಯರ್ಥಾನುವಾದಕಃ ॥ ಹೇ ವತ್ಸಪ್ರಚೇತಸಾ ವತ್ಸೇ ಸ್ತೋತರಿ ಪ್ರಕೃಷ್ಟಜ್ಞಾನೌ । ಯದ್ವಾ । ವತ್ಸಂ ನಿವಾಸಕಂ ವೇದಿತವ್ಯಂ ವಾ ಪ್ರಕೃಷ್ಟಂ ಚೇತೋ ಜ್ಞಾನಂ ಯಯೋಸ್ತೌ ತಥೋಕ್ತೌ । ತೌ ಯುವಾಂ ಧೀಭಿರಾತ್ಮೀಯಾಭಿರ್ಬುದ್ಧಿಭಿಃ ಸಹಾಗಚ್ಛತಂ । ಹೇ ಹವನಶ್ರುತಾ ಹವನಸ್ಯಾಸ್ಮದೀಯಸ್ಯಾಹ್ವಾನಸ್ಯ ಸ್ತೋತ್ರಸ್ಯ ಶ್ರೋತಾರೌ ಸ್ತೋಮೇಭಿಃ ಸ್ತೋತ್ರೈರಸ್ಮತ್ಕೃತೈರ್ಯುಜ್ಯಮಾನೌ ಸಂತಾವಾಗಚ್ಛತಂ ॥

॥ ಪ್ರತಿಪದಾರ್ಥ ॥

ಸ್ವರ್ವಿದಾ—ದ್ಯುಲೋಕದಲ್ಲಿ ಆಶ್ರಯವನ್ನು ಹೊಂದಿರುವ ಎಲೈ ಅಶ್ವಿನೀದೇವತೆಗಳೇ । ದಿವಶ್ಚಿತ್—ದ್ಯುಲೋಕದಿಂದಾಗಲಿ । ರೋಚನಾದಧಿ—ಅಂತರಿಕ್ಷದಿಂದಾಗಲಿ । ನಃ—ನಮ್ಮಲ್ಲಿಗೆ । ಆ ಗಂತಂ—ದಯಮಾಡಿರಿ । ವತ್ಸಪ್ರಚೇತಸಾ—ವತ್ಸಪ್ರಾಯನಾದ ಸ್ತುತಿಕರ್ತನಿಗೆ ಒಳ್ಳೆಯದನ್ನು ಮಾಡಬೇಕೆಂಬ ಉತ್ತಮವಾದ ಬುದ್ಧಿಯುಳ್ಳ ಎಲೈ ಅಶ್ವಿನೀದೇವತೆಗಳೇ । ಧೀಭಿಃ—ನಿಮ್ಮ ಅನುಗ್ರಹ ಬುದ್ಧಿಗಳೊಡನೆ ಬನ್ನಿರಿ । ಹವನಶ್ರುತಾ—ನಮ್ಮ ಆಹ್ವಾನವನ್ನು ಕೇಳತಕ್ಕ ಎಲೈ ಅಶ್ವಿನಿಗಳೇ । ಸ್ತೋಮೇಭಿಃ—ನಮ್ಮಿಂದ ಅರ್ಪಿತವಾದ ಸ್ತುತಿಗಳೊಡನೆಯೂ ಕೂಡಿ ಬನ್ನಿರಿ.

॥ ಭಾವಾರ್ಥ ॥

ದ್ಯುಲೋಕದಲ್ಲಿ ಆಶ್ರಯವನ್ನು ಹೊಂದಿರುವ ಎಲೈ ಅಶ್ವಿನೀದೇವತೆಗಳೇ, ದ್ಯುಲೋಕದಿಂದಾಗಲಿ, ಅಂತರಿಕ್ಷದಿಂದಾಗಲಿ, ನಮ್ಮಲ್ಲಿಗೆ ದಯಮಾಡಿರಿ. ನಿಮ್ಮ ಪುತ್ರಪ್ರಾಯನಾದ ಸ್ತುತಿಕರ್ತನಿಗೆ ಒಳ್ಳೆಯದನ್ನು ಮಾಡಬೇಕೆಂಬ ಉತ್ತಮವಾದ ಬುದ್ಧಿಯುಳ್ಳ ಎಲೈ ಅಶ್ವಿನೀದೇವತೆಗಳೇ, ನಿಮ್ಮ ಅನುಗ್ರಹ ಬುದ್ಧಿಗಳೊಡನೆ ಬನ್ನಿರಿ. ನಮ್ಮ ಆಹ್ವಾನವನ್ನು ಕೇಳತಕ್ಕ ಎಲೈ ಅಶ್ವಿನಿದೇವತೆಗಳೇ, ನಮ್ಮಿಂದ ಅರ್ಪಿತವಾದ ಸ್ತುತಿಗಳೊಡನೆಯೂ ಕೂಡಿ ಬನ್ನಿರಿ.

## English Translation

Familiar with heaven, come to us from the sky, or from above the bright (firmament): favourably inclined to the worshipper, (come), induced by his pious acts; hearers of invocations (come, induced) by our praises.

॥ ಸಂಹಿತಾಪಾಠಃ ॥

ಕಿಮನ್ಯೇ ಪರ್ಯಾಸತೇಽಸ್ಮತ್ಸ್ತೋಮೇಭಿರಶ್ವಿನಾ ।

ಪುತ್ರಃ ಕಣ್ವಸ್ಯ ವಾಮೃಷಿರ್ಗೀರ್ಭಿರ್ವತ್ಸೋ ಅವೀವೃಧತ್ ॥ ೮ ॥

॥ ಪದಪಾಠಃ ॥

ಕಿಂ । ಅನ್ಯೇ । ಪರಿ । ಆಸತೇ । ಅಸ್ಮತ್ । ಸ್ತೋಮೇಭಿಃ । ಅಶ್ವಿನಾ ।

ಪುತ್ರಃ । ಕಣ್ವಸ್ಯ । ವಾಂ । ಋಷಿಃ । ಗೀಃಽಭಿಃ । ವತ್ಸಃ । ಅವೀವೃಧತ್ ॥ ೮ ॥

॥ ಸಾಯಣಭಾಷ್ಯಂ ॥

ಅಸ್ಮದಸ್ಮತ್ತೋಽನ್ಯೇ ವ್ಯತಿರಿಕ್ತಾಃ ಸ್ತೋತಾರಃ ಸ್ತೋಮೇಭಿಃ ಸ್ತೋತ್ರೈರಶ್ವಿನಾಶ್ವಿನೌ ದೇವೌ ಕಿಂ ಪರ್ಯಾಸತೇ । ಅಸ್ಮದ್ವ್ಯತಿರಿಕ್ತಾಃ ಕೇಽಪ್ಯಶ್ವಿನೌ ಸ್ತೋತುಂ ನ ಶಕ್ನುವಂತೀತ್ಯರ್ಥಃ । ಕಣ್ವಸ್ಯರ್ಷೇಃ ಪುತ್ರ ಋಷಿರ್ಮಂತ್ರದ್ರಷ್ಟಾ ವತ್ಸೋ ಗೀರ್ಭಿಃ ಸ್ತುತಿಭಿರ್ಹೇ ಅಶ್ವಿನೌ ವಾಂ ಯುವಾಮವೀವೃಧತ್ । ಅವರ್ಧಯತ್ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವೀನೀದೇವತೆಗಳೇ (ನಿಮ್ಮನ್ನು) । ಅಸ್ಮತ್—ನಮಗಿಂತಲೂ । ಅನ್ಯೇ— ಬೇರೆ ಸ್ತುತಿಕರ್ತರು । ಸ್ತೋಮೇಭಿಃ—ಸ್ತೋತ್ರಗಳಿಂದ । ಕಿಂ ಪರ್ಯಾಸತೇ—ಅಧಿಕವಾಗಿ ಆರಾಧಿಸಬಲ್ಲರೇ ? । ಕಣ್ವಸ್ಯ—ಕಣ್ವಋಷಿಯ । ಪುತ್ರಃ—ಪುತ್ರನೂ । ಋಷಿಃ—ಮಂತ್ರದ್ರಷ್ಟೃವೂ ಆದ । ವತ್ಸಃ—ವತ್ಸಋಷಿಯು । ಗೀರ್ಭಿಃ—ಸ್ತುತಿಗಳಿಂದ । ವಾಂ—ನಿಮ್ಮನ್ನು । ಅವೀವೃಧತ್—ಬೆಳೆಯುವಂತೆ ಮಾಡಿದ್ದಾನೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ನಮಗಿಂತಲೂ ಬೇರೆ ಯಾವ ಸ್ತುತಿಕರ್ತರು ಅಧಿಕವಾಗಿ ಆರಾಧಿಸಬಲ್ಲರು ? ಕಣ್ವಋಷಿಯ ಪುತ್ರನೂ, ಮಂತ್ರದ್ರಷ್ಟೃವೂ ಆದ ವತ್ಸಋಷಿಯು ತನ್ನ ಸ್ತುತಿಗಳಿಂದ ನಿಮ್ಮನ್ನು ಬೆಳೆಯುವಂತೆ ಮಾಡಿದ್ದಾನೆ.

English Translation

What others than ourselves adore the Aswins with praises? The Rishi Vatsa, the son of Kanwa, has magnified you with hymns.

॥ ಸಂಹಿತಾಪಾಠಃ ॥

ಆ ವಾಂ ವಿಪ್ರ ಇಹಾವಸೇಽಹ್ವತ್ಸ್ತೋಮೇಭಿರಶ್ವಿನಾ ।

ಅರಿಪ್ರಾ ವೃತ್ರಹಂತಮಾ ತಾ ನೋ ಭೂತಂ ಮಯೋಭುವಾ ॥೯॥

॥ ಪದಪಾಠಃ ॥

ಆ । ವಾಂ । ವಿಪ್ರಃ । ಇಹ । ಅವಸೇ । ಅಹ್ವತ್ । ಸ್ತೋಮೇಭಿಃ । ಅಶ್ವಿನಾ ।

ಅರಿಪ್ರಾ । ವೃತ್ರಹನ್ಽತಮಾ । ತಾ । ನಃ । ಭೂತಂ । ಮಯಃಽಭುವಾ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ವಿಪ್ರೋ ಮೇಧಾವೀ ಸ್ತೋತೇಹಾಸ್ಮಿನ್ಯಾಗೇಽವಸೇ ರಕ್ಷಣಾರ್ಥಂ ಸ್ತೋಮೇಭಿಃ ಸ್ತೋತ್ರೈರ್ವಾಂ ಯುವಾಮಾಹ್ವತ್ । ಆಹೂತವಾನ್ ॥ ಹ್ವಯತೇರ್ಲುಙಿ ಲಿಪಿಸಿಚಿಹ್ವಶ್ಚೇತಿ ಚ್ಲೇರಙಾದೇಶಃ ॥ ಹೇ ಅರಿಪ್ರಾ । ರಿಪ್ರಮಿತಿ ಪಾಪನಾಮ । ಅಪಾಪೌ ಹೇ ವೃತ್ರಹಂತಮಾ ವೃತ್ರಾಣಾಂ ಶತ್ರೂಣಾಂ ಹಂತೃತಮೌ ತಾ ತೌ ತಾದೃಶೌ ಯುವಾಂ ನೋಽಸ್ಮಾಕಂ ಮಯೋಭುವಾ ಸುಖಸ್ಯ ಭಾವಯಿತಾರೌ ಭೂತಂ । ಭವತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ವಿಪ್ರಃ—ಮೇಧಾವಿಯಾದ ಸ್ತುತಿಕರ್ತನು । ಇಹ—ಈ ಯಾಗದಲ್ಲಿ । ಅವಸೇ—ರಕ್ಷಣಾರ್ಥವಾಗಿ । ಸ್ತೋಮೇಭಿಃ—ಸ್ತುತಿಗಳಿಂದ । ವಾಂ—ನಿಮ್ಮನ್ನು । ಆ ಅಹ್ವತ್—ಕರೆದಿದ್ದಾನೆ । ಅರಿಪ್ರಾ—ಪಾಪರಹಿತರೂ । ವೃತ್ರಹಂತಮಾ—ಶತ್ರುನಾಶಕರೂ ಆದ ಎಲೈ ಅಶ್ವಿನೀದೇವತೆಗಳೇ ।, ತಾ—ಪ್ರಸಿದ್ಧರಾದ ನೀವು । ನಃ—ನಮಗೆ । ಮಯೋಭುವಾ—ಸುಖಸಂಪಾದಕರಾಗಿ । ಭೂತಂ—ಆಗಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಮೇಧಾವಿಯಾದ ಸ್ತುತಿಕರ್ತನು ಈ ಯಾಗದಲ್ಲಿ ರಕ್ಷಣಾರ್ಥವಾಗಿ ಸ್ತುತಿಗಳಿಂದ ನಿಮ್ಮನ್ನು ಕರೆದಿದ್ದಾನೆ. ಪಾಪರಹಿತರೂ, ಶತ್ರುನಾಶಕರೂ ಆದ ಎಲೈ ಅಶ್ವಿನೀದೇವತೆಗಳೇ, ಪ್ರಸಿದ್ಧರಾದ ನೀವು ನಮಗೆ ಸುಖಸಂಪಾದಕರಾಗಿ ಆಗಿರಿ.

## English Translation

The wise adorer invokes you hither with praises, Aswins, for protection: sinless, utter destroyers of enemies, be to us the sources of felicity.

॥ ಸಂಹಿತಾಪಾಠಃ ॥

ಆ ಯದ್ವಾಂ ಯೋಷಣಾ ರಥಮತಿಷ್ಠದ್ವಾಜಿನೀವಸೂ ।

ವಿಶ್ವಾನ್ಯಶ್ವಿನಾ ಯುವಂ ಪ್ರ ಧೀತಾನ್ಯಗಚ್ಛತಂ ॥ ೧೦ ॥

। ಪದಪಾಠಃ ।

ಆ । ಯತ್ । ವಾಂ । ಯೋಷಣಾ । ರಥಂ । ಅತಿಷ್ಠತ್ । ವಾಜಿನೀವಸೂ ಇತಿ ವಾಜಿನೀऽ-ವಸೂ ।

ವಿಶ್ವಾನಿ । ಅಶ್ವಿನಾ । ಯುವಂ । ಪ್ರ । ಧೀತಾನಿ । ಅಗಚ್ಛತಂ ॥ ೧೮ ॥

। ಸಾಯಣಭಾಷ್ಯಂ ।

ಹೇ ವಾಜಿನೀವಸೂ । ವಾಜಿನೀ ಹವಿಷ್ಮತೀ ಯಾಗಕ್ರಿಯಾ । ತಸ್ಯಾಂ ವಿದ್ಯಮಾನಸ್ವಾಂಶಲಕ್ಷಣಧನಾವಶ್ವಿನೌ ಯೋಷಣಾ ಯೋಷಿತ್ಸೂರ್ಯಾಜಿಧಾವನೇನ ಪ್ರಿಯಮಾಣಾ ಸತೀ ವಾಂ ಯುವಯೋಃ ರಥಂ ಯದ್ಯದಾತಿಷ್ಠತ್ ಆಸ್ಥಿತವತೀ ಆರೂಢವತೀ ತದಾ ಹೇ ಅಶ್ವಿನಾಶ್ವಿನೌ ಯುವಂ ಯುವಾಂ ಧೀತಾನಿ ಧ್ಯಾತಾನ್ಯಭಿಲಷಿತಾನಿ ವಿಶ್ವಾನಿ ಸರ್ವಾಣಿ ಪ್ರಕರ್ಷೇಣಾಗಚ್ಛತಂ । ಪ್ರಾಪತಂ ॥

। ಪ್ರತಿಪದಾರ್ಥ ।

ವಾಜಿನೀವಸೂ—ಯಜ್ಞಕ್ರಿಯೆಯಲ್ಲಿ ಉತ್ಪನ್ನವಾಗುವ ಸಂಪತ್ತನ್ನು ಹೊಂದಿರುವ ಎಲೈ ಅಶ್ವಿನಿಗಳೇ । ಯೋಷಣಾ—ಸೂರ್ಯಾದೇವಿಯು । ವಾಂ—ನಿಮ್ಮ । ರಥಂ-ರಥವನ್ನು । ಯತ್—ಯಾವಾಗ । ಆ ಅತಿಷ್ಠತ್—ಹತ್ತಿ ಕುಳಿತಳೋ (ಆಗ) । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯುವಂ—ನೀವು । ಧೀತಾನಿ—ನಿಮ್ಮಿಂದ ಅಪೇಕ್ಷಿತವಾದ । ವಿಶ್ವಾನಿ—ಸಮಸ್ತ ಆಕಾಂಕ್ಷೆಗಳನ್ನೂ । ಪ್ರ ಅಗಚ್ಛತಂ—ಪೂರ್ಣವಾಗಿ ಹೊಂದಿದಿರಿ.

॥ ಭಾವಾರ್ಥ ॥

ಯಜ್ಞಕ್ರಿಯೆಯಲ್ಲಿ ಉತ್ಪನ್ನವಾಗುವ ಸಕಲಸಂಪತ್ತನ್ನೂ ಹೊಂದಿರುವ ಎಲೈ ಅಶ್ವಿನೀದೇವತೆಗಳೇ, ಸೂರ್ಯಾದೇವಿಯು ನಿಮ್ಮ ರಥವನ್ನು ಯಾವಾಗ ಹತ್ತಿ ಕುಳಿತಳೋ ಆಗ ನೀವು ಅಪೇಕ್ಷಿಸಿದ ಸಕಲ ಆಕಾಂಕ್ಷೆಗಳನ್ನು ಪೂರ್ಣವಾಗಿ ಹೊಂದಿದಿರಿ.

English Translation

Affluent in sacrifices, when the maiden (Surya) mounted your chariot, then, Aswins, you obtained all your desires.

। ಸಂಹಿತಾಪಾಠಃ ।

ಅತಃ ಸಹಸ್ರನಿರ್ಣಿಜಾ ರಥೇನಾ ಯಾತಮಶ್ವಿನಾ ।

ವತ್ಸೋ ವಾಂ ಮಧುಮದ್ವಚೋऽಶಂಸೀತ್ಕಾವ್ಯಃ ಕವಿಃ ॥ ೧೧ ॥

॥ ಪದಪಾಠಃ ॥

ಅತಃ । ಸಹಸ್ರಽನಿರ್ನಿಜಾ । ರಥೇನ । ಆ । ಯಾತಂ । ಅಶ್ವಿನಾ ।

ವತ್ಸಃ । ವಾಂ । ಮಧುಽಮತ್ । ವಚಃ । ಅಶಂಸೀತ್ । ಕಾವ್ಯಃ । ಕವಿಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಯೇಷು ಲೋಕೇಷು ಯತ್ರ ವರ್ತೇಥೇ ಅತೋಽಸ್ಮಾತ್ಸ್ಥಾನಾತ್ಸಹಸ್ರನಿರ್ಣಿಜಾ । ನಿರ್ಣಿಗಿತಿ ರೂಪನಾಮ । ಸ್ವರ್ಣಮಯತಯಾ ಬಹುವಿಧರೂಪಯುಕ್ತೇನ ರಥೇನಾ ಯಾತಂ । ಆಗಚ್ಛತಂ । ಕಾವ್ಯಃ ಕವೇಃ ಪುತ್ರಃ ಕವಿರ್ಮೇಧಾವೀ ವತ್ಸ ಋಷಿರ್ವಾಂ ಯುವಾಭ್ಯಾಂ ಯುವಯೋರರ್ಥಂ ಮಧುಮನ್ಮಾಧುರ್ಯೋಪೇತಂ ವಚೋ ವಚನಮುಕ್ಥಮಶಂಸೀತ್ । ಶಂಸಿತವಾನ್ । ಯತ ಏವಮತ ಆಗಚ್ಛತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ (ನೀವು ಯಾವ ಯಾವ ಲೋಕಗಳಲ್ಲಿದ್ದರೂ ಸಹ) । **ಅತಃ**—ಅಲ್ಲಿಂದಲೇ । **ಸಹಸ್ರನಿರ್ಣಿಜಾ**—ಸುವರ್ಣಮಯವಾದ ಅನೇಕ ರೂಪಗಳಿಂದ ಕೂಡಿದ । **ರಥೇನ**—ರಥದೊಡನೆ । **ಆ ಯಾತಂ**—ದಯಮಾಡಿರಿ । **ಕಾವ್ಯಃ**—ಕವಿಪುತ್ರನೂ । **ಕವಿಃ**—ಮೇಧಾವಿಯೂ ಆದ । **ವತ್ಸಃ**—ವತ್ಸನೆಂಬ ಋಷಿಯು । **ವಾಂ**—ನಿಮ್ಮನ್ನುದ್ದೇಶಿಸಿ । **ಮಧುಮತ್**—ಮಾಧುರ್ಯೋಪೇತವಾದ । **ವಚಃ**—ಸ್ತುತಿವಾಕ್ಯನ್ನು । **ಅಶಂಸೀತ್**—ಪಠಿಸಿದ್ದಾನೆ

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಯಾವ ಯಾವ ಲೋಕಗಳಲ್ಲಿದ್ದರೂ ಸಹ ಅಲ್ಲಿಂದಲೇ ನಿಮ್ಮ ಸುವರ್ಣಮಯವಾದುದೂ, ಅನೇಕ ರೂಪಗಳಿಂದ ಕೂಡಿದುದೂ ಆದ ರಥದೊಡನೆ ದಯಮಾಡಿರಿ. ಕವಿಪುತ್ರನೂ ಮೇಧಾವಿಯೂ ಆದ ವತ್ಸನೆಂಬ ಋಷಿಯು ನಿಮ್ಮನ್ನುದ್ದೇಶಿಸಿ ಮಾಧುರ್ಯೋಪೇತವಾದ ಸ್ತುತಿವಾಕ್ಯನ್ನು ಪಠಿಸಿದ್ದಾನೆ.

## English Translation

From wheresoever (you may be) come, Aswins, with your thousand-fold diversified chariot: the sage Vatsa, the son of Kavi, has addressed you with sweet words.

॥ ಸಂಹಿತಾಪಾಠಃ ॥

ಪುರುಮಂದ್ರಾ ಪುರೂವಸೂ ಮನೋತರಾ ರಯೀಣಾಂ ।

ಸ್ತೋಮಂ ಮೇ ಅಶ್ವಿನಾವಿಮಮಭಿ ವಹ್ನೀ ಅನೂಷಾತಾಂ ॥೧೨॥

॥ ಪದಪಾಠಃ ॥

ಪುರುಽಮಂದ್ರಾ । ಪುರೂವಸೂ ಇತಿ ಪುರುಽವಸೂ । ಮನೋತರಾ । ರಯೀಣಾಂ ।

ಸ್ತೋಮಂ । ಮೇ । ಅಶ್ವಿನಾ । ಇಮಂ । ಅಭಿ । ವಹ್ನೀ ಇತಿ । ಅನೂಷಾತಾಂ ॥ ೧೨ ॥

॥ ಸಾಯಣಭಾಷ್ಯಂ ॥

ಪುರುಮಂದ್ರಾ ಬಹುಮದೌ ಬಹುಭಿಃ ಸೋಮೈರ್ಮಾದಯಿತವ್ಯೌ ವಾ ಪುರೂವಸೂ ಬಹುಧನೌ ಬಹೂನಾಂ ನಿವಾಸಕೌ ವಾ ರಯೀಣಾಂ ಧನಾನಾಂ ಮನೋತರಾ ಮಂತಾರೌ ದಾತಾರೌ ॥ ಮನ್ಯತೇ-ಸ್ತೃಚಿ ಪೃಷೋದರಾದಿತ್ವಾದ್ರೂಪಸಿದ್ಧಿಃ । ನಾಮನ್ಯತರಸ್ಯಾಮಿತಿ ರೈಕಬ್ದಾಸ್ನಾಮ ಉದಾತ್ತತ್ವಂ ॥ ವಹ್ನೀ ಕೃತ್ಸ್ನಸ್ಯ ಜಗತೋ ವೋಢಾರೌ ಈದೃಶಾವಶ್ವಿನೌ ಮೇ ಮಮೇಮಂ ಸ್ತೋಮಂ ಸ್ತೋತ್ರ-ಮಭ್ಯನೂಷಾತಾಂ । ಸಮ್ಯಕ್ ಸ್ತುತಮಿತಿ ಪ್ರಾಶಂಸಿಷಾತಾಂ ॥ ಣು ಸ್ತುತೌ ॥ ಯದ್ವಾ । ನುವತಿರತ್ರ ಶ್ರವಣಾರ್ಥೇ ವರ್ತತೇ । ಅಭಿಪ್ರಾಪ್ತಾವಶ್ರೌಷ್ಟಾಂ ॥

॥ ಪ್ರತಿಪದಾರ್ಥ ॥

ಪುರುಮಂದ್ರಾ—ಅನೇಕರಿಗೆ ಸಂತೋಷವನ್ನುಂಟುಮಾಡುವವರೂ । ಪುರುವಸೂ—ಅಧಿಕವಾದ ಧನ ಸಂಪತ್ತುಳ್ಳವರೂ । ರಯೀಣಾಂ—ಧನಗಳಿಗೆ । ಮನೋತರಾ—ದಾತೃಗಳೂ । ವಹ್ನೀ—ಜಗತ್ತನ್ನು ವಹಿಸು ವವರೂ ಆದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಮೇ—ನನ್ನ । ಇಮಂ ಸ್ತೋಮಂ—ಈ ಸ್ತೋತ್ರವನ್ನು । ಅಭ್ಯನೂಷಾತಾಂ—ಸೇವಿಸಿ ಅದನ್ನು ಪ್ರಶಂಸಿಸಿರಿ.

॥ ಭಾವಾರ್ಥ ॥

ಅನೇಕರಿಗೆ ಸಂತೋಷವನ್ನುಂಟುಮಾಡುವವರೂ, ಅಧಿಕವಾದ ಧನಸಂಪತ್ತುಳ್ಳವರೂ, ಧನಗಳಿಗೆ ದಾತೃಗಳೂ, ಜಗತ್ತನ್ನು ವಹಿಸುವವರೂ ಆದ ಎಲೈ ಅಶ್ವಿನೀದೇವತೆಗಳೇ, ನನ್ನ ಈ ಸ್ತೋತ್ರವನ್ನು ಸೇವಿಸಿ ಅದನ್ನು ಪ್ರಶಂಸಿಸಿರಿ.

## English Translation

Delighters of many, abounding in wealth, bestowers of riches, Aswins, sustainers of all, approve of this my adoration.

॥ ಸಂಹಿತಾಪಾಠಃ ॥

ಆ ನೋ ವಿಶ್ವಾನ್ಯಶ್ವಿನಾ ಧತ್ತಂ ರಾಧಾಂಸ್ಯಹ್ರಯಾ ।

ಕೃತಂ ನ ಋತ್ವಿಯಾವತೋ ಮಾ ನೋ ರೀರಧತಂ ನಿದೇ ॥ ೧೩ ॥

॥ ಪದಪಾಠಃ ॥

ಆ । ನಃ । ವಿಶ್ವಾನಿ । ಅಶ್ವಿನಾ । ಧತ್ತಂ । ರಾಧಾಂಸಿ । ಅಹ್ರಯಾ ।

ಕೃತಂ । ನ । ಋತ್ವಿಯ್ಽವತಃ । ಮಾ । ನಃ । ರೀರಧತಂ । ನಿದೇ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಅಹ್ರಯಾಹ್ರಯಾಣ್ಯಹ್ರೀತಿಕರಣಾನ್ಯಲಜ್ಜಾಹೇತೂನಿ ಪ್ರಶಸ್ತಾನಿ ವಿಶ್ವಾನಿ ಸರ್ವಾಣಿ ರಾಧಾಂಸಿ ಧನಾನಿ ನೋಽಸ್ಮಭ್ಯಮಾ ಧತ್ತಂ । ಪ್ರಯಚ್ಛತಂ । ಅಪಿ ಚ ನೋಽಸ್ಮಾನೃತ್ವಿಯಾವತಃ । ಋತೌ ಕಾಲೇ ಭವಂ ಪ್ರಜೋತ್ಪಾದನರೂಪಂ ಕರ್ಮ ಋತ್ವಿಯಂ । ತದ್ವತಃ ಕುರುತಂ । ತಥಾ ನಿದೇ ನಿಂದಾಯೈ ನಿಂದಕಾಯ ವಾ ನೋಽಸ್ಮಾನ್ಮಾ ರೀರಧತಂ । ಮಾ ವಶಂ ನೈಷ್ಟಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಅಹ್ರಯಾ—ಲಜ್ಜಾಯುತವಾದ ಜೀವನಕ್ಕೆ ಅವಕಾಶವಿಲ್ಲದಂತೆ । ವಿಶ್ವಾನಿ—ಸಮಸ್ತವಾದ । ರಾಧಾಂಸಿ—ಧನಗಳನ್ನು । ನಃ—ನಮಗೆ । ಆ ಧತ್ತಂ—ಕೊಡಿರಿ । ನಃ—ನಮ್ಮನ್ನು । ಋತ್ವಿಯಾವತಃ—ಸಕಾಲದಲ್ಲಿ ಸಂತಾನೋತ್ಪಾದನಕ್ಕೆ ಸಮರ್ಥರನ್ನಾಗಿ । ಕೃತಂ—ಮಾಡಿರಿ । ನಃ—ನಮ್ಮನ್ನು । ನಿದೇ—(ನಮ್ಮನ್ನು) ನಿಂದಿಸುವವನಿಗೆ । ಮಾ ರೀರಧತಂ—ವಶವಾಗುವಂತೆ ಮಾಡಬೇಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಲಜ್ಜಾಯುತವಾದ ಜೀವನಕ್ಕೆ ಅವಕಾಶವಿಲ್ಲದಂತೆ ನಮಗೆ ಸಮಸ್ತವಾದ ಧನಗಳನ್ನು ಕೊಡಿರಿ. ಸಕಾಲದಲ್ಲಿ ಸಂತಾನೋತ್ಪತ್ತಿಗೆ ನಮ್ಮನ್ನು ಸಮರ್ಥರನ್ನಾಗಿ ಮಾಡಿರಿ. ನಮ್ಮನ್ನು ನಿಂದಿಸುವವನಿಗೆ ನಾವು ವಶವಾಗುವಂತೆ ಮಾಡಬೇಡಿರಿ.

## English Translation

Grant us, Aswins, all riches that may not bring us shame, make us the begetters of progeny in due season, subject us not to reproach.

॥ ಸಂಹಿತಾಪಾಠಃ ॥

ಯನ್ನಾಸತ್ಯಾ ಪರಾವತಿ ಯದ್ವಾ ಸ್ಥೋ ಅಧ್ಯಂಬರೇ ।

ಅತಃ ಸಹಸ್ರನಿರ್ಣಿಜಾ ರಥೇನಾ ಯಾತಮಶ್ವಿನಾ ॥ ೧೪ ॥

। ಪದಪಾಠಃ ।

ಯತ್ । ನಾಸತ್ಯಾ । ಪರಾಽವತಿ । ಯತ್ । ವಾ । ಸ್ಥಃ । ಅಧಿ । ಅಂಬರೇ ।

ಅತಃ । ಸಹಸ್ರಽನಿರ್ನಿಜಾ । ರಥೇನ । ಆ । ಯಾತಂ । ಅಶ್ವಿನಾ ॥ ೧೪ ॥

। ಸಾಯಣಭಾಷ್ಯಂ ।

ಹೇ ನಾಸತ್ಯಾ ಸತ್ಯಸ್ವಭಾವೌ ಸತ್ಯಸ್ಯ ನೇತಾರೌ ನಾಸಿಕಾಪ್ರಭವೌ ವಾಶ್ವಿನೌ ಯದ್ಯದಿ ಪರಾವತಿ ದೂರದೇಶೇ ಸ್ಥಃ । ಯದ್ವಾ ಯದಿ ಚಾಂಬರೇ । ಅಂತಿಕನಾಮೈತತ್ । ಸಮೀಪೇ ಸ್ಥಃ ಭವಥಃ ॥ ಅಧಿಃ ಸಪ್ತಮ್ಯರ್ಥಾನುವಾದೀ ॥ ಅತೋಽಸ್ಮಾತ್ಸರ್ವಸ್ಮಾತ್ಸ್ಥಾನಾತ್ಸಹಸ್ರನಿರ್ಣಿಜಾ ಬಹುವಿಧರೂಪೇಣ ರಥೇನ ಹೇ ಅಶ್ವಿನೌ ಆಗಚ್ಛತಂ ॥

। ಪ್ರತಿಪದಾರ್ಥ ।

ನಾಸತ್ಯಾ—ಸತ್ಯಸ್ವರೂಪರಾದ ಎಲೈ ಅಶ್ವಿನೀದೇವತೆಗಳೇ । ಯತ್—ಒಂದು ವೇಳೆ । ಪರಾವತಿ—ಅತ್ಯಂತ ದೂರದೇಶದಲ್ಲಿ । ಸ್ಥಃ—ಇದ್ದರೂ । ಯದ್ವಾ—ಅಥವಾ । ಅಂಬರೇ ಅಧಿ—ಅಂತರಿಕ್ಷದಲ್ಲಿದ್ದರೂ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಅತಃ—ಅಂತಹ ಎಲ್ಲಾ ಪ್ರದೇಶಗಳಿಂದಲೂ । ಸಹಸ್ರನಿರ್ಣಿಜಾ—ಅನೇಕ ವಿಧವಾದ ರೂಪವುಳ್ಳ । ರಥೇನ—ರಥದೊಂದಿಗೆ । ಆ ಯಾತಂ—ದಯಮಾಡಿರಿ.

। ಭಾವಾರ್ಥ ।

ಸತ್ಯಸ್ವರೂಪರಾದ ಎಲೈ ಅಶ್ವಿನೀದೇವತೆಗಳೇ, ಒಂದು ವೇಳೆ ನೀವು ಅತ್ಯಂತ ದೂರದೇಶದಲ್ಲಿದ್ದರೂ ಅಥವಾ ಅಂತರಿಕ್ಷದಲ್ಲಿದ್ದರೂ ಅಂತಹ ಎಲ್ಲಾ ಪ್ರದೇಶಗಳಿಂದಲೂ ಅನೇಕವಿಧವಾದ ರೂಪವನ್ನು ಹೊಂದಿರುವ ನಿಮ್ಮ ರಥದೊಂದಿಗೆ ದಯಮಾಡಿರಿ

## English Translation

Whether, Nasatyas, you be far off, or whether you be nigh, come from thence with your thousandfold diversified chariot.

। ಸಂಹಿತಾಪಾಠಃ ।

ಯೋ ವಾಂ ನಾಸತ್ಯಾವೃಷಿರ್ಗೀರ್ಭಿರ್ವತ್ಸೋ ಅವೀವೃಧತ್ ।

ತಸ್ಮೈ ಸಹಸ್ರನಿರ್ಣಿಜಮಿಷಂ ಧತ್ತಂ ಘೃತಶ್ಚುತಂ ॥ ೧೫ ॥

॥ ಪದಪಾಠಃ ॥

ಯಃ । ವಾಂ । ನಾಸತ್ಯಾ । ಋಷಿಃ । ಗೀಃಽಭಿಃ । ವತ್ಸಃ । ಅವೀವೃಧತ್ ।

ತಸ್ಮೈ । ಸಹಸ್ರಽನಿರ್ನಿಜಂ । ಇಷಂ । ಧತ್ತಂ । ಘೃತಽಶ್ಚುತಂ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾ ಯೋ ವತ್ಸಾಖ್ಯ ಋಷಿರ್ವಾಂ ಯುವಾಂ ಗೀರ್ಭಿಃ ಸ್ತುತಿಭಿರವೀವೃಧತ್ ಅವರ್ಧಯತ್ ತಸ್ಮಾ ಋಷಯೇ ಸಹಸ್ರನಿರ್ಣಿಜಂ ಬಹುವಿಧರೂಪಂ ಘೃತಶ್ಚುತಂ ಘೃತಂ ಕ್ಷರಂತೀಮಿಷಮನ್ನಂ ಧತ್ತಂ । ಪ್ರಯಚ್ಛತಂ ॥

॥ ಪ್ರತಿಪದಾರ್ಥ ॥

ನಾಸತ್ಯಾ—ಸತ್ಯಸ್ವರೂಪರಾದ ಎಲೈ ಅಶ್ವಿನೀದೇವತೆಗಳೇ । ವತ್ಸಃ—ವತ್ಸಸಂಜ್ಞಕನಾದ । ಯಃ ಋಷಿಃ—ಯಾವ ಋಷಿಯು । ವಾಂ—ನಿಮ್ಮನ್ನು । ಗೀರ್ಭಿಃ—ಸ್ತುತಿಗಳಿಂದ । ಅವೀವೃಧತ್—ಪ್ರವೃದ್ಧರಾಗುವಂತೆ ಮಾಡಿದನೋ । ತಸ್ಮೈ—ಆ ಋಷಿಗೆ । ಸಹಸ್ರನಿರ್ಣಿಜಂ—ಸಹಸ್ರಾರು ರೂಪವುಳ್ಳದ್ದೂ । ಘೃತಶ್ಚುತಂ—ಘೃತದಂತೆ ಸ್ರವಿಸತಕ್ಕದ್ದೂ ಆದ । ಇಷಂ—ಅನ್ನವನ್ನು । ಧತ್ತಂ—ಕೊಡಿರಿ .

॥ ಭಾವಾರ್ಥ ॥

ಸತ್ಯಸ್ವರೂಪರಾದ ಎಲೈ ಅಶ್ವಿನೀದೇವತೆಗಳೇ, ವತ್ಸಸಂಜ್ಞಕನಾದ ಯಾವ ಋಷಿಯು ನಿಮ್ಮನ್ನು ಸ್ತುತಿಗಳಿಂದ ಪ್ರವೃದ್ಧರಾಗುವಂತೆ ಮಾಡಿದನೋ ಆ ಋಷಿಗೆ ಸಹಸ್ರಾರು ರೂಪವುಳ್ಳದ್ದೂ, ಘೃತದಂತೆ ಸ್ರವಿಸತಕ್ಕದ್ದೂ ಆದ ಅನ್ನವನ್ನು ಕೊಡಿರಿ.

## English Translation

Give, Nasatyas, food of many kinds dripping with butter to him, the Rishi Vatsa, who has magnified you both with hymns

॥ ಸಂಹಿತಾಪಾಠಃ ॥

ಪ್ರಾಸ್ಮಾ ಊರ್ಜಂ ಘೃತಶ್ಚುತಮಶ್ವಿನಾ ಯಚ್ಛತಂ ಯುವಂ ।

ಯೋ ವಾಂ ಸುಮ್ನಾಯ ತುಷ್ಟವದ್ವಸೂಯಾದ್ದಾನುನಸ್ಪತೀ ॥

॥ ಪದಪಾಠಃ ॥

ಪ್ರ । ಅಸ್ಮೈ । ಊರ್ಜಂ । ಘೃತಽಶ್ಚುತಂ । ಅಶ್ವಿನಾ । ಯಚ್ಛತಂ । ಯುವಂ ।

ಯಃ । ವಾಂ । ಸುಮ್ನಾಯ । ತುಸ್ತವತ್ । ವಸುऽಯಾತ್ । ದಾನುನಃ । ಪತೀ ಇತಿ ॥೧೬॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಅಸ್ಮೈ ಸ್ತೋತ್ರೇ ಘೃತಶ್ಚುತಂ ಘೃತಧಾರಯಾ ಯುಕ್ತಾಮೂರ್ಜಂ ಬಲಕರ-ಮನ್ನರಸಂ ಯುವಂ ಯುವಾಂ ಪ್ರ ಯಚ್ಛತಂ । ದತ್ತಂ । ಹೇ ದಾನುನಸ್ಪತೀ ದಾನಸ್ಯಾಧಿಪತೀ ವಾಂ ಯುವಾಂ ಸುಮ್ನಾಯ ಸುಖಾರ್ಥಂ ಯಸ್ತುಸ್ತವತ್ ಸ್ತುಯಾತ್ । ಯಶ್ಚ ವಸೂಯಾತ್ ವಸು ಧನ-ಮಾತ್ಮನ ಇಚ್ಛೇತ್ । ಅಸ್ಮಾ ಇತ್ಯನ್ವಯಃ ॥

॥ ಪ್ರತಿಪದಾರ್ಥ ॥

ದಾನುನಸ್ಪತೀ—ಉದಾರವಾದ ದಾನಕ್ಕೆ ಅಧಿಪತಿಗಳಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಸುಮ್ನಾಯ—ಸುಖಾರ್ಥವಾಗಿ । ಯಃ—ಯಾವ ಸ್ತುತಿಕರ್ತನು । ತುಸ್ತವತ್—ಸ್ತುತಿಸುವನೋ । ಯಃ—ಯಾರು । ವಸೂಯತ್—ಧನವನ್ನಿಚ್ಛಿಸುವನೋ ಅಂತಹ । ಅಸ್ಮೈ—ಈ ಸ್ತುತಿಕರ್ತನಿಗೆ । ಘೃತಶ್ಚುತಂ—ಘೃತದಂತೆ ಸ್ರವಿಸತಕ್ಕದ್ದೂ । ಊರ್ಜಂ—ಬಲಯುತವಾದುದೂ ಆದ ಅನ್ನರಸವನ್ನು । ಯುವಂ—ನೀವು । ಪ್ರ ಯಚ್ಛತಂ—ಕೊಡಿರಿ.

॥ ಭಾವಾರ್ಥ ॥

ಉದಾರವಾದ ದಾನಕ್ಕೆ ಅಧಿಪತಿಗಳಾದ ಎಲೈ ಅಶ್ವಿನೀದೇವತೆಗಳೇ, ಸುಖಾಪೇಕ್ಷೆಯಿಂದಲೂ, ಧನಾಪೇಕ್ಷೆಯಿಂದಲೂ ಯಾವ ಸ್ತುತಿಕರ್ತನು ನಿಮ್ಮನ್ನು ಸ್ತುತಿಸುವನೋ ಅಂತಹ ಈ ಸ್ತುತಿಕರ್ತನಿಗೆ ಘೃತದಂತೆ ಸ್ರವಿಸತಕ್ಕದ್ದೂ, ಬಲಯುತವಾದುದೂ ಆದ ಅನ್ನರಸವನ್ನು ಕೊಡಿರಿ.

## English Translation

Give, Aswins, invigorating food, dripping with butter, to him who praises you, the lords of liberality, to obtain happiness; who desires affluence.

॥ ಸಂಹಿತಾಪಾಠಃ ॥

ಆ ನೋ ಗಂತಂ ರಿಶಾದಸೇಮಂ ಸ್ತೋಮಂ ಪುರುಭುಜಾ ।
ಕೃತಂ ನಃ ಸುಶ್ರಿಯೋ ನರೇಮಾ ದಾತಮಭಿಷ್ಟಯೇ ॥ ೧೭ ॥

॥ ಪದಪಾಠಃ ॥

ಆ । ನಃ । ಗಂತಂ । ರಿಶಾದಸಾ । ಇಮಂ । ಸ್ತೋಮಂ । ಪುರುऽಭುಜಾ ।

ಕೃತಂ । ನಃ । ಸುಽಶ್ರಿಯಃ । ನರಾ । ಇಮಾ । ದಾತಂ । ಅಭಿಷ್ಟಯೇ ॥ ೧೭ ॥

। ಸಾಯಣಭಾಷ್ಯಂ ।

ಹೇ ರಿಶಾದಸಾ ರಿಶತಾಂ ಹಿಂಸತಾಂ ನಿರಸಿತಾರೌ ಯದ್ವಾ ರಿಶಾನಾಂ ಹಿಂಸಕಾನಾಮತ್ತಾರೌ ಭಕ್ಷಿತಾರೌ ಹೇ ಪುರುಭುಜಾ ಬಹುಲಸ್ಯ ಹವಿಷೋ ಭೋಕ್ತಾರೌ ಬಹೂನಾಂ ಪಾಲಕೌ ವಾ ಹೇ ಅಶ್ವಿನೌ ನೋಽಸ್ಮಾಕಮಿಮಂ ಸ್ತೋಮಂ ಸ್ತೋತ್ರಮಾ ಗಂತಂ । ಅಭಿಗಚ್ಛತಂ । ಆಗತ್ಯ ಚ ಹೇ ನರಾ ನೇತಾರೌ ನೋಽಸ್ಮಾನ್ ಸುಶ್ರಿಯಃ ಸುಶ್ರೀಕಾಞ್ಶೋಭನಯಾ ಸಂಪದಾ ಯುಕ್ತಾನ್ ಕೃತಂ । ಕುರುತಂ । ತದರ್ಥಮಿಮೇಮಾನಿ ಪುರೋ ವರ್ತಮಾನಾನಿ ಪಾರ್ಥಿವಾನ್ಯಭಿಷ್ಟಯೇಽಭಿಪ್ರಾಪ್ತಯೇ ದಾತಂ । ದತ್ತಂ ॥ ದದಾತೇರ್ಲೋಟಿ ಛಾಂದಸಃ ಶಪೋ ಲುಕ್ ॥

। ಪ್ರತಿಪದಾರ್ಥ ।

**ರಿಶಾದಸಾ**—ಹಿಂಸಕರಾದ ಶತ್ರುಗಳನ್ನು ನಾಶಮಾಡುವವರೂ । **ಪುರುಭುಜಾ**—ಅನೇಕರಿಗೆ ಪಾಲಕರೂ ಆದ ಎಲೈ ಅಶ್ವಿನೀದೇವತೆಗಳೇ । **ನಃ**—ನಮ್ಮ । **ಇಮಂ ಸ್ತೋಮಂ**—ಈ ಸ್ತೋತ್ರಕ್ಕೆ ಅಭಿಮುಖವಾಗಿ । **ಆ ಗಂತಂ**—ದಯಮಾಡಿರಿ । **ನರಾ**—ನೇತೃಗಳಾದ ಎಲೈ ಅಶ್ವಿನೀದೇವತೆಗಳೇ । **ನಃ**—ನಮ್ಮನ್ನು । **ಸುಶ್ರಿಯಃ**—ಉತ್ತಮವಾದ ಸಂಪದ್ಯುಕ್ತರನ್ನಾಗಿ । **ಕೃತಂ**—ಮಾಡಿರಿ । **ಇಮಾ**—ನಮ್ಮ ಎದುರಿಗಿರುವ ಪಾರ್ಥಿವಸಂಪತ್ತುಗಳನ್ನು । **ಅಭಿಷ್ಟಯೇ**—ನಮ್ಮ ಇಷ್ಟಾರ್ಥಕ್ಕನುಗುಣವಾಗಿ । **ದಾತಂ**—ಕೊಡಿರಿ.

। ಭಾವಾರ್ಥ ।

ಹಿಂಸಕರಾದ ಶತ್ರುಗಳನ್ನು ನಾಶಮಾಡುವವರೂ, ಅನೇಕರಿಗೆ ಪಾಲಕರೂ ಆದ ಎಲೈ ಅಶ್ವಿನೀದೇವತೆಗಳೇ, ನಮ್ಮ ಈ ಸ್ತೋತ್ರಕ್ಕಭಿಮುಖವಾಗಿ ದಯಮಾಡಿರಿ. ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ನಮ್ಮನ್ನು ಉತ್ತಮವಾದ ಸಂಪದ್ಯುಕ್ತರನ್ನಾಗಿ ಮಾಡಿರಿ. ನಮ್ಮ ಎದುರಿಗಿರುವ ಪಾರ್ಥಿವ ಸಂಪತ್ತುಗಳನ್ನು ನಮ್ಮ ಇಷ್ಟಾರ್ಥಕ್ಕನುಗುಣವಾಗಿ ಕೊಡಿರಿ.

## English Translation

Confounders of the malignant, partakers of many (oblations), come to this our adoration ; render us prosperous, leaders (of rites) ; give these (good things of earth) to our desires.

। ಸಂಹಿತಾಪಾಠಃ ।

ಆ ವಾಂ ವಿಶ್ವಾಭಿರೂತಿಭಿಃ ಪ್ರಿಯಮೇಧಾ ಅಹೂಷತ ।

ರಾಜಂತಾವಧ್ವರಾಣಾಮಶ್ವಿನಾ ಯಾಮಹೂತಿಷು ॥ ೧೮ ॥

। ಪದಪಾಠಃ ।

ಆ । ವಾಂ । ವಿಶ್ವಾಭಿಃ । ಊತಿಽಭಿಃ । ಪ್ರಿಯಽಮೇಧಾಃ । ಅಹೂಷತ ।

ರಾಜಂತೌ । ಅಧ್ವರಾಣಾಂ । ಅಶ್ವಿನಾ । ಯಾಮಽಹೂತಿಷು ॥ ೧೮ ॥

। ಸಾಯಣಭಾಷ್ಯಂ ।

ಹೇ ಅಶ್ವಿನಾಶ್ವಿನೌ ಯಾಮಹೂತಿಷು ಯಾಮಾನಾಂ ಯಾತ್ವ್ಯಾನಾಂ ದೇವಾನಾಂ ಹೂತಿರಾಹ್ವಾನಂ ಯೇಷು ಯಾಗೇಷು ತೇಷು ಪ್ರಿಯಮೇಧಾ ಪ್ರಿಯಯಜ್ಞಾ ಏತತ್ಸಂಜ್ಞಾ ಋಷಯೋಽಧ್ವರಾಣಾಂ ಯಜ್ಞಾನಾಂ ರಾಜಂತಾವೀಶ್ವರೌ । ರಾಜತಿರೈಶ್ವರ್ಯಕರ್ಮಾ । ಅಶ್ವಿನೌ ಹಿ ದೇವಾನಾಮಧ್ವರ್ಯೂ ಆಸ್ತಾಮಿತಿ ಹಿ ಬ್ರಾಹ್ಮಣಂ। ಈದೃಶೌ ವಿಶ್ವಾಭಿಃ ಸರ್ವಾಭಿರೂತಿಭೀ ರಕ್ಷಾಭಿಃ ಸಹಿತೌ ವಾಂ ಯುವಾಮಾಹೂಷತ । ಆಹ್ವಯನ್ । ಅಸ್ತುವನ್ನಿತ್ಯರ್ಥಃ ॥

। ಪ್ರತಿಪದಾರ್ಥ ।

ಅಶ್ವಿನಾ—ಎಲೈ ಅಶ್ವಿನೀದೇವತಗಳೇ । ಯಾಮಹೂತಿಷು—ಯಜ್ಞಗಳಲ್ಲಿ । ಪ್ರಿಯಮೇಧಾಃ—ಪ್ರಿಯಮೇಧಸಂಜ್ಞಕನಾದ ಋಷಿಯು । ಅಧ್ವರಾಣಾಂ—ಯಜ್ಞಗಳಿಗೆ । ರಾಜಂತೌ—ಈಶ್ವರರಾದ । ವಾಂ—ನಿಮ್ಮನ್ನು । ವಿಶ್ವಾಭಿಃ—ಸಮಸ್ತವಾದ । ಊತಿಭಿಃ—ರಕ್ಷಣೆಗಳೊಂದಿಗೆ । ಆ ಅಹೂಷತ—ಸ್ತುತಿಸಿ ಆಹ್ವಾನವನ್ನಿತ್ತಿದ್ದಾನೆ.

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ಯಜ್ಞಗಳಲ್ಲಿ ಪ್ರಿಯಮೇಧಸಂಜ್ಞಕನಾದ ಋಷಿಯು ಯಜ್ಞಗಳಿಗೆ ಈಶ್ವರರಾದ ನಿಮ್ಮನ್ನು ಸಮಸ್ತವಾದ ರಕ್ಷಣೆಗಳೊಂದಿಗೂ ಸ್ತುತಿಸಿ ಆಹ್ವಾನವನ್ನಿತ್ತಿದ್ದಾನೆ.

## English Translatian

The Priyamedhas at the sacrifices to the gods invoke you, Aswins, who rule over religious rites, together with your protections.

। ಸಂಹಿತಾಪಾಠಃ ।

ಆ ನೋ ಗಂತಂ ಮಯೋಭುವಾಶ್ವಿನಾ ಶಂಭುವಾ ಯುವಂ ।

ಯೋ ವಾಂ ವಿಪನ್ಯೂ ಧೀತಿಭಿರ್ಗೀರ್ಭಿರ್ವತ್ಸೋ ಅವೀವೃಧತ್ ॥

॥ ಪದಪಾಠಃ ॥

ಆ । ನಃ । ಗಂತಂ । ಮಯಃऽಭುವಾ । ಅಶ್ವಿನಾ । ಶಂऽಭುವಾ । ಯುವಂ ।

ಯಃ । ವಾಂ । ವಿಪನ್ಯೂ ಇತಿ । ಧೀತಿऽಭಿಃ । ಗೀಃऽಭಿಃ । ವತ್ಸಃ । ಅವೀವೃಧತ್ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಮಯೋಭುವಾ ಮಯಸಃ ಸುಖಸ್ಯ ಭಾವಯಿತಾರೌ ಶಂಭುವಾ ರೋಗಾಣಾಂ ಶಮಸ್ಯ ಭಾವಯಿತಾರೌ ಯುವಂ ಯುವಾಂ ನೋಽಸ್ಮಾನಾ ಗಂತಂ । ಆಗಚ್ಛತಂ । ಹೇ ವಿಪನ್ಯೂ ಸ್ತುತ್ಯಾವಶ್ವಿನೌ ಯೋ ವತ್ಸಃ ಸ್ತೋತಾ ವಾಂ ಯುವಾಂ ಧೀತಿಭಿಃ ಕರ್ಮಭಿಃ ಪರಿಚರಣೈರ್ಗೀರ್ಭಿ-ಸ್ತುತಿಭಿಶ್ಚಾವೀವೃಧತ್ ಅವರ್ಧಯತ್ ತಾನಸ್ಮಾನಿತಿ ಪೂರ್ವತ್ರಾನ್ವಯಃ ॥

॥ ಪ್ರತಿಪದಾರ್ಥ ॥

**ಮಯೋಭುವಾ**—ಸುಖಸಂಪಾದಕರೂ । **ಶಂಭುವಾ**—ರೋಗನಾಶಕರೂ ಆದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಯುವಂ**—ನೀವು । **ನಃ**—ನಮ್ಮನ್ನು ಅನುಗ್ರಹಿಸಲು । **ಆ ಗಂತಂ**—ದಯಮಾಡಿರಿ । **ವಿಪನ್ಯೂ**—ಸ್ತುತ್ಯರ್ಹರಾದ ಎಲೈ ಅಶ್ವಿನೀದೇವತೆಗಳೇ । **ಯಃ**—ಸ್ತುತಿಕರ್ತನಾದ ಯಾವ । **ವತ್ಸಃ**—ವತ್ಸನು । **ವಾಂ**—ನಿಮ್ಮನ್ನು । **ಧೀತಿಭಿಃ**—ಯಜ್ಞಕರ್ಮಗಳಿಂದಲೂ । **ಗೀರ್ಭಿಃ**—ಸ್ತುತಿಗಳಿಂದಲೂ । **ಅವೀವೃಧತ್**—ನಿಮ್ಮನ್ನು ಬೆಳೆಸಿದನೋ (ಅಂತಹ ನನ್ನಲ್ಲಿಗೆ ಬನ್ನಿರಿ).

॥ ಭಾವಾರ್ಥ ॥

ಸುಖಸಂಪಾದಕರೂ, ರೋಗನಾಶಕರೂ ಆದ ಎಲೈ ಅಶ್ವಿನೀದೇವತೆಗಳೇ, ನೀವು ನಮ್ಮನ್ನು ಅನುಗ್ರಹಿಸಲು ದಯಮಾಡಿರಿ. ಸ್ತುತ್ಯರ್ಹರಾದ ಎಲೈ ಅಶ್ವಿನೀದೇವತೆಗಳೇ, ಸ್ತುತಿಕರ್ತನಾದ ಯಾವ ವತ್ಸನು ನಿಮ್ಮನ್ನು ಯಜ್ಞಕರ್ಮಗಳಿಂದಲೂ, ಸ್ತುತಿಗಳಿಂದಲೂ ಬೆಳೆಸಿದನೋ ಅಂತಹ ನನ್ನಲ್ಲಿಗೆ ಬನ್ನಿರಿ.

## English translation

Come to us, Aswins, sources of happiness, sources of health; (come) adorable (Aswins), to that Vatsa, who has magnified you with sacrifices and with praises.

॥ ಸಂಹಿತಾಪಾಠಃ ॥

ಯಾಭಿಃ ಕಣ್ವಂ ಮೇಧಾತಿಥಿಂ ಯಾಭಿರ್ವಶಂ ದಶವ್ರಜಂ ।

ಯಾಭಿರ್ಗೋಶರ್ಯಮಾವತಂ ತಾಭಿರ್ನೋಽವತಂ ನರಾ ॥ ೨೦ ॥

॥ ಪದಪಾಠಃ ॥

ಯಾಭಿಃ । ಕಣ್ವಂ । ಮೇಧಽಅತಿಥಿಂ । ಯಾಭಿಃ । ವಶಂ । ದಶಽವ್ರಜಂ ।
ಯಾಭಿಃ । ಗೋಽಶರ್ಯಂ । ಆವತಂ । ತಾಭಿಃ । ನಃ । ಅವತಂ । ನರಾ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯಾಭಿರೂತಿಭಿಃ ಕಣ್ವಮೃಷಿಂ ಮೇಧಾತಿಥಿಂ ಚಾವತಂ ಅರಕ್ಷತಂ । ಯಾಭಿಶ್ಚ ವಶಮೇತತ್ಸಂಜ್ಞಂ ಚಾವತಂ । ಯಾಭಿಶ್ಚ ಗೋಶರ್ಯಂ । ಶೀರ್ಣಾ ಗೌರ್ಯಸ್ಯ ಸ ಗೋಶರ್ಯಃ ಶಯುಃ । ತಥಾ ಚಾಮ್ನಾತಂ । ಶಯವೇ ಚಿನ್ನಾಸತ್ಯಾ ಶಚೀಭಿರ್ಜಸುರಯೇ ಸ್ತರ್ಯಂ ಪಿಪ್ಯಥುರ್ಗಾಂ । ಋ. ೧-೧೧೬-೨೨ । ಇತಿ । ಈದೃಶಂ ಗೋಶರ್ಯಂ ಶಯುಮಾವತಂ ಅರಕ್ಷತಂ । ಹೇ ನರಾ ನೇತಾರೌ ತಾಭಿರೂತಿಭಿರಸ್ಮಾನವತಂ । ರಕ್ಷತಂ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) ಯಾಭಿಃ—ಯಾವ ರಕ್ಷಣೆಗಳಿಂದ । ಕಣ್ವಂ—(ಋಷಿಗಳಾದ) ಕಣ್ವನನ್ನೂ । ದಶವ್ರಜಂ—ದಶವ್ರಜನನ್ನೂ । ಮೇಧಾತಿಥಿಂ—ಮೇಧಾತಿಥಿಯನ್ನೂ । ಅವತಂ—ರಕ್ಷಿಸಿದರೋ । ಯಾಭಿಃ—ಯಾವ ರಕ್ಷಣೆಗಳಿಂದ । ವಶಂ—ವಶನೆಂಬ ಋಷಿಯನ್ನು ರಕ್ಷಿಸಿದಿರೋ । ಯಾಭಿಃ—ಯಾವ ರಕ್ಷಣೆಗಳಿಂದ । ಗೋಶರ್ಯಂ—ಗೋಸಹಿತನಾದ ಶಯುವನ್ನು ರಕ್ಷಿಸಿದಿರೋ । ನರಾ—ನೇತೃಗಳಾದ ಎಲೈ ಅಶ್ವಿನಿಗಳೇ । ತಾಭಿಃ—ಆ ಎಲ್ಲಾ ರಕ್ಷಣೆಗಳೊಡನೆಯೂ । ನಃ—ನಮ್ಮನ್ನು । ಅವತಂ—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಯಾವ ರಕ್ಷಣೆಗಳಿಂದ ನೀವು ಋಷಿಗಳಾದ ಕಣ್ವನನ್ನೂ, ಮೇಧಾತಿಥಿಯನ್ನೂ, ದಶವ್ರಜನನ್ನೂ ರಕ್ಷಿಸಿದಿರೋ, ಯಾವ ರಕ್ಷಣೆಗಳಿಂದ ವಶಋಷಿಯನ್ನೂ ಮತ್ತು ಗೋಸಹಿತನಾದ ಶಯುವನ್ನು ರಕ್ಷಿಸಿದಿರೋ, ನೇತೃಗಳಾದ ಎಲೈ ಅಶ್ವಿನಿಗಳೇ, ಆ ಎಲ್ಲಾ ರಕ್ಷಣೆಗಳೊಡನೆಯೂ ನಮ್ಮನ್ನು ರಕ್ಷಿಸಿರಿ.

## English Translation

Leaders (of rites), protect us with those protections with which you have protected Kanwa and Medhatithi, Vasa and Dasavraja; with which you have protected Gosharya;

॥ ಸಂಹಿತಾಪಾಠಃ ॥

ಯಾಭಿರ್ನರಾ ತ್ರಸದಸ್ಯುಮಾವತಂ ಕೃತ್ವ್ಯೇ ಧನೇ ।
ತಾಭಿಃ ಷ್ವ೧ಸ್ಮಾಁ ಅಶ್ವಿನಾ ಪ್ರಾವತಂ ವಾಜಸಾತಯೇ ॥ ೨೧ ॥

॥ ಪದಪಾಠಃ ॥

ಯಾಭಿಃ । ನರಾ । ತ್ರಸದಸ್ಯುಂ । ಆವತಂ । ಕೃತ್ವ್ಯೇ । ಧನೇ ।

ತಾಭಿಃ । ಸು । ಅಸ್ಮಾನ್ । ಅಶ್ವಿನಾ । ಪ್ರ । ಅವತಂ । ವಾಜಸಾತಯೇ ॥ ೨೮ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರಾವಶ್ವಿನೌ ಧನೇ ಕೃತ್ವ್ಯೇ ಕರ್ತವ್ಯೇ ಪ್ರಾಪ್ತವ್ಯೇ ಸತಿ ತ್ರಸದಸ್ಯುಮೇ-ತತ್ಸಂಜ್ಞಂ ಪುರುಕುತ್ಸಪುತ್ರಮೃಷಿಂ ಯಾಭಿರೂತಿಭಿರಾವತಂ ಅರಕ್ಷತಂ ಹೇ ಅಶ್ವಿನೌ ತಾಭಿರೂತಿಭಿಃ ಸು ಸುಷ್ಠ್ವಸ್ಮಾನ್ ಪ್ರಾವತಂ । ಪ್ರರಕ್ಷತಂ । ಕಿಮರ್ಥಂ । ವಾಜಸಾತಯೇ ವಾಜಸ್ಯಾನ್ನಸ್ಯ ಬಲಸ್ಯ ವಾ ಸಾತಯೇ ಸಂಭಜನಾರ್ಥಂ ॥

॥ ಪ್ರತಿಪದಾರ್ಥ ॥

ನರಾ—ನೇತೃಗಳಾದ ಎಲೈ ಅಶ್ವಿನೀದೇವತೆಗಳೇ । ಧನೇ—ಧನಸಂಪತ್ತು । ಕೃತ್ವ್ಯೇ—ಹೊಂದಲ್ಪಡ ಬೇಕಾದ ಕಾಲದಲ್ಲಿ । ತ್ರಸದಸ್ಯುಂ—ತ್ರಸದಸ್ಯುವೆಂಬ ರಾಜನನ್ನು । ಯಾಭಿಃ—ಯಾವ ರಕ್ಷಣೆಗಳೊಡನೆ । ಆವತಂ—ಕಾಪಾಡಿದಿರೋ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ತಾಭಿಃ—ಆ ಎಲ್ಲಾ ರಕ್ಷಣೆಗಳೊಡನೆಯೂ । ಸು—ಅತಿಶಯವಾಗಿ । ಅಸ್ಮಾನ್—ನಮ್ಮನ್ನು । ವಾಜಸಾತಯೇ—ಅನ್ನಸಂಪತ್ತನ್ನು ಪಡೆಯಲು । ಪ್ರಾವತಂ—ಪೂರ್ಣವಾಗಿ ರಕ್ಷಿಸಿರಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಧನಸಂಪತ್ತನ್ನು ಪಡೆಯಬೇಕಾದ ಕಾಲದಲ್ಲಿ ತ್ರಸದಸ್ಯುವೆಂಬ ರಾಜನನ್ನು ಯಾವ ರಕ್ಷಣೆಗಳೊಡನೆ ಕಾಪಾಡಿದಿರೋ, ಆ ಎಲ್ಲಾ ರಕ್ಷಣೆಗಳೊಡನೆಯೂ ನಮ್ಮನ್ನು ಅನ್ನಸಂಪತ್ತನ್ನು ಪಡೆಯಲು ಪೂರ್ಣವಾಗಿ ರಕ್ಷಿಸಿರಿ.

## English Translation

(And) with which, leaders (of rites), you protected Trasadasyu when wealth was to be acquired: you, with the same graciously protect us, Aswins, for the acquirement of food.

॥ ಸಂಹಿತಾಪಾಠಃ ॥

ಪ್ರ ವಾಂ ಸ್ತೋಮಾಃ ಸುವೃಕ್ತಯೋ ಗಿರೋ ವರ್ಧಂತ್ವಶ್ವಿನಾ ।

ಪುರುತ್ರಾ ವೃತ್ರಹಂತಮಾ ತಾ ನೋ ಭೂತಂ ಪುರುಸ್ಪೃಹಾ ॥ ೨೨ ॥

॥ ಪದಪಾಠಃ ॥

ಪ್ರ । ವಾಂ । ಸ್ತೋಮಾಃ । ಸುಽವೃಕ್ತಯಃ । ಗಿರಃ । ವರ್ಧಂತು । ಅಶ್ವಿನಾ ।

ಪುರುಽತ್ರಾ । ವೃತ್ರಹನ್ಽತಮಾ । ತಾ । ನಃ । ಭೂತಂ । ಪುರುಽಸ್ಪೃಹಾ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಸ್ತೋಮಾಃ ಪ್ರಗೀತಮಂತ್ರರೂಪಾಃ ಸ್ತುತಯಃ ಸುವೃಕ್ತಯಃ ಸುಪ್ರವೃತ್ತಾಃ ಸುಷ್ಠು ದೋಷವರ್ಜಿತಾ ವಾ ಗಿರಃ ಶಸ್ತ್ರರೂಪಾ ವಾಚಶ್ಚ ವಾಂ ಯುವಾಂ ಪ್ರ ವರ್ಧಂತು । ಪ್ರವರ್ಧಯಂತು । ಅಪಿ ಚ ಹೇ ಪುರುತ್ರಾ ಬಹೂನಾಂ ತ್ರಾತಾರೌ ಹೇ ವೃತ್ರಹಂತಮಾ ವೃತ್ರಾಣಾಂ ಶತ್ರೂಣಾಂ ಹಂತೃತಮೌ ಈದೃಶೌ ಹೇ ಅಶ್ವಿನೌ ತಾ ತೌ ಯುವಾಂ ನೋಽಸ್ಮಾಕಂ ಪುರುಸ್ಪೃಹಾ ಪುರು ಬಹುಲಂ ಸ್ಪೃಹಣೀಯಾವೀಪ್ಸಿತವ್ಯೌ ಭೂತಂ । ಭವತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಸ್ತೋಮಾಃ—ಗಾನರೂಪವಾದ ಸ್ತುತಿಗಳೂ । ಸುವೃಕ್ತಯಃ—ದೋಷವರ್ಜಿತವಾಗಿ ನಿರ್ಮಿತವಾದ । ಗಿರಃ—ಶಸ್ತ್ರರೂಪವಾದ ವಾಕ್ಯಗಳೂ । ವಾಂ—ನಿಮ್ಮನ್ನು । ಪ್ರ ವರ್ಧಂತು—ಪೂರ್ಣವಾಗಿ ಪುಷ್ಟರನ್ನಾಗಿ ಮಾಡಲಿ । ಪುರುತ್ರಾ—ಅನೇಕರಿಗೆ ರಕ್ಷಕರೂ । ವೃತ್ರಹಂತಮಾ—ಶತ್ರುನಾಶಕರೂ ಆದ ಎಲೈ ಅಶ್ವಿನೀದೇವತೆಗಳೇ । ತಾ—ಪ್ರಸಿದ್ಧರಾದ ನೀವು । ನಃ—ನಮಗೆ । ಪುರುಸ್ಪೃಹಾ—ಅತ್ಯಂತ ಆದರಕ್ಕೆ ಪಾತ್ರರಾಗಿ । ಭೂತಂ—ಇರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಗಾನರೂಪವಾದ ಸ್ತುತಿಗಳೂ, ದೋಷವರ್ಜಿತವಾಗಿ ನಿರ್ಮಿತವಾದ ಮತ್ತು ಶಸ್ತ್ರರೂಪವಾದ ವಾಕ್ಯಗಳೂ ನಿಮ್ಮನ್ನು ಪೂರ್ಣವಾಗಿ ಪುಷ್ಟರನ್ನಾಗಿ ಮಾಡಲಿ. ಅನೇಕರಿಗೆ ರಕ್ಷಕರೂ, ಶತ್ರುನಾಶಕರೂ ಆದ ಎಲೈ ಅಶ್ವಿನೀದೇವತೆಗಳೇ, ಪ್ರಸಿದ್ಧರಾದ ನೀವು ನಮ್ಮ ಅತ್ಯಂತ ಆದರಕ್ಕೆ ಪಾತ್ರರಾಗಿರಿ.

## English Translation

May (perfect) hymns and holy praises magnify you, Aswins: protectors of many, exterminators of foes, greatly are you desired of us.

॥ ಸಂಹಿತಾಪಾಠಃ ॥

ತ್ರೀಣಿ ಪದಾನ್ಯಶ್ವಿನೋರಾವಿಃ ಸಾಂತಿ ಗುಹಾ ಪರಃ ।

ಕವೀ ಋತಸ್ಯ ಪತ್ಮಭಿರರ್ವಾಗ್ಜೀವೇಭ್ಯಸ್ಪರಿ ॥ ೨೩ ॥

॥ ಪದಪಾಠಃ ॥

ತ್ರೀಣಿ । ಪದಾನಿ । ಅಶ್ವಿನೋಃ । ಆವಿಃ । ಸಂತಿ । ಗುಹಾ । ಪರಃ ।
ಕವೀ ಇತಿ । ಋತಸ್ಯ । ಪತ್ಮಽಭಿಃ । ಅರ್ವಾಕ್ । ಜೀವೇಭ್ಯಃ । ಪರಿ ॥ ೨೩ ॥

॥ ಸಾಯಣಭಾಷ್ಯಂ ॥

ತ್ರೀಣಿ ತ್ರಿಸಂಖ್ಯಾಕಾನ್ಯನಯೋರಶ್ವಿನೋರ್ದೇವಯೋಃ ರಥಸ್ಯ ಸಂಬಂಧೀನಿ ಪದಾನಿ ಚಕ್ರಾಣಿ ಗುಹಾಯಾಂ ವರ್ತಮಾನಾನ್ಯೇತಾವಂತಂ ಕಾಲಮದೃಶ್ಯಮಾನಾನಿ ಪರೋಃ ಗುಹಾಯಾಃ ಪರಸ್ತಾದ್ದೃಷ್ಟಿಗೋಚರೇ ದೇಶ ಆವಿಃ ಸಂತಿ । ಆವಿರ್ಭವಂತಿ ॥ ಸಾಂಹಿತಿಕಶ್ಛಾಂದಸೋ ದೀರ್ಘಃ । ವ್ಯತ್ಯಯೇನ ನಿಘಾತಾಭಾವಃ । ಯದ್ವಾ । ಸಂತೀತ್ಯೇತದಸ್ತೇಃ ಶತರಿ ಜಸಿ ರೂಪಂ ॥ ಆವಿರ್ಭೂತಾನಿ ದೃಶ್ಯಂತೇ । ಆಶ್ವಿನಸ್ಯ ರಥಸ್ಯ ಚಕ್ರತ್ರಯೋಪೇತತ್ವಂ ಚ ರಥಸ್ತ್ರಿಚಕ್ರಃ ಪರಿ ವರ್ತತೇ । ಋ. ೪-೩೬-೧ । ಇತ್ಯಾದಿನಿಗಮಾಂತರೇ ಪ್ರಸಿದ್ಧಂ । ಕವೀ ಕ್ರಾಂತದರ್ಶಿನಾವಶ್ವಿನಾವೃತಸ್ಯ ಸತ್ಯಸ್ಯೋದಕಸ್ಯ ಯಜ್ಞಸ್ಯ ವಾ ಹೇತುಭೂತೈಃ ಪತ್ಮಭಿರ್ಮಾರ್ಗೈಃ ಪದ್ಭಿರ್ಜೀವೇಭ್ಯಸ್ಪರಿ । ಪರಿರುಪರ್ಯರ್ಥಃ ॥ ಪಂಚಮ್ಯಾಃ ಪರಾವಧ್ಯರ್ಥ ಇತಿ ಸತ್ವಂ ॥ ಜೀವಾನಾಮುಪರಿ ಜೀವೇಷ್ವಸ್ಮಾಸ್ವರ್ವಾಗಭಿಮುಖಂ । ಆಗಚ್ಛತಮಿತಿ ಶೇಷಃ । ತಾನಿ ಪದಾನೀದಾನೀಮುಪಲಭ್ಯಂತ ಇತ್ಯನ್ವಯಃ ॥

॥ ಪ್ರತಿಪದಾರ್ಥ ॥

ಅಶ್ವಿನೋಃ—ಅಶ್ವಿನೀದೇವತೆಗಳ । ಗುಹಾ—ಗೂಢವಾದ ಪ್ರದೇಶದಲ್ಲಿ ಅಡಗಿದ್ದವೂ । ತ್ರೀಣಿ—ತ್ರಿಸಂಖ್ಯಾಕವೂ ಆದ । ಪದಾನಿ—ರಥಚಕ್ರಗಳು। ಪುರಃ-ದೃಷ್ಟಿಗೋಚರವಾಗುವಂತೆ। ಆವಿಃ ಸಂತಿ-ಆವಿರ್ಭೂತವಾಗಿವೆ । ಕವೀ—ಕ್ರಾಂತದರ್ಶಿಗಳಾದ ಎಲೈ ಅಶ್ವಿನೀದೇವತೆಗಳೇ । ಋತಸ್ಯ—ಸತ್ಯದ । ಪತ್ಮಭಿಃ—ಮಾರ್ಗಗಳಿಂದ । ಜೀವೇಭ್ಯಃ ಪರಿ—ಜೀವಲೋಕಗಳ ಮುಂಭಾಗದಲ್ಲಿ । ಅರ್ವಾಕ್—ಅವರಿಗೆ ಅಭಿಮುಖವಾಗಿ ನಿಲ್ಲಿರಿ (ನಮಗೆ ಗೋಚರವಾಗುವಂತೆ ನಿಲ್ಲಿರಿ).

॥ ಭಾವಾರ್ಥ ॥

ಇಲ್ಲಿಯವರೆಗೆ ಗೂಢವಾದ ಪ್ರದೇಶದಲ್ಲಿ ಅಡಗಿದ್ದವೂ, ತ್ರಿಸಂಖ್ಯಾಕವೂ ಆದ ಅಶ್ವಿನೀದೇವತೆಗಳ ರಥಚಕ್ರಗಳು ಎಲ್ಲರಿಗೂ ಗೋಚರವಾಗುವಂತೆ ಕಾಣಿಸಿಕೊಂಡಿವೆ. ಕ್ರಾಂತದರ್ಶಿಗಳಾದ ಎಲೈ ಅಶ್ವಿನೀದೇವತೆಗಳೇ, ಸತ್ಯಮಾರ್ಗಗಳಿಂದ ಬಂದು ಜೀವಲೋಕಕ್ಕೆ ಸೇರಿದ ನಮ್ಮೆಲ್ಲರಿಗೂ ಕಾಣುವಂತೆ ನಮಗಭಿಮುಖವಾಗಿ ಬಂದು ನಿಲ್ಲಿರಿ.

## English Translation

The three wheels (of the chariot) of the Aswins, which were invisible, have become manifest: you two, who are cognizant of the past, (come) by the paths of truth to the presence of living beings.



# ಒಂಭತ್ತನೆಯ ಸೂಕ್ತವು.

। ಸಾಯಣಭಾಷ್ಯಂ ।

ಆ ನೂನಮಿತ್ಯೇಕವಿಂಶತ್ಯೃಚಂ ಚತುರ್ಥಂ ಸೂಕ್ತಂ ಶಶಕರ್ಣಸ್ಯಾರ್ಷಮಶ್ವಿದೇವತ್ಯಂ । ವಿಂಶ್ಯೇಕವಿಂಶ್ಯೌ ದ್ವಿತೀಯಾತೃತೀಯೇ ಚೇತಿ ಚತಸ್ರೋ ಗಾಯತ್ರ್ಯಃ ಪ್ರಥಮಾ ಚತುರ್ಥೀ ಷಷ್ಠೀ ಚತುರ್ದಶೀ ಪಂಚದಶೀ ಚೇತಿ ಪಂಚ ಬೃಹತ್ಯಃ ಪಂಚಮೀ ಕಕುಪ್ ಮಧ್ಯಮಶ್ಚೇತ್ಕಕುಪ್ । ಅನು. ೫-೩ । ಇತ್ಯುಕ್ತಲಕ್ಷಣಸದ್ಭಾವಾತ್ । ದಶಮೀ ತ್ರಿಷ್ಟುಬೇಕಾದಶೀ ವಿರಾಡ್ ದ್ವಾದಶೀ ಜಗತೀ ಶಿಷ್ಟಾ ಅನುಷ್ಟುಭಃ । ತಥಾ ಚಾನುಕ್ರಾಂತಂ । ಆ ನೂನಂ ಸೈಕಾ ಶಶಕರ್ಣೋಽಂತ್ಯೇ ಗಾಯತ್ರ್ಯಾವುಪಾದ್ಯೇ ಚಾದ್ಯಾ ಚತುರ್ಥೀ ಷಷ್ಠೀ ಚತುರ್ದಶ್ಯಾದ್ಯೇ ಚ ಬೃಹತ್ಯಃ ಪಂಚಮೀ ಕಕುಬ್ದಶಮ್ಯಾದ್ಯಾಸ್ತ್ರಿಷ್ಟುಬ್ವಿರಾಡ್ಜಗತ್ಯ ಇತಿ ॥ ಅಪ್ತೋರ್ಯಾಮೇ ಬ್ರಾಹ್ಮಣಾಚ್ಛಂಸಿನೋಽತಿರಿಕ್ತೋಕ್ಥ್ಯ ಇದಂ ಸೂಕ್ತಂ । ಸೂತ್ರ್ಯತೇ ಹಿ । ಆ ರಾಡ್ಜಗತ್ಯ ನೂನಮಶ್ವಿನಾ ತಂ ವಾಂ ರಥಂ । ಆ. ೯-೧೧ । ಇತಿ ॥

ಅನುವಾದವು—ಆ ನೂನಂ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಇಪ್ಪತ್ತೊಂದು ಋಕ್ಕುಗಳಿರುವವು ಈ ಸೂಕ್ತಕ್ಕೆ ಕಣ್ವಗೋತ್ರದ ಶಶಕರ್ಣಃ ಎಂಬುವನು ಋಷಿಯು; ಅಶ್ವಿನೀದೇವತೆಗಳು ದೇವತೆಯು; ಈ ಸೂಕ್ತದಲ್ಲಿ ಇಪ್ಪತ್ತು, ಇಪ್ಪತ್ತೊಂದು ಮತ್ತು ಎರಡು ಮೂರನೆಯ ಋಕ್ಕುಗಳು ಒಟ್ಟು ನಾಲ್ಕು ಋಕ್ಕುಗಳು ಗಾಯತ್ರೀಛಂದಸ್ಸುವು; ಒಂದು, ನಾಲ್ಕು, ಆರು, ಹದಿನಾಲ್ಕು, ಹದಿನೈದು ಈ ಐದು ಋಕ್ಕುಗಳು ಬೃಹತೀಛಂದಸ್ಸುವು. ಐದನೆಯ ಋಕ್ಕು ಕಕುಪ್‌ಛಂದಸ್ಸುವು; ಒಂದು ಋಕ್ಕಿನಲ್ಲಿ ಮೂರು ಪಾದಗಳಿದ್ದು ಮೊದಲು ಮತ್ತು ಕೊನೆಯ ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಮಧ್ಯದ ಪಾದದಲ್ಲಿ ಹನ್ನೆರಡು ಅಕ್ಷರಗಳೂ ಇದ್ದಲ್ಲಿ ಅದು ಕಕುಪ್‌ಛಂದಸ್ಸೆನಿಸುವುದು ಎಂದು ಈ ಛಂದಸ್ಸಿನ ಲಕ್ಷಣವನ್ನು ಛಂದೋಽನುಕ್ರಮಣಿಕೆಯಲ್ಲಿ (ಅನು. ೫-೩) ಹೇಳಲಾಗಿದೆ. ಹತ್ತನೆಯ ಋಕ್ಕು ತ್ರಿಷ್ಟುಪ್‌ಛಂದಸ್ಸುವು; ಹನ್ನೊಂದನೆಯದು ವಿರಾಟ್‌ಛಂದಸ್ಸುವು; ಹನ್ನೆರಡನೆಯದು ಜಗತೀಛಂದಸ್ಸುವು; ಉಳಿದ ಋಕ್ಕುಗಳು ಅನುಷ್ಟುಪ್‌ಛಂದಸ್ಸುವು. ಅನುಕ್ರಮಣಿಕೆಯಲ್ಲಿ—**ಆ ನೂನಂ ಸೈಕಾ ಶಶಕರ್ಣೋಽನ್ತ್ಯೇ ಗಾಯತ್ರ್ಯಾವುಪಾದ್ಯೇ ಆದ್ಯಾ ಚತುರ್ಥೀ, ಷಷ್ಠೀ ಚತುರ್ದಶ್ಯಾದ್ಯೇ ಚ ಬೃಹತ್ಯಃ ಪಂಚಮೀ ಕಕುಬ್ದಶಮ್ಯಾದ್ಯಾಸ್ತ್ರಿಷ್ಟುಬ್ವಿರಾಡ್ಜಗತ್ಯಃ** ಎಂದು ಹೇಳಿರುವುದು. ಅಪ್ತೋರ್ಯಾಮವೆಂಬ ಯಾಗದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸಬೇಕಾದ ಅತಿರಿಕ್ತೋಕ್ಥಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಆ ನೂನಮಶ್ವಿನಾ ತಂ ವಾಂ ರಥಂ** ಎಂಬ ಸೂತ್ರದಿಂದ (ಆ. ೯-೧೧) ವಿವೃತವಾಗಿರುವುದು.

## ಸೂಕ್ತ—೯

**ಮಂಡಲ—೮ । ಅನುವಾಕ—೨ । ಸೂಕ್ತ—೯ ।**
**ಅಷ್ಟಕ—೫ । ಅಧ್ಯಾಯ—೮ । ವರ್ಗ—೩೦, ೩೧, ೩೨, ೩೩ ।**
**ಸೂಕ್ತದಲ್ಲಿರುವ ಋಕ್ಸಂಖ್ಯೆ—೨೧ ।**
**ಋಷಿಃ—ಶಶಕರ್ಣಃ ಕಾಣ್ವಃ ।**
**ದೇವತಾ—ಅಶ್ವಿನೌ ।**
**ಛಂದಃ—೧, ೪, ೬, ೧೪, ೧೫. ಬೃಹತೀ । ೨, ೩, ೨೦, ೨೧. ಗಾಯತ್ರೀ । ೫. ಕಕುಪ್ । ೭-೯, ೧೩, ೧೬-೧೯ ಅನುಷ್ಟುಪ್ । ೧೦. ತ್ರಿಷ್ಟುಪ್ । ೧೧. ವಿರಾಟ್ । ೧೨. ಜಗತೀ ।**

। ಸಂಹಿತಾಪಾಠಃ ।

ಆ ನೂನಮಶ್ವಿನಾ ಯುವಂ ವತ್ಸಸ್ಯ ಗಂತಮವಸೇ ।
ಪ್ರಾಸ್ಮೈ ಯಚ್ಛತಮವೃಕಂ ಪೃಥು ಚ್ಛರ್ದಿರ್ಯುಯುತಂ ಯಾ
ಅರಾತಯಃ ॥ ೧ ॥

। ಪದಪಾಠಃ ।

ಆ । ನೂನಂ । ಅಶ್ವಿನಾ । ಯುವಂ । ವತ್ಸಸ್ಯ । ಗಂತಂ । ಅವಸೇ ।
ಪ್ರ । ಅಸ್ಮೈ । ಯಚ್ಛತಂ । ಅವೃಕಂ । ಪೃಥು । ಛರ್ದಿಃ । ಯುಯುತಂ । ಯಾಃ ।
ಅರಾತಯಃ ॥ ೧ ॥

। ಸಾಯಣಭಾಷ್ಯಂ ।

ಹೇ ಅಶ್ವಿನಾಶ್ವಿನೌ ಯುವಂ ಯುವಾಂ ವತ್ಸಸ್ಯ ಸ್ತೋತುರ್ಮಮಾವಸೇ ರಕ್ಷಣಾರ್ಥಂ ನೂನಮವಶ್ಯಮಾ ಗಂತಂ । ಆಗಚ್ಛತಂ । ಆಗತ್ಯ ಚಾಸ್ಮಾ ಅಸ್ಮಯ್ಯೋಽವೃಕಂ ಬಾಧಕರಹಿತಂ ಪೃಥು ವಿಸ್ತೀರ್ಣಂ ಛರ್ದಿರ್ಗೃಹಂ ಪ್ರ ಯಚ್ಛತಂ । ಪ್ರದತ್ತಂ । ತಥಾ ಯಾ ಅರಾತಯೋಽದಾನಶೀಲಾಃ ಶತ್ರುಭೂತಾಃ ಪ್ರಜಾಸ್ತಾ ಯುಯುತಂ । ಸ್ತೋತೃಭ್ಯಃ ಪೃಥಕ್ಕುರುತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯುವಂ—ನೀವು । ವತ್ಸಸ್ಯ—ವತ್ಸಸಂಜ್ಞಕನಾದ ನನ್ನ । ಅವಸೇ—ರಕ್ಷಣಾರ್ಥವಾಗಿ । ನೂನಂ—ಖಂಡಿತ । ಆ ಗಂತಂ—ದಯಮಾಡಿರಿ । ಅಸ್ಮೈ—ಸ್ತುತಿಕರ್ತನಾದ ನನಗೆ । ಅವೃಕಂ—ತೊಂದರೆಯಿಲ್ಲದುದೂ । ಪೃಥು—ವಿಸ್ತೃತವಾದುದೂ ಆದ । ಛರ್ದಿಃ—ಗೃಹವನ್ನು । ಪ್ರ ಯಚ್ಛತಂ—ಕೊಡಿರಿ । ಅರಾತಯಃ—ದಾನರಹಿತರಾಗಿ । ಯಾಃ—ಯಾವ ಶತ್ರುಪ್ರಜೆಗಳಿರುವರೋ (ಅವರನ್ನು) । ಯುಯುತಂ—ನಮ್ಮಿಂದ ಬೇರೆ ಮಾಡಿರಿ.

। ಭಾವಾರ್ಥ ।

ಎಲೈ ಅಶ್ವಿನೀದೇವತೆಗಳೇ, ನೀವು ವತ್ಸಸಂಜ್ಞಕನಾದ ನನ್ನ ರಕ್ಷಣಾರ್ಥವಾಗಿ ಖಂಡಿತ ದಯಮಾಡಿರಿ. ಸ್ತುತಿಕರ್ತನಾದ ನನಗೆ ತೊಂದರೆಯಿಲ್ಲದುದೂ, ವಿಸ್ತೃತವಾದುದೂ ಆದ ಗೃಹವನ್ನು ಕೊಡಿರಿ. ದಾನರಹಿತರಾಗಿ ಯಾವ ಶತ್ರುಪ್ರಜೆಗಳಿರುವರೋ ಅವರನ್ನು ನಮ್ಮಿಂದ ಬೇರೆ ಮಾಡಿರಿ.

## English Translation

Come Aswins, without fail, for the protection of the worshipper;

confer upon him a secure and spacious dwelling; drive away those who make no offerings.

। ಸಂಹಿತಾಪಾಠಃ ।

ಯದಂತರಿಕ್ಷೇ ಯದ್ದಿವಿ ಯತ್ಪಂಚ ಮಾನುಷಾँ ಅನು ।

ನೃಮ್ಣಂ ತದ್ಧತ್ತಮಶ್ವಿನಾ ॥ ೨ ॥

। ಪದಪಾಠಃ ।

ಯತ್ । ಅಂತರಿಕ್ಷೇ । ಯತ್ । ದಿವಿ । ಯತ್ । ಪಂಚ । ಮಾನುಷಾನ್ । ಅನು ।
ನೃಮ್ಣಂ । ತತ್ । ಧತ್ತಂ । ಅಶ್ವಿನಾ ॥ ೨ ॥

। ಸಾಯಣಭಾಷ್ಯಂ ।

ಅಂತರಿಕ್ಷೇ ಗಂಧರ್ವಾದಿಭಿಃ ಸೇವಿತೇ ಮಧ್ಯಮೇ ಲೋಕೇ ಯನ್ನೃಮ್ಣಂ ಧನಮಸ್ತಿ । ದಿವಿ ದ್ಯುಲೋಕೇ ಚ ಯದಸ್ತಿ । ಪಂಚ ಪಂಚಸಂಖ್ಯಾಕಾನ್ಮಾನುಷಾನ್ಮನುಷ್ಯಾನನು ॥ ಲಕ್ಷಣೇऽನೋಃ ಕರ್ಮಪ್ರವಚನೀಯತ್ವಂ । ಕರ್ಮಪ್ರವಚನೀಯಯುಕ್ತ ಇತಿ ದ್ವಿತೀಯಾ ॥ ಪಂಚವಿಧಾ ಮನುಷ್ಯಾ ನಿಷಾದಪಂಚಮಾಶ್ಚತ್ವಾರೋ ವರ್ಣಾ ಯತ್ರ ವರ್ತಂತೇ ತತ್ರ ಚೇಹ ಲೋಕೇ ಯನ್ನೃಮ್ಣಂ ಧನಮಸ್ತಿ । ಹೇ ಅಶ್ವಿನೌ ತತ್ತ್ರಿವಿಧಂ ನೃಮ್ಣಂ ಧನಂ ಧತ್ತಂ । ಅಸ್ಮಭ್ಯಂ ಪ್ರಯಚ್ಛತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಅಂತರಿಕ್ಷೇ—ಅಂತರಿಕ್ಷದಲ್ಲಿ । ಯತ್—ಯಾವ । ನೃಮ್ಣಂ—ಧನವು ಇರುವುದೋ । ದಿವಿ—ದ್ಯುಲೋಕದಲ್ಲಿ । ಯತ್—ಯಾವ ಧನವಿರುವುದೋ । ಪಂಚ ಮನುಷ್ಯಾನ್ ಅನು—ನಿಷಾದಾದಿ ಪಂಚವಿಧವಾದ ಮಾನವರಿರುವ ಪೃಥ್ವಿಯಲ್ಲಿ । ಯತ್—ಯಾವ ಧನವಿರುವುದೋ । ತತ್—ಆ ಎಲ್ಲಾ ವಿಧವಾದ ಧನವನ್ನೂ । ಧತ್ತಂ—ನಮಗೆ ಕೊಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಂತರಿಕ್ಷದಲ್ಲಿ ಯಾವ ಧನವಿರುವುದೋ ದ್ಯುಲೋಕದಲ್ಲಿ ಯಾವ ಧನವಿರುವುದೋ, ನಿಷಾದಾದಿ ಪಂಚವಿಧವಾದ ಮಾನವರಿರುವ ಪೃಥ್ವಿಯಲ್ಲಿ ಯಾವ ಧನವಿರುವುದೋ ಆ ಎಲ್ಲಾ ವಿಧವಾದ ಧನವನ್ನು ನಮಗೆ ಕೊಡಿರಿ.

## English Translation

Whatever wealth may be in the firmament, in heaven, or among the five (classes) of men, bestow, Aswins, (upon us).

॥ ಸಂಹಿತಾಪಾಠಃ ॥

ಯೋ ವಾಂ ದಂಸಾಂಸ್ಯಶ್ವಿನಾ ವಿಪ್ರಾಸಃ ಪರಿಮಾಮೃಶುಃ ।

ಏವೇತ್ಕಾಣ್ವಸ್ಯ ಬೋಧತಂ ॥ ೩ ॥

॥ ಪದಪಾಠಃ ॥

ಯೇ । ವಾಂ । ದಂಸಾಂಸಿ । ಅಶ್ವಿನಾ । ವಿಪ್ರಾಸಃ । ಪರಿsಮಮೃಶುಃ ।

ಏವ । ಇತ್ । ಕಾಣ್ವಸ್ಯ । ಬೋಧತಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾಂ ಯುವಯೋಃ ಸಂಬಂಧೀನಿ ದಂಸಾಂಸಿ ಕರ್ಮಾಣಿ ಪರಿಚರಣಾತ್ಮಕಾನಿ ಯೇ ವಿಪ್ರಾಸೋ ವಿಪ್ರಾ ಮೇಧಾವಿನೋ ಯಜಮಾನಾಃ ಪರಿಮಾಮೃಶುಃ ಪರಿಮೃಶಂತಿ ಪುನಃ ಪುನಃ ಸ್ಪೃಶಂತಿ । ಅನುತಿಷ್ಠಂತೀತ್ಯರ್ಥಃ । ಯಥಾ ತದೀಯಾನಿ ಪರಿಚರಣಾನಿ ಯುವಾಂ ಜಾನೀಥಃ ಏವೇದೇವಮೇವ ಕಾಣ್ವಸ್ಯ ಕಣ್ವಪುತ್ರಸ್ಯ ಮಮ ಪರಿಚರಣಂ ಬೋಧತಂ । ಅವಗಚ್ಛತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯೇ ವಿಪ್ರಾಸಃ—ಮೇಧಾವಿಗಳಾದ ಯಾವ ಯಜಮಾನರು । ವಾಂ—ನಿಮ್ಮನ್ನುದ್ದೇಶಿಸಿದ । ದಂಸಾಂಸಿ—ಕರ್ಮಗಳನ್ನು । ಪರಿಮಾಮೃಶುಃ—ಪದೇ ಪದೇ ನೆರವೇರಿಸಿ ನಿಮ್ಮನ್ನು ಉಪಚರಿಸಿದ ವಿಷಯವನ್ನು (ನೀವು ಯಾವ ರೀತಿ ಅರಿತಿರೋ) । ಏವೇತ್—ಅದೇ ರೀತಿ । ಕಾಣ್ವಸ್ಯ—ಕಣ್ವಪುತ್ರನಾದ ನನ್ನ ಉಪಚಾರಗಳನ್ನು । ಬೋಧತಾಂ—ಅರಿಯಿರಿ

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಮೇಧಾವಿಗಳಾದ ಹಿಂದಿನ ಯಜಮಾನರು ನಿಮ್ಮನ್ನುದ್ದೇಶಿಸಿದ ಕರ್ಮಗಳನ್ನು ಪದೇ ಪದೇ ನೆರವೇರಿಸಿ ನಿಮ್ಮನ್ನು ಉಪಚರಿಸಿದ ವಿಷಯವನ್ನು ನೀವು ಹೇಗೆ ಅರಿತಿರೋ ಅದೇ ರೀತಿ ಕಣ್ವಪುತ್ರನಾದ ನನ್ನ ಉಪಚಾರಗಳನ್ನೂ ಅರಿಯಿರಿ.

## English Translation

Recognize, Aswins, ( the devotions ) of the son of Kanwa, as (you have recognized) those former sages who have repeatedly addressed pious works to you.

॥ ಸಂಹಿತಾಪಾಠಃ ॥

ಅಯಂ ವಾಂ ಘರ್ಮೋ ಅಶ್ವಿನಾ ಸ್ತೋಮೇನ ಪರಿ ಷಿಚ್ಯತೇ ।
ಅಯಂ ಸೋಮೋ ಮಧುಮಾನ್ವಾಜಿನೀವಸೂ ಯೇನ ವೃತ್ರಂ
ಚಿಕೇತಥಃ ॥ ೪ ॥

॥ ಪದಪಾಠಃ ॥

ಅಯಂ । ವಾಂ । ಘರ್ಮಃ । ಅಶ್ವಿನಾ । ಸ್ತೋಮೇನ । ಪರಿ । ಸಿಚ್ಯತೇ ।
ಅಯಂ । ಸೋಮಃ । ಮಧುऽಮಾನ್ । ವಾಜಿನೀವಸೂ ಇತಿ ವಾಜಿನೀऽವಸೂ । ಯೇನ ।
ವೃತ್ರಂ । ಚಿಕೇತಥಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾಂ ಯುವಯೋಃ ಸಂಬಂಧ್ಯಯಂ ಘರ್ಮಃ ಪ್ರವರ್ಗ್ಯಃ ಸ್ತೋಮೇನ ಸ್ತೋತ್ರೇಣ ಉಕ್ಥಾಮರೂಪೇಣ ಪರಿ ಷಿಚ್ಯತೇ । ಆದ್ರಿಯತೇ । ಯಥಾ ಯುವಯೋಸ್ತೃಪ್ತಿಕರೋ ಭವತಿ ತಥಾ ಕ್ರಿಯತ ಇತ್ಯರ್ಥಃ । ಯದ್ವಾ । ಘರ್ಮಸ್ಯ ಹವಿಷ ಆಧಾರಭೂತೋ ಮಹಾವೀರೋ ಘರ್ಮಃ । ಸ ಸ್ತೋಮೇನ ಸ್ತೋತವ್ಯೇನ ಪಯಸಾ ಪರಿ ಷಿಚ್ಯತೇ । ಆಸಿಚ್ಯತೇ ವಾಂ ಯುವಯೋರರ್ಥಂ । ಅಪಿ ಚ ಹೇ ವಾಜಿನೀವಸೂ ಅನ್ನವದ್ಧನೌ ಅಯಂ ಸೋಮಸ್ತಾತೀಯಸವನಿಕೋ ಮಧುಮಾನ್ಮಾಧುರ್ಯವಾನ್ ಯುವಾಭ್ಯಾಂ ದೀಯತೇ । ಯೇನ ಯುವಾಂ ವೃತ್ರಮಾವರಕಂ ಶತ್ರುಂ ಚಿಕೇತಥಃ ಹಂತವ್ಯತಯಾ ಜಾನೀಥಃ । ಅಯಂ ಘರ್ಮಃ ಸೋಮಶ್ಚೇತ್ಯುಭಯತ್ರಾನ್ವಯಃ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ವಾಂ—ನಿಮ್ಮನ್ನುದ್ದೇಶಿಸಿ । ಅಯಂ ಘರ್ಮಃ—ಪ್ರವರ್ಗ್ಯರೂಪದ ಈ ಸೋಮವು । ಸ್ತೋಮೇನ—ಸ್ತೋತ್ರದಿಂದೊಡಗೂಡಿ । ಪರಿಷಿಚ್ಯತೇ—ಸಿಂಚಿತವಾಗುತ್ತದೆ । ವಾಜಿನೀವಸೂ—ಅನ್ನಸಂಪತ್ತುಳ್ಳ ಎಲೈ ಅಶ್ವಿನೀದೇವತೆಗಳೇ । ಯೇನ—ಯಾವ ಸೋಮಪಾನದಿಂದ । ವೃತ್ರಂ—ವೃತ್ರಾಸುರನನ್ನು । ಚಿಕೇತಥಃ—ಕೊಲ್ಲಬೇಕೆಂದು ತಿಳಿಯುವಿರೋ ಅಂತಹ । ಅಯಂ ಸೋಮಃ—ಈ ಸೋಮರಸವು । ಮಧುಮಾನ್—ಮಾಧುರ್ಯವುಳ್ಳದ್ದಾಗಿರುತ್ತದೆ.

॥ ಭಾವಾರ್ಥ ॥

ಅನ್ನಸಂಪತ್ತಿನಿಂದ ಕೂಡಿದ ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಉದ್ದೇಶಿಸಿ ಪ್ರವರ್ಗ್ಯರೂಪದ ಈ

ಸೋಮವು ಸ್ತೋತ್ರದಿಂದೊಡಗೂಡಿ ಸಿಂಚಿತವಾಗುತ್ತದೆ. ಅನ್ನಸಂಪತ್ತುಳ್ಳ ಎಲೈ ಅಶ್ವಿನೀದೇವತೆಗಳೇ, ಯಾವ ರಸದಿಂದ ವೃತ್ರಾಸುರನನ್ನು ಕೊಲ್ಲಬೇಕೆಂದು ತಿಳಿಯುವಿರೋ, ಅಂತಹ ಈ ಸೋಮರಸವು ಮಾಧುರ್ಯವುಳ್ಳದ್ದಾಗಿರುತ್ತದೆ.

### English Translation

This oblation is poured out, Aswins, to you with praise; this sweet-savoured Soma is offered to you, who are affluent with food, (animated) by which you meditate (the destruction of) the foe,

॥ ಸಂಹಿತಾಪಾಠಃ ॥

ಯದಪ್ಸು ಯದ್ವನಸ್ಪತೌ ಯದೋಷಧೀಷು ಪುರುದಂಸಸಾ ಕೃತಂ |
ತೇನ ಮಾವಿಷ್ಟಮಶ್ವಿನಾ ॥ ೫ ॥

॥ ಪದಪಾಠಃ ॥

ಯತ್ | ಅಪ್ಽಸು | ಯತ್ | ವನಸ್ಪತೌ | ಯತ್ | ಓಷಧೀಷು | ಪುರುಽದಂಸಸಾ | ಕೃತಂ |
ತೇನ | ಮಾ | ಅವಿಷ್ಟಂ | ಅಶ್ವಿನಾ ॥ ೫ ॥

॥ ಸಾಯಣಭಾಷ್ಯಂ ॥

ಹೇ ಪುರುದಂಸಸಾ ಬಹುಕರ್ಮಾಣಾವಶ್ವಿನಾ ಅಪ್ಸೂದಕೇಷು ಯದ್ಭೇಷಜಂ ಕೃತಂ ಯುವಾಮಕಾರ್ಷ್ಟಂ || ಕರೋತೇರ್ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ || ತಥಾ ವನಸ್ಪತೌ | ವನಾನಾಂ ಪತಿರ್ವನಸ್ಪತಿಃ || ಪಾರಸ್ಕರಾದಿತ್ವಾತ್ಸುಟ್ | ಉಭೇ ವನಸ್ಪತ್ಯಾದಿಷ್ವಿತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ | ಜಾತೌ ಚೇದನೇಕವಚನಂ || ವನಸ್ಪತಿಷು ವೃಕ್ಷೇಷು ಯಚ್ಚ ಭೇಷಜಂ ಯುವಾಮಕುರುತಂ | ಓಷಧೀಷು | ಓಷಃ ಪಾಕ ಆಸು ಧೀಯತ ಇತ್ಯೋಷಧಯೋ ವ್ರೀಹ್ಯಾದಯಃ || ಕರ್ಮಣ್ಯಧಿಕರಣೇ ಚೇತಿ ದಧಾತೇರಧಿಕರಣೇ ಕಿಪ್ರತ್ಯಯಃ | ದಾಸೀಭಾರಾದಿಷು ಪಠಿತತ್ವಾತ್ಪೂರ್ವಪದಪ್ರಕೃತಿಸ್ವರತ್ವಂ | ಓಷಧೇಶ್ಚ ವಿಭಕ್ತಾವಪ್ರಥಮಾಯಾಮಿತಿ ದೀರ್ಘಃ || ವ್ರೀಹ್ಯಾದಿಷ್ವೋಷಧೀಷು ಚ ಯದ್ಭೇಷಜಂ ಕೃತಂ ಯುವಾಮಕಾರ್ಷ್ಟಂ | ಹೇ ಅಶ್ವಿನಾಶ್ವಿನೌ ತೇನ ಸರ್ವೇಣ ಭೇಷಜೇನ ಮಾ ಮಾಮವಿಷ್ಟಂ | ರಕ್ಷತಂ || ಅವತೇರ್ಲೋಟಿ ಸಿಬ್ಬಹುಲಮಿತಿ ಬಹುಲಗ್ರಹಣಾತ್ಸಿಪ್ | ತತ ಇಟ್ ||

। ಪ್ರತಿಪದಾರ್ಥ ।

ಪುರುದಂಸಸಾ— ಅನೇಕವಿಧವಾದ ಕರ್ಮವುಳ್ಳ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಅಪ್ಸು— ಉದಕಗಳಲ್ಲಿ । ಯತ್—ಯಾವ ಔಷಧಿಯನ್ನು । ಕೃತಂ— ನೀವು ಉತ್ಪನ್ನಮಾಡಿದ್ದೀರೋ । ವನಸ್ಪತೌ— ವೃಕ್ಷಾದಿಗಳಲ್ಲಿ । ಯತ್—ಯಾವ ಔಷಧಿಗಳನ್ನು ಸೇರಿಸಿದ್ದೀರೋ । ಓಷಧೀಷು—ಓಷಧಿ (ಮೂಲಿಕೆ) ಗಳಲ್ಲಿ । ಯತ್—ಯಾವ ಔಷಧಿಗಳನ್ನು ಯೋಜಿಸಿದ್ದೀರೋ । ತೇನ—ಅಂತಹ ಎಲ್ಲಾ ಔಷಧಿಗಳೊಡನೆಯೂ । ಮಾ— ನನ್ನನ್ನು । ಅವಿಷ್ಟಂ—ರಕ್ಷಿಸಿರಿ.

। ಭಾವಾರ್ಥ ।

ಅನೇಕ ವಿಧವಾದ ಕರ್ಮವುಳ್ಳ ಎಲೈ ಅಶ್ವಿನೀದೇವತೆಗಳೇ, ನೀವು ಉದಕಗಳಲ್ಲಿ ಯಾವ ಔಷಧಿಯನ್ನು ಉತ್ಪನ್ನಮಾಡಿದ್ದೀರೋ, ವೃಕ್ಷಾದಿಗಳಲ್ಲಿಯೂ, ಮೂಲಿಕೆಗಳಲ್ಲಿಯೂ ಯಾವ ಔಷಧಿಗಳನ್ನು ಸೇರಿಸಿದ್ದೀರೋ ಆ ಎಲ್ಲಾ ಔಷಧಿಗಳೊಡನೆಯೂ ನನ್ನನ್ನು ರಕ್ಷಿಸಿರಿ.

## English Translation

Doers of many deeds, Aswins, preserve me with that (healing virtue) deposited (by you) in the waters, in the trees, in the herbs.

॥ ಸಂಹಿತಾಪಾಠ ।

ಯನ್ನಾಸತ್ಯಾ ಭುರಣ್ಯಥೋ ಯದ್ವಾ ದೇವ ಭಿಷಜ್ಯಥಃ ।
ಅಯಂ ವಾಂ ವತ್ಸೋ ಮತಿಭಿರ್ನ ವಿಂಧತೇ ಹವಿಷ್ಮಂತಂ ಹಿ
ಗಚ್ಛಥಃ ॥ ೬ ॥

। ಪದಪಾಠ ।

ಯತ್ । ನಾಸತ್ಯಾ । ಭುರಣ್ಯಥಃ । ಯತ್ । ವಾ । ದೇವಾ । ಭಿಷಜ್ಯಥಃ ।
ಅಯಂ । ವಾಂ । ವತ್ಸಃ । ಮತಿಽಭಿಃ । ನ । ವಿಂಧತೇ । ಹವಿಷ್ಮಂತಂ । ಹಿ । ಗಚ್ಛಥಃ ॥೬॥

। ಸಾಯಣಭಾಷ್ಯಂ ।

ಹೇ ನಾಸತ್ಯಾ ಸತ್ಯಸ್ವಭಾವಾವಶ್ವಿನೌ ಯದ್ವಾ ಯುವಾಂ ಭುರಣ್ಯಥಃ ಸರ್ವಂ ಜಗತ್ಪೋಷಯಥಃ ॥ ಭುರಣ್ ಧಾರಣಪೋಷಣಯೋಃ । ಕಂಡ್ವಾದಿಃ ॥ ಹೇ ದೇವಾ ದಾನಾದಿಗುಣಯುಕ್ತಾವಶ್ವಿನಾ ॥ ಛಾಂದಸಃ ಸಾಂಹಿತಿಕೋ ಹ್ರಸ್ವಃ ॥ ಯದ್ವಾ । ಯೌ ಚ ಯುವಾಂ ಭಿಷಜ್ಯಥಃ ಸರ್ವಸ್ಯ ಪ್ರಾಣಿಜಾತಸ್ಯ

ಭೈಷಜ್ಯಂ ರೋಗೋಪಶಮನಂ ಕುರುಥಃ ॥ ಭಿಷಜ್ ಚಿಕಿತ್ಸಾಯಾಂ। ಅಯಮಪಿ ಕಂಡ್ವಾದಿಃ॥ ತೌ ವಾಂ ಯುವಾಮಯಂ ವತ್ಸಃ ಸ್ತೋತಾ ಮತಿಭಿರ್ಮನನೀಯೈಃ ಕೇವಲೈಃ ಸ್ತೋತ್ರೈರ್ನ ವಿಂಧತೇ । ನ ವಿಂದತೇ । ನ ಲಭತೇ ॥ ವರ್ಣವಿಕಾರಶ್ಛಾಂದಸಃ ॥ ಕುತ ಇತಿ ಚೇತ್ ಉಚ್ಯತೇ । ಹವಿಷ್ಮಂತಂ ಹವಿರ್ಭಿರ್ಯುಕ್ತಂ ಸ್ತೋತಾರಂ ಹಿ ಯುವಾಂ ಗಚ್ಛಥಃ । ತಸ್ಮಾದ್ಯುವಾಂ ಹವಿರ್ಭಿರ್ಯುಕ್ತೈಃ ಸ್ತೋತ್ರೈಃ ಪ್ರಸೀದಥ ಇತಿ ಭಾವಃ ॥

। ಪ್ರತಿಪದಾರ್ಥ ।

ದೇವಾ—ದಾನಾದಿಗುಣಯುಕ್ತರಾದ । ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । ಯತ್—ಯಾವ ನೀವು । ಭುರಣ್ಯಥಃ—ಸಕಲ ಜಗತ್ತನ್ನೂ ಪೋಷಿಸುವಿರೋ । ಯದ್ವಾ—ಅಥವಾ । ಭಿಷಜ್ಯಥಃ—ಜಗತ್ತಿನ ರೋಗವನ್ನೆಲ್ಲಾ ಔಷಧಿಗಳಿಂದ ಗುಣವಾಡುವಿರೋ । (ತೌ) ವಾಂ—ಅಂತಹ ನಿಮ್ಮನ್ನು । ಅಯಂ ವತ್ಸಃ—ವತ್ಸಸಂಜ್ಞಕನಾದ ಈ ಸ್ತುತಿಕರ್ತನು । ಮತಿಭಿಃ—ಕೇವಲ ಸ್ತುತಿಗಳಿಂದಲೇ । ನ ವಿಂಧತೇ—ಪಡೆಯಲಾರನು । ಹವಿಷ್ಮಂತಂ ಹಿ—ಹವಿಸ್ಸನ್ನು ಹೊಂದಿರುವ ಯಜಮಾನನನ್ನೇ । ಗಚ್ಛಥಃ—ನೀವು ಸಮೀಪಿಸುತ್ತೀರಿ.

॥ ಭಾವಾರ್ಥ ॥

ದಾನಾದಿಗುಣಯುಕ್ತರಾದ ಎಲೈ ಅಶ್ವಿನೀದೇವತೆಗಳೇ, ಯಾವ ನೀವು ಸಕಲಜಗತ್ತನ್ನೂ ಪೋಷಿಸುವಿರೋ, ಅಥವಾ ಜಗತ್ತಿನ ರೋಗವನ್ನೆಲ್ಲಾ ಔಷಧಿಗಳಿಂದ ಗುಣಮಾಡುವಿರೋ ಅಂತಹ ನಿಮ್ಮನ್ನು ವತ್ಸಸಂಜ್ಞಕನಾದ ಈ ಸ್ತುತಿಕರ್ತನು ಕೇವಲ ಸ್ತುತಿಗಳಿಂದಲೇ ಪಡೆಯಲಾರನು. ನೀವು ಹವಿಸ್ಸನ್ನು ಹೊಂದಿರುವ ಯಜಮಾನನನ್ನು ಮಾತ್ರ ಸಮೀಪಿಸುತ್ತೀರಿ.

## Engalish Translation

Although, Nasatyas, you cherish (all beings), although, divinities, you heal (all disease), yet this your adorer does not obtain you by praises (only), you repair to him who offers you oblations.

। ಸಂಹಿತಾಪಾಠಃ ।

ಆ ನೂನಮಶ್ವಿನೋರೃಷಿಃ ಸ್ತೋಮಂ ಚಿಕೇತ ವಾಮಯಾ ।
ಆ ಸೋಮಂ ಮಧುಮತ್ತಮಂ ಘರ್ಮಂ ಸಿಂಚಾದಥರ್ವಣಿ ॥೭॥

। ಪದಪಾಠಃ ॥

ಆ । ನೂನಂ । ಅಶ್ವಿನೋಃ । ಋಷಿಃ । ಸ್ತೋಮಂ । ಚಿಕೇತ । ವಾಮಯಾ ।
ಆ । ಸೋಮಂ । ಮಧುಮತ್ಽತಮಂ । ಘರ್ಮಂ । ಸಿಂಚಾತ್ । ಅಥರ್ವಣಿ ॥ ೭ ॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯೇ ಮಹಾವೀರೇ ಗೋಪಯಸ್ಯಾಸಿಚ್ಯಮಾನ ಆ ನೂನಮಿತ್ಯೇಷಾನುವಕ್ತವ್ಯಾ । ಸೂತ್ರಿತಂ ಹಿ । ಆ ನೂನಮಶ್ವಿನೋರ್ಋಷಿರಿತಿ ಗವ್ಯ ಆ ಸುತೇ ಸಿಂಚತ ಶ್ರಿಯಮಿತ್ಯಾಜೇ । ಆ ೪-೭ । ಇತಿ ॥

ಹೇ ಅಶ್ವಿನೌ ಯದಾ ಯುವಾಮಾಗಚ್ಛೇಯಾಥಾಂ ತದಾನೀಂ ಯುವಯೋರಶ್ವಿನೋಃ ಸ್ತೋಮಂ ಸ್ತೋತ್ರಮೃಷಿರ್ಮಂತ್ರದ್ರಷ್ಟಾ ವಾಮಯಾ ವನನೀಯಯೋತ್ಕೃಷ್ಟಯಾ ಬುದ್ಧ್ಯಾ ನೂನಮವಶ್ಯಮಾ ಚಿಕೇತ । ಅಭಿಜಾನೀಯಾತ್ ॥ ಕಿತ ಜ್ಞಾನೇ । ಛಾಂದಸೋ ಲಿಟ್ ॥ ತಥಾ ಮಧುಮತ್ತಮಮತಿಶಯೇನ ಮಧುರಂ ಸೋಮಂ ಘರ್ಮಂ ಪ್ರವರ್ಗ್ಯಸಂಬಂಧಿ ಘರ್ಮಾಖ್ಯಂ ಹವಿಶ್ಚಾಥರ್ವಣ್ಯಹಿಂಸಕೇಽಗ್ನೌ । ಯದ್ವಾ । ಅಥರ್ವಾ ಋಷಿಃ । ತೇನ ನಿರ್ಮಥಿತೋಽಗ್ನಿರುಪಚಾರಾದಥರ್ವೇತ್ಯುಚ್ಯತೇ । ಅಥರ್ವಣಾ ನಿರ್ಮಥನಂ ಚ ತ್ವಾಮಗ್ನೇ ಪುಷ್ಕರಾದಧಿ । ಋ. ೬-೧೬-೧೩ । ಇತ್ಯಾದಿನಿಗಮಾಂತರೇಽವಗಮ್ಯತೇ । ತಸ್ಮಿನ್ನಗ್ನಾವಾ ಸಿಂಚಾತ್ । ಆಸಿಂಚೇತ್ । ಪ್ರಕ್ಷಿಪೇತ್ । ಅತಃ ಶೀಘ್ರಮಾಗಚ್ಛತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ ನೀವು ಯಜಮಾನನಲ್ಲಿಗೆ ಬಂದೊಡನೆಯೇ) **ಅಶ್ವಿನೋಃ**—ಅಶ್ವಿನೀದೇವತೆಗಳಾದ ನಿಮ್ಮನ್ನು ಪ್ರಶಂಸಿಸುವ । **ಸ್ತೋಮಂ**—ಸ್ತೋತ್ರವನ್ನು । **ಋಷಿಃ**—ಋಷಿಯು । **ವಾಮಯಾ**—ಅತ್ಯುತ್ಕೃಷ್ಟವಾದ ಬುದ್ಧಿಯಿಂದ । **ನೂನಂ**—ಅವಶ್ಯವಾಗಿ । **ಆ ಚಿಕೇತ**—ಅರಿಯುತ್ತಾನೆ (ಹಾಗೆಯೇ) । **ಮಧುಮತ್ತಮಂ**—ಅತ್ಯಂತ ಮಾಧುರ್ಯದಿಂದ ಕೂಡಿದ । **ಸೋಮಂ**—ಸೋಮರಸವನ್ನೂ । **ಘರ್ಮಂ**—ಪ್ರವರ್ಗ್ಯಸಂಬಂಧಿಯಾದ ಹವಿಸ್ಸನ್ನೂ । **ಅಥರ್ವಣಿ**—ಅಥರ್ವಾಗ್ನಿಯಲ್ಲಿ । **ಆ ಸಿಂಚಾತ್**—ಅರ್ಪಿಸುತ್ತಾನೆ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಯಜಮಾನನಲ್ಲಿಗೆ ಬಂದೊಡನೆಯೇ, ಋಷಿಯು ನಿಮ್ಮನ್ನು ಪ್ರಶಂಸಿಸುವ ಸ್ತೋತ್ರವನ್ನು ತನ್ನ ಅತ್ಯುತ್ಕೃಷ್ಟವಾದ ಬುದ್ಧಿಯಿಂದ ಅರಿಯುತ್ತಾನೆ. ಹಾಗೆಯೇ ಅತ್ಯಂತಮಾಧುರ್ಯದಿಂದ ಕೂಡಿದ ಸೋಮರಸವನ್ನೂ, ಪ್ರವರ್ಗ್ಯಸಂಬಂಧಿಯಾದ ಹವಿಸ್ಸನ್ನೂ ಅಥರ್ವಾಗ್ನಿಯಲ್ಲಿ ನಿಮ್ಮನ್ನುದ್ದೇಶಿಸಿ ಅರ್ಪಿಸುತ್ತಾನೆ.

## English Translation

When verily you arrive, Aswins, the Rishi understands with excellent (comprehension) the praise (to be addressed to you); he will sprinkle the sweet-flavoured Soma and the gharma (oblation) on the Atharvan fire.

॥ ವಿಶೇಷವಿಷಯಗಳು ॥

ಪ್ರವರ್ಗ್ಯೇಷ್ಟಿಯಲ್ಲಿ ಗೋವಿನ ಹಾಲನ್ನು ಪಾತ್ರೆಯಲ್ಲಿ ಸುರಿಯುವಾಗ ಆ ನೂನಂ ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಆ ನೂನಮಶ್ವಿನೋರ್ಋಷಿರಿತಿ ಗವ್ಯ ಆ ಸುತೇ ಸಿಂಚತ ಶ್ರಿಯಮಿತ್ಯಾಜ್ಯೇ ಎಂಬ ಸೂತ್ರದಿಂದ (ಆ ೪-೭) ವಿವೃತವಾಗಿರುವುದು

॥ ಸಂಹಿತಾಪಾಠಃ ॥

ಆ ನೂನಂ ರಘುವರ್ತನಿಂ ರಥಂ ತಿಷ್ಠಾಥೋ ಅಶ್ವಿನಾ ।
ಆ ವಾಂ ಸ್ತೋಮಾ ಇಮೇ ಮಮ ನಭೋ ನ ಚುಚ್ಯವೀರತ ॥೮॥

॥ ಪದಪಾಠಃ ॥

ಆ । ನೂನಂ । ರಘುऽವರ್ತನಿಂ । ರಥಂ । ತಿಷ್ಠಾಥಃ । ಅಶ್ವಿನಾ ।
ಆ । ವಾಂ । ಸ್ತೋಮಾಃ । ಇಮೇ । ಮಮ । ನಭಃ । ನ । ಚುಚ್ಯವೀರತ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ರಘುವರ್ತನಿಂ ಲಘುವರ್ತನಂ ಶೀಘ್ರಗಮನಂ ರಥಂ ನೂನಮವಶ್ಯಮಿದಾನೀಮೇವಾ ತಿಷ್ಠಾಥಃ । ಆತಿಷ್ಠತಂ । ಅಧಿರೋಹತಂ ॥ ವಾಲಮೂಲಲಘ್ವಲಮಿತಿ ಲಘೋರ್ಲಕಾರಸ್ಯ ರೇಫಃ ॥ ಮಮ ಮದೀಯಾ ಇಮೇ ಸ್ತೋಮಾಃ ಸ್ತೋತ್ರಾಣಿ ನಭೋ ನ ಸೂರ್ಯಮಿವ ತೇಜಸ್ವಿನೌ ವಾಂ ಯುವಾಮಾ ಚುಚ್ಯವೀರತ । ಆಚ್ಯವಂತೇ । ಅಭಿಗಚ್ಛಂತಿ । ಯದ್ವಾ । ಚ್ಯವತಿರತ್ರಾಂತರ್ಭಾವಿತಣ್ಯರ್ಥಃ । ಆಚ್ಯಾವಯಂತಿ । ಯುವಾಮಭಿಪ್ರಾಪಯಂತಿ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ರಘುವರ್ತನಿಂ—ವೇಗಗಾಮಿಯಾದ । ರಥಂ—ನಿಮ್ಮ ರಥವನ್ನು। ನೂನಂ—ಈಗಲೇ । ಆ ತಿಷ್ಠಾಥಃ—ಹತ್ತಿ ಕುಳಿತುಕೊಳ್ಳಿರಿ । ಮಮ—ನನ್ನ। ಇಮೇ ಸ್ತೋಮಾಃ—ಈ ಸ್ತೋತ್ರಗಳು । ನಭೋ ನ—ಸೂರ್ಯನಂತೆ ತೇಜಸ್ವಿಗಳಾದ । ವಾಂ—ನಿಮ್ಮನ್ನು । ಆ ಚುಚ್ಯವೀರತ—ನಮ್ಮಲ್ಲಿಗೆ ಕರೆದುಕೊಂಡು ಬರಲಿ

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ವೇಗಗಾಮಿಯಾದ ನಿಮ್ಮ ರಥವನ್ನು ಈಗಲೇ ಹತ್ತಿ ಕುಳಿತುಕೊಳ್ಳಿರಿ. ನನ್ನ ಈ ಸ್ತೋತ್ರಗಳು ಸೂರ್ಯನಂತೆ ತೇಜಸ್ವಿಗಳಾದ ನಿಮ್ಮನ್ನು ನಮ್ಮಲ್ಲಿಗೆ ಕರೆದುಕೊಂಡು ಬರಲಿ.

## English Translation

Ascend at once, Aswins, your light-moving chariot; may these my praises bring you down radiant as the sun.

। ಸಂಹಿತಾಪಾಠಃ ।

ಯದದ್ಯ ವಾಂ ನಾಸತ್ಯೋಕ್ಥೈರಾಚುಚ್ಯುವೀಮಹಿ ।
ಯದ್ವಾ ವಾಣೀಭಿರಶ್ವಿನೇವೇತ್ಕಾಣ್ವಸ್ಯ ಬೋಧತಂ ॥ ೯ ॥

॥ ಪದಪಾಠಃ ॥

ಯತ್ । ಅದ್ಯ । ವಾಂ । ನಾಸತ್ಯಾ । ಉಕ್ಥೈಃ । ಆಽಚುಚ್ಯುವೀಮಹಿ ।
ಯತ್ । ವಾ । ವಾಣೀಭಿಃ । ಅಶ್ವಿನಾ । ಏವ । ಇತ್ । ಕಾಣ್ವಸ್ಯ । ಬೋಧತಂ ॥ ೯ ॥

। ಸಾಯಣಭಾಷ್ಯಂ ।

ಹೇ ನಾಸತ್ಯಾ ಅದ್ಯೇದಾನೀಮುಕ್ಥೈಃ ಶಸ್ತ್ರೈರ್ಯದ್ಯಥಾ ಯೇನ ಪ್ರಕಾರೇಣ ವಾಂ ಯುವಾಮಾಚುಚ್ಯುವೀಮಹಿ ಆಗಮಯೇಮ ಹೇ ಅಶ್ವಿನೌ ಯದ್ವಾ ಯಥಾ ವಾಣೀಭಿರುಕ್ಥವ್ಯತಿರಿಕ್ತಾಭಿರಪಿ ವಾಗ್ಭಿಃ ಸ್ತುತಿಭಿರ್ಯುವಾಮಾಗಮಯೇಮ ಏವೇದೇವಮೇವ ತಥೈವ ಕಾಣ್ವಸ್ಯ ಮಮ ತದುಕ್ಥಾದಿಕಂ ಬೋಧತಂ । ಅವಗಚ್ಛತಂ ॥

। ಪ್ರತಿಪದಾರ್ಥ ।

ನಾಸತ್ಯಾ—ಸತ್ಯಸ್ವರೂಪವಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಅದ್ಯ—ಈಗ । ಉಕ್ಥೈಃ—ಶಸ್ತ್ರಮಂತ್ರಗಳಿಂದ । ಯತ್—ಯಾವ ಪ್ರಕಾರವಾಗಿ । ವಾಂ—ನಿಮ್ಮನ್ನು । ಆಚುಚ್ಯುವೀಮಹಿ—ನಮ್ಮಲ್ಲಿಗೆ ಬರಮಾಡಿಕೊಳ್ಳುವೆವೋ । ಯದ್ವಾ—ಯಾವ ರೀತಿಯಲ್ಲಿ । ವಾಣೀಭಿಃ—ನಮ್ಮ ಇತರ ಸ್ತುತಿಗಳಿಂದ ನಿಮ್ಮನ್ನು ಬರಮಾಡಿಕೊಳ್ಳುವೆವೋ । ಏವೇತ್—ಆ ರೀತಿ ನೆರವೇರಲು । ಕಾಣ್ವಸ್ಯ-ಕಣ್ವಪುತ್ರನಾದ ನನ್ನ ಸ್ತುತ್ಯಾದಿಗಳನ್ನು । ಭೋಧತಂ—ಅರಿಯಿರಿ.

। ಭಾವಾರ್ಥ ।

ಸತ್ಯಸ್ವರೂಪರಾದ ಎಲೈ ಅಶ್ವಿನೀದೇವತೆಗಳೇ, ಶಸ್ತ್ರಮಂತ್ರಗಳಿಂದ ಈಗ ನಿಮ್ಮನ್ನು ಯಾವ ಪ್ರಕಾರವಾಗಿ ನಮ್ಮಲ್ಲಿಗೆ ಬರಮಾಡಿಕೊಳ್ಳುವೆವೋ, ಯಾವರೀತಿಯಲ್ಲಿ ನಮ್ಮ ಇತರ ಸ್ತುತಿಗಳಿಂದಲೂ ನಿಮ್ಮನ್ನು ಬರಮಾಡಿಕೊಳ್ಳುವೆವೋ ಆರೀತಿ ನೆರವೇರಲು ಕಣ್ವಪುತ್ರನಾದ ನನ್ನ ಈ ಸ್ತುತ್ಯಾದಿಗಳನ್ನು ಅರಿಯಿರಿ.

## English Translation

Acknowledge, Nasatyas, that we may bring you down to-day by the prayers and the praises of the son of Kanwa.

॥ ಸಂಹಿತಾಪಾಠಃ ॥

ಯದ್ವಾಂ ಕಕ್ಷೀವಾ ಉತ ಯದ್ವ್ಯಶ್ವ ಋಷಿರ್ಯದ್ವಾಂ ದೀರ್ಘ-
ತಮಾ ಜುಹಾವ ।
ಪೃಥೀ ಯದ್ವಾಂ ವೈನ್ಯಃ ಸಾದನೇಷ್ವೇವೇದತೋ ಅಶ್ವಿನಾ
ಚೇತಯೇಥಾಂ ॥ ೧೦ ॥

॥ ಪದಪಾಠಃ ॥

ಯತ್ । ವಾಂ । ಕಕ್ಷೀವಾನ್ । ಉತ । ಯತ್ । ವಿऽಅಶ್ವಃ । ಋಷಿಃ । ಯತ್ । ವಾಂ ।
ದೀರ್ಘऽತಮಾಃ । ಜುಹಾವ ।
ಪೃಥೀ । ಯತ್ । ವಾಂ । ವೈನ್ಯಃ । ಸದನೇಷು । ಏವ । ಇತ್ । ಅತಃ । ಅಶ್ವಿನಾ ।
ಚೇತಯೇಥಾಂ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಾಂ ಯುವಾಂ ಕಕ್ಷೀವಾನೃಷಿರ್ಯದ್ಯಥಾ ಜುಹಾವ ತುಷ್ಟಾವ । ಉತಾಪಿ ಚ ವ್ಯಶ್ವ ಏತತ್ಸಂಜ್ಞ ಋಷಿಶ್ಚ ಯದ್ಯಥಾ ಜುಹಾವ । ಯದ್ಯಥಾ ಚ ವಾಂ ಯುವಾಂ ದೀರ್ಘತಮಾ ಋಷಿರ್ಜುಹಾವ । ಸದನೇಷು ಯಜ್ಞಗೃಹೇ ವೈನ್ಯೋ ವೇನಸ್ಯ ಪುತ್ರಃ ಪೃಥ್ಯೇತತ್ಸಂಜ್ಞೋ ರಾಜರ್ಷಿ-ರ್ವಾಂ ಯುವಾಂ ಯದ್ಯಥಾ ಜುಹಾವ ತುಷ್ಟಾವ । ಏವೇದೇವಮೇವ ಸ್ತುವತೋ ಮಮಾತ ಇದಂ ಸ್ತೋತ್ರಂ ॥ ಇದಂಶಬ್ದಾದ್ವಿತೀಯಾರ್ಥೇ ತಸಿಃ ॥ ಹೇ ಅಶ್ವಿನೌ ಚೇತಯೇಥಾಂ । ಜಾನೀತಂ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ವಾಂ—ನಿಮ್ಮನ್ನು । ಕಕ್ಷೀವಾನ್—ಕಕ್ಷೀವಂತನೆಂಬ । ಋಷಿಃ—ಋಷಿಯು । ಯತ್—ಯಾವ ಪ್ರಕಾರವಾಗಿ । ಜುಹಾವ—ಸ್ತುತಿಸಿದನೋ । ಉತ—ಮತ್ತು । ವ್ಯಶ್ವಃ—ವ್ಯಶ್ವನೆಂಬ ಋಷಿಯು । ಯತ್—ಯಾವ ರೀತಿ ಸ್ತುತಿಸಿದನೋ । ಯತ್—ಯಾವ ರೀತಿಯಲ್ಲಿ ।

ವಾಂ—ನಿಮ್ಮನ್ನು । ದೀರ್ಘತಮಾಃ—ದೀರ್ಘತಮಸ್ಸೆಂಬ ಋಷಿಯು ಸ್ತುತಿಸಿದನೋ । ಸದನೇಷು—ಯಜ್ಞ ಗೃಹಗಳಲ್ಲಿ । ವೈನ್ಯಃ—ವೇನಪುತ್ರನಾದ । ಪೃಥೀ—ಪೃಥಿಯೆಂಬ ರಾಜರ್ಷಿಯು । ವಾಂ—ನಿಮ್ಮನ್ನು । ಯತ್—ಯಾವ ರೀತಿ ಸ್ತುತಿಸಿದನೋ । ಏವೇತ್—ಅದೇ ರೀತಿಯಲ್ಲಿ ಸ್ತುತಿಸತಕ್ಕ ನನ್ನ । ಅತಃ—ಈ ಸ್ತೋತ್ರವನ್ನು । ಚೇತಯೇಥಾಂ—ಅರಿಯಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಕಕ್ಷೀವಂತನೆಂಬ ಋಷಿಯು ಯಾವ ಪ್ರಕಾರವಾಗಿ ಸ್ತುತಿಸಿದನೋ, ಮತ್ತು ವ್ಯಶ್ವನೆಂಬ ಋಷಿಯು ಯಾವ ರೀತಿ ನಿಮ್ಮನ್ನು ಸ್ತುತಿಸಿದನೋ, ದೀರ್ಘತಮಸ್ಸೆಂಬ ಋಷಿಯು ಯಾವ ರೀತಿ ಸ್ತುತಿಸಿದನೋ, ಅಲ್ಲದೇ, ಯಜ್ಞಗೃಹಗಳಲ್ಲಿ ವೇನಪುತ್ರನಾದ ಪೃಥಿಯೆಂಬ ರಾಜರ್ಷಿಯು ನಿಮ್ಮನ್ನು ಯಾವ ರೀತಿ ಸ್ತುತಿಸಿದನೋ, ಅದೇ ರೀತಿಯಲ್ಲಿ ಸ್ತುತಿಸತಕ್ಕ ನನ್ನ ಈ ಸ್ತೋತ್ರವನ್ನು ಅರಿಯಿರಿ.

## English Translation

Consider (my praises) in the same manner as (you have considered) when Kaksivat praised you, when the Rishi Vyaswa, when Dirghatamas or Prithin, the son of Vena, glorified you in the chambers of sacrifice.

॥ ಸಂಹಿತಾಪಾಠಃ ॥

ಯಾತಂ ಛರ್ದಿಷ್ಪಾ ಉತ ನಃ ಪರಸ್ಪಾ ಭೂತಂ ಜಗತ್ಪಾ ಉತ ನಸ್ತನೂಪಾ ।

ವರ್ತಿಸ್ತೋಕಾಯ ತನಯಾಯ ಯಾತಂ ॥ ೧೧ ॥

॥ ಪದಪಾಠಃ ॥

ಯಾತಂ । ಛರ್ದಿಃऽಪಾ । ಉತ । ನಃ । ಪರಃऽಪಾ । ಭೂತಂ । ಜಗತ್ऽಪಾ । ಉತ । ನಃ । ತನೂऽಪಾ ।

ವರ್ತಿಃ । ತೋಕಾಯ । ತನಯಾಯ । ಯಾತಂ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ಛರ್ದಿಷ್ಪಾ । ಛರ್ದಿರಿತಿ ಗೃಹನಾಮ । ತಸ್ಯಾಸ್ಮದೀಯಸ್ಯ ಪಾಲಕೌ ಸಂತೌ ಯುವಾಂ ಯಾತಂ । ಆಗಚ್ಛತಂ । ಉತಾಪಿ ಚ ನೋಽಸ್ಮಾಕಂ ಪರಸ್ಪಾ ಪರಮತಿಶಯೇನ ಪಾಲಕೌ ಭೂತಂ ।

ಭವತಂ ॥ ಪಾರಸ್ಕರಾದಿತ್ವಾತ್ಸುಟ್ ॥ ತಥಾ ಜಗತ್ಪಾ ಸರ್ವಸ್ಯ ಜಗತೋ ಜಂಗಮಸ್ಯ ಪ್ರಾಣಿಜಾತಸ್ಯಾ-ಸ್ಮದೀಯಸ್ಯ ಪಾಲಕೌ ಭವತಂ । ಉತಾಪಿ ಚ ನೋಽಸ್ಮಾಕಂ ತನೂಪಾ ತನೂನಾಂ ಶರೀರಾಣಾಂ ತನಯಾನಾಂ ವಾ ಪಾಲಕೌ ಭವತಂ । ಏತತ್ಸರ್ವಾರ್ಥಂ ತೋಕಾಯ ತೋಕಸ್ಯ ಪುತ್ರಸ್ಯ ತನಯಾಯ ತನಯಸ್ಯ ಪೌತ್ರಸ್ಯ ಚಾಸ್ಮದೀಯಸ್ಯ ವರ್ತಿರ್ಗೃಹಂ ಯಾತಂ । ಗಚ್ಛತಂ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಛರ್ದಿಷ್ಪಾ**—ನಮ್ಮ ಗೃಹಪಾಲಕರಾಗಿರಲು । **ಯಾತಂ**—ಬನ್ನಿರಿ । **ಉತ**—ಮತ್ತು । **ನಃ**—ನಮಗೆ । **ಪರಸ್ಪಾ ಭೂತಂ**—ಉತ್ತಮವಾದ ಪಾಲಕರಾಗಿರಿ । **ಜಗತ್ಪಾ**—ಸಕಲ ಜಗತ್ತಿಗೂ ಪಾಲಕರಾಗಿರಿ । **ಉತ**—ಮತ್ತು । **ನಃ**—ನಮ್ಮ । **ತನೂಪಾ**—ಶರೀರಗಳಿಗೆ ರಕ್ಷಕರಾಗಿರಿ । **ತೋಕಾಯ**—ನಮ್ಮ ಪುತ್ರನ ಏಳಿಗೆಗಾಗಿಯೂ । **ತನಯಾಯ**—ಪೌತ್ರನ ಏಳಿಗೆಗಾಗಿಯೂ । **ಛರ್ದಿಃ**—ನಮ್ಮ ಗೃಹಕ್ಕೆ । **ಯಾತಂ**—ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಮ್ಮ ಗೃಹಪಾಲಕರಾಗಲು ಬನ್ನಿರಿ. ನಮಗೆ ಉತ್ತಮವಾದ ಪಾಲಕರಾಗಿರಿ. ಸಕಲ ಜಗತ್ತಿಗೂ ಪಾಲಕರಾಗಿರಿ. ನಮ್ಮ ಶರೀರಗಳಿಗೆ ರಕ್ಷಕರಾಗಿರಿ. ನಮ್ಮ ಪುತ್ರನ ಏಳಿಗೆಗಾಗಿಯೂ, ಪೌತ್ರನ ಏಳಿಗೆಗಾಗಿಯೂ ನಮ್ಮ ಗೃಹಕ್ಕೆ ಬನ್ನಿರಿ.

## English Translation

Come (to us as) guardians of our dwelling, become our defenders, qe protectors of our dependants, cherishers of our persons: come to the dwelling for (the good of) our sons and grandsons,

॥ ಸಂಹಿತಾಪಾಠಃ ॥

ಯದಿಂದ್ರೇಣ ಸರಥಂ ಯಾಥೋ ಅಶ್ವಿನಾ ಯದ್ವಾ ವಾಯುನಾ

ಭವಥಃ ಸನೋಕಸಾ ।

ಯದಾದಿತ್ಯೇಭಿರೃಭುಭಿಃ ಸಜೋಷಸಾ ಯದ್ವಾ ವಿಷ್ಣೋ-

ರ್ವಿಕ್ರಮಣೇಷು ತಿಷ್ಠಥಃ ॥ ೮೨ ॥

॥ ಪದಪಾಠಃ ॥

ಯತ್ । ಇಂದ್ರೇಣ । ಸ್ಸರಥಂ । ಯಾಥಃ । ಅಶ್ವಿನಾ । ಯತ್ । ವಾ । ವಾಯುನಾ ।

ಭವಥಃ । ಸಂಽಓಕಸಾ ।

ಯತ್ । ಆದಿತ್ಯೇಭಿಃ । ಋಭುಽಭಿಃ । ಸಽಜೋಷಸಾ । ಯತ್ । ವಾ । ವಿಷ್ಣೋಃ ।

ವಿಽಕ್ರಮಣೇಷು । ತಿಷ್ಠಥಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಇಂದ್ರೇಣ ಸಹ ಸರಥಂ ಸಮಾನಮೇಕಂ ರಥಮಾಸ್ಥಾಯ ಯದ್ಯದಿ ಯಾಥಃ ಗಚ್ಛಥಃ । ಯದ್ವಾ ಯದಿ ವಾ ವಾಯುನಾ ಸಹ ಸಮೋಕಸಾ ಸಮಾನನಿವಾಸೌ ಭವಥಃ । ಯದ್ಯದಿ ವಾದಿತ್ಯೇಭಿರದಿತಿಪುತ್ರೈರ್ಮಿತ್ರಾದಿಭಿರ್ಋಭುಭಿಶ್ಚ ಸಜೋಷಸಾ ಸಹ ಪ್ರೀಯಮಾಣೌ ವರ್ತೇಥೇ । ಯದ್ವಾ ಯದಿ ವಾ ವಿಷ್ಣೋರ್ವಿಕ್ರಮಣೇ ವಿಷ್ಣುನಾ ದೇವೇನ ವಿಕ್ರಾಂತೇಷು ತ್ರಿಷು ಲೋಕೇಷು ತಿಷ್ಠಥಃ । ಅತಃ ಸರ್ವಸ್ಮಾದಪಿ ಸ್ಥಾನಾದಾಗಚ್ಛತಮಿತಿ ಶೇಷಃ ॥

। ಪ್ರತಿಪದಾರ್ಥ ।

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಇಂದ್ರೇಣ—ಇಂದ್ರನೊಂದಿಗೆ । ಯತ್—ಒಂದು ವೇಳೆ । ಸರಥಂ—ಒಂದೇ ರಥದಲ್ಲಿ ಕುಳಿತು । ಯಾಥಃ—ಹೋಗುತ್ತಿದ್ದರೂ । ಯದ್ವಾ—ಅಥವಾ । ವಾಯುನಾ—ವಾಯುವಿನೊಂದಿಗೆ । ಸಮೋಕಸಾ—ಒಂದೇ ನಿವಾಸಸ್ಥಾನದಲ್ಲಿ । ಭವಥಃ—ಇದ್ದರೂ । ಯತ್—ಅಥವಾ । ಆದಿತ್ಯೇಭಿಃ-ಆದಿತ್ಯರೊಡನೆಯೂ । ಋಭುಭಿಃ—ಋಭುಗಳೊಡನೆಯೂ । ಸಜೋಷಸಾ—ಸಮಾನವಾದ ಪ್ರೀತಿಯುಳ್ಳವರಾಗಿ ಇದ್ದರೂ । ಯದ್ವಾ—ಅಥವಾ ಒಂದು ವೇಳೆ । ವಿಷ್ಣೋಃ—ವಿಷ್ಣುವಿನ । ವಿಕ್ರಮಣೇಷು ತಿಷ್ಠಥಃ—ಪಾದಾಕ್ರಮಣವುಳ್ಳ ಮೂರು ಲೋಕಗಳಲ್ಲೂ ಇದ್ದರೂ ಸಹ (ಅಲ್ಲಿಂದೆಲ್ಲಾ ನಮ್ಮಲ್ಲಿಗೆ ಬನ್ನಿರಿ).

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಇಂದ್ರನೊಂದಿಗೆ ಒಂದು ವೇಳೆ ಒಂದೇ ರಥದಲ್ಲಿ ಕುಳಿತು ಹೋಗುತ್ತಿದ್ದರೂ, ಅಥವಾ ವಾಯುವಿನೊಂದಿಗೆ ಒಂದೇ ನಿವಾಸಸ್ಥಾನದಲ್ಲಿದ್ದರೂ ಅಥವಾ ಆದಿತ್ಯರೊಡನೆಯೂ ಋಭುಗಳೊಡನೆಯೂ ಸಮಾನವಾದ ಪ್ರೀತಿಯುಳ್ಳವರಾಗಿದ್ದರೂ, ಅಥವಾ ಒಂದು ವೇಳೆ ವಿಷ್ಣುವಿನ ಪಾದಾಕ್ರಮಣವುಳ್ಳ ಮೂರು ಲೋಕಗಳಲ್ಲೂ ಇದ್ದರೂ ಸಹ ಅಲ್ಲಿಂದೆಲ್ಲಾ ನಮ್ಮಲ್ಲಿಗೆ ಬನ್ನಿರಿ.

## English Translation

Although, Aswins, you should be riding in the same chariot with Indra, although you should be domiciled with Vayu, although you should be enjoying gratification along with the Adityas and Ribhus, although you be proceeding on the tracks of Vishnu, (nevertheless come hither).

। ಸಂಹಿತಾಪಾಠಃ ।

ಯದದ್ಯಾಶ್ವಿನಾವಹಂ ಹುವೇಯ ವಾಜಸಾತಯೇ ।
ಯತ್ಪೃತ್ಸು ತುರ್ವಣೇ ಸಹಸ್ತಚ್ಛ್ರೇಷ್ಠಮಶ್ವಿನೋರವಃ ॥ ೧೩ ॥

। ಪದಪಾಠಃ ।

ಯತ್ । ಅದ್ಯ । ಅಶ್ವಿನೌ । ಅಹಂ । ಹುವೇಯ । ವಾಜsಸಾತಯೇ ।
ಯತ್ । ಪೃತ್sಸು । ತುರ್ವಣೇ । ಸಹಃ । ತತ್ । ಶ್ರೇಷ್ಠಂ । ಅಶ್ವಿನೋಃ । ಅವಃ ॥ ೧೩ ॥

॥ ಸಾಯಣಭಾಷ್ಯಂ ॥

ಯದ್ಯದಾಹಮಶ್ವಿನೌ ವಾಜಸಾತಯೇ ಸಂಗ್ರಾಮಾರ್ಥಂ ಹುವೇಯ ಆಹ್ವಯೇಯ ಅದ್ಯೇದಾನೀಂ ತಾವಾಗಚ್ಛತಮಿತಿ ಶೇಷಃ। ಪೃತ್ಸು ಪೃತನಾಸು ಸಂಗ್ರಾಮೇಷು ತುರ್ವಣೇ ಶತ್ರೂಣಾಂ ಹಿಂಸನೇ ಯತ್ಸಹಃ ಶತ್ರೂಣಾಮಭಿಭವಿತೃ ರಕ್ಷಣಮಶ್ವಿನೋಃ। ತದವೋ ರಕ್ಷಣಂ ಶ್ರೇಷ್ಠಂ ಪ್ರಶಸ್ಯತಮಂ। ಅತಸ್ತಾವಾಹ್ವಯಾಮೀತಿ ಭಾವಃ ॥

। ಪ್ರತಿಪದಾರ್ಥ ।

**ಅಶ್ವಿನೌ**—ಅಶ್ವಿನೀದೇವತೆಗಳನ್ನು । **ಯತ್**—ಯಾವಾಗ । **ಅಹಂ**—ನಾನು । **ವಾಜಸಾತಯೇ**—ಯುದ್ಧದಲ್ಲಿ ಜಯಾರ್ಥವಾಗಿ । **ಹುವೇಯ**—ಕರೆಯುವೆನೋ । **ಅದ್ಯ**—ಅಂತಹ ಈ ಕಾಲದಲ್ಲಿ (ಅವರು ಸಹಾಯಕ್ಕಾಗಿ ಬರಲಿ) । **ಪೃತ್ಸು**—ಯುದ್ಧಗಳಲ್ಲಿ । **ತುರ್ವಣೇ**—ಶತ್ರುನಾಶಕವಾದ ಕಾರ್ಯದಲ್ಲಿ । **ಅಶ್ವಿನೋಃ**—ಅಶ್ವಿನೀದೇವತೆಗಳ । **ಯತ್ ಸಹಃ**—ಯಾವ ಶಕ್ತಿರೂಪವಾದ ರಕ್ಷಣವು ಇರುವುದೋ । **ತತ್ ಅವಃ**—ಅದೇ ರಕ್ಷಣವು । **ಶ್ರೇಷ್ಠಂ**—ಅತ್ಯುತ್ತಮವಾಗಿದೆ.

। ಭಾವಾರ್ಥ ।

ಅಶ್ವಿನೀದೇವತೆಗಳನ್ನು ನಾನು ಯಾವಾಗ ಯುದ್ಧದಲ್ಲಿ ನನಗೆ ಸಹಾಯಮಾಡಲು ಕರೆಯುವೆನೋ ಅಂತಹ ಈ ಕಾಲದಲ್ಲಿ ಅವರು ನನ್ನ ಸಹಾಯಕ್ಕಾಗಿ ಬರಲಿ. ಯುದ್ಧಗಳಲ್ಲಿ ಶತ್ರುನಾಶಕವಾದ ಕಾರ್ಯಗಳಲ್ಲಿ ಅಶ್ವಿನೀದೇವತೆಗಳ ಯಾವ ಶಕ್ತಿರೂಪವಾದ ರಕ್ಷಣವು ಇರುವುದೋ ಅದೇ ರಕ್ಷಣವು ಅತ್ಯುತ್ತಮವಾಗಿದೆ.

## English Translation

Inasmuch as I invoke you, Aswins, to-day for success in war (therefore grant it), for the triumphant protection of the Aswins is most excellent for the destruction (of enemies) in battle.

॥ ಸಂಹಿತಾಪಾಠಃ ॥

ಆ ನೂನಂ ಯಾತಮಶ್ವಿನೇಮಾ ಹವ್ಯಾನಿ ವಾಂ ಹಿತಾ ।
ಇಮೇ ಸೋಮಾಸೋ ಅಧಿ ತುರ್ವಶೇ ಯದಾವಿಮೇ ಕಣ್ವೇಷು ವಾಮಥ ॥ ೧೪ ॥

॥ ಪದಪಾಠಃ ॥

ಆ । ನೂನಂ । ಯಾತಂ । ಅಶ್ವಿನಾ । ಇಮಾ । ಹವ್ಯಾನಿ । ವಾಂ । ಹಿತಾ ।
ಇಮೇ । ಸೋಮಾಸಃ । ಅಧಿ । ತುರ್ವಶೇ । ಯದೌ । ಇಮೇ । ಕಣ್ವೇಷು । ವಾಂ । ಅಥ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ನೂನಮವಶ್ಯಮಾ ಯಾತಂ । ಆಗಚ್ಛತಂ । ಇಮೇಮಾನಿ ಪುರೋವರ್ತೀನಿ ಹವ್ಯಾನಿ ಹವೀಂಷಿ ವಾಂ ಯುವಾಭ್ಯಾಂ ಹಿತಾ ಹಿತಾನಿ । ಯದ್ವಾ । ಯುವಯೋರರ್ಥಂ ವಿಹಿತಾನಿ ಕೃತಾನಿ । ಇಮೇ ಚ ಸೋಮಾಸಃ ಸೋಮಾಸ್ತುರ್ವಶೇ ಯದೌ ಚ ವರ್ತಮಾನಾಃ । ವಾಂ ಯುವಾಭ್ಯಾಂ ಯುವಯೋರರ್ಥೇ ಸಂಸ್ಕೃತಾ ವಾ ॥ ಅಧಿಃ ಸಪ್ತಮ್ಯರ್ಥಾನುವಾದಕಃ ॥ ಅಥಾಪಿ ಚ ಕಣ್ವೇಷು ಕಣ್ವಪುತ್ರೇಷ್ವಸ್ಮಾಸು ಚೇಮೇ ಸೋಮಾ ವಾಂ ಯುವಾಭ್ಯಾಂ ದತ್ತಾಃ । ಅತ ಆಯಾತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ನೂನಂ**—ಅವಶ್ಯವಾಗಿ । **ಆ ಯಾತಂ**—ದಯಮಾಡಿರಿ । **ಇಮಾ**—ಇಲ್ಲಿ ಸಿದ್ಧವಾಗಿರುವ । **ಹವ್ಯಾನಿ**—ಹವಿಸ್ಸುಗಳು । **ವಾಂ**—ನಿಮಗಾಗಿಯೇ । **ಹಿತಾ**—ಇಡಲ್ಪಟ್ಟಿವೆ । **ಇಮೇ ಸೋಮಾಸಃ**—ಇದೇ ಸೋಮರಸಗಳು । **ತುರ್ವಶೇ**—ತುರ್ವಶನಲ್ಲಿಯೂ । **ಯದೌ ಅಧಿ**—ಯದುವಿನಲ್ಲಿಯೂ (ಸಂಸ್ಕೃತ ವಾಗಿದ್ದವು) । **ಅಥ**—ಅಲ್ಲದೇ । **ಇಮೇ**—ಅದೇ ಈ ರಸಗಳು । **ಕಣ್ವೇಷು**—ಕಣ್ವಪುತ್ರರಾದ ನಮ್ಮಲ್ಲಿಯೂ । **ವಾಂ**—ನಿಮಗಾಗಿ ಸಂಸ್ಕರಿಸಲ್ಪಟ್ಟಿದೆ (ಆದುದರಿಂದ ದಯಮಾಡಿ).

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅವಶ್ಯವಾಗಿ ಇಲ್ಲಿಗೆ ದಯಮಾಡಿರಿ. ಇಲ್ಲಿ ಸಿದ್ಧವಾಗಿರುವ ಹವಿಸ್ಸುಗಳು ನಿಮಗಾಗಿಯೇ ಇಡಲ್ಪಟ್ಟಿವೆ. ಇದೇ ಸೋಮರಸಗಳು ತುರ್ವಶನಲ್ಲಿಯೂ, ಯದುವಿನಲ್ಲಿಯೂ ಸಂಸ್ಕೃತವಾಗಿದ್ದವು. ಅಲ್ಲದೇ, ಪುನಃ ಅದೇ ಈ ರಸಗಳು ಕಣ್ವಪುತ್ರರಾದ ನಮ್ಮಲ್ಲಿಯೂ ನಿಮಗಾಗಿ ಸಂಸ್ಕರಿಸಲ್ಪಟ್ಟು ಸಿದ್ಧವಾಗಿದೆ. ಆದುದರಿಂದ ದಯಮಾಡಿ.

## English Translation

Come, Aswins, these libations are prepared for you: those libations which were presented you by Turvasa and Yadu, they are now offered to you by the Kanwas.

॥ ಸಂಹಿತಾಪಾಠಃ ॥

ಯನ್ನಾಸತ್ಯಾ ಪರಾಕೇ ಅರ್ವಾಕೇ ಅಸ್ತಿ ಭೇಷಜಂ ।
ತೇನ ನೂನಂ ವಿಮದಾಯ ಪ್ರಚೇತಸಾ ಛರ್ದಿರ್ವತ್ಸಾಯ ಯಚ್ಛತಂ ॥ ೧೫ ॥

॥ ಪದಪಾಠಃ ॥

ಯತ್ । ನಾಸತ್ಯಾ । ಪರಾಕೇ । ಅರ್ವಾಕೇ । ಅಸ್ತಿ । ಭೇಷಜಂ ।
ತೇನ । ನೂನಂ । ವಿऽಮದಾಯ । ಪ್ರऽಚೇತಸಾ । ಛರ್ದಿಃ । ವತ್ಸಾಯ । ಯಚ್ಛತಂ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾವಶ್ವಿನೌ ಪರಾಕೇ ದೂರದೇಶೇऽರ್ವಾಕೇ ಸಮೀಪೇ ಚ ಯದ್ಯುವಯೋಃ ಸಂಬಂಧಿ ಭೇಷಜಂ ರೋಗೋಪಶಮನಕಾರಣಮಸ್ತಿ ತೇನ ಭೇಷಜೇನ ಸಹಿತಂ ಛರ್ದಿರ್ಗೃಹಂ ಹೇ ಪ್ರಚೇತಸಾ ಪ್ರಕೃಷ್ಟಜ್ಞಾನಾವಶ್ವಿನೌ ವಿಮದಾಯ । ಉಪ್ತ್ರೋಪಸಮೇತತ್ । ಏತತ್ಸಂಜ್ಞಾಯೋರ್ವರ್ಷಯೋಃ ವತ್ಸಾಯ ನೂನಮವಶ್ಯಂ ಪ್ರಯಚ್ಛತಂ ॥

॥ ಪ್ರತಿಪದಾರ್ಥ ॥

ಪ್ರಚೇತಸಾ—ಅತ್ಯುತ್ಕೃಷ್ಟವಾದ ಜ್ಞಾನವುಳ್ಳ । ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । ಪರಾಕೇ—ದೂರದೇಶದಲ್ಲಾಗಲಿ । ಅರ್ವಾಕೇ—ಸಮೀಪದಲ್ಲಾಗಲಿ । ಯತ್—ಯಾವ ನಿಮ್ಮ । ಭೇಷಜಂ—ಔಷಧಿಯು । ಅಸ್ತಿ—ಇರುವುದೋ । ತೇನ—ಅದರೊಂದಿಗೆ । ವಿಮದಾಯ—ವಿಮದನಿಗೆ ಸಹಾಯ ಮಾಡಲು ಹೋದಂತೆಯೇ । ವತ್ಸಾಯ—ವತ್ಸನಿಗೂ ಸಹಾಯಮಾಡಲು । ಛರ್ದಿಃ—ಅವನ ಗೃಹಕ್ಕೆ । ನೂನಂ—ಅವಶ್ಯವಾಗಿ ಬನ್ನಿರಿ । ಯಚ್ಛತಂ—ವತ್ಸನಿಗೂ ಅನುಗ್ರಹಿಸಿ ಕೊಡಿರಿ.

॥ ಭಾವಾರ್ಥ ॥

ಅತ್ಯುತ್ಕೃಷ್ಟವಾದ ಜ್ಞಾನವುಳ್ಳ ಎಲೈ ಅಶ್ವಿನೀದೇವತೆಗಳೇ, ದೂರದೇಶದಲ್ಲಾಗಲಿ ಅಥವಾ ಸಮೀಪದಲ್ಲಾಗಲಿ ಯಾವ ನಿಮ್ಮ ಔಷಧಿಯು ಇರುವುದೋ, ಅದರೊಂದಿಗೆ ವಿಮದನಿಗೆ ಸಹಾಯಮಾಡಲು ಹೋದಂತೆಯೇ, ವತ್ಸನಿಗೂ ಸಹಾಯಮಾಡಲು ಅವನ ಗೃಹಕ್ಕೆ ಬಂದು ಅವನಿಗೂ ಅನುಗ್ರಹಿಸಿಕೊಡಿರಿ.

the offering (of the Soma); with sacred hymns he magnifies (the might) of Indra; he verily proclaims the measure (of his merits)

। ಸಂಹಿತಾಪಾಠಃ ।

ಸನಿರ್ಮಿತ್ರಸ್ಯ ಪಪ್ರಥ ಇಂದ್ರಃ ಸೋಮಸ್ಯ ಪೀತಯೇ ।
ಪ್ರಾಚೀ ವಾಶೀವ ಸುನ್ವತೇ ಮಿಮೀತ ಇತ್ ॥ ೧೨ ॥

। ಪದಪಾಠಃ ।

ಸನಿಃ । ಮಿತ್ರಸ್ಯ । ಪಪ್ರಥೇ । ಇಂದ್ರಃ । ಸೋಮಸ್ಯ । ಪೀತಯೇ ।
ಪ್ರಾಚೀ । ವಾಶೀಽಇವ । ಸುನ್ವತೇ । ಮಿಮೀತ । ಇತ್ ॥ ೧೨ ॥

॥ ಸಾಯಣಭಾಷ್ಯಂ ॥

ಮಿತ್ರಸ್ಯ ಮಿತ್ರಭೂತಸ್ಯ ಸ್ತೋತುಃ ಸನಿರ್ಧನಸ್ಯ ದಾತೇಂದ್ರಃ ಸೋಮಸ್ಯ ಪೀತಯೇ ಪಾನಾಯ ಪಪ್ರಥೇ । ಪ್ರಥಿತೋ ವಿಸ್ತೀರ್ಣಶರೀರೋ ಬಭೂವ । ಯಥಾ ಪೀತೋ ಬಹುಲಃ ಸೋಮ ಉದರೇಽಂತರ್ಭವತಿ ತಥಾ ಪ್ರವೃದ್ಧಶರೀರೋ ಬಭೂವೇತ್ಯರ್ಥಃ । ತತ್ರ ಪ್ರಥಮೋ ದೃಷ್ಟಾಂತಃ । ಪ್ರಾಚೀ ಪ್ರಾಂಚಂತೀ ಪ್ರಕರ್ಷೇಣ ಸ್ತುತ್ಯಂ ಗುಣಗಣಂ ಪ್ರಾಪ್ನುವತೀ ವಾಶೀವ । ವಾಙ್ನಾಮೈತತ್ । ಸ್ತುತಿರೂಪಾ ವಾಕ್ ಸುನ್ವತೇ ॥ ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯೇತಿ ಚತುರ್ಥೀ ॥ ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಸಂಬಂಧಿನೀ ಯಥಾ ಸ್ತುತ್ಯಗುಣಬಾಹುಲ್ಯೇನ ವಿಸ್ತೀರ್ಣಾ ಭವತಿ ತಥೇಂದ್ರಃ ಪಪ್ರಥ ಇತ್ಯರ್ಥಃ । ಪ್ರಥಿತಾ ಚ ಸಾ ಮಿಮೀತ ಇತ್ । ಇಂದ್ರಮಾಹಾತ್ಮ್ಯಂ ಯಥಾವತ್ಪರಿಛಿನತ್ತ್ಯೇವ ॥

। ಪ್ರತಿಪದಾರ್ಥ ।

ಸುನ್ವತಃ—ಇಂದ್ರನಿಗಾಗಿ ಸೋಮರಸವನ್ನು ಹಿಂಡುವ ಯಜಮಾನನ । ಪ್ರಾಚೀ—ಇಂದ್ರನ ಗುಣಗಳನ್ನು ಸಮೀಪಿಸಿ ಸ್ತುತಿಸುವ । ವಾಶೀವ—ಸ್ತುತಿಯು ವೃದ್ಧಿಯನ್ನು ಹೊಂದುವಂತೆ । ಮಿತ್ರಸ್ಯ—ಮಿತ್ರರೂಪನಾದ ಯಜಮಾನನಿಗೆ । ಸನಿಃ—ಧನದಾತನಾದ । ಇಂದ್ರಃ—ಇಂದ್ರನು । ಸೋಮಸ್ಯ—ಸೋಮರಸದ । ಪೀತಯೇ—ಪಾನಾರ್ಥವಾಗಿ । ಪಪ್ರಥೇ—ವಿಸ್ತೃತವಾಗಿ ಬೆಳೆಯುತ್ತಾನೆ । ಮಿಮೀತ ಇತ್—ಸ್ತುತಿಯೂ ಸಹ ಇಂದ್ರನ ಗುಣಗಳನ್ನು ವಿವರಿಸಿ ವರ್ಣಿಸುತ್ತದೆ

। ಭಾವಾರ್ಥ ।

ಇಂದ್ರನಿಗಾಗಿ ಸೋಮರಸವನ್ನು ಹಿಂಡುವ ಯಜಮಾನನಿಂದ ನಿರ್ಮಿತವಾದುದೂ, ಇಂದ್ರನನ್ನು ಸಮೀಪಿಸಿ ಅವನ ಗುಣಗಳನ್ನು ಸ್ತುತಿಸುವುದೂ ಆದ ಸ್ತೋತ್ರವು ವೃದ್ಧಿಯನ್ನು ಹೊಂದುವಂತೆ ಮಿತ್ರರೂಪನಾದ ಯಜಮಾನನಿಗೆ

ಧನದಾತನಾದ ಇಂದ್ರನು ಸೋಮರಸದ ಪಾನಾರ್ಥವಾಗಿ ವಿಸ್ತೃತವಾಗಿ ಬೆಳೆಯುತ್ತಾನೆ. ಸ್ತುತಿಯೂ ಸಹ ಇಂದ್ರನ ಗುಣಗಳನ್ನು ವಿವರಿಸಿ ವರ್ಣಿಸುತ್ತದೆ.

## English Translation

Indra, the benefactor of his friend (the worshipper), has enlarged himself to drink the Soma, in like manner as the pious praise dilates and proclaims the measure (of his merits).

॥ ಸಂಹಿತಾಪಾಠಃ ॥

ಯಂ ವಿಪ್ರಾ ಉಕ್ಥವಾಹಸೋಽಭಿಪ್ರಮಂದುರಾಯವಃ ।

ಘೃತಂ ನ ಪಿಪ್ಯ ಆಸನ್ಯೃತಸ್ಯ ಯತ್ ॥ ೧೩ ॥

॥ ಪದಪಾಠಃ ॥

ಯಂ । ವಿಪ್ರಾಃ । ಉಕ್ಥಽವಾಹಸಃ । ಅಭಿಽಪ್ರಮಂದುಃ । ಆಯವಃ ।

ಘೃತಂ । ನ । ಪಿಪ್ಯೇ । ಆಸನಿ । ಋತಸ್ಯ । ಯತ್ ॥ ೧೩ ॥

॥ ಸಾಯಣಭಾಷ್ಯಂ ॥

ವಿಪ್ರಾ ಮೇಧಾವಿನ ಉಕ್ಥವಾಹಸ ಉಕ್ಥಾನಾಂ ಶಸ್ತ್ರಾಣಾಂ ವೋಢಾರಃ ಪ್ರಾಪಯಿತಾರ ಆಯವೋ ಮನುಷ್ಯಾ ಯಮಿಂದ್ರಮಭಿಪ್ರಮಂದುಃ ಅಭಿ ಪ್ರಕರ್ಷೇಣ ಮಾದಯಂತಿ ॥ ಮದೇರ್ವ್ಯತ್ಯಯೇನ ಪರಸ್ಪರಂದ್ವಿರ್ವಚನಪರೇಣ ಛಂದಸಿ ವೇತಿ ವಚನಾದ್ದ್ವಿರ್ವಚನಾಭಾವಃ ॥ ತಸ್ಯೇಂದ್ರಸ್ಯಾಸನ್ಯಾಸ್ಯೇ ॥ ಪದ್ದನ್ನಿತ್ಯಾದಿನಾಸ್ಯಶಬ್ದಸ್ಯಾಸನ್ನಾದೇಶಃ ॥ ಘೃತಂ ನ ಘೃತಮಿವ ಶುದ್ಧಂ ಪಿಪ್ಯೇ । ಸೇಚನೇನ ವರ್ಧಯೇ ॥ ಪ್ಯಾಯತೇಶ್ಛಾಂದಸೋ ಲಿಟ್ । ಲಿಡ್ಯಙೋಶ್ಚೇತಿ ಪೀಭಾವಃ ॥ ಕಿಂ ತದ್ಧವಿಃ । ಋತಸ್ಯ ಯಜ್ಞಸ್ಯ ಸಂಬಂಧಿ ಯತ್ಸೋಮಲಕ್ಷಣಂ ಹವಿರಸ್ತಿ ತದಿತ್ಯರ್ಥಃ ॥

॥ ಪ್ರತಿಪದಾರ್ಥ ॥

ವಿಪ್ರಾಃ—ಮೇಧಾವಿಗಳೂ । ಉಕ್ಥವಾಹಸಃ—ಶಸ್ತ್ರಮಂತ್ರಗಳನ್ನು ವಹಿಸುವವರೂ ಆದ । ಆಯವಃ—ಮಾನವರು । ಯಂ—ಯಾವ ಇಂದ್ರನನ್ನು । ಅಭಿಪ್ರಮಂದುಃ—ಪೂರ್ಣವಾಗಿ ತೃಪ್ತಿಗೊಳಿಸುವರೋ ಅಂತಹ ಇಂದ್ರನ । ಆಸನಿ—ಮುಖದಲ್ಲಿ । ಋತಸ್ಯ—ಯಜ್ಞಸಂಬಂಧಿಯಾದ । ಯತ್—ಯಾವ ಸೋಮವಿದೆಯೋ ಅದನ್ನು । ಘೃತಂ ನ—ಆಜ್ಯವನ್ನು ಅಗ್ನಿಯಲ್ಲಿ ಸುರಿಯುವಂತೆ । ಪಿಪ್ಯೇ—ಸುರಿಯುತ್ತೇನೆ.

॥ ಭಾವಾರ್ಥ ॥

ಮೇಧಾವಿಗಳೂ ಶಸ್ತ್ರಮಂತ್ರಪಾಠಕರೂ ಆದ ಮಾನವರು ಯಾವ ಇಂದ್ರನನ್ನು ಪೂರ್ಣವಾಗಿ ತೃಪ್ತಿಗೊಳಿಸುವರೋ ಅಂತಹ ಇಂದ್ರನ ಬಾಯಿನಲ್ಲಿ ಯಜ್ಞಸಂಬಂಧಿಯಾದ ಯಾವ ಸೋಮವಿದೆಯೋ ಅದನ್ನು ಅಗ್ನಿಯಲ್ಲಿ ಆಜ್ಯವನ್ನು ಸುರಿಯುವಂತೆ ಸುರಿಯುತ್ತೇನೆ.

## English Translation

I pour the oblation of the sacrifice, like clarified butter, into the mouth (of that Indra), whom wise men, addressing with prayers, delight.

॥ ಸಂಹಿತಾಪಾಠಃ ॥

ಉತ ಸ್ವರಾಜೇ ಅದಿತಿಃ ಸ್ತೋಮಮಿಂದ್ರಾಯ ಜೀಜನತ್ ।
ಪುರುಪ್ರಶಸ್ತಮೂತಯ ಋತಸ್ಯ ಯತ್ ॥ ೧೪ ॥

॥ ಪದಪಾಠಃ ॥

ಉತ । ಸ್ವಽರಾಜೇ । ಅದಿತಿಃ । ಸ್ತೋಮಂ । ಇಂದ್ರಾಯ । ಜೀಜನತ್ ।
ಪುರುಽಪ್ರಶಸ್ತಂ । ಊತಯೇ । ಋತಸ್ಯ । ಯತ್ ॥ ೧೪ ॥

॥ ಸಾಯಣಭಾಷ್ಯಂ ॥

ಉತಾಪಿ ಚಾದಿತಿರದೀನಾ ದೇವಮಾತಾಖಂಡನೀಯಸ್ತೋತ್ರಾ ವಾ ಸ್ವರಾಜೇ ಸ್ವಯಮೇವ ರಾಜಮಾನಾಯೇಂದ್ರಾಯ ಪುರುಪ್ರಶಸ್ತಂ ಬಹುಲಮುತ್ಕೃಷ್ಟಂ ಯದ್ವಾ ಪುರುಭಿರ್ಬಹುಭಿಃ ಪ್ರಶಂಸಿತವ್ಯಂ ಸ್ತೋಮಂ ಸ್ತೋತ್ರಂ ಜೀಜನತ್ । ಅಜೀಜನತ್ । ಅಜನಯತ್ । ಕಿಮರ್ಥಂ । ಊತಯೇ ರಕ್ಷಣಾರ್ಥಂ । ಯತ್ ಸ್ತೋತ್ರಮೃತಸ್ಯ ಯಜ್ಞಸ್ಯ ಸತ್ಯಸ್ಯ ವಾ ಸಂಬಂಧಿ ಭವತಿ ತಂ ಸ್ತೋಮಮಿತ್ಯನ್ವಯಃ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಋತಸ್ಯ—ಯಜ್ಞಸಂಬಂಧಿಯಾದ । ಯತ್—ಯಾವ ಸ್ತುತಿಯಿದೆಯೋ ಅಂತಹ । ಪುರುಪ್ರಶಸ್ತಂ—ಅನೇಕರಿಂದ ಪ್ರಶಂಸಿತವಾದ । ಸ್ತೋಮಂ—ಸ್ತೋತ್ರವನ್ನು । ಅದಿತಿಃ—ದೇವಮಾತೆಯಾದ ಅದಿತಿಯು । ಸ್ವರಾಜೇ—ಸ್ವಯಂಪ್ರಭುವಾದ । ಇಂದ್ರಾಯ—ಇಂದ್ರನನ್ನುದ್ದೇಶಿಸಿ । ಊತಯೇ—ನಮ್ಮ ರಕ್ಷಣಾರ್ಥವಾಗಿ । ಜೀಜನತ್—ನಿರ್ಮಿಸಿದ್ದಾಳೆ.

। ಭಾವಾರ್ಥ ।

ಯಜ್ಞಸಂಬಂಧಿಯಾದ ಯಾವ ಸ್ತುತಿಯಿದೆಯೋ ಅಂತಹ ಅನೇಕರಿಂದ ಪ್ರಶಂಸಿತವಾದ ಸ್ತೋತ್ರವನ್ನು ದೇವಮಾತೆಯಾದ ಅದಿತಿಯು ಸ್ವಯಂಪ್ರಭುವಾದ ಇಂದ್ರನಿಗೋಸ್ಕರ ನಮ್ಮ ರಕ್ಷಣಾರ್ಥವಾಗಿ ನಿರ್ಮಿಸಿದ್ದಾಳೆ.

## English Translation

The excellent praise which Aditi brought forth for the imperial Indra, for our protection, is that which was (the product) of the sacrifice.

। ಸಂಹಿತಾಪಾಠಃ ।

ಅಭಿ ವಹ್ನಯ ಊತಯೇಽನೂಷತ ಪ್ರಶಸ್ತಯೇ ।
ನ ದೇವ ವಿವ್ರತಾ ಹರೀ ಋತಸ್ಯ ಯತ್ ॥ ೧೫ ॥

॥ ಪದಪಾಠಃ ॥

ಅಭಿ । ವಹ್ನಯಃ । ಊತಯೇ । ಅನೂಷತ । ಪ್ರಶಸ್ತಯೇ ।
ನ । ದೇವ । ವಿಽವ್ರತಾ । ಹರೀ ಇತಿ । ಋತಸ್ಯ । ಯತ್ ॥ ೧೫ ॥

। ಸಾಯಣಭಾಷ್ಯಂ ।

ವಹ್ನಯೋ ವೋಢಾರ ಋತ್ವಿಜ ಊತಯೇ ರಕ್ಷಣಾರ್ಥಂ ಪ್ರಶಸ್ತಯೇ ಪಶಸ್ತ್ಯರ್ಥಂ ಚಾಭ್ಯನೂಷತ । ಇಂದ್ರಮಭ್ಯಷ್ಟುವನ್ ॥ ಣು ಸ್ತುತೌ । ಕುಟಾದಿಃ ॥ ಹೇ ದೇವ ದಾನಾದಿಗುಣಯುಕ್ತೇಂದ್ರ। ನೇತಿ ಸಂಪ್ರತ್ಯರ್ಥೇ । ಸಂಪ್ರತಿ ವಿವ್ರತಾ ವಿವಿಧಕರ್ಮಾಣೌ ಹರೀ ತ್ವದೀಯಾವಶ್ವಾವೃತಸ್ಯ ಯಜ್ಞಸ್ಯ ಸತ್ಯಸ್ಯ ವಾ ಸಂಬಂಧಿ ಯತ್ ಸ್ತೋತ್ರಂ ಹವಿರ್ವಾ ವಿದ್ಯತೇ ತದಭಿಲಕ್ಷ್ಯ ತ್ವಾಂ ವಹತ ಇತಿ ಶೇಷಃ ॥

॥ ಪ್ರತಿಪದಾರ್ಥ ॥

ವಹ್ನಯಃ—ಹವಿರ್ವಾಹಕರಾದ ಋತ್ವಿಕ್ಕುಗಳು । ಊತಯೇ—ರಕ್ಷಣಾರ್ಥವಾಗಿಯೂ । ಪ್ರಶಸ್ತಯೇ—ಪ್ರಶಸ್ತಿಗಾಗಿಯೂ । ಅಭ್ಯನೂಷತ—ಇಂದ್ರನನ್ನು ಸ್ತುತಿಸಿದ್ದಾರೆ । ದೇವ—ದಾನಾದಿಗುಣಯುಕ್ತನಾದ ಎಲೈ ಇಂದ್ರನೇ । ನ—ಈಗ । ವಿವ್ರತಾ—ಅನೇಕವಿಧವಾದ ಕರ್ಮಗಳುಳ್ಳ । ಹರೀ—ನಿನ್ನ ಅಶ್ವಗಳು । ಋತಸ್ಯ—ಯಜ್ಞಸಂಬಂಧಿಯಾದ । ಯತ್—ಯಾವ ಹವಿಸ್ಸಿದೆಯೋ ಅಲ್ಲಿಗೆ ಕರೆತರಲಿ.

॥ ಭಾವಾರ್ಥ ॥

ಹವಿರ್ವಾಹಕರಾದ ಋತ್ವಿಕ್ಕುಗಳು ರಕ್ಷಣಾರ್ಥವಾಗಿಯೂ ಪ್ರಶಸ್ತಿಗಾಗಿಯೂ ಇಂದ್ರನನ್ನು ಸ್ತುತಿಸಿದ್ದಾರೆ

ದಾನಾದಿಗುಣಯುಕ್ತನಾದ ಎಲೈ ಇಂದ್ರನೇ, ಅನೇಕ ವಿಧವಾದ ಕರ್ಮಗಳುಳ್ಳ ನಿನ್ನ ಅಶ್ವಗಳು ಯಜ್ಞಸಂಬಂಧಿಯಾದ ಹವಿಸ್ಸಿರುವ ಸ್ಥಳಕ್ಕೆ ನಿನ್ನನ್ನು ಈಗ ಕರೆತರಲಿ.

## English Translation

The bearers of the oblation glorify (Indra) for his excellent protection : now, divinity, let your many-actioned horses (bear you to the offering) to the sacrifice.

॥ ಸಂಹಿತಾಪಾಠಃ ॥

ಯತ್ಸೋಮಮಿಂದ್ರ ವಿಷ್ಣವಿ ಯದ್ವಾ ಘ ತ್ರಿತ ಆಪ್ತ್ಯೇ ।
ಯದ್ವಾ ಮರುತ್ಸು ಮಂದಸೇ ಸಮಿಂದುಭಿಃ ॥ ೧೬ ॥

॥ ಪದಪಾಠಃ ॥

ಯತ್ । ಸೋಮಂ । ಇಂದ್ರ । ವಿಷ್ಣವಿ । ಯತ್ । ವಾ । ಘ । ತ್ರಿತೇ । ಆಪ್ತ್ಯೇ ।
ಯತ್ । ವಾ । ಮರುತ್ಽಸು । ಮಂದಸೇ । ಸಂ । ಇಂದುಽಭಿಃ ॥ ೧೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಿಷ್ಣವಿ ವಿಷ್ಣೌ ಪಾನಾರ್ಥಮಾಗತೇ ಸತ್ಯನ್ಯದೀಯೋ ಯಾಗೇ ಸೋಮಂ ಯದ್ಯದಿ ತೇನ ವಿಷ್ಣುನಾ ಸಾರ್ಧಂ ಪಿಬಸಿ । ಯದ್ವಾ ಯದಿ ಚಾಪ್ತ್ಯೇಽಪಾಂ ಪುತ್ರೇ ತ್ರಿತ ಏತತ್ಸಂಜ್ಞೇ ರಾಜರ್ಷೌ ಯಜಮಾನೇ ಸೋಮಂ ಪಿಬಸಿ । ಘೇತಿ ಪೂರಣಃ । ಯದ್ವಾ ಯದಿ ಚ ಮರುತ್ಸು ಚ ಸೋಮಪಾನಾಯಾಗತೇಷ್ವನ್ಯದೀಯೇ ಯಜ್ಞೇ ಮಂದಸೇ ಮಾದ್ಯಸಿ । ತಥಾಪ್ಯಸ್ಮದೀಯೈರೇವೇಂದುಭಿಃ ಸೋಮೈಃ ಸಂ ಸಮ್ಯಙ್ಮಾದ್ಯ ।

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ವಿಷ್ಣವಿ—ವಿಷ್ಣುವು ಸಮಾಪಿಸುತ್ತಿರುವಾಗ । ಯತ್—ಯಾವ ಪ್ರಕಾರ । ಸೋಮಂ—ಸೋಮವನ್ನು ಪಾನಮಾಡುವೆಯೋ । ಯದ್ವಾ—ಅಥವಾ । ಆಪ್ತ್ಯೇ-ಉದಕಕ್ಕೆ ಪುತ್ರರೂಪನಾದ । ತ್ರಿತೇ—ತ್ರಿತನು ಜೊತೆಯಲ್ಲಿರುವಾಗ ಯಾವರೀತಿ ಪಾನಮಾಡುವೆಯೋ । ಯದ್ವಾ—ಅಥವಾ । ಮರುತ್ಸು—ಮರುತ್ತುಗಳು ಜೊತೆಯಲ್ಲಿರುವಾಗ । ಮಂದಸೇ—ಯಾವ ರೀತಿ ತೃಪ್ತಿಯನ್ನು ಪಡೆಯುವೆಯೋ ಅದೇ ರೀತಿ । ಇಂದುಭಿಃ—ನಮ್ಮ ಸೋಮರಸಗಳಿಂದ । ಸಂ (ಮಾದ್ಯ)—ಪೂರ್ಣವಾದ ತೃಪ್ತಿಯನ್ನು ಹೊಂದು.

॥ ಭಾವಾರ್ಥ ॥

ಎಲೈ ಇಂದ್ರನೇ, ವಿಷ್ಣುವು ಸಮೀಪದಲ್ಲಿರುವಾಗ ಯಾವ ಪ್ರಕಾರ ಸೋಮವನ್ನು ಪಾನಮಾಡುವೆಯೋ, ಅಥವಾ ಉದಕಕ್ಕೆ ಪುತ್ರರೂಪನಾದ ತ್ರಿತನು ಜೊತೆಯಲ್ಲಿರುವಾಗ ಯಾವ ರೀತಿ ಪಾನಮಾಡುವೆಯೋ ಅಥವಾ ಮರುತ್ತು ಗಳು ಜೊತೆಯಲ್ಲಿರುವಾಗ ಯಾವ ರೀತಿ ಸಂತೃಪ್ತಿಯನ್ನು ಹೊಂದುವೆಯೋ ಅದೇ ರೀತಿ ನಮ್ಮ ಸೋಮ ರಸಗಳನ್ನು ಪಾನಮಾಡಿ ಅವುಗಳಿಂದಲೂ ತೃಪ್ತಿಯನ್ನು ಹೊಂದು.

## English Translation

Inasmuch as you are exhilarated by the Soma shared with Vishnu or when (offered) by Trita, the son of the waters, or along with the Maruts, so now (be gratified) by (our) libations,

॥ ಸಂಹಿತಾಪಾಠಃ ॥

ಯದ್ವಾ ಶಕ್ರ ಪರಾವತಿ ಸಮುದ್ರೇ ಅಧಿ ಮಂದಸೇ ।
ಅಸ್ಮಾಕಮಿತ್ಸುತೇ ರಣಾ ಸಮಿಂದುಭಿಃ ॥ ೧೭ ॥

॥ ಪದಪಾಠಃ ॥

ಯತ್ । ವಾ । ಶಕ್ರ । ಪರಾಽವತಿ । ಸಮುದ್ರೇ । ಅಧಿ । ಮಂದಸೇ ।
ಅಸ್ಮಾಕಂ । ಇತ್ । ಸುತೇ । ರಣ । ಸಂ । ಇಂದುಽಭಿಃ ॥ ೧೭ ॥

॥ ಸಾಯಣಭಾಷ್ಯಂ ॥

ಹೇ ಶಕ್ರ ಶಕ್ತೇಂದ್ರ ಪರಾವತಿ ಪರಾಗತೇ ದೂರದೇಶೇ ಸಮುದ್ರೇ ಸಮುಂದನಶೀಲೇ ಸೋಮೇ। ಅಧಿ ಸಪ್ತಮ್ಯರ್ಥಾನುವಾದೀ । ಯದ್ವಾ ಯದಿ ವಾ ಮಂದಸೇ ಮಾದ್ಯಸಿ ತಥಾಪ್ಯಸ್ಮಾಕಮಿದಸ್ಮಾಕ-ಮೇವ ಸೋಮೇಽಭಿಷುತೇ ಸತೀಂದುಭಿಃ ಸೋಮರಸೈಃ-ಸಂ ರಣ । ಸಮ್ಯಗ್ರಮಸ್ವ ॥

॥ ಪ್ರತಿಪದಾರ್ಥ ॥

ಶಕ್ರ—ಶಕ್ತನಾದ ಎಲೈ ಇಂದ್ರನೇ । ಪರಾವತಿ—ಅತ್ಯಂತ ದೂರದೇಶದಲ್ಲಿರುವುದೂ । ಸಮುದ್ರೇ ಅಧಿ-ಸ್ರವಿಸುತ್ತಿರುವುದೂ ಆದ ಸೋಮರಸದಿಂದ । ಯದ್ವಾ—ಯಾವ ರೀತಿ । ಮಂದಸೇ— ತೃಪ್ತಿಯನ್ನು ಹೊಂದು ವೆಯೋ ಹಾಗೆಯೇ । ಅಸ್ಮಾಕಮಿತ್—ನಮ್ಮಿಂದಲೂ ಅರ್ಪಿತವಾದ । ಸುತೇ—ಹಿಂಡಲ್ಪಟ್ಟ । ಇಂದುಭಿಃ—ಸೋಮರಸಗಳಿಂದ । ಸಂ ರಣ—ಅಧಿಕವಾದ ಹರ್ಷವನ್ನು ಹೊಂದು.

॥ ಭಾವಾರ್ಥ ॥

ಸರ್ವಶಕ್ತನಾದ ಎಲೈ ಇಂದ್ರನೇ, ಅತ್ಯಂತ ದೂರದೇಶದಲ್ಲಿರುವುದೂ, ಸ್ರವಿಸುತ್ತಿರುವುದೂ ಆದ ಸೋಮರಸದಿಂದ ಯಾವ ರೀತಿ ತೃಪ್ತಿಯನ್ನು ಹೊಂದುವೆಯೋ ಹಾಗೆಯೇ ನಮ್ಮಿಂದಲೂ ಅರ್ಪಿತವಾಗಿ ಹಿಂಡಿರುವ ಸೋಮರಸಗಳಿಂದ ಅಧಿಕವಾದ ಹರ್ಷವನ್ನು ಹೊಂದು.

English Translatian

Inasmuch Shakra, as you are exhilarated (by the Soma) on the far-distant ocean, so be gratified now, when the Soma is effused by our libations.

। ಸಂಹಿತಾಪಾಠಃ ।

ಯದ್ವಾಸಿ ಸುನ್ವತೋ ವೃಧೋ ಯಜಮಾನಸ್ಯ ಸತ್ಪತೇ ।

ಉಕ್ಥೇ ವಾ ಯಸ್ಯ ರಣ್ಯಸಿ ಸಮಿಂದುಭಿಃ ॥ ೧೮ ॥

। ಪದಪಾಠಃ ।

ಯತ್ । ವಾ । ಅಸಿ । ಸುನ್ವತಃ । ವೃಧಃ । ಯಜಮಾನಸ್ಯ । ಸತ್ಽಪತೇ ।

ಉಕ್ಥೇ । ವಾ । ಯಸ್ಯ । ರಣ್ಯಸಿ । ಸಂ । ಇಂದುಽಭಿಃ ॥ ೧೮ ॥

। ಸಾಯಣಭಾಷ್ಯಂ ।

ಹೇ ಸತ್ಪತೇ ಸತಾಂ ಪಾಲಯಿತರಿಂದ್ರ ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಯದ್ವಾ ಯದಿ ವಾ ವೃಧೋಽಸಿ ವರ್ಧಯಿತಾ ಭವಸಿ ॥ ವೃಧೇರಂತರ್ಣೀತಣ್ಯರ್ಥಾದಿಗುಪಧಲಕ್ಷಣಃ ಕಃ ॥ ಯಸ್ಯ ಚ ಯಜಮಾನಸ್ಯೋಕ್ಥೇ ಶಸ್ತ್ರೇ ವಾ ಶಂಸಿತೇ ಸತಿ ರಣ್ಯಸಿ ರಮಸೇ । ಏವಮಪೀಂದುಭಿರಸ್ಮದೀಯೈರೇವ ಸೋಮೈಃ ಸಮ್ಯಗ್ರಮಸ್ವ ॥

॥ ಪ್ರತಿಪದಾರ್ಥ ॥

ಸತ್ಪತೇ—ಸಜ್ಜನರ ಪಾಲಕನಾದ ಎಲೈ ಇಂದ್ರನೇ । ಸುನ್ವತಃ—ಸೋಮರಸವನ್ನು ಹಿಂಡಿ ಅರ್ಪಿಸುವ । ಯಜಮಾನಸ್ಯ—ಯಜಮಾನನಿಗೆ । ಯದ್ವಾ—ಯಾವ ಪ್ರಕಾರ । ವೃಧಃ—ವೃದ್ಧಿಕಾರಕನಾಗಿ । ಅಸಿ—ಆಗಿರುವೆಯೋ । ವಾ-ಅಥವಾ । ಯಸ್ಯ-ಯಾವ ಯಜಮಾನನಿಂದ । ಉಕ್ಥೇ—ಶಸ್ತ್ರಮಂತ್ರವು ಅರ್ಪಿತವಾದಾಗ । ರಣ್ಯಸಿ—ಹರ್ಷಪಡುವಿಯೋ (ಹಾಗೆಯೇ) । ಇಂದುಭಿಃ—ನಮ್ಮಿಂದ ಅರ್ಪಿತವಾದ ಈ ಸೋಮರಸಗಳಿಂದ । ಸಂ (ರಣ)—ಸಂತೃಪ್ತಿಯನ್ನು ಹೊಂದು.

। ಭಾವಾರ್ಥ ।

ಸಜ್ಜನರ ಪಾಲಕನಾದ ಎಲೈ ಇಂದ್ರನೇ, ಸೋಮರಸವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ ಯಾವ ಪ್ರಕಾರ ವೃದ್ಧಿಕಾರಕನಾಗಿ ಆಗಿರುವೆಯೋ, ಅಥವಾ ಯಾವ ಯಜಮಾನನಿಂದ ಶಸ್ತ್ರಮಂತ್ರವು ಅರ್ಪಿತವಾದಾಗ ಹರ್ಷಪಡುವೆಯೋ ಹಾಗೆಯೇ ನಮ್ಮಿಂದ ಅರ್ಪಿತವಾದ ಈ ಸೋಮರಸಗಳಿಂದಲೂ ಸಂತೃಪ್ತಿಯನ್ನು ಹೊಂದು.

## English Translation

Inasmuch, protector of the virtuous, as you are the benefactor of the worshipper offering you libations, or by whose prayers you are propitiated, so now (be gratified) by our libations.

ಸಂಹಿತಾಪಾಠಃ ।

ದೇವಂದೇವಂ ವೋಽವಸ ಇಂದ್ರಮಿಂದ್ರಂ ಗೃಣೀಷಣಿ ।
ಅಧಾ ಯಜ್ಞಾಯ ತುರ್ವಣೇ ವ್ಯಾನಶುಃ ॥ ೧೯ ॥

॥ ಪದಪಾಠಃ ॥

ದೇವಂಽದೇವಂ । ವಃ । ಅವಸೇ । ಇಂದ್ರಂಽಇಂದ್ರಂ । ಗೃಣೀಷಣಿ ।
ಅಧ । ಯಜ್ಞಾಯ । ತುರ್ವಣೇ । ವಿ । ಆನಶುಃ ॥ ೧೯ ॥

। ಸಾಯಣಭಾಷ್ಯಂ ।

ಹೇ ಋತ್ವಿಗ್ಯಜಮಾನಾಃ ವೋ ಯುಷ್ಮಾಕಮವಸೇ ರಕ್ಷಣಾಯ ದೇವಂ ದೇವಮಿಂದ್ರಮಿಂದ್ರಂ ದಾನಾದಿಗುಣಯುಕ್ತಂ । ಇಂದ್ರೋ ಬಹುಷು ದೇಶೇಷು ಯುಗಪತ್ಪ್ರವೃತ್ತೇಷು ಯಾಗೇಷು ತತ್ರ ತತ್ರ ಹವಿಃಸ್ವೀಕರಣಾಯ ಬಹೂನಿ ಶರೀರಾಣ್ಯಾದದಾನಃ ಸ್ವಯಮೇಕೋಽಪ್ಯನೇಕಃ ಸಂಸ್ತತ್ರ ತತ್ರ ಸಂನಿಧತ್ತೇ। ತಥಾ ಚ ನಿಗಮಾಂತರಂ । ಇಂದ್ರೋ ಮಾಯಾಭಿಃ ಪುರುರೂಪ ಈಯತೇ । ಋ. ೬-೪೭-೧೮ । ಇತಿ । ತದಪೇಕ್ಷಯೇಯಂ ವೀಪ್ಸಾ । ಬಹು ವಿಭಜ್ಯ ವರ್ತಮಾನಂ ಸರ್ವಂ ತಮಿಂದ್ರಂ ಗೃಣೀಷಣಿ । ಅಹಂ ಸ್ತೌಮಿ ॥ ಗೃಣಾತೇರ್ಲೇಟಿ ಛಾಂದಸಮೇತದ್ರೂಪಂ ॥ ಯದ್ವಾ । ಕಾರಕಮೇವೈತತ್ । ಗೃಣೀಷಣಿ ಸ್ತವನೇಚ್ಛಾಯಾಂ ಸತ್ಯಾಂ । ಅಥಾನಂತರಂ ಸರ್ವಮಿಂದ್ರಂ ಮದೀಯಾಃ ಸ್ತುತಯೋ ವ್ಯಾನಶುಃ । ವ್ಯಾಪ್ನುವಂತಿ । ಕಿಮರ್ಥಂ । ತುರ್ವಣೇ ತೂರ್ಣಂ ಸಂಭಜನಾಯ ಯಜ್ಞಾಯ ಯಾಗಾರ್ಥಂ । ಯದ್ವಾ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ ॥ ಯಜ್ಞಂ ಯಷ್ಟವ್ಯಂ ತುರ್ವಣೇ ಶತ್ರೂಣಾಂ ಹಿಂಸಿತಾರಂ ತೂರ್ಣಸಂಭಜನಂ ವಾ ॥

। ಪ್ರತಿಪದಾರ್ಥ ।

(ಎಲೈ ಋತ್ವಿಗ್ಯಜಮಾನರೇ) ವಃ—ನಿಮ್ಮ । ಅವಸೇ—ರಕ್ಷಣಾರ್ಥವಾಗಿ । ದೇವಂದೇವಂ—ಎಲ್ಲಾ ಕಡೆಗಳಲ್ಲಿಯೂ ದೇವತಾಸ್ವರೂಪವನ್ನು ಹೊಂದಿ । ಇಂದ್ರಮಿಂದ್ರಂ—ಎಲ್ಲಾ ಯಜ್ಞಸ್ಥಾನಗಳಲ್ಲಿಯೂ ಇಂದ್ರಸ್ವರೂಪವನ್ನೇ ಹೊಂದಿರುವ ಇಂದ್ರನನ್ನು । ಗೃಣೀಷಣಿ—ಸ್ತುತಿಸುತ್ತೇನೆ । ಅಧ—ಅನಂತರವೇ । ತುವರ್ಣೇ—ಶೀಘ್ರವಾಗಿ ಫಲವನ್ನು ಕೊಡತಕ್ಕ । ಯಜ್ಞಾಯ—ಯಾಗಾರ್ಥವಾಗಿ । ವ್ಯಾನಶುಃ—ನನ್ನ ಸ್ತುತಿಗಳು ಇಂದ್ರನನ್ನು ಸಮೀಪಿಸುತ್ತವೆ.

। ಭಾವಾರ್ಥ ।

ಎಲೈ ಋತ್ವಿಗ್ಯಜಮಾನರೇ, ನಿಮ್ಮ ರಕ್ಷಣಾರ್ಥವಾಗಿ ಎಲ್ಲಾ ಕಡೆಗಳಲ್ಲಿಯೂ ದೇವತಾಸ್ವರೂಪವನ್ನು ಹೊಂದಿ ಎಲ್ಲಾ ಯಜ್ಞಸ್ಥಾನಗಳಲ್ಲಿಯೂ ಇಂದ್ರಸ್ವರೂಪವನ್ನೇ ಹೊಂದಿರುವ ಇಂದ್ರನನ್ನು ಸ್ತುತಿಸುತ್ತೇನೆ.

## English Translation

I glorify the divine Indra wherever worshippped for your protection: (my praises) have reached him for the prompt (fulfilment) of the (objects of the) sacrifice,

। ಸಂಹಿತಾಪಾಠಃ ।

ಯಜ್ಞೇಭಿರ್ಯಜ್ಞವಾಹಸಂ ಸೋಮೇಭಿಃ ಸೋಮಪಾತಮಂ ।
ಹೋತ್ರಾಭಿರಿಂದ್ರಂ ವಾವೃಧುರ್ವ್ಯಾನಶುಃ ॥ ೨೦ ॥

। ಪದಪಾಠಃ ।

ಯಜ್ಞೇಭಿಃ । ಯಜ್ಞऽವಾಹಸಂ । ಸೋಮೇಭಿಃ । ಸೋಮऽಪಾತಮಂ ।
ಹೋತ್ರಾಭಿಃ । ಇಂದ್ರಂ । ವವೃಧುಃ । ವಿ । ಆನಶುಃ ॥ ೨೦ ॥

। ಸಾಯಣಭಾಷ್ಯಂ ।

ಯಜ್ಞೇಭಿರ್ಯಜ್ಞೈರ್ಯಜಮಾನಸಾಧನೈರ್ಹವಿರ್ಭಿರ್ಯಜ್ಞವಾಹಸಂ ಯಜ್ಞೇ ವೋಢವ್ಯಂ ಪ್ರಾಪಣೀಯಂ ಯಜ್ಞೈರ್ಯಾಗೈರ್ಯಜ್ಞಾನಾಂ ಯಜಮಾನಾನಾಂ ಫಲಸ್ಯ ಪ್ರಾಪಯಿತಾರಂ ವಾ । ಅಥವಾ ಯಜ್ಞವಾಹಸಂ ಯಜ್ಞೇನ ಪ್ರಾಪ್ಯಂ । ನ ಕೇವಲಮೇಕೇನ ಯಜ್ಞೇನಾಪಿ ತು ಸರ್ವೈರಿತ್ಯಾಹ ಯಜ್ಞೇಭಿರಿತಿ । ಏವಂ ಸೋಮೇಭಿಃ ಸೋಮಪಾತಮಂ ಸರ್ವೇಷಾಂ ಸೋಮಾನಾಂ ಪಾತೃತಮ-

ಮಿಂದ್ರಂ ಹೋತ್ರಾಭಿಃ ಸ್ತುತಿಭಿರ್ವಾವೃಧುಃ । ಸ್ತೋತಾರೋ ವರ್ಧಯಂತಿ । ತಾಶ್ಚ ಕ್ರಿಯಮಾಣಾಃ ಸ್ತುತಯೋ ವ್ಯಾನಶುಃ । ತಮಿಂದ್ರಂ ವ್ಯಾಪ್ನುವಂತಿ ಚ ॥ ಅಶ್ನೋತೇರ್ವ್ಯತ್ಯಯೇನ ಪರಸ್ಮೈಪದಂ॥

॥ ಪ್ರತಿಪದಾರ್ಥ ॥

ಯಜ್ಞವಾಹಸಂ—ಯಜ್ಞಫಲವನ್ನು ವಹಿಸಿ ತರುವ ಇಂದ್ರನನ್ನು । ಯಜ್ಞೇಭಿಃ—ಯಜ್ಞಸಾಧನವಾದ ಹವಿಸ್ಸುಗಳಿಂದಲೂ । ಸೋಮಪಾತಮಂ—ಅತಿಶಯವಾಗಿ ಸೋಮಪಾನವನ್ನು ಮಾಡುವ ಇಂದ್ರನನ್ನು । ಸೋಮೇಭಿಃ—ಸೋಮರಸಗಳಿಂದಲೂ । ಇಂದ್ರಂ—ಅದೇ ಇಂದ್ರನನ್ನು । ಹೋತ್ರಾಭಿಃ—ಸ್ತುತಿಗಳಿಂದಲೂ । ವಾವೃಧುಃ—ಯಜಮಾನಾದಿಗಳು ಪುಷ್ಟನಾಗಿ ಬೆಳೆಯುವಂತೆ ಮಾಡಿದ್ದಾರೆ । ವ್ಯಾನಶುಃ—ಅವನಿಗೆ ಅರ್ಪಿತವಾದ ಈ ಸ್ತುತ್ಯಾದಿಗಳೆಲ್ಲವೂ ಅವನನ್ನು ತುಂಬಿ ವ್ಯಾಪಿಸಿವೆ.

॥ ಭಾವಾರ್ಥ ॥

ಯಜ್ಞಫಲವನ್ನು ವಹಿಸಿ ತರುವ ಇಂದ್ರನನ್ನು ಯಜ್ಞಸಾಧನವಾದ ಹವಿಸ್ಸುಗಳಿಂದಲೂ, ಅತಿಶಯವಾಗಿ ಸೋಮಪಾನವನ್ನು ಮಾಡುವ ಇಂದ್ರನನ್ನು ಸೋಮರಸಗಳಿಂದಲೂ, ಅದೇ ಇಂದ್ರನನ್ನು ಸ್ತುತಿಗಳಿಂದಲೂ ಯಜಮಾನಾದಿಗಳು ಪೂಜಿಸಿ ಪುಷ್ಟನಾಗಿ ಬೆಳೆಯುವಂತೆ ಮಾಡಿದ್ದಾರೆ. ಅವನಿಗೆ ಅರ್ಪಿತವಾದ ಈ ಸ್ತುತ್ಯಾದಿಗಳೆಲ್ಲವೂ ಅವನನ್ನು ತುಂಬಿ ವ್ಯಾಪಿಸಿವೆ.

## Engalish Translation

(His worshippers) have magnified with many sacrifices him to whom the sacrifice is offered, and with many libations the eager quaffer of the Soma : (they have magnified) Indra with hymns, (their praises) have attained him.

॥ ಸಂಹಿತಾಪಾಠಃ ॥

ಮಹೀರಸ್ಯ ಪ್ರಣೀತಯಃ ಪೂರ್ವೀರುತ ಪ್ರಶಸ್ತಯಃ ।
ವಿಶ್ವಾ ವಸೂನಿ ದಾಶುಷೇ ವ್ಯಾನಶುಃ ॥ ೨೧ ॥

॥ ಪದಪಾಠಃ ॥

ಮಹೀಃ । ಅಸ್ಯ । ಪ್ರಽನೀತಯಃ । ಪೂರ್ವೀಃ । ಉತ । ಪ್ರಽಶಸ್ತಯಃ ।
ವಿಶ್ವಾ । ವಸೂನಿ । ದಾಶುಷೇ । ವಿ । ಆನಶುಃ ॥ ೨೧ ॥

॥ ಸಾಯಣಭಾಷ್ಯಂ ॥

ಅಸ್ಯೇಂದ್ರಸ್ಯ ಪ್ರಣೀತಯಃ ಪ್ರಣಯನಾನಿ ಧನಾನಾಂ ಪ್ರಕೃಷ್ಟಪ್ರಾಪಣಾನಿ ಮಹೀರ್ಮಹತ್ಯೋ ಮಹಾಂತಿ ಭವಂತಿ । ಉತಾಪಿ ಚಾಸ್ಯ ಪ್ರಶಸ್ತಯಃ ಪ್ರಶಂಸನೀಯಾಃ ಕೀರ್ತಯಃ ಪೂರ್ವೀರ್ಬಹ್ವ್ಯೋ ವಿಸ್ತೃತಮಾ ಭವಂತಿ । ತಾ ಉಭಯವಿಧಾ ದಾಶುಷೇ ಚರುಪುರೋಡಾಶಾದೀನಿ ದತ್ತವತೇ ಯಜಮಾನಾಯ ದಾತುಂ ವಿಶ್ವಾ ವಿಶ್ವಾನಿ ಸರ್ವಾಣಿ ವಸೂನಿ ಧನಾನಿ ವ್ಯಾನಶುಃ । ವ್ಯಾಪ್ನುವಂತಿ ॥

॥ ಪ್ರತಿಪದಾರ್ಥ ॥

ಅಸ್ಯ—ಈ ಇಂದ್ರನ । ಪ್ರಣೀತಯಃ—ಧನದಾನಾದಿಗಳು । ಮಹೀಃ—ಮಹತ್ತಾದವುಗಳು । ಉತ—ಮತ್ತು । ಪ್ರಶಸ್ತಯಃ—ಪ್ರಶಂಸನೀಯವಾದ ಅವನ ಕೀರ್ತಿಗಳು । ಪೂರ್ವೀಃ—ಅತ್ಯಧಿಕವಾದವಾಗಿವೆ । ದಾಶುಷೇ—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ । ವಿಶ್ವಾ—ಸಮಸ್ತವಾದ । ವಸೂನಿ—ಧನಗಳೂ । ವ್ಯಾನಶುಃ- ಯಜಮಾನನಲ್ಲಿ ಬಂದು ವ್ಯಾಪಿಸುತ್ತವೆ.

॥ ಭಾವಾರ್ಥ ॥

ಈ ಇಂದ್ರನ ಧನದಾನಾದಿಗಳು ಮಹತ್ತಾದವುಗಳು. ಇವನ ಪ್ರಶಂಸನೀಯವಾದ ಕೀರ್ತಿಗಳು ಅತ್ಯಧಿಕವಾಗಿವೆ. ಹವಿಸ್ಸನ್ನರ್ಪಿಸುವ ಯಜಮಾನನಿಗೆ ಇಂದ್ರನು ಕೊಡುವ ಸಮಸ್ತವಾದ ಧನಗಳೂ ಯಜಮಾನನಲ್ಲಿ ಬಂದು ವ್ಯಾಪಿಸುತ್ತವೆ.

## English Translation

Infinite are his bounties, many are his glories: ample treasures have reached the donor (of oblations).

॥ ಸಂಹಿತಾಪಾಠಃ ॥

ಇಂದ್ರಂ ವೃತ್ರಾಯ ಹಂತವೇ ದೇವಾಸೋ ದಧಿರೇ ಪುರಃ ।
ಇಂದ್ರಂ ವಾಣೀರನೂಷತಾ ಸಮೋಜಸೇ ॥ ೨೨ ॥

॥ ಪದಪಾಠಃ ॥

ಇಂದ್ರಂ । ವೃತ್ರಾಯ । ಹಂತವೇ । ದೇವಾಸಃ । ದಧಿರೇ । ಪುರಃ ।
ಇಂದ್ರಂ । ವಾಣೀಃ । ಅನೂಷತ । ಸಂ । ಓಜಸೇ ॥ ೨೨ ॥

॥ ಸಾಯಣಭಾಷ್ಯಂ ॥

ದೇವಾಸೋ ದೇವಾ ವೃತ್ರಾಯ ಹಂತವೇ ವೃತ್ರಮಾವರಕಮಸುರಂ ಹಂತುಂ ॥ ಹಂತೇಸ್ತು-

ಮರ್ಥೀ ತವೇಽಸ್ಪ್ರತ್ಯಯಃ । ಇಮಮಿಂದ್ರಂ ಪುರೋ ದಧಿರೇ । ಪುರಸ್ತಾತ್ಸ್ವಾಮಿತ್ವೇನಾಧಾರಯನ್ । ವಾಣೀರ್ವಾಣ್ಯಃ ಸ್ತುತಿರೂಪಾ ವಾಚಶ್ಚೇಮಮೇವೇಂದ್ರಮನೂಷತ । ಸ್ತುವಂತಿ । ಕಿಮರ್ಥಂ । ಸಂ ಸಮೀಚೀನಾಯೌಜಸೇ ಬಲಾರ್ಥಂ । ಯಥಾ ವೃತ್ರವಧಾನುಗುಣಮುತ್ಕೃಷ್ಟಂ ಬಲಮಸ್ಯ ಜಾಯತೇ ತಥಾ ಸ್ತುವಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ದೇವಾಸಃ—ದೇವತೆಗಳು । ವೃತ್ರಾಯ—ವೃತ್ರಾಸುರನ । ಹಂತವೇ—ನಾಶಕ್ಕಾಗಿ । ಇಂದ್ರಂ—ಇಂದ್ರನನ್ನು । ಪುರಃ—ತಮ್ಮ ಮುಂದಾಳಾಗಿ । ದಧಿರೇ—ಸ್ಥಾಪಿಸಿದ್ದಾರೆ । ವಾಣೀಃ—ಅವರ ಸ್ತುತಿಗಳೂ । ಇಂದ್ರಂ—ಇಂದ್ರನನ್ನೇ । ಸಂ—ಸಂಪೂರ್ಣವಾದ । ಓಜಸೇ—ಬಲದ ವೃದ್ಧಿಗಾಗಿ । ಅನೂಷತ-ಪ್ರಶಂಸಿಸುತ್ತವೆ.

॥ ಭಾವಾರ್ಥ ॥

ವೃತ್ರಾಸುರನ ನಾಶಕ್ಕಾಗಿ ದೇವತೆಗಳು ಇಂದ್ರನನ್ನೇ ತಮ್ಮ ಮುಂದಾಳಾಗಿ ಸ್ಥಾಪಿಸಿದ್ದಾರೆ. ಅವರ ಸ್ತುತಿಗಳೂ ಇಂದ್ರನಿಗೆ ಬಲವನ್ನು ವೃದ್ಧಿಗೊಳಿಸಲು ಇಂದ್ರನನ್ನೇ ಪ್ರಶಂಸಿಸುತ್ತವೆ.

## English Translation

The gods have placed Indra (foremost) for the destruction of Vritra; their praise has been addressed to him to enhance his vigour.

॥ ಸಂಹಿತಾಪಾಠಃ ॥

ಮಹಾಂತಂ ಮಹಿನಾ ವಯಂ ಸ್ತೋಮೇಭಿರ್ಹವನಶ್ರುತಂ ।
ಅರ್ಕೈರಭಿ ಪ್ರ ಣೋನುಮಃ ಸಮೋಜಸೇ ॥ ೨೪ ॥

॥ ಪದಪಾಠ ॥

ಮಹಾಂತಂ । ಮಹಿನಾ । ವಯಂ । ಸ್ತೋಮೇಭಿಃ । ಹವನಽಶ್ರುತಂ ।
ಅರ್ಕೈಃ । ಅಭಿ । ಪ್ರ । ನೋನುಮಃ । ಸಂ । ಓಜಸೇ ॥ ೨೪ ॥

॥ ಸಾಯಣಭಾಷ್ಯಂ ॥

ಮಹಿನಾ ಮಹಿಮ್ನಾ ಮಹಾಂತಂ ಸರ್ವೇಭ್ಯೋಽಧಿಕಂ ಹವನಶ್ರುತಂ ಹವನಸ್ಯಾಹ್ವಾನಸ್ಯ ಶ್ರೋತಾರಮಿಂದ್ರಂ ವಯಂ ಸ್ತೋಮೇಭಿಃ ಸ್ತೋಮೈಸ್ತ್ರಿವೃತ್ಪಂಚದಶಾದಿಭಿರರ್ಕೈರರ್ಚನಸಾಧನೈಃ ಶಸ್ತ್ರೈಶ್ಚಾಭಿ ಪ್ರ ಣೋನುಮಃ । ಅಭಿಮುಖ್ಯೇನ ಪ್ರಕರ್ಷೇಣ ಪುನಃ ಪುನಃ ಸ್ತುಮಃ ॥

॥ ಪ್ರತಿಪದಾರ್ಥ ॥

ಮಹಿನಾ—ಮಾಹಾತ್ಮ್ಯದಿಂದ । ಮಹಾಂತಂ—ಅತ್ಯಧಿಕನಾದವನೂ । ಹವನಶ್ರುತಂ—ನಮ್ಮ ಆಹ್ವಾನವನ್ನು ಕೇಳುವವನೂ ಆದ ಇಂದ್ರನನ್ನು । ವಯಂ—ನಾವು । ಸ್ತೋಮೇಭಿಃ—ತ್ರಿವೃದಾದಿಸ್ತೋಮಗಳಿಂದಲೂ । ಅರ್ಕೈಃ—ಪೂಜ್ಯವಾದ ಶಸ್ತ್ರಮಂತ್ರಗಳಿಂದಲೂ । ಸಂ—ಪೂರ್ಣವಾದ । ಓಜಸೇ—ಬಲದ ವೃದ್ಧಿಗಾಗಿ । ಅಭಿ ಪ್ರಣೋ ನುಮಃ—ಪೂರ್ಣವಾಗಿ ಆರಾಧಿಸುತ್ತೇವೆ.

॥ ಭಾವಾರ್ಥ ॥

ಮಾಹಾತ್ಮ್ಯದಿಂದ ಅಧಿಕನಾದವನೂ, ನಮ್ಮ ಆಹ್ವಾನವನ್ನು ಕೇಳುವವನೂ ಆದ ಇಂದ್ರನನ್ನು ನಾವು ತ್ರಿವೃದಾದಿಸ್ತೋಮಗಳಿಂದಲೂ ಪೂಜ್ಯವಾದ ಶಸ್ತ್ರಮಂತ್ರಗಳಿಂದಲೂ ಪೂರ್ಣವಾದ ಬಲದ ವೃದ್ಧಿಗಾಗಿ ಆರಾಧಿಸುತ್ತೇವೆ.

## English Translation

We repeatedly glorify with praises and adorations him who is grea with greatness, who hears our invocatioas, (to enhance) his vigour.

॥ ಸಂಹಿತಾಪಾಠಃ ॥

ನ ಯಂ ವಿವಿಕ್ತೋ ರೋದಸೀ ನಾಂತರಿಕ್ಷಾಣಿ ವಜ್ರಿಣಂ ।
ಅಮಾದಿದಸ್ಯ ತಿತ್ವಿಷೇ ಸಮೋಜಸಃ ॥ ೨೪ ॥

॥ ಪದಪಾಠಃ ॥

ನ । ಯಂ । ವಿವಿಕ್ತಃ । ರೋದಸೀ ಇತಿ । ನ । ಅಂತರಿಕ್ಷಾಣಿ । ವಜ್ರಿಣಂ ।
ಅಮಾತ್ । ಇತ್ । ಅಸ್ಯ । ತಿತ್ವಿಷೇ । ಸಂ । ಓಜಸಃ ॥ ೨೪ ॥

॥ ಸಾಯಣಭಾಷ್ಯಂ ॥

ಯಂ ವಜ್ರಿಣಂ ವಜ್ರವಂತಮಿಂದ್ರಂ ರೋದಸೀ ದ್ಯಾವಾಪೃಥಿವ್ಯೌ ನ ವಿವಿಕ್ತಃ ನ ಪೃಥಕ್ಕುರುತಃ ಸ್ವಸವಿಧಾಪಾತ್ಪೃಥಕ್ಕರ್ತುಂ ನ ಶಕ್ನುತಃ । ದ್ಯಾವಾಪೃಥಿವ್ಯೌ ವ್ಯಾಪ್ಯ ಯ ಇಂದ್ರೋ ವರ್ತತೇ ಇತ್ಯರ್ಥಃ ॥ ವಿಚಿರ್ ಪೃಥಗ್ಭಾವೇ॥ ಅಂತರಿಕ್ಷಾಣ್ಯಂತರಾ ಕ್ಷಾಂತಾನಿ ದ್ಯಾವಾಪೃಥಿವ್ಯೋರ್ವರ್ತಮಾನಾನಿ ಗಂಧರ್ವಾದೀನಾಂ ಸ್ಥಾನಾನಿ ಚ ಯಂ ನ ಪೃಥಕ್ಕುರ್ವಂತಿ । ಅಸ್ಯೇಂದ್ರಸ್ಯಾಮಾದಿತ್ । ಅಮತಿ ರುಜತಿ ಶತ್ರೂನನೇನೇತ್ಯಮೋ ಬಲಂ । ಬಲಾದೇವ ತಿತ್ವಿಷೇ । ಸರ್ವಂ ಜಗದ್ದೀಪ್ಯತೇ । ಕಿಮರ್ಥಂ । ಓಜಸೋ ಬಲಸ್ಯ ಸಂಗಮಾಯ ॥ ಯದ್ವಾ । ಓಜಃಶಬ್ದಾದ್ವಿಹಿತಸ್ಯ ವಿನೋ ಬಹುಲಂ ಛಂದಸೀತಿ ಲುಕ್ ॥

ಓಜಸ್ವಿನೋ ಬಲವತೋಽಸ್ಯೇಂದ್ರಸ್ಯೇತಿ ಯೋಜ್ಯಂ । ಸಮಿತ್ಯುಪಸರ್ಗಃ ಸ ತಿತ್ವಿಷ ಇತ್ಯನೇನ ಸಂಬಧ್ಯತೇ ॥

॥ ಪ್ರತಿಪದಾರ್ಥ ॥

ವಜ್ರಿಣಂ—ವಜ್ರಾಯುಧಧಾರಿಯಾದ । ಯಂ—ಯಾವ ಇಂದ್ರನನ್ನು । ರೋದಸೀ—ದ್ಯಾವಾ ಪೃಥಿವಿಗಳು । ನ ವಿವಿಕ್ತಃ—ಬೇರೆ ಮಾಡಲಾರವೋ (ದೂರಮಾಡಲಾರವೋ) । ಅಂತರಿಕ್ಷಾಣಿ—ಅಂತರಿಕ್ಷಗಳೂ । ನ—(ಅವನನ್ನು) ದೂರಮಾಡಿ ಪ್ರತ್ಯೇಕವಾಗಿರಲಾರವೋ ಅಂತಹ । ಓಜಸಃ—ಬಲಶಾಲಿಯಾದ । ಅಸ್ಯ—ಈ ಇಂದ್ರನ । ಅಮಾತ್ ಇತ್—ಬಲದಿಂದಲೇ । ಸಂ ತಿತ್ವಿಷೇ—ಜಗತ್ತೆಲ್ಲವೂ ಪ್ರಕಾಶಿಸುತ್ತದೆ.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಯಾವ ಇಂದ್ರನನ್ನು ದ್ಯಾವಾಪೃಥಿವಿಗಳು ದೂರಮಾಡಿ ತಾವು ಪ್ರತ್ಯೇಕವಾಗಿರಲಾರವೋ ಮತ್ತು ಯಾವನನ್ನು ಅಂತರಿಕ್ಷವೂ ದೂರಮಾಡಿ ಅವನ ಪ್ರಭುತ್ವವನ್ನು ತಪ್ಪಿಸಿಕೊಳ್ಳಲಾರವೋ ಅಂತಹ ಬಲಶಾಲಿಯಾದ ಈ ಇಂದ್ರನ ಬಲದಿಂದಲೇ ಜಗತ್ತೆಲ್ಲವೂ ಪ್ರಕಾಶಿಸುತ್ತದೆ.

## English Translation

The thunderer, from whom neither the heaven and earth nor the firmament are separated: from the strength of whom, the mighty one, (the world) derives lustre.

॥ ಸಂಹಿತಾಪಾಠಃ ॥

ಯದಿಂದ್ರ ಪೃತನಾಜ್ಯೇ ದೇವಾಸ್ತ್ವಾ ದಧಿರೇ ಪುರಃ ।

ಆದಿತ್ತೇ ಹರ್ಯತಾ ಹರೀ ವವಕ್ಷತುಃ ॥ ೨೮ ॥

॥ ಪದಪಾಠಃ ॥

ಯತ್ । ಇಂದ್ರ । ಪೃತನಾಜ್ಯೇ । ದೇವಾಃ । ತ್ವಾ । ದಧಿರೇ । ಪುರಃ ।

ಆತ್ । ಇತ್ । ತೇ । ಹರ್ಯತಾ । ಹರೀ ಇತಿ । ವವಕ್ಷತುಃ ॥ ೨೫ ॥

॥ ಸಾಯಣಭಾಷ್ಯಂ ॥

ಷೋಡಶಶಸ್ತ್ರೇ ಯದಿಂದ್ರ ಪೃತನಾಜ್ಯ ಇತಿ ತೃಚಃ । ಸೂತ್ರ್ಯತೇ ಹಿ । ಯದಿಂದ್ರ ಪೃತನಾಜ್ಯೇಽಯಂ ತೇ ಅಸ್ತು ಹರ್ಯತ ಇತ್ಯಾಷ್ಟಿಹಬಾರ್ಹತೌ ತೃಚೌ । ಆ. ೬—೨. । ಇತಿ ॥

ಹೇ ಇಂದ್ರ ಪೃತನಾಜ್ಯೇ । ಸಂಗ್ರಾಮನಾಮೈತತ್ ॥ ಪೃತನಾಃ ಸೇನಾ ಅಜಂತಿ ಗಚ್ಛಂತ್ಯಸ್ಮಿನ್ನಿತಿ

ವಾ ಪೃತನಾ ಜೇಯತೇಽತ್ರೇತಿ ವಾ ಪೃತನಾಜ್ಯಂ ಸಂಗ್ರಾಮಃ ॥ ತತ್ರ ತ್ವಾ ತ್ವಾಂ ಯದ್ಯದಾ ದೇವಾಃ ಪುರೋ ದಧಿರೇ ವೃತ್ರಹನನಾಯ ಪುರತೋಽಧಾರಯನ್ ಆದಿದನಂತರಮೇವ ಹರ್ಯತಾ ಹರ್ಯತೌ ಕಾಂತೌ ॥ ಹರ್ಯ ಗತಿಕಾಂತ್ಯೋಃ । ಭೃಮೃದೃಶೀತ್ಯಾದಿನಾಽಣಾದಿಕೋಽತಚ್‌ಪ್ರತ್ಯಯಃ ॥ ಈದೃಶೌ ಹರೀ ಅಶ್ವೌ ತೇ ತ್ವಾಂ ವವಕ್ಷತುಃ । ಅವಹತಾಂ ॥ ೫ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಪೃತನಾಜ್ಯೇ—ಯುದ್ಧದಲ್ಲಿ । ತ್ವಾ—ನಿನ್ನನ್ನು । ಯತ್—ಯಾವಾಗ . ದೇವಾಃ—ದೇವತೆಗಳು । ಪುರಃ ದಧಿರೇ—ಮುಂದಾಳಾಗಿ ಇರಿಸಿದರೋ । ಆದಿತ್—ಆ ಒಡನೆಯೇ । ಹರ್ಯತಾ-ಕಾಂತಿಯುತವಾದ । ಹರೀ—ನಿನ್ನ ಅಶ್ವಗಳು । ತೇ—ನಿನ್ನನ್ನು । ವವಕ್ಷತುಃ—ವಹಿಸಿದವು.

॥ ಭಾವಾರ್ಥ ॥

ಎಲೈ ಇಂದ್ರನೇ, ಯುದ್ಧದಲ್ಲಿ ನಿನ್ನನ್ನು ದೇವತೆಗಳು ಯಾವಾಗ ಮುಂದಾಳಾಗಿ ಇರಿಸಿದರೋ ಆ ಒಡನೆಯೇ ಕಾಂತಿಯುತವಾದ ನಿನ್ನ ಅಶ್ವಗಳು ನಿನ್ನನ್ನೇ ವಹಿಸಿದವು.

## English Translation

When, Indra, the gods placed you foremost in the battle, then your beloved horses bore you.

॥ ವಿಶೇಷವಿಷಯಗಳು ॥

ಷೋಡಶಿಶಸ್ತ್ರಮಂತ್ರಗಳಲ್ಲಿ ಯದಿಂದ್ರ ಪೃತನಾಜ್ಯೇ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಉಷ್ಣಿಕ್ ಛಂದಸ್ಸಿನ ಋಕ್ಕುಗಳಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ- ಯದಿಂದ್ರ ಪೃತನಾಜ್ಯೇಽಯಂ ತೇ ಅಸ್ತು ಹರ್ಯತ ಇತ್ಯೌಷ್ಣಿಹಬಾರ್ಹತೌ ತೃಚೌ ಎಂಬ ಸೂತ್ರದಿಂದ (ಆ. ೬-೨) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಯದಾ ವೃತ್ರಂ ನದೀವೃತಂ ಶವಸಾ ವಜ್ರಿನ್ನವಧೀಃ ।
ಆದಿತ್ತೇ ಹರ್ಯತಾ ಹರೀ ವವಕ್ಷತುಃ ॥ ೨೬ ॥

॥ ಪದಪಾಠಃ ॥

ಯದಾ । ವೃತ್ರಂ । ನದೀಽವೃತಂ । ಶವಸಾ । ವಜ್ರಿನ್ । ಅವಧೀಃ ।
ಆತ್ । ಇತ್ । ತೇ । ಹರ್ಯತಾ । ಹರೀ ಇತಿ । ವವಕ್ಷತುಃ ॥ ೨೬ ॥

॥ ಸಾಯಣಭಾಷ್ಯಂ ॥

ಹೇ ವಜ್ರಿನ್ ವಜ್ರವನ್ನಿಂದ್ರ ನದೀವೃತಂ । ನದನಾನ್ನದ್ಯ ಆಪಃ । ಶ್ರೂಯತೇ ಹಿ । ಅಹಾವನದತಾ ಹತೇ ತಸ್ಮಾದಾ ನದ್ಯೋ ನಾಮ ಸ್ಥ । ತೈ. ಸಂ. ೫-೬-೧-೨. । ಇತಿ । ತಾ ಆವೃಣ್ವಂತಂ ವೃತ್ರಮುವರ್ಷಣಶೀಲಂ ಮೇಘಮಸುರಂ ವಾ ಯದಾ ಯಸ್ಮಿನ್ಕಾಲೇ ಶವಸಾ ಬಲೇನಾವಧೀಃ ಅಹಿಂಸೀಃ। ಶಿಷ್ಟಂ ಸಮಾನಂ ॥

॥ ಪ್ರತಿಪದಾರ್ಥ ॥

ವಜ್ರಿನ್—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । ನದೀವೃತಂ—ಪ್ರವಹಿಸುವ ನದಿಗಳನ್ನು ಆವರಿಸಿ ಅಡ್ಡಲಾಗಿ ಬಿದ್ದಿದ್ದ । ವೃತ್ರಂ—ವೃತ್ರಾಸುರನನ್ನು । ಯದಾ-ಯಾವಾಗ । ಶವಸಾ—ನಿನ್ನ ಬಲದಿಂದ । ಅವಧೀಃ—ಕೊಂದೆಯೋ । ಆದಿತ್—ಆ ಒಡನೆಯೇ । ತೇ—ನಿನ್ನನ್ನು । ಹರ್ಯತಾ—ಕಾಂತಿಯುತವಾದ । ಹರೀ—ನಿನ್ನ ಅಶ್ವಗಳು । ವವಕ್ಷತುಃ—ವಹಿಸಿದವು

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಪ್ರವಹಿಸುವ ನದಿಗಳನ್ನು ತಡೆಗಟ್ಟಿ ಆವರಿಸಿ ಬಿದ್ದಿದ್ದ ವೃತ್ರಾಸುರನನ್ನು ನೀನು ನಿನ್ನ ಬಲದಿಂದ ಯಾವಾಗ ಕೊಂದೆಯೋ ಆ ಒಡನೆಯೇ, ನಿನ್ನನ್ನು ಕಾಂತಿಯುತವಾದ ಅಶ್ವಗಳು ವಹಿಸಿದವು.

## English Translation

When, thunderer, by your strength you slew Vritra, the obstructer of the waters, then your beloved horses bore you.

॥ ಸಂಹಿತಾಪಾಠಃ ॥

ಯದಾ ತೇ ವಿಷ್ಣುರೋಜಸಾ ತ್ರೀಣಿ ಪದಾ ವಿಚಕ್ರಮೇ ।
ಆದಿತ್ತೇ ಹರ್ಯತಾ ಹರೀ ವವಕ್ಷತುಃ ॥ ೨೭ ॥

॥ ಪದಪಾಠಃ ॥

ಯದಾ । ತೇ । ವಿಷ್ಣುಃ । ಓಜಸಾ । ತ್ರೀಣಿ । ಪದಾ । ವಿಽಚಕ್ರಮೇ ।
ಆತ್ । ಇತ್ । ತೇ । ಹರ್ಯತಾ । ಹರೀ ಇತಿ । ವವಕ್ಷತುಃ ॥ ೨೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವಾನುಜೋ ವಿಷ್ಣುರ್ವ್ಯಾಪನಶೀಲೋ ದೇವ ಓಜಸಾ ಬಲೇನ ಯದಾ ಯಸ್ಮಿನ್ಕಾಲೇ ತ್ರೀಣಿ ಪದಾನಿ ಪದತ್ರಯರೂಪೇಣ ತ್ರೀಁಲ್ಲೋಕಾನ್ ವಿಚಕ್ರಮೇ ವಿಕ್ರಾಂತವಾನ್ ಪರಿಚ್ಛಿನ್ನವಾನ್ । ಗತಮನ್ಯತ್ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ), ತೇ—ನಿನ್ನ ಅನುಜನಾದ । ವಿಷ್ಣುಃ—ವಿಷ್ಣುವು । ಓಜಸಾ—ತನ್ನ ಪರಾಕ್ರಮದಿಂದ । ಯದಾ—ಯಾವಾಗ । ತ್ರೀಣಿ—ತನ್ನ ಮೂರು ಪಾದಗಳನ್ನು । ವಿಚಕ್ರಮೇ—(ಮೂರು ಲೋಕಗಳಿಗೂ ಹರಡಿ ಆಕ್ರಮಿಸಿದನೋ । ಆದಿತ್—ಆ ಒಡನೆಯೇ । ಹರ್ಯತಾ-ಕಾಂತಿಯುತವಾದ । ಹರೀ—ನಿನ್ನ ಅಶ್ವಗಳು । ತೇ—ನಿನ್ನನ್ನು । ವವಕ್ಷತುಃ—ವಹಿಸಿದವು.

। ಭಾವಾರ್ಥ ।

ಎಲೈ ಇಂದ್ರನೇ, ನಿನ್ನ ಅನುಜನಾದ ವಿಷ್ಣುವು ತನ್ನ ಪರಾಕ್ರಮದಿಂದ ಯಾವಾಗ ತನ್ನ ಮೂರು ಪಾದಗಳನ್ನು ಮೂರು ಲೋಕಗಳಿಗೂ ಹರಡಿ ಮೂರು ಲೋಕಗಳನ್ನು ಆಕ್ರಮಿಸಿದನೋ ಆ ಒಡನೆಯೇ ಕಾಂತಿಯುತವಾದ ನಿನ್ನ ಅಶ್ವಗಳು ನಿನ್ನನ್ನು ವಹಿಸಿದವು.

English Translation

When your (younger brother) Vishnu by (his) strength stepped his three paces, then verily your beloved horses bore you.

॥ ಸಂಹಿತಾಪಾಠಃ ॥

ಯದಾ ತೇ ಹರ್ಯತಾ ಹರೀ ವಾವೃಧಾತೇ ದಿವೇದಿವೇ ।
ಆದಿತ್ತೇ ವಿಶ್ವಾ ಭುವನಾನಿ ಯೇಮಿರೇ ॥ ೨೮ ॥

॥ ಪದಪಾಠಃ ॥

ಯದಾ । ತೇ । ಹರ್ಯತಾ । ಹರೀ ಇತಿ । ವವೃಧಾತೇ ಇತಿ । ದಿವೇಽದಿವೇ ।
ಆತ್ । ಇತ್ । ತೇ । ವಿಶ್ವಾ । ಭುವನಾನಿ । ಯೇಮಿರೇ ॥ ೨೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವದೀಯೌ ಹರ್ಯತಾ ಹರ್ಯತೌ ಕಾಂತೌ ಹರೀ ಹರಣಶೀಲಾವಶ್ವೌ ದಿವೇ ದಿವೇ,

ಪ್ರತಿದಿವಸಂ ಯದಾ ಯಸ್ಮಿನ್ಕಾಲೇ ವಾವೃಧಾತೇ ಪ್ರವೃದ್ಧೌ ಬಭೂವತುಃ ಅದಿದನಂತರಮೇವ ತ್ವಯಾ ವಿಶ್ವಾ ವಿಶ್ವಾನಿ ಸರ್ವಾಣಿ ಭುವನಾನಿ ಭೂತಜಾತಾನಿ ಯೇಮಿರೇ | ನಿಯಮ್ಯಂತೇ ಸ್ಮ ||

। ಪ್ರತಿಪದಾರ್ಥ ।

(ಎಲೈ ಇಂದ್ರನೇ) ಹರ್ಯತಾ—ತಮ್ಮ ಕಾಂತಿಯಿಂದ ಆಕರ್ಷಕವಾದ ರೂಪವುಳ್ಳ | ತೇ—ನಿನ್ನ | ಹರೀ—ಅಶ್ವಗಳು | ದಿವೇದಿವೇ—ಪ್ರತಿದಿವಸವೂ | ಯದಾ—ಯಾವ ಕಾಲದಲ್ಲಿ | ವಾವೃಧಾತೇ—ವೃದ್ಧಿಯನ್ನು ಹೊಂದುವುವೋ | ಆದಿತ್—ಆ ಒಡನೆಯೇ | ವಿಶ್ವಾ—ಸಮಸ್ತವಾದ | ಭುವನಾನಿ—ಭೂತಜಾತಗಳೂ | ತೇ—ನಿನ್ನ | ಯೇಮಿರೇ—ನಿನ್ನ ನಿಯಮಕ್ಕೆ ಒಳಪಡುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ತಮ್ಮ ಕಾಂತಿಯಿಂದ ಆಕರ್ಷಕವಾದ ರೂಪವುಳ್ಳ ನಿನ್ನ ಅಶ್ವಗಳು ಪ್ರತಿದಿವಸವೂ ಯಾವ ಕಾಲದಲ್ಲಿ ವೃದ್ಧಿಯನ್ನು ಹೊಂದುವುವೋ, ಆ ಒಡನೆಯೇ, ಸಮಸ್ತವಾದ ಭೂತಜಾತಗಳೂ ನಿನ್ನ ನಿಯಮನಕ್ಕೆ ಒಳಪಡುತ್ತವೆ.

## English Translation

When your beloved horses had augmented day by day, then all existent beings were subject unto you.

। ಸಂಹಿತಾಪಾಠಃ ।

ಯದಾ ತೇ ಮಾರುತೀರ್ವಿಶಸ್ತುಭ್ಯಮಿಂದ್ರ ನಿಯೇಮಿರೇ ।
ಆದಿತ್ತೇ ವಿಶ್ವಾ ಭುವನಾನಿ ಯೇಮಿರೇ ॥ ೨೯ ॥

॥ ಪದಪಾಠಃ ॥

ಯದಾ । ತೇ । ಮಾರುತೀಃ । ವಿಶಃ । ತುಭ್ಯಂ । ಇಂದ್ರ । ನಿಽಯೇಮಿರೇ ।
ಆತ್ । ಇತ್ । ತೇ । ವಿಶ್ವಾ । ಭುವನಾನಿ । ಯೇಮಿರೇ ॥ ೨೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತುಭ್ಯಂ ತ್ವದರ್ಥಂ ಮಾರುತೀರ್ಮಾರುತ್ಯೋ ಮರುದ್ರೂಪಾಸ್ತೇ ತ್ವದೀಯಾ ವಿಶಃ ಪ್ರಜಾ ಯದಾ ಯಸ್ಮಿನ್ಕಾಲೇ ನಿಯೇಮಿರೇ ನಿಯಚ್ಛಂತಿ ಭೂತಜಾತಾನಿ| ಅನ್ಯದ್ಗತಂ ||

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತುಭ್ಯಂ—ನಿನಗಾಗಿ । ಮಾರುತೀಃ—ಮರುದ್ದೇವತೆಗಳೆಂಬ । ತೇ—ನಿನ್ನ । ವಿಶಃ—ಪ್ರಜೆಗಳು । ಯದಾ—ಯಾವಾಗ । ನಿಯೇಮಿರೇ—ಜಗತ್ತುಗಳನ್ನು ನಿಯಮಿಸುವರೋ । ಆದಿತ್—ಆ ಒಡನೆಯೇ । ವಿಶ್ವಾ—ಸಮಸ್ತವಾದ । ಭುವನಾನಿ—ಭೂತಜಾತಗಳೂ । ತೇ—ನಿನ್ನ । ಯೇಮಿರೇ—ನಿಯಮನಕ್ಕೆ ಒಳಪಡುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಮರುತ್ತುಗಳ ರೂಪದ ನಿನ್ನ ಪ್ರಜೆಗಳು ನಿನಗಾಗಿ ಯಾವಾಗ ಜಗತ್ತುಗಳನ್ನು ನಿಯಮಿಸುವರೋ ಆ ಒಡನೆಯೇ ಸಮಸ್ತ ಭೂತಜಾತಗಳೂ ನಿನ್ನ ಅಧೀನಕ್ಕೆ ಒಳಪಡುತ್ತವೆ.

## English Translation

When Indra, your people, the Maruts, were regulated by you, then all existent beings were subject unto you.

॥ ಸಂಹಿತಾಪಾಠಃ ॥

ಯದಾ ಸೂರ್ಯಮಮುಂ ದಿವಿ ಶುಕ್ರಂ ಜ್ಯೋತಿರಧಾರಯಃ ।
ಆದಿತ್ತೇ ವಿಶ್ವಾ ಭುವನಾನಿ ಯೇಮಿರೇ ॥ ೩೦ ॥

॥ ಪದಪಾಠಃ ॥

ಯದಾ । ಸೂರ್ಯಂ । ಅಮುಂ । ದಿವಿ । ಶುಕ್ರಂ । ಜ್ಯೋತಿಃ । ಅಧಾರಯಃ ।
ಆತ್ । ಇತ್ । ತೇ । ವಿಶ್ವಾ । ಭುವನಾನಿ । ಯೇಮಿರೇ ॥ ೩೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಅಮುಂ ವಿಪ್ರಕೃಷ್ಟಂ ಶುಕ್ರಂ ನಿರ್ಮಲಂ ಜ್ಯೋತಿರ್ದ್ಯೋತಮಾನಂ ಸೂರ್ಯಂ ಸರ್ವಸ್ಯ ಪ್ರೇರಕಂ ಶೋಭನವೀರ್ಯಂ ವಾದಿತ್ಯಂ ದಿವಿ ದ್ಯುಲೋಕೇ ಜಗತಃ ಪ್ರಕಾಶನಾಯ ಯದಾ ಯಸ್ಮಿನ್ಕಾಲೇಽಧಾರಯಃ ಧಾರಿತವಾನಸಿ । ಸಮಾನಮನ್ಯತ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಅಮುಂ—ಎಲ್ಲರಿಗೂ ಗೋಚರನಾಗಿರುವವನೂ । ಶುಕ್ರಂ—ನಿರ್ಮಲನೂ । ಜ್ಯೋತಿಃ—ಪ್ರಕಾಶಮಾನನೂ ಆದ । ಸೂರ್ಯಂ—ಸೂರ್ಯನನ್ನು । ದಿವಿ—ದ್ಯುಲೋಕದಲ್ಲಿ । ಯದಾ—ಯಾವಾಗ । ಅಧಾ-

ಶಯಃ—ಸ್ಥಾಪಿಸಿದೆಯೋ । ಆದಿತ್—ಆ ಒಡನೆಯೇ । ವಿಶ್ವಾ—ಸಮಸ್ತವಾದ । ಭುವನಾನಿ—ಭೂತ ಜಾತಗಳೂ । ತೇ—ನಿನ್ನ । ಯೇಮಿರೇ—ನಿಯಮಕ್ಕೊಳಪಡುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಎಲ್ಲರಿಗೂ ಗೋಚರನಾಗಿರುವವನೂ ನಿರ್ಮಲನೂ, ಪ್ರಕಾಶಮಾನನೂ ಆದ ಸೂರ್ಯನನ್ನು ದ್ಯುಲೋಕದಲ್ಲಿ ನೀನು ಯಾವಾಗ ಸ್ಥಾಪಿಸಿದೆಯೋ ಆ ಒಡನೆಯೇ । ಸಮಸ್ತವಾದ ಭೂತಜಾತಗಳೂ ನಿನ್ನ ನಿಯಮನ ಕ್ಕೊಳಪಡುತ್ತವೆ.

## English Translation

When you had placed yonder pure light, the sun, in the sky, then all existing beings were subject unto you.

॥ ಸಂಹಿತಾಪಾಠಃ ॥

ಇಮಾಂ ತ ಇಂದ್ರ ಸುಷ್ಟುತಿಂ ವಿಪ್ರ ಇಯರ್ತಿ ಧೀತಿಭಿಃ ।

ಜಾಮಿಂ ಪದೇವ ಪಿಪ್ರತೀಂ ಪ್ರಾಧ್ವರೇ ॥ ೩೧ ॥

॥ ಪದಪಾಠಃ ॥

ಇಮಾಂ । ತೇ । ಇಂದ್ರ । ಸುऽಸ್ತುತಿಂ । ವಿಪ್ರಃ । ಇಯರ್ತಿ । ಧೀತಿऽಭಿಃ ।

ಜಾಮಿಂ । ಪದಾऽಇವ । ಪಿಪ್ರತೀಂ । ಪ್ರ । ಅಧ್ವರೇ ॥ ೩೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಿಪ್ರೋ ಮೇಧಾವೀ ಸ್ತೋತಾಧ್ವರೇ ಯಜ್ಞ ಇಮಾಂ ಪುರೋವರ್ತಿನೀಂ ಪಿಪ್ರತೀಂ ಪೂಜಯಂತೀಂ ಪ್ರೀಣಯಂತೀಂ ವಾ ಸುಷ್ಟುತಿಂ ಶೋಭನಾಂ ಸ್ತುತಿಂ ಧೀತಿಭಿಃ ಕರ್ಮಭಿಃ ಪರಿಚರಣೈಃ ಸಾರ್ಧಂ ತೇ ತ್ವಾಂ ಪ್ರೇರಯತಿ । ಪ್ರಗಮಯತಿ । ಜಾಮಿಂ ಪದೇವ ಯಥಾ ಬಂಧುಭೂತಂ ಪುರುಷ-ಮುತ್ಕೃಷ್ಟಾನಿ ಪದಾನಿ ಸ್ಥಾನಾನಿ ಪ್ರಾಪಯತಿ ತದ್ವತ್ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ವಿಪ್ರಃ—ಮೇಧಾವಿಯಾದ ಸ್ತುತಿಕರ್ತನು । ಜಾಮಿಂ—ತನ್ನ ಬಂಧುವನ್ನು । ಪದೇವ—ಅತ್ಯುತ್ಕೃಷ್ಟವಾದ ಸ್ಥಾನದಲ್ಲಿರುಸುವಂತೆ । ಅಧ್ವರೇ—ಯಜ್ಞದಲ್ಲಿ । ಇಮಾಂ—ಈಗ ಅರ್ಪಿತವಾಗು ವುದೂ । ಪಿಪ್ರತೀಂ—ಪ್ರೀತಿದಾಯಕವಾದುದೂ ಆದ । ಸುಷ್ಟುತಿಂ—ಉತ್ತಮವಾದ ಸ್ತುತಿಯನ್ನು । ಧೀತಿಭಿಃ—ಉಪಚಾರ ಕರ್ಮಗಳೊಂದಿಗೆ ಸೇರಿಸಿ । ತೇ—ನಿನಗೆ । ಪ್ರ ಇಯರ್ತಿ—ಅತಿಶಯವಾಗಿ ಅರ್ಪಿಸುತ್ತಾನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಬಂಧುವನ್ನು ಅತ್ಯುತ್ಕೃಷ್ಟವಾದ ಸ್ಥಾನದಲ್ಲಿರಿಸುವಂತೆ ಮೇಧಾವಿಯಾದ ಸ್ತುತಿಕರ್ತನು ಯಜ್ಞದಲ್ಲಿ ಈಗ ಅರ್ಪಿತವಾಗಿರುವುದೂ, ಪ್ರೀತಿದಾಯಕವಾದುದೂ ಆದ ಉತ್ತಮವಾದ ಸ್ತುತಿಯನ್ನು ತನ್ನ ಉಪಚಾರ ಕರ್ಮಗಳೊಂದಿಗೆ ಸೇರಿಸಿ ನಿನಗೆ ಉತ್ತಮರೀತಿಯಲ್ಲಿ ಅರ್ಪಿಸುತ್ತಾನೆ.

## English Translation

The wise (worshipper), Indra, offers you this gratifying sincere praise along with pious rites at the sacrifice, as (a man places) a kinsman in (a prominent) position.

॥ ಸಂಹಿತಾಪಾಠಃ ॥

ಯದಸ್ಯ ಧಾಮನಿ ಪ್ರಿಯೇ ಸಮೀಚೀನಾಸೋ ಅಸ್ವರನ್ ।
ನಾಭಾ ಯಜ್ಞಸ್ಯ ದೋಹನಾ ಪ್ರಾಧ್ವರೇ ॥ ೩೨ ॥

॥ ಪದಪಾಠಃ ॥

ಯತ್ । ಅಸ್ಯ । ಧಾಮನಿ । ಪ್ರಿಯೇ । ಸಂऽಈಚೀನಾಸಃ । ಅಸ್ವರನ್ ।
ನಾಭಾ । ಯಜ್ಞಸ್ಯ । ದೋಹನಾ । ಪ್ರ । ಅಧ್ವರೇ ॥ ೩೨ ॥

॥ ಸಾಯಣಭಾಷ್ಯಂ ॥

ಅಧ್ವರೇ ಯಜ್ಞೇಽಸ್ಯೇಂದ್ರಸ್ಯ ಧಾಮನಿ ಸ್ಥಾನೇ ತೇಜಸಿ ವಾ ಪ್ರಿಯೇ ಪ್ರೀಣಯಿತವ್ಯೇ ಸತಿ ಸಮೀಚೀನಾಸಃ ಸಂಗತಾಃ ಸ್ತೋತಾರೋ ಯದ್ಯದಾ ಪ್ರಾಸ್ವರನ್ ಪ್ರಕರ್ಷೇಣಾಸ್ತುವನ್ ॥ ಸ್ವೃ ಶಬ್ದೋಪತಾಪಯೋಃ ॥ ಅಯಾಳಿಂದ್ರಸ್ಯ ಪ್ರಿಯಾ ಧಾಮಾನೀತಿ ಹಿ ನಿಗಮಃ । ಕಸ್ಮಿನ್ದೇಶೇ । ನಾಭಾ ನಾಭೌ ಪೃಥಿವ್ಯಾ ನಾಭಿಸ್ಥಾನೀಯೇ ಮಧ್ಯೇ ಯಜ್ಞಸ್ಯ ಯಜನಸಾಧನಸ್ಯ ಸೋಮಸ್ಯ ದೋಹನಾ ದೋಹನೇ ದೋಹನಾಧಿಕಾರಣೇಽಭಿಷವಸ್ಥಾನೇ । ವೇದ್ಯಾಮಿತ್ಯರ್ಥಃ । ತದಾನೀಂ ಧನಂ ಪ್ರದೇಹೀ- ತ್ಯುತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

ಅಧ್ವರೇ—ಯಜ್ಞದಲ್ಲಿ । ಅಸ್ಯ—ಈ ಇಂದ್ರನ । ಧಾಮನಿ—ಸ್ಥಾನದಲ್ಲಿ । ಪ್ರಿಯೇ—ಪ್ರಿಯವನ್ನುಂಟು ಮಾಡುವ ನಿಮಿತ್ತವಾಗಿಯೂ । ನಾಭಾ—ಪೃಥ್ವಿಯ ನಾಭಿರೂಪವಾದ ಯಜ್ಞವೇದಿಯಲ್ಲಿ । ಯಜ್ಞಸ್ಯ—ಯಜ್ಞ ಸಾಧನವಾದ ಸೋಮದ । ದೋಹನಾ—ಅರ್ಪಣದ ನಿಮಿತ್ತವಾಗಿಯೂ । ಸಮೀಚೀನಾಸಃ—ಒಟ್ಟಿಗೆ ಯುಕ್ತ

ವಾಗಿರುವ ಸ್ತೋತೃಗಳು । ಯತ್—ಯಾವಾಗ । ಪ್ರ ಅಸ್ವರನ್—ಅತಿಶಯವಾಗಿ ಸ್ತುತಿಸಿದರೋ (ಆಗ) (ನಮಗೆ ಇಂದ್ರನು ಧನವನ್ನು ಕೊಡಲಿ).

। ಭಾವಾರ್ಥ ।

ಇಂದ್ರನು ಯಜ್ಞದಲ್ಲಿ ತನ್ನ ಸ್ಥಾನವನ್ನು ಆಕ್ರಮಿಸಿದಾಗ ಅವನಿಗೆ ಪ್ರಿಯವನ್ನುಂಟುಮಾಡುವ ನಿಮಿತ್ತವಾಗಿಯೂ, ಪೃಥ್ವಿಗೆ ನಾಭಿರೂಪವಾದ ಯಜ್ಞವೇದಿಯಲ್ಲಿ ಯಜ್ಞಸಾಧನವಾದ ಸೋಮದ ಅರ್ಪಣದ ನಿಮಿತ್ತವಾಗಿಯೂ ಒಟ್ಟಿಗೆ ಸೇರಿರುವ ಸ್ತೋತೃಗಳು ಯಾವಾಗ ಅತಿಶಯವಾಗಿ ಸ್ತುತಿಸುವರೋ ಆಗ ನಮಗೆ ಇಂದ್ರನು ಧನವನ್ನು ಕೊಡಲಿ.

## English Translation

When the congregated (worshippers) praise him aloud in a place that pleases (him) on the navel (of the earth), in the spot where the libation is effused at the sacrifice, (then).

। ಸಂಹಿತಾಪಾಠಃ ।

ಸುವೀರ್ಯಂ ಸ್ವಶ್ವ್ಯಂ ಸುಗವ್ಯಮಿಂದ್ರ ದದ್ಧಿ ನಃ ।
ಹೋತೇವ ಪೂರ್ವಚಿತ್ತಯೇ ಪ್ರಾಧ್ವರೇ ॥ ೩೩ ॥

॥ ಪದಪಾಠಃ ॥

ಸುऽವೀರ್ಯಂ । ಸುऽಅಶ್ವ್ಯಂ । ಸುऽಗವ್ಯಂ । ಇಂದ್ರ । ದದ್ಧಿ । ನಃ ।
ಹೋತಾऽಇವ । ಪೂರ್ವऽಚಿತ್ತಯೇ । ಪ್ರ । ಅಧ್ವರೇ ॥ ೩೩ ॥

। ಸಾಯಣಭಾಷ್ಯಂ ।

ಸುವೀರ್ಯಂ ಶೋಭನವೀರ್ಯೋಪೇತಂ ಸ್ವಶ್ವ್ಯಂ ಶೋಭನೇನಾಶ್ವಸಂಘೇನ ಚ ಯುಕ್ತಂ ಸುಗವ್ಯಂ ಶೋಭನಗೋಸಂಘಯುಕ್ತಂ ಚ ಧನಂ ಹೇ ಇಂದ್ರ ನೋऽಸ್ಮಭ್ಯಂ ದದ್ಧಿ । ದದಸ್ವ ॥ ದದ ದಾನೇ । ಅನುದಾತ್ತೇತ್ । ವ್ಯತ್ಯಯೇನ ಪರಸ್ಮೈಪದಂ । ಛಾಂದಸಃ ಶಪೋ ಲುಕ್ ॥ ಅಹಂ ॥ ಚಾಧ್ವರೇ ಯಾಗೇ ಹೋತೇವ ಯಥಾ ಮಾನುಷೋ ಹೋತರ್ತ್ವಿಕ್ ಸ್ತೌತಿ ಏವಮೇವ ಪೂರ್ವ-ಚಿತ್ತಯೇ ಪೂರ್ವಪ್ರಜ್ಞಾನಾಯಾನ್ಯೇಭ್ಯಃ ಸ್ತೋತೃಭ್ಯಃ ಪೂರ್ವಮೇವಾಸ್ಮತ್ಸ್ತೋತ್ರಪರಿಜ್ಞಾನಾಯ ಪ್ರಾಶಂಸಿಷಮಿತಿ ಶೇಷಃ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಅಧ್ವರೇ**—ಯಜ್ಞದಲ್ಲಿ । **ಹೋತಾಇವ**—ಹೋತೃವು ನಿನ್ನನ್ನು ಸ್ತುತಿಸುವಂತೆ । **ಪೂರ್ವಚಿತ್ತಯೇ**—ಇತರರ ಸ್ತುತಿಗಳನ್ನು ನೀನು ಅರಿಯುವುದಕ್ಕೆ ಮೊದಲೇ ನಿನಗೆ ತಿಳಿಯುವಂತೆ ಮಾಡಲು । **ಪ್ರ**—ಅತಿಶಯವಾಗಿ ಅರ್ಪಿಸುತ್ತೇನೆ । **ನಃ**—ನಮಗೆ । **ಸುವೀರ್ಯಂ**—ಉತ್ತಮವಾದ ವೀರ್ಯಯುಕ್ತವಾದುದೂ । **ಸ್ವಶ್ವ್ಯಂ**—ಉತ್ತಮವಾದ ಅಶ್ವಯುಕ್ತವಾದುದೂ । **ಸುಗವ್ಯಂ**—ಶ್ರೇಷ್ಠವಾದ ಗೋವುಗಳಿಂದ ಕೂಡಿದುದೂ ಆದ ಧನವನ್ನು । **ದದ್ಧಿ**—ಅನುಗ್ರಹಿಸಿಕೊಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಜ್ಞದಲ್ಲಿ ಹೋತೃವು ನಿನ್ನನ್ನು ಸ್ತುತಿಸುವಂತೆ ಇತರರ ಸ್ತುತಿಗಳನ್ನು ನೀನು ಅರಿಯುವುದಕ್ಕೆ ಮೊದಲೇ ನನ್ನ ಸ್ತುತಿಯು ನಿನಗೆ ತಿಳಿಯುವಂತೆ ಮಾಡಲು ಅತಿಶಯವಾಗಿ ಅರ್ಪಿಸುತ್ತೇನೆ. ನಮಗೆ ಉತ್ತಮವಾದ ವೀರ್ಯಯುಕ್ತವಾದುದೂ, ಅಶ್ವಯುಕ್ತವಾದುದೂ, ಶ್ರೇಷ್ಠವಾದ ಗೋವುಗಳಿಂದ ಕೂಡಿದುದೂ ಆದ ಧನವನ್ನು ಅನುಗ್ರಹಿಸಿಕೊಡು.

English Translation

Bestow upon us, Indra, (wealth) comprising worthy male offspring, excellent horses, and good cattle: like the ministrant priest (I worship you) at the sacrifice, (to secure) your prior consideration.



## ಹದಿಮೂರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ತೃತೀಯೋಽನುವಾಕೇಽಷ್ಟ ಸೂಕ್ತಾನಿ । ತತ್ರೇಂದ್ರಃ ಸುತೇಷ್ವಿತಿ ತ್ರಯಸ್ತ್ರಿಂಶದೃಚಂ ಪ್ರಥಮಂ ಸೂಕ್ತಂ ಕಾಣ್ವಸ್ಯ ನಾರದಸ್ಯಾರ್ಷಮೌಷ್ಣಿಹಮೈಂದ್ರಂ । ತಥಾ ಚಾನುಕ್ರಾಂತಂ । ಇಂದ್ರಃ ಸುತೇಷು ನಾರದ ಇತಿ ॥ ಮಹಾವ್ರತೇ ನಿಷ್ಕೇವಲ್ಯ ಔಷ್ಣಿಹತೃಚಾಶೀತೌ ಪೂರ್ವಸೂಕ್ತೇನ ಸಹೋಕ್ತೋ ವಿನಿಯೋಗಃ ॥ ತೃತೀಯೇ ಪರ್ಯಾಯೇಽಚ್ಛಾವಾಕಶಸ್ತ್ರ ಇಂದ್ರಃ ಸುತೇಷ್ವಿತಿ ತೃಚಃ ಸ್ತೋತ್ರಿಯಃ । ಸೂತ್ರ್ಯತೇ ಹಿ । ಇಂದ್ರಃ ಸುತೇಷು ಸೋಮೇಷು ಯ ಇಂದ್ರ ಸೋಮಪಾತಮಃ । ಆ ೬-೪ । ಇತಿ ॥

ಅನುವಾದವು—ಎಂಟನೆಯ ಮಂಡಲದ ಮೂರನೆಯ ಅನುವಾಕದಲ್ಲಿ ಎಂಟು ಸೂಕ್ತಗಳಿರುವವು-ಅವುಗಳಲ್ಲಿ ಇಂದ್ರಃ ಸುತೇಷು ಎಂಬ ಸೂಕ್ತವು ಮೊದಲನೆಯದು. ಇದರಲ್ಲಿ ಮೂವತ್ತಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರೋದ್ಭವನಾದ ನಾರದನೆಂಬುವನು ಋಷಿಯು; ಇಂದ್ರನು ದೇವತೆಯು; ಉಷ್ಣಿಕ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಇಂದ್ರಃ ಸುತೇಷು ನಾರದಃ ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯ ಶಸ್ತ್ರಮಂತ್ರಗಳನ್ನು ಪಠಿಸುವಾಗ ಉಷ್ಣಿಕ್ ಛಂದಸ್ಸಿನ ಋಕ್ಕುಗಳಿಗಾಗಿ ಹಿಂದಿನ ಸೂಕ್ತದ ಜತೆಯಲ್ಲಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದಿನ ಸೂಕ್ತದ ವಿನಿಯೋಗದಲ್ಲಿಯೇ ಹೇಳಲಾಗಿದೆ. ತೃತೀಯಪರ್ಯಾಯದಲ್ಲಿ

ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಇಂದ್ರಃ ಸುತೇಷು ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರ—ಇಂದ್ರಃ ಸುತೇಷು ಸೋಮೇಷು ಯ ಇಂದ್ರ ಸೋಮಪಾತಮಃ ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

## ಸೂಕ್ತ—೧೩

ಮಂಡಲ—೮ । ಅನುವಾಕ—೨ । ಸೂಕ್ತ—೧೩ ।
ಅಷ್ಟಕ—೬ । ಅಧ್ಯಾಯ—೧ । ವರ್ಗ—೭, ೮, ೯, ೧೦, ೧೧, ೧೨, ೧೩ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೩೩ ।
ಋಷಿಃ—ನಾರದಃ ಕಾಣ್ವಃ ॥
ದೇವತಾ—ಇಂದ್ರಃ ॥
ಛಂದಃ—ಉಷ್ಣಿಕ್ ।

। ಸಂಹಿತಾಪಾಠಃ ।

ಇಂದ್ರಃ ಸುತೇಷು ಸೋಮೇಷು ಕ್ರತುಂ ಪುನೀತ ಉಕ್ಥ್ಯಂ ।
ವಿದೇ ವೃಧಸ್ಯ ದಕ್ಷಸೋ ಮಹಾನ್ಹಿ ಷಃ ॥ ೧ ॥

॥ ಪದಪಾಠಃ ॥

ಇಂದ್ರಃ । ಸುತೇಷು । ಸೋಮೇಷು । ಕ್ರತುಂ । ಪುನೀತೇ । ಉಕ್ಥ್ಯಂ ।
ವಿದೇ । ವೃಧಸ್ಯ । ದಕ್ಷಸಃ । ಮಹಾನ್ । ಹಿ । ಸಃ ॥ ೧ ॥

॥ ಸಾಯಣಭಾಷ್ಯಂ ॥

ಸೋಮೇಷು ಸುತೇಷ್ವಭಿಷುತೇಷು ಸತ್ಸ್ವಿಂದ್ರಸ್ತಾನ್ಪೀತ್ವಾ ಕ್ರತುಂ ಕರ್ಮಣಾಂ ಕರ್ತಾರಮುಕ್ಥ್ಯಂ ಸ್ತೋತಾರಂ ಚ ಪುನೀತೇ । ಶೋಧಯತಿ । ಯದ್ವಾ । ಸೋಮೇಷ್ವಭಿಷುತೇಷೂಕ್ಥ್ಯಮುಕ್ಥ್ಯಂ ಕ್ರತುಂ ಯಾಗಂ ತೈಃ ಸೋಮೈಃ ಪುನೀತೇ । ಯಜಮಾನೈಃ ಪೂತಂ ಕಾರಯತಿ । ಕಿಮರ್ಥಂ । ವೃಧಸ್ಯ ವರ್ಧಕಸ್ಯ ದಕ್ಷಸೋ ಬಲಸ್ಯ ವಿದೇ ಲಾಭಾಯ । ಸ ತಾದೃಶ ಇಂದ್ರೋ ಮಹಾನ್ ಹಿ ಮಹಾನ್ ಖಲು । ಅತ ಏವಂ ಕರ್ತುಂ ಶಕ್ನೋತೀತಿ ಭಾವಃ ॥

॥ ಪ್ರತಿಪದಾರ್ಥ ॥

ಸೋಮೇಷು—ಸೋಮರಸಗಳು । ಸುತೇಷು—ಹಿಂಡಲ್ಪಟ್ಟಾಗ । ಇಂದ್ರಃ—ಇಂದ್ರನು । ಕ್ರತುಂ—ಕರ್ಮಕರ್ತನನ್ನೂ । ಉಕ್ಥ್ಯಂ—ಸ್ತುತಿಕರ್ತನನ್ನೂ । ವೃಧಸ್ಯ—ವರ್ಧಕವಾದ । ದಕ್ಷಸಃ—ಬಲದ । ವಿದೇ—ಪ್ರಾಪ್ತಿಗಾಗಿ । ಪುನೀತೇ—ಶುದ್ಧಗೊಳಿಸುತ್ತಾನೆ । ಸಃ—ಅಂತಹ ಇಂದ್ರನು । ಮಹಾನ್ ಹಿ—ಮಹಾತ್ಮನಲ್ಲವೇ ?

॥ ಭಾವಾರ್ಥ ॥

ಸೋಮರಸಗಳು ಹಿಂಡಲ್ಪಟ್ಟಾಗ ಇಂದ್ರನು ಕರ್ಮಕರ್ತನನ್ನೂ ಸ್ತುತಿಕರ್ತನನ್ನೂ ಸಹ ಅವರವರ ವೃದ್ಧಿ ಹೇತುವಾದ ಬಲದ ಪ್ರಾಪ್ತಿನಿಮಿತ್ತವಾಗಿ ಶುದ್ಧಿಗೊಳಿಸುತ್ತಾನೆ. ಅದೇ ಇಂದ್ರನು ಅಧಿಕವಾದ ಮಾಹಾತ್ಮ್ಯಯುಕ್ತನಾಗಿದ್ದಾನೆ.

English Translation

Indra, when the Soma juices are effused, sanctifies the offerer and the praiser for the attainment of increase-giving strength, for he is mighty

॥ ಸಂಹಿತಾಪಾಠಃ ॥

ಸ ಪ್ರಥಮೇ ವ್ಯೋಮನಿ ದೇವಾನಾಂ ಸದನೇ ವೃಧಃ ।

ಸುಪಾರಃ ಸುಶ್ರವಸ್ತಮಃ ಸಮಪ್ಸುಜಿತ್ ॥ ೨ ॥

॥ ಪದಪಾಠಃ ॥

ಸಃ । ಪ್ರಥಮೇ । ವಿಽಓಮನಿ । ದೇವಾನಾಂ । ಸದನೇ । ವೃಧಃ ।

ಸುಽಪಾರಃ । ಸುಶ್ರವಃಽತಮಃ । ಸಂ । ಅಪ್ಸುಽಜಿತ್ । ೨ ॥

॥ ಸಾಯಣಭಾಷ್ಯಂ ॥

ಸ ಇಂದ್ರಃ ಪ್ರಥಮೇ ಪ್ರಥಿತೇ ವಿಸ್ತೀರ್ಣೇ ಮುಖ್ಯೇ ವಾ ವ್ಯೋಮನಿ ವಿಶೇಷೇಣ ರಕ್ಷಕೇ ದೇವಾನಾಂ ಸದನೇ । ಸೀದತ್ಯಸ್ಮಿನ್ನಿತಿ ಸದನಂ ಸ್ಥಾನಂ ಸ್ವರ್ಗಾಖ್ಯಂ । ತತ್ರ ಸ್ಥಿತಃ ಸನ್ ವೃಧೋ ಯಜಮಾನಾನಾಂ ವರ್ಧಯಿತಾ ಚ ಭವತಿ । ತಥಾ ಸುಪಾರಃ ಸುಷ್ಠು ಪಾರಯಿತಾ ಪ್ರಾರಬ್ಧಸ್ಯ ಸಮ್ಯಕ್ಪರಿಸಮಾಪಯಿತಾ ಸುಶ್ರವಸ್ತಮಃ । ಅತಿಶಯೇನ ಶೋಭನಂ ಶ್ರವೋಽನ್ನಂ ಯಶೋ ವಾ ಯಸ್ಯ ಸ ತಥೋಕ್ತಃ । ಸಂ ಸಮ್ಯಗಪ್ಸುಜಿದಪ್ಸೂದಕೇಷು ಪ್ರಾಪ್ಯೇಷು ಸತ್ಸು ತದ್ವಿಘಾತಿನೋ ವೃತ್ರಾದೇರ್ಜೇತಾ । ಯದ್ವಾ । ಅಪ ಇತ್ಯಂತರಿಕ್ಷನಾಮ । ಅಂತರಿಕ್ಷೇ ವರ್ತಮಾನಾನಾಮಸುರಾಣಾಂ ಜೇತಾ । ತಮುಷ್ಟ ಇತ್ಯುತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

ಸಃ—ಅದೇ ಇಂದ್ರನು । ಪ್ರಥಮೇ—ಅತ್ಯಂತ ಶ್ರೇಷ್ಠವಾದುದೂ । ದೇವಾನಾಂ—ದೇವತೆಗಳಿಗೆ । ಸದನೇ—ವಾಸಸ್ಥಾನವಾದುದೂ ಆದ । ವ್ಯೋಮನಿ—ಅಂತರಿಕ್ಷದಲ್ಲಿ ಸ್ಥಿತನಾಗಿ । ವೃಧಃ—ಯಜಮಾನರಿಗೆ ವೃದ್ಧಿಕಾರಕನಾಗಿಯೂ । ಸುಪಾರಃ—ಕರ್ಮವನ್ನು ನಿರ್ವಹಿಸಲು ಸಹಾಯಕನಾಗಿಯೂ । ಸುಶ್ರವಸ್ತಮಃ—

ಉತ್ಕೃಷ್ಟತಮವಾದ ಅನ್ನವಂತನಾಗಿಯೂ । ಸಂ—ಪೂರ್ಣವಾಗಿ । ಅಪ್ಸುಜಿತ್—ವೃಷ್ಟ್ಯುದಕಗಳಿಗೆ ನಿರೋಧಕನಾದ ವೃತ್ರನನ್ನು ಜಯಿಸುವವನಾಗಿಯೂ ಇದ್ದಾನೆ.

॥ ಭಾವಾರ್ಥ ॥

ಅದೇ ಇಂದ್ರನು ಅತ್ಯಂತ ಶ್ರೇಷ್ಠವಾದುದೂ, ದೇವತೆಗಳಿಗೆ ವಾಸಸ್ಥಾನವಾದುದೂ ಆದ ಅಂತರಿಕ್ಷದಲ್ಲಿ ಸ್ಥಿತನಾಗಿ ಯಜಮಾನನಿಗೆ ವೃದ್ಧಿಕಾರಕನಾಗಿಯೂ, ಕರ್ಮವನ್ನು ನಿರ್ವಹಿಸಲು ಸಹಾಯಕನಾಗಿಯೂ ಅತ್ಯುತ್ತಮವಾದ ಅನ್ನವಂತನಾಗಿಯೂ ವೃಷ್ಟ್ಯುದಕಗಳಿಗೆ ನಿರೋಧಕನಾದ ವೃತ್ರನನ್ನು ಪೂರ್ಣವಾಗಿ ಜಯಿಸುವವನಾಗಿಯೂ ಇದ್ದಾನೆ.

## English Translation

Abiding in the highest heaven, in the dwelling of the gods, he is the giver of increase, the accomplisher (of works), the possessor of great renown, the conqueror of (the obstructer of) the rains.

। ಸಂಹಿತಾಪಾಠಃ ।

ತಮುಹ್ವೇ ವಾಜಸಾತಯ ಇಂದ್ರಂ ಭರಾಯ ಶುಷ್ಮಿಣಂ ।

ಭವಾ ನಃ ಸುಮ್ನೇ ಅಂತಮಃ ಸಖಾ ವೃಧೇ ॥ ೩ ॥

। ಪದಪಾಠಃ ।

ತಂ । ಅಹ್ವೇ । ವಾಜಸಾತಯೇ । ಇಂದ್ರಂ । ಭರಾಯ । ಶುಷ್ಮಿಣಂ ।

ಭವ । ನಃ । ಸುಮ್ನೇ । ಅಂತಮಃ । ಸಖಾ । ವೃಧೇ ॥ ೩ ॥

॥ ಸಾಯಣಭಾಷ್ಯಂ ॥

ತಂ ಪೂರ್ವೋಕ್ತಗುಣಂ ಶುಷ್ಮಿಣಂ ಬಲವಂತಮಿಂದ್ರಂ ವಾಜಸಾತಯೇ ಬಲಾನಾಮನ್ನಾನಾಂ ವಾ ಸಾತಿರ್ಲಾಭೋ ಯಸ್ಮಿನ್ ತಾದೃಶಾಯ ಭರಾಯ ಸಂಗ್ರಾಮಾಯ । ಯದ್ವಾ । ಭ್ರಿಯಂತೇ ತಸ್ಮಿನ್ ಹವೀಂಷೀತಿ ಭರೋ ಯಜ್ಞಃ । ಪ್ರಾಯೇಣ ಸಂಗ್ರಾಮನಾಮಾನಿ ಯಜ್ಞನಾಮತ್ವೇನ ಚ ದೃಶ್ಯಂತೇ । ಭರಾಯ ಯಜ್ಞಾರ್ಥಂ । ಅಹ್ವೇ । ಆಹ್ವಯೇ ॥ ಲಿಪಿಸಿಚಿಹ್ವಶ್ಚೇತ್ಯಾತ್ಮನೇಪದೇಷ್ವನ್ಯತರಸ್ಯಾಮಿತಿ ಹ್ವಯತೇಶ್ಛಾಂದಸೇ ಲಙಿ ಚ್ಲೇರಙಾದೇಶಃ ॥ ಹೇ ಇಂದ್ರ ತ್ವಂ ಸುಮ್ನೇ ಸುಖೇ ಧನೇ ವಾ ಲಿಪ್ಸಿತೇ ಸತಿ ನೋಽಸ್ಮಾಕಮಂತಮೋಽಂತಿಕತಮಃ ಸಂನಿಕೃಷ್ಟತಮೋ ಭವ ॥ ತಮೇ ತಾದೇಶ್ಚೇತ್ಯಂತಿಕಶಬ್ದಸ್ಯ ತಾದಿಲೋಪಃ ॥ ತಥಾ ವೃಧೇ ವರ್ಧನಾರ್ಥಂ ಚ ಸಖಾ ಸಮಾನಖ್ಯಾನೋ ಮಿತ್ರಭೂತೋ ಭವ ॥

॥ ಪ್ರತಿಪದಾರ್ಥ ॥

ತಂ—ಪ್ರಸಿದ್ಧನೂ । ಶುಷ್ಮಿಣಂ—ಬಲಶಾಲಿಯೂ ಆದ । ಇಂದ್ರಂ-ಇಂದ್ರನನ್ನು । ವಾಜಸಾತಯೇ-ಅನ್ನಲಾಭದ ನಿಮಿತ್ತವಾಗಿ ನೆರವೇರುವ । ಭರಾಯ—ಯುದ್ಧದಲ್ಲಿ ಸಹಾಯಕ್ಕಾಗಿ । ಅಹ್ವೇ—ಕರೆಯುತ್ತೇನೆ ( ಎಲೈ ಇಂದ್ರನೇ ) । ಸುಮ್ನೇ—ನಮಗೆ ಧನವು ಅಪೇಕ್ಷಿತವಾದಾಗ । ನಃ—ನಮಗೆ । ಅಂತಮಃ—ಅತ್ಯಂತ ಸಮೀಪಸ್ಥನಾಗಿ । ಭವ—ಆಗಿರು । ವೃಧೇ—ನಮ್ಮ ವೃದ್ಧ್ಯರ್ಥವಾಗಿಯೂ । ಸಖಾ—ನಮಗೆ ಮಿತ್ರನಾಗಿರು.

॥ ಭಾವಾರ್ಥ ॥

ಪ್ರಸಿದ್ಧನೂ ಬಲಶಾಲಿಯೂ ಆದ ಇಂದ್ರನನ್ನು ಅನ್ನಲಾಭದ ನಿಮಿತ್ತವಾಗಿ ನೆರವೇರಿಸುವ ಯುದ್ಧದಲ್ಲಿ ಸಹಾಯಕ್ಕಾಗಿ ಕರೆಯುತ್ತೇನೆ. ಎಲೈ ಇಂದ್ರನೇ, ನಮಗೆ ಧನವು ಅಪೇಕ್ಷಿತವಾದಾಗ ನಮಗೆ ಅತ್ಯಂತ ಸಮೀಪಸ್ಥನಾಗಿರು. ನಮ್ಮ ವೃದ್ಧ್ಯರ್ಥವಾಗಿಯೂ ನಮಗೆ ಮಿತ್ರನಾಗಿರು.

## English Translation

I invoke the powerful Indra for (aid in) the food-bestowing combat : be nigh unto us for our happiness ; be a friend for our increase.

॥ ಸಂಹಿತಾಪಾಠಃ ॥

ಇಯಂ ತ ಇಂದ್ರ ಗಿರ್ವಣೋ ರಾತಿಃ ಕ್ಷರತಿ ಸುನ್ವತಃ ।
ಮಂದಾನೋ ಅಸ್ಯ ಬರ್ಹಿಷೋ ವಿ ರಾಜಸಿ ॥ ೪ ॥

॥ ಪದಪಾಠಃ ॥

ಇಯಂ । ತೇ । ಇಂದ್ರ । ಗಿರ್ವಣಃ । ರಾತಿಃ । ಕ್ಷರತಿ । ಸುನ್ವತಃ ।
ಮಂದಾನಃ । ಅಸ್ಯ । ಬರ್ಹಿಷಃ । ವಿ । ರಾಜಸಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಗಿರ್ವಣೋ ಗೀರ್ಭಿಃ ಸ್ತುತಿಭಿರ್ವನನೀಯ ಸಂಭಜನೀಯೇಂದ್ರ ತೇ ತುಭ್ಯಂ ತ್ವದರ್ಥಮಿಯಂ ಪುರೋವರ್ತಿನೀ ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಸಂಬಂಧಿನೀ ರಾತಿರ್ಋತ್ವಿಗ್ಭಿರ್ದೀಯಮಾನಾ ಸೋಮಾಹುತಿಃ ಕ್ಷರತಿ । ಆಹವನೀಯಂ ಪ್ರತಿ ಗಚ್ಛತಿ। ತ್ವಂ ಚ ತಯಾ ಮಂದಾನೋ ಮಂದಮಾನೋ ಮೋದಮಾನಸ್ತ್ವಸ್ಯಾಸ್ಯ ಬರ್ಹಿಷೋ ಯಜ್ಞಸ್ಯ ವಿ ರಾಜಸಿ । ವಿಶೇಷೇಣೇಶಿಷೇ । ರಾಜತಿರೈಶ್ವರ್ಯಕರ್ಮಾ ॥

॥ ಪ್ರತಿಪದಾರ್ಥ ॥

**ಗಿರ್ವಣಃ**—ಸ್ತುತಿಯಿಂದ ಲಭ್ಯನಾಗುವ । **ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನನ್ನುದ್ದೇಶಿಸಿ । **ಸುನ್ವತಃ**— ಸೋಮಾಭಿಷವವನ್ನು ಮಾಡಿರುವ ಯಜಮಾನನಿಂದ ಅರ್ಪಿತವಾದ । **ಇಯಂ ರಾತಿಃ**—ಈ ಸೋಮಾಹುತಿಯು । **ಕ್ಷರತಿ**—ನಿನಗಭಿಮುಖವಾಗಿ ಪ್ರವಿಸುತ್ತದೆ । **ಮಂದಾನಃ**-(ನೀನೂ ಇದರಿಂದ) ತೃಪ್ತನಾಗಿ । **ಅಸ್ಯ**-ಇಲ್ಲಿ ನೆರವೇರುವ । **ಬರ್ಹಿಷಃ**—ಯಜ್ಞಕ್ಕೆ । **ವಿ ರಾಜಸಿ**—ಪ್ರಕಾಶಮಾನನಾದ ಪ್ರಭುವಾಗಿದ್ದೀಯೆ.

॥ ಭಾವಾರ್ಥ ॥

ಸ್ತುತಿಗಳಿಂದ ಲಭ್ಯನಾಗತಕ್ಕ ಎಲೈ ಇಂದ್ರನೇ, ನಿನ್ನನ್ನು ಉದ್ದೇಶಿಸಿ ಸೋಮಾಭಿಷವವನ್ನು ಮಾಡುವ ಯಜಮಾನನಿಂದ ಅರ್ಪಿತವಾದ ಈ ಸೋಮಾಹುತಿಯು ನಿನಗಭಿಮುಖವಾಗಿ ಪ್ರವಿಸುತ್ತದೆ. ನೀನೂ ಇದರಿಂದ ತೃಪ್ತನಾಗಿ ಇಲ್ಲಿ ನೆರವೇರಿಸುವ ಯಜ್ಞಕ್ಕೆ ಪ್ರಕಾಶಮಾನನಾದ ಪ್ರಭುವಾಗಿದ್ದೀಯೆ.

## English Translation

This gift of the offeret of the libation flows to you, Indra, who are gratified by praise, exhilatatetd by which you reign over the sacrifice.

॥ ಸಂಹಿತಾಪಾಠಃ ॥

ನೂನಂ ತದಿಂದ್ರ ದದ್ಧಿ ನೋ ಯತ್ತ್ವಾ ಸುನ್ವಂತ ಈಮಹೇ ।
ರಯಿಂ ನಶ್ಚಿತ್ರಮಾ ಭರಾ ಸ್ವರ್ವಿದಂ ॥ ೫ ॥

॥ ಪದಪಾಠಃ ॥

ನೂನಂ । ತತ್ । ಇಂದ್ರ । ದದ್ಧಿ । ನಃ । ಯತ್ । ತ್ವಾ । ಸುನ್ವಂತಃ । ಈಮಹೇ ।
ರಯಿಂ । ನಃ । ಚಿತ್ರಂ । ಆ । ಭರ । ಸ್ವಃऽವಿದಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ನೂನಮವಶ್ಯಂ ತದ್ಧನಂ ನೋಽಸ್ಮಭ್ಯಂ ದದ್ಧಿ । ದದಸ್ವ ॥ ದದ ದಾನೇ । ವ್ಯತ್ಯಯೇನ ಪರಸ್ಮೈಪದಂ । ಛಾಂದಸಃ ಶಪೋ ಲುಕ್ ॥ ಯದ್ಧನಂ ತ್ವಾ ತ್ವಾಂ ಸುನ್ವಂತಃ ಸೋಮಮಭಿಷುಣ್ವಂತೋ ವಯಮೀಮಹೇ । ಅಪಿ ಚ ಚಿತ್ರಂ ಚಾಯನೀಯಂ ಸ್ವರ್ವಿದಂ ಸರ್ವಸ್ಯ ಲಂಭಕಂ ಯದ್ವಾ ಸ್ವರ್ಗಸ್ಯ ವೇದಿತಾರಮಾಸ್ತಿಕಂ ರಯಿಂ ಪುತ್ರಂ ನೋಽಸ್ಮಭ್ಯಮಾ ಭರ । ಆಹರ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಸುನ್ವಂತಃ—ಸೋಮರಸವನ್ನು ಹಿಂಡಿ ಅರ್ಪಿಸುವ ನಾವು । ಯತ್—ಯಾವ ಧನವನ್ನು । ತ್ವಾ—ನಿನ್ನಿಂದ । ಈಮಹೇ—ಯಾಚಿಸುವೆವೋ । ತತ್—ಆ ಧನವನ್ನು । ನೂನಂ—ಅವಶ್ಯವಾಗಿ । ನಃ—ನಮಗೆ । ದದ್ಧಿ—ಕೊಡು । ಚಿತ್ರಂ—ಆಕರ್ಷಕವಾದುದೂ । ಸ್ವರ್ವಿದಂ—ಸ್ವರ್ಗಪ್ರಾಪಕವಾದುದೂ ಆದ । ರಯಿಂ—ಪುತ್ರರೂಪವಾದ ಧನವನ್ನು । ನಃ—ನಮಗೆ । ಆ ಭರ—ಒದಗಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಸೋಮರಸವನ್ನು ಹಿಂಡಿ ಅರ್ಪಿಸುವ ನಾವು ಯಾವ ಧನವನ್ನು ನಿನ್ನಿಂದ ಯಾಚಿಸುವೆವೋ ಆ ಧನವನ್ನು ನಮಗೆ ಅವಶ್ಯಕವಾಗಿ ಕೊಡು. ಆಕರ್ಷಕವಾದುದೂ, ಸ್ವರ್ಗಪ್ರಾಪಕವಾದುದೂ, ಪುತ್ರರೂಪವಾದುದೂ, ಆದ ಧನವನ್ನು ನಮಗೆ ಒದಗಿಸು.

## English Translation

Bestow upon us, Indra, that which, when pouring out the libation, we solicit of you; grant us the wondrous wealth that is the means of obtaining heaven.

॥ ಸಂಹಿತಾಪಾಠಃ ॥

ಸ್ತೋತಾ ಯತ್ತೇ ವಿಚರ್ಷಣಿರತಿಪ್ರಶರ್ಧಯದ್ಗಿರಃ ।
ವಯಾ ಇವಾನು ರೋಹತೇ ಜುಷಂತ ಯತ್ ॥ ೬ ॥

॥ ಪದಪಾಠಃ ॥

ಸ್ತೋತಾ । ಯತ್ । ತೇ । ವಿऽಚರ್ಷಣಿಃ । ಅತಿऽಪ್ರಶರ್ಧಯತ್ । ಗಿರಃ ।
ವಯಾಃऽಇವ । ಅನು । ರೋಹತೇ । ಜುಷಂತ । ಯತ್ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಿಚರ್ಷಣಿರ್ವಿಶೇಷೇಣ ದ್ರಷ್ಟಾ ಸ್ತೋತಾ ತೇ ತುಭ್ಯಂ ತ್ವದರ್ಥಂ ಗಿರಃ ಸ್ತುತೀರ್ಯದ್ಯದಾತಿಪ್ರಶರ್ಧಯತ್ ಅತಿಶಯೇನ ಪ್ರಶರ್ಧಯಿತ್ರೀರಕರೋತ್ । ಶತ್ರೂಣಾಂ ಪ್ರಸಹನಸಮರ್ಥಾಃ ॥ ಶೃಧು ಪ್ರಸಹನೇ ॥ ಯದ್ಯದಾ ಚ ತಾ ಗಿರೋ ಜುಷಂತ ತ್ವಾಮಸೇವಂತ ಅಪ್ರೀಣಯನ್ವಾ ತದಾ ವಯಾ ಇವ ಶಾಖಾ ಇವ ಯಥೈಕಸ್ಮಿನ್ವೃಕ್ಷೇ ಬದ್ಧಾಃ ಶಾಖಾಃ ಉಪರಿ ಪ್ರರೋಹಂತಿ ತಥಾನು ರೋಹತೇ । ಸ್ತುತ್ಯಾ ಸರ್ವೇ ಗುಣಾಸ್ತ್ವಯಿ ಪ್ರರೋಹಂತಿ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ) ವಿಚರ್ಷಣಿಃ— ವಿವೇಚನ ಸಾಮರ್ಥ್ಯವುಳ್ಳ । ಸ್ತೋತಾ— ಸ್ತುತಿಕರ್ತನು । ತೇ— ನಿನ್ನನ್ನುದ್ದೇಶಿಸಿ । ಗಿರಃ— ಸ್ತುತಿಗಳನ್ನು । ಯತ್— ಯಾವಾಗ । ಅತಿಪ್ರಶರ್ಧಯತ್— ಶತ್ರುಗಳನ್ನು ನಾಶ ಮಾಡುವ ಶಕ್ತಿಯುಳ್ಳವನ್ನಾಗಿ ನಿರ್ಮಿಸುವನೋ । ಯತ್— ಯಾವಾಗ । ಜುಷಂತ— ಆ ಸ್ತುತಿಗಳು ನಿನ್ನನ್ನು ಪ್ರಶಂಸಿಸಿ ಸೇವಿಸುವುವೋ ಆಗ । ವಯಾ ಇವ— ವೃಕ್ಷಗಳ ಶಾಖೆಗಳು ಪ್ರಸರಿಸಿ ಹರಡುವಂತೆ । ಅನು ರೋಹತೇ— ನಿನ್ನ ಗುಣಗಳೂ ವಿಸ್ತರಿಸಿ ಪ್ರಸರಿಸುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ವಿವೇಚನಸಾಮರ್ಥ್ಯವುಳ್ಳ ಸ್ತುತಿಕರ್ತನು ನಿನ್ನನ್ನುದ್ದೇಶಿಸಿದ ಸ್ತುತಿಗಳನ್ನು ಶತ್ರುನಾಶಕವಾದ ಶಕ್ತಿಯುಳ್ಳವನ್ನಾಗಿ ಯಾವಾಗ ನಿರ್ಮಿಸುವನೋ, ಯಾವಾಗ ಆ ಸ್ತುತಿಗಳು ನಿನ್ನನ್ನು ಪ್ರಶಂಸಿಸಿ ಸೇವಿಸುವುವೋ ಆಗ ವೃಕ್ಷಗಳ ಶಾಖೆಗಳು ಪ್ರಸರಿಸಿ ಹರಡುವಂತೆ ನಿನ್ನ ಗುಣಗಳೂ ವಿಸ್ತರಿಸಿ ಪ್ರಸರಿಸುತ್ತವೆ.

## English Translation

When your discriminating eulogist has addressed to you overpowering praises, then, if they are acceptable to you, they expand like the branches (of a tree).

। ಸಂಹಿತಾಪಾಠಃ ।

ಪ್ರತ್ನವಜ್ಜನಯಾ ಗಿರಃ ಶೃಣುಧೀ ಜರಿತುರ್ಹವಂ ।
ಮದೇಮದೇ ವವಕ್ಷಿಥಾ ಸುಕೃತ್ವನೇ ॥ ೭ ॥

। ಪದಪಾಠಃ ।

ಪ್ರತ್ನಽವತ್ । ಜನಯ । ಗಿರಃ । ಶೃಣುಧಿ । ಜರಿತುಃ । ಹವಂ ।
ಮದೇಽಮದೇ । ವವಕ್ಷಿಥ । ಸುಽಕೃತ್ವನೇ ॥ ೭ ॥

। ಸಾಯಣಭಾಷ್ಯಂ ।

ಹೇ ಇಂದ್ರ ಪ್ರತ್ನವತ್ ಪುರಾ ಯಥಾ ಸ್ತೋತೃಭ್ಯೋಽಪೇಕ್ಷಿತಫಲಪ್ರದಾನೇನ ಸ್ತುತೀರ್ಜನ–ಯಸಿ ಏವಮಿದಾನೀಮಪಿ ಗಿರಃ ಸ್ತುತೀರ್ಜನಯ । ಉತ್ಪಾದಯ । ಜರಿತುಃ ಸ್ತೋತುರ್ಹವಮಾಹ್ವಾನಂ ಚ ಶೃಣುಧಿ । ಶೃಣು । ಜಾನೀಹಿ । ತಾದೃಶಸ್ತ್ವಂ ಮದೇ ಮದೇ ಸೋಮೇನ ತರ್ಪಣೇ ತರ್ಪಣೇ ಸತಿ ಸುಕೃತ್ವನೇ ಶೋಭನಕರ್ತ್ರೇ ಯಜಮಾನಾಯ ವವಕ್ಷಿಥ । ಅಪೇಕ್ಷಿತಂ ಫಲಂ ವಹಸಿ । ದದಾಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಪ್ರತ್ನವತ್**—ಹಿಂದೆಲ್ಲಾ ಇಷ್ಟಾರ್ಥಪ್ರದನಾಗಿ ಹಿಂದಿನ ಋಷಿಗಳಿಂದ ಸ್ತುತಿಯನ್ನು ಪ್ರೇರಿಸಿದಂತೆ । **ಗಿರಃ**—(ನಮಗೂ ಇಷ್ಟಾರ್ಥಪ್ರದನಾಗಿ ನಮ್ಮಿಂದಲೂ) ಸ್ತುತಿಗಳನ್ನು । **ಜನಯ**—ಉತ್ಪನ್ನವಾಗುವಂತೆ ಮಾಡು । **ಜರಿತುಃ**—ಸ್ತುತಿಕರ್ತನ । **ಹವಂ**—ಆಹ್ವಾನವನ್ನು । **ಶೃಣುಧಿ**—ಕೇಳು । **ಮದೇ ಮದೇ**—ನಿನಗೆ ತೃಪ್ತಿಯುಂಟಾದಾಗೆಲ್ಲಾ । **ಸುಕೃತ್ವನೇ**—ಉತ್ತಮವಾದ ಕರ್ಮಕರ್ತನಾದ ಯಜಮಾನನಿಗೆ । **ವವಕ್ಷಿಥ**—ಅಪೇಕ್ಷಿತವಾದ ಫಲವನ್ನು ಒದಗಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಹಿಂದಿನ ಋಷಿಗಳಿಗೆಲ್ಲಾ ಇಷ್ಟಾರ್ಥಪ್ರದನಾಗಿ ಅವರಿಂದ ಸ್ತುತಿಯನ್ನು ಪ್ರೇರಿಸಿದಂತೆ ನಮಗೂ ಇಷ್ಟಾರ್ಥಪ್ರದನಾಗಿ ನಾವೂ ಸ್ತುತಿಗಳನ್ನು ನಿರ್ಮಿಸುವಂತೆ ಪ್ರೇರಿಸು. ಸ್ತುತಿಕರ್ತನ ಆಹ್ವಾನವನ್ನು ಕೇಳು ನಿನಗೆ ತೃಪ್ತಿಯುಂಟಾದಾಗಲ್ಲೆಲ್ಲಾ ಉತ್ತಮವಾದ ಕರ್ಮಕರ್ತನಾದ ಯಜಮಾನನಿಗೆ ಅಪೇಕ್ಷಿತವಾದ ಫಲವನ್ನು ಒದಗಿಸು.

## English Translation

Generate your eulogies as of old ; hear the invocati on of the adorer bear in your reiterated exultation (blessings) to the liberal donor (of the oblation).

॥ ಸಂಹಿತಾಪಾಠ ॥

ಕ್ರೀಳಂತ್ಯಸ್ಯ ಸೂನೃತಾ ಆಪೋ ನ ಪ್ರವತಾ ಯತೀಃ ।
ಅಯಾ ಧಿಯಾ ಯ ಉಚ್ಯತೇ ಪತಿರ್ದಿವಃ ॥ ೮ ॥

॥ ಪದಪಾಠಃ ॥

ಕ್ರೀಳಂತಿ । ಅಸ್ಯ । ಸೂನೃತಾಃ । ಆಪಃ । ನ । ಪ್ರವತಾ । ಯತೀಃ ।
ಅಯಾ । ಧಿಯಾ । ಯಃ । ಉಚ್ಯತೇ । ಪತಿಃ । ದಿವಃ ॥ ೮ ॥

॥ ಸಾಯಣಭಾಷ್ಯಂ ॥

ಅಸ್ಯೇಂದ್ರಸ್ಯ ಸೂನೃತಾಃ ಪ್ರಿಯಸತ್ಯಾತ್ಮಿಕಾ ವಾಚಃ ಕ್ರೀಳಂತಿ । ವಿಹರಂತಿ । ತತ್ರ ದೃಷ್ಟಾಂತಃ। ಪ್ರವತಾ ಪ್ರವಣೇನ ಮಾರ್ಗೇಣ ಯತೀರ್ಗಚ್ಛಂತ್ಯ ಆಪೋ ನಾಪ ಇವ । ಯಥಾ ನಿಮ್ನೇನ ಪಥಾ ಗಚ್ಛಂತ್ಯ ಆಪ ಉತ್ಪತನನಿಪತನೇನ ವಿಹರಂತಿ ತದ್ವತ್ । ದಿವಃ ಸ್ವರ್ಗಸ್ಯ ಪತಿಃ ಪಾಲಯಿತಾ ಯ ಇಂದ್ರೋಽಯಾನಯಾ ಧಿಯಾ ಸ್ತುತ್ಯೋಚ್ಯತೇ ಪ್ರತಿಪಾದ್ಯತೇ ಅಸ್ಯೇಂದ್ರಸ್ಯೇತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ದಿವಃ**—ಸ್ವರ್ಗಕ್ಕೆ । **ಪತಿಃ**—ಪಾಲಕನೆಂದು । **ಅಯಾ ಧಿಯಾ**—ಈ ಸ್ತುತಿಯಿಂದ । **ಉಚ್ಯತೇ**—ಪ್ರತಿಪಾದಿಸಲ್ಪಡುವನೋ । **ಅಸ್ಯ**—ಅದೇ ಇಂದ್ರನನ್ನು ಪ್ರಶಂಸಿಸುವ । **ಸೂನೃತಾಃ**—ಪ್ರಿಯವೂ ಸತ್ಯಾತ್ಮಕವೂ ಆದ ಸ್ತುತಿವಾಕ್ಯಗಳು । **ಪ್ರವತಾ**—ಅಧೋಭಾಗಕ್ಕೆ । **ಯತೀಃ**—ಪ್ರವಹಿಸುವ । **ಆಪೋ ನ**—ಉದಕಗಳಂತೆ । **ಕ್ರೀಳಂತಿ**—ಸ್ವತಂತ್ರವಾಗಿ ವಿಹರಿಸುತ್ತವೆ.

॥ ಭಾವಾರ್ಥ ॥

ಯಾವ ಇಂದ್ರನು ಸ್ವರ್ಗಕ್ಕೆ ಪಾಲಕನೆಂದು ಈ ಸ್ತುತಿಯಿಂದ ಪ್ರತಿಪಾದಿಸಲ್ಪಡುವನೋ ಅದೇ ಇಂದ್ರನನ್ನು ಪ್ರಶಂಸಿಸುವ ಪ್ರಿಯವೂ, ಸತ್ಯಾತ್ಮಕವೂ ಆದ ಸ್ತುತಿವಾಕ್ಯಗಳು ಅಧೋಭಾಗಕ್ಕೆ ಪ್ರವಹಿಸುವ ಉದಕಗಳಂತೆ ಸ್ವತಂತ್ರವಾಗಿ ವಿಹರಿಸುತ್ತವೆ.

## English Translation

The kind and true words of him who in this hymn is called the lord of heaven sport like waters flowing by a downward (channel).

॥ ಸಂಹಿತಾಪಾಠಃ ॥

ಉತೋ ಪತಿರ್ಯ ಉಚ್ಯತೇ ಕೃಷ್ಟೀನಾಮೇಕ ಇದ್ವಶೀ ।
ನಮೋವೃಧೈರವಸ್ಯುಭಿಃ ಸುತೇ ರಣ ॥ ೯ ॥

॥ ಪದಪಾಠಃ ॥

ಉತೋ ಇತಿ । ಪತಿಃ । ಯಃ । ಉಚ್ಯತೇ । ಕೃಷ್ಟೀನಾಂ । ಏಕಃ । ಇತ್ । ವಶೀ ।
ನಮಃಽವೃಧೈಃ । ಅವಸ್ಯುಽಭಿಃ । ಸುತೇ । ರಣ ॥ ೯ ॥

॥ ಸಾಯಣಭಾಷ್ಯಂ ॥

ಉತೋ ಅಪಿ ಚ ವಶೀ ವಶಯಿತೈಕ ಇದೇಕ ಏವ ಕೃಷ್ಟೀನಾಂ ಮನುಷ್ಯಾಣಾಂ ಪತಿಃ ಪಾಲಯಿತೇತಿ ಯ ಇಂದ್ರ ಉಚ್ಯತೇ । ಕೈಃ । ನಮೋವೃಧೈರ್ನಮಸಾ ಸ್ತೋತ್ರೇಣ ಹವಿಷಾ ವಾ ವರ್ಧಯಿತೃಭಿರವಸ್ಯುಭೀ ರಕ್ಷಣೇಚ್ಛುಭಿಃ ಸ ತ್ವಂ ಪೂರ್ವೋಕ್ತೇ ಸುತೇಽಭಿಷುತೇ ಸೋಮೇ ರಣ । ರಮಸ್ವ । ಯದ್ವಾ । ಹೇ ಸ್ತೋತಃ ತಮಿಂದ್ರಂ ಸುತೇ ಸೋಮೇ ಸ್ತುಹಿ । ರಣತಿಃ ಶಬ್ದಾರ್ಥಃ ॥

॥ ಪ್ರತಿಪದಾರ್ಥ ॥

ಉತೋ—ಮತ್ತು (ಎಲೈ ಇಂದ್ರನೇ) । ಯಃ—ಯಾವ ನೀನು । ಅವಸ್ಯುಭಿಃ—ರಕ್ಷಣೆಯನ್ನು ಅಪೇಕ್ಷಿಸುವವರೂ । ನವೋವೃಧೈಃ—ಸ್ತುತಿಗಳಿಂದ ಪುಷ್ಟಿಯನ್ನುಂಟುಮಾಡುವವರೂ ಆದ ಸ್ತುತಿಕರ್ತರಿಂದ । ವಶೀ—ಜಗನ್ನಿಯಾಮಕನೆಂದೂ । ಕೃಷ್ಟೀನಾಂ—ಪ್ರಜೆಗಳಿಗೆಲ್ಲಾ । ಏಕ ಇತ್—ಅದ್ವಿತೀಯನಾದ । ಪತಿಃ—ಪಾಲಕನೆಂದೂ । ಉಚ್ಯತೇ—ವರ್ಣಿಸಲ್ಪಡುವೆಯೋ (ಅಂತಹ ನೀನು) । ಸುತೇ—ಸೋಮರಸವು ಹಿಂಡಲ್ಪಟ್ಟಾಗ । ರಣ—ಹರ್ಷವನ್ನು ಪ್ರಕಟಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ರಕ್ಷಣೆಯನ್ನಪೇಕ್ಷಿಸುವವರೂ, ಸ್ತುತಿಗಳಿಂದ ಪುಷ್ಟಿಯನ್ನುಂಟುಮಾಡುವವರೂ ಆದ ಸ್ತುತಿಕರ್ತರಿಂದ ಜಗನ್ನಿಯಾಮಕನೆಂದೂ, ಪ್ರಜೆಗಳಿಗೆಲ್ಲಾ ಅದ್ವಿತೀಯನಾದ ಪಾಲಕನೆಂದೂ ಯಾವ ನೀನು ವರ್ಣಿಸಲ್ಪಡುವೆಯೋ, ಅಂತಹ ನೀನು ಸೋಮರಸವು ಹಿಂಡಲ್ಪಟ್ಟಾಗ ಹರ್ಷವನ್ನು ಪ್ರಕಟಿಸು.

## English Translation

Or he, who is called the one absolute lord of men, praise him, when the libation is effused, with magnifying songs, imploring his protection.

॥ ಸಂಹಿತಾಪಾಠಃ ॥

ಸ್ತುಹಿ ಶ್ರುತಂ ವಿಪಶ್ಚಿತಂ ಹರೀ ಯಸ್ಯ ಪ್ರಸಕ್ಷಿಣಾ ।
ಗಂತಾರಾ ದಾಶುಷೋ ಗೃಹಂ ನಮಸ್ವಿನಃ ॥ ೧೦ ॥

॥ ಪದಪಾಠಃ ॥

ಸ್ತುಹಿ । ಶ್ರುತಂ । ವಿಪಃಽಚಿತಂ । ಹರೀ ಇತಿ । ಯಸ್ಯ । ಪ್ರಽಸಕ್ಷಿಣಾ ।
ಗಂತಾರಾ । ದಾಶುಷಃ । ಗೃಹಂ । ನಮಸ್ವಿನಃ ॥ ೧೮ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಃ ವಿಪಶ್ಚಿತಂ ವಿಶಿಷ್ಟಜ್ಞಾನಂ ಶ್ರುತಂ ವಿಶ್ರುತಂ ಪ್ರಖ್ಯಾತಂ ತಮಿಂದ್ರಂ ಸ್ತುಹಿ । ಪ್ರಶಂಸ । ಯಸ್ಯೇಂದ್ರಸ್ಯ ಹರೀ ಅಶ್ವೌ ಪ್ರಸಕ್ಷಿಣಾ ಶತ್ರೂಣಾಂ ಪ್ರಸಹನಶೀಲೌ ನಮಸ್ವಿನೋ ಹವಿಷ್ಮತೋ ದಾಶುಷೋ ದತ್ತವತೋ ಯಜಮಾನಸ್ಯ ಗೃಹಂ ಗಂತಾರಾ ಗಮನಶೀಲೌ ಚ ತಮಿಂದ್ರಂ ಸ್ತುಹೀತಿ ಸಂಬಂಧಃ । ಗಮೇಸ್ತಾಚ್ಛೀಲಿಕಸ್ತೃನ್ ॥

॥ ಪ್ರತಿಪದಾರ್ಥ ॥

(ಎಲೈ ಸ್ತುತಿಕರ್ತನೇ!) ಯಸ್ಯ—ಯಾವ ಇಂದ್ರನ । ಹರೀ—ಅಶ್ವಗಳು । ಪ್ರಸಕ್ಷಣಾ—ಶತ್ರುನಾಶಕಗಳಾಗಿ । ನಮಸ್ವಿನಃ—ಹವಿಸ್ಸನ್ನು ಹೊಂದಿರುವ । ದಾಶುಷಃ—ಯಜಮಾನನ । ಗೃಹಂ—ಗೃಹಕ್ಕೆ । ಗಂತಾರಾ—ಪ್ರವೇಶಿಸುವುವೋ ಅಂತಹ । ವಿಪಶ್ಚಿತಂ—ವಿಶಿಷ್ಟಜ್ಞಾನವುಳ್ಳವನೂ । ಶ್ರುತಂ—ಪ್ರಖ್ಯಾತನೂ ಆದ ಇಂದ್ರನನ್ನು । ಸ್ತುಹಿ—ಪ್ರಶಂಸಿಸು.

॥ ಭಾವಾರ್ಥ ॥

ಎಲೈ ಸ್ತುತಿಕರ್ತನೇ, ಯಾವ ಇಂದ್ರನ ಅಶ್ವಗಳು ಶತ್ರುನಾಶಕಗಳಾಗಿ ಹವಿಸ್ಸನ್ನು ಹೊಂದಿರುವ ಯಜಮಾನನ ಗೃಹಕ್ಕೆ ಹೋಗುವವೋ ಅಂತಹ ವಿಶಿಷ್ಟಜ್ಞಾನವುಳ್ಳವನೂ, ಪ್ರಖ್ಯಾತನೂ ಆದ ಇಂದ್ರನನ್ನು ಪ್ರಶಂಸಿಸು.

## English Translation

Praise the renowned, the sapient (Indra), whose victorious horses proceed to the dwelling of the devout donor (of the libation),

॥ ಸಂಹಿತಾಪಾಠಃ ॥

ತೂತುಜಾನೋ ಮಹೇಮತೇಽಶ್ವೇಭಿಃ ಪ್ರುಷಿತಪ್ಸುಭಿಃ ।
ಆ ಯಾಹಿ ಯಜ್ಞಮಾಶುಭಿಃ ಶಮಿದ್ಧಿ ತೇ ॥ ೧೧ ॥

॥ ಪದಪಾಠಃ ॥

ತೂತುಜಾನಃ । ಮಹೇಽಮತೇ । ಅಶ್ವೇಭಿಃ । ಪ್ರುಷಿತಪ್ಸುಽಭಿಃ ।
ಆ । ಯಾಹಿ । ಯಜ್ಞಂ । ಆಶುಽಭಿಃ । ಶಂ । ಇತ್ । ಹಿ । ತೇ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಮಹೇಮತೇ । ಮಹತೇ ಫಲಾಯ ಮತಿರ್ಬುದ್ಧಿರ್ಯಸ್ಯಾಸೌ ಮಹೇಮತಿಃ ॥ ಅಲುಕ್ ಛಾಂದಸಃ ॥ ಸ ತಾದೃಶ ಹೇ ಇಂದ್ರ ತೂತುಜಾನಸ್ತ್ವರಮಾಣಃ ಸನ್ ಪ್ರುಷಿತಪ್ಸುಭಿಃ ಸ್ನಿಗ್ಧರೂಪೈ-ರಾಶುಭಿಃ ಶೀಘ್ರಗಾಮಭಿರಶ್ವೇಭಿರಶ್ವೈರ್ಯಜ್ಞಮಸ್ಮದೀಯಮಾ ಯಾಹಿ । ಆಗಚ್ಛ । ಹಿ ಯಸ್ಮಾತ್ತೇ ತವ ತಸ್ಮಿನ್ಯಜ್ಞೇ ಶಮಿತ್ ಸುಖಂ ವಿದ್ಯತ ಏವ ಅತ ಆಗಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಮಹೇಮತೇ—ಮಹತ್ಫಲವನ್ನು ಕೊಡುವ ಬುದ್ಧಿಯುಳ್ಳ ಎಲೈ ಇಂದ್ರನೇ । ತೂತುಜಾನಃ—ತ್ವರಿತ

ಗೊಂಡವನಾಗಿ । ಪ್ರುಷಿತಪ್ಸುಭಿಃ—ಮನೋಹರವಾದ ರೂಪವುಳ್ಳವೂ । ಆಶುಭಿಃ—ಶೀಘ್ರಗಾಮಿಗಳೂ ಆದ । ಅಶ್ವೇಭಿಃ—ಅಶ್ವಗಳೊಡನೆ । ಯಜ್ಞಂ—ನಮ್ಮ ಯಜ್ಞಕ್ಕೆ । ಆ ಯಾಹಿ—ದಯಮಾಡು । ಹಿ—ಏತಕ್ಕೆಂದರೆ । ತೇ—ನಿನಗೆ । ಶಮಿತ್—(ಯಜ್ಞದಲ್ಲಿ) ಸುಖವೇ ಇರುತ್ತದೆ.

॥ ಭಾವಾರ್ಥ ॥

ಮಹತ್ಫಲವನ್ನು ಕೊಡುವ ಎಲೈ ಇಂದ್ರನೇ, ನೀನು ನಮ್ಮಲ್ಲಿಗೆ ಬರಲು ತ್ವರಿತಗೊಂಡವನಾಗಿ ಮನೋಹರವಾದ ರೂಪವುಳ್ಳವೂ ಶೀಘ್ರಗಾಮಿಗಳೂ ಆದ ಅಶ್ವಗಳೊಡನೆ ನಮ್ಮ ಯಜ್ಞಕ್ಕೆ ದಯಮಾಡು. ಏತಕ್ಕೆಂದರೆ, ನಿನಗೆ ಯಜ್ಞದಲ್ಲಿ ಸುಖವೇ ಇರುತ್ತದೆ.

## English Translation

Munificently minded, you, who are quick of movement, come with shining and swift steeds to the sacrifice, for verilly there is gratification to you thereby.

॥ ಸಂಹಿತಾಪಾಠಃ ॥

ಇಂದ್ರ ಶವಿಷ್ಠ ಸತ್ಪತೇ ರಯಿಂ ಗೃಣತ್ಸು ಧಾರಯ ।
ಶ್ರವಃ ಸೂರಿಭ್ಯೋ ಅಮೃತಂ ವಸುತ್ವನಂ ॥ ೧೨ ॥

॥ ಪದಪಾಠಃ ॥

ಇಂದ್ರ । ಶವಿಷ್ಠ । ಸತ್ऽಪತೇ । ರಯಿಂ । ಗೃಣತ್ऽಸು । ಧಾರಯ ।
ಶ್ರವಃ । ಸೂರಿऽಭ್ಯಃ । ಅಮೃತಂ । ವಸುऽತ್ವನಂ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಶವಿಷ್ಠ ಬಲವತ್ತಮ ಸತ್ಪತೇ ಸತಾಂ ಪಾಲಯಿತರಿಂದ್ರ ಗೃಣತ್ಸು ಸ್ತುವತ್ಸ್ವಸ್ಮಾಸು ರಯಿಂ ಧನಂ ಧಾರಯ । ಅವಸ್ಥಾಪಯ । ಅಪಿ ಚ ಸೂರಿಭ್ಯಃ ಸ್ತೋತೃಭ್ಯೋऽಮೃತಮನಶ್ವರಂ ವಸುತ್ವನಂ ವ್ಯಾಪ್ತಿಮಚ್ಛ್ರವೋऽನ್ನಂ ಯಶೋ ವಾ ದೇಹೀತಿ ಶೇಷಃ ॥

॥ ಪ್ರತಿಪದಾರ್ಥ ॥

ಶವಿಷ್ಠ—ಅತ್ಯಂತ ಬಲಶಾಲಿಯಾದವನೂ । ಸತ್ಪತೇ—ಸಜ್ಜನರ ಪಾಲಕನೂ ಆದ । ಇಂದ್ರ—ಎಲೈ ಇಂದ್ರನೇ । ಗೃಣತ್ಸು—ಸ್ತುತಿಕರ್ತರಾದ ನಮ್ಮಲ್ಲಿ । ರಯಿಂ—ಧನವನ್ನು । ಧಾರಯ—ಸ್ಥಾಪಿಸು । ಸೂರಿಭ್ಯಃ—

ತೃಗಳಿಗೆ | ಅಮೃತಃ—ನಾಶರಹಿತವಾದುದೂ | ವಸುತ್ವನಃ—ವ್ಯಾಪಕವಾದುದೂ ಆದ | ಶ್ರವಃ—ವನ್ನು (ಒದಗಿಸು).

॥ ಭಾವಾರ್ಥ ॥

ಅತ್ಯಂತ ಬಲಶಾಲಿಯೂ, ಸಜ್ಜನರ ಪಾಲಕನೂ ಆದ ಎಲೈ ಇಂದ್ರನೇ!, ಸ್ತುತಿಕರ್ತರಾದ ನಮ್ಮಲ್ಲಿ ಧನವನ್ನು ಪಿಸು. ಸ್ತೋತೃಗಳಿಗೆ ನಾಶರಹಿತವಾದುದೂ, ವ್ಯಾಪಕವಾದುದೂ ಆದ ಅನ್ನವನ್ನು ಒದಗಿಸು.

**English Translation**

Most powerful Indra, protector of the virtuous, secure us who aise you in the possession of riches, (grant) to the pious imperishable all-rvading sustenance.

॥ ಸಂಹಿತಾಪಾಠಃ ॥

ಹವೇ ತ್ವಾ ಸೂರ ಉದಿತೇ ಹವೇ ಮಧ್ಯಂದಿನೇ ದಿವಃ ।
ಜುಷಾಣ ಇಂದ್ರ ಸಪ್ತಿಭಿರ್ನ ಆ ಗಹಿ ॥ ೧೩ ॥

॥ ಪದಪಾಠಃ ॥

ಹವೇ । ತ್ವಾ । ಸೂರೇ । ಉತ್ऽಇತೇ । ಹವೇ । ಮಧ್ಯಂದಿನೇ । ದಿವಃ ।
ಜುಷಾಣಃ । ಇಂದ್ರ । ಸಪ್ತಿऽಭಿಃ । ನಃ । ಆ । ಗಹಿ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸೂರೇ ಸೂರ್ಯೇ ಉದಿತ ಉದಯಂ ಪ್ರಾಪ್ತೇ ಸತಿ ಪ್ರಾತಃಸವನೇ ತ್ವಾಂ ಹವೇ । ಹ್ವಯೇ । ತಥಾ ದಿವೋ ದಿವಸಸ್ಯ ಮಧ್ಯಂದಿನೇ ಮಧ್ಯಭಾಗೇ ಮಾಧ್ಯಂದಿನಸವನೇ ತ್ವಾಂ ಹವೇ । ಹ್ವಯೇ । ಹೇ ಇಂದ್ರ ಸ ತ್ವಂ ಜುಷಾಣಃ ಪ್ರೀಯಮಾಣಃ ಸನ್ ಸಪ್ತಿಭಿಃ ಸರ್ಪಣಶೀಲೈರಶ್ವೈರ್ನೋऽಸ್ಮಾನಾ ಗಹಿ । ಆಗಚ್ಛ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಸೂರೇ—ಸೂರ್ಯನು । ಉದಿತೇ—ಉದಯವನ್ನು ಹೊಂದಿದಾಗ । ತ್ವಾ—ನಿನ್ನನ್ನು । ಹವೇ—ಕರೆಯುತ್ತೇನೆ । ದಿವಃ—ದಿವಸದ । ಮಧ್ಯಂದಿನೇ—ಮಧ್ಯಾಹ್ನಕಾಲದಲ್ಲಿ । ಹವೇ—ನಿನ್ನನ್ನು ಕರೆಯುತ್ತೇನೆ । ಜುಷಾಣಃ—ನಮ್ಮ ಸ್ತುತಿಗಳಿಂದ ತೃಪ್ತನಾಗಿ । ಸಪ್ತಿಭಿಃ—ನಿನ್ನ ಅಶ್ವಗಳೊಡನೆ । ನಃ—ನಮ್ಮಲ್ಲಿಗೆ । ಆ ಗಹಿ—ದಯಮಾಡು.

। ಭಾವಾರ್ಥ ।

ಎಲೈ ಇಂದ್ರನೇ, ಸೂರ್ಯನು ಉದಯವನ್ನು ಹೊಂದಿದಾಗ ಎಂದರೆ ಪ್ರಾತಃಸವನಕಾಲದಲ್ಲಿ ನಿನ್ನನ್ನು ಕರೆಯುತ್ತೇನೆ. ಮಾಧ್ಯಂದಿನಸವನಕಾಲದಲ್ಲೂ ನಿನ್ನನ್ನು ಕರೆಯುತ್ತೇನೆ. ನಮ್ಮ ಸ್ತುತಿಗಳಿಂದ ತೃಪ್ತನಾಗಿ ನಿನ್ನ ಅಶ್ವಗಳೊಡನೆ ನಮ್ಮಲ್ಲಿಗೆ ದಯಮಾಡು.

## English Translation

I invoke you when the sun is risen; I invoke (you) at mid-day: being propitiated, come to us, Indra, with your gliding steads.

। ಸಂಹಿತಾಪಾಠಃ ।

ಆ ತೂ ಗಹಿ ಪ್ರ ತು ದ್ರವ ಮತ್ಸ್ವ ಸುತಸ್ಯ ಗೋಮತಃ ।
ತಂತುಂ ತನುಷ್ವ ಪೂರ್ವ್ಯಂ ಯಥಾ ವಿದೇ ॥ ೧೪ ॥

। ಪದಪಾಠಃ ।

ಆ । ತು । ಗಹಿ । ಪ್ರ । ತು । ದ್ರವ । ಮತ್ಸ್ವ । ಸುತಸ್ಯ । ಗೋऽಮತಃ ।
ತಂತುಂ । ತನುಷ್ವ । ಪೂರ್ವ್ಯಂ । ಯಥಾ । ವಿದೇ ॥ ೧೪ ॥

। ಸಾಯಣಭಾಷ್ಯಂ ।

ಹೇ ಇಂದ್ರ ತು ಕ್ಷಿಪ್ರಮಾ ಗಹಿ । ಆಗಚ್ಛ । ಆಗತ್ಯ ಚ ತು ಕ್ಷಿಪ್ರಂ ಪ್ರ ದ್ರವ । ಸೋಮೋ ಯತ್ರ ನಿವಸತಿ ತಂ ದೇಶಂ ಪ್ರತಿ ಶೀಘ್ರಂ ಗಚ್ಛ । ಗತ್ವಾ ಚ ಗೋಮತೋ ಗೋವಿಕಾರೈಃ ಪಯಃಪ್ರಭೃತಿಭಿಃ ಶ್ರಯಣದ್ರವ್ಯೈರ್ಯುಕ್ತಸ್ಯ ಸುತಸ್ಯಾಭಿಷುತಸ್ಯ ಸೋಮಸ್ಯ ಪಾನೇನ ಮತ್ಸ್ವ । ಮಾದ್ಯ । ಹೃಷ್ಟೋ ಭವ । ತದನಂತರಂ ಯಥಾಹಂ ವಿದೇ ಉಪಲಭೇ ತಥಾ ಪೂರ್ವ್ಯಂ ಪೂರ್ವೈಃ ಕೃತಂ ತಂತುಂ ವಿಸ್ತೃತಂ ಯಜ್ಞಂ ತನುಷ್ವ । ಸಮ್ಯಙ್ನಿಷ್ಪಾದಯ । ಫಲೋತ್ಪಾದನಸಮರ್ಥಂ ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತು**—ಕ್ಷಿಪ್ರವಾಗಿ । **ಆ ಗಹಿ**—ದಯಮಾಡು । **ತು**—ಕ್ಷಿಪ್ರವಾಗಿ । **ಪ್ರ ದ್ರವ**—ಸೋಮವಿರುವ ಪ್ರದೇಶಕ್ಕೆ ಓಡಿ ಬಾ । **ಗೋಮತಃ**—ಕ್ಷೀರಾದಿಗಳಿಂದ ಮಿಶ್ರಿತವಾದುದೂ । **ಸುತಸ್ಯ**—ಹಿಂಡಿ ಸಿದ್ಧವಾಗಿರುವುದೂ ಆದ ಸೋಮರಸದ ಪಾನದಿಂದ । **ಮತ್ಸ್ವ**—ಹರ್ಷವನ್ನು ಹೊಂದು । **ಯಥಾ**—ಯಾವ ಕರ್ಮದಿಂದ । **ವಿದೇ**—ನಾನು ಧನವನ್ನು ಹೊಂದುವೆನೋ (ಆ ರೀತಿಯಲ್ಲಿ) । **ಪೂರ್ವ್ಯಂ**—ಹಿಂದಿನವರಿಂದ ನೆರವೇರಿಸಲ್ಪಟ್ಟ । **ತಂತುಂ**—ಯಜ್ಞವನ್ನು । **ತನುಷ್ವ**—ಸಂಪಾದಿಸು (ಫಲೋತ್ಪಾದಕವಾಗುವಂತೆ ಮಾಡು).

॥ ಭಾವಾರ್ಥ ॥

ಎಲೈ ಇಂದ್ರನೇ, ಕ್ಷಿಪ್ರವಾಗಿ ದಯಮಾಡು. ಕ್ಷಿಪ್ರವಾಗಿ ಸೋಮವಿರುವ ಪ್ರದೇಶಕ್ಕೆ ಓಡಿ ಬಾ. ಕ್ಷೀರಾದಿಂದ ಮಿಶ್ರಿತವಾದುದೂ, ಹಿಂದೆ ಸಿದ್ಧವಾಗಿರುವುದೂ ಆದ ಸೋಮರಸದ ಪಾನದಿಂದ ಹರ್ಷವನ್ನು ಹೊಂದು. ಏವ ರೀತಿಯಲ್ಲಿ ಎಂದರೆ ಯಾವ ಕರ್ಮವನ್ನು ಮಾಡುವುದರಿಂದ ನಾನು ಧನವನ್ನು ಹೊಂದುವೆನೋ ಆ ರೀತಿಯಲ್ಲಿ ದಿನವರಿಂದ ನೆರವೇರಿಸಲ್ಪಟ್ಟ ಯಜ್ಞವನ್ನು ಸಂಪಾದಿಸು. ಆ ಯಜ್ಞವು ಫಲೋತ್ಪಾದಕವಾಗುವಂತೆ ಮಾಡು.

## English Translatian

Come quickly ; hasten ; be exhilarated by the libation mixed with ıilk ; extend the acient sacrifice, so that I may obtain (its reward).

॥ ಸಂಹಿತಾಪಾಠಃ ॥

ಯಚ್ಛಕ್ರಾಸಿ ಪರಾವತಿ ಯದರ್ವಾವತಿ ವೃತ್ರಹನ್ ।
ಯದ್ವಾ ಸಮುದ್ರೇ ಅಂಧಸೋಽವಿತೇದಸಿ ॥ ೧೫ ॥

॥ ಪದಪಾಠಃ ॥

ಯತ್ । ಶಕ್ರ । ಅಸಿ । ಪರಾಽವತಿ । ಯತ್ । ಅರ್ವಾಽವತಿ । ವೃತ್ರಽಹನ್ ।
ಯತ್ । ವಾ । ಸಮುದ್ರೇ । ಅಂಧಸಃ । ಅವಿತಾ । ಇತ್ । ಅಸಿ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಶಕ್ರ ಶಕ್ತೇಂದ್ರ ಪರಾವತಿ ದೂರದೇಶೇ ಯದ್ಯದ್ಯಸಿ ಭವಸಿ । ಹೇ ವೃತ್ರಹನ್ ಯದ್ಯದಿ ವಾರ್ವಾವತಿ ಸಮೀಪೇ ಭವಸಿ ವರ್ತಸೇ । ಯದ್ವಾ ಯದಿ ವಾ ಸಮುದ್ರೇ ಜಲಧಾವಂತರಿಕ್ಷೇ ವಾ ವರ್ತಸೇ । ತಸ್ಮಾತ್ಸರ್ವಸ್ಮಾತ್ಸ್ಥಾನಾದಾಗತ್ಯಾಂಧಸೋಽನ್ನಸ್ಯ ಸೋಮಲಕ್ಷಣಸ್ಯ ಪಾನೇನಾವಿತಾಸಿ । ರಕ್ಷಿತಾ ಭವಸಿ ॥

॥ ಪ್ರತಿಪದಾರ್ಥ ॥

ಶಕ್ರ—ಶಕ್ತನಾದ ಎಲೈ ಇಂದ್ರನೇ । ಪರಾವತಿ—ಅತ್ಯಂತ ದೂರದೇಶದಲ್ಲಿ । ಯತ್—ಒಂದು ವೇಳೆ । ಅಸಿ—ಇದ್ದರೂ । ವೃತ್ರಹನ್—ಶತ್ರುನಾಶಕನಾದ ಎಲೈ ಇಂದ್ರನೇ । ಯತ್—ಒಂದು ವೇಳೆ । ಅರ್ವಾವತಿ—ಸಮೀಪಪ್ರದೇಶದಲ್ಲಿದ್ದರೂ । ಯದ್ವಾ—ಅಥವಾ ಒಂದು ವೇಳೆ । ಸಮುದ್ರೇ—ಅಂತರಿಕ್ಷದಲ್ಲಿದ್ದರೂ (ಆ ಎಲ್ಲಾ ಪ್ರದೇಶಗಳಿಂದಲೂ) । ಅಂಧಸಃ—ಸೋಮರೂಪವಾದ ಅನ್ನಕ್ಕೆ । ಅವಿತಾ ಇತ್ ಅಸಿ—ರಕ್ಷಕನೇ ಆಗಿದ್ದೀಯೆ.

॥ ಭಾವಾರ್ಥ ॥

ಶಕ್ತನಾದ ಎಲೈ ಇಂದ್ರನೇ, ನೀನು ಅತ್ಯಂತ ದೂರದೇಶದಲ್ಲಿ ಒಂದು ವೇಳೆ ಇದ್ದರೂ, ಶತ್ರುನಾಶಕನಾದ ಎಲೈ ಇಂದ್ರನೇ, ಒಂದು ವೇಳೆ ಸಮೀಪಪ್ರದೇಶದಲ್ಲಿ ಇದ್ದರೂ, ಅಥವಾ ಒಂದು ವೇಳೆ ಅಂತರಿಕ್ಷದಲ್ಲಿದ್ದರೂ ಆ ಎಲ್ಲಾ ಪ್ರದೇಶಗಳಿಂದಲೂ ಸಹ ಸೋಮರೂಪವಾದ ಅನ್ನಕ್ಕೆ ನೀನು ರಕ್ಷಕನೇ ಆಗಿದ್ದೀಯೆ.

## English Translation

Whether, Shakra, you be afar off, or slayer of Vritra, nigh at hand, or whether you be in the firmament, you are guardian of the (sacrificial) food.

। ಸಂಹಿತಾಪಾಠಃ ।

ಇಂದ್ರಂ ವರ್ಧಂತು ನೋ ಗಿರ ಇಂದ್ರಂ ಸುತಾಸ ಇಂದವಃ ।
ಇಂದ್ರೇ ಹವಿಷ್ಮತೀರ್ವಿಶೋ ಅರಾಣಿಷುಃ ॥ ೧೬ ॥

। ಪದಪಾಠಃ ।

ಇಂದ್ರಂ । ವರ್ಧಂತು । ನಃ । ಗಿರಃ । ಇಂದ್ರಂ । ಸುತಾಸಃ । ಇಂದವಃ ।
ಇಂದ್ರೇ । ಹವಿಷ್ಮತೀಃ । ವಿಶಃ । ಅರಾಣಿಷುಃ ॥ ೧೬ ॥

। ಸಾಯಣಭಾಷ್ಯಂ ।

ನೋಽಸ್ಮಾಕಂ ಗಿರಃ ಸ್ತುತಿರೂಪಾ ವಾಚ ಇಂದ್ರಂ ವರ್ಧಂತು । ವರ್ಧಯಂತು । ಸುತಾಸೋಽಭಿಷುತಾ ಇಂದವಃ ಸೋಮಾಶ್ಚಾಸ್ಮದೀಯಾಸ್ತಮಿಂದ್ರಂ ವರ್ಧಯಂತು । ಹವಿಷ್ಮತೀರ್ಹವಿಷ್ಮತ್ಯೋ ಹವಿರ್ಭಿಶ್ಚರುಪುರೋಡಾಶಾದಿಭಿರ್ಯುಕ್ತಾ ವಿಶಃ ಪ್ರಜಾಸ್ತಸ್ಮಿನ್ನಿಂದ್ರೇಽರಾಣಿಷುಃ ಅರಂಸಿಷುಃ ॥

। ಪ್ರತಿಪದಾರ್ಥ ।

ನಃ—ನಮ್ಮ । ಗಿರಃ—ಸ್ತುತಿಗಳು । ಇಂದ್ರಂ—ಇಂದ್ರನನ್ನು । ವರ್ಧಂತು—ಪುಷ್ಟಿಗೊಳಿಸಲಿ । ಸುತಾಸಃ—ನಮ್ಮಿಂದ ಹಿಂಡಲ್ಪಟ್ಟ । ಇಂದವಃ—ಸೋಮರಸಗಳು । ಇಂದ್ರಂ—ಇಂದ್ರನನ್ನು ಪುಷ್ಟಿಗೊಳಿಸಲಿ । ಹವಿಷ್ಮತೀಃ—ಹವಿಸ್ಸನ್ನು ಹೊಂದಿರುವ । ವಿಶಃ—ಪ್ರಜೆಗಳು । ಇಂದ್ರೇ—ಇಂದ್ರನಲ್ಲಿ । ಅರಾಣಿಷುಃ—ಹರ್ಷವನ್ನು ಪ್ರೇರಿಸಲಿ.

॥ ಭಾವಾರ್ಥ ॥

ನಮ್ಮ ಸ್ತುತಿಗಳು ಇಂದ್ರನನ್ನು ಪುಷ್ಟಿಗೊಳಿಸಲಿ. ನಮ್ಮಿಂದ ಹಿಂಡಲ್ಪಟ್ಟ ಸೋಮರಸಗಳು ಇಂದ್ರನನ್ನು ಬೆಳೆಯುವಂತೆ ಮಾಡಲಿ. ಹವಿಸ್ಸನ್ನು ಹೊಂದಿರುವ ಪ್ರಜೆಗಳು ಇಂದ್ರನಲ್ಲಿ ಹರ್ಷವನ್ನು ಉತ್ಪನ್ನಮಾಡಲಿ.

English translation

May our praises magnify Indra! May our effused libations gratify Indra: May the people bearing oblations excite pleasure in Indra!

। ಸಂಹಿತಾಪಾಠಃ ।

ತಮಿದ್ವಿಪ್ರಾ ಅವಸ್ಯವಃ ಪ್ರವತ್ವತೀಭಿರೂತಿಭಿಃ ।
ಇಂದ್ರಂ ಕ್ಷೋಣೀರವರ್ಧಯನ್ವಯಾ ಇವ ॥ ೧೭ ॥

। ಪದಪಾಠಃ ।

ತಂ । ಇತ್ । ವಿಪ್ರಾಃ । ಅವಸ್ಯವಃ । ಪ್ರವತ್ವತೀಭಿಃ । ಊತಿಽಭಿಃ ।
ಇಂದ್ರಂ । ಕ್ಷೋಣೀಃ । ಅವರ್ಧಯನ್ । ವಯಾಃಽಇವ ॥ ೧೭ ॥

॥ ಸಾಯಣಭಾಷ್ಯಂ ॥

ವಿಪ್ರಾ ಮೇಧಾವಿನೋಽವಸ್ಯವೋ ರಕ್ಷಣಕಾಮಾಃ ಸ್ತೋತಾರಸ್ತಮಿತ್ತಮೇವೇಂದ್ರಂ ಪ್ರವತ್ವತೀಭಿಃ ಪ್ರಕರ್ಷೇಣಾಭಿಗಂತ್ರೀಭಿರೂತಿಭಿಸ್ತೃಪ್ತಿಕರೀಭಿರಾಹುತಿಭಿಃ ಸ್ತುತಿಭಿರ್ವಾ ವರ್ಧಯಂತಿ । ತಥಾ ಕ್ಷೋಣೀಃ ಕ್ಷೋಣ್ಯಃ । ಕ್ಷೋಣೀತಿ ಪೃಥಿವೀನಾಮ । ತದುಪಲಕ್ಷಿತಾಃ ಸರ್ವೇ ಲೋಕಾ ವಯಾ ಇವ ವೃಕ್ಷಸ್ಯ ಶಾಖಾ ಇವ ತದಧೀನಾಃ ಸಂತೋಽವರ್ಧಯನ್ । ವರ್ಧಯಂತಿ ॥

॥ ಪ್ರತಿಪದಾರ್ಥ ॥

ವಿಪ್ರಾಃ—ಮೇಧಾವಿಗಳೂ । ಅವಸ್ಯವಃ—ರಕ್ಷಣೆಯನ್ನಿಚ್ಛಿಸುವವರೂ ಆದ ಸ್ತುತಿಕರ್ತರು । ಪ್ರವತ್ವತೀಭಿಃ—ಪ್ರಭೂತವಾದುದೂ । ಊತಿಭಿಃ—ಪುಷ್ಟಿದಾಯಕವೂ ಆದ ಹವಿಸ್ಸುಗಳಿಂದ । ತಮಿತ್ ಇಂದ್ರಂ—ಅದೇ ಇಂದ್ರನನ್ನೇ ವೃದ್ಧಿಗೊಳಿಸುತ್ತಾರೆ । ಕ್ಷೋಣೀಃ—ಸಕಲಲೋಕಗಳೂ ಸಹ । ವಯಾ ಇವ—ವೃಕ್ಷಶಾಖೆಗಳು ವೃಕ್ಷಾಧೀನವಾಗಿರುವಂತೆ ಆ ಇಂದ್ರನ ಅಧೀನದಲ್ಲಿದ್ದುಕೊಂಡು । ಅವರ್ಧಯನ್—ಆ ಇಂದ್ರನನ್ನು ಪುಷ್ಟಿಗೊಳಿಸಿದವು.

॥ ಭಾವಾರ್ಥ ॥

ಮೇಧಾವಿಗಳೂ, ರಕ್ಷಣೆಯನ್ನಿಚ್ಛಿಸುವವರೂ ಆದ ಸ್ತುತಿಕರ್ತರು ಪ್ರಭೂತವಾದುದೂ, ಪುಷ್ಟಿದಾಯಕವೂ ಆದ ಹವಿಸ್ಸುಗಳಿಂದ ಅದೇ ಇಂದ್ರನನ್ನೇ ವೃದ್ಧಿಗೊಳಿಸುತ್ತಾರೆ. ವೃಕ್ಷಶಾಖೆಗಳು ವೃಕ್ಷಾಧೀನವಾಗಿರುವಂತೆ ಸಕಲ ಲೋಕಗಳೂ ಆ ಇಂದ್ರನ ಅಧೀನದಲ್ಲಿದ್ದುಕೊಂಡು ಆ ಇಂದ್ರನನ್ನು ಪುಷ್ಟಿಗೊಳಿಸಿದವು.

## English Translation

The pious, desiring his protection, magnify him by ample and pleasure-yielding (libations): the earth, (and the other worlds), spread out like the branches of a tree, magnify Indra.

॥ ಸಂಹಿತಾಪಾಠಃ ॥

ತ್ರಿಕದ್ರುಕೇಷು ಚೇತನಂ ದೇವಾಸೋ ಯಜ್ಞಮತ್ನತ ।
ತಮಿದ್ವರ್ಧಂತು ನೋ ಗಿರಃ ಸದಾವೃಧಂ ॥ ೧೮ ॥

॥ ಪದಪಾಠಃ ॥

ತ್ರಿಽಕದ್ರುಕೇಷು । ಚೇತನಂ । ದೇವಾಸಃ । ಯಜ್ಞಂ । ಅತ್ನತ ।
ತಂ । ಇತ್ । ವರ್ಧಂತು । ನಃ । ಗಿರಃ । ಸದಾಽವೃಧಂ ॥ ೧೮ ॥

॥ ಸಾಯಣಭಾಷ್ಯಂ ॥

ತ್ರಿಕದ್ರುಕೇಷು । ತ್ರಿಕದ್ರುಕಾ ನಾಮ ಜ್ಯೋತಿರ್ಗೌರಾಯುರಿತಿ ತ್ರಯಾಭಿಪ್ಲವಿಕಾನ್ಯಹಾನಿ । ತೇಷು ದೇವಾಸೋ ದೇವಾಶ್ಚೇತನಂ ಚೇತಯಿತಾರಮಿಂದ್ರಂ ಯಜ್ಞಂ ಯಷ್ಟವ್ಯಮತ್ನತ । ಅತನ್ವತ । ಅಕೃಷತ ॥ ತನೋತೇರ್ಲಙಿ ಛಾಂದಸೋ ವಿಕರಣಸ್ಯ ಲುಕ್ । ತನಿಪತ್ಯೋಶ್ಛಂದಸೀತ್ಯುಪಧಾಲೋಪಃ ॥ ತಮಿತ್ತಮೇವೇಂದ್ರಂ ನೋಽಸ್ಮಾಕಂ ಗಿರಃ ಸ್ತುತಯಶ್ಚ ವರ್ಧಯಂತು । ಕೀದೃಶಂ । ಸದಾವೃಧಂ ಸರ್ವದಾ ಸ್ತೋತ್ರ್ಯಾಣಾಂ ವರ್ಧಯಿತಾರಂ ।

॥ ಪ್ರತಿಪದಾರ್ಥ ॥

ತ್ರಿಕದ್ರುಕೇಷು—ತ್ರಿಕದ್ರುಕಸಂಜ್ಞಕವಾದ ಯಜ್ಞದಿವಸಗಳಲ್ಲಿ । ದೇವಾಸಃ—ದೇವತೆಗಳು । ಚೇತನಂ—ಪ್ರಜ್ಞಾಪಕನಾದ ಇಂದ್ರನನ್ನು । ಯಜ್ಞಂ—ಯಜ್ಞಾರ್ಹನನ್ನಾಗಿ । ಅತ್ನತ—ಮಾಡಿದರು । ನಃ—ನಮ್ಮ । ಗಿರಃ—ಸ್ತುತಿಗಳು । ಸದಾವೃಧಂ—ಸ್ತೋತೃಗಳನ್ನು ಸರ್ವದಾ ಪ್ರವೃದ್ಧರಾಗುವಂತೆ ಮಾಡತಕ್ಕ । ತಂ ಇತ್—ಆ ಇಂದ್ರನನ್ನೇ । ವರ್ಧಂತು—ಪುಷ್ಟಿಗೊಳಿಸಲಿ.

। ಭಾವಾರ್ಥ ।

ಜ್ಯೋತಿಃ, ಗೌಃ, ಆಯುಃ ಎಂಬ ತ್ರಿಕದ್ರುಕ ಸಂಜ್ಞಕವಾದ ಯಜ್ಞದಿವಸಗಳಲ್ಲಿ ದೇವತೆಗಳು ಪ್ರಜ್ಞಾಪಕನಾದ ಇಂದ್ರನನ್ನು ಪೂಜಾಪಾತ್ರನನ್ನಾಗಿ ಮಾಡಿದರು ನಮ್ಮ ಸ್ತುತಿಗಳು, ಸ್ತೋತ್ರಗಳನ್ನು ಸರ್ವದಾ ಪ್ರವೃದ್ಧರಾಗುವಂತೆ ಮಾಡತಕ್ಕ ಆ ಇಂದ್ರನನ್ನೇ ಪುಷ್ಟಿಗೊಳಿಸಲಿ.

## English Translation

The god propitiate the superintending adorable (Indra) at the Trikadruka rites. May our praises magnify him who is ever the magnifier (of his worshippers).

॥ ವಿಶೇಷವಿಷಯಗಳು ॥

**ತಂ ಇತ್ ವರ್ಧಂತು ನೋ ಗಿರಃ**—ನಮ್ಮ ಸ್ತುತಿರೂಪವಾದ ವಾಕ್ಯಗಳು ಆ ಇಂದ್ರನನ್ನೇ ವೃದ್ಧಿಗೊಳಿಸಲಿ. ಸ್ತುತಿಗಳು, ಸ್ತೋತ್ರಗಳು ದೇವತೆಗಳನ್ನು ವೃದ್ಧಿಯಾಗುವಂತೆ ಮಾಡಲಿ ಎಂದು ಹೇಳುವುದು ಋಗ್ವೇದದಲ್ಲಿ ವಿಶೇಷವಾಗಿ ರೂಢಿಯಲ್ಲಿವೆ. ವೃದ್ಧಿಗೊಳಿಸಲಿ ಎಂದರೆ, ನಾವು ಮಾಡುವ ಗುಣಗಾನರೂಪವಾದ ಪ್ರಶಂಸೆಗಳಿಂದ ಆಯಾ ದೇವತೆಗಳು ಸಂತುಷ್ಟರಾಗಿ ಉತ್ಸಾಹಪೂರಿತರಾಗಲಿ ಎಂದಭಿಪ್ರಾಯವು. ಲೋಕವ್ಯವಹಾರದಲ್ಲಿಯೂ ಸಹ ಒಬ್ಬ ಮನುಷ್ಯನನ್ನು ನಾವು ಹೊಗಳಿದರೆ ಅವನು ಸಂತೋಷಪಡುವುದಲ್ಲದೆ ಅವನ ಉತ್ಸಾಹವು ಇಮ್ಮಡಿಯಾಗುವುದು. ಯುದ್ಧಾದಿಗಳಲ್ಲಿಯೂ ಸಹ ಯುದ್ಧಮಾಡುವ ಭಟರನ್ನು ಪ್ರಶಂಸಾವಾಕ್ಯಗಳಿಂದ ಪ್ರೋತ್ಸಾಹಗೊಳಿಸುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಅದರಂತೆ ದೇವತೆಗಳನ್ನು ಸ್ತೋತ್ರಮಾಡಿದಲ್ಲಿ ಅವರು ಸಂತುಷ್ಟರಾಗಿ ವೃದ್ಧಿಯನ್ನೈದುವರು ಎಂಬ ವಿಷಯವು ರೂಢಿಯಲ್ಲಿ ಬಂದಿದೆ. ಇದನ್ನು ಸಮರ್ಥಿಸುವುದಕ್ಕಾಗಿ ಯಾಸ್ಕರು—**ತಮಿದ್ವರ್ಧಂತು ನೋ ಗಿರಃ । ತಂ ವರ್ಧಯಂತ ನೋ ಗಿರಃ** ಎಂದು ಎರಡು ಶ್ರುತಿವಾಕ್ಯಗಳನ್ನು ಉದಾಹರಿಸಿದಾರೆ (ನಿ. ೧-೧೦)

। ಸಂಹಿತಾಪಾಠಃ ॥

ಸ್ತೋತಾ ಯತ್ತೇ ಅನುವ್ರತ ಉಕ್ಥಾನ್ಯೃತುಥಾ ದಧೇ ।
ಶುಚಿಃ ಪಾವಕ ಉಚ್ಯತೇ ಸೋ ಅದ್ಭುತಃ ॥ ೧೯ ॥

। ಪದಪಾಠಃ ।

ಸ್ತೋತಾ । ಯತ್ । ತೇ । ಅನುऽವ್ರತಃ । ಉಕ್ಥಾನಿ । ಋತುऽಥಾ । ದಧೇ ।
ಶುಚಿಃ । ಪಾವಕಃ । ಉಚ್ಯತೇ । ಸಃ । ಅದ್ಭುತಃ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯದ್ಯಸ್ಯ ತೇ ತವ ಸ್ತೋತಾನುವ್ರತೋಽನುಕೂಲಕರ್ಮಾ ಸನ್ನೃತುಥಾ ಋತುಷು ಕಾಲೇ ಕಾಲ ಉಕ್ಥಾನಿ ಶಸ್ತ್ರಾದಿ ದಧೇ ವಿಧತ್ತೇ ಕರೋತಿ ॥ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥ ಪರೋಽರ್ಥರ್ಚಃ ಪರೋಕ್ಷಕೃತಃ । ಸ ಇಂದ್ರೋಽದ್ಭುತ ಆಶ್ಚರ್ಯಭೂತಃ ಶುಚಿಃ ಶುದ್ಧಃ ಪಾವಕೋಽನ್ಯೇಷಾಮಪಿ ಶೋಧಕ ಉಚ್ಯತೇ । ಸ್ತೋತೃಭಿಃ ಸ್ತೂಯತೇ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಯತ್ ತೇ—ಯಾವ ನಿನ್ನ । ಸ್ತೋತಾ—ಸ್ತುತಿಕರ್ತನು । ಅನುವ್ರತಃ—ನಿನಗೆ ಅನುಕೂಲವಾದ ಕರ್ಮವುಳ್ಳವನಾಗಿ । ಋತುಥಾ-ಆಯಾ ಋತುಗಳಿಗನುಗುಣವಾಗಿ । ಉಕ್ಥಾನಿ—ಶಸ್ತ್ರಮಂತ್ರಗಳನ್ನು । ದಧೇ—ನಿರ್ಮಿಸುವನೋ । ಸಃ—ಅಂತಹ ನೀನು । ಅದ್ಭುತಃ—ಆಶ್ಚರ್ಯಭೂತನೆಂದೂ । ಶುಚಿಃ—ಶುದ್ಧನೆಂದೂ । ಪಾವಕಃ—ಶುದ್ಧಿಕಾರಕನೆಂದೂ । ಉಚ್ಯತೇ—ಪ್ರಶಂಸಿಸಲ್ಪಡುತ್ತೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ನಿನ್ನ ಸ್ತುತಿಕರ್ತನು ನಿನಗೆ ಅನುಕೂಲವಾದ ಕರ್ಮವುಳ್ಳವನಾಗಿ ಆಯಾ ಋತುಗಳಿಗನುಗುಣವಾದ ಶಸ್ತ್ರಮಂತ್ರಗಳನ್ನು ನಿರ್ಮಿಸುವನೋ ಅಂತಹ ನೀನು ಆಶ್ಚರ್ಯಭೂತನೆಂದೂ, ಶುದ್ಧನೆಂದೂ, ಶುದ್ಧಿ ಕಾರಕನೆಂದೂ ಪ್ರಶಂಸಿಸಲ್ಪಡುತ್ತೀಯೆ.

## English Translation

Your worshipper is observant of his duty, inasmuch as he offers prayers in due season; for you are he who is called pure, purifying, wonderful.

॥ ಸಂಹಿತಾಪಾಠಃ ॥

ತದಿದ್ರುದ್ರಸ್ಯ ಚೇತತಿ ಯಹ್ವಂ ಪ್ರತ್ನೇಷು ಧಾಮಸು ।
ಮನೋ ಯತ್ರಾ ವಿ ತದ್ದಧುರ್ವಿಚೇತಸಃ ॥ ೨೦ ॥

॥ ಪದಪಾಠಃ ॥

ತತ್ । ಇತ್ । ರುದ್ರಸ್ಯ । ಚೇತತಿ । ಯಹ್ವಂ । ಪ್ರತ್ನೇಷು । ಧಾಮಽಸು ।
ಮನಃ । ಯತ್ರ । ವಿ । ತತ್ । ದಧುಃ । ವಿಽಚೇತಸಃ ॥ ೨೦ ॥

॥ ಸಾಯಣಭಾಷ್ಯಂ ॥

ತದಿತ್ತದೇವ ರುದ್ರಸ್ಯ । ರುದ್ದುಃಖಂ । ತಸ್ಯ ದ್ರಾವಯಿತುರೀಶ್ವರಸ್ಯ ಯಹ್ವಮಪತ್ಯಂ

ಮರುತ್ಸಂಘಾತ್ಮಕಂ । ಯದ್ವಾ । ರುದ್ರಶಬ್ದೇನ ಲಕ್ಷಣಯಾ ಮರುದ್ಗಣ ಉಚ್ಯತೇ । ರುದ್ರಸ್ಯ ರುದ್ರಪುತ್ರಸ್ಯ ಮರುದ್ಗಣಸ್ಯ ಯಹ್ವಂ । ಮಹನ್ನಾಮೈತತ್ । ಮಹತ್ತ್ವದೇವ ಬಲಂ ಪ್ರತ್ನೇಷು ಚಿರಂತನೇಷು ಧಾಮಸು ಪೃಥಿವ್ಯಾದಿಸ್ಥಾನೇಷು ಚೇತತಿ । ಜ್ಞಾಯತೇ । ವರ್ತತೇ । ಯತ್ರ ಯಸ್ಮಿನ್ಸ್ಪಲವಿಷಯೇ ವಿಚೇತಸೋ ವಿಶಿಷ್ಟಜ್ಞಾನಾಃ ಸ್ತೋತಾರಸ್ತತ್ಪ್ರಸಿದ್ಧಂ ಮನೋ ಮನನಸಾಧನಂ ಸ್ತೋತ್ರಂ ವಿ ದಧುಃ ಕುರ್ವಂತಿ ತದಿತ್ಯನ್ವಯಃ ॥

। ಪ್ರತಿಪದಾರ್ಥ ।

ಯತ್ರ—ಯಾವ ಮರುತ್ಸಂಘವನ್ನು ನಿರ್ದೇಶಿಸಿ । ವಿಚೇತಸಃ—ಪ್ರಾಜ್ಞರು । ತತ್—ಪ್ರಸಿದ್ಧವಾದ । ಮನಃ—ಸ್ತೋತ್ರವನ್ನು । ವಿ ದಧುಃ—ವಿಶೇಷರೀತಿಯಿಂದ ನಿರ್ಮಿಸುವರೋ । ತದಿತ್—ಅದೇ । ರುದ್ರಸ್ಯ—ರುದ್ರನ । ಯಹ್ವಂ—ಪುತ್ರರೂಪವಾದ ಮರುತ್ಸಂಘವು । ಪ್ರತ್ನೇಷು—ಪುರಾತನಗಳಾದ । ಧಾಮಸು—ಪೃಥಿವ್ಯಾದಿಸ್ಥಾನಗಳಲ್ಲಿ । ಚೇತತಿ—ತಿಳಿಯಲ್ಪಡುತ್ತದೆ.

। ಭಾವಾರ್ಥ ।

ಯಾವ ಮರುತ್ಸಂಘವನ್ನು ನಿರ್ದೇಶಿಸಿ ಪ್ರಾಜ್ಞರಾದ ಸ್ತುತಿಕರ್ತರು ಪ್ರಸಿದ್ಧವಾದ ಸ್ತೋತ್ರವನ್ನು ವಿಶೇಷ ರೀತಿಯಿಂದ ಅರ್ಪಿಸುವರೋ ರುದ್ರನ ಪುತ್ರರೂಪವಾದ ಅದೇ ಮರುತ್ಸಂಘದ ಅಸ್ತಿತ್ವವು ಪುರಾತನಗಳಾದ ಪೃಥಿವ್ಯಾದಿ ಸ್ಥಾನಗಳಲ್ಲೆಲ್ಲಾ ಗೋಚರವಾಗುತ್ತದೆ.

## English Translation

The progeny of Rudra (the Maruts) is known in ancient places, and to them the intelligent worshippers offer adoration.

। ಸಂಹಿತಾಪಾಠಃ ।

ಯದಿ ಮೇ ಸಖ್ಯಮಾವರ ಇಮಸ್ಯ ಪಾಹ್ಯಂಧಸಃ ।
ಯೇನ ವಿಶ್ವಾ ಅತಿ ದ್ವಿಷೋ ಅತಾರಿಮ ॥ ೨೧ ॥

॥ ಪದಪಾಠಃ ॥

ಯದಿ । ಮೇ । ಸಖ್ಯಂ । ಆऽವರಃ । ಇಮಸ್ಯ । ಪಾಹಿ । ಅಂಧಸಃ ।
ಯೇನ । ವಿಶ್ವಾಃ । ಅತಿ । ದ್ವಿಷಃ । ಅತಾರಿಮ ॥ ೨೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮಮ ಸಖ್ಯಂ ಸಖಿತ್ವಂ ಯದ್ಯಾವರಃ ಯದ್ಯಾಭಿಮುಖ್ಯೇನ ವೃಣುಯಾಃ ತರ್ಹಿ–

ಮಸ್ಮಾಕಂ || ಹರಿ ಲೋಪಾಭಾವಶ್ಛಾಂದಸಃ || ಪುರೋವರ್ತಿನೋಽಂಧಸೋಽನ್ನಸ್ಯ ಸೋಮಲಕ್ಷಣಸ್ಯ ಸ್ವಾಂಶಂ ಪಾಹಿ | ಪಿಬ || ಅಂಧಸ ಇತಿ ಕರ್ಮಣಿ ವಾ ಷಷ್ಠೀ | ಪಿಬತೇಶ್ಛಾಂದಸಃ ಶಪೋ ಲುಕ್|| ಯೇನ ತೃಪ್ತೇನ ಸೋಮೇನ ಹೇತುನಾ ವಯಂ ವಿಶ್ವಾಃ ಸರ್ವಾ ದ್ವಿಷೋ ದ್ವೇಷ್ಟ್ರೀಃ ಶತ್ರುಸೇನಾ ಅತ್ಯತಾರಿಮ ಅತಿತರೇಮ ಅತಿಕ್ರಾಮೇಮ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) ಯದಿ—ಒಂದು ವೇಳೆ | ಮೇ ಸಖ್ಯಂ—ನಮ್ಮೊಡನೆ ಮಿತ್ರತ್ವವನ್ನು | ಆವರಃ—ನೀನು ಅಪೇಕ್ಷಿಸಿದ್ದೇ ಆದರೆ | ಯೇನ—ಯಾವ ಸೋಮದ ಪಾನದ ಫಲವಾಗಿ | (ವಯಂ—ನಾವು) | ವಿಶ್ವಾಃ—ಸಮಸ್ತವಾದ | ದ್ವಿಷಃ—ಶತ್ರುಗಳನ್ನೂ | ಅತಿ ಅತಾರಿಮ—ಜಯಿಸುವೆವೋ | ಇಮಸ್ಯ—ಅಂತಹ | ಅಂಧಸಃ—ಸೋಮರಸವನ್ನು | ಪಾಹಿ—ಪಾನಮಾಡು.

| ಭಾವಾರ್ಥ |

ಎಲೈ ಇಂದ್ರನೇ, ನಮ್ಮೊಡನೆ ನೀನು ಮಿತ್ರತ್ವವನ್ನು ಅಪೇಕ್ಷಿಸಿದ್ದೇ ಆದರೆ, ಯಾವ ಸೋಮಪಾನದ ಫಲವಾಗಿ ನಾವು ನಮ್ಮ ಸಮಸ್ತ ಶತ್ರುಗಳನ್ನೂ ಜಯಿಸುವೆವೋ ಅಂತಹ ಸೋಮರಸವನ್ನು ಪಾನಮಾಡು.

## English Translation

If, (Indra), you choose my friendship, partake of this (sacrificial) food, by which we may pass beyond (the reach of) all adversaries.

|| ಸಂಹಿತಾಪಾಠಃ ||

ಕದಾ ತ ಇಂದ್ರ ಗಿರ್ವಣಃ ಸ್ತೋತಾ ಭವಾತಿ ಶಂತಮಃ |

ಕದಾ ನೋ ಗವ್ಯೇ ಅಶ್ವ್ಯೇ ವಸೌ ದಧಃ || ೨೨ ||

|| ಪದಪಾಠಃ ||

ಕದಾ | ತೇ | ಇಂದ್ರ | ಗಿರ್ವಣಃ | ಸ್ತೋತಾ | ಭವಾತಿ | ಶಂಽತಮಃ |

ಕದಾ | ನಃ | ಗವ್ಯೇ | ಅಶ್ವ್ಯೇ | ವಸೌ | ದಧಃ || ೨೨ ||

|| ಸಾಯಣಭಾಷ್ಯಂ ||

ಹೇ ಗಿರ್ವಣೋ ಗಿರಾಂ ಸ್ತುತೀನಾಂ ಸಂಭಕ್ತರಿಂದ್ರ ತೇ ತವ ಸ್ತೋತಾ ಶಂತಮಃ ಸುಖತಮೋಽತಿಶಯೇನ ಸುಖವಾನ್ ಕದಾ ಕಸ್ಮಿನ್ಕಾಲೇ ಭವಾತಿ | ಭವೇತ್ | ಕದಾ ಕಸ್ಮಿಂಶ್ಚ ಕಾಲೇ

ನೋಽಸ್ಮಾನ್ ಗವ್ಯೇ ಗೋಸಮೂಹೇಽಶ್ವ್ಯೇಽಶ್ವಸಂಘೇ ವಸೌ ನಿವಾಸಭೂತೇಽನ್ಯಸ್ಮಿನ್ನಪಿ ಧನೇ ದಧಃ । ಧಾರಯೇಃ ॥

। ಪ್ರತಿಪದಾರ್ಥ ।

ಗಿರ್ವಣಃ—ಸ್ತುತಿಗಳಿಂದ ಹರ್ಷವನ್ನು ಹೊಂದುವ । ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಸ್ತೋತಾ—ಸ್ತುತಿಕರ್ತನು । ಕದಾ—ಯಾವಾಗ । ಶಂತಮಃ—ಅತ್ಯಂತ ಸುಖಯುಕ್ತನಾಗಿ । ಭವಾತಿ—ಆಗುತ್ತಾನೆ । ಕದಾ—ಯಾವಾಗ । ನಃ—ನಮ್ಮನ್ನು । ಗವ್ಯೇ—ಗೋಸಮೂಹದಲ್ಲೂ । ಅಶ್ವ್ಯೇ—ಅಶ್ವಸಮೂಹದಲ್ಲೂ । ವಸೌ—ನಿವಾಸಸ್ಥಾನದಲ್ಲಿಯೂ । ದಧಃ—ಸ್ಥಾಪಿಸುತ್ತೀಯೆ ?

। ಭಾವಾರ್ಥ ।

ಸ್ತುತಿಗಳಿಂದ ಹರ್ಷವನ್ನು ಹೊಂದತಕ್ಕ ಎಲೈ ಇಂದ್ರನೇ, ನಿನ್ನ ಸ್ತುತಿಕರ್ತನು ಅತ್ಯಂತ ಸುಖಯುಕ್ತನಾಗಿರುವಂತೆ ಯಾವಾಗ ಮಾಡುತ್ತೀಯೆ ? ನಮ್ಮನ್ನು ಗೋಸಮೂಹದಲ್ಲೂ, ಅಶ್ವಸಮೂಹದಲ್ಲೂ, ಗೃಹಮಧ್ಯದಲ್ಲೂ ಯಾವಾಗ ಸ್ಥಾಪಿಸುತ್ತೀಯೆ ?

## English Translation

When, Indra, who delight in praise, may your worshipper be entirely happy ? When will you establish us in (the affluence of) cattle, of horses, of dwellings ?

॥ ಸಂಹಿತಾಪಾಠಃ ॥

ಉತ ತೇ ಸುಷ್ಟುತಾ ಹರೀ ವೃಷಣಾ ವಹತೋ ರಥಂ ।
ಅಜುರ್ಯಸ್ಯ ಮದಿಂತಮಂ ಯಮೀಮಹೇ ॥ ೨೩ ॥

। ಪದಪಾಠಃ ।

ಉತ । ತೇ । ಸುಽಸ್ತುತಾ । ಹರೀ ಇತಿ । ವೃಷಣಾ । ವಹತಃ । ರಥಂ ।
ಅಜುರ್ಯಸ್ಯ । ಮದಿನ್ಽತಮಂ । ಯಂ । ಈಮಹೇ ॥ ೨೩ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಇಂದ್ರ ಸುಷ್ಟುತಾ ಶೋಭನಂ ಸ್ತುತೌ ವೃಷಣೌ ಕಾಮಾನಾಂ ವರ್ಷಿತಾರೌ ಹರೀ ಅಶ್ವಾವಜುರ್ಯಸ್ಯ ಜರಾರಹಿತಸ್ಯ ತೇ ತವ ರಥಮಿದಾನೀಂ ವಹತಃ । ಅಸ್ಮನ್ನಿಕಟಂ ಪ್ರಾಪಯತಃ । ಮದಿಂತಮಮತಿಶಯೇನ ಮದವಂತಂ ಯಂ ತ್ವಾಂ ಧನಮೀಮಹೇ ಯಾಚಾಮಹೇ ತಸ್ಯ ತ ಇತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಉತ**—ಮತ್ತು | (ಇಂದ್ರ—ಎಲೈ ಇಂದ್ರನೇ) | **ಮದಿಂತಮಂ**—ಅತಿಶಯವಾದ ತೃಪ್ತಿಯುಳ್ಳ | **ಯಂ**—ಯಾವ ನಿನ್ನಿಂದ | **ಈಮಹೇ**—ಧನವನ್ನು ಯಾಚಿಸುವೆವೋ ಅಂತಹ | **ಅಜುರಸ್ಯ**—ಜರಾರಹಿತನಾದ | **ತೇ**—ನಿನ್ನ | **ರಥಂ**—ರಥವನ್ನು | **ಸುಷ್ಟುತಾ**—ಅತಿ ಪ್ರಶಂಸನೀಯವಾದವೂ | **ವೃಷಣಾ**—ಇಷ್ಟಾರ್ಥಪ್ರದವಾದವೂ ಆದ | **ಹರೀ**—ಅಶ್ವಗಳು | **ವಹತಃ**—ವಹಿಸುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಅತಿಶಯವಾದ ತೃಪ್ತಿಯುಳ್ಳ ಯಾವ ನಿನ್ನಿಂದ ನಾವು ಧನವನ್ನು ಯಾಚಿಸುವೆವೋ ಅಂತಹ ಜರಾರಹಿತನಾದ ನಿನ್ನ ರಥವನ್ನು ಅತಿ ಪ್ರಶಂಸನೀಯವಾದವೂ, ಇಷ್ಟಾರ್ಥಪ್ರದವೂ ಆದ ಅಶ್ವಗಳು ವಹಿಸುತ್ತವೆ.

## English Translation

Dr, when will your renowned and vigorous horses bring the chariot of you, who are exempt from decay, that exhilarating (wealth) which we solicit ?

॥ ಸಂಹಿತಾಪಾಠಃ ॥

ತಮೀಮಹೇ ಪುರುಷ್ಟುತಂ ಯಹ್ವಂ ಪ್ರತ್ನಾಭಿರೂತಿಭಿಃ ।
ನಿ ಬರ್ಹಿಷಿ ಪ್ರಿಯೇ ಸದದಧ ದ್ವಿತಾ ॥ ೨೪ ॥

॥ ಪದಪಾಠಃ ॥

ತಂ । ಈಮಹೇ । ಪುರುऽಸ್ತುತಂ । ಯಹ್ವಂ । ಪ್ರತ್ನಾಭಿಃ । ಊತಿऽಭಿಃ ।
ನಿ । ಬರ್ಹಿಷಿ । ಪ್ರಿಯೇ । ಸದತ್ । ಅಧ । ದ್ವಿತಾ ॥ ೨೪ ॥

॥ ಸಾಯಣಭಾಷ್ಯಂ ॥

ಯಹ್ವಂ ಮಹಾಂತಂ ಪುರುಸ್ತುತಂ ಬಹುಭಿಃ ಸ್ತುತಂ ತಮಿಂದ್ರಂ ಪ್ರತ್ನಾಭಿಃ ಪುರಾಣೀಭಿರೂತಿಭಿಸ್ತೃಪ್ತಿಕರೀಭಿಃ ಸೋಮಾಹುತಿಭಿರ್ಹೇತುಭಿರೀಮಹೇ । ಯಾಚಾಮಹೇ । ಸ ಚೇಂದ್ರಃ ಪ್ರಿಯೇ ಪ್ರೀತಿಕರೇ ಬರ್ಹಿಷ್ಯಾಸ್ತೀರ್ಣೇ ದರ್ಭೇ ನಿ ಷದತ್ । ನಿಷೀದತು । ಹವಿಃಸ್ವೀಕರಣಾಯೋಪವಿಶತು । ಅಧಾನಂತರಂ ದ್ವಿತಾ ದ್ವೈಧಂ ವರ್ತಮಾನಾನಿ ಚರುಪುರೋಡಾಶಾದೀನಿ ಸೋಮಲಕ್ಷಣಾನಿ ಚ ಹವೀಂಷಿ ಸ್ವೀಕರೋತ್ವಿತಿ ಶೇಷಃ ॥

॥ ಪ್ರತಿಪದಾರ್ಥ ॥

ಯಹ್ವಂ—ಮಹಾತ್ಮನೂ । ಪುರುಸ್ತುತಂ—ಅನೇಕರಿಂದ ಪ್ರಶಂಸಿತನೂ ಆದ । ತಂ—ಇಂದ್ರನನ್ನು । ಪ್ರತ್ನಾಭಿಃ—ಪುರಾತನವೂ । ಊತಿಭಿಃ—ತೃಪ್ತಿಕಾರಕವೂ ಆದ ಸ್ತುತಿಗಳಿಂದ । ಈಮಹೇ—ಯಾಚಿಸುತ್ತೇವೆ । (ಸಃ—ಅದೇ ಇಂದ್ರನು) । ಪ್ರಿಯೇ-ಪ್ರಿಯವನ್ನುಂಟುಮಾಡುವ । ಬರ್ಹಿಷಿ—ದರ್ಭಾಸನದ ಮೇಲೆ । ನಿ ಷದತ್-ಕುಳಿತುಕೊಳ್ಳಲಿ । ಅಧ—ಅನಂತರ । ದ್ವಿತಾ—ಚರುಪುರೋಡಾಶಾದಿ ಸೋಮರೂಪಗಳಾದ ಹವಿಸ್ಸುಗಳನ್ನು ಸ್ವೀಕರಿಸಲಿ.

॥ ಭಾವಾರ್ಥ ॥

ಮಹಾತ್ಮನೂ ಅನೇಕರಿಂದ ಪ್ರಶಂಸಿತನೂ ಆದ ಇಂದ್ರನನ್ನು ಪುರಾತನವೂ, ತೃಪ್ತಿಕಾರಕವೂ ಆದ ಸ್ತುತಿಗಳಿಂದ ಯಾಚಿಸುತ್ತೇವೆ. ಅದೇ ಇಂದ್ರನು ತನಗೆ ಪ್ರಿಯಕಾರಕವಾದ ದರ್ಭಾಸನದ ಮೇಲೆ ಕುಳಿತುಕೊಳ್ಳಲಿ. ಅನಂತರ ಚರುಪುರೋಡಾಶಾದಿ ಸೋಮರೂಪಗಳಾದ ಹವಿಸ್ಸುಗಳನ್ನು ಸ್ವೀಕರಿಸಲಿ.

## English Translation

We solicit with ancient and gratifying (offerings) him who is mighty and the invoked of many; may he sit down on the pleasant sacred grass, and accept the two-fold (offering of cakes and Soma juice).

॥ ಸಂಹಿತಾಪಾಠಃ ॥

ವರ್ಧಸ್ವಾ ಸು ಪುರುಷ್ಟುತ ಋಷಿಷ್ಟುತಾಭಿರೂತಿಭಿಃ ।
ಧುಕ್ಷಸ್ವ ಪಿಪ್ಯುಷೀಮಿಷಮವಾ ಚ ನಃ ॥ ೨೫ ॥

॥ ಪದಪಾಠಃ ॥

ವರ್ಧಸ್ವ । ಸು । ಪುರುಽಸ್ತುತ । ಋಷಿಽಸ್ತುತಾಭಿಃ । ಊತಿಽಭಿಃ ।
ಧುಕ್ಷಸ್ವ । ಪಿಪ್ಯುಷೀಂ । ಇಷಂ । ಅವ । ಚ । ನಃ ॥ ೨೫ ॥

॥ ಸಾಯಣಭಾಷ್ಯಂ ॥

ಹೇ ಪುರುಷ್ಟುತ ಬಹುಭಿಃ ಸ್ತುತೇಂದ್ರ ಋಷಿಷ್ಟುತಾಭಿರ್ಋಷಿಭಿರ್ಮಂತ್ರದರ್ಶಿಭಿಃ ಪುರಾ ಸ್ತುತಾಭಿರೂತಿಭೀ ರಕ್ಷಾಭಿಃ ಸು ಸುಷ್ಠು ವರ್ಧಸ್ವ । ಅಸ್ಮಾನ್ವರ್ಧಯ । ಯದ್ವಾ । ಋಷಿಭಿರುತ್ಪಾದಿತಾಭಿರೂತಿಭಿಃ ಸ್ತುತಿಭಿಸ್ತ್ವಂ ವರ್ಧಸ್ವ । ವೃದ್ಧಿಂ ಪ್ರಾಪ್ನುಹಿ । ನೋಽಸ್ಮಭ್ಯಂ ಚ ಪಿಪ್ಯುಷೀಂ ಪ್ರವೃದ್ಧಾಮಿಷಮಿಷ್ಯಮಾಣಮನ್ನಮವ ಧುಕ್ಷಸ್ವ । ಅವಾಙ್ಮುಖಮಸ್ಮದಭಿಮುಖಂ ಧುಕ್ಷಸ್ವ । ಕ್ಷಾರಯ । ದೇಹೀತ್ಯರ್ಥಃ ॥

॥ ಪ್ರತಿಪದಾರ್ಥ ॥

ಪುರುಷ್ಟುತ—ಅನೇಕರಿಂದ ಪ್ರಶಂಸಿತನಾಗುವ ಎಲೈ ಇಂದ್ರನೇ । ಋಷಿಷ್ಟುತಾಭಿಃ—ಹಿಂದಿನ ಋಷಿಗಳಿಂದ, ಪ್ರಶಂಸಿಸಲ್ಪಟ್ಟ । ಊತಿಭಿಃ—ರಕ್ಷಣೆಗಳಿಂದ । ಸು—ಅತಿಶಯವಾಗಿ । ವರ್ಧಸ್ವ—ನಮಗೆ ವೃದ್ಧಿಯನ್ನು ಹೊಂದಿಸು । ನಃ—ನಮಗೆ । ಪಿಪ್ಯುಷೀಂ—ಪುಷ್ಟಿದಾಯಕವಾದ । ಇಷಂ ಚ—ಅನ್ನವನ್ನೂ ಕೂಡ । ಅವ ಧುಕ್ಷಸ್ವ—ಒದಗಿಸಿ ಕೊಡು.

॥ ಭಾವಾರ್ಥ ॥

ಅನೇಕರಿಂದ ಪ್ರಶಂಸಿತನಾಗುವ ಎಲೈ ಇಂದ್ರನೇ, ಹಿಂದಿನ ಋಷಿಗಳಿಂದ ಪ್ರಶಂಸಿಸಲ್ಪಟ್ಟ ರಕ್ಷಣೆಗಳೊಡನೆ ನಮಗೆ ವೃದ್ಧಿಯುಂಟಾಗುವಂತೆ ಮಾಡು. ನಮಗೆ ಪುಷ್ಟಿದಾಯಕವಾದ ಅನ್ನವನ್ನೂ ಒದಗಿಸಿ ಕೊಡು.

## Engalish Translation

Praised of many, prosper (us) with the protections hymned by the Rishis, send down upon us nutritious food.

॥ ಸಂಹಿತಾಪಾಠಃ ॥

ಇಂದ್ರ ತ್ವಮವಿತೇದಸೀತ್ಥಾ ಸ್ತುವತೋ ಅದ್ರಿವಃ ।

ಋತಾದಿಯರ್ಮಿ ತೇ ಧಿಯಂ ಮನೋಯುಜಂ ॥ ೨೬ ॥

॥ ಪದಪಾಠಃ ॥

ಇಂದ್ರ । ತ್ವಂ । ಅವಿತಾ । ಇತ್ । ಅಸಿ । ಇತ್ಥಾ । ಸ್ತುವತಃ । ಅದ್ರಿಽವಃ ।

ಋತಾತ್ । ಇಯರ್ಮಿ । ತೇ । ಧಿಯಂ । ಮನಃಽಯುಜಂ । ೨೬ ॥

॥ ಸಾಯಣಭಾಷ್ಯಂ ॥

ಹೇ ಅದ್ರಿವೋ ವಜ್ರವನ್ನಿಂದ್ರ ತ್ವಮಿತ್ಥೇತ್ಥಮನೇನ ಪ್ರಕಾರೇಣ ಸ್ತುವತಃ ಸ್ತೋತ್ರಂ ಕುರ್ವತೋ ಯಜಮಾನಸ್ಯಾವಿತೇದಸಿ । ರಕ್ಷಿತೈವ ಭವಸಿ । ಯತ ಏವಮತಃ ಕಾರಣಾದಹಮೃತಾದ್ಯಜ್ಞಾದ್ಧೇತೋರ್ಮನೋಯುಜಂ ಮನಸಾ ಮನನೀಯೇನ ಸ್ತೋತ್ರೇಣ ಪ್ರಾಪ್ಯಾಂ ತೇ ತ್ವದೀಯಾಂ ಧಿಯಮನುಗ್ರಹಬುದ್ಧಿಮಿಯರ್ಮಿ । ಪ್ರಾಪ್ನೋಮಿ । ಯದ್ವಾ । ಋತಾತ್ಸತ್ಯಭೂತಾತ್ತ್ವತ್ತಃ ಸ್ತೋತ್ರೇಣ ಯುಕ್ತಂ ತೃಪ್ತಿಪ್ರೀತಿಕರಂ ಕರ್ಮಾಹಂ ಪ್ರಾಪ್ನೋಮಿ ॥

। ಪ್ರತಿಪದಾರ್ಥ ।

ಅದ್ರಿವಃ—ವಜ್ರಾಯುಧಧಾರಿಯಾದ । ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಇತ್ಥಾ—ಈ ಪ್ರಕಾರವಾಗಿ । ಸ್ತುವತಃ—ನಿನ್ನನ್ನು ಸ್ತುತಿಸುವ ಯಜಮಾನನಿಗೆ । ಅವಿತಾ ಇತ್ ಅಸಿ—ರಕ್ಷಕನೇ ಆಗಿರುತ್ತೀಯೆ । ಋತಾತ್—ಯಜ್ಞಮೂಲಕವಾಗಿ । ಮನೋಯುಜಂ—ಸ್ತುತಿಯಿಂದ ಹೊಂದಲ್ಪಡಬಹುದಾದ । ತೇ—ನಿನ್ನ । ಧಿಯಂ—ಅನುಗ್ರಹಾತ್ಮಕವಾದ ಬುದ್ಧಿಯನ್ನು । ಇಯರ್ಮಿ—ಪಡೆಯುತ್ತೇನೆ.

। ಭಾವಾರ್ಥ ।

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಈ ಪ್ರಕಾರವಾಗಿ ಸ್ತುತಿಸತಕ್ಕ ಯಜಮಾನನಿಗೆ ನೀನು ರಕ್ಷಕನೇ ಆಗಿರುತ್ತೀಯೆ. ಸ್ತುತಿಯಿಂದ ಹೊಂದಲ್ಪಡಬಹುದಾದ ನಿನ್ನ ಅನುಗ್ರಹಾತ್ಮಕವಾದ ಬುದ್ಧಿಯನ್ನು ನಾನು ಯಜ್ಞಮೂಲಕವಾಗಿ ಪಡೆಯುತ್ತೇನೆ.

English Translation

Thunderbolt-bearing Indra, you are the protector of him who thus eulogises you : I seek through sacrifice for your favour, which is to be gained by praise.

। ಸಂಹಿತಾಪಾಠಃ ।

ಇಹ ತ್ವಾ ಸಧಮಾದ್ಯಾ ಯುಜಾನಃ ಸೋಮಪೀತಯೇ ।
ಹರೀ ಇಂದ್ರ ಪ್ರತದ್ವಸೂ ಅಭಿ ಸ್ವರ ॥ ೧೭ ॥

॥ ಪದಪಾಠಃ ॥

ಇಹ । ತ್ವಾ । ಸಧ್ಽಮಾದ್ಯಾ । ಯುಜಾನಃ । ಸೋಮ್ಽಪೀತಯೇ ।
ಹರೀ ಇತಿ । ಇಂದ್ರ । ಪ್ರತದ್ವಸೂ ಇತಿ ಪ್ರತತ್ಽವಸೂ । ಅಭಿ । ಸ್ವರ ॥ ೧೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಇಹಾಸ್ಮಿನ್ಯಾಗೇ ಸೋಮಪೀತಯೇ ಸೋಮಪಾನಾಯಾಭಿ ಸ್ವರ । ಅಭಿಗಚ್ಛ । ಕಿಂ ಕುರ್ವನ್ । ತ್ವಾ ತ್ವಾಂ ತೌ ಪ್ರಸಿದ್ಧೌ ಸಧಮಾದ್ಯಾ ತ್ವಯಾ ಸಹ ಹವಿರ್ಭಿರ್ಮಾದಯಿತವ್ಯೌ ತರ್ಪಯಿತವ್ಯೌ ಪ್ರತದ್ವಸೂ ಪ್ರಾಪ್ತವಸೂ ವಿಸ್ತೀರ್ಣಧನೌ ಈದೃಶೌ ಹರೀ ತ್ವದೀಯಾವಶ್ವೌ ಯುಜಾನೋ ರಥೇನ ಸಂಯೋಜಯನ್ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ಯಾ**—ಪ್ರಸಿದ್ಧವಾದವೂ । **ಸಧಮಾದ್ಯಾ**—ಒಟ್ಟಿಗೆ ಹರ್ಷವನ್ನು ಅನುಭವಿಸುವುವೂ । **ಪ್ರತದ್ವಸೂ**—ಪ್ರಭೂತವಾದ ಧನವುಳ್ಳವೂ ಆದ । **ಹರೀ**—ನಿನ್ನ ಅಶ್ವಗಳನ್ನು ! **ಯುಜಾನಃ**—ನಿನ್ನ ರಥಕ್ಕೆ ಯೋಜಿಸಿ । **ಇಹ**—ಈ ಯಾಗದಲ್ಲಿ । **ಸೋಮಪೀತಯೇ**—ಸೋಮಪಾನಾರ್ಥವಾಗಿ । **ಅಭಿ ಸ್ವರ**—ಶೀಘ್ರವಾಗಿ ದಯಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಪ್ರಸಿದ್ಧವಾದವೂ, ಒಟ್ಟಿಗೆ ಹರ್ಷವನ್ನು ಅನುಭವಿಸುವುವೂ, ಪ್ರಭೂತವಾದ ಧನವುಳ್ಳವೂ ಆದ ನಿನ್ನ ಅಶ್ವಗಳನ್ನು ನಿನ್ನ ರಥಕ್ಕೆ ಯೋಜಿಸಿ ಈ ಯಾಗದಲ್ಲಿ ಸೋಮಪಾನಾರ್ಥವಾಗಿ ಶೀಘ್ರವಾಗಿ ದಯಮಾಡು.

## English Translation

Harnessing your horses, Indra, laden with treasure and sharing your exhilaration, come hither to drink of the Soma.

॥ ವಿಶೇಷವಿಷಯಗಳು ॥

**ಪ್ರತದ್ವಸೂ**—ಈ ಶಬ್ದವನ್ನು ಯಾಸ್ಕರು ವಿವರಿಸಿದ್ದಾರೆ—**ಪ್ರತದ್ವಸೂ ಪ್ರಾಪ್ತವಸೂ । ಹರೀ ಇಂದ್ರ ಪ್ರತದ್ವಸೂ ಅಭಿ ಸ್ವರ ಇತಿ ನಿಗಮೋ ಭವತಿ** (ನಿ. ೬–೨೧) ಎಂದರೆ, ಧನವನ್ನು ಹೊಂದಿರುವ ಎಂದರ್ಥವು. ಈ ಶಬ್ದವು ದ್ವಿತೀಯಾದ್ವಿವಚನಾಂತಪದವು ಮತ್ತು ಹರೀ ಎಂಬ ಶಬ್ದಕ್ಕೆ ವಿಶೇಷಣವು. ಈ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಪ್ರಕೃತ ಋಕ್ಕಿನ—**ಹರೀ ಇಂದ್ರ ಪ್ರತದ್ವಸೂ ಅಭಿ ಸ್ವರ** ಎಂಬ ಶ್ರುತಿವಾಕ್ಯವನ್ನೇ ಉದಾಹರಣೆಯಾಗಿ ಕೊಟ್ಟಿರುವರು.

॥ ಸಂಹಿತಾಪಾಠಃ ॥

ಅಭಿ ಸ್ವರಂತು ಯೇ ತವ ರುದ್ರಾಸಃ ಸಕ್ಷತ ಶ್ರಿಯಂ ।
ಉತೋ ಮರುತ್ವತೀರ್ವಿಶೋ ಅಭಿ ಪ್ರಯಃ ॥ ೨೮ ॥

॥ ಪದಪಾಠಃ ॥

ಅಭಿ । ಸ್ವರಂತು । ಯೇ । ತವ । ರುದ್ರಾಸಃ । ಸಕ್ಷತ । ಶ್ರಿಯಂ ।
ಉತೋ ಇತಿ । ಮರುತ್ವತೀಃ । ವಿಶಃ । ಅಭಿ । ಪ್ರಯಃ ॥ ೨೮ ॥

॥ ಸಾಯಣಭಾಷ್ಯಂ ॥

ಅಭಿ ಸ್ವರಂತು ಅಭಿಗಚ್ಛಂತು ತೇ ಹೇ ಇಂದ್ರ ತವಾನುಚರಾ ರುದ್ರಾಸೋ ರುದ್ರಪುತ್ರಾ ಯೇ

ಮರುತಃ ಸಂತಿ। ಅಪಿ ಚ ತೇ ಶ್ರಿಯಂ ಶ್ರಯಣೀಯಮಿಮಂ ಯಜ್ಞಂ ಸಶ್ಚತ। ಸಚಂತು। ಪ್ರಾಪ್ನುವಂತು। ಉತೋ ಅಪಿ ಚ ಮರುತ್ವತೀರ್ಮರುದ್ಭಿರ್ಯುಕ್ತಾ ವಿಶೋಽನ್ಯಾಹಿ ದೈವೀ ಪ್ರಜಾ ಪ್ರಯಃ। ಅನ್ನನಾಮೈತತ್ । ಅಸ್ಮದೀಯಂ ಹವಿರ್ಲಕ್ಷಣಮನ್ನಮಭಿಗಚ್ಛಂತು ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತವ—ನಿನ್ನ ಅನುಚರರೂ । ರುದ್ರಾಸಃ—ರುದ್ರಪುತ್ರರೂ ಆದ । ಯೇ—ಯಾವ ಮರುತ್ತುಗಳಿರುವರೋ ಅವರು । ಅಭಿ ಸ್ವರಂತು—ಶೀಘ್ರವಾಗಿ ಬರಲಿ । ಶ್ರಿಯಂ—ಸಂಪದ್ಯುಕ್ತವಾದ ಈ ಯಜ್ಞವನ್ನು । ಸಶ್ಚತ—ಸೇರಿಕೊಳ್ಳಲಿ । ಉತೋ—ಮತ್ತು । ಮರುತ್ವತೀಃ—ಮರುತ್ತುಗಳೊಡಗೂಡಿರುವ । ವಿಶಃ—ಇತರ ದೇವಲೋಕದ ಪ್ರಜೆಗಳೂ । ಪ್ರಯಃ—ಹವಿಸ್ಸನ್ನು ಹೊಂದಲು । ಅಭಿ—ಇಲ್ಲಿ ಬರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಅನುಚರರೂ, ರುದ್ರಪುತ್ರರೂ ಆದ ಯಾವ ಮರುತ್ತುಗಳಿರುವರೋ ಅವರು ಶೀಘ್ರವಾಗಿ ಬರಲಿ. ಸಂಪದ್ಯುಕ್ತವಾದ ಈ ಯಜ್ಞವನ್ನು ಸೇರಿಕೊಳ್ಳಲಿ. ಮತ್ತು ಮರುತ್ತುಗಳೊಡಗೂಡಿರುವ ಇತರ ದೇವಲೋಕದ ಪ್ರಜೆಗಳೂ ಹವಿಸ್ಸನ್ನು ಹೊಂದಲು ಇಲ್ಲಿ ಬರಲಿ.

## English Translation

May the sons of Rudra, who are your followers, approach and partake of the glory (of the sacrifice); and may (other celestial) people associated with the Maruts (partake of the sacrificial) food.

॥ ಸಂಹಿತಾಪಾಠಃ ॥

ಇಮಾ ಅಸ್ಯ ಪ್ರತೂರ್ತಯಃ ಪದಂ ಜುಷಂತ ಯದ್ದಿವಿ ।
ನಾಭಾ ಯಜ್ಞಸ್ಯ ಸಂ ದಧುರ್ಯಥಾ ವಿದೇ ॥ ೨೯ ॥

॥ ಪದಪಾಠಃ ॥

ಇಮಾಃ । ಅಸ್ಯ । ಪ್ರಽತೂರ್ತಯಃ । ಪದಂ । ಜುಷಂತ । ಯತ್ । ದಿವಿ ।
ನಾಭಾ । ಯಜ್ಞಸ್ಯ । ಸಂ । ದಧುಃ । ಯಥಾ । ವಿದೇ ॥ ೨೯ ॥

॥ ಸಾಯಣಭಾಷ್ಯಂ ॥

ಅಸ್ಯೇಂದ್ರಸ್ಯ ಸಂಬಂಧಿನ್ಯ ಇಮಾಃ ಪೂರ್ವೋಕ್ತಾ ಮರುದಾದಿರೂಪಾಃ ಪ್ರಜಾಃ ಪ್ರತೂರ್ತಯಃ

ಪ್ರಕರ್ಷೇಣ ಶತ್ರೂಣಾಂ ಹಿಂಸಿತ್ರ್ಯಃ ಪದಂ ಸ್ಥಾನಂ ಜುಷಂತ । ಅಸೇವಂತ । ದಿವಿ ದ್ಯುಲೋಕೇ ಯತ್ಸ್ಥಾನಮನ್ಯೈರ್ದುಷ್ಪ್ರಾಪಮಸ್ತಿ ತತ್ಪದಮಿತ್ಯರ್ಥಃ । ಅಪಿ ಚ ತಾ ಯಜ್ಞಸ್ಯ ಜ್ಯೋತಿಷ್ಟೋಮಾದೇ-ರ್ನಾಭಾ ನಾಭೌ ನಾಭಿಸ್ಥಾನೀಯೇ ಹವಿರ್ಧಾನ ಉತ್ತರವೇದ್ಯಾಂ ವಾ ಸಂ ದಧುಃ । ಸಂನಿದಧತೇ । ಯಥಾ ಯೇನ ಪ್ರಕಾರೇಣ ವಿದೇ ವಿಂದೇ ಅಪೇಕ್ಷಿತಂ ಧನಂ ಲಭೇ ತಥೇತ್ಯರ್ಥಃ । ಯದ್ವಾ । ವಿದೇ ಜ್ಞಾನಾಯ ಯಥಾಸ್ಮಾಕಂ ದಕ್ಷಾವರಂ ಜ್ಞಾನಂ ಭವತಿ ತಥೇತ್ಯರ್ಥಃ ॥

। ಪ್ರತಿಪದಾರ್ಥ ।

ಅಸ್ಯ—ಈ ಇಂದ್ರನ ಸಂಬಂಧಿಗಳೂ । ಇಮಾಃ—ಹಿಂದೆ ಪ್ರಶಂಸಿತರಾದವರೂ ಆದ ಮರುತ್ತುಗಳು । ಪ್ರತೂರ್ತಯಃ—ಶತ್ರುಗಳನ್ನು ಹಿಂಸಿಸುತ್ತಾ । ದಿವಿ—ದ್ಯುಲೋಕದಲ್ಲಿ । ಯತ್—ಯಾವ ಉತ್ತಮವಾದ ಸ್ಥಾನವಿರುವುದೋ । ಪದಂ—ಆ ಸ್ಥಾನವನ್ನು । ಜುಷಂತ—ಸೇವಿಸಲಿ । ಯಥಾ—ಯಾವ ಪ್ರಕಾರವಾಗಿ । ವಿದೇ—ನನಗೆ ಧನಲಾಭವಾಗುವುದೋ ಆ ರೀತಿ । ಯಜ್ಞಸ್ಯ—ಜ್ಯೋತಿಷ್ಟೋಮಾದಿ ಯಾಗದ । ನಾಭಾ—ಉತ್ತರವೇದಿ ಸ್ಥಾನದಲ್ಲಿ । ಸಂ ದಧುಃ—ಸ್ಥಾಪಿತರಾಗುತ್ತಾರೆ.

। ಭಾವಾರ್ಥ ।

ಈ ಇಂದ್ರನ ಸಂಬಂಧಿಗಳೂ, ಹಿಂದೆ ಪ್ರಶಂಸಿತರಾದವರೂ ಆದ ಮರುತ್ತುಗಳು ಶತ್ರುಗಳನ್ನು ಹಿಂಸಿಸುತ್ತಾ ದ್ಯುಲೋಕದಲ್ಲಿ ಯಾವ ಉತ್ತಮವಾದ ಸ್ಥಾನವಿರುವುದೋ ಆ ಸ್ಥಾನವನ್ನು ಸೇವಿಸಲಿ. ಯಾವ ಪ್ರಕಾರವಾಗಿ ನಮಗೆ ಧನಲಾಭವಾಗುವುದೋ ಆ ರೀತಿ ಜ್ಯೋತಿಷ್ಟೋಮಾದಿಯಾಗದ ಉತ್ತರವೇದಿಸ್ಥಾನದಲ್ಲಿ ಸ್ಥಾಪಿತರಾಗುತ್ತಾರೆ.

English Translation

May those who (are his attendants), victorious (over enemies), be satisfied with the station (which they occupy) in heaven, and may they be assembled at the navel of the sacrifice, that I may thence acquire (wealth).

। ಸಂಹಿತಾಪಾಠಃ ।

ಅಯಂ ದೀರ್ಘಾಯ ಚಕ್ಷಸೇ ಪ್ರಾಚಿ ಪ್ರಯತ್ಯಧ್ವರೇ ।
ಮಿಮೀತೇ ಯಜ್ಞಮಾನುಷಗ್ವಿಚಕ್ಷ್ಯ ॥ ೨೦ ॥

। ಪದಪಾಠಃ ।

ಅಯಂ । ದೀರ್ಘಾಯ । ಚಕ್ಷಸೇ । ಪ್ರಾಚಿ । ಪ್ರಽಯತಿ । ಅಧ್ವರೇ ।
ಮಿಮೀತೇ । ಯಜ್ಞಂ । ಆನುಷಕ್ । ವಿಽಚಕ್ಷ್ಯ ॥ ೨೦ ॥

॥ ಸಾಯಣಭಾಷ್ಯಂ ॥

ಪ್ರಾಚೀ ಪ್ರಾಚೀನೇ ಪ್ರಾಗಾಯತೇ ಯಜ್ಞಗೃಹೇಽಧ್ವರೇ ಹಿಂಸಾರಹಿತೇ ಯಜ್ಞೇ ಪ್ರಯತಿ ಗಚ್ಛತಿ ಪ್ರವರ್ತಮಾನೇ ಸತ್ಯಯಮಿಂದ್ರಃ ಪ್ರವರ್ತಮಾನಂ ತಂ ಯಜ್ಞಮಾನುಷಗನುಷಕ್ತಮಾನುಪೂರ್ವ್ಯೇಣ ವಿಚಕ್ಷ್ಯ ವಿಶೇಷೇಣ ದೃಷ್ಟ್ವಾ ಮಿಮೀತೇ । ನಿಷ್ಪಾದಯತಿ । ಕಿಮರ್ಥಂ । ದೀರ್ಘಾಯ ಯಾಯತಾಯ ಚಕ್ಷಸೇ ದರ್ಶನಾಯ । ಯದ್ವಾ । ದ್ರಷ್ಟವ್ಯಾಯ ಫಲಾಯ ॥

॥ ಪ್ರತಿಪದಾರ್ಥ ॥

**ಪ್ರಾಚಿ**—ಪ್ರಾಚೀನವಾದ ಯಜ್ಞಗೃಹದಲ್ಲಿ । **ಅಧ್ವರೇ**—ಯಾಗಕರ್ಮವು । **ಪ್ರಯತಿ**—ನೆರವೇರುವ ಕಾಲದಲ್ಲಿ । **ಅಯಂ**—ಈ ಇಂದ್ರನು । **ಯಜ್ಞಂ**—ಅದೇ ಯಜ್ಞವನ್ನು । **ಆನುಷಕ್**—ಯಥಾಕ್ರಮವಾಗಿ । **ವಿಚಕ್ಷ್ಯ**—ವಿಶೇಷರೀತಿಯಿಂದ ವೀಕ್ಷಿಸಿ । **ದೀರ್ಘಾಯ**—ವಿಸ್ತೃತವಾದ । **ಚಕ್ಷಸೇ**—ಫಲದ ನಿಮಿತ್ತವಾಗಿ । **ಮಿಮೀತೇ**—ಸಂಪಾದಿಸುತ್ತಾನೆ.

॥ ಭಾವಾರ್ಥ ॥

ಪ್ರಾಚೀನವಾದ ಯಜ್ಞಗೃಹದಲ್ಲಿ ಯಾಗಕರ್ಮವು ನೆರವೇರುವ ಕಾಲದಲ್ಲಿ ಇಂದ್ರನು ಅದೇ ಯಜ್ಞವನ್ನು ಯಥಾಕ್ರಮವಾಗಿ ವಿಶೇಷರೀತಿಯಿಂದ ವೀಕ್ಷಿಸಿ ವಿಸ್ತೃತವಾದ ಫಲದ ದರ್ಶನಕ್ಕಾಗಿ ಆ ಯಜ್ಞವನ್ನು ಸಂಪಾದಿಸುತ್ತಾನೆ.

## English Translation

When the ceremony is being prepared in the hall of sacrifice, this (Indra), having inspected the rite, regulates (the performance) in due succession for a distant object.

॥ ಸಂಹಿತಾಪಾಠಃ ॥

ವೃಷಾಯಮಿಂದ್ರ ತೇ ರಥ ಉತೋ ತೇ ವೃಷಣಾ ಹರೀ ।
ವೃಷಾ ತ್ವಂ ಶತಕ್ರತೋ ವೃಷಾ ಹವಃ ॥ ೩೧ ॥

॥ ಪದಪಾಠಃ ॥

ವೃಷಾ । ಅಯಂ । ಇಂದ್ರ । ತೇ । ರಥಃ । ಉತೋ ಇತಿ । ತೇ । ವೃಷಣಾ । ಹರೀ ಇತಿ ।
ವೃಷಾ । ತ್ವಂ । ಶತಕ್ರತೋ ಇತಿ ಶತಽಕ್ರತೋ । ವೃಷಾ । ಹವಃ ॥ ೩೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವದೀಯೋಽಯಂ ರಥೋ ವೃಷಾ ಕಾಮಾನಾಂ ವರ್ಷಿತಾ । ಉತೋ ಅಪಿ ಚ ತೇ ತವ ಹರೀ ಅಶ್ವೌ ವೃಷಣಾ ವೃಷಣೌ ವರ್ಷಿತಾರೌ । ಹೇ ಶತಕ್ರತೋ ಬಹುಕರ್ಮನ್ ಬಹುಪ್ರಜ್ಞೇಂದ್ರ ತ್ವಂ ಚ ವೃಷಾ ವರ್ಷಿತಾ ಕಾಮಾನಾಂ। ತಥಾ ಹವಸ್ತ್ವದ್ವಿಷಯಮಾಹ್ವಾನಂ ಚ ವೃಷಾ ವರ್ಷಿತಾ । ತ್ವದ್ವಿಷಯಮಾಹ್ವಾನಮಪಿ ಕಾಮಾನ್ವರ್ಷತಿ । ಕಿಮು ವಕ್ತವ್ಯಂ ತ್ವದೀಯಾ ರಥಾದಯೋ ವರ್ಷಂತೀತಿ ಭಾವಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಅಯಂ ರಥಃ—ಈ ರಥವು । ವೃಷಾ—ಕಾಮವರ್ಷಕವಾಗಿದೆ । ಉತೋ—ಮತ್ತು । ತೇ—ನಿನ್ನ । ಹರೀ—ಅಶ್ವಗಳೂ । ವೃಷಣಾ—ಇಷ್ಟಾರ್ಥಪ್ರದಗಳಾಗಿವೆ । ಶತಕ್ರತೋ— ಬಹುಕರ್ಮಯುಕ್ತನಾದ ಎಲೈ ಇಂದ್ರನೇ । ತ್ವಂ—ನೀನೂ । ವೃಷಾ—ಇಷ್ಟಾರ್ಥ ಪ್ರದನಾಗಿದ್ದೀಯೆ । ಹವಃ—ನಿನ್ನ ಸ್ತುತಿಯೂ ಸಹ । ವೃಷಾ—ಕಾಮವನ್ನು ಪೂರೈಸುವುದಾಗಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಈ ರಥವು ಕಾಮವರ್ಷಕವಾಗಿದೆ. ನಿನ್ನ ಅಶ್ವಗಳೂ ಅಪೇಕ್ಷಿತವಾದ ವಸ್ತುಗಳನ್ನು ಒದಗಿಸತಕ್ಕವಾಗಿವೆ. ಬಹುಕರ್ಮಯುಕ್ತನಾದ ನೀನೂ ಇಷ್ಟಾರ್ಥಪ್ರದನಾಗಿದ್ದೀಯೆ. ನಿನ್ನ ಸ್ತುತಿಯೂ ಸಹ ಕಾಮವನ್ನು ಪೂರೈಸುವುದಾಗಿದೆ.

## English Translation

**Your chariot, Indra, is a showerer (of benefits), showerers (of benefits) are your horses: you also, Satakratu, are the showerer (of benefits), the invocation (addressed to you) is the showerer (of benefits).**

॥ ಸಂಹಿತಾಪಾಠಃ ॥

ವೃಷಾ ಗ್ರಾವಾ ವೃಷಾ ಮದೋ ವೃಷಾ ಸೋಮೋ ಅಯಂ ಸುತಃ।
ವೃಷಾ ಯಜ್ಞೋ ಯಮಿನ್ವಸಿ ವೃಷಾ ಹವಃ ॥ ೩೨ ॥

॥ ಪದಪಾಠಃ ॥

ವೃಷಾ । ಗ್ರಾವಾ । ವೃಷಾ । ಮದಃ । ವೃಷಾ । ಸೋಮಃ । ಅಯಂ । ಸುತಃ ।
ವೃಷಾ । ಯಜ್ಞಃ । ಯಂ । ಇನ್ವಸಿ । ವೃಷಾ । ಹವಃ ॥ ೩೨ ॥

॥ ಸಾಯಣಭಾಷ್ಯಂ ॥

ಗ್ರಾವಾಭಿಷವಸಾಧನಪಾಷಾಣೋ ವೃಷಾ ವರ್ಷಿತಾ ಕಾಮಾನಾಂ। ಹೇ ಇಂದ್ರ ತ್ವದೀಯಃ ಸೋಮಪಾನಜನ್ಯೋ ಮದಶ್ಚ ವೃಷಾ ವರ್ಷಿತಾ। ಸುತಸ್ತ್ವದರ್ಥಮಭಿಷುತೋಽಯಂ ಸೋಮಶ್ಚ ವೃಷಾ ವರ್ಷಿತಾ। ಯಂ ಯಜ್ಞಮಿನ್ವಸಿ ತ್ವಂ ಪ್ರಾಪ್ನೋಷಿ ಸ ಚ ಯಜ್ಞೋ ವೃಷಾಭೀಷ್ಟಫಲಸ್ಯ ವರ್ಷಿತಾ ತ್ವದೀಯೋ ಹವಶ್ಚ ವೃಷಾ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಗ್ರಾವಾ— ಸೋಮವನ್ನು ಜಜ್ಜಿ ಹಿಂಡತಕ್ಕ ಈ ಕಲ್ಲು । ವೃಷಾ— ಕಾಮವರ್ಷಕವಾಗಿರುತ್ತದೆ । ಮದಃ— ನಿನ್ನ ಸೋಮಪಾನದ ತೃಪ್ತಿಯೂ । ವೃಷಾ— ಇಷ್ಟಾರ್ಥಪ್ರದವಾಗಿರುತ್ತದೆ । ಸುತಃ— ಹಿಂಡಿ ಸಿದ್ಧವಾಗಿರುವ । ಅಯಂ ಸೋಮಃ— ಈ ಸೋಮರಸವೂ । ವೃಷಾ— ಕಾಮವರ್ಷಕವಾಗಿರುತ್ತದೆ । ಯಂ— ಯಾವ ಯಜ್ಞವನ್ನು । ಇನ್ವಸಿ— ನೀನು ಪ್ರವೇಶಿಸುವೆಯೋ । ಯಜ್ಞಃ— ಆ ಯಜ್ಞವೂ 'ಸಹ। ವೃಷಾ— ಕಾಮವರ್ಷಕವಾಗಿದೆ । ಹವಃ— ನಿನ್ನ ಸ್ತುತಿಯೂ ಸಹ । ವೃಷಾ— ಇಷ್ಟಾರ್ಥಪ್ರದವಾಗಿರುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸೋಮವನ್ನು ಹಿಂಡತಕ್ಕ ಈ ಕಲ್ಲೂ ಕಾಮವರ್ಷಕವಾಗಿರುತ್ತದೆ. ನಿನ್ನ ಸೋಮಪಾನದ ತೃಪ್ತಿಯೂ ಕಾಮಪ್ರದವಾಗಿರುತ್ತದೆ. ಹಿಂಡಿ ಸಿದ್ಧವಾಗಿರುವ ಈ ಸೋಮವೂ ಇಚ್ಛೆಯನ್ನು ಪೂರೈಸುವುದಾಗಿರುತ್ತದೆ. ನೀನು ಅನುಗ್ರಹಿಸುವ ಯಜ್ಞವೂ ಕಾಮಪೂರಕವಾಗಿರುತ್ತದೆ. ನಿನ್ನ ಸ್ತುತಿಯೂ ಕಾಮಪ್ರದವಾಗಿರುತ್ತದೆ.

## English Translation

The stone (that bruises the Soma) is the showerer (of benefits), so is your exhilaration and this Soma juice that is effused : the sacrifice that you accept is the showerer (of benefits), such also is your invocation.

॥ ಸಂಹಿತಾಪಾಠಃ ॥

ವೃಷಾ ತ್ವಾ ವೃಷಣಂ ಹುವೇ ವಜ್ರಿಞ್ಚಿತ್ರಾಭಿರೂತಿಭಿಃ ।

ವಾವಂಥ ಹಿ ಪ್ರತಿಷ್ಟುತಿಂ ವೃಷಾ ಹವಃ ॥ ೩೩ ॥

॥ ಪದಪಾಠಃ ॥

ವೃಷಾ । ತ್ವಾ । ವೃಷಣಂ । ಹುವೇ । ವಜ್ರಿನ್ । ಚಿತ್ರಾಭಿಃ । ಊತಿಽಭಿಃ ।

ವವಂಥ । ಹಿ । ಪ್ರತಿಽಸ್ತುತಿಂ । ವೃಷಾ । ಹವಃ ॥ ೩೩ ॥

। ಸಾಯಣಭಾಷ್ಯಂ ।

ಹೇ ವಜ್ರಿನ್ ವಜ್ರವನ್ನಿಂದ್ರ ವೃಷಣಂ ವೃಷಾಣಂ ವರ್ಷಿತಾರಂ ತ್ವಾಂ ವೃಷಾ ವರ್ಷಿತಾ ಹವಿಷಾಮಾಸೇಕ್ತಾಹಂ ಚಿತ್ರಾಭಿಶ್ಚಾಯನೀಯಾಭಿರ್ನಾನಾವಿಧಾಭಿರ್ವೋತಿಭಿಸ್ತೃಪ್ತಿಕರೀಭಿಃ ಸ್ತುತಿಭಿ-ರ್ಹುವೇ। ಆಹ್ವಯೇ। ಹಿ ಯಸ್ಮಾತ್ತ್ವಂ ಪ್ರತಿಷ್ಟುತಿಂ ತ್ವಾಮಭಿಲಕ್ಷ್ಯ ಕೃತಂ ಸ್ತೋತ್ರಂ ವವಂಥ ವನಸಿ ಸಂಭಜಸಿ ಅತಸ್ತ್ವದೀಯೋ ಹವ ಆಹ್ವಾನಂ ವೃಷಾ ವರ್ಷಿತಾ। ಯದ್ವಾ। ಹವೋ ಹ್ವಾತವ್ಯೋ ವೃಷಾ ವರ್ಷಿತಾ ತ್ವಂ ಯಸ್ಮಾತ್ಸ್ತುತಿಂ ವನಸಿ ತಸ್ಮಾತ್ತ್ವಾಂ ಹುವ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ವಜ್ರಿನ್—ವಜ್ರಾಯುಧಧಾರಿಯಾದ ಎಲೈ ಇಂದ್ರನೇ। ವೃಷಾ—ಹವಿಸ್ಸನ್ನು ಅರ್ಪಿಸುವ ನಾನು। ವೃಷಣಂ—ಇಷ್ಟಾರ್ಥಪ್ರದನಾದ। ತ್ವಾ—ನಿನ್ನನ್ನು । ಚಿತ್ರಾಭಿಃ—ಆಕರ್ಷಕವಾದವೂ । ಊತಿಭಿಃ—ತೃಪ್ತಿ ಕಾರಕವೂ ಆದ ಸ್ತುತಿಗಳಿಂದ । ಹುವೇ—ಕರೆಯುತ್ತೇನೆ । ಹಿ—ಏತಕ್ಕೆಂದರೆ । ಪ್ರತಿಷ್ಟುತಿಂ—ನಿನ್ನನ್ನು ಪ್ರಶಂಸಿಸುವ ಸ್ತೋತ್ರವನ್ನು। ವವಂಥ—ನೀನು ಇಚ್ಛಿಸುತ್ತೀಯೆ । ವೃಷಾ—ಕಾಮವರ್ಷಕನಾದ ನೀನು । ಹವಃ—ನಮ್ಮ ಆಹ್ವಾನವನ್ನೂ ಕೇಳುತ್ತೀಯೆ.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಹವಿಸ್ಸನ್ನು ಅರ್ಪಿಸುವ ನಾನು ಇಷ್ಟಾರ್ಥಪ್ರದನಾದ ನಿನ್ನನ್ನು ಆಕರ್ಷಕವಾದವೂ ತೃಪ್ತಿಕಾರಕವೂ ಆದ ಸ್ತುತಿಗಳಿಂದ ಕರೆಯುತ್ತೇನೆ. ನೀನು ನಿನ್ನನ್ನು ಪ್ರಶಂಸಿಸುವ ಸ್ತೋತ್ರವನ್ನು ಇಚ್ಛಿಸಿ ಸೇವಿಸುತ್ತೀಯೆ. ಕಾಮವರ್ಷಕನಾದ ನೀನು ನಮ್ಮ ಆಹ್ವಾನವನ್ನು ಕೇಳುತ್ತೀಯೆ.

English Translation

The showerer (of the oblation) I invoke with manifold and gratifying (praises) you, O thunderer, the showrer (of benefits); inasmuch as you acknowledge the eulogy addressed to you, your invocation is the showerer (of benefits).



## ಹದಿನಾಲ್ಕನೆಯ ಸೂಕ್ತವು.

। ಸಾಯಣಭಾಷ್ಯಂ ।

ಯದಿಂದ್ರಾಹಮಿತಿ ಪಂಚದಶರ್ಚಂ ದ್ವಿತೀಯಂ ಸೂಕ್ತಂ ಗೋಷೂಕ್ತ್ಯಶ್ವಸೂಕ್ತಿನೋಃ ಕಾಣ್ವ-ಗೋತ್ರಯೋರಾರ್ಷಂ ಗಾಯತ್ರಮೈಂದ್ರಂ । ತಥಾ ಚಾನುಕ್ರಾಂತಂ । ಯದಿಂದ್ರ ಪಂಚೋನಾ ಗೋಷೂಕ್ತ್ಯಶ್ವಸೂಕ್ತಿನೌ ಕಾಣ್ವಾಯನಾವಿತಿ ॥ ಮಹಾವ್ರತೇ ನಿಷ್ಕೇವಲ್ಯ ಏತತ್ಸೂಕ್ತಂ । ತಥೈವ

**ಪಂಚಮಾರಣ್ಯಕೇ ಸೂತ್ರ್ಯತೇ । ಯದಿಂದ್ರಾಹಂ ಯಥಾ ತ್ವಂ ಪ್ರ ಸಮ್ರಾಜಂ ಚರ್ಷಣೀನಾಮಿತಿ ಸೂಕ್ತೇ । ಐ. ಆ. ೫-೨-೫. । ಇತಿ ॥ ತೃತೀಯೇ ಪರ್ಯಾಯೇ ಬ್ರಹ್ಮಶಸ್ತ್ರೇಽಪೀದಂ ಸೂಕ್ತಂ । ಸೂತ್ರಿತಂ ಚ । ಯದಿಂದ್ರಾಹಂ ಪ್ರ ತೇ ಮಹೇ । ಆ. ೬-೪. । ಇತಿ ॥**

ಅನುವಾದವು—**ಯದಿಂದ್ರಾಹಂ** ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರೋದ್ಭವರಾದ ಗೋಷೂಕ್ತಿ, ಅಶ್ವಸೂಕ್ತಿ ಎಂಬಿಬ್ಬರು ಋಷಿಗಳು. ಇಂದ್ರನು ದೇವತೆಯು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯದಿಂದ್ರ ಪಂಚೋನಾ ಗೋಷೂಕ್ತ್ಯಶ್ವಸೂಕ್ತಿನೌ ಕಾಣ್ವಾಯನೌ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಯದಿಂದ್ರಾಹಂ ಯಥಾ ತ್ವಂ ಪ್ರ ಸಮ್ರಾಜಂ ಚರ್ಷಣೀನಾಮಿತಿ ಸೂಕ್ತೇ** ಎಂಬ ವಾಕ್ಯದಿಂದ (ಆ. ೫-೨-೫) ನಿರ್ದಿಷ್ಟವಾಗಿರುವುದು. ತೃತೀಯಪರ್ಯಾಯದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಯದಿಂದ್ರಾಹಂ ಪ್ರ ತೇ ಮಹೇ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

## ಸೂಕ್ತ—೧೪

ಮಂಡಲ—೮ ॥ ಅನುವಾಕ—೩ ॥ ಸೂಕ್ತ—೧೪ ॥
ಅಷ್ಟಕ—೬ ॥ ಅಧ್ಯಾಯ—೧ ॥ ವರ್ಗ—೧೪, ೧೫, ೧೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
ಋಷೀ—ಗೋಷೂಕ್ತ್ಯಶ್ವಸೂಕ್ತಿನೌ ಕಾಣ್ವಾಯನೌ ॥
ದೇವತಾ—ಇಂದ್ರಃ ॥
ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಯದಿಂದ್ರಾಹಂ ಯಥಾ ತ್ವಮೀಶೀಯ ವಸ್ವ ಏಕ ಇತ್ ।
ಸ್ತೋತಾ ಮೇ ಗೋಷಖಾ ಸ್ಯಾತ್ ॥ ೧ ॥

॥ ಪದಪಾಠಃ ॥

ಯತ್ । ಇಂದ್ರ । ಅಹಂ । ಯಥಾ । ತ್ವಂ । ಈಶೀಯ । ವಸ್ವಃ । ಏಕಃ । ಇತ್ ।
ಸ್ತೋತಾ । ಮೇ । ಗೋಽಸಖಾ । ಸ್ಯಾತ್ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಯಥಾ ತ್ವಮೇಕ ಇದೇಕ ಏವ ಕೇವಲಂ ವಸ್ವೋ ವಸುನೋ ಧನಸ್ಯೇಶಿಷೇ**

ಏವಮಪಿ ಯದ್ಯಹಮೀಶೀಯ ಐಶ್ವರ್ಯಯುಕ್ತಃ ಸ್ಯಾಂ ತದಾನೀಂ ಮೇ ಮಮ ಸ್ತೋತಾ ಗೋಸಖಾ ಸ್ಯಾತ್ । ಗೋಭಿಃ ಸಹಿತೋ ಭವೇತ್ । ಈಶ್ವರಸ್ಯ ತವ ಸ್ತೋತಾ ಕುತೋ ಹೇತೋರ್ಗೋಸಹಿತೋ ನ ಭವೇತ್ ಅಪಿ ತು ಭವೇದಿತ್ಯಭಿಪ್ರಾಯಃ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಯಥಾ—ಯಾವ ರೀತಿ । ತ್ವಂ—ನೀನು । ವಸ್ವಃ—ಸಕಲ ಧನಕ್ಕೂ । ಏಕ ಇತ್—ಅದ್ವಿತೀಯನಾದ ಪ್ರಭುವಾಗಿದ್ದೀಯೋ (ಅದೇ ರೀತಿ) । ಅಹಂ—ನಾನೂ ಕೂಡ । ಯತ್—ಒಂದು ವೇಳೆ । ಈಶೀಯ—ಆ ಧನಕ್ಕೆಲ್ಲಾ ಪ್ರಭುವಾಗಿದ್ದಿದ್ದರೆ । ಮೇ—ನನ್ನ । ಸ್ತೋತಾ—ಸ್ತುತಿಕರ್ತನು । ಗೋಸಖಾ—ಗೋಸಂಪತ್ತಿನಿಂದ ಕೂಡಿದವನಾಗಿ । ಸ್ಯಾತ್—ಇರುತ್ತಿದ್ದನು

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ರೀತಿ ನೀನು ಸಕಲಧನಕ್ಕೂ ಅದ್ವಿತೀಯನಾದ ಪ್ರಭುವಾಗಿದ್ದೀಯೋ, ಅದೇ ರೀತಿ ನಾನೂ ಕೂಡ ಒಂದು ವೇಳೆ ಆ ಧನಕ್ಕೆಲ್ಲಾ ಪ್ರಭುವಾಗಿದ್ದಿದ್ದರೆ, ನನ್ನ ಸ್ತುತಿಕರ್ತನು ಗೋಸಂಪತ್ತಿನಿಂದ ಕೂಡಿದವನಾಗಿರುತ್ತಿದ್ದನು.

English Translation

If Indra, I were, as you are, sole lord over wealth, then should my eulogist be possessed of cattle.

॥ ಸಂಹಿತಾಪಾಠಃ ॥

ಶಿಕ್ಷೇಯಮಸ್ಮೈ ದಿತ್ಸೇಯಂ ಶಚೀಪತೇ ಮನೀಷಿಣೇ ।

ಯದಹಂ ಗೋಪತಿಃ ಸ್ಯಾಂ ॥ ೨ ॥

। ಪದಪಾಠಃ ।

ಶಿಕ್ಷೇಯಂ । ಅಸ್ಮೈ । ದಿತ್ಸೇಯಂ । ಶಚೀऽಪತೇ । ಮನೀಷಿಣೇ ।

ಯತ್ । ಅಹಂ । ಗೋऽಪತಿಃ । ಸ್ಯಾಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಶಚೀಪತೇ ಶಕ್ತಿಮನ್ನಿಂದ್ರ ಅಸ್ಮೈ ಮನೀಷಿಣೇ ಮನಸ ಈಶಿತ್ರೇ ಸ್ತೋತ್ರೇ ದಿತ್ಸೇಯಂ । ದಾತುಮಿಚ್ಛೇಯಂ । ತದನಂತರಂ ಶಿಕ್ಷೇಯಂ । ಪ್ರಾರ್ಥಿತಂ ಧನಂ ದದ್ಯಾಂ ಚ । ಯದ್ಯದ್ಯಹಂ ಗೋಪತಿರ್ಗವಾಮಧಿಪತಿಃ ಸ್ಯಾಂ ಭವೇಯಂ ತ್ವತ್ಪ್ರಸಾದಾದಿತಿ ಶೇಷಃ ॥

। ಪ್ರತಿಪದಾರ್ಥ ।

ಶಚೀಪತೇ—ಶಕ್ತಿಯುತನಾದ ಎಲೈ ಇಂದ್ರನೇ । ಯತ್—ಒಂದು ವೇಳೆ । ಅಹಂ—ನಾನು । ಗೋಪತಿಃ—ಗೋಸಂಪತ್ತಿಗೆ ಒಡೆಯನಾಗಿ । ಸ್ಯಾಂ—ಇದ್ದಿದ್ದೇ ಆದರೆ । ಅಸ್ಮೈ ಮನೀಷಿಣೇ ದಿತ್ಸೇಯಂ—ಅವನ ಅಪೇಕ್ಷೆಯನ್ನು ಈಡೇರಿಸಲು ಇಚ್ಛಿಸುತ್ತಿದ್ದೆ । ಶಿಕ್ಷೇಯಂ—ಅದನ್ನು ಕೊಡುತ್ತಲೂ ಇದ್ದೆ.

॥ ಭಾವಾರ್ಥ ॥

ಶಕ್ತಿಯುತನಾದ ಎಲೈ ಇಂದ್ರನೇ, ಒಂದು ವೇಳೆ ನಾನು ಗೋಸಂಪತ್ತಿಗೆ ಒಡೆಯನಾಗಿ ಇದ್ದಿದ್ದೇ ಆದರೆ, ಆಗ ನನ್ನ ಸ್ತುತಿಕರ್ತನಿಗೆ ಅವನ ಅಪೇಕ್ಷೆಯನ್ನು ಈಡೇರಿಸಲು ಇಚ್ಛಿಸುತ್ತಿದ್ದೆ. ಅವನ ಇಷ್ಟಾರ್ಥವನ್ನು ಕೊಡುತ್ತಲೂ ಇದ್ದೆ.

## English Translation

Lord of might, I would give to that intelligent worshipper that which I should wish to give, if I were the possessor of cattle.

॥ ಸಂಹಿತಾಪಾಠಃ ॥

ಧೇನುಷ್ಟ ಇಂದ್ರ ಸೂನೃತಾ ಯಜಮಾನಾಯ ಸುನ್ವತೇ ।

ಗಾಮಶ್ವಂ ಪಿಪ್ಯುಷೀ ದುಹೇ ॥ ೩ ॥

॥ ಪದಪಾಠಃ ॥

ಧೇನುಃ । ತೇ । ಇಂದ್ರ । ಸೂನೃತಾ । ಯಜಮಾನಾಯ । ಸುನ್ವತೇ ।

ಗಾಂ । ಅಶ್ವಂ । ಪಿಪ್ಯುಷೀ । ದುಹೇ ॥ ೩ ॥

। ಸಾಯಣಭಾಷ್ಯಂ ।

ಹೇ ಇಂದ್ರ ತೇ ತವ ಸೂನೃತಾ ಸ್ತುತಿರೂಪಾ ವಾಗ್ಧೇನುರ್ದೋಗ್ಧ್ರೀ ಗೌರ್ಭೂತ್ವಾ ಸುನ್ವತೇ ಸೋಮಾಭಿಷವಂ ಕುರ್ವತೇ ಯಜಮಾನಾಯ ಗಾಮಶ್ವಂ ಚ । ಉಪಲಕ್ಷಣಮೇತತ್ । ಗವಾಶ್ವಾದಿಕಂ ಸರ್ವಮಭಿಲಷಿತಂ ದುಹೇ । ದುಗ್ಧೇ । ಕಿಂ ಕುರ್ವತೀ । ಪಿಪ್ಯುಷೀ ತವೈವ ಪ್ರವರ್ಧಯಿತ್ರೀ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ತೇ—ನಿನ್ನನ್ನು ನಿರ್ದೇಶಿಸಿದ । ಸೂನೃತಾ—ಸ್ತುತಿರೂಪವಾದ ವಾಕ್ಯ ।

ಧೇನುಃ—ಪುಷ್ಕಳವಾದ ಫಲವನ್ನು ಕೊಡುವುದಾಗಿ । ಸುನ್ವತೇ—ಸೋಮವನ್ನು ಹಿಂಡಿ ಅರ್ಪಿಸುವ । ಯಜಮಾನಾಯ—ಯಜ್ಞಕರ್ತನಿಗೆ । ಪಿಪ್ಯುಷೀ—ಅವನನ್ನು ಪುಷ್ಟಿಗೊಳಿಸುತ್ತಾ । ಗಾಂ—ಗೋವುಗಳನ್ನೂ । ಅಶ್ವಂ—ಅಶ್ವಗಳನ್ನೂ । ದುಹೇ—ಕರೆಯುತ್ತದೆ (ಪುಷ್ಕಳವಾಗಿ ಕೊಡುತ್ತದೆ).

। ಭಾವಾರ್ಥ ।

ಎಲೈ ಇಂದ್ರನೇ, ನಿನ್ನನ್ನು ನಿರ್ದೇಶಿಸಿದ ಸ್ತುತಿರೂಪವಾದ ವಾಕ್ಕು ಪುಷ್ಕಳವಾದ ಫಲವನ್ನು ಕೊಡುವ ಶಕ್ತಿಯುಳ್ಳದ್ದಾಗಿ, ಸೋಮವನ್ನು ಹಿಂಡಿ ಅರ್ಪಿಸುವ ಯಜ್ಞಕರ್ತನಿಗೆ ಅವನನ್ನು ಪುಷ್ಟಿಗೊಳಿಸುತ್ತಾ ಗೋವುಗಳನ್ನೂ ಅಶ್ವಗಳನ್ನೂ ಪುಷ್ಕಳವಾಗಿ ಕೊಡುತ್ತದೆ.

## English Translation

Your praise, Indra, is a milch cow to the worshipper offering the libations ; it milks him in abundance cattle and horses.

॥ ಸಂಹಿತಾಪಾಠಃ ॥

ನ ತೇ ವರ್ತಾಸ್ತಿ ರಾಧಸ ಇಂದ್ರ ದೇವೋ ನ ಮರ್ತ್ಯಃ ।

ಯದ್ದಿತ್ಸಸಿ ಸ್ತುತೋ ಮಘಂ ॥ ೪ ॥

॥ ಪದಪಾಠಃ ॥

ನ । ತೇ । ವರ್ತಾ । ಅಸ್ತಿ । ರಾಧಸಃ । ಇಂದ್ರ । ದೇವಃ । ನ । ಮರ್ತ್ಯಃ ।

ಯತ್ । ದಿತ್ಸಸಿ । ಸ್ತುತಃ । ಮಘಂ ॥ ೪ ॥

। ಸಾಯಣಭಾಷ್ಯಂ ।

ಹೇ ಇಂದ್ರ ತೇ ತವ ರಾಧಸೋ ಧನಸ್ಯ ಸ್ತೋತೃಭ್ಯೋ ದಾತವ್ಯಸ್ಯ ವರ್ತಾ ನಿವಾರಕೋ ದೇವೋ ನಾಸ್ತಿ । ನ ವಿದ್ಯತೇ । ನ ಮರ್ತ್ಯೋ ಮನುಷ್ಯೋಽಪಿ ನಿವಾರಕೋ ನಾಸ್ತಿ । ಸ್ತುತಃ ಸ್ತೋತೃಭಿಃ ಪ್ರಖ್ಯಾಪಿತಗುಣಃ ಸನ್ ಯನ್ಮಘ್ಯಂ ಮಘಂ ಮಂಹನೀಯಂ ಧನಂ ದಿತ್ಸಸಿ ತ್ವಂ ದಾತುಮಿಚ್ಛಸಿ ॥

। ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಸ್ತುತಃ—ಸ್ತೋತೃಗಳಿಂದ ಪ್ರಶಂಸಿತನಾಗಿ । ಯತ್—ಯಾವ । ಮಘಂ—ಪೂಜ್ಯವಾದ ಧನವನ್ನು । ದಿತ್ಸಸಿ—ಸ್ತುತಿಕರ್ತನಿಗೆ ಕೊಡುವೆಯೋ । ತೇ—ನಿನ್ನ । ರಾಧಸಃ—ಅಂತಹ ಧನಕ್ಕೆ ।

ವರ್ತಾ— ನಿರೋಧಕನು । ದೇವಃ—ದೇವತೆಗಳಲ್ಲಿ ಯಾರೂ । ನ ಅಸ್ತಿ—ಇರುವುದಿಲ್ಲ । ಮರ್ತ್ಯಃ—ಮಾನವರಲ್ಲಿ ಯಾರೂ । ನ—ಇರುವುದಿಲ್ಲ.

। ಭಾವಾರ್ಥ ।

ಎಲೈ ಇಂದ್ರನೇ, ಸ್ತೋತೃಗಳಿಂದ ಪ್ರಶಂಸಿತನಾಗಿ ಯಾವ ಪೂಜ್ಯವಾದ ಧನವನ್ನು ನೀನು ಸ್ತುತಿಕರ್ತನಿಗೆ ಕೊಡುವೆಯೋ ನಿನ್ನ ಅಂತಹ ಧನದಾನಕ್ಕೆ ನಿರೋಧಕನು ದೇವತೆಗಳಲ್ಲಿ ಯಾರೂ ಇರುವುದಿಲ್ಲ. ಮಾನವರಲ್ಲೂ ಯಾರೂ ಇರುವುದಿಲ್ಲ.

English Translatian

Neither god nor man, Indra, is the obstructor of your affluence, (of) the wealth which you, when praised, designe to bestow.

। ಸಂಹಿತಾಪಾಠಃ ।

ಯಜ್ಞ ಇಂದ್ರಮವರ್ಧಯದ್ಯದ್ಭೂಮಿಂ ವ್ಯವರ್ತಯತ್ ।
ಚಕ್ರಾಣ ಓಪಶಂ ದಿವಿ ॥ ೫ ॥

। ಪದಪಾಠಃ ।

ಯಜ್ಞಃ । ಇಂದ್ರಂ । ಅವರ್ಧಯತ್ । ಯತ್ । ಭೂಮಿಂ । ವಿ । ಅವರ್ತಯತ್ ।
ಚಕ್ರಾಣಃ । ಓಪಶಂ । ದಿವಿ ॥ ೫ ॥

॥ ಸಾಯಣಭಾಷ್ಯಂ ॥

ಯಜ್ಞೋ ಯಜಮಾನೈರನುಷ್ಠೀಯಮಾನೋ ಯಾಗ ಇಂದ್ರಂ ದೇವಮವರ್ಧಯತ್ । ಶ್ರೂಯತೇ ಹಿ । ಇಂದ್ರ ಇದಂ ಹವಿರಜುಷತಾವೀವೃಧತ ಮಹೋ ಜ್ಯಾಯೋಽಕೃತೇತಿ । ಸ ಇಂದ್ರೋ ಯದ್ಯಸ್ಮಾದ್ಭೂಮಿಂ ಪೃಥಿವೀಂ ವ್ಯವರ್ತಯತ್ ವೃಷ್ಟ್ಯಾದಿಪ್ರದಾನೇನ ವಿಶೇಷೇಣ ವರ್ತಮಾನಾಮ-ಕರೋತ್ । ಕಿಂ ಕುರ್ವನ್ । ದಿವ್ಯಂತರಿಕ್ಷೇ ಮೇಘನೋಪಶಮುಪೇತ್ಯ ಶಯಾನಂ ಚಕ್ರಾಣಃ ಕುರ್ವನ್। ಯದ್ವಾ । ಆತ್ಮನಿ ಸಮವೇತೋ ವೀರ್ಯವಿಶೇಷ ಓಪಶಃ । ತಮಂತರಿಕ್ಷೇ ಕುರ್ವನ್ ॥

। ಪ್ರತಿಪದಾರ್ಥ ।

ಯತ್—ಯಾವ ಕಾರಣದಿಂದ । ದಿವಿ—ಅಂತರಿಕ್ಷದಲ್ಲಿ । ಓಪಶಂ—ಮೇಘವನ್ನು ಹರಡುವಂತೆ । ಚಕ್ರಾಣಃ— ಮಾಡುತ್ತಾ । ಭೂಮಿಂ—ಪೃಥ್ವಿಯನ್ನು । ವ್ಯವರ್ತಯತ್—ವೃಷ್ಟಿಯಿಂದ ತೊಯ್ಯುವಂತೆ

ಮಾಡಿದನೋ ಅದುದರಿಂದಲೇ । ಯಜ್ಞಃ—ಯಾಗವು । ಇಂದ್ರಂ—ಇಂದ್ರನನ್ನು । ಅವರ್ಧಯತ್—ಬೆಳೆಯುವಂತೆ ಮಾಡಿತು

॥ ಭಾವಾರ್ಥ ॥

ಯಾವ ಕಾರಣದಿಂದ ಇಂದ್ರನು ಅಂತರಿಕ್ಷದಲ್ಲೆಲ್ಲಾ ಮೇಘವು ಹರಡುವಂತೆ ಮಾಡಿ ಪೃಥ್ವಿಯನ್ನು ವೃಷ್ಟಿಯಿಂದ ತೊಯ್ಯುವಂತೆ ಮಾಡಿದನೋ ಆದುದರಿಂದಲೇ ಯಾಗವು ಇಂದ್ರನನ್ನು ಬೆಳೆಯುವಂತೆ ಮಾಡಿತು.

## English Translation

Sacrifice has magnified Indra, so that he has supported the earth (with rain), making (the cloud) quiescent in the firmament.

॥ ಸಂಹಿತಾಪಾಠಃ ॥

ವಾವೃಧಾನಸ್ಯ ತೇ ವಯಂ ವಿಶ್ವಾ ಧನಾನಿ ಜಿಗ್ಯುಷಃ ।
ಊತಿಮಿಂದ್ರಾ ವೃಣೀಮಹೇ ॥ ೬ ॥

॥ ಪದಪಾಠಃ ॥

ವವೃಧಾನಸ್ಯ । ತೇ । ವಯಂ । ವಿಶ್ವಾ । ಧನಾನಿ । ಜಿಗ್ಯುಷಃ ।
ಊತಿಂ । ಇಂದ್ರ । ಆ । ವೃಣೀಮಹೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಾವೃಧಾನಸ್ಯ ವರ್ಧಮಾನಸ್ಯ ವಿಶ್ವಾ ವಿಶ್ವಾನಿ ಸರ್ವಾಣಿ ಧನಾನಿ ಶತ್ರುಸಂಬಂಧೀನಿ ಜಿಗ್ಯುಷೋ ಜಿತವತಸ್ತೇ ತವೋತಿಂ ರಕ್ಷಾಂ ವಯಮಾ ವೃಣೀಮಹೇ। ಅಭಿಮುಖ್ಯೇನ ಸಂಭಜಾಮಹೇ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ವಾವೃಧಾನಸ್ಯ—ವೃದ್ಧಿಯನ್ನು ಹೊಂದುವವನೂ । ವಿಶ್ವಾ—ಸಮಸ್ತವಾದ। ಧನಾನಿ—ಶತ್ರುಧನಗಳನ್ನು । ಜಿಗ್ಯುಷಃ—ಜಯಿಸಿ ವಶಪಡಿಸಿಕೊಳ್ಳುವವನೂ ಆದ । ತೇ—ನಿನ್ನ । ಊತಿಂ—ರಕ್ಷಣೆಯನ್ನು । ವಯಂ—ನಾವು । ಆ ವೃಣೀಮಹೇ—ಯಾಚಿಸುತ್ತೇವೆ

॥ ಭಾವಾರ್ಥ ॥

ಎಲೈ ಇಂದ್ರನೇ, ವೃದ್ಧಿಯನ್ನು ಹೊಂದುವವನೂ ಸಮಸ್ತವಾದ ಶತ್ರುಧನಗಳನ್ನೂ ಜಯಿಸಿ ವಶಪಡಿಸಿಕೊಳ್ಳುವವನೂ ಆದ ನಿನ್ನ ರಕ್ಷಣೆಯನ್ನು ನಾವು ಯಾಚಿಸುತ್ತೇವೆ

## English Translation

We solicit, Indra, the protection of you who are ever being magnified, the conqueror of all the riches (of the enemy).

। ಸಂಹಿತಾಪಾಠಃ ।

ವ್ಯ೧ನ್ತರಿಕ್ಷಮತಿರನ್ಮದೇ ಸೋಮಸ್ಯ ರೋಚನಾ ।
ಇಂದ್ರೋ ಯದಭಿನದ್ವಲಂ ॥ ೭ ॥

॥ ಪದಪಾಠಃ ॥

ವಿ । ಅಂತರಿಕ್ಷಂ । ಅತಿರತ್ । ಮದೇ । ಸೋಮಸ್ಯ । ರೋಚನಾ ।
ಇಂದ್ರಃ । ಯತ್ । ಅಭಿನತ್ । ವಲಂ ॥ ೭ ॥

। ಸಾಯಣಭಾಷ್ಯಂ ।

ಚಾತುರ್ವಿಂಶಿಕೇಽಹನಿ ಪ್ರಾತಃಸವನೇ ಬ್ರಹ್ಮಶಸ್ತ್ರೇ ವ್ಯಂತರಿಕ್ಷಮತಿರದಿತ್ಯಯಂ ಪರ್ಯಾಸಸ್ತೃಚಃ । ಸೂತ್ರ್ಯತೇ ಹಿ । ವ್ಯಂತರಿಕ್ಷಮತಿರಚ್ಛಾ೧ ನಾಶ್ವಸ್ಯ ಸುನ್ವತ ಇತಿ ತೃಚಾಃ ಪರ್ಯಾಸಾಃ । ಆ. ೭-೨. ಇತಿ ॥ ಅಹರ್ಗಣೇಷು ದ್ವಿತೀಯಾದಿಷ್ವಹಃಸ್ವಪಿ ತಸ್ಯೈವ ತಸ್ಮಿನ್ನೇವ ಶಸ್ತ್ರೇಽಯಂ ಪರ್ಯಾಸಸ್ತೃಚಃ । ಸೂತ್ರಿತಂ ಚ । ಪರ್ಯಾಸಾನ್ಕದ್ವತೋಽಹರಹಃಶಸ್ಯಾನೀತಿ ಹೋತ್ರಕಾ ದ್ವಿತೀಯಾದಿಷ್ವೇವ । ಆ. ೭-೧. । ಇತಿ ॥

ಸೋಮಸ್ಯ ಪಾನೇನ ಮದೇ ಹರ್ಷೇ ಸತಿ ರೋಚನಾ ರೋಚಮಾನಮಂತರಿಕ್ಷಮಯಮಿಂದ್ರೋ ವ್ಯತಿರತ್ । ವ್ಯವರ್ಧಯತ್ । ಯದ್ಯಸ್ಮಾತ್ಕಾರಣಾದ್ವಲಮಾವೃತ್ಯ ಸ್ಥಿತಮಸುರಂ ಮೇಘಂ ವಾಭಿನತ್ ವ್ಯದಾರಯತ್ ॥

। ಪ್ರತಿಪದಾರ್ಥ ।

ಸೋಮಸ್ಯ—ಸೋಮರಸದ ಪಾನದಿಂದ । ಮದೇ—ಹರ್ಷವುಂಟಾದಾಗ । ಇಂದ್ರಃ—ಇಂದ್ರನು । ರೋಚನಾ—ಪ್ರಕಾಶಮಾನವಾದ । ಅಂತರಿಕ್ಷಂ—ಅಂತರಿಕ್ಷವನ್ನು । ವ್ಯತಿರತ್—ವಿಸ್ತೃತವಾಗುವಂತೆ ಮಾಡಿದನು । ಯತ್—ಆದುದರಿಂದಲೇ । ವಲಂ—ಹರಡಿ ಬಿದ್ದಿದ್ದ ಮೇಘವನ್ನು । ಅಭಿನತ್—(ವೃಷ್ಟಿಗಾಗಿ) ಸೀಳಿದನು.

। ಭಾವಾರ್ಥ ।

ಸೋಮರಸದ ಪಾನದಿಂದ ಹರ್ಷವುಂಟಾದಾಗ ಇಂದ್ರನು ಪ್ರಕಾಶಮಾನವಾದ ಅಂತರಿಕ್ಷವನ್ನು ವಿಸ್ತೃತವಾಗುವಂತೆ ಮಾಡಿದನು. ಆದುದರಿಂದಲೇ, ಹರಡಿಬಿದ್ದಿದ್ದ ಮೇಘಗಳನ್ನು ವೃಷ್ಟ್ಯರ್ಥವಾಗಿ ಸೀಳಿದನು

## English Translation

**In the exhilaration of the Soma, Indra has traversed the radiant firmament that he might pierce (the Asura) Vala.**

॥ ವಿಶೇಷವಿಷಯಗಳು ॥

ಯಾಗದ ಚಾತುರ್ವಿಂಶಿಕವೆಂಬ ದಿನದ ಪ್ರಾತಸ್ಸವನಕಾಲದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರ ಮಂತ್ರಗಳಲ್ಲಿ **ವ್ಯಂತರಿಕ್ಷಮತಿರತ್** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಪರ್ಯಾಸತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ವ್ಯಂತರಿಕ್ಷಮತಿರಚ್ಛ್ಯಾವಾಶ್ವಸ್ಯ ಸುನ್ವತ ಇತಿ ತೃಚಾಃ ಪರ್ಯಾಸಾಃ** ಎಂಬ ಸೂತ್ರದಿಂದ (ಆ. ೭-೨) ವಿವೃತವಾಗಿರುವುದು. ಅಹರ್ಗಣವೆಂಬ ಯಾಗಗಳಲ್ಲಿಯೂ ಎರಡನೆಯ ದಿನದಿಂದ ಮುಂದಿನ ದಿವಸಗಳಲ್ಲಿ ಆಯಾಯ ದಿವಸಗಳಲ್ಲಿ ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಮೂರು ಋಕ್ಕುಗಳನ್ನು ಪರ್ಯಾಸತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪರ್ಯಾಸಾನ್ಕದ್ವತೋಽಹರಹಃಶಸ್ಯಾನೀತಿ ಹೋತ್ರಕಾ ದ್ವಿತೀಯಾದಿಷ್ವೇವ** ಎಂಬ ಸೂತ್ರದಿಂದ (ಆ. ೭-೧) ವಿವೃತವಾಗಿರುವುದು.

॥ ಸಂಹಿತಾಪಾಠ ॥

ಉದ್ಗಾ ಆಜದಂಗಿರೋಭ್ಯ ಆವಿಷ್ಕೃಣ್ವನ್ಗುಹಾ ಸತೀಃ ।
ಅರ್ವಾಂಚಂ ನುನುದೇ ವಲಂ ॥ ೮ ॥

॥ ಪದಪಾಠಃ ॥

ಉತ್ । ಗಾಃ । ಆಜತ್ । ಅಂಗಿರಃಽಭ್ಯಃ । ಆವಿಃ । ಕೃಣ್ವನ್ । ಗುಹಾ । ಸತೀಃ ।
ಅರ್ವಾಂಚಂ । ನುನುದೇ । ವಲಂ ॥ ೮ ॥

॥ ಸಾಯಣಭಾಷ್ಯಂ ॥

ಅಂಗಿರೋಭ್ಯ ಋಷಿಭ್ಯೋ ವಲಾಸುಚರೈಃ ಪಣಿಭಿರಪಹೃತಾ ಗಾ ಉದಾಜತ್ । ಉದಗಮಯತ್ । ಕಿಂ ಕುರ್ವನ್ । ಗುಹಾ ಗುಹಾಯಾಂ ಬಿಲೇ ಸತೀರ್ವಿದ್ಯಮಾನಾ ಯಥಾ ನ ದೃಶ್ಯಂತೇ ತಥಾ ಪಣಿಭಿರ್ಗೂಢಾಸ್ತಾ ಗಾ ಆವಿಷ್ಕೃಣ್ವನ್ ಪ್ರಕಾಶಯನ್ । ಅಪಿ ಚ ಪಣೀನಾಮಧಿಪತಿಂ ವಲಮಸುರಮಪ್ಯರ್ವಾಂಚಮಧೋಮುಖಂ ನುನುದೇ । ಪ್ರೇರಿತವಾನ್ ॥

॥ ಪ್ರತಿಪದಾರ್ಥ ॥

(ಇಂದ್ರಃ—ಇಂದ್ರನು) । ಗುಹಾ—ಕತ್ತಲುಪ್ರದೇಶಗಳಲ್ಲಿ । ಸತೀಃ—ಮರೆಯಾಗಿದ್ದ ಗೋವುಗಳನ್ನು ।

ಆವಿಷ್ಕೃಣ್ವನ್—ಪ್ರಕಾಶಕ್ಕೆ ಬರುವಂತೆ ಮಾಡುತ್ತಾ । ಅಂಗಿರೋಭ್ಯಃ—ಅಂಗಿರಾ ಋಷಿಗಳಿಗೆ । ಗಾಃ—ಗೋವುಗಳನ್ನು । ಉದಾಜತ್—ಪುನಃ ಎದ್ದು ಬಂದು ಸೇರುವಂತೆ ಮಾಡಿದನು । ವಲಂ—ವಲನೆಂಬ ಅಸುರನನ್ನೂ। ಅವಾಂಚಂ—ಅಧೋಮುಖವಾಗಿ ಮಲಗಿಸಿ । ನುನುದೇ—ಹಿಂಸಿಸಿದನು

। ಭಾವಾರ್ಥ ।

ಇಂದ್ರನು ಕತ್ತಲುಪ್ರದೇಶಗಳಲ್ಲಿ ಮರೆಯಾಗಿದ್ದ ಗೋವುಗಳನ್ನು ಪ್ರಕಾಶಕ್ಕೆ ಬರುವಂತೆ ಮಾಡುತ್ತಾ ಅಂಗಿರಾಋಷಿಗಳಿಗೆ ಪುನಃ ಆ ಗೋವುಗಳು ಹೋಗಿ ಸೇರುವಂತೆ ಮಾಡಿದನು. ವಲನೆಂಬ ಅಸುರನನ್ನೂ ಅಧೋಮುಖವಾಗಿ ಮಲಗಿಸಿ ಹಿಂಸಿಸಿದನು.

## English Translation

He liberated the cows for the Angirasas, making manifest those that had been hidden in the cave, hurling Vala headlong down.

ಸಂಹಿತಾಪಾಠಃ ।

ಇಂದ್ರೇಣ ರೋಚನಾ ದಿವೋ ದೃಳ್ಹಾನಿ ದೃಂಹಿತಾನಿ ಚ ।
ಸ್ಥಿರಾಣಿ ನ ಪರಾಣುದೇ ॥ ೯ ॥

। ಪದಪಾಠಃ ।

ಇಂದ್ರೇಣ । ರೋಚನಾ । ದಿವಃ । ದೃಳ್ಹಾನಿ । ದೃಂಹಿತಾನಿ । ಚ ।
ಸ್ಥಿರಾಣಿ । ನ । ಪರಾಽನುದೇ ॥ ೯ ॥

। ಸಾಯಣಭಾಷ್ಯಂ ।

ದಿವೋ ದ್ಯುಲೋಕಸ್ಯ ಸಂಬಂಧೀನಿ ರೋಚನಾ ರೋಚಮಾನಾನಿ ದೇವಗೃಹಾತ್ಮಕಾನಿ ನಕ್ಷತ್ರಾಣೀಂದ್ರೇಣ ದೃಳ್ಹಾನಿ ದೃಢಾವಯವಾನಿ ಬಲವಂತಿ ಕೃತಾನಿ ದೃಂಹಿತಾನಿ ಚ ದೃಢೀಕೃತಾನಿ । ಯಥೈಕತ್ರ ನೈಶ್ಚಲ್ಯೇನಾವತಿಷ್ಠಂತೇ ತಥಾ ಕೃತಾನೀತ್ಯರ್ಥಃ । ಯದ್ವಾ ॥ ವೃಹ ದೃಹಿ ವೃಹಿ ವೃದ್ಧೌ । ದೃಂಹಿತಾನಿ ವರ್ಧಿತಾನಿ ಚೇತ್ಯರ್ಥಃ । ಅಪಿ ಚ ಸ್ಥಿರಾಣಿ ಸ್ಥಾಸ್ನೂನಿ ದೃಢಾನಿ ತಾನಿ ನ ಪರಾಣುದೇ । ಪರಾನೋದನೀಯಾನಿ ನ ಭವಂತಿ । ನ ಕೇನಾಪಿ ಸ್ಥಾನಾತ್ಪ್ರಚ್ಯಾವಯಿತುಂ ಶಕ್ಯಾನೀತ್ಯರ್ಥಃ ॥ ನುದ ಪ್ರೇರಣೇ । ಅಸ್ಮಾತ್ಕೃತ್ಯಾರ್ಥ ಇತಿ ಕೇನ್ಪ್ರತ್ಯಯಃ ॥

॥ ಪ್ರತಿಪದಾರ್ಥ ॥

ದಿವಃ—ದ್ಯುಲೋಕಸಂಬಂಧಿಯಾದವೂ । ರೋಚನಾ—ಪ್ರಭಾಯುತವೂ ಆದ ನಕ್ಷತ್ರಾದಿಗಳು ।

ಇಂದ್ರೇಣ—ಇಂದ್ರನಿಂದ । ದೃಳ್ಹಾನಿ—ದೃಢವಾಗಿ । ದೃಂಹಿತಾನಿ—ಸ್ಥಾಪಿತವಾಗಿವೆ । ಸ್ಥಿರಾಣಿ ಚ—ಭದ್ರವಾಗಿ ನಿಂತಿರುವ ಆ ಜ್ಯೋತಿರ್ಮಂಡಲಗಳು । ನ ಪರಾಣುದೇ—ಇತರರಿಂದ ಚಲಿಸಲ್ಪಡಲಾರದಷ್ಟು ದೃಢವಾಗಿವೆ.

॥ ಭಾವಾರ್ಥ ॥

ದ್ಯುಲೋಕಸಂಬಂಧಿಯಾದವೂ ಪ್ರಭಾಯುತವೂ ಆದ ನಕ್ಷತ್ರಾದಿಗಳು ಇಂದ್ರನಿಂದ ದೃಢವಾಗಿ ಅಂತರಿಕ್ಷದಲ್ಲಿ ಸ್ಥಾಪಿತವಾಗಿವೆ. ಭದ್ರವಾಗಿ ನಿಂತಿರುವ ಆ ಜ್ಯೋತಿರ್ಮಂಡಲಗಳನ್ನು ಚಲಿಸುವಂತೆ ಮಾಡಲು ಯಾರಿಗೂ ಸಾಧ್ಯವಿಲ್ಲ.

## English Translation

By Indra, the constellations were made stable and firm and stationary, so that they could not be moved by any.

॥ ಸಂಹಿತಾಪಾಠಃ ॥

ಅಪಾಮೂರ್ಮಿರ್ಮದನ್ನಿವ ಸ್ತೋಮ ಇಂದ್ರಾಜಿರಾಯತೇ ।
ವಿ ತೇ ಮದಾ ಅರಾಜಿಷುಃ ॥ ೧೦ ॥

॥ ಪದಪಾಠಃ ॥

ಅಪಾಂ । ಊರ್ಮಿಃ । ಮದನ್ಽಇವ । ಸ್ತೋಮಃ । ಇಂದ್ರ । ಅಜಿರಽಯತೇ ।
ವಿ । ತೇ । ಮದಾಃ । ಅರಾಜಿಷುಃ ॥ ೧೦ ॥

॥ ಸಾಯಣಭಾಷ್ಯಂ ॥

ಅಪಾಂ ಸಮುದ್ರಾಣಾಮೂರ್ಮಿಸ್ತರಂಗೋ ಮದನ್ನಿವ ಯಥಾ ಮಾದ್ಯನ್ನು ಪರ್ಯುಪರಿ ಜಾಯತೇ । ಹೇ ಇಂದ್ರ ಸ್ತೋಮಸ್ತ್ವದೀಯಂ ಸ್ತೋತ್ರಂ ತಥಾಜಿರಾಯತೇ । ಅಜಿರಃ ಕ್ಷಿಪ್ರಗಾಮೀ । ಸ ಇವಾಚರತಿ । ಅಪಿ ಚ ತೇ ತ್ವದೀಯಾ ಮದಾಃ ಸ್ತೋತ್ರಜನ್ಯಾಃ ಸೋಮಪಾನಜನ್ಯಾಶ್ಚ ವ್ಯರಾಜಿಷುಃ । ವಿಶೇಷೇಣ ರಾಜಂತೇ । ದೀಪ್ಯಂತೇ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಅಪಾಂ—ಸಮುದ್ರಗಳ । ಊರ್ಮಿಃ—ಅಲೆಗಳು । ಮದನ್ನಿವ—ಒಂದರ ಮೇಲೊಂದು ಪುಷ್ಕಳವಾಗಿ ಉಬ್ಬಿ ಏಳುವಂತೆ । ಸ್ತೋಮಃ—ನಿನ್ನನ್ನು ಪ್ರಶಂಸಿಸುವ ಸ್ತೋತ್ರಗಳು । ಅಜಿರಾಯತೇ—ಅಧಿಕವಾಗಿ ಉದ್ಭವವಾಗುತ್ತವೆ । ತೇ—ನಿನ್ನ । ಮದಾಃ—ಹರ್ಷಗಳೂ । ವ್ಯರಾಜಿಷುಃ—ಅಧಿಕವಾಗಿ ಪ್ರಕಾಶಿಸುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸಮುದ್ರಗಳ ಅಲೆಗಳು ಒಂದರ ಮೇಲೊಂದು ಪುಷ್ಕಳವಾಗಿ ಉಬ್ಬಿ ಏಳುವಂತೆ ನಿನ್ನನ್ನು ಪ್ರಶಂಸಿಸುವ ಸ್ತೋತ್ರಗಳು ಅಧಿಕವಾಗಿ ಉದ್ಭವವಾಗುತ್ತವೆ. ನಿನ್ನ ಹರ್ಷಗಳೂ ಅಧಿಕವಾಗಿ ಪ್ರಕಾಶಿಸುತ್ತವೆ.

**English Translation**

Your praise, Indra, mounts aloft like the exulting wave of the waters, your exhilarations have been manifested.

॥ ಸಂಹಿತಾಪಾಠಃ ॥

ತ್ವಂ ಹಿ ಸ್ತೋಮವರ್ಧನ ಇಂದ್ರಾಸ್ಯುಕ್ಥವರ್ಧನಃ ।

ಸ್ತೋತೄಣಾಮುತ ಭದ್ರಕೃತ್ ॥ ೧೧ ॥

॥ ಪದಪಾಠಃ ॥

ತ್ವಂ । ಹಿ । ಸ್ತೋಮಽವರ್ಧನಃ । ಇಂದ್ರ । ಅಸಿ । ಉಕ್ಥಽವರ್ಧನಃ ।

ಸ್ತೋತೄಣಾಂ । ಉತ । ಭದ್ರಽಕೃತ್ । ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಹಿ ತ್ವಂ ಖಲು ಸ್ತೋಮವರ್ಧನಃ ಸ್ತೋಮೇನ ತ್ರಿವೃತ್ಪಂಚದಶಾದಿನಾ ವರ್ಧನೀಯೋಽಸಿ । ತಥೋಕ್ಥವರ್ಧನ ಉಕ್ಥೈಃ ಶಸ್ತ್ರೈರ್ವರ್ಧನೀಯಶ್ಚ ತ್ವಮೇವಾಸಿ । ಉತಾಪಿ ಚ ಸ್ತೋತೄಣಾಮಸ್ಮಾಕಂ ಭದ್ರಕೃದ್ಭದ್ರಸ್ಯ ಕಲ್ಯಾಣಸ್ಯ ಫಲಸ್ಯ ಕರ್ತಾಪಿ ತ್ವಮೇವಾಸಿ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಂ ಹಿ**—ನೀನಾದರೋ । **ಸ್ತೋಮವರ್ಧನಃ**—ತ್ರಿವೃದಾದಿ ಸ್ತೋಮಗಳಿಂದ ಬೆಳೆಯುವವನಾಗಿ । **ಅಸಿ**—ಆಗಿದ್ದೀಯೆ । **ಉಕ್ಥವರ್ಧನಃ**-ಶಸ್ತ್ರಮಂತ್ರಗಳಿಂದಲೂ ಪ್ರವೃದ್ಧನಾಗುವವನಾಗಿದ್ದೀಯೆ। **ಉತ**—ಮತ್ತು । **ಸ್ತೋತೄಣಾಂ**—ಸ್ತುತಿಕರ್ತರಾದ ನಮಗೆ । **ಭದ್ರಕೃತ್**—ಮಂಗಳವನ್ನುಂಟುಮಾಡುವವನಾಗಿಯೂ ಆಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ತ್ರಿವೃದಾದಿಸ್ತೋಮಗಳಿಂದ ಬೆಳೆಯುವವನಾಗಿದ್ದೀಯೆ. ಶಸ್ತ್ರಮಂತ್ರಗಳೂ ನಿನ್ನ ವೃದ್ಧಿಗೆ ಸಾಧಕವಾಗಿವೆ. ಮತ್ತು ಸ್ತುತಿಕರ್ತರಾದ ನಮಗೆ ಮಂಗಳದಾಯಕನೂ ಆಗಿದ್ದೀಯೆ.

## English translation

You Indra, are to be magnified by praise, you are to be magnified by prayer; you are the benefactor of those who praise you.

॥ ಸಂಹಿತಾಪಾಠಃ ॥

ಇಂದ್ರಮಿತ್ಕೇಶಿನಾ ಹರೀ ಸೋಮಪೇಯಾಯ ವಕ್ಷತಃ ।
ಉಪ ಯಜ್ಞಂ ಸುರಾಧಸಂ ॥ ೧೨ ॥

॥ ಪದಪಾಠಃ ॥

ಇಂದ್ರಂ । ಇತ್ । ಕೇಶಿನಾ । ಹರೀ ಇತಿ । ಸೋಮಽಪೇಯಾಯ । ವಕ್ಷತಃ ।
ಉಪ । ಯಜ್ಞಂ । ಸುಽರಾಧಸಂ ॥ ೧೨ ॥

॥ ಸಾಯಣಭಾಷ್ಯಂ ॥

ಕೇಶಿನಾ ಕೇಶಿನೌ । ಮೂರ್ಧಜಾನಿ ಲೋಮಾನಿ ಕೇಶಾಃ । ತದ್ವಂತೌ ಹರೀ ಅಶ್ವೌ ಸುರಾಧಸಂ ಶೋಭನಧನಮಿಂದ್ರಮಿದಿಂದ್ರಮೇವ ಯಜ್ಞಮುಪಾಸ್ಮದ್ಯಜ್ಞಂ ಪ್ರತಿ ಸೋಮಪೇಯಾಯ ಸೋಮಪಾನಾರ್ಥಂ ವಕ್ಷತಃ । ವಹತಾಂ । ಯದ್ವಾ ಯಜ್ಞಂ ಯಷ್ಟವ್ಯಮಿಂದ್ರಮುಪವಹತಾಂ ॥

॥ ಪ್ರತಿಪದಾರ್ಥ ॥

ಕೇಶಿನಾ—ಉತ್ತಮವಾದ ರೋಮಗಳುಳ್ಳ । ಹರೀ—ಅಶ್ವಗಳು । ಸುರಾಧಸಂ—ಉತ್ತಮವಾದ ಸಂಪತ್ತುಳ್ಳ । ಇಂದ್ರಮಿತ್—ಇಂದ್ರನನ್ನೇ । ಸೋಮಪೇಯಾಯ—ಸೋಮಪಾನಕ್ಕಾಗಿ । ಯಜ್ಞಂ ಉಪ—ಯಜ್ಞಾಭಿಮುಖವಾಗಿ । ವಕ್ಷತಃ—ಕರೆತರಲಿ.

॥ ಭಾವಾರ್ಥ ॥

ಉತ್ತಮವಾದ ರೋಮಗಳುಳ್ಳ ಅಶ್ವಗಳು ಉತ್ತಮವಾದ ಸಂಪತ್ತುಳ್ಳ ಇಂದ್ರನನ್ನೇ ಸೋಮಪಾನಕ್ಕಾಗಿ ಯಜ್ಞಾಭಿಮುಖವಾಗಿ ಕರೆತರಲಿ

## English Translation

Let the long-maned horses bring the wealth-bestowing Indra to the sacrifice to drink the Soma juice.

॥ ಸಂಹಿತಾಪಾಠಃ ॥

ಅಪಾಂ ಫೇನೇನ ನಮುಚೇಃ ಶಿರ ಇಂದ್ರೋದವರ್ತಯಃ ।
ವಿಶ್ವಾ ಯದಜಯಃ ಸ್ಪೃಧಃ ॥ ೧೩ ॥

॥ ಪದಪಾಠಃ ॥

ಅಪಾಂ । ಫೇನೇನ । ನಮುಚೇಃ । ಶಿರಃ । ಇಂದ್ರ । ಉತ್ । ಅವರ್ತಯಃ ।
ವಿಶ್ವಾಃ । ಯತ್ । ಅಜಯಃ । ಸ್ಪೃಧಃ ॥ ೧೩ ॥

॥ ಸಾಯಣಭಾಷ್ಯಂ ॥

ಪುರಾ ಕಿಲೇಂದ್ರೋಽಸುರಾಞ್ಜಿತ್ವಾ ನಮುಚಿಮಸುರಂ ಗ್ರಹೀತುಂ ನ ಶಶಾಕ । ಸ ಚ ಯುಧ್ಯಮಾನಸ್ತೇನಾಸುರೇಣ ಜಗ್ರಹೇ । ಸ ಚ ಗೃಹೀತಮಿಂದ್ರಮೇವಮವೋಚತ್ । ತ್ವಾಂ ವಿಸೃಜಾಮಿ ರಾತ್ರಾವಹ್ನಿ ಚ ಶುಷ್ಕೇಣಾರ್ದ್ರೇಣ ಚಾಯುಧೇನ ಯದಿ ಮಾಂ ಮಾ ಹಿಂಸೀರಿತಿ । ಸ ಇಂದ್ರಸ್ತೇನ ವಿಸೃಷ್ಟಃ ಸನ್ನಹೋರಾತ್ರಯೋಃ ಸಂಧೌ ಶುಷ್ಕಾರ್ದ್ರವಿಲಕ್ಷಣೇನ ಫೇನೇನ ತಸ್ಯ ಶಿರಶ್ಚಿಚ್ಛೇದ । ಅಯಮರ್ಥೋಽಸ್ಯಾಂ ಪ್ರತಿಪಾದ್ಯತೇ ॥ ಹೇ ಇಂದ್ರ ಅಪಾಂ ಫೇನೇನ ವಜ್ರೀಭೂತೇನ ನಮುಚೇರಸುರಸ್ಯ ಶಿರ ಉದವರ್ತಯಃ । ಶರೀರಾದುದ್ಗತಮವರ್ತಯಃ । ಅಚ್ಛೈತ್ಸೀರಿತ್ಯರ್ಥಃ । ಕದೇತಿ ಚೇತ್ । ಯದ್ಯದಾ ವಿಶ್ವಾಃ ಸರ್ವಾಃ ಸ್ಪೃಧಃ ಸ್ಪರ್ಧಮಾನಾ ಆಸುರೀಃ ಸೇನಾ ಅಜಯಃ ಜಿತವಾನಸಿ । ಇಂದ್ರೋ ವೃತ್ರಂ ಹತ್ವಾಸುರಾನ್ .... .... .... ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯತ್—ಯಾವಾಗ । ವಿಶ್ವಾಃ—ಸಮಸ್ತವಾದ । ಸ್ಪೃಧಃ—ಎದುರುಬೀಳುವ ಶತ್ರುಸೇನೆಗಳನ್ನೆಲ್ಲಾ । ಅಜಯಃ—ನೀನು ಜಯಿಸಿದೆಯೋ ಆಗ । ಅಪಾಂ—ಉದಕಗಳ । ಫೇನೇನ—ನೊರೆಯರೂಪದ ವಜ್ರಾಯುಧದಿಂದ । ನಮುಚೇಃ—ನಮುಚಿಯೆಂಬ ಅಸುರನ । ಶಿರಃ—ಶಿರಸ್ಸನ್ನು । ಉದವರ್ತಯಃ—ಸೀಳಿಹಾಕಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವಾಗ ನೀನು ನಿನ್ನ ಎದುರುಬೀಳುವ ಸಕಲಶತ್ರುಗಳನ್ನೂ ಜಯಿಸಿದೆಯೋ ಆಗ ಉದಕಗಳ ನೊರೆಯರೂಪದ ವಜ್ರಾಯುಧದಿಂದ ನಮುಚಿಯೆಂಬ ಅಸುರನ ಶಿರಸ್ಸನ್ನು ಸೀಳಿಹಾಕಿದೆ.

## English Translation

You have struck off, Indra, the head of Namuchi with the foam of the waters, when you had subdued all your enemies

॥ ಸಂಹಿತಾಪಾಠಃ ॥

ಮಾಯಾಭಿರುತ್ಸಿಸೃಪ್ಸತ ಇಂದ್ರ ದ್ಯಾಮಾರುರುಕ್ಷತಃ ।
ಅವ ದಸ್ಯೂಁರಧೂನುಥಾಃ ॥ ೧೪ ॥

॥ ಪದಪಾಠಃ ॥

ಮಾಯಾಭಿಃ । ಉತ್ऽಸಿಸೃಪ್ಸತಃ । ಇಂದ್ರ । ದ್ಯಾಂ । ಆऽರುರುಕ್ಷತಃ
ಅವ । ದಸ್ಯೂನ್ । ಅಧೂನುಥಾಃ ॥ ೧೪ ॥

॥ ಸಾಯಣಭಾಷ್ಯಂ ॥

.... .... .... ಹೇ ಇಂದ್ರ ತ್ವಮವಾಧೂನುಥಾಃ । ಅವಾಙ್ಮುಖಂ ಪ್ರೇರಿತವಾನಸಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಮಾಯಾಭಿಃ—ತಮ್ಮ ವಂಚಕಕೃತ್ಯಗಳಿಂದ । ಉತ್ ಸಿಸೃಪ್ಸತಃ—ತೆವಳಿ ತಪ್ಪಿಸಿಕೊಳ್ಳುತ್ತಾ । ದ್ಯಾಂ—ಅಂತರಿಕ್ಷಕ್ಕೆ । ಆರುರುಕ್ಷತಃ—ಹತ್ತುತ್ತಿದ್ದ । ದಸ್ಯೂನ್—ಅಸುರರನ್ನು । ಅವ ಅಧೂನುಥಾಃ—ಕೆಳಭಾಗಕ್ಕೆ ಕೆಡವಿ ನಾಶಮಾಡಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ತಮ್ಮ ವಂಚಕಕೃತ್ಯಗಳಿಂದ ತೆವಳಿ ತಪ್ಪಿಸಿಕೊಳ್ಳುತ್ತಾ ಅಂತರಿಕ್ಷಕ್ಕೆ ಹತ್ತುತ್ತಿದ್ದ ಅಸುರರನ್ನು ಕೆಳಭಾಗಕ್ಕೆ ಕೆಡವಿ ನಾಶಪಡಿಸಿದ್ದೀಯೆ.

English Translation

You have hurled down, Indra, the Dasyus, gliding upwards by their devices and ascending to heaven.

॥ ಸಂಹಿತಾಪಾಠಃ ॥

ಅಸುನ್ವಾಮಿಂದ್ರ ಸಂಸದಂ ವಿಷೂಚೀಂ ವ್ಯನಾಶಯಃ ।
ಸೋಮಪಾ ಉತ್ತರೋ ಭವನ್ ॥ ೧೫ ॥

|| ಪದಪಾಠಃ ||

ಅಸುನ್ವಾಂ । ಇಂದ್ರ । ಸಂಽಸದಂ । ವಿಷೂಚೀಂ । ವಿ । ಅನಾಶಯಃ ।

ಸೋಮಽಪಾಃ । ಉತ್ಽತರಃ । ಭವನ್ ॥ ೧೫ ॥

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಂ ಸೋಮಪಾಃ ಸೋಮಸ್ಯ ಪಾತಾ ಭೂತ್ವೋತ್ತರ ಉತ್ಕೃಷ್ಟತರೋ ಭವನ್ನ-ಸುನ್ವಾಂ ಸೋಮಾಭಿಷವಹೀನಾಂ ಸಂಸದಂ ಜನಸಂಹತಿಂ ವಿಷೂಚೀಂ ಪರಸ್ಪರವಿರೋಧೇನ ವಿಷು ನಾನಾ ಗಂತ್ರೀಂ ವ್ಯನಾಶಯಃ । ವಿಶೇಷೇಣ ನಾಶಯಸಿ ॥

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ । ಸೋಮಪಾಃ—ನೀನು ಸೋಮವನ್ನು ಪಾನಮಾಡುವವನಾಗಿದ್ದು । ಉತ್ತರಃ—ಅತ್ಯಂತ ಉತ್ಕೃಷ್ಟವಾದ ಸ್ಥಾನವನ್ನು ಹೊಂದಿ । ಭವನ್—ಇರುತ್ತಾ । ಅಸುನ್ವಾಂ—ಸೋಮವನ್ನು ಅರ್ಪಿಸದಿರುವ । ಸಂಸದಂ—(ಕರ್ಮಭ್ರಷ್ಟರಾದ) ಜನಸಂಘವನ್ನು । ವಿಷೂಚೀ—ನಾನಾದಿಕ್ಕುಗಳಿಗೆ ಓಡಿಹೋಗುವಂತೆ ಮಾಡುತ್ತಾ । ವ್ಯನಾಶಯಃ—ಅವರನ್ನು ಪೂರ್ಣವಾಗಿ ಕೊಂದಿರುವೆ.

|| ಭಾವಾರ್ಥ ||

ಎಲೈ ಇಂದ್ರನೇ, ನೀನು ಸೋಮವನ್ನು ಪಾನಮಾಡುವವನಾಗಿದ್ದು ಅತ್ಯಂತ ಉತ್ಕೃಷ್ಟವಾದ ಸ್ಥಾನವನ್ನು ಹೊಂದಿರುತ್ತಾ ಸೋಮವನ್ನು ಅರ್ಪಿಸದಿರುವ ಕರ್ಮಭ್ರಷ್ಟರಾದ ಜನಸಂಘವನ್ನು ನಾನಾದಿಕ್ಕುಗಳಿಗೆ ಓಡಿಸುತ್ತಾ ಅವರನ್ನೆಲ್ಲಾ ಪೂರ್ಣವಾಗಿ ನಾಶಮಾಡಿದ್ದೀಯೆ.

### English Translation

You Indra, the most excellent drinker of the Soma, destroy the adverse assembly that offers no libations.



## ಹದಿನೈದನೆಯ ಸೂಕ್ತವು.

|| ಸಾಯಣಭಾಷ್ಯಂ ||

ತಮ್ವಭೀತಿ ತ್ರಯೋದಶರ್ಚಂ ತೃತೀಯಂ ಸೂಕ್ತಮೌಷ್ಣಿಹಮೈಂದ್ರಂ। ಪೂರ್ವೋಕ್ತಾವೇವರ್ಷೀ। ತಥಾ ಚಾನುಕ್ರಮ್ಯತೇ । ತಮ್ವಭಿ ಸಪ್ತೋನೌಷ್ಣಿಹಮಿತಿ ॥ ಮಹಾವ್ರತೇ ನಿಷ್ಕೇವಲ್ಯ ಔಷ್ಣಿಹತೃಚಾಶೀ-

ತಾವೃತ್ತಮಾವರ್ಜಮಿತ್ಯುಕ್ತಂ । ಸೂತ್ರ್ಯತೇ ೬ । ತಮ್ವಭಿ ಪ್ರ ಗಾಯತೇತ್ಯುತ್ತಮಾಮುದ್ಧರತಿ । ಐ. ಆ. ೫-೨-೫. । ಇತಿ ॥ ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಬ್ರಹ್ಮಶಸ್ತ್ರ ಆದ್ಯಸ್ತೃಚೋ ವೈಕಲ್ಪಿಕೋಽನುರೂಪಃ । ಸೂತ್ರಿತಂ ಚ । ತಮ್ವಭಿ ಪ್ರ ಗಾಯತ ವಯಮು ತ್ವಾಮಪೂರ್ವ್ಯ । ಆ ೭-೮. । ಇತಿ ॥

ಅನುವಾದವು— ತಮ್ವಭಿ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿಂದಿನ ಸೂಕ್ತಕ್ಕೆ ಹೇಳಿರುವ ಗೋಷೂಕ್ತಿ, ಅಶ್ವಸೂಕ್ತೀ ಎಂಬುವರೇ ಋಷಿಗಳು ; ಇಂದ್ರನು ದೇವತೆಯು ; ಉಷ್ಣಿಕ್ ಛಂದಸ್ಸು. ಅನುಕ್ರಮಣಿಕೆಯಲ್ಲಿ— ತಮ್ವಭಿ ಸಪ್ತೋನೌಷ್ಣಿಹಂ ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನು ಪಠಿಸುವಾಗ ಉಷ್ಣಿಕ್ ಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ಕೊನೆಯ ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದ— ತಮ್ವಭಿ ಪ್ರ ಗಾಯತೇತ್ಯುತ್ತಮಾಮುದ್ಧರತಿ ಎಂಬ ವಾಕ್ಯದಿಂದ (ಐ. ಆ ೫-೨-೫) ನಿರ್ದಿಷ್ಟವಾಗಿರುವುದು ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿಯೂ ತೃತೀಯಸವನ ಕಾಲದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ವೈಕಲ್ಪಿಕಾನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ತಮ್ವಭಿ ಪ್ರ ಗಾಯತ ವಯಮು ತ್ವಾಮಪೂರ್ವ್ಯ ಎಂಬ ಸೂತ್ರದಿಂದ (ಆ ೭-೮) ವಿವೃತವಾಗಿರುವುದು.

## ಸೂಕ್ತ—೧೫

ಮಂಡಲ—೮ ॥ ಅನುವಾಕ—೩ ॥ ಸೂಕ್ತ— ೧೫ ॥
ಅಷ್ಟಕ—೬ ॥ ಅಧ್ಯಾಯ— ೧॥ ವರ್ಗ—೧೭, ೧೮, ೧೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩ ॥
ಋಷೀ—ಗೋಷೂಕ್ತ್ಯಶ್ವಸೂಕ್ತಿನೌ ಕಾಣ್ವಾಯನೌ ॥
ದೇವತಾ—ಇಂದ್ರಃ ॥
ಛಂದಃ—ಉಷ್ಣಿಕ್ ॥

॥ ಸಂಹಿತಾಪಾಠಃ ॥

ತಮ್ವ॒ಭಿ ಪ್ರಗಾ॑ಯತ ಪುರುಹೂ॒ತಂ ಪು॑ರುಷ್ಟು॒ತಂ ।
ಇಂದ್ರಂ॑ ಗೀ॒ರ್ಭಿಸ್ತ॑ವಿ॒ಷಮಾ ವಿ॑ವಾಸತ ॥ ೧ ॥

॥ ಪದಪಾಠಃ ॥

ತಂ । ಊಂ ಇತಿ॑ । ಅ॒ಭಿ । ಪ್ರ । ಗಾ॒ಯ॒ತ॒ । ಪು॒ರು॒ಽಹೂ॒ತಂ । ಪು॒ರು॒ಽಸ್ತು॒ತಂ ।
ಇಂದ್ರಂ॑ । ಗೀ॒ಃಽಭಿಃ । ತ॒ವಿ॒ಷಂ । ಆ । ವಿ॒ವಾ॒ಸ॒ತ॒ ॥ ೧ ॥

॥ ಸಾಯಣಭಾಷ್ಯಂ ॥

ಪುರುಹೂತಂ ಬಹುಭಿರಾಹೂತಂ ಪುರುಷ್ಟುತಂ ಬಹುಭಿಃ ಸ್ತುತಂ ತಮು ತಮೇವೇಂದ್ರಂ ಹೇ ಸ್ತೋತಾರಃ ಅಭಿ ಪ್ರ ಗಾಯತ । ಅಭಿಮುಖಂ ಪ್ರಕರ್ಷೇಣ ಸ್ತುಧ್ವಂ । ಏತದೇವ ಸ್ಪಷ್ಟಯತಿ । ತವಿಷಂ ಮಹಾಂತಮಿಂದ್ರಂ ಗೀರ್ಭಿರ್ವಾಗ್ಭಿರಾ ವಿವಾಸತ । ಪರಿಚರತ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಗಳೇ) ಪುರುಹೂತಂ—ಅನೇಕರ ಆಹ್ವಾನಕ್ಕೆ ಪಾತ್ರನೂ । ಪುರುಷ್ಟುತಂ—ಅನೇಕರಿಂದ ಪ್ರಶಂಸಿಸಲ್ಪಡುವವನೂ ಆದ । ತಮು ಅಭಿ ಪ್ರಗಾಯತ—ಆ ಇಂದ್ರನನ್ನೇ ಪ್ರಶಂಸಿಸಿ ಗಾನಮಾಡಿರಿ । ತವಿಷಂ—ಶಕ್ತಿಯುತನಾದ । ಇಂದ್ರಂ—ಇಂದ್ರನನ್ನು । ಗೀರ್ಭಿಃ—ಸ್ತುತಿಗಳಿಂದ । ಆ ವಿವಾಸತ—ಉಪಚರಿಸಿರಿ.

॥ ಭಾವಾರ್ಥ ॥

ಎಲೈ ಸ್ತೋತೃಗಳೇ, ಅನೇಕರ ಆಹ್ವಾನಕ್ಕೆ ಪಾತ್ರನೂ, ಅನೇಕರಿಂದ ಪ್ರಶಂಸಿಸಲ್ಪಡುವವನೂ ಆದ ಆ ಇಂದ್ರನನ್ನೇ ಪ್ರಶಂಸಿಸಿ ಗಾನಮಾಡಿರಿ. ಶಕ್ತಿಯುತನಾದ ಇಂದ್ರನನ್ನು ಸ್ತುತಿಗಳಿಂದ ಉಪಚರಿಸಿ.

## English Translation

Glorify him the invoked of many, the praised of many; adore the powerful Indra with hymns;

॥ ಸಂಹಿತಾಪಾಠಃ ॥

ಯಸ್ಯ ದ್ವಿಬರ್ಹಸೋ ಬೃಹತ್ಸಹೋ ದಾಧಾರ ರೋದಸೀ ।
ಗಿರೀಁರಜ್ರಾಁ ಅಪಃ ಸ್ವರ್ವೃಷತ್ವನಾ ॥ ೨ ॥

॥ ಪದಪಾಠಃ ॥

ಯಸ್ಯ । ದ್ವಿऽಬರ್ಹಸಃ । ಬೃಹತ್ । ಸಹಃ । ದಾಧಾರ । ರೋದಸೀ ಇತಿ ।
ಗಿರೀನ್ । ಅಜ್ರಾನ್ । ಅಪಃ । ಸ್ವಃ । ವೃಷऽತ್ವನಾ ॥ ೨ ॥

॥ ಸಾಯಣಭಾಷ್ಯಂ ॥

ದ್ವಿಬರ್ಹಸೋ ದ್ವಯೋಃ ಸ್ಥಾನಯೋಃ ಪರಿವೃಢಸ್ಯ ಯಸ್ಯೇಂದ್ರಸ್ಯ ಬೃಹನ್ಮಹತ್ಸಹೋ ಬಲಂ ರೋದಸೀ ದ್ಯಾವಾಪೃಥಿವ್ಯೌ ದಾಧಾರ ಧಾರಯತಿ ॥ ಛಾಂದಸೋ ಲಿಟ್ । ತುಜಾದಿತ್ವಾದಭ್ಯಾಸದೀರ್ಘಃ ॥ ತಥಾಜ್ರಾನ್ ಕ್ಷಿಪ್ರಗಮನಾನ್ ಗಿರೀನ್ ಪರ್ವತಾನ್ ಮೇಘಾನ್ವಾ ಸ್ವಃ ಸರಣಶೀಲಾ ಅಪ ಉದಕಾನಿ ಚ

ವೃಷತ್ವನಾ ವೃಷತ್ವೇನ ವೀರ್ಯೇಣ ಯಸ್ಯೇಂದ್ರಸ್ಯ ಬಲಂ ಧಾರಯತಿ ತೇಜಾ್ರವಸ್ಥಾಪಯತಿ। ತಮ್ಮಭೀತಿ ಪೂರ್ವಯಾ ಸಂಬಂಧಃ ಸ ತ್ವಮಿತ್ಯುತ್ತರಯಾ ವಾ ||

। ಪ್ರತಿಪದಾರ್ಥ ।

ದ್ವಿಬರ್ಹಸಃ—ಎರಡು ಲೋಕಗಳಲ್ಲೂ ವೃದ್ಧಿಯನ್ನು ಹೊಂದಿರುವ । ಯಸ್ಯ—ಯಾವ ಇಂದ್ರನ । ಬೃಹತ್—ಮಹತ್ತಾದ । ಸಹಃ—ಬಲವು । ರೋದಸೀ—ದ್ಯಾವಾಪೃಥಿವಿಗಳೆರಡನ್ನೂ । ದಾಧಾರ—ಧರಿಸಿರುವುದೋ । ವೃಷತ್ವನಾ—(ಅದೇ ಇಂದ್ರನ) ವೀರ್ಯಯುಕ್ತವಾಗಿರುವ ಬಲವು । ಅಜ್ರಾನ್—ಕ್ಷಿಪ್ರಗಾಮಿಗಳಾದ । ಗಿರೀನ್—ಮೇಘಗಳನ್ನೂ । ಸ್ರಃ—ಪ್ರವಹಿಸತಕ್ಕ । ಅಪಃ—ಉದಕಗಳನ್ನೂ ಧರಿಸಿರುತ್ತದೆ.

। ಭಾವಾರ್ಥ ।

ಎರಡು ಲೋಕಗಳಲ್ಲೂ ವೃದ್ಧಿಯನ್ನು ಹೊಂದಿರುವ ಯಾವ ಇಂದ್ರನ ಮಹತ್ತಾದ ಬಲವು ದ್ಯಾವಾಪೃಥಿವಿಗಳೆರಡನ್ನೂ ಧರಿಸಿರುವುದೋ ಅದೇ ಇಂದ್ರನ ವೀರ್ಯಯುಕ್ತವಾಗಿರುವ ಬಲವು ಕ್ಷಿಪ್ರಗಾಮಿಗಳಾದ ಮೇಘಗಳನ್ನೂ ಪ್ರವಹಿಸತಕ್ಕ ಉದಕಗಳನ್ನೂ ಧರಿಸಿರುತ್ತದೆ.

## English Translation

The vast strength of whom, powerful in both (regions), has sustained the heaven and earth, and by its vigour (upheld) the swift clouds and flowing waters.

॥ ಸಂಹಿತಾಪಾಠಃ ॥

ಸ ರಾಜಸಿ ಪುರುಷ್ಟುತ ಏಕೋ ವೃತ್ರಾಣಿ ಜಿಘ್ನಸೇ ।
ಇಂದ್ರ ಜೈತ್ರಾ ಶ್ರವಸ್ಯಾ ಚ ಯಂತವೇ ॥ ೩ ॥

। ಪದಪಾಠಃ ॥

ಸಃ । ರಾಜಸಿ । ಪುರುಽಸ್ತುತ । ಏಕಃ । ವೃತ್ರಾಣಿ । ಜಿಘ್ನಸೇ ।
ಇಂದ್ರ । ಜೈತ್ರಾ । ಶ್ರವಸ್ಯಾ । ಚ । ಯಂತವೇ ॥ ೩ ॥

। ಸಾಯಣಭಾಷ್ಯಂ ।

ಹೇ ಪುರುಷ್ಟುತ ಬಹುಭಿಃ ಸ್ತುತೇಂದ್ರ ಸ ಪೂರ್ವೋಕ್ತಗುಣಸ್ತ್ವಂ ರಾಜಸಿ । ದೀಪ್ಯಸೇ । ಈಶಿಷೇ ವಾ । ಅಪಿ ಚ ತ್ವಮೇಕಃ ಸಹಾಯರಹಿತಃ ಕೇವಲ ಏವ ಸನ್ ವೃತ್ರಾಣ್ಯಾವರಕಾಣಿ ಶತ್ರುಜಾತಾನಿ

ಜಿಘ್ನಸೇ । ಹತವಾನಸಿ । ಕಿಮರ್ಥಂ । ಜೈತ್ರಾಣಿ ಜೇತವ್ಯಾನಿ ಧನಾನಿ ಶ್ರವಸ್ಯಾ ಶ್ರವಸ್ಯಾನಿ ಶ್ರವಣೀಯಾನ್ಯನ್ನಾನಿ ಯದ್ವಾ ಶ್ರವಣಾರ್ಹಾಣಿ ಯಶಾಂಸಿ ಚ ಯಂತವೇ ಯಂತುಂ ನಿಯಂತುಂ ಸ್ವಾಧೀನಂ ಕರ್ತುಂ ॥

। ಪ್ರತಿಪದಾರ್ಥ ।

ಪುರುಷ್ಟುತ—ಅನೇಕರಿಂದ ಪ್ರಶಂಸಿಸಲ್ಪಡತಕ್ಕ । ಇಂದ್ರ—ಎಲೈ ಇಂದ್ರನೇ । ಸಃ—ಪ್ರಸಿದ್ಧನಾದ ನೀನು । ರಾಜಸಿ—ಎಲ್ಲರಿಗೂ ಪ್ರಭುವಾಗಿದ್ದೀಯೆ । ಜೈತ್ರಾ—ಜಯಯೋಗ್ಯವಾದ ಧನವನ್ನೂ । ಶ್ರವಸ್ಯಾ ಚ—ಕೀರ್ತಿಯುತವಾದ ಅನ್ನಗಳನ್ನೂ । ಯಂತವೇ—ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ । ಏಕಃ—ಇತರರ ಸಹಾಯವಿಲ್ಲದೇ ನೀನೊಬ್ಬನೇ । ವೃತ್ರಾಣಿ—ಸಕಲ ಶತ್ರುಗಳನ್ನೂ । ಜಿಘ್ನಸೇ—ಹತಮಾಡಿದ್ದೀಯೆ.

। ಭಾವಾರ್ಥ ।

ಅನೇಕರಿಂದ ಪ್ರಶಂಸಿಸಲ್ಪಡತಕ್ಕ ಎಲೈ ಇಂದ್ರನೇ, ಪ್ರಸಿದ್ಧನಾದ ನೀನು ಎಲ್ಲರಿಗೂ ಪ್ರಭುವಾಗಿದ್ದೀಯೆ. ಜಯಯೋಗ್ಯವಾದ ಧನವನ್ನೂ ಕೀರ್ತಿಯುತವಾದ ಅನ್ನಗಳನ್ನೂ ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ನೀನೊಬ್ಬನೇ ಸಕಲ ಶತ್ರುಗಳನ್ನೂ ಹತಮಾಡಿದ್ದೀಯೆ.

English Translation

You, the praised of many, reign: you, single, have slain many enemies, in order to acquire the spoils of victory and abundant food.

। ಸಂಹಿತಾಪಾಠಃ ।

ತಂ ತೇ ಮದಂ ಗೃಣೀಮಸಿ ವೃಷಣಂ ಪೃತ್ಸು ಸಾಸಹಿಂ ।
ಉ ಲೋಕಕೃತ್ನುಮದ್ರಿವೋ ಹರಿಶ್ರಿಯಂ ॥ ೪ ॥

। ಪದಪಾಠಃ ॥

ತಂ । ತೇ । ಮದಂ । ಗೃಣೀಮಸಿ । ವೃಷಣಂ । ಪೃತ್ಽಸು । ಸಸಹಿಂ ।
ಊಂ ಇತಿ । ಲೋಕಽಕೃತ್ನುಂ । ಅದ್ರಿಽವಃ । ಹರಿಽಶ್ರಿಯಂ ॥ ೪ ॥

। ಸಾಯಣಭಾಷ್ಯಂ ।

ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಬ್ರಹ್ಮಶಸ್ತ್ರೇ ತಂ ತೇ ಮದಮಿತಿ ತೃಚೋ ವೈಕಲ್ಪಿಕಃ ಸ್ತೋತ್ರಿಯಃ । ಸೂತ್ರ್ಯತೇ ಹಿ । ತಂ ತೇ ಮದಂ ಗೃಣೀಮಸಿ ತಮ್ವಭಿ ಪ್ರ ಗಾಯತ । ಆ. ೭-೮. । ಇತಿ ॥

ಹೇ ಅದ್ರಿವೋ ವಜ್ರವನ್ನಿಂದ್ರ ತೇ ತ್ವದೀಯಂ ತಂ ಮದಂ ಸೋಮಪಾನಜನಿತಂ ಹರ್ಷಂ- ಗೃಣೀಮಸಿ । ಗೃಣೀಮಃ । ಪ್ರಶಂಸಾಮಃ ॥ ಗೃ ಶಬ್ದೇ ಕ್ರ್ಯಾದಿಃ । ಪ್ವಾದೀನಾಂ ಹ್ರಸ್ವಃ । ಇದಂತೋ ಮಸೀತಿ ಮಸ ಇಕಾರಾಗಮಃ ॥ ಕೀದೃಶಂ । ವೃಷಣಂ ವರ್ಷಿತಾರಂ ಕಾಮಾನಾಂ ಪೃತ್ಸು ಸಂಗ್ರಾಮೇಷು ಸಾಸಹಿಂ ಶತ್ರೂಣಾಮಭಿಭವಿತಾರಂ ಲೋಕಕೃತ್ನುಂ ಲೋಕಸ್ಯ ಸ್ಥಾನಸ್ಯ ಕರ್ತಾರಂ ಹರಿಶ್ರಿಯಂ ಹರಿಭ್ಯಾಮಶ್ವಾಭ್ಯಾಂ ಶ್ರಯಣೀಯಂ ಸೇವ್ಯಂ । ಉಶಬ್ದಃ ಸಮುಚ್ಚಯೇ ಪಾದಪೂರಣೇ ವಾ ॥

॥ ಪ್ರತಿಪದಾರ್ಥ ॥

**ಅದ್ರಿವಃ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ವೃಷಣಂ**—ಕಾಮವರ್ಷಕವಾದುದೂ । **ಪೃತ್ಸು**-ಸಂಗ್ರಾಮಗಳಲ್ಲಿ। **ಸಾಸಹಿಂ**—ಶತ್ರುಗಳನ್ನು ಸೋಲಿಸತಕ್ಕದ್ದೂ। **ಲೋಕಕೃತ್ನುಂ**—ಲೋಕನಿರ್ಮಾಪಕವಾದುದೂ। **ಹರಿಶ್ರಿಯಂ**—ಹರಿನಾಮಕಗಳಾದ ಅಶ್ವಯುಕ್ತವಾದುದೂ ಆದ । **ತೇ**—ನಿನ್ನ । **ತಂ ಮದಮ್**—ಸೋಮಜನಿತವೂ ಪ್ರಸಿದ್ಧವೂ ಆದ ಸಂತೃಪ್ತಿಯನ್ನು । **ಗೃಣೀಮಸಿ**—ಪ್ರಶಂಸಿಸುತ್ತೇವೆ.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಕಾಮವರ್ಷಕವಾದುದೂ, ಸಂಗ್ರಾಮಗಳಲ್ಲಿ ಶತ್ರುಗಳನ್ನು ಸೋಲಿಸತಕ್ಕದ್ದೂ ಲೋಕನಿರ್ಮಾಪಕವಾದುದೂ, ಹರಿನಾಮಕಗಳಾದ ಅಶ್ವಯುಕ್ತವಾದುದೂ ಆದ ನಿನ್ನ ಸೋಮಜನಿತವೂ, ಪ್ರಸಿದ್ಧವೂ ಆದ ಸಂತೃಪ್ತಿಯನ್ನು ಪ್ರಶಂಸಿಸುತ್ತೇವೆ

## English Translation

We celebrate, thunderer, your exhilaration, the showerer ( of benefits ), the overcomer (of foes) in battle, the maker of the world, the glorious with your steeds;

॥ ವಿಶೇಷವಿಷಯಗಳು ॥

ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ತೃತೀಯಸವನಕಾಲದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ತಂ ತೇ ಮದಂ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ವೈಕಲ್ಪಿಕಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ತಂ ತೇ ಮದಂ ಗೃಣೀಮಸಿ ತಮ್ವಭಿ ಪ್ರ ಗಾಯತ ಎಂಬ ಸೂತ್ರದಿಂದ (ಆ. ೭-೮) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಯೇನ ಜ್ಯೋತೀಂಷ್ಯಾಯವೇ ಮನವೇ ಚ ವಿವೇದಿಥ ।

ಮಂದಾನೋ ಅಸ್ಯ ಬರ್ಹಿಷೋ ವಿ ರಾಜಸಿ ॥ ೫ ॥

॥ ಪದಪಾಠಃ ॥

ಯೇನ । ಜ್ಯೋತೀಂಷಿ । ಆಯವೇ । ಮನವೇ । ಚ । ವಿವೇದಿಥ ।

ಮಂದಾನಃ । ಅಸ್ಯ । ಬರ್ಹಿಷಃ । ವಿ । ರಾಜಸಿ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯೇನಾತ್ಮೀಯೇನ ಮದೇನಾಯವ ಔರ್ವಶೇಯಾಯ ಮನವೇ ವಿವಸ್ವತಃ ಪುತ್ರಾಯ ಚ ಜ್ಯೋತೀಂಷಿ ಸೂರ್ಯಾದೀನಿ ವೃತ್ರಾದಿಭಿರಾವೃತಾನಿ ತದ್ವಧೇನ ವಿವೇದಿಥ ಅಲಂಭಯಃ । ಪ್ರಜ್ಞಾಪಿತವಾನ್ ಪ್ರಕಾಶಿತವಾನಸೀತ್ಯರ್ಥಃ । ತೇನ ಮದೇನ ಮಂದಾನೋ ಮೋದಮಾನಸ್ತ್ವಮಸ್ಯ ಬರ್ಹಿಷೋ ವೃದ್ಧಸ್ಯ ಯಜ್ಞಸ್ಯ ವಿ ರಾಜಸಿ । ವಿಶೇಷೇಣೇಶಿಷೇ । ಯದ್ವಾ । ಅಸ್ಯೇತಿ ತೃತೀಯಾರ್ಥೇ ಷಷ್ಠೀ । ಅನೇನ ಬರ್ಹಿಷಾ ವೃದ್ಧೇನ ಹೃಷ್ಯನ್ ವಿ ರಾಜಸಿ । ವಿಶೇಷೇಣ ದೀಪ್ಯಸೇ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಯೇನ—ಯಾವ ನಿನ್ನ ಸಂತೃಪ್ತಿಯಿಂದ । ಆಯವೇ—ಊರ್ವಶೀಪುತ್ರನಾದ ಆಯುವಿಗಾಗಿಯೂ । ಮನವೇ ಚ— ವಿವಸ್ವಂತನ ಪುತ್ರನಾದ ಮನುವಿಗಾಗಿಯೂ । ಜ್ಯೋತೀಂಷಿ—ಸೂರ್ಯಾದಿ ತೇಜೋಮಂಡಲಗಳನ್ನು । ವಿವೇದಿಥ—ಅಂತರಿಕ್ಷದಲ್ಲಿ ಪ್ರಕಾಶಿಸುವಂತೆ ಮಾಡಿದೆಯೋ (ಆ ಸಂತೃಪ್ತಿಯಿಂದ) । ಮಂದಾನಃ—ಹರ್ಷಗೊಂಡ ನೀನು । ಅಸ್ಯ ಬರ್ಹಿಷಃ— ವಿಸ್ತೃತವಾಗಿರುವ ಈ ಯಜ್ಞಕ್ಕೆ । ವಿ ರಾಜಸಿ— ಪ್ರಕಾಶಿಸುವ ಪ್ರಭುವಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ನಿನ್ನ ಸಂತೃಪ್ತಿಯಿಂದ ಊರ್ವಶೀಪುತ್ರನಾದ ಆಯುವಿಗಾಗಿಯೂ ವಿವಸ್ವಂತನ ಪುತ್ರನಾದ ಮನುವಿಗಾಗಿಯೂ ಸೂರ್ಯಾದಿ ತೇಜೋಮಂಡಲಗಳನ್ನು ಅಂತರಿಕ್ಷದಲ್ಲಿ ಪ್ರಕಾಶಿಸುವಂತೆ ಮಾಡಿದೆಯೋ ಆ ಸಂತೃಪ್ತಿಯಿಂದ ಹರ್ಷಗೊಂಡ ನೀನು ವಿಸ್ತೃತವಾಗಿ ಈ ಯಜ್ಞಕ್ಕೆ ಪ್ರಕಾಶಿಸುವ ಪ್ರಭುವಾಗಿದ್ದೀಯೆ.

## English Translation

Whereby you have made the planets manifest to Ayu and to Manu, and rule rejoicing over this sacred rite.

॥ ಸಂಹಿತಾಪಾಠಃ ॥

ತದದ್ಯಾ ಚಿತ್ತ ಉಕ್ಥಿನೋಽನು ಷ್ಟುವಂತಿ ಪೂರ್ವಥಾ ।

ವೃಷಪತ್ನೀರಪೋ ಜಯಾ ದಿವೇದಿವೇ ॥ ೬ ॥

॥ ಪದಪಾಠಃ ॥

ತತ್ । ಅದ್ಯ । ಚಿತ್ । ತೇ । ಉಕ್ಥಿನಃ । ಅನು । ಸ್ತುವಂತಿ । ಪೂರ್ವಽಥಾ ।

ವೃಷಽಪತ್ನೀಃ । ಅಪಃ । ಜಯ । ದಿವೇಽದಿವೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವದೀಯಂ ತತ್ಪ್ರಸಿದ್ಧಂ ಬಲಮದ್ಯ ಚಿದದ್ಯಾಪಿ ಪೂರ್ವಥಾ ಪೂರ್ವಸ್ಮಿನ್ಕಾಲ ಇವೋಕ್ಥಿನಃ ಶಸ್ತ್ರಿಣಃ ಸ್ತೋತಾರೋಽನು ಸ್ತುವಂತಿ । ಕ್ರಮೇಣ ಪ್ರಶಂಸಂತಿ । ಸ ತ್ವಂ ವೃಷಪತ್ನೀಃ ವೃಷಾ ವರ್ಷಿತಾ ಪರ್ಜನ್ಯಃ ಪತಿರ್ಯಾಸಾಂ ತಾದೃಶೀರಪೋ ದಿವೇ ದಿವೇ ಪ್ರತಿದಿವಸಂ ಜಯ । ಸ್ವಾಯತ್ತಂ ಕುರು ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತೇ—ನಿನ್ನ । ತತ್—ಪ್ರಸಿದ್ಧವಾದ ಬಲವನ್ನು । ಅದ್ಯ ಚಿತ್—ಈಗಲೂ ಕೂಡ । ಪೂರ್ವಥಾ—ಹಿಂದಿನ ಕಾಲದಲ್ಲಿ ಸ್ತುತಿಸಿದಂತೆಯೇ । ಉಕ್ಥಿನಃ—ಶಸ್ತ್ರಮಂತ್ರಗಳನ್ನು ನಿರ್ಮಿಸುವ ಸ್ತೋತೃಗಳು । ಅನು ಸ್ತುವಂತಿ—ಪ್ರಶಂಸಿಸುತ್ತಾರೆ (ಅಂತಹ ಮಹಿಮೆಯುಳ್ಳ ನೀನು) । ವೃಷಪತ್ನೀಃ—ವೃಷ್ಟಿಕಾರಕನಾದ ಪರ್ಜನ್ಯನಿಗೆ ಪತ್ನೀರೂಪರಾದ । ಅಪಃ—ಉದಕಗಳನ್ನು । ದಿವೇದಿವೇ—ಪ್ರತಿದಿವಸವೂ । ಜಯ—ಸ್ವಾಧೀನ ಪಡಿಸಿಕೋ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಪ್ರಸಿದ್ಧವಾದ ಬಲವನ್ನು ಈಗಲೂ ಕೂಡ ಹಿಂದಿನ ಕಾಲದಲ್ಲಿ ಸ್ತುತಿಸಿದಂತೆಯೇ ಶಸ್ತ್ರಮಂತ್ರಗಳನ್ನು ನಿರ್ಮಿಸುವ ಸ್ತೋತೃಗಳು ಪ್ರಶಂಸಿಸುತ್ತಾರೆ. ಅಂತಹ ಮಹಿಮೆಯುಳ್ಳ ನೀನು ವೃಷ್ಟಿಕಾರಕನಾದ ಪರ್ಜನ್ಯನಿಗೆ ಪತ್ನೀರೂಪರಾದ ಉದಕಗಳನ್ನು ಪ್ರತಿದಿನವೂ ನಿನ್ನ ಸ್ವಾಧೀನಪಡಿಸಿಕೋ.

## English Translation

The reciters of prayer celebrate that your (exhilaration) now as of old: you daily hold in subjection the waters, the wives of the showerer.

॥ ಸಂಹಿತಾಪಾಠಃ ॥

ತವ ತ್ಯದಿಂದ್ರಿಯಂ ಬೃಹತ್ತವ ಶುಷ್ಮಮುತ ಕ್ರತುಂ ।

ವಜ್ರಂ ಶಿಶಾತಿ ಧಿಷಣಾ ವರೇಣ್ಯಂ ॥ ೭ ॥

॥ ಪದಪಾಠಃ ॥

ತವ । ತ್ಯತ್ । ಇಂದ್ರಿಯಂ । ಬೃಹತ್ । ತವ । ಶುಷ್ಮಂ । ಉತ । ಕ್ರತುಂ ।

ವಜ್ರಂ । ಶಿಶಾತಿ । ಧಿಷಣಾ । ವರೇಣ್ಯಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ಯತ್ತತ್ಪ್ರಸಿದ್ಧಮಿಂದ್ರಿಯಮಿಂದ್ರಸ್ಯ ಲಿಂಗಂ ಬೃಹತ್ಪ್ರಭೂತಂ ವೀರ್ಯಂ ಧಿಷಣಾ ಸ್ತುತಿಃ ಶಿಶಾತಿ । ನಿಃಶ್ಯತಿ । ತೀಕ್ಷ್ಣೀಕರೋತಿ । ತಥಾ ತವ ತ್ವದೀಯಂ ಶುಷ್ಮಂ ಶೋಷಕಂ ಬಲಮುತಾಪಿ ಚ ಕ್ರತುಂ ಪ್ರಜ್ಞಾನಂ ಬಲಂ ಕರ್ಮ ವಾ ವರೇಣ್ಯಂ ವರಣೀಯಂ ವಜ್ರಮಾಯುಧಂ ಚ ಸ್ತುತಿಸ್ತೀಕ್ಷ್ಣೀಕರೋತಿ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಧಿಷಣಾ—ಸ್ತುತಿಯು । ತ್ಯತ್—ಲೋಕಪ್ರಸಿದ್ಧವಾದುದೂ । ಬೃಹತ್—ಮಹತ್ತ್ವವುಳ್ಳದ್ದೂ ಆದ । ತವ—ನಿನ್ನ । ಇಂದ್ರಿಯಂ—ವೀರ್ಯವನ್ನು । ಶಿಶಾತಿ—ತೀಕ್ಷ್ಣವಾಗುವಂತೆ ಮಾಡುತ್ತದೆ । ತವ—ನಿನ್ನ । ಶುಷ್ಮಂ—ಶತ್ರುನಾಶಕವಾದ ಬಲವನ್ನೂ । ಉತ—ಮತ್ತು । ಕ್ರತುಂ—ಕರ್ಮವನ್ನೂ । ವರೇಣ್ಯಂ—ಶ್ರೇಷ್ಠವಾದ । ವಜ್ರಂ—ವಜ್ರಾಯುಧವನ್ನೂ (ತೀಕ್ಷ್ಣವಾಗುವಂತೆ ಮಾಡುತ್ತದೆ).

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ತುತಿಕರ್ತನ ಸ್ತುತಿಯು ಲೋಕಪ್ರಸಿದ್ಧವಾದುದೂ, ಮಹತ್ತ್ವವುಳ್ಳದ್ದೂ ಆದ ನಿನ್ನ ವೀರವನ್ನು ತೀಕ್ಷ್ಣವಾಗುವಂತೆ ಮಾಡುತ್ತದೆ. ನಿನ್ನ ಶತ್ರುನಾಶಕವಾದ ಬಲವನ್ನೂ ಮತ್ತು ಕರ್ಮವನ್ನೂ ಶ್ರೇಷ್ಠವಾದ ವಜ್ರಾಯುಧವನ್ನೂ ತೀಕ್ಷ್ಣವಾಗುವಂತೆ ಮಾಡುತ್ತದೆ.

English Translation

Praise sharpens your great energy, your strength, your acts, and your majestic thunderbolt.

॥ ಸಂಹಿತಾಪಾಠಃ ॥

ತವ ದ್ಯೌರಿಂದ್ರ ಪೌಂಸ್ಯಂ ಪೃಥಿವೀ ವರ್ಧತಿ ಶ್ರವಃ ।

ತ್ವಾಮಾಪಃ ಪರ್ವತಾಸಶ್ಚ ಹಿನ್ವಿರೇ ॥ ೮ ॥

॥ ಪದಪಾಠಃ ॥

ತವ । ದ್ಯೌಃ । ಇಂದ್ರ । ಪೌಂಸ್ಯಂ । ಪೃಥಿವೀ । ವರ್ಧತಿ । ಶ್ರವಃ ।

ತ್ವಾಂ । ಆಪಃ । ಪರ್ವತಾಸಃ । ಚ । ಹಿನ್ವಿರೇ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತವ ತ್ವದೀಯಂ ಪೌಂಸ್ಯಂ ಬಲಂ ದ್ಯೌರ್ವರ್ಧತಿ । ವರ್ಧಯತಿ । ತ್ವದೀಯಂ ಶ್ರವೋ ಯಶಃ ಪೃಥಿವೀ ವರ್ಧಯತಿ ॥ ವೃಧೇರ್ಣ್ಯಂತಾಲ್ಲಟಿ ಶಪಿ ಛಂದಸ್ಯುಭಯಥೇತ್ಯಾರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ ॥ ತಂ ತ್ವಾಮಾಪ ಉದಕಾನ್ಯಂತರಿಕ್ಷಾಣಿ ಪರ್ವತಾಸಃ ಪರ್ವತಾಃ ಪರ್ವವಂತೋ ಮೇಘಾಶ್ಚ ಗಿರಯಶ್ಚ ವಾ ಹಿನ್ವಿರೇ । ಪ್ರೀಣಯಂತಿ । ಸ್ವಾಮಿತ್ವೇನ ಪ್ರಾಪ್ನುವಂತಿ ವಾ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತವ—ನಿನ್ನ । ಪೌಂಸ್ಯಂ—ಬಲವನ್ನು । ದ್ಯೌಃ—ದ್ಯುಲೋಕವು । ವರ್ಧತಿ—ಬೆಳೆಸುತ್ತದೆ । ಶ್ರವಃ—ನಿನ್ನ ಯಶಸ್ಸನ್ನು । ಪೃಥಿವೀ—ಪೃಥ್ವಿಯು (ವಿಸ್ತೃತವಾಗುವಂತೆ ಮಾಡುತ್ತದೆ) । ತ್ವಾಂ—ನಿನ್ನನ್ನು । ಆಪಃ – ಉದಕಗಳೂ ( ಅಂತರಿಕ್ಷಗಳೂ ) । ಪರ್ವತಾಸಃ ಚ – ಪರ್ವತಗಳೂ ಅಥವಾ ಮೇಘಗಳೂ । ಹಿನ್ವಿರೇ—ಸಂತೋಷಗೊಳಿಸುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಬಲವನ್ನು ದ್ಯುಲೋಕವು ಬೆಳೆಸುತ್ತದೆ. ನಿನ್ನ ಯಶಸ್ಸನ್ನು ಪೃಥ್ವಿಯು ವಿಸ್ತೃತವಾಗುವಂತೆ ಮಾಡುತ್ತದೆ. ನಿನ್ನನ್ನು ಉದಕಗಳೂ, ಅಂತರಿಕ್ಷಗಳೂ, ಪರ್ವತಗಳೂ ಅಥವಾ ಮೇಘಗಳೂ ಸಂತೋಷಗೊಳಿಸುತ್ತವೆ.

English Translation

The heaven invigorates your manhood, Indra, the earth (spreads) your renown ; the waters, the mountains propitiate you.

॥ ಸಂಹಿತಾಪಾಠಃ ॥

ತ್ವಾಂ ವಿಷ್ಣುರ್ಬೃಹನ್ಕ್ಷಯೋ ಮಿತ್ರೋ ಗೃಣಾತಿ ವರುಣಃ ।

ತ್ವಾಂ ಶರ್ಧೋ ಮದತ್ಯನು ಮಾರುತಂ ॥ ೯ ॥

॥ ಪದಪಾಠಃ ॥

ತ್ವಾಂ । ವಿಷ್ಣುಃ । ಬೃಹನ್ । ಕ್ಷಯಃ । ಮಿತ್ರಃ । ಗೃಣಾತಿ । ವರುಣಃ ।

ತ್ವಾಂ । ಶರ್ಧಃ । ಮದತಿ । ಅನು । ಮಾರುತಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಬೃಹನ್ಮಹಾನ್ ಕ್ಷಯೋ ನಿವಾಸಹೇತುರ್ವಿಷ್ಣುರ್ಮಿತ್ರೋ ವರುಣಶ್ಚ ತ್ವಾಂ ಗೃಣಾತಿ। ಸ್ತೌತಿ । ತಥಾ ಮಾರುತಂ ಮರುತ್ಸಂಬಂಧಿ ಶರ್ಧೋ ಬಲಂ ತ್ವಾಮನು ಮದತಿ । ತವ ಮದಮನುಲಕ್ಷ್ಯ ಹೃಷ್ಟಂ ಸ್ಯಾದ್ಯತಿ । ತ್ವಾಮನುಮಾದಯತಿ ವಾ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಬೃಹನ್—ಮಹಾತ್ಮನಾದವನೂ । ಕ್ಷಯಃ—ನಿವಾಸದಾಯಕನೂ ಆದ । ವಿಷ್ಣುಃ—ವಿಷ್ಣುವೂ । ಮಿತ್ರಃ—ಮಿತ್ರನೂ । ವರುಣಃ—ವರುಣನೂ । ತ್ವಾಂ—ನಿನ್ನನ್ನು । ಗೃಣಾತಿ—ಸ್ತುತಿಸುತ್ತಾರೆ । ಮಾರುತಂ—ಮರುತ್ಸಂಬಂಧಿಯಾದ । ಶರ್ಧಃ—ಬಲವು । ತ್ವಾಂ ಅನು—ನಿನ್ನನ್ನು ಅನುಸರಿಸಿ । ಮದತಿ—ಹರ್ಷವನ್ನು (ನಿನ್ನಂತೆಯೇ) ವ್ಯಕ್ತಪಡಿಸುತ್ತದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಮಹಾತ್ಮನೂ, ನಿವಾಸದಾಯಕನೂ ಆದ ವಿಷ್ಣುವು ನಿನ್ನನ್ನು ಪ್ರಶಂಸಿಸುತ್ತಾನೆ. ಹಾಗೆಯೇ ಮಿತ್ರನೂ, ವರುಣನೂ ನಿನ್ನನ್ನು ಸ್ತುತಿಸುತ್ತಾರೆ. ನೀನು ಸಂತೋಷಪಡುವಂತೆಯೇ, ನಿನ್ನನ್ನು ಅನುಸರಿಸಿ ಮರುತ್ಸಂಘವೂ ಹರ್ಷವನ್ನು ಪ್ರಕಾಶಪಡಿಸುತ್ತದೆ.

## English Translation

Vishnu, the mighty giver of dwellings praises you, and Mitra and Varuna ; the company of the Maruts imitates you in exhilaration.

॥ ಸಂಹಿತಾಪಾಠಃ ॥

ತ್ವಂ ವೃಷಾ ಜನಾನಾಂ ಮಂಹಿಷ್ಠ ಇಂದ್ರ ಜಜ್ಞಿಷೇ ।
ಸತ್ರಾ ವಿಶ್ವಾ ಸ್ವಪತ್ಯಾನಿ ದಧಿಷೇ ॥ ೧೦ ॥

॥ ಪದಪಾಠಃ ॥

ತ್ವಂ । ವೃಷಾ । ಜನಾನಾಂ । ಮಂಹಿಷ್ಠಃ । ಇಂದ್ರ । ಜಜ್ಞಿಷೇ ।
ಸತ್ರಾ । ವಿಶ್ವಾ । ಸುಽಅಪತ್ಯಾನಿ । ದಧಿಷೇ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವೃಷಾ ವರ್ಷಿತಾ ತ್ವಂ ಜನಾನಾಂ ದೇವಜನಾನಾಂ ಮಧ್ಯೇ ಮಂಹಿಷ್ಠೋ ದಾತೃತಮೋ ಜಜ್ಞಿಷೇ । ಪ್ರಾದುರ್ಭವಸಿ । ಅತ ಏವ ವಿಶ್ವಾ ಸರ್ವಾಣಿ ಸ್ವಪತ್ಯಾನಿ ಶೋಭನೈಃ ಪುತ್ರಾದಿಭಿಃ ಸಹಿತಾನಿ ಸತ್ರಾ ಸಹ ದಧಿಷೇ । ದಾತುಂ ಧಾರಯಸಿ । ದದಾಸಿ ವಾ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ವೃಷಾ—ಇಷ್ಟಾರ್ಥಪ್ರದನಾದ । ತ್ವಂ—ನೀನು । ಜನಾನಾಂ—ದೇವತಾರೂಪದ ಜನರ ನಡುವೆ । ಮಂಹಿಷ್ಠಃ—ಅತ್ಯಂತ ಉದಾರವಾದ ದಾನಶೀಲನಾಗಿ । ಜಜ್ಞಿಷೇ—ಉತ್ಪನ್ನನಾಗಿದ್ದೀಯೆ । ವಿಶ್ವಾ—ಸಮಸ್ತವಾದ । ಸ್ವಪತ್ಯಾನಿ—ಉತ್ತಮವಾದ ಪುತ್ರಸಂತಾನಸಂಪತ್ತನ್ನೂ । ಸತ್ರಾ—ನಿನ್ನಲ್ಲಿಯೇ । ದಧಿಷೇ—(ನಮಗೆ ಕೊಡಲು) ಹೊಂದಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಇಷ್ಟಾರ್ಥಪ್ರದನಾದ ನೀನು ದೇವತೆಗಳ ಮಧ್ಯದಲ್ಲೆಲ್ಲಾ ಅತ್ಯಂತ ಉದಾರವಾದ ದಾನಶೀಲನಾಗಿದ್ದೀಯೆ. ಉತ್ತಮವಾದ ಸಮಸ್ತ ಪುತ್ರಸಂತಾನವನ್ನೂ ನಮಗೆ ಕೊಡಲು ನಿನ್ನಲ್ಲಿಯೇ ಹೊಂದಿದ್ದೀಯೆ.

## English Translation

You, Indra, who are the showerer, have been born the most bountiful of beings; you associate with you all good offspring.

॥ ಸಂಹಿತಾಪಾಠಃ ॥

ಸತ್ರಾ ತ್ವಂ ಪುರುಷ್ಟುತ ಏಕೋ ವೃತ್ರಾಣಿ ತೋಶಸೇ ।
ನಾನ್ಯ ಇಂದ್ರಾತ್ಕರಣಂ ಭೂಯ ಇನ್ವತಿ ॥ ೧೧ ॥

॥ ಪದಪಾಠಃ ॥

ಸತ್ರಾ । ತ್ವಂ । ಪುರುಽಸ್ತುತ । ಏಕಃ । ವೃತ್ರಾಣಿ । ತೋಶಸೇ ।
ನ । ಅನ್ಯಃ । ಇಂದ್ರಾತ್ । ಕರಣಂ । ಭೂಯಃ । ಇನ್ವತಿ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಪುರುಷ್ಟುತ ಬಹುಭಿಃ ಸ್ತುತೇಂದ್ರ ತ್ವಮೇಕೋಽಸಹಾಯ ಏವ ಸನ್ ಸತ್ರಾ । ಮಹನ್ನಾಮೈತತ್ । ಮಹಾಂತಿ ವೃತ್ರಾಣಿ ಶತ್ರುಜಾತಾನಿ । ಯದ್ವಾ । ಸತ್ರೇತಿ ಸಹಾರ್ಥೇ । ಸಹೈವ

ಯುಗಪದೇವೈಕಯತ್ನೇನೈವ । ತೋಶಸೇ । ಹಿನಸ್ಸಿ । ತೋಶತಿರ್ವಧಕರ್ಮಾ । ಅಕರ್ತುಂ ಶಕ್ತಾನೀತಿ ಭಾವಃ । ಅಪಿ ಚಾಸ್ಮಾದಿಂದ್ರಾದನ್ಯಃ ಕಶ್ಚಿದ್ಭೂಯೋ ಬಹುತರಂ ಕರಣಂ ಕರ್ಮ ವೃತ್ರವಧಾದಿಕಂ ನೇನ್ವತಿ । ನ ಪ್ರಾಪ್ನೋತಿ । ಇಂದ್ರ ಏವ ಕರ್ತುಂ ಶಕ್ನೋತೀತಿ ಭಾವಃ ॥

। ಪ್ರತಿಪದಾರ್ಥ ।

**ಪುರುಷ್ಟುತ**—ಅನೇಕರಿಂದ ಪ್ರಶಂಸಿಸಲ್ಪಡತಕ್ಕ ಎಲೈ ಇಂದ್ರನೇ । **ತ್ವಂ**—ನೀನು । **ಏಕಃ**—ಇತರರ ಸಹಾಯವಿಲ್ಲದೇ ಅದ್ವಿತೀಯನಾಗಿ। **ಸತ್ರಾ**—ಮಹತ್ಸ್ವರೂಪವುಳ್ಳ । **ವೃತ್ರಾಣಿ**—ಶತ್ರುಜನಗಳನ್ನೂ । **ತೋಶಸೇ**-ಕೊಲ್ಲುತ್ತೀಯೆ । **ಇಂದ್ರಾತ್**—ಇಂದ್ರರೂಪನಾದ ನಿನಗಿಂತಲೂ । **ಅನ್ಯಃ**—ಬೇರೊಬ್ಬನೂ । **ಭೂಯಃ**—ಅತಿ ಪ್ರಬಲವಾದ। **ಕರಣಂ**—ವೃತ್ರಹನನಾದಿ ಕರ್ಮವನ್ನು । **ನ ಇನ್ವತಿ**—ಮಾಡುವ ಶಕ್ತಿಯನ್ನು ಹೊಂದಲಾರನು.

। ಭಾವಾರ್ಥ ।

ಅನೇಕರ ಪ್ರಶಂಸೆಗೆ ಪಾತ್ರನಾದ ಎಲೈ ಇಂದ್ರನೇ, ನೀನು ಇತರರ ಸಹಾಯವಿಲ್ಲದೇ ಅದ್ವಿತೀಯನಾಗಿ ಮಹಾ ಬಲಿಷ್ಠರಾದ ಶತ್ರುಜನಗಳನ್ನೆಲ್ಲಾ ಕೊಲ್ಲುತ್ತೀಯೆ. ಇಂದ್ರರೂಪನಾದ ನಿನಗಿಂತಲೂ ಬೇರೆ ಯಾರೂ ಸಹ ಅತಿ ಪ್ರಬಲವಾದ ಈ ವೃತ್ರಹನನಾದಿಕರ್ಮವನ್ನು ಮಾಡುವ ಶಕ್ತಿಯನ್ನು ಹೊಂದಿರುವುದಿಲ್ಲ.

## English Translation

(Indra), the praised of many, you alone destroy many mighty foes: no other than Indra achieves such grrat exploits.

। ಸಂಹಿತಾಪಾಠಃ ।

ಯದಿಂದ್ರ ಮನ್ಮಶಸ್ತ್ವಾ ನಾನಾ ಹವಂತ ಊತಯೇ ।
ಅಸ್ಮಾಕೇಭಿರ್ನೃಭಿರತ್ರಾ ಸ್ವರ್ಜಯ ॥ ೧೨ ॥

। ಪದಪಾಠಃ ।

ಯತ್ । ಇಂದ್ರ । ಮನ್ಮಽಶಃ । ತ್ವಾ । ನಾನಾ । ಹವಂತೇ । ಊತಯೇ ।
ಅಸ್ಮಾಕೇಭಿಃ । ನೃಽಭಿಃ । ಅತ್ರ । ಸ್ವಃ । ಜಯ ॥ ೧೨ ॥

। ಸಾಯಣಭಾಷ್ಯಂ ।

ಹೇ ಇಂದ್ರ ಯದ್ಯಸ್ಮಿನ್ ಸಂಗ್ರಾಮೇ ತ್ವಾಂ ಮನ್ಮಶೋ ಮನ್ಮನಾ ಸ್ತೋತ್ರೇಣ ನಾನಾ ಬಹುಪ್ರಕಾರಂ ಹವಂತೇ ಆಹ್ವಯಂತಿ । ಕಿಮರ್ಥಂ । ಊತಯೇ ರಕ್ಷಾಯೈ । ಅತ್ರಾಸ್ಮಿನ್ ಸಂಗ್ರಾ-

ನೋಽಸ್ಮಾಕೇಭಿರಸ್ಮಾಕೈರಸ್ಮದೀಯೈರೇವ ನೃಭಿರ್ನೇತೃಭಿಃ ಸ್ತೋತೃಭಿರಾಹೂತಃ ಸನ್ ಸ್ವಃ ಶತ್ರುಬಲಂ ಬಯ । ಅಭಿಭವ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಾ—ನಿನ್ನನ್ನು । ಯತ್—ಯಾವ ಯುದ್ಧದಲ್ಲಿ । ಮನ್ಮಭಿಃ—ಧ್ಯಾನಾತ್ಮಕವಾದ ಸ್ತುತಿಗಳಿಂದ । ನಾನಾ—ಅನೇಕಪ್ರಕಾರವಾಗಿ । ಊತಯೇ—ರಕ್ಷಣೆಗೋಸ್ಕರ । ಹವಂತೇ—ಸ್ತುತಿಕರ್ತರು ಕರೆಯುವರೋ । ಅತ್ರ—ಅಂತಹ ಯುದ್ಧದಲ್ಲಿಯೇ । ಅಸ್ಮಾಕೇಭಿಃ—ನಮ್ಮಂತಹ । ನೃಭಿಃ—ಸ್ತುತಿಕರ್ತರಿಂದಲೂ ಕರೆಯಲ್ಪಟ್ಟವನಾಗಿ । ಸ್ವಃ—ಶತ್ರುಬಲವನ್ನು । ಜಯ—ಜಯಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ತುತಿಕರ್ತರು ನಿನ್ನನ್ನು ಯಾವ ಯುದ್ಧದಲ್ಲಿ ರಕ್ಷಣಾರ್ಥವಾಗಿ ಅನೇಕವಿಧವಾದ ಸ್ತುತಿಗಳಿಂದ ಪ್ರಶಂಸಿಸಿ ಕರೆಯುವರೋ ಅಂತಹ ಯುದ್ಧದಲ್ಲಿಯೇ, ನಮ್ಮಂತಹ ಸ್ತುತಿಕರ್ತರಿಂದಲೂ ಕರೆಯಲ್ಪಟ್ಟವನಾಗಿ ಶತ್ರುಬಲವನ್ನು ಜಯಿಸು.

## Engalish Translation

When (in the combat), Indra, they invoke you in many ways with praise for protection, then you (so invoked) by our leaders, ovrercome all (our enemies).

॥ ಸಂಹಿತಾಪಾಠಃ ॥

ಅರಂ ಕ್ಷಯಾಯ ನೋ ಮಹೇ ವಿಶ್ವಾ ರೂಪಾಣ್ಯಾವಿಶನ್ ।
ಇಂದ್ರಂ ಜೈತ್ರಾಯ ಹರ್ಷಯಾ ಶಚೀಪತಿಂ ॥ ೧೩ ॥

॥ ಪದಪಾಠಃ ॥

ಅರಂ । ಕ್ಷಯಾಯ । ನಃ । ಮಹೇ । ವಿಶ್ವಾ । ರೂಪಾಣಿ । ಆಽವಿಶನ್ ।
ಇಂದ್ರಂ । ಜೈತ್ರಾಯ । ಹರ್ಷಯ । ಶಚೀಃಪತಿಂ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಃ ಮಹೇ ಮಹತೇ ನೋಽಸ್ಮಾಕಂ ಕ್ಷಯಾಯ । ಗೃಹನಾಮೈತತ್ । ಗೃಹಾಯ ॥ ತಾದರ್ಥ್ಯೇ ಚತುರ್ಥೀ ॥ ಗೃಹಾರ್ಥಮರಮಲಂ ಪರ್ಯಾಪ್ತಂ ವಿಶ್ವಾ ವಿಶ್ವಾನಿ ವ್ಯಾಪ್ತಾನಿ ರೂಪಾಣೀಂದ್ರಗತಾನಿ ಗುಣಜಾತಾನ್ಯಾವಿಶನ್ ಸ್ತುತ್ಯಾ ವ್ಯಾಪ್ನುವನ್ ಶಚೀಪತಿಂ । ಶಚೀತಿ ಕರ್ಮನಾಮ ।

ಕರ್ಮಣಾಂ ಪಾಲಕಂ । ಯದ್ವಾ । ಶಚ್ಯಾ ಇಂದ್ರಾಣ್ಯಾ ಭರ್ತಾರಂ । ತಮೇವೇಂದ್ರಂ ಜೈತ್ರಾಯ ಜೇತವ್ಯಧನಾರ್ಥಂ ಹರ್ಷಯ । ತೋಷಯ ಸ್ತುತ್ಯಾ ಪರಿಚರಣೇನ ವೇತಿ ಶೇಷಃ ॥

॥ ಪ್ರತಿಪದಾರ್ಥ ॥

(ಎಲೈ ಸ್ತುತಿಕರ್ತನೇ) ವಿಶ್ವಾ—ಸಮಸ್ತವಾದ । ರೂಪಾಣಿ—ಇಂದ್ರನ ಸ್ವರೂಪಗಳೆಲ್ಲವೂ । ನಃ—ನಮ್ಮ । ಮಹೇ—ಮಹತ್ತಾದ । ಕ್ಷಯಾಯ—ಗೃಹಕ್ಕೆ । ಅರಂ—ಪೂರ್ಣವಾಗಿ । ಆವಿಶನ್ - ಪ್ರವೇಶಿಸಿವೆ । ಶಚೀಃಪತಿಂ—ಕರ್ಮಗಳಿಗೆ ಪಾಲಕನಾದ । ಇಂದ್ರಂ—ಇಂದ್ರನನ್ನು । ಜೈತ್ರಾಯ—ಜಯಾರ್ಹವಾದ ಧನಲಾಭಕ್ಕಾಗಿ । ಹರ್ಷಯ—ಸಂತೋಷಗೊಳಿಸು.

॥ ಭಾವಾರ್ಥ ॥

ಎಲೈ ಸ್ತುತಿಕರ್ತನೇ, ಸಮಸ್ತವಾದ ಇಂದ್ರನ ಸ್ವರೂಪಗಳೆಲ್ಲವೂ ನಮ್ಮ ಮಹತ್ತಾದ ಗೃಹಕ್ಕೆ ಪೂರ್ಣವಾಗಿ ಪ್ರವೇಶಿಸಿವೆ. ಕರ್ಮಗಳಿಗೆ ಪಾಲಕನಾದ ಇಂದ್ರನನ್ನು ಜಯಾರ್ಹವಾದ ಧನಲಾಭಕ್ಕಾಗಿ ಸಂತೋಷಗೊಳಿಸು,

English Translation

All the forms (of Indra) have sufficiently entered into our own spacious abode: gratify Indra the lord of Sachi, (that he may give us) the spoil of victory.



## ಹದಿನಾರನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಪ್ರ ಸಮ್ರಾಜಮಿತಿ ದ್ವಾದಶರ್ಚಂ ಚತುರ್ಥಂ ಸೂಕ್ತಮಿರಿಂಬಿಠಿನಾಮ್ನಃ ಕಾಣ್ವಸ್ಯಾರ್ಷಂ ಗಾಯತ್ರಮೈಂದ್ರಂ । ಅನುಕ್ರಮ್ಯತೇ ಹಿ । ಪ್ರ ಸಮ್ರಾಜಂ ದ್ವಾದಶೇರಿಂಬಿಠಿರಿತಿ ॥ ಅತಿರಾತ್ರೇ ದ್ವಿತೀಯೇ ಪರ್ಯಾಯೇಽಚ್ಛಾವಾಕಶಸ್ತ್ರ ಏತತ್ಸೂಕ್ತಂ । ಸೂತ್ರಿತಂ ಚ । ಪ್ರ ಸಮ್ರಾಜಮುಪ ಕ್ರಮಸ್ವಾ ಭರ । ಅ. ೬-೪. । ಇತಿ ॥ ಮಹಾವ್ರತೇಽಪಿ ನಿಷ್ಕೇವಲ್ಯ ಏತದಾದಿಕೇ ದ್ವೇ ಸೂಕ್ತೇ ಉಪರಿತನಸ್ಯಾಂತ್ಯಂ ದ್ವ್ಯೃಚಂ ವರ್ಜಯಿತ್ವಾ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ಪ್ರ ಸಮ್ರಾಜಂ ಚರ್ಷಣೀನಾಮಿತಿ ಸೂಕ್ತೇ ಉತ್ತರಸ್ಯೋತ್ತಮೋ ಉದ್ಧರತಿ । ಐ. ಆ. ೫-೨-೫. । ಇತಿ ॥

ಅನುವಾದವು— ಪ್ರ ಸಮ್ರಾಜಂ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರದ ಇರಿಂಬಿಠಿ ಎಂಬುವನು ಋಷಿಯು ; ಇಂದ್ರನು ದೇವತೆಯು ; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ— ಪ್ರ ಸಮ್ರಾಜಂ ದ್ವಾದಶೇರಿಂಬಿಠಿಃ ಎಂದು ಹೇಳಿರುವುದು. ಅತಿರಾತ್ರವೆಂಬ ಯಾಗದಲ್ಲಿ ದ್ವಿತೀಯಪರ್ಯಾಯದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—

ಪ್ರ ಸಮ್ರಾಜಮುಪ ಕ್ರಮಸ್ವಾ ಭರ ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು. ಮಹಾವ್ರತೇಷ್ಟಿಯಲ್ಲಿಯೂ ಸಹ ನಿಷ್ಕೇವಲ್ಯಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತದಿಂದ ಮುಂದಿನ ಎರಡು ಸೂಕ್ತಗಳ—ಮುಂದಿನ ಸೂಕ್ತದ ಕೊನೆಯ ಎರಡು ಋಕ್ಕುಗಳನ್ನು ಬಿಟ್ಟು—ವಿನಿಯೋಗವಿರುವುದೆಂದು ಐತರೇಯಾರಣ್ಯಕದ—ಪ್ರ ಸಮ್ರಾಜಂ ಚರ್ಷಣೀನಾಮಿತಿ ಸೂಕ್ತೇ ಉತ್ತರಸ್ಯೋತ್ತಮೇ ಉದ್ಧರತಿ ಎಂಬ ವಾಕ್ಯದಿಂದ(ಐ. ಆ. ೫-೨-೫) ನಿರ್ದಿಷ್ಟವಾಗಿರುವುದು.

## ಸೂಕ್ತ—೧೬

ಮಂಡಲ—೮ । ಅನುವಾಕ—೩ । ಸೂಕ್ತ—೧೬ ।
ಅಷ್ಟಕ—೬ । ಅಧ್ಯಾಯ— ೧। ವರ್ಗ—೨೦, ೨೧ ।
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ।
ಋಷಿಃ—ಇರಿಂಬಿಠಿಃ ಕಾಣ್ವಃ ।
ದೇವತಾ—ಇಂದ್ರಃ ।
ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಪ್ರ ಸಮ್ರಾಜಂ ಚರ್ಷಣೀನಾಮಿಂದ್ರಂ ಸ್ತೋತಾ ನವ್ಯಂ ಗೀರ್ಭಿಃ ।
ನರಂ ನೃಷಾಹಂ ಮಂಹಿಷ್ಠಂ ॥ ೧ ॥

॥ ಪದಪಾಠಃ ॥

ಪ್ರ । ಸಮ್ಽರಾಜಂ । ಚರ್ಷಣೀನಾಂ । ಇಂದ್ರಂ । ಸ್ತೋತ । ನವ್ಯಂ । ಗೀಃಽಭಿಃ ।
ನರಂ । ನೃಽಸಹಂ । ಮಂಹಿಷ್ಠಂ ॥ ೧ ॥

॥ ಸಾಯಣಭಾಷ್ಯಂ ॥

ಚರ್ಷಣೀನಾಂ ಮನುಷ್ಯಾಣಾಂ ಮಧ್ಯೇ ಸಮ್ರಾಜಂ ಸಮ್ಯಗ್ರಾಜಮಾನಂ ಯದ್ವಾ ಮನುಷ್ಯಾಣಾಮಧೀಶ್ವರಮಿಂದ್ರಂ ಹೇ ಸ್ತೋತಾರಃ ಪ್ರ ಸ್ತೋತ । ಪ್ರಕರ್ಷೇಣ ಸ್ತುತ । ಕೀದೃಶಂ । ಗೀರ್ಭಿಃ ಸ್ತುತಿಭಿರ್ನವ್ಯಂ ಸ್ತುತ್ಯಂ ನರಂ ನೇತಾರಂ ನೃಷಾಹಂ ನೃಣಾಂ ಶತ್ರುಮನುಷ್ಯಾಣಾಮಭಿಭವಿತಾರಂ ಮಂಹಿಷ್ಠಂ ದಾತೃತಮಂ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಗಳೇ) ಗೀರ್ಭಿಃ—ಸ್ತುತಿಗಳಿಂದ । ನವ್ಯಂ—ಪ್ರಶಂಸಿತನೂ । ನರಂ—ನೇತೃವೂ । ನೃಷಾಹಂ—ಶತ್ರುಗಳನ್ನು ಸೋಲಿಸುವವನೂ । ಮಂಹಿಷ್ಠಂ—ಪೂಜ್ಯನೂ । ಚರ್ಷಣೀನಾಂ—ಪ್ರಜೆಗಳಿಗೆಲ್ಲ । ಸಮ್ರಾಜಂ—ಸಾರ್ವಭೌಮನೂ ಆದ । ಇಂದ್ರಂ—ಇಂದ್ರನನ್ನು । ಪ್ರ ಸ್ತೋತ—ಅತಿಶಯವಾಗಿ ಸ್ತುತಿಸಿರಿ—

॥ ಭಾವಾರ್ಥ ॥

ಎಲೈ ಸ್ತೋತೃಗಳೇ, ಸ್ತುತಿಗಳಿಂದ ಪ್ರಶಂಸಿತನೂ, ನೇತೃವೂ, ಶತ್ರುಗಳನ್ನು ಸೋಲಿಸುವವನೂ, ಪೂಜ್ಯನೂ ಪ್ರಜೆಗಳಿಗೆಲ್ಲಾ ಸಾರ್ವಭೌಮನೂ ಆದ ಇಂದ್ರನನ್ನು ಅತಿಶಯವಾಗಿ ಸ್ತುತಿಸಿರಿ.

English Translation

Glorify with hymns the adorable Indra, the supreme king of men, the leader (of rites), the overcomer of enemies, the most munificent.

। ಸಂಹಿತಾಪಾಠಃ ।

ಯಸ್ಮಿನ್ನುಕ್ಥಾನಿ ರಣ್ಯಂತಿ ವಿಶ್ವಾನಿ ಚ ಶ್ರವಸ್ಯಾ ।
ಅಪಾಮವೋ ನ ಸಮುದ್ರೇ ॥ ೨ ॥

। ಪದಪಾಠಃ ।

ಯಸ್ಮಿನ್ । ಉಕ್ಥಾನಿ । ರಣ್ಯಂತಿ । ವಿಶ್ವಾನಿ । ಚ । ಶ್ರವಸ್ಯಾ ।
ಅಪಾಂ । ಅವಃ । ನ । ಸಮುದ್ರೇ ॥ ೨ ॥

॥ ಸಾಯಣಭಾಷ್ಯಂ ॥

ಯಸ್ಮಿನ್ನಿಂದ್ರ ಉಕ್ಥಾನಿ ಶಸ್ತ್ರಾಣಿ ರಣ್ಯಂತಿ ರಮಂತೇ ವಿಶ್ವಾನಿ ಸರ್ವಾಣಿ ಶ್ರವಸ್ಯಾ ಶ್ರವಸ್ಯಾನಿ ಶ್ರವಣೀಯಾನಿ ಹವಿರ್ಲಕ್ಷಣಾನ್ಯನ್ನಾನಿ ಚ ರಮಂತೇ । ತತ್ರ ದೃಷ್ಟಾಂತಃ । ಸಮುದ್ರ ಉದಧಾವಪಾಮುದಕಾನಾಮವೋ ನ । ಅವತಿ ಗಚ್ಛತೀತ್ಯವಸ್ತರಂಗಜಾಲಂ । ತದ್ಯಥಾ ಸಮುದ್ರೇಽಂತರ್ಭವತಿ ತಥಾ ರಣ್ಯಂತೀತ್ಯರ್ಥಃ ॥

। ಪ್ರತಿಪದಾರ್ಥ ॥

ಸಮುದ್ರೇ—ಸಮುದ್ರದಲ್ಲಿ । ಅಪಾಂ—ಉದಕಗಳ । ಅವೋ ನ—ತರಂಗಜಾಲಗಳು ಐಕ್ಯವಾಗಿರುವಂತೆ ಯಸ್ಮಿನ್—ಯಾವ ಅದೇ ಇಂದ್ರನಲ್ಲಿ । ಉಕ್ಥಾನಿ—ಶಸ್ತ್ರಮಂತ್ರಗಳು । ರಣ್ಯಂತಿ—ರಮಿಸುವುವೋ । ಚ—ಮತ್ತು । ವಿಶ್ವಾನಿ—ಸಮಸ್ತವಾದ । ಶ್ರವಸ್ಯಾ—ಅನ್ನಗಳೂ ಸಹ ರಮಿಸುವುವು.

॥ ಭಾವಾರ್ಥ ॥

ಸಮುದ್ರದಲ್ಲಿ ಉದಕಗಳ ತರಂಗಜಾಲಗಳು ಐಕ್ಯವಾಗಿರುವಂತೆ ಅದೇ ಇಂದ್ರನಲ್ಲಿ ಶಸ್ತ್ರಗಳೂ ಸೇರಿಕೊಂಡು ರಮಿಸುತ್ತವೆ. ಸಕಲವಾದ ಹವಿಸ್ಸುಗಳೂ ಐಕ್ಯವಾಗಿ ಅವನಲ್ಲೇ ರಮಿಸುತ್ತವೆ.

## English Translation

In whom all praises, all kinds of sustenance concentrate, like the aggregation of the waters in the ocean.

। ಸಂಹಿತಾಪಾಠಃ ।

ತಂ ಸುಷ್ಟುತ್ಯಾ ವಿವಾಸೇ ಜ್ಯೇಷ್ಠರಾಜಂ ಭರೇ ಕೃತ್ನುಂ ।
ಮಹೋ ವಾಜಿನಂ ಸನಿಭ್ಯಃ ॥ ೩ ॥

॥ ಪದಪಾಠಃ ॥

ತಂ । ಸುऽಸ್ತುತ್ಯಾ । ಆ । ವಿವಾಸೇ । ಜ್ಯೇಷ್ಠऽರಾಜಂ । ಭರೇ । ಕೃತ್ನುಂ ।
ಮಹಃ । ವಾಜಿನಂ । ಸನಿऽಭ್ಯಃ ॥ ೩ ॥

। ಸಾಯಣಭಾಷ್ಯಂ ।

ತಮಿಂದ್ರಂ ಸುಷ್ಟುತ್ಯಾ ಶೋಭನಯಾ ಸ್ತುತ್ಯಾ ವಿವಾಸೇ । ಪರಿಚರಾಮಿ । ಕೀದೃಶಂ । ಜ್ಯೇಷ್ಠರಾಜಂ ಜ್ಯೇಷ್ಠೇಷು ಪ್ರಶಸ್ಯತಮೇಷು ದೇವೇಷು ಮಧ್ಯೇ ರಾಜಮಾನಂ॥ ರಾಜತೇಃ ಸತ್ಸೂದ್ವಿಷೇತಿ ಕ್ವಿಪ್ ॥ ಭರೇ ಸಂಗ್ರಾಮೇ ಮಹೋ ಮಹತೋ ವೃತ್ರವಧಾದೇಃ ಕೃತ್ನುಂ ಕರ್ತಾರಂ ವಾಜಿನಮನ್ನವಂತಂ ಬಲವಂತಂ ವಾ । ಕಿಮರ್ಥಂ । ಸನಿಭ್ಯೋ ಧನೇಭ್ಯಃ । ಧನಲಾಭಾಯೇತ್ಯರ್ಥಃ ॥

। ಪ್ರತಿಪದಾರ್ಥ ।

ಜ್ಯೇಷ್ಠರಾಜಂ—ಪ್ರಶಸ್ತರಾದ ದೇವತೆಗಳ ನಡುವೆ ಪ್ರಕಾಶಿಸುವವನೂ । ಭರೇ—ಸಂಗ್ರಾಮದಲ್ಲಿ । ಮಹಃ—ಮಹತ್ತಾದ ವೃತ್ರವಧಾದಿ ಕಾರ್ಯಗಳನ್ನು । ಕೃತ್ನುಂ—ನೆರವೇರಿಸುವವನೂ । ವಾಜಿನಂ—ಅನ್ನವಂತನೂ ಆದ । ತಂ—ಅದೇ ಇಂದ್ರನನ್ನು । ಸನಿಭ್ಯಃ—ಧನಲಾಭಕ್ಕಾಗಿ । ಸುಷ್ಟುತ್ಯಾ—ಉತ್ತಮವಾದ ಸ್ತುತಿಗಳಿಂದ । ಆ ವಿವಾಸೇ—ಉಪಚರಿಸಿ ಪೂಜಿಸುತ್ತೇನೆ.

। ಭಾವಾರ್ಥ ।

ಪ್ರಶಸ್ತರಾದ ದೇವತೆಗಳ ನಡುವೆ ಪ್ರಕಾಶಿಸುವವನೂ ಸಂಗ್ರಾಮದಲ್ಲಿ ಮಹತ್ತಾದ ವೃತ್ರವಧಾದಿಕಾರ್ಯಗಳನ್ನು ನೆರವೇರಿಸುವವನೂ, ಅನ್ನವಂತನೂ ಆದ ಅದೇ ಇಂದ್ರನನ್ನು ಧನಲಾಭಕ್ಕಾಗಿ ಉತ್ತಮವಾದ ಸ್ತುತಿಗಳಿಂದ ಉಪಚರಿಸಿ ಪೂಜಿಸುತ್ತೇನೆ.

## English Translatian

I worship Indra with pious praise, glorious amongst the best [of

beings), the achiever of great deeds in war, mighty for the acquirement (of wealth).

॥ ಸಂಹಿತಾಪಾಠಃ ॥

ಯಸ್ಯಾನೂನಾ ಗಭೀರಾ ಮದಾ ಉರವಸ್ತರುತ್ರಾಃ ।

ಹರ್ಷುಮಂತಃ ಶೂರಸಾತೌ ॥ ೪ ॥

॥ ಪದಪಾಠಃ ॥

ಯಸ್ಯ । ಅನೂನಾಃ । ಗಭೀರಾಃ । ಮದಾಃ । ಉರವಃ । ತರುತ್ರಾಃ ।

ಹರ್ಷುऽಮಂತಃ । ಶೂರऽಸಾತೌ ॥ ೪ ॥

॥ ಸಾಯಣಭಾಷ್ಯಂ ॥

ಯಸ್ಯೇಂದ್ರಸ್ಯ ಮದಾಃ ಸೋಮಪಾನಜನಿತಾ ಅನೂನಾ ಅನ್ಯೂನಾ ಗಭೀರಾ ಗಾಂಭೀರ್ಯೋಪೇತಾ ಉರವೋ ವಿಸ್ತೀರ್ಣಾಸ್ತರುತ್ರಾಃ ಶತ್ರೂಣಾಂ ತಾರಕಾಃ ಶೂರಸಾತೌ ಶೂರಸಂಭಜನೀಯೇ ಸಂಗ್ರಾಮೇ ಹರ್ಷುಮಂತೋ ಹರ್ಷಯುಕ್ತಾಃ ಸಂಗ್ರಾಮೋತ್ಸುಕಾ ಭವಂತಿ । ತಮಿಂದ್ರಮಿತಿ ಪೂರ್ವಯೋತ್ತರಯಾ ವಾ ಸಂಬಂಧಃ ।

॥ ಪ್ರತಿಪದಾರ್ಥ ॥

ಯಸ್ಯ— ಯಾವ ಇಂದ್ರನ । ಮದಾಃ— ಸೋಮಪಾನಜನಿತವಾದ ಹರ್ಷಗಳು । ಅನೂನಾಃ— ನ್ಯೂನತೆ ಇಲ್ಲದೆಯೂ । ಗಭೀರಾಃ— ಗಾಂಭೀರ್ಯಯುಕ್ತವಾಗಿಯೂ । ಉರವಃ— ವಿಸ್ತೃತವಾಗಿಯೂ । ತರುತ್ರಾಃ— ಶತ್ರುಗಳಿಂದ ರಕ್ಷಿಸತಕ್ಕವಾಗಿಯೂ । ಶೂರಸಾತೌ— ಯುದ್ಧದಲ್ಲಿ । ಹರ್ಷುಮಂತಃ— ಉತ್ಸಾಹ ಯುಕ್ತವಾಗಿಯೂ ಇರುವುವೋ (ಅಂತಹ ಇಂದ್ರನನ್ನು ಉಪಚರಿಸುತ್ತೇವೆ).

॥ ಭಾವಾರ್ಥ ॥

ಯಾವ ಇಂದ್ರನ ಸೋಮಪಾನಜನಿತವಾದ ಹರ್ಷಗಳು ನ್ಯೂನತೆಯಿಲ್ಲದೆಯೂ, ಗಾಂಭೀರ್ಯಯುಕ್ತವಾಗಿಯೂ ವಿಸ್ತೃತವಾಗಿಯೂ, ಶತ್ರುಗಳಿಂದ ರಕ್ಷಿಸತಕ್ಕವಾಗಿಯೂ ಯುದ್ಧದಲ್ಲಿ ಉತ್ಸಾಹಪೂರಿತವಾಗಿಯೂ ಇರುವುವೋ ಅಂತಹ ಇಂದ್ರನನ್ನು ಉಪಚರಿಸುತ್ತೇವೆ.

## English Translation

Whose unbounded and profound exhilarations are many, protective, and animating in war.

॥ ಸಂಹಿತಾಪಾಠಃ ॥

ತಮಿದ್ಧನೇಷು ಹಿತೇಷ್ವಧಿವಾಕಾಯ ಹವಂತೇ ।

ಯೇಷಾಮಿಂದ್ರಸ್ತೇ ಜಯಂತಿ ॥ ೫ ॥

॥ ಪದಪಾಠಃ ॥

ತಂ । ಇತ್ । ಧನೇಷು । ಹಿತೇಷು । ಅಧಿऽವಾಕಾಯ । ಹವಂತೇ ।

ಯೇಷಾಂ । ಇಂದ್ರಃ । ತೇ । ಜಯಂತಿ ॥ ೫ ॥

॥ ಸಾಯಣಭಾಷ್ಯಂ ॥

ಧನೇಷು ಹಿತೇಷು ಶತ್ರುಷು ನಿಹಿತೇಷು ಪ್ರಾಪ್ತೇಷು ಸತ್ಸು ತಮಿತ್ತಂ ಪೂರ್ವೋಕ್ತಗುಣಮೇವೇಂದ್ರಮಧಿವಾಕಾಯಾಧಿವಚನಾಯ ಪಕ್ಷಪಾತವಚನಾಯ ಹವಂತೇ। ಸ್ತೋತಾರ ಆಹ್ವಯಂತಿ। ತತ್ರ ಚ ಯೇಷಾಂ ಪಕ್ಷ ಇಂದ್ರೋ ವರ್ತತೇ ತ ಏವ ಜಯಂತಿ। ಜಯೇನ ತಾನಿ ಧನಾನಿ ಲಭಂತೇ ನಾನ್ಯೇ॥

॥ ಪ್ರತಿಪದಾರ್ಥ ॥

ಧನೇಷು—ಧನಸಂಪತ್ತುಗಳು । ಹಿತೇಷು—ಶತ್ರುಗಳಲ್ಲಿ ಸ್ಥಾಪಿತವಾಗಿರುವಾಗ । ಅಧಿವಾಕಾಯ—ಇಂದ್ರನನ್ನು ಸ್ತುತಿಸಿ ಆ ಧನದಲ್ಲಿ ಭಾಗವನ್ನು ಹೊಂದುವುದಕ್ಕಾಗಿ । ತಮಿತ್—ಆ ಇಂದ್ರನನ್ನೇ । ಹವಂತೇ—ಸ್ತುತಿಕರ್ತರು ಪ್ರಾರ್ಥಿಸಿ ಕರೆಯುತ್ತಾರೆ । ಇಂದ್ರಃ—ಇಂದ್ರನು । ಯೇಷಾಂ—ಯಾರಪಕ್ಷದಲ್ಲಿರುವನೋ । ತೇ—ಅವರೇ । ಜಯಂತಿ—ಶತ್ರುಗಳನ್ನು ಜಯಿಸಿ ಧನವನ್ನು ಪಡೆಯುತ್ತಾರೆ

॥ ಭಾವಾರ್ಥ ॥

ಧನಸಂಪತ್ತುಗಳು ಶತ್ರುಗಳಲ್ಲಿ ಸ್ಥಾಪಿತವಾಗಿರುವಾಗ ಇಂದ್ರನನ್ನು ಸ್ತುತಿಸಿ ಆ ಧನದಲ್ಲಿ ಭಾಗವನ್ನು ಹೊಂದುವುದಕ್ಕಾಗಿ ಆ ಇಂದ್ರನನ್ನೇ ಸ್ತುತಿಕರ್ತರು ಪ್ರಾರ್ಥಿಸಿ ಕರೆಯುತ್ತಾರೆ. ಇಂದ್ರನು ಯಾರ ಪಕ್ಷದಲ್ಲಿರುವನೋ ಅವನೇ ಶತ್ರುಗಳನ್ನು ಜಯಿಸಿ ಧನವನ್ನು ಪಡೆಯುತ್ತಾರೆ.

## English Translation

(His worshippers) invoke him to take part (in spoiling) the treasures deposited (with the foe): they conquer, of whom Indra is (the partisan).

॥ ಸಂಹಿತಾಪಾಠಃ ॥

ತಮಿಚ್ಚ್ಯೌತ್ನೈರಾರ್ಯಂತಿ ತಂ ಕೃತೇಭಿಶ್ಚರ್ಷಣಯಃ ।

ಏಷ ಇಂದ್ರೋ᳚ ವರಿವಸ್ಕೃತ್ ॥ ೬ ॥

॥ ಪದಪಾಠಃ ॥

ತಂ । ಇತ್ । ಚ್ಯೌತ್ನೈಃ । ಆರ್ಯಂತಿ । ತಂ । ಕೃತೇಭಿಃ । ಚರ್ಷಣಯಃ ।

ಏಷಃ । ಇಂದ್ರಃ । ವರಿವಃಽಕೃತ್ ॥ ೬ ॥

॥ ಸಾಯಣಭಾಷ್ಯಂ ॥

ತಮಿತ್ತಮೇವೇಂದ್ರಂ ಚ್ಯೌತ್ನೈರ್ಬಲಕರೈಃ ಸ್ತೋತ್ರೈರಾರ್ಯಂತಿ । ಆರ್ಯಮಭಿಜ್ಞಮೀಶ್ವರಂ ಕುರ್ವಂತಿ । ಚರ್ಷಣಯೋ ಮನುಷ್ಯಾಃ ಕೃತೈಃ ಕರ್ಮಭಿಶ್ಚಾರ್ಯಂತಿ । ಏಷ ಏವಂಗುಣಕ ಇಂದ್ರೋ ವರಿವಸ್ಕೃದ್ಧನಸ್ಯ ಕರ್ತಾ ಭವತಿ ಸ್ತೋತೄಣಾಂ ॥

॥ ಪ್ರತಿಪದಾರ್ಥ ॥

ಚರ್ಷಣಯಃ—ಮಾನವಪ್ರಜೆಗಳು । ತಮಿತ್—ಆ ಇಂದ್ರನನ್ನೇ । ಚ್ಯೌತ್ನೈಃ—ಬಲಕರವಾದ ಸ್ತುತಿಗಳುಳ್ಳ । ಕೃತೇಭಿಃ—ಕರ್ಮಗಳಿಂದ । ಆರ್ಯಂತಿ—ಪೂಜಿಸಿ ಪ್ರಭುವನ್ನಾಗಿ ಮಾಡುತ್ತಾರೆ । ಏಷಃ—ಈ ಮಹತ್ವವುಳ್ಳ । ಇಂದ್ರಃ—ಇಂದ್ರನು । ವರಿವಸ್ಕೃತ್—ಧನಕ್ಕೆ ನಿಷ್ಪಾದಕನಾಗಿರುತ್ತಾನೆ.

॥ ಭಾವಾರ್ಥ ॥

ಮಾನವಪ್ರಜೆಗಳು ಆ ಇಂದ್ರನನ್ನೇ ಬಲಕರವಾದ ಸ್ತುತಿಗಳುಳ್ಳ ಕರ್ಮಗಳಿಂದ ಪೂಜಿಸಿ ಪ್ರಭುವನ್ನಾಗಿ ಮಾಡುತ್ತಾರೆ. ಈ ಮಹತ್ವವುಳ್ಳ ಇಂದ್ರನು ಧನಕ್ಕೆ ನಿಷ್ಪಾದಕನಾಗಿರುತ್ತಾನೆ.

## English Translation

They honour him with animating (hymns); men (honour) him with sacred rites, for Indra is the giver of wealth.

॥ ಸಂಹಿತಾಪಾಠ ॥

ಇಂದ್ರೋ᳚ ಬ್ರಹ್ಮೇಂದ್ರ ಋಷಿರಿಂದ್ರಃ ಪುರೂ ಪುರುಹೂತಃ ।

ಮಹಾನ್ಮಹೀಭಿಃ ಶಚೀಭಿಃ ॥ ೭ ॥

॥ ಪದಪಾಠಃ ॥

ಇಂದ್ರಃ । ಬ್ರಹ್ಮಾ । ಇಂದ್ರಃ । ಋಷಿಃ । ಇಂದ್ರಃ । ಪುರು । ಪುರುಽಹೂತಃ ।

ಮಹಾನ್ । ಮಹಿಃಭಿಃ । ಶಚೀಭಿಃ ॥ ೭ ॥

। ಸಾಯಣಭಾಷ್ಯಂ ।

ಅಯಮಿಂದ್ರೋ ಬ್ರಹ್ಮಾ ಪರಿವೃಢಃ ಸರ್ವೇಭ್ಯೋಽಧಿಕಃ । ಸ ಏವೇಂದ್ರ ಋಷಿರ್ದ್ರಷ್ಟಾ ಸರ್ವಸ್ಯಾರ್ಯಜಾತಸ್ಯ । ಸ ಇಂದ್ರಃ ಪುರು ಬಹುಲಂ ಪುರುಹೂತೋ ಬಹುಭಿರಾಹೂತಶ್ಚ ಮಹೀಭಿರ್ಮಹತೀಭಿಃ ಶಚೀಭಿಃ ಕ್ರಿಯಾಭಿರ್ವೃತ್ರವಧಾದಿರೂಪಾಭಿರ್ಮಹಾನ್ಪ್ರಭೂತೋ ಭವತಿ ॥

। ಪ್ರತಿಪದಾರ್ಥ ।

ಇಂದ್ರಃ—ಈ ಇಂದ್ರನೇ । ಬ್ರಹ್ಮಾ—ಅತ್ಯಂತ ಬೃಹದ್ರೂಪವುಳ್ಳ ಮುಖ್ಯದೇವನಾಗಿದ್ದಾನೆ । ಇಂದ್ರಃ—ಈ ಇಂದ್ರನೇ । ಋಷಿಃ—ಸರ್ವದ್ರಷ್ಟೃವಾಗಿದ್ದಾನೆ । ಇಂದ್ರಃ—ಇಂದ್ರನೇ । ಪುರು—ಅತ್ಯಧಿಕವಾಗಿ । ಪುರುಹೂತಃ—ಅನೇಕರಿಂದ ಕರೆಯಲ್ಪಡುವವನಾಗಿಯೂ । ಮಹೀಭಿಃ—ಮಹತ್ತಾದ । ಶಚೀಭಿಃ—ವೃತ್ರವಧಾದಿ ಕರ್ಮಯುಕ್ತನಾಗಿಯೂ । ಮಹಾನ್—ಮಹಾತ್ಮ್ಯಯುಕ್ತನಾಗಿಯೂ ಇದ್ದಾನೆ.

॥ ಭಾವಾರ್ಥ ॥

ಈ ಇಂದ್ರನೇ, ಬ್ರಹ್ಮಾಖ್ಯನೂ, ಬೃಹದ್ರೂಪವುಳ್ಳವನೂ ಆದ ಮುಖ್ಯದೇವನಾಗಿದ್ದಾನೆ. ಈ ಇಂದ್ರನೇ ಅತೀಂದ್ರಿಯ ಜ್ಞಾನವುಳ್ಳ ದ್ರಷ್ಟೃವಾಗಿದ್ದಾನೆ. ಇವನೇ ಅಧಿಕವಾಗಿ ಅನೇಕರ ಆಹ್ವಾನಕ್ಕೆ ಪಾತ್ರನೂ,, ಮಹತ್ತಾದ ವೃತ್ರವಧಾದಿಕರ್ಮಯುಕ್ತನಾಗಿಯೂ ಮಾಹಾತ್ಮ್ಯವುಳ್ಳವನಾಗಿಯೂ ಇದ್ದಾನೆ.

## English Translation

Indra is Brahma, Indra is the Rishi : Indra is the much-invoked of of many, mighty with mighty deeds.

। ಸಂಹಿತಾಪಾಠಃ ।

ಸಃ ಸ್ತೋತವ್ಯಃ ಸ ಹವ್ಯಃ ಸತ್ಯಃ ಸತ್ವಾ ತುವಿಕೂರ್ಮಿಃ ।

ಏಕಶ್ಚಿತ್ಸನ್ನಭಿಭೂತಿಃ ॥ ೮ ॥

। ಪದಪಾಠಃ ।

ಸಃ । ಸ್ತೋತವ್ಯಃ । ಸಃ । ಹವ್ಯಃ । ಸತ್ಯಃ । ಸತ್ವಾ । ತುವಿಽಕೂರ್ಮಿಃ ।

ಏಕಃ । ಚಿತ್ । ಸನ್ । ಅಭಿಽಭೂತಿಃ ॥ ೮ ॥

॥ ಸಾಯಣಭಾಷ್ಯಂ ॥

ಸ ಪೂರ್ವೋಕ್ತ ಇಂದ್ರಃ ಸ್ತೋಮ್ಯಃ ಸ್ತೋಮಾರ್ಹಃ ಸ್ತುತ್ಯರ್ಹಃ । ಸ ಏವ ಹವ್ಯೋ ಹ್ವಾತವ್ಯಶ್ಚ ಸತ್ಯಃ ಸತ್ಸು ಸಾಧುರವಿತಥಸ್ವಭಾವಃ ಸತ್ವಾ ಶತ್ರೂಣಾಮವಸಾದಯಿತಾ ತುವಿಕೂರ್ಮಿರ್ಬಹುಕರ್ಮಾ । ಯತ ಏವಾತಃ ಕಾರಣಾದೇಕಶ್ಚಿತ್ಸನ್ನಸಹಾಯೋಽಪಿ ಭವನ್ನಭಿಭೂತಿಃ ಶತ್ರೂಣಾಮಭಿಭವಿತಾ ತಿರಸ್ಕರ್ತಾ ಭವತಿ ॥

॥ ಪ್ರತಿಪದಾರ್ಥ ॥

ಸಃ—ಆ ಇಂದ್ರನೇ । ಸ್ತೋಮ್ಯಃ—ಸ್ತುತ್ಯರ್ಹನಾಗಿದ್ದಾನೆ । ಸಃ—ಅವನೇ । ಹವ್ಯಃ—ಆಹ್ವಾನಕ್ಕೂ ಪಾತ್ರನಾಗಿದ್ದಾನೆ । ಸತ್ಯಃ—ಸತ್ಯಾತ್ಮಕನೂ । ಸತ್ವಾ—ಶತ್ರುನಾಶಕನೂ । ತುವಿಕೂರ್ಮಿಃ—ಅಧಿಕವಾದ ಕರ್ಮಕರ್ತನೂ ಆದ ಇಂದ್ರನು । ಏಕಶ್ಚಿತ್ಸನ್—ಅದ್ವಿತೀಯನಾಗಿ । ಅಭಿಭೂತಿಃ—ಶತ್ರುಗಳನ್ನು ಸೋಲಿಸುವವನಾಗಿದ್ದಾನೆ.

॥ ಭಾವಾರ್ಥ ॥

ಆ ಇಂದ್ರನೇ, ಎಲ್ಲರಿಗೂ ಸ್ತುತ್ಯರ್ಹನಾಗಿದ್ದಾನೆ. ಅವನೇ ಆಹ್ವಾನಕ್ಕೂ ಪಾತ್ರನಾಗಿದ್ದಾನೆ. ಸತ್ಯಾತ್ಮಕನೂ ಶತ್ರುನಾಶಕನೂ ಅಧಿಕವಾದ ಕರ್ಮಕರ್ತನೂ ಆದ ಇಂದ್ರನು ಅದ್ವಿತೀಯನಾಗಿ ಶತ್ರುಗಳನ್ನು ಸೋಲಿಸುವವನಾಗಿದ್ದಾನೆ.

## English Translation

He is to be praised, he is to be invoked, he is true, powerful, the doer of many deeds ; he, being single, is the overcomer (of his foes),

॥ ಸಂಹಿತಾಪಾಠಃ ॥

ತಮರ್ಕೇಭಿಸ್ತಂ ಸಾಮಭಿಸ್ತಂ ಗಾಯತ್ರೈಶ್ಚರ್ಷಣಯಃ ।
ಇಂದ್ರಂ ವರ್ಧಂತಿ ಕ್ಷಿತಯಃ ॥ ೯ ॥

॥ ಪದಪಾಠಃ ॥

ತಂ । ಅರ್ಕೇಭಿಃ । ತಂ । ಸಾಮಽಭಿಃ । ತಂ । ಗಾಯತ್ರೈಃ । ಚರ್ಷಣಯಃ ।
ಇಂದ್ರಂ । ವರ್ಧಂತಿ । ಕ್ಷಿತಯಃ ॥ ೯ ॥

॥ ಸಾಯಣಭಾಷ್ಯಂ ॥

ಚರ್ಷಣಯೋ ದ್ರಷ್ಟಾರೋ ಮಂತ್ರಾಣಾಂ ಕ್ಷಿತಯೋ ಮನುಷ್ಯಾಸ್ತಮಿಂದ್ರಮರ್ಕೇಭಿರರ್ಚನ-

ಸಾಧನೈರ್ಯಜುರೂಪೈರ್ಮಂತ್ರೈರ್ವರ್ಧಂತಿ । ವರ್ಧಯಂತಿ । ತಥೋದ್ಗಾತಾರಃ ಸಾಮಭಿರ್ಗಾನವಿಶಿಷ್ಟೈರ್ಮಂತ್ರೈಸ್ತಂ ವರ್ಧಯಂತಿ । ತಥಾ ಗಾಯತ್ರೈರ್ಗಾಯತ್ರ್ಯಾದಿಛಂದೋಯುಕ್ತೈಃ ಶಸ್ತ್ರರೂಪೈರಪ್ರಗೀತೈರ್ಮಂತ್ರೈಸ್ತಮೇವೇಂದ್ರಂ ಹೋತಾರೋ ವರ್ಧಯಂತಿ ॥

॥ ಪ್ರತಿಪದಾರ್ಥ ॥

ಚರ್ಷಣಯಃ—ಮಂತ್ರದ್ರಷ್ಟಾರಾದ । ಕ್ಷಿತಯಃ—ಮಾನವರು । ತಂ—ಆ ಇಂದ್ರನನ್ನು । ಅರ್ಕೇಭಿಃ-ಪೂಜ್ಯವಾದ ಮಂತ್ರಗಳಿಂದ। ವರ್ಧಂತಿ—ಪುಷ್ಟನಾಗುವಂತೆ ಮಾಡುತ್ತಾರೆ। ಸಾಮಭಿಃ-ಸಾಮಗಾನಗಳಿಂದ । ತಂ-ಅದೇ ಇಂದ್ರನನ್ನು ಉದ್ಗಾತೃಗಳು ಪುಷ್ಟೀಕರಿಸುತ್ತಾರೆ । ಗಾಯತ್ರೈಃ—ಗಾಯತ್ರಾದಿ ಸಾಮಗಳಿಂದ। ತಂ ಇಂದ್ರಂ—ಅದೇ ಇಂದ್ರನನ್ನು ಹೋತೃಗಳು ಪ್ರಶಂಸಿಸಿ ಪುಷ್ಟೀಕರಿಸುತ್ತಾರೆ.

॥ ಭಾವಾರ್ಥ ॥

ಮಂತ್ರದ್ರಷ್ಟಾರಾದ ಮಾನವರು ಆ ಇಂದ್ರನನ್ನು ಪೂಜ್ಯವಾದ ಮಂತ್ರಗಳಿಂದ ಪುಷ್ಟನಾಗುವಂತೆ ಮಾಡುತ್ತಾರೆ. ಸಾಮಗಾನಗಳಿಂದ ಅದೇ ಇಂದ್ರನನ್ನು ಉದ್ಗಾತೃಗಳು ಪುಷ್ಟೀಕರಿಸುತ್ತಾರೆ. ಗಾಯತ್ರಾದಿಸಾಮಗಳಿಂದ ಅದೇ ಇಂದ್ರನನ್ನು ಹೋತೃಗಳು ಪ್ರಶಂಸಿಸಿ ಪುಷ್ಟೀಕರಿಸುತ್ತಾರೆ.

English Translation

Men who are cognizant (of sacred texts) magnify Indra with pious precepts, with sacred songs, and with prayers.

॥ ಸಂಹಿತಾಪಾಠಃ ॥

ಪ್ರಣೇತಾರಂ ವಸ್ಯೋ ಅಚ್ಛಾ ಕರ್ತಾರಂ ಜ್ಯೋತಿಃ ಸಮತ್ಸು ।
ಸಾಸಹ್ವಾಂಸಂ ಯುಧಾಮಿತ್ರಾನ್ ॥ ೧೦ ॥

॥ ಪದಪಾಠಃ ॥

ಪ್ರsನೇತಾರಂ । ವಸ್ಯಃ । ಅಚ್ಛ । ಕರ್ತಾರಂ । ಜ್ಯೋತಿಃ । ಸಮತ್sಸು ।
ಸಾಸಹ್ವಾಂಸಂ । ಯುಧಾ । ಅಮಿತ್ರಾನ್ ॥ ೧೦ ॥

॥ ಸಾಯಣಭಾಷ್ಯಂ ॥

ವಸ್ಯೋ ವಸೀಯಃ ಪ್ರಶಸ್ತಂ ವಸು ಧನಮಚ್ಛಾಭಿಮುಖ್ಯೇನ ಪ್ರಣೇತಾರಂ ಪ್ರಾಪಯಿತಾರಂ ಸಮತ್ಸು ಸಂಗ್ರಾಮೇಷು ಶತ್ರುನಿರಸನೇನ ಜ್ಯೋತಿಃ ಪ್ರಕಾಶಂ ಜಯಲಕ್ಷಣಂ ಕರ್ತಾರಂ ಕರಣಶೀಲಂ ॥

ಕರೋತೀಸ್ತ್ಯಾಚ್ಛೀಲಿಕಸ್ತೃನ್ ॥ ಕುತ ಇತ್ಯತ ಆಹ । ಯುಧಾಯುಧೇನಾಮಿತ್ರಾಞ್ಛತ್ರೂನ್ ಸಸಹ್ವಾಂಸಮಭಿಭೂತವಂತಂ । ಏವಂ ಗುಣಕಮಿಂದ್ರಂ ವರ್ಧಯಂತೀತಿ ಶೇಷಃ ॥

। ಪ್ರತಿಪದಾರ್ಥ ।

ವಸ್ವಃ—ಪ್ರಶಸ್ಯವಾದ ಧನವನ್ನು । ಅಚ್ಛ—ಅಭಿಮುಖವಾಗಿ । ಪ್ರಣೇತಾರಂ—ತರುವವನೂ । ಸಮತ್ಸು—ಸಂಗ್ರಾಮಗಳಲ್ಲಿ । ಜ್ಯೋತಿಃ—ಜಯರೂಪವಾದ ಪ್ರಕಾಶವನ್ನು । ಕರ್ತಾರಂ—ಉಂಟುಮಾಡುವವನೂ । ಯುಧಾ—ಯುದ್ಧದಿಂದ । ಅಮಿತ್ರಾನ್—ಶತ್ರುಗಳನ್ನು । ಸಸಹ್ವಾಂಸಂ—ಸೋಲಿಸುವವನೂ ಆದ ಇಂದ್ರನನ್ನು (ಪುಷ್ಟೀಕರಿಸುತ್ತಾರೆ).

। ಭಾವಾರ್ಥ ॥

ಪ್ರಶಸ್ಯವಾದ ಧನವನ್ನು ಅಭಿಮುಖವಾಗಿ ತರುವವನೂ ಯುದ್ಧದಲ್ಲಿ ಜಯರೂಪವಾದ ಪ್ರಕಾಶವನ್ನುಂಟುಮಾಡುವವನೂ ಯುದ್ಧದಿಂದ ಶತ್ರುಗಳನ್ನು ಸೋಲಿಸುವವನೂ ಆದ ಇಂದ್ರನನ್ನು ಸ್ತುತಿಕರ್ತರು ಪುಷ್ಟೀಕರಿಸುತ್ತಾರೆ.

## English Translation

Him (they magnify) who brings before them the spoil, who gives lustre in combats, who overcomes enemies in battle.

॥ ಸಂಹಿತಾಪಾಠಃ ॥

ಸ ನಃ ಪಪ್ರಿಃ ಪಾರಯಾತಿ ಸ್ವಸ್ತಿ ನಾವಾ ಪುರುಹೂತಃ ।
ಇಂದ್ರೋ ವಿಶ್ವಾ ಅತಿ ದ್ವಿಷಃ ॥ ೧೧ ॥

। ಪದಪಾಠಃ ॥

ಸಃ । ನಃ । ಪಪ್ರಿಃ । ಪಾರಯಾತಿ । ಸ್ವಸ್ತಿ । ನಾವಾ । ಪುರುऽಹೂತಃ ।
ಇಂದ್ರಃ । ವಿಶ್ವಾಃ । ಅತಿ । ದ್ವಿಷಃ ॥ ೧೧ ॥

। ಸಾಯಣಭಾಷ್ಯಂ ।

ಪಪ್ರಿಃ ಪ್ರಾತಾ ಪೂರಯಿತಾ ಪುರುಹೂತೋ ಬಹುಭಿರಾಹೂತಃ ಸ ಇಂದ್ರೋ ವಿಶ್ವಾಃ ಸರ್ವಾ ದ್ವಿಷೋ ದ್ವೇಷ್ಟ್ರೀಃ ಪ್ರಜಾ ನೋಽಸ್ಮಾನ್ನಾವಾ ತರಣಸಾಧನೇನ ಸ್ವಸ್ತಿ ಕ್ಷೇಮೇಣಾತಿ ಪಾರಯಾತಿ । ಅತಿಪಾರಯತು ॥

। ಪ್ರತಿಪದಾರ್ಥ ।

ನಾವಾ—ನೌಕೆಯಿಂದ ಸಮುದ್ರವನ್ನು ದಾಟುವಂತೆ । ಪಪ್ರಿಃ—ಕಾಮಪೂರಕನೂ । ಪುರುಹೂತಃ—

ಅನೇಕರ ಆಹ್ವಾನಕ್ಕೆ ಪಾತ್ರನೂ ಆದ । **ಸಃ ಇಂದ್ರಃ**—ಅದೇ ಇಂದ್ರನು । **ವಿಶ್ವಾಃ**—ಸಮಸ್ತವಾದ । **ದ್ವಿಷಃ**—ಶತ್ರುಗಳಿಂದ । **ಸ್ವಸ್ತಿ**—ಕ್ಷೇಮವಾಗಿ । **ನಃ**—ನಮ್ಮನ್ನು । **ಅತಿ ಪಾರಯತಿ**—ದಾಟಿಸಲಿ.

॥ ಭಾವಾರ್ಥ ॥

ನೌಕೆಯಿಂದ ಸಮುದ್ರವನ್ನು ದಾಟುವಂತೆ, ಕಾಮಪೂರಕನೂ ಅನೇಕರ ಆಹ್ವಾನಕ್ಕೆ ಪಾತ್ರನೂ ಆದ ಅದೇ ಇಂದ್ರನು ಸಮಸ್ತವಾದ ಶತ್ರುಗಳಿಂದ ನಮ್ಮನ್ನು ಕ್ಷೇಮವಾಗಿ ದಾಟಿಸಲಿ.

## English Translation

May Indra, the fulfiller (of desires), the invoked of many, bear us beyond (the reach of) all our enemies, to welfare, as if by a ship (acrosss the sea).

॥ ಸಂಹಿತಾಪಾಠಃ ॥

**ಸ ತ್ವಂ ನ ಇಂದ್ರ ವಾಜೇಭಿರ್ದಶಸ್ಯಾ ಚ ಗಾತುಯಾ ಚ ।**
**ಅಚ್ಛಾ ಚ ನಃ ಸುಮ್ನಂ ನೇಷಿ ॥ ೧೨ ॥**

॥ ಪದಪಾಠಃ ॥

**ಸಃ । ತ್ವಂ । ನಃ । ಇಂದ್ರ । ವಾಜೇಭಿಃ । ದಶಸ್ಯ । ಚ । ಗಾತುಽಯ । ಚ ।**
**ಅಚ್ಛ । ಚ । ನಃ । ಸುಮ್ನಂ । ನೇಷಿ ॥ ೧೨ ॥**

॥ ಸಾಯಣಭಾಷ್ಯಂ ॥

ಹೇ ಇಂದ್ರ ಸ ತಾದೃಶಸ್ತ್ವಂ ನೋಽಸ್ಮಭ್ಯಂ ವಾಜೇಭಿರ್ಬಲೈರ್ದಶಸ್ಯ ಚ । ಧನಂ ಪ್ರಯಚ್ಛ ಚ ದಶಸ್ಯತಿರ್ದಾನಕರ್ಮಾ । ಗಾತುಯ ಚ । ಗಾತುಂ ಮಾರ್ಗಮಸ್ಮಭ್ಯಮಿಚ್ಛ ಚ ॥ ಗಾತುಶಬ್ದಾಚ್ಛಂದಸಿ ಪರೇಚ್ಛಾಯಾಮಿತಿ ಕ್ಯಚ್ । ನ ಛಂದಸ್ಯಪುತ್ರಸ್ಯೇತಿ ದೀರ್ಘನಿಷೇಧಃ ॥ ತಥಾ ನೋಽಸ್ಮಾನ್ ಸುಮ್ನಂ ಸುಖಂ ಚಾಚ್ಛ ನೇಷಿ । ಅಭಿಪ್ರಾಪಯ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಸಃ**—ಪ್ರಸಿದ್ಧನಾದ । **ತ್ವಂ**—ನೀನು । **ನಃ**—ನಮಗೆ । **ವಾಜೇಭಿಃ**—ಅನ್ನಗಳೊಡಗೂಡಿದ ಧನವನ್ನು । **ದಶಸ್ಯ ಚ**—ಕೊಡು । **ಗಾತುಯ ಚ**—ನಮ್ಮನ್ನು ಸನ್ಮಾರ್ಗಾವಲಂಬಿಗಳನ್ನಾಗಿಯೂ ಮಾಡು । **ನಃ**—ನಮಗೆ । **ಸುಮ್ನಂ ಚ**—ಸುಖವನ್ನೂ । **ಅಚ್ಛ**—ಪೂರ್ಣವಾಗಿ । **ನೇಷಿ**—ಒದಗಿಸು.

। ಭಾವಾರ್ಥ ।

ಎಲೈ ಇಂದ್ರನೇ, ಪ್ರಸಿದ್ಧನಾದ ನೀನು ನಮಗೆ ಅನ್ನಗಳೊಡಗೂಡಿದ ಧನವನ್ನು ಕೊಡು. ನಮ್ಮನ್ನು ಸನ್ಮಾರ್ಗಾವಲಂಬಿಗಳನ್ನಾಗಿ ಮಾಡು. ನಮಗೆ ಪೂರ್ಣವಾಗಿ ಸುಖವನ್ನು ಒದಗಿಸು.

English Translation

You, Indra, (endow) us with vigour, bestow upon us (wealth, enable us) to go (by the right way), lead us to felicity.

## ಹದಿನೇಳನೆಯ ಸೂಕ್ತವು.

। ಸಾಯಣಭಾಷ್ಯಂ ।

**ಆ ಯಾಹೀತಿ ಪಂಚದಶರ್ಚಂ ಪಂಚಮಂ ಸೂಕ್ತಮಿರಿಂಬಿಠೇರಾರ್ಷಮೈಂದ್ರಂ। ಚತುರ್ದಶೀ ಬೃಹತೀ ಪಂಚದಶೀ ಸತೋಬೃಹತ್ಯಾದಿತಸ್ತ್ರಯೋದಶ ಗಾಯತ್ರ್ಯಃ । ಅನುಕ್ರಮ್ಯತೇ ಹಿ । ಆ ಯಾಹಿ ಪಂಚೋನಾ ಪ್ರಗಾಥಾಂತಮಿತಿ ॥ ಅಂತ್ಯಂ ಪ್ರಗಾಥಂ ವರ್ಜಯಿತ್ವಾ ಶಿಷ್ಟಸ್ಯ ಮಹಾವ್ರತ ಉಕ್ತೋ ವಿನಿಯೋಗಃ ॥ ಜ್ಯೋತಿಷ್ಟೋಮೇ ಪ್ರಾತಃಸವನೇ ಬ್ರಹ್ಮಶಸ್ತ್ರ ಆದ್ಯಾಃ ಷಡೃಚಃ ಸ್ತೋತ್ರಿಯಾನುರೂಪಾರ್ಥಾಃ । ತಥಾನಂತರಾಃ ಸಪ್ತರ್ಚಶ್ಚ ಶಂಸನೀಯಾಃ । ಸೂತ್ರ್ಯತೇ ಹಿ । ಆ ಯಾಹಿ ಸುಷುಮಾ ಹಿ ತ ಇತಿ ಷಟ್ ಸ್ತೋತ್ರಿಯಾನುರೂಪಾವನಂತರಾಃ ಸಪ್ತ । ಆ. ೫-೧೦. । ಇತಿ ॥ ಚಾತುರ್ವಿಂಶಿಕೇಽಹನಿ ಪ್ರಾತಃಸವನ ಆದ್ಯಸ್ತೃಚೋಽಸ್ಮಿನ್ನೇವ ಶಸ್ತ್ರೇ ಷಳಹಸ್ತೋತ್ರಿಯಸಂಜ್ಞಕ ಆವಾಪಾರ್ಥಃ। ಸೂತ್ರಿತಂ ಚ । ಆ ಯಾಹಿ ಸುಷುಮಾ ಹಿ ತ ಇಂದ್ರಮಿದ್ಗಾಥಿನೋ ಬೃಹತ್ । ಆ. ೭-೨. । ಇತಿ ॥**

ಅನುವಾದವು— ಆ ಯಾಹಿ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಐದನೆಯ ಸೂಕ್ತವು; ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರೋದ್ಭವನಾದ ಇರಿಂಬಿಠಿ ಎಂಬುವನು ಋಷಿಯು· ಇಂದ್ರನು ದೇವತೆಯು ; ಈ ಸೂಕ್ತದ ಹದಿನಾಲ್ಕನೆಯ ಋಕ್ಕು ಬೃಹತೀಛಂದಸ್ಕವು ; ಹದಿನೈದನೆಯದು ಸತೋಬೃಹತೀಛಂದಸ್ಕವು ; ಉಳಿದ ಮೊದಲ ಹದಿಮೂರು ಋಕ್ಕುಗಳೂ ಗಾಯತ್ರೀಛಂದಸ್ಕವು. ಅನುಕ್ರಮಣಿಕೆಯಲ್ಲಿ— **ಆ ಯಾಹಿ ಪಂಚೋನಾ ಪ್ರಗಾಥಾಂತಂ** ಎಂದು ಹೇಳಿರುವುದು. ಈ ಸೂಕ್ತದ ಪ್ರಗಾಥ ಛಂದಸ್ಸಿನ ಕೊನೆಯ ಎರಡು ಋಕ್ಕುಗಳನ್ನು ಬಿಟ್ಟು ಉಳಿದ ಋಕ್ಕುಗಳಿಗೆ ಮಹಾವ್ರತೇಷ್ಟಿಯಲ್ಲಿ ವಿನಿಯೋಗವಿರುವುದು. ಜ್ಯೋತಿಷ್ಟೋಮಯಾಗದಲ್ಲಿ ಪ್ರಾತಸ್ಸವನಕಾಲದಲ್ಲಿ ಬ್ರಹ್ಮನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲಿನ ಆರು ಋಕ್ಕುಗಳನ್ನು ಸ್ತೋತ್ರಿಯ ಮತ್ತು ಅನುರೂಪ ತೃಚಗಳನ್ನಾಗಿ ಪಠಿಸಬೇಕೆಂದೂ ಅನಂತರ ಮುಂದಿನ ಏಳು ಋಕ್ಕುಗಳನ್ನೂ ಪಠಿಸಬೇಕೆಂದೂ ಆಶ್ವಲಾಯನಶ್ರೌತಸೂತ್ರದ– **ಆ ಯಾಹಿ ಸುಷುಮಾ ಹಿ ತ ಇತಿ ಷಟ್ ಸ್ತೋತ್ರಿಯಾನುರೂಪಾವನಂತರಾಃ ಸಪ್ತ** ಎಂಬ ಸೂತ್ರದಿಂದ (ಆ. ೫-೧೦) ವಿವೃತವಾಗಿರುವುದಲ್ಲ ದೆ, ಚಾತುರ್ವಿಂಶಕವೆಂಬ ದಿನದ ಪ್ರಾತಸ್ಸವನಕಾಲದಲ್ಲಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಈ

ಶಸ್ತ್ರಮಂತ್ರಗಳಲ್ಲಿಯೇ ಷಳಹಸ್ತೋತ್ರಿಯವೆಂಬ ತೃಚವನ್ನಾಗಿ ಸ್ತೋಮಾವಾಪಾರ್ಥವಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಆ ಯಾಹಿ ಸುಷುಮಾ ಹಿ ತ ಇಂದ್ರಮಿದ್ಗಾಥಿನೋ ಬೃಹತ್ ಎಂಬ ಸೂತ್ರದಿಂದ (ಆ. ೭-೨) ವಿವೃತವಾಗಿರುವುದು.

## ಸೂಕ್ತ—೧೮

ಮಂಡಲ—೮ ॥ ಅನುವಾಕ—೩ ॥ ಸೂಕ್ತ—೧೭ ॥
ಅಷ್ಟಕ—೬ ॥ ಅಧ್ಯಾಯ—೧ ॥ ವರ್ಗ—೨೨, ೨೩, ೨೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
ಋಷಿಃ—ಇರಿಂಬಿಠಿಃ ಕಾಣ್ವಃ ॥
ದೇವತಾ—ಇಂದ್ರಃ ॥
ಛಂದಃ—೧-೧೩. ಗಾಯತ್ರೀ । ೧೪. ಬೃಹತೀ । ೧೫. ಸತೋಬೃಹತೀ ॥

॥ ಸಂಹಿತಾಪಾಠಃ ॥

ಆ ಯಾಹಿ ಸುಷುಮಾ ಹಿ ತ ಇಂದ್ರ ಸೋಮಂ ಪಿಬಾ ಇಮಂ ।
ಏದಂ ಬರ್ಹಿಃ ಸದೋ ಮಮ ॥ ೧ ॥

॥ ಪದಪಾಠಃ ॥

ಆ । ಯಾಹಿ । ಸುಸುಮ । ಹಿ । ತೇ । ಇಂದ್ರ । ಸೋಮಂ । ಪಿಬ । ಇಮಂ ।
ಆ । ಇದಂ । ಬರ್ಹಿಃ । ಸದಃ । ಮಮ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಾ ಯಾಹಿ । ಆಗಚ್ಛ । ತೇ ತ್ವದರ್ಥಂ ಸುಷುಮ ಹಿ । ಅಭಿಷುತವಂತಃ ಖಲು ಸೋಮಂ ವಯಂ । ತಮಿಮಮಭಿಷುತಂ ಸೋಮಂ ಪಿಬ । ತದರ್ಥಂ ಮಮ ಮಂದೀಯಮಿದಂ ಬರ್ಹಿರ್ವೇದ್ಯಾಮಾಸ್ತೀರ್ಣಮಾ ಸದಃ । ಆಸೀದ । ಅಭಿನಿಷೀದ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಆ ಯಾಹಿ—ದಯಮಾಡು । ತೇ—ನಿನಗಾಗಿ । ಸುಷುಮ ಹಿ—ಸೋಮರಸವನ್ನು ಹಿಂಡಿದ್ದೇವೆ । ಇಮಂ—ಹಿಂಡಿ ಸಿದ್ಧವಾಗಿರುವ । ಸೋಮಂ - ಸೋಮವನ್ನು । ಪಿಬ— ಪಾನಮಾಡು । ಮಮ—ನನ್ನಿಂದ ಅರ್ಪಿತವಾದ । ಇದಂ ಬರ್ಹಿಃ—ಈ ದರ್ಭಾಸನದ ಮೇಲೆ । ಆ ಸದಃ—ಕುಳಿತುಕೊ. ॥

॥ ಭಾವಾರ್ಥ ॥

ಎಲೈ ಇಂದ್ರನೇ, ದಯಮಾಡು. ನಿನಗಾಗಿ ಸೋಮರಸವನ್ನು ಹಿಂಡಿದ್ದೇವೆ. ಹಿಂಡಿ ಸಿದ್ಧವಾಗಿರುವ ಸೋಮವನ್ನು ಪಾನಮಾಡು. ನನ್ನಿಂದ ಅರ್ಪಿತವಾದ ಈ ದರ್ಭಾಸನದ ಮೇಲೆ ಕುಳಿತುಕೊ.

## English Translation

Come: we express, Indra, for you, the Soma drink: drink it: sit down upon this my sacred grass.

॥ ಸಂಹಿತಾಪಾಠಃ ॥

ಆ ತ್ವಾ ಬ್ರಹ್ಮಯುಜಾ ಹರೀ ವಹತಾಮಿಂದ್ರ ಕೇಶಿನಾ ।
ಉಪ ಬ್ರಹ್ಮಾಣಿ ನಃ ಶೃಣು ॥ ೨ ॥

॥ ಪದಪಾಠಃ ॥

ಆ । ತ್ವಾ । ಬ್ರಹ್ಮऽಯುಜಾ । ಹರೀ ಇತಿ । ವಹತಾಂ । ಇಂದ್ರ । ಕೇಶಿನಾ ।
ಉಪ । ಬ್ರಹ್ಮಾಣಿ । ನಃ । ಶೃಣು ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಬ್ರಹ್ಮಯುಜಾ ಬ್ರಹ್ಮಣಾ ಮಂತ್ರೇಣ ಯುಜ್ಯಮಾನೌ ಕೇಶಿನಾ ಕೇಶವಂತೌ ಹರೀ ಹರಣಶೀಲಾವಶ್ವೌ ತ್ವಾ ತ್ವಾಮಾ ವಹತಾಂ । ಅಭಿಪ್ರಾಪಯತಾಂ । ತ್ವಂ ಚಾಸ್ಮದ್ಯಜ್ಞಮುಪೇತ ನೋऽಸ್ಮಾಕಂ ಬ್ರಹ್ಮಾಣಿ ಸ್ತೋತ್ರಾಣಿ ಶೃಣು । ಸ್ತೋತ್ರಾಣಿ ಗೃಹಾಣ । ಸಮ್ಯಕ್ ಚಿತ್ತೇ ಧಾರಯ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಬ್ರಹ್ಮಯುಜಾ—ಮಂತ್ರಗಳಿಂದ ರಥಕ್ಕೆ ಯೋಜಿಸಲ್ಪಡತಕ್ಕವೂ । ಕೇಶಿನಾ—ಆಕರ್ಷಕವಾದ ರೋಮವುಳ್ಳವೂ ಆದ । ಹರೀ—ಅಶ್ವಗಳು । ತ್ವಾ—ನಿನ್ನನ್ನು । ಆ ವಹತಾಂ—ಕರೆತರಲಿ । ನಃ—ನಮ್ಮ । ಬ್ರಹ್ಮಾಣಿ—ಸ್ತೋತ್ರಗಳನ್ನು । ಉಪ ಶೃಣು—ಕೇಳು.

॥ ಭಾವಾರ್ಥ ॥

ಎಲೈ ಇಂದ್ರನೇ, ಮಂತ್ರಗಳಿಂದ ರಥಕ್ಕೆ ಯೋಜಿಸಲ್ಪಡತಕ್ಕವೂ, ಆಕರ್ಷಕವಾದ ರೋಮವುಳ್ಳವೂ ಆದ ಅಶ್ವಗಳು ನಿನ್ನನ್ನು ಕರೆತರಲಿ. ನಮ್ಮ ಸ್ತುತಿಗಳನ್ನು ಕೇಳು.

## English Translation

Let your long-maned horses, Indra, that are yoked by prayers, bring you hither, and you hear our prayers.

॥ ಸಂಹಿತಾಪಾಠಃ ॥

ಬ್ರಹ್ಮಾಣಸ್ತ್ವಾ ವಯಂ ಯುಜಾ ಸೋಮಪಾಮಿಂದ್ರ ಸೋಮಿನಃ ।

ಸುತಾವಂತೋ ಹವಾಮಹೇ ॥ ೩ ॥

॥ ಪದಪಾಠಃ ॥

ಬ್ರಹ್ಮಾಣಃ । ತ್ವಾ । ವಯಂ । ಯುಜಾ । ಸೋಮಽಪಾಂ । ಇಂದ್ರ । ಸೋಮಿನಃ ।

ಸುತಽವಂತಃ । ಹವಾಮಹೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಬ್ರಹ್ಮಾಣೋ ಬ್ರಾಹ್ಮಣಾ ವಯಂ ತ್ವಾ ತ್ವಾಂ ಯುಜಾ ಯೋಗ್ಯೇನ ಸ್ತೋತ್ರೇಣ ಹವಾಮಹೇ । ಆಹ್ವಯಾಮಹೇ । ಕಥಂಭೂತಂ । ಸೋಮಪಾಂ ಸೋಮಸ್ಯ ಪಾತಾರಂ । ಕೀದೃಶಾ ವಯಂ । ಸೋಮಿನಃ ಸೋಮಯುಕ್ತಾಃ ಸುತಾವಂತೋಽಭಿಷುತೈಃ ಸೋಮೈರುಪೇತಾಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಸೋಮಿನಃ—ಸೋಮವನ್ನು ಅರ್ಪಿಸತಕ್ಕವರೂ। ಸುತವಂತಃ—ಸೋಮರಸವನ್ನು ಹಿಂಡಿರುವವರೂ । ಬ್ರಹ್ಮಾಣಃ—ಮಂತ್ರದ್ರಷ್ಟೃಗಳೂ ಆದ । ವಯಂ-ನಾವು । ಸೋಮಪಾಂ—ಸೋಮರಸವನ್ನು ಪಾನಮಾಡತಕ್ಕ । ತ್ವಾ—ನಿನ್ನನ್ನು । ಯುಜಾ—ಯೋಗ್ಯವಾದ ಸ್ತೋತ್ರದಿಂದ । ಹವಾಮಹೇ—ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸೋಮರಸವನ್ನು ಅರ್ಪಿಸತಕ್ಕವರೂ, ಸೋಮರಸವನ್ನು ಹಿಂಡಿರುವವರೂ ಮಂತ್ರದ್ರಷ್ಟೃಗಳೂ ಆದ ನಾವು ಸೋಮರಸವನ್ನು ಪಾನಮಾಡತಕ್ಕ ನಿನ್ನನ್ನು ಯೋಗ್ಯವಾದ ಸ್ತೋತ್ರದಿಂದ ಕರೆಯುತ್ತೇವೆ.

English Translation

We Brahmins, offerers of Soma, bearing the effused juices, invoke with suitable (prayers) you the drinker of the Soma.

॥ ಸಂಹಿತಾಪಾಠಃ ॥

ಆ ನೋ ಯಾಹಿ ಸುತಾವತೋಽಸ್ಮಾಕಂ ಸುಷ್ಟುತೀರುಪ ।

ಪಿಬಾ ಸು ಶಿಪ್ರಿನ್ನಂಧಸಃ ॥ ೪ ॥

॥ ಪದಪಾಠಃ ॥

ಆ । ನಃ । ಯಾಹಿ । ಸುತऽವತಃ । ಅಸ್ಮಾಕಂ । ಸುऽಸ್ತುತೀಃ । ಉಪ ।

ಪಿಬ । ಸು । ಶಿಪ್ರಿನ್ । ಅಂಧಸಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸುತಾವತೋऽಭಿಷುತಸೋಮಯುಕ್ತಾನಸ್ಮಾನಾ ಯಾಹಿ । ಅಭಿಗಚ್ಛ । ತತೋऽಸ್ಮಾಕಂ ಸಂಬಂಧೀನಿ ಸುಷ್ಟುತೀಃ ಶೋಭನಾನಿ ಸ್ತೋತ್ರಾಣ್ಯುಪಗಚ್ಛ । ಜಾನೀಹಿ । ಹೇ ಸುಶಿಪ್ರಿಞ್ಶೋಭನಶಿರಸ್ತ್ರಾಣ ಶೋಭನಹನುಕ ವೇಂದ್ರ ಅಂಧಸೋऽನ್ನಸ್ಯ ಸೋಮಲಕ್ಷಣಸ್ಯ ಸ್ವಾಂಶಲಕ್ಷಣಂ ಭಾಗಂ ಪಿಬ । ಯದ್ವಾ ॥ ಕರ್ಮಣಿ ಷಷ್ಠೀ ॥ ಅಂಧೋऽಸ್ಮದೀಯಂ ಸೋಮಂ ಪಿಬ ॥

॥ ಪ್ರತಿಪದಾರ್ಥ ॥

ಸು ಶಿಪ್ರಿನ್—ಶ್ರೇಷ್ಠವಾದ ಕೆನ್ನೆಯುಳ್ಳ ಎಲೈ ಇಂದ್ರನೇ । ಸುತವತಃ—ಸೋಮವನ್ನು ಹಿಂಡಿ ಸಿದ್ಧವಾಗಿರುವ । ನಃ—ನಮ್ಮಲ್ಲಿಗೆ । ಆ ಯಾಹಿ—ದಯಮಾಡು । ಅಸ್ಮಾಕಂ—ನಮ್ಮ । ಸುಷ್ಟುತೀಃ—ಉತ್ತಮವಾದ ಸ್ತುತಿಗಳನ್ನು । ಉಪ—ತಿಳಿ । ಅಂಧಸಃ—ಸೋಮರೂಪವಾದ ಅನ್ನವನ್ನು । ಪಿಬ—ಪಾನಮಾಡು.

॥ ಭಾವಾರ್ಥ ॥

ಶ್ರೇಷ್ಠವಾದ ಕೆನ್ನೆಯುಳ್ಳ ಎಲೈ ಇಂದ್ರನೇ, ಸೋಮವನ್ನು ಹಿಂಡಿ ಸಿದ್ಧವಾಗಿರುವ ನಮ್ಮಲ್ಲಿಗೆ ದಯಮಾಡು. ನಮ್ಮ ಉತ್ತಮವಾದ ಸ್ತುತಿಗಳನ್ನು ತಿಳಿ. ಸೋಮರೂಪವಾದ ಅನ್ನವನ್ನು ಪಾನಮಾಡು.

## English Translation

Come to us offering the libation, accept our earnest praises; drink, handsome-jawed, of the (sacrifical) beverage.

॥ ಸಂಹಿತಾಪಾಠಃ ॥

ಆ ತೇ ಸಿಂಚಾಮಿ ಕುಕ್ಷ್ಯೋರನು ಗಾತ್ರಾ ವಿ ಧಾವತು ।

ಗೃಭಾಯ ಜಿಹ್ವಯಾ ಮಧು ॥ ೫ ॥

॥ ಪದಪಾಠಃ ॥

ಆ । ತೇ । ಸಿಂಚಾಮಿ । ಕುಕ್ಷ್ಯೋಃ । ಅನು । ಗಾತ್ರಾ । ವಿ । ಧಾವತು ।

ಗೃಭಾಯ । ಜಿಹ್ವಯಾ । ಮಧು ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಕುಕ್ಷ್ಯೋರುದರಯೋರಾ ಸಿಂಚಾಮಿ । ಸೋಮಮಾನಯಾಮಿ । ಕುಕ್ಷೀ ಸೋಮೇನ ಪೂರಯಾಮೀತ್ಯರ್ಥಃ । ಇಂದ್ರಸ್ಯ ಹಿ ದ್ವೇ ಉದರೇ । ತಥಾ ಚ ಶ್ರೂಯತೇ । ೬.ಥಾ ಕುಕ್ಷೀ ಪೃಣತಾ ವಾತ್ರಘ್ನೇ ಚ ಮಾಘೋನಂ ಚೇತಿ । ಯದ್ವಾ । ಏಕಸ್ಯೈವೋದರಸ್ಯ ಸವ್ಯದಕ್ಷಿಣಭೇದೇನೋರ್ಧ್ವಾಧೋಭಾಗಭೇದೇನ ವಾ ದ್ವಿತ್ವಂ । ಸ ಚಾಸಿಕ್ತಃ ಸೋಮೋ ಗಾತ್ರಾಣಿ ಶರೀರಾವಯವಾನಿ ಹಸ್ತಪಾದಾದೀನಿ ಸರ್ವಾಣ್ಯನುಕ್ರಮೇಣ ವಿ ಧಾವತು । ವ್ಯಾಪ್ನೋತು । ತ್ವಂ ಚ ಮಧು ಮಧುರಂ ಮಯಾ ಸಿಚ್ಯಮಾನಂ ಸೋಮಂ ಜಿಹ್ವಯಾ ರಸನೇಂದ್ರಿಯೇಣ ಗೃಭಾಯ । ಗೃಹಾಣ ॥ ಛಂದಸಿ ಶಾಯಜಪೀತಿ ಗ್ರಹ ಉತ್ತರಸ್ಯ ಶ್ನಃ ಶಾಯಜಾದೇಶಃ । ಹೃಗ್ರಹೋರ್ಭ ಇತಿ ಭತ್ವಂ ।

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತೇ—ನಿನ್ನ । ಕುಕ್ಷ್ಯೋಃ—ಉದರಗಳಲ್ಲಿ । ಆ ಸಿಂಚಾಮಿ—ಸೋಮರಸಗಳನ್ನು ಸುರಿಯುತ್ತೇನೆ । ಅನು ಗಾತ್ರಾ—ನಿನ್ನ ದೇಹದಲ್ಲೆಲ್ಲಾ । ವಿ ಧಾವತು—ಅವು ವ್ಯಾಪಿಸಿ ಓಡಾಡಲಿ । ಮಧು—ಮಧುರವಾದ ಸೋಮರಸವನ್ನು । ಜಿಹ್ವಯಾ—ನಾಲಿಗೆಯಿಂದ । ಗೃಭಾಯ—ಸ್ವೀಕರಿಸು ॥

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಉದರಗಳಲ್ಲಿ ಸೋಮರಸಗಳನ್ನು ಸುರಿಯುತ್ತೇನೆ. ಅವು ನಿನ್ನ ದೇಹದಲ್ಲೆಲ್ಲಾ ವ್ಯಾಪಿಸಿ ಓಡಾಡಲಿ. ನೀನು ಮಧುರವಾದ ಸೋಮರಸವನ್ನು ನಾಲಿಗೆಯಿಂದ ಸ್ವೀಕರಿಸು (ರುಚಿನೋಡು).

English Translation

I fill your belly (with the libation): let it spread throughout the limbs: take the honied Soma with your tongue.

॥ ಸಂಹಿತಾಪಾಠಃ ॥

ಸ್ವಾದುಷ್ಟೇ ಅಸ್ತು ಸಂಸುದೇ ಮಧುಮಾನ್ತನ್ವೇ೩ ತವ ।

ಸೋಮಃ ಶಮಸ್ತು ತೇ ಹೃದೇ ॥ ೬ ॥

॥ ಪದಪಾಠಃ ॥

ಸ್ವಾದುಃ । ತೇ । ಅಸ್ತು । ಸಂऽಸುದೇ । ಮಧುऽಮಾನ್ । ತನ್ವೇ । ತವ ।

ಸೋಮಃ । ಶಂ । ಅಸ್ತು । ತೇ । ಹೃದೇ ॥ ೬ ॥

॥ ಸಾಯಣಭಾಷ್ಯಂ ॥

ಸಂಸುದೇ ಸಮ್ಯಕ್ ಸುಷ್ಠು ದಾತ್ರೇ ಹೇ ಇಂದ್ರ ತೇ ತುಭ್ಯಂ ಮಧುಮಾನ್ಮಾಧುರ್ಯವಾನಯಂ ಸೋಮಃ ಸ್ವಾದುರಸ್ತು । ರುಚಿಕರೋ ಭವತು । ತವ ತನ್ವೇ ಶರೀರಾಯ ಚ ಸ್ವಾದುರಸ್ತು । ತವ ಹೃದೇ ಹೃದಯಾಯ ಚ ಸ ಸೋಮಃ ಶಮಸ್ತು । ಸುಖಜನಕಂ ಭವತು ॥

॥ ಪ್ರತಿಪದಾರ್ಥ ॥

ಸಂಸುದೇ—ಅತ್ಯುದಾರವಾಗಿ ದಾನಮಾಡತಕ್ಕ ಎಲೈ ಇಂದ್ರನೇ । ತೇ—ನಿನಗೆ । ಮಧುಮಾನ್—ಮಾಧುರ್ಯೋಪೇತವಾದ ಸೋಮವು । ಸ್ವಾದುಃ—ರುಚಿಕರವಾಗಿ । ಅಸ್ತು—ಆಗಿರಲಿ । ತವ—ನಿನ್ನ । ತನ್ವೇ—ಶರೀರಕ್ಕೂ (ಆಹ್ಲಾದಕರವಾಗಿರಲಿ) । ಸೋಮಃ—ಅದೇ ಸೋಮವು । ತೇ ಹೃದೇ—ನಿನ್ನ ಹೃದಯಕ್ಕೂ । ಶಂ ಅಸ್ತು—ಸುಖಕಾರಕವಾಗಿರಲಿ ॥

॥ ಭಾವಾರ್ಥ ॥

ಅತ್ಯುದಾರವಾಗಿ ದಾನಮಾಡತಕ್ಕ ಎಲೈ ಇಂದ್ರನೇ, ನಿನಗೆ ಮಾಧುರ್ಯೋಪೇತವಾದ ಸೋಮವು ರುಚಿಕರವಾಗಿ ಆಗಿರಲಿ, ಅದು ನಿನ್ನ ಶರೀರಕ್ಕೂ ಆಹ್ಲಾದಕರವಾಗಿರಲಿ. ಅದೇ ಸೋಮವು ನಿನ್ನ ಹೃದಯಕ್ಕೂ ಸುಖಕಾರಕವಾಗಿರಲಿ.

English Translation

May the sweet-flavoured Soma be grateful to you, who are munificent; (may it be grateful) to your body, may it be exhilarating to your heart.

॥ ಸಂಹಿತಾಪಾಠಃ ॥

ಅಯಮು ತ್ವಾ ವಿಚರ್ಷಣೇ ಜನೀರಿವಾಭಿ ಸಂವೃತಃ ।

ಪ್ರ ಸೋಮ ಇಂದ್ರ ಸರ್ಪತು ॥ ೭ ॥

॥ ಪದಪಾಠಃ ॥

ಅಯಂ । ಊಂ ಇತಿ । ತ್ವಾ । ವಿऽಚರ್ಷಣೇ । ಜನೀಃऽಇವ । ಅಭಿ । ಸಂऽವೃತಃ ।

ಪ್ರ । ಸೋಮಃ । ಇಂದ್ರ । ಸರ್ಪತು ॥ ೭ ॥

॥ ಸಾಯಣಭಾಷ್ಯಂ ॥

ಹೇ ವಿಚರ್ಷಣೇ ವಿದ್ರಷ್ಟರಿಂದ್ರ ಜನೀರಿವ ಜನಯೋ ಜಾಯಾ ಇವ ತ್ವಾ ಯಥಾ ಶುಕ್ಲೈರ್ವಸ್ತ್ರೈಃ ಸಂವೃತಾ ಭವಂತಿ ಏವಂ ಸಂವೃತಃ ಪಯಃಪ್ರಭೃತಿಭಿಃ ಶ್ರಯಣದ್ರವ್ಯೈರಾವೃತೋಽಯಂ ಸೋಮೋಽಭಿ ಪ್ರ ಸರ್ಪತು । ಅಭಿಗಚ್ಛತು । ಉ ಇತಿ ಪೂರಕಃ ॥

॥ ಪ್ರತಿಪದಾರ್ಥ ॥

ವಿಚರ್ಷಣೇ—ವಿವೇಚನದೃಷ್ಟಿಯುಳ್ಳ । ಇಂದ್ರ—ಎಲೈ ಇಂದ್ರನೇ । ಜನೀರಿವ—ಪತ್ನಿಯು ಉತ್ತಮವಾದ ವಸ್ತ್ರಗಳನ್ನು ಧರಿಸಿಕೊಂಡು ಬರುವಂತೆ । ಸಂವೃತಃ—ಕ್ಷೀರಾದಿಶ್ರಯಣದ್ರವ್ಯಗಳಿಂದ ಮಿಶ್ರಿತವಾದ । ಅಯಂ ಸೋಮಃ—ಈ ಸೋಮವು । ತ್ವಾ—ನಿನ್ನನ್ನು । ಅಭಿ ಪ್ರ ಸರ್ಪತು—ಸಮೀಪಿಸಲಿ ॥

॥ ಭಾವಾರ್ಥ ॥

ವಿವೇಚನದೃಷ್ಟಿಯುಳ್ಳ ಎಲೈ ಇಂದ್ರನೇ, ಪತ್ನಿಯು ಉತ್ತಮವಾದ ವಸ್ತ್ರಗಳನ್ನು ಧರಿಸಿಕೊಂಡು ಬರುವಂತೆ ಕ್ಷೀರಾದಿಶ್ರಯಣ ದ್ರವ್ಯಗಳಿಂದ ಮಿಶ್ರಿತವಾದ ಈ ಸೋಮವು ನಿನ್ನನ್ನು ಸಮೀಪಿಸಲಿ.

## English Translation

May this Soma, invested (with milk), approach you, observant Indra like a bride (clad in white apparel).

॥ ಸಂಹಿತಾಪಾಠಃ ॥

ತುವಿಗ್ರೀವೋ ವಪೋದರಃ ಸುಬಾಹುರಂಧಸೋ ಮದೇ ।
ಇಂದ್ರೋ ವೃತ್ರಾಣಿ ಜಿಘ್ನತೇ ॥ ೮ ॥

॥ ಪದಪಾಠಃ ॥

ತುವಿಽಗ್ರೀವಃ । ವಪಾಽಉದರಃ । ಸುಽಬಾಹುಃ । ಅಂಧಸಃ । ಮದೇ ।
ಇಂದ್ರಃ । ವೃತ್ರಾಣಿ । ಜಿಘ್ನತೇ ॥ ೮ ॥

॥ ಸಾಯಣಭಾಷ್ಯಂ ॥

ತುವಿಗ್ರೀವೋ ವಿಸ್ತೀರ್ಣಕಂಧರೋ ವಪೋದರಃ ಪೀವರೋದರಃ । ಯಥಾ ಬಹವಃ ಸೋಮಾ ಪೀತಾ ಅಂತರ್ಭವಂತಿ ತಥಾ ವಿಸ್ತೃತಜಠರ ಇತ್ಯರ್ಥಃ । ಸುಬಾಹುಃ ಶೋಭನಬಾಹುಃ ಏವಂಗುಣಕ ಇಂದ್ರೋಽಂಧಸೋಽನ್ನಸ್ಯ ಸೋಮಾತ್ಮಕಸ್ಯ ಮದೇ ಹರ್ಷೇ ಸತಿ ವೃತ್ರಾಣಿ ಶತ್ರುಜಾತಾನಿ ಜಿಘ್ನತೇ । ಹಿನಸ್ತಿ ॥

॥ ಪ್ರತಿಪದಾರ್ಥ ॥

ತುವಿಗ್ರೀವಃ—ದೀರ್ಘವಾದ ಕತ್ತುಳ್ಳವನೂ । ವಪೋದರಃ—ಪುಷ್ಟವಾದ ಉದರವುಳ್ಳವನೂ । ಸುಬಾಹುಃ—ಶ್ರೇಷ್ಠವಾದ ಬಾಹುವುಳ್ಳವನೂ ಆದ । ಇಂದ್ರಃ—ಇಂದ್ರನು । ಅಂಧಸಃ—ಸೋಮರೂಪವಾದ ಅನ್ನಪಾನದಿಂದ । ಮದೇ—ಹರ್ಷವುಂಟಾದಾಗ । ವೃತ್ರಾಣಿ—ಶತ್ರುಗಳನ್ನೆಲ್ಲಾ । ಜಿಘ್ನತೇ—ಕೊಲ್ಲುತ್ತಾನೆ.

॥ ಭಾವಾರ್ಥ ॥

ದೀರ್ಘವಾದ ಕತ್ತುಳ್ಳವನೂ, ಪುಷ್ಟವಾದ ಉದರವುಳ್ಳವನೂ ಶ್ರೇಷ್ಠವಾದ ಬಾಹುವುಳ್ಳವನೂ ಆದ ಇಂದ್ರನು ಸೋಮರೂಪವಾದ ಅನ್ನಪಾನದಿಂದ ಹರ್ಷವುಂಟಾದಾಗ ಶತ್ರುಗಳನ್ನೆಲ್ಲಾ ಕೊಲ್ಲುತ್ತಾನೆ.

## English Translation

Long-necked, large-bellied, strong-armed Indra, in the exhilaration of the (sacrificial) food, destroys his enemies.

॥ ಸಂಹಿತಾಪಾಠಃ ॥

ಇಂದ್ರ ಪ್ರೇಹಿ ಪುರಸ್ತ್ವಂ ವಿಶ್ವಸ್ಯೇಶಾನ ಓಜಸಾ ।
ವೃತ್ರಾಣಿ ವೃತ್ರಹಞ್ಜಹಿ ॥ ೯ ॥

॥ ಪದಪಾಠಃ ॥

ಇಂದ್ರ । ಪ್ರ । ಇಹಿ । ಪುರಃ । ತ್ವಂ । ವಿಶ್ವಸ್ಯ । ಈಶಾನಃ । ಓಜಸಾ ।
ವೃತ್ರಾಣಿ । ವೃತ್ರಽಹನ್ । ಜಹಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಓಜಸಾ ಬಲೇನ ವಿಶ್ವಸ್ಯ ಸರ್ವಸ್ಯ ಜಗತ ಈಶಾನಃ ಸ್ವಾಮೀ ಭವಂಸ್ತ್ವಂ ಪುರೋಽಸ್ಮಾಕಂ ಪುರಸ್ತಾತ್ಪ್ರೇಹಿ । ಪ್ರಗಚ್ಛ । ಪ್ರಾಪ್ನುಹಿ । ಹೇ ವೃತ್ರಹನ್ ವೃತ್ರಾಣಾಮಾವರಕಾಣಾಂ ಶತ್ರೂಣಾಂ ಹಂತಃ ವೃತ್ರಾಣ್ಯಸ್ಮದೀಯಾನಿ ಶತ್ರುಜಾತಾನಿ ಜಹಿ । ವಿನಾಶಯ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಓಜಸಾ—ನಿನ್ನ ಬಲದಿಂದ । ವಿಶ್ವಸ್ಯ—ಸಮಸ್ತವಾದ ಜಗತ್ತಿಗೂ । ಈಶಾನಃ—ಪ್ರಭುವಾಗಿರುವ । ತ್ವಂ—ನೀನು । ಪುರಃ—ನಮ್ಮ ಮುಂಭಾಗಕ್ಕೆ । ಪ್ರೇಹಿ—ದಯಮಾಡು । ವೃತ್ರಹನ್—ಶತ್ರುನಾಶಕನಾದ ಎಲೈ ಇಂದ್ರನೇ । ವೃತ್ರಾಣಿ—ಶತ್ರುಗಳನ್ನು । ಜಹಿ—ನಾಶಪಡಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಬಲದಿಂದ ಸಮಸ್ತ ಜಗತ್ತಿಗೂ ಪ್ರಭುವಾಗಿರುವ ನೀನು ನಮ್ಮ ಮುಂಭಾಗಕ್ಕೆ ದಯಮಾಡು. ಶತ್ರುನಾಶಕನಾದ ಎಲೈ ಇಂದ್ರನೇ, ಶತ್ರುಗಳನ್ನು ನಾಶಪಡಿಸು.

## English Translation

Indra, who by your strength are the lord over all, come to us: slayer of Vritra, subdue our foes.

॥ ಸಂಹಿತಾಪಾಠಃ ॥

ದೀರ್ಘಸ್ತೇ ಅಸ್ತ್ವಂಕುಶೋ ಯೇನಾ ವಸು ಪ್ರಯಚ್ಛಸಿ ।

ಯಜಮಾನಾಯ ಸುನ್ವತೇ ॥ ೧೦ ॥

॥ ಪದಪಾಠಃ ॥

ದೀರ್ಘಃ । ತೇ । ಅಸ್ತು । ಅಂಕುಶಃ । ಯೇನ । ವಸು । ಪ್ರಽಯಚ್ಛಸಿ ।

ಯಜಮಾನಾಯ । ಸುನ್ವತೇ ॥ ೧೦ ॥

॥ ಸಾಯಣಭಾಷ್ಯಂ ॥

ಅಭ್ಯುದಯೇಷ್ಟಾವಿಂದ್ರಸ್ಯ ಪ್ರದಾತುರ್ದೀರ್ಘಸ್ತೇ ಅಸ್ತ್ವಂಕುಶ ಇತ್ಯನುವಾಕ್ಯಾ । ಸೂತ್ರ್ಯತೇ ಹಿ । ದೀರ್ಘಸ್ತೇ ಅಸ್ತ್ವಂಕುಶೋ ಭದ್ರಾ ತೇ ಹಸ್ತಾ ಸುಕೃತೋತ ಪಾಣೀ । ಆ. ೩-೧೩. । ಇತಿ ॥

ಹೇ ಇಂದ್ರ ತೇ ತವಾಂಕುಶಃ ಸೃಣಿರಾಕರ್ಷಣಸಾಧನಮಾಯುಧಂ ದೀರ್ಘೋಽಸ್ತು । ಆಯತೋ ಭವತು । ಯಥಾ ದೂರಸ್ಥಮಪಿ ವಸ್ತು ವ್ಯಾಪ್ನೋತಿ ತಥಾಯಾಮವಾನ್ ಭವತ್ವಿತ್ಯರ್ಥಃ । ಯೇನಾಂಕುಶೇನ ಸುನ್ವತೇ ಸೋಮಾಭಿಷವಂ ಕುರ್ವತೇ ಯಜಮಾನಾಯ ವಸು ಧನಮಾಹೃತ್ಯ ಪ್ರಯಚ್ಛಸಿ ದದಾಸಿ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಯೇನ—ಯಾವ ಅಂಕುಶದಿಂದ । ಸುನ್ವತೇ—ಸೋಮವನ್ನು ಹಿಂಡಿ ಅರ್ಪಿಸುವ । ಯಜಮಾನಾಯ—ಯಜಮಾನನಿಗೆ। ವಸು—ಧನವನ್ನು ಅಪಹರಿಸಿ । ಪ್ರಯಚ್ಛಸಿ—ಕೊಡುವೆಯೋ ಅಂತಹ । ತೇ ಅಂಕುಶಃ—ಡೊಂಕಿನಿಂದ ಕೂಡಿರುವ ನಿನ್ನ ಅಂಕುಶವು । ದೀರ್ಘಃ—ದೀರ್ಘವಾಗಿ । ಅಸ್ತು—ಇರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಅಂಕುಶದಿಂದ, ಸೋಮವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ ಧನವನ್ನು ಶತ್ರುವಿನಿಂದ ಅಪಹರಿಸಿ ಕೊಡುವೆಯೋ ಅಂತಹ ಕೊಕ್ಕೆಯಿಂದ ಕೂಡಿರುವ ನಿನ್ನ ಅಂಕುಶವು ದೀರ್ಘವಾಗಿರಲಿ.

## English Translation

Long be your goad, wherewith you bestow wealth upon the sacrificer offering libations.

॥ ವಿಶೇಷವಿಷಯಗಳು ॥

ಅಭ್ಯುದಯೇಷ್ಟಿಯಲ್ಲಿ ಇಂದ್ರಃ ಪ್ರದಾತಾ ಎಂಬ ದೇವತೆಯನ್ನುದ್ದೇಶಿಸಿ ಮಾಡುವ ಹೋಮದಲ್ಲಿ ದೀರ್ಘಸ್ತೇ ಅಸ್ತ್ವಂಕುಶಃ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ದೀರ್ಘಸ್ತೇ ಅಸ್ತ್ವಂಕುಶೋ ಭದ್ರಾ ತೇ ಹಸ್ತಾ ಸುಕೃತೋತ ಪಾಣೀ ಎಂಬ ಸೂತ್ರದಿಂದ (೮. ೩-೧೩) ವಿಸ್ತೃತವಾಗಿರುವುದು.

॥ ಸಂಹಿತಾಪಾಠಃ ॥

ಅಯಂ ತ ಇಂದ್ರ ಸೋಮೋ ನಿಪೂತೋ ಅಧಿ ಬರ್ಹಿಷಿ ।

ಏಹೀಮಸ್ಯ ದ್ರವಾ ಪಿಬ ॥ ೧೧ ॥

॥ ಪದಪಾಠಃ ॥

ಅಯಂ । ತೇ । ಇಂದ್ರ । ಸೋಮಃ । ನಿऽಪೂತಃ । ಅಧಿ । ಬರ್ಹಿಷಿ ।

ಆ । ಇಹಿ । ಈಂ । ಅಸ್ಯ । ದ್ರವ । ಪಿಬ ॥ ೧೧ ॥

॥ ಸಾಯಣಭಾಷ್ಯಂ ॥

ದ್ವಿತೀಯೇ ಪರ್ಯಾಯೇ ಹೋತುಃ ಶಸ್ತ್ರೇಽಯಂ ತ ಇಂದ್ರೇತಿ ಸ್ತೋತ್ರಿಯಸ್ತೃಚಃ । ಸೂತ್ರಿತಂ ಚ । ಅಯಂ ತ ಇಂದ್ರ ಸೋಮೋಽಯಂ ತೇ ಮಾನುಷೇ ಜನೇ । ೬. ೬. ೮. । ಇತಿ ॥

ಹೇ ಇಂದ್ರ ತೇ ತುಭ್ಯಂ ತ್ವದರ್ಥಮಯಂ ಸೋಮೋ ಬರ್ಹಿಷ್ಯಧಿ ವೇದ್ಯಾಮಾಸ್ತೀರ್ಣೇ ದರ್ಭೇ ನಿಪೂತೋ ನಿತರಾಂ ದಶಾಪವಿತ್ರೇಣ ಶೋಧಿತಃ । ಅಭಿಷವಾದಿಸಂಸ್ಕಾರೈಃ ಸಂಸ್ಕೃತ ಇತ್ಯರ್ಥಃ । ಈಮಿದಾನೀಮಸ್ಯೇಮಂ ಸೋಮಂ ಪ್ರತ್ಯೇಹಿ । ಆಗಚ್ಛ । ಆಗತ್ಯ ಯತ್ರ ರಸಾತ್ಮಕಃ ಸೋಮೋ ಹೂಯತೇ ತಂ ದೇಶಂ ಪ್ರತಿ ದ್ರವ । ಶೀಘ್ರಂ ಗಚ್ಛ । ತದನಂತರಂ ತಂ ಸೋಮಂ ಪಿಬ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನಗಾಗಿ । ಅಯಂ ಸೋಮಃ—ಈ ಸೋಮವು । ಬರ್ಹಿಷಿ ಅಧಿ-ದರ್ಭಾಸನಗಳ ಮೇಲೆ । ನಿಪೂತಃ—ಶುದ್ಧಿಮಾಡಿ ಇಡಲ್ಪಟ್ಟಿದೆ । ಈಂ—ಈಗ । ಅಸ್ಯ—ಈ ಸೋಮರಸಕ್ಕಭಿಮುಖವಾಗಿ । ಏಹಿ—ದಯಮಾಡು । ದ್ರವ—ಶೀಘ್ರವಾಗಿ ಸಮೀಪಿಸು । ಪಿಬ—ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗಾಗಿ ಈ ಸೋಮವು ಶುದ್ಧಿಮಾಡಿ ದರ್ಭಾಸನಗಳ ಮೇಲೆ ಇಡಲ್ಪಟ್ಟಿದೆ. ಈಗ ಈ ಸೋಮರಸಕ್ಕಭಿಮುಖವಾಗಿ ದಯಮಾಡು. ಶೀಘ್ರವಾಗಿ ಸಮೀಪಿಸಿ ಪಾನಮಾಡು

## English Translation

This Soma juice, purified (by filtering) and placed on the sacred grass, is for you Indra; come to it; hasten; drink."

॥ ವಿಶೇಷವಿಷಯಗಳು ॥

ಎರಡನೆಯ ಪರ್ಯಾಯದಲ್ಲಿ ಹೋತೃವು ಪಠಿಸುವ ಶಸ್ತ್ರಮಂತ್ರಗಳಲ್ಲಿ ಅಯಂ ತ ಇಂದ್ರ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಸ್ತೋತ್ರಿಯ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಅಯಂ ತ ಇಂದ್ರ ಸೋಮೋಽಯಂ ತೇ ಮಾನುಷೇ ಜನೇ ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಶಾಚಿಗೋ ಶಾಚಿಪೂಜನಾಯಂ ರಣಾಯ ತೇ ಸುತಃ ।
ಆಖಂಡಲ ಪ್ರ ಹೂಯಸೇ ॥ ೧೨ ॥

॥ ಪದಪಾಠಃ ॥

ಶಾಚಿಗೋ ಇತಿ ಶಾಚಿऽಗೋ । ಶಾಚಿऽಪೂಜನ । ಅಯಂ । ರಣಾಯ । ತೇ । ಸುತಃ ।
ಆಖಂಡಲ । ಪ್ರ । ಹೂಯಸೇ ॥ ೧೨ ॥

॥ ಸಾಯಣಭಾಷ್ಯಂ ॥

**ಹೇ ಶಾಚಿಗೋ । ಶಾಚಯಃ ಶಕ್ತಾ ಗಾವೋ ಯಸ್ಯಾಸೌ ಶಾಚಿಗುಃ । ಯದ್ವಾ ॥ ಶಚ ವ್ಯಕ್ತಾಯಾಂ ವಾಚಿ । ಅಸ್ಮಾದೌಣಾದಿಕ ಇಞ್‌ಪ್ರತ್ಯಯಃ ॥ ಶಾಚಯೋ ವ್ಯಕ್ತಾ ಪ್ರಖ್ಯಾತಾ ಗಾವೋ ರಶ್ಮಯೋ ಗಾವ ಏವ ವಾ ಯಸ್ಯ ತಾದೃಶ । ಹೇ ಶಾಚಿಪೂಜನ । ಪೂಜ್ಯತೇಽನೇನೇತಿ ಪೂಜನಂ ಸ್ತೋತ್ರಾದಿ । ಪ್ರಖ್ಯಾತಪೂಜನ ತೇ ತವ ರಣಾಯ ರಮಣಾಯ ಸುಖಜನನಾಯಾಯಂ ಸೋಮಃ ಸುತೋಽಭಿಷುತಃ । ಯತಃ ಕಾರಣಾತ್ ಹೇ ಆಖಂಡಲ ಶತ್ರೂಣಾಮಾಖಂಡಯಿತಃ ಪ್ರ ಹೂಯಸೇ ಪ್ರಕೃಷ್ಟಾಭಿಃ ಸ್ತುತಿಭಿರಾಹೂಯಸೇ । ಅತ ಆಗತ್ಯೇಮಂ ಸೋಮಂ ಪಿಬೇತಿ ಭಾವಃ ॥**

॥ ಪ್ರತಿಪದಾರ್ಥ ॥

**ಶಾಚಿಗೋ**—ಪ್ರಖ್ಯಾತವಾದ ರಶ್ಮಿಯುಳ್ಳವನೂ । **ಶಾಚಿಪೂಜನ**—ಪ್ರಖ್ಯಾತವಾದ ಪೂಜೆಯುಳ್ಳವನೂ ಆದ ಎಲೈ ಇಂದ್ರನೇ । **ತೇ**—ನಿನ್ನ । **ರಣಾಯ**—ಹರ್ಷಕ್ಕಾಗಿ । **ಅಯಂ**—ಈ ಸೋಮವು । **ಸುತಃ**—ಹಿಂಡಲ್ಪಟ್ಟಿದೆ । **ಆಖಂಡಲ**—ಶತ್ರುನಾಶಕನಾದ ಎಲೈ ಇಂದ್ರನೇ । **ಪ್ರ ಹೂಯಸೇ**—ನೀನು ಉತ್ತಮವಾದ ಸ್ತುತಿಗಳಿಂದ ಕರೆಯಲ್ಪಡುತ್ತೀಯೆ.

॥ ಭಾವಾರ್ಥ ॥

ಪ್ರಖ್ಯಾತವಾದ ರಶ್ಮಿಯುಳ್ಳವನೂ, ಪ್ರಖ್ಯಾತವಾದ ಪೂಜೆಯುಳ್ಳವನೂ ಆದ ಎಲೈ ಇಂದ್ರನೇ, ನಿನ್ನ ಹರ್ಷಕ್ಕಾಗಿ ಈ ಸೋಮವು ಹಿಂಡಲ್ಪಟ್ಟಿದೆ. ಶತ್ರುನಾಶಕನಾದ ಎಲೈ ಇಂದ್ರನೇ, ನೀನು ಉತ್ತಮವಾದ ಸ್ತುತಿಗಳಿಂದ ಕರೆಯಲ್ಪಡುತ್ತೀಯೆ.

## Engalish Translation

Renowned for radiance, renowned for adoration, this libation is for your gratification ; destroyer of foes, you are earnestly invoked.

॥ ವಿಶೇಷವಿಷಯಗಳು ॥

**ಆಖಂಡಲ**—ಈ ಶಬ್ದಕ್ಕೆ ಯಾಸ್ಕರು—**ಆಖಂಡಲ ಪ್ರ ಹೂಯಸೇ । ಆಖಂಡಯಿತಃ ಖಂಡಂ ಖಂಡಯತೇಃ** ॥ (ನಿ. ೩-೧೦) ಎಂದು ನಿರ್ವಚನವನ್ನು ಹೇಳಿದಾರೆ. ಆಖಂಡಲ ಎಂದರೆ ಇಂದ್ರನು. ಖಂಡವೆಂದರೆ ತುಂಡು, ಚೂರು; ಖಂಡಯತಿಧಾತುವಿಗೆ ತುಂಡುಮಾಡುವುದು, ಚೂರುಮಾಡುವುದು. ಎಂದರ್ಥವು ಇಂದ್ರನು ಮೇಘಗಳನ್ನು (ತನ್ನ ವಜ್ರಾಯುಧದಿಂದ) ಕತ್ತರಿಸಿ ತುಂಡುತುಂಡುಮಾಡಿ ಅವುಗಳನ್ನು ಚದುರಿಸಿ ವೃಷ್ಟಿಯನ್ನು ಸುರಿಸುವಂತೆ ಮಾಡುವುದರಿಂದ ಇಂದ್ರನಿಗೆ ಆಖಂಡಲ ಎಂದು ಹೆಸರು ಎಂದು ಈ ಶಬ್ದಕ್ಕೆ ಅರ್ಥವಿವರಣೆಮಾಡಿದಾರೆ.

॥ ಸಂಹಿತಾಪಾಠಃ ॥

ಯಸ್ತೇ ಶೃಂಗವೃಷೋ ನಪಾತ್ಪ್ರಣಪಾತ್ಕುಂಡಪಾಯ್ಯಃ ।
ನ್ಯಸ್ಮಿನ್ದಧ್ರ ಆ ಮನಃ ॥ ೧೩ ॥

॥ ಪದಪಾಠಃ ॥

ಯಃ । ತೇ । ಶೃಂಗಽವೃಷಃ । ನಪಾತ್ । ಪ್ರಣಪಾದಿತಿ ಪ್ರಽನಪಾತ್ । ಕುಂಡಽಪಾಯ್ಯಃ ।

ನಿ । ಅಸ್ಮಿನ್ । ದಧ್ರೇ । ಆ । ಮನಃ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಶೃಂಗವೃಷೋ ನಪಾತ್ । ಶೃಂಗವೃಷಾ ನಾಮ ಕಶ್ಚಿದೃಷಿಃ ತಸ್ಯ ಚೇಂದ್ರಃ ಸ್ವಯಮೇವ ಪುತ್ರತಯಾ ಜಜ್ಞ ಇತ್ಯಾಖ್ಯಾಯಿಕಾ । ನಪಾದಿತ್ಯಪತ್ಯನಾಮ । ಶೃಂಗವೃಷಃ ಪುತ್ರ । ಯದ್ವಾ । ಶೃಣಂತಿ ಹಿಂಸಂತೀತಿ ಶೃಂಗಾಣಿ ರಶ್ಮಯಃ । ತೈರ್ವರ್ಷತೀತಿ ಶೃಂಗವೃಡಾದಿತ್ಯಃ । ತಸ್ಯ ನ ಪಾತಯಿತಃ ಸ್ವಕೀಯೇ ಸ್ಥಾನೇಽವಸ್ಥಾಪಯಿತಃ ॥ ಸುಬಾಮಂತ್ರಿತ ಇತಿ ಷಷ್ಠ್ಯಂತಸ್ಯ ಪರಾಂಗವದ್ಭಾವೇನಾಮಂತ್ರಿತಾನುಪ್ರವೇಶಾತ್ ಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ ॥ ಈದೃಶಂ ಹೇ ಇಂದ್ರ ತೇ ತವ ಸಂಬಂಧೀ ಪ್ರಣಪಾತ್ ಪ್ರಕರ್ಷೇಣ ನ ಪಾತಯಿತಾ ರಕ್ಷಿತಾ ಕುಂಡಪಾಯ್ಯಃ। ಕುಂಡೈಃ ಪೀಯತೇಽಸ್ಮಿನ್ ಸೋಮ ಇತಿ ಕುಂಡಪಾಯ್ಯಃ ಕ್ರತುವಿಶೇಷಃ॥ ಕ್ರತೌ ಕುಂಡಪಾಯ್ಯಸಂಚಾಯ್ಯೌ । ಪಾ- ೩-೧-೧೩೦ । ಇತಿ ಪಿಬತೇರಧಿಕರಣೇ ಣ್ಯತ್ಪ್ರತ್ಯಯೋ ಯುಗಾಗಮಶ್ಚ ನಿಪಾತ್ಯತೇ ॥ ಏತತ್ಸಂಜ್ಞೋ ಯಃ ಕ್ರತುರಸ್ತ್ಯಸ್ಮಿನ್ ಕುಂಡಪಾಯ್ಯೇ ಕ್ರತೌ ಮನಃ ಸ್ವಾಂತಮಾನಿ ದಧ್ರೇ । ಅಭಿತೋ ವರ್ತಮಾನಾಃ ಕುಂಡಪಾಯಿನಾಮಾನ ಋಷಯಃ ಪುರಾ ನಿದಧಿರೇ । ಸಮ್ಯಕ್ ತ್ವದ್ದೇವತ್ಯಂ ಕ್ರತುಮನುಷ್ಠಿತವಂತ ಇತ್ಯರ್ಥಃ ॥ ದಧಾತೇರ್ಲಿಟೀರಯೋ ರ ಇತಿ ರೇಭಾವಃ ॥

॥ ಪ್ರತಿಪದಾರ್ಥ ॥

ಶೃಂಗವೃಷಃ—ಶೃಂಗವೃಷನಾಮಕನಾದ ಋಷಿಯ । ನಪಾತ್—ಪುತ್ರನಾದ ಎಲೈ ಇಂದ್ರನೇ । ತೇ—ನಿನ್ನ । ಪ್ರಣಪಾತ್—ರಕ್ಷಕವಾದುದೂ । ಕುಂಡಪಾಯ್ಯಃ—ಕುಂಡಪಾಯ್ಯಸಂಜ್ಞಕವಾದುದೂ ಆದ । ಯಃ—ಯಾವ ಕರ್ಮವಿದೆಯೋ । ಅಸ್ಮಿನ್—ಆ ಕರ್ಮದಲ್ಲಿ । ಮನಃ—ಮನಸ್ಸನ್ನು । ಆ ನಿ ದಧ್ರೇ—ಋಷಿಗಳು ಇಟ್ಟಿದ್ದಾರೆ ॥

॥ ಭಾವಾರ್ಥ ॥

ಶೃಂಗತೃಷಾನಾಮಕನಾದ ಋಷಿಯ ಪುತ್ರನಾದ ಎಲೈ ಇಂದ್ರನೇ, ನಿನ್ನ ರಕ್ಷಕವಾದುದೂ, ಕುಂಡಪಾಯ್ಯ ಸಂಜ್ಞಕವಾದುದೂ ಆದ ಯಾವ ಕರ್ಮವಿದೆಯೋ ಆ ಕರ್ಮದಲ್ಲಿ ಋಷಿಗಳು ಧ್ಯಾನಾತ್ಮಕವಾದ ಮನಸ್ಸನ್ನು ಅರ್ಪಿಸಿದ್ದಾರೆ.

## English Translation

(Indra), you are the offspring of Shringavrish, of whom the Kundapayya rite was the protector, (the sages) have fixed (of old) their minds upon this ceremony.

॥ ಸಂಹಿತಾಪಾಠಃ ॥

ವಾಸ್ತೋ᳚ಷ್ಪತೇ ಧ್ರುವಾ ಸ್ಥೂಣಾಂಸ॑ತ್ರಂ ಸೋ॒ಮ್ಯಾನಾ᳚ಮ್ ।
ದ್ರ॒ಪ್ಸೋ ಭೇ॒ತ್ತಾ ಪು॒ರಾಂ ಶಶ್ವ॑ತೀನಾ॒ಮಿಂದ್ರೋ॒ ಮುನೀ᳚ನಾಂ॒
ಸಖಾ᳚ ॥ ೧೪ ॥

॥ ಪದಪಾಠಃ ॥

ವಾಸ್ತೋಃ᳚ । ಪ॒ತೇ॒ । ಧ್ರು॒ವಾ । ಸ್ಥೂಣಾ᳚ । ಅಂಸ॑ತ್ರಂ । ಸೋ॒ಮ್ಯಾನಾ᳚ಮ್ ।
ದ್ರ॒ಪ್ಸಃ । ಭೇ॒ತ್ತಾ । ಪು॒ರಾಂ । ಶಶ್ವ॑ತೀನಾಂ । ಇಂದ್ರಃ॑ । ಮುನೀ᳚ನಾಂ । ಸಖಾ᳚ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ವಾಸ್ತೋಷ್ಪತೇ ಗೃಹಪತೇ ಸ್ಥೂಣಾ ಗೃಹಾಧಾರಭೂತಃ ಸ್ತಂಭೋ ಧ್ರುವಾ ಸ್ಥಿರಾ ಭವತು । ಸೋಮ್ಯಾನಾಂ ಸೋಮಾರ್ಹಾಣಾಂ ಸೋಮಸಂಪಾದಿನಾಂ ವಾಸ್ಮಾಕಮಂಸತ್ರಮಂಸತ್ರಾಣಮಂಸೋಪಲಕ್ಷಿತಸ್ಯ ಕೃತ್ಸ್ನಶರೀರಸ್ಯ ತ್ರಾಯಕಂ ರಕ್ಷಕಂ ಬಲಂ ಭವತು । ಅಪಿ ಚ ದ್ರಪ್ಸೋ ದ್ರವಣಶೀಲಃ ಸೋಮಃ ದ್ವಾನ್ ॥ ಅರ್ಶಆದಿತ್ವಾದಚ್ ಪ್ರತ್ಯಯಃ ॥ ಶಶ್ವತೀನಾಂ ಬಹ್ವೀನಾಂ ಪುರಾಮಸುರಪುರೀಣಾಂ ಭೇತ್ತಾ ವಿದಾರಯಿತಾ ಏವಂಭೂತ ಇಂದ್ರೋ ಮುನೀನಾಮೃಷೀಣಾಮಸ್ಮಾಕಂ ಸಖಾ ಮಿತ್ರಭೂತೋ ಭವತು ॥

॥ ಪ್ರತಿಪದಾರ್ಥ ॥

ವಾಸ್ತೋಷ್ಪತೇ—ಗೃಹಪತಿಯಾದ ಎಲೈ ಇಂದ್ರನೇ । ಸ್ಥೂಣಾ—ಗೃಹಕ್ಕೆ ಆಧಾರಭೂತವಾದ ಸ್ತಂಭವು । ಧ್ರುವಾ—ಭದ್ರವಾಗಿರಲಿ । ಸೋಮ್ಯಾನಾಂ—ಸೋಮಸಂಪಾದಕರಾದ ನಮ್ಮ । ಅಂಸತ್ರಂ—ದೇಹರಕ್ಷಕವಾಗಿಯೇ ಇರಲಿ । ದ್ರಪ್ಸಃ—ಸೋಮವಂತನೂ । ಶಶ್ವತೀನಾಂ—ಅನೇಕವಾದ । ಪುರಾಂ—ಶತ್ರುಪಟ್ಟಣಗಳ । ಭೇತ್ತಾ—ನಾಶಕನೂ ಆದ । ಇಂದ್ರಃ—ಇಂದ್ರನು । ಮುನೀನಾಂ—ಋಷಿಗಳಿಗೆ । ಸಖಾ—ಮಿತ್ರನಾಗಿರಲಿ ॥

॥ ಭಾವಾರ್ಥ ॥

ಗೃಹಪತಿಯಾದ ಎಲೈ ಇಂದ್ರನೇ, ಗೃಹಕ್ಕೆ ಆಧಾರಭೂತವಾದ ಸ್ತಂಭವು ಭದ್ರವಾಗಿರಲಿ, ಸೋಮಸಂಪಾದಕರಾದ ನಮಗೆ ದೇಹರಕ್ಷಕವಾಗಿಯೂ ಇರಲಿ. ಸೋಮವಂತನೂ, ಅನೇಕ ಶತ್ರುಪಟ್ಟಣಗಳ ನಾಶಕನೂ ಆದ ಇಂದ್ರನು ಋಷಿಗಳಿಗೆ ಮಿತ್ರನಾಗಿರಲಿ.

## English Translation

Lord of dwellings, may the (roof) pillar be strong; may there be vigour of body for the offerers of the libations: may Indra, the drinker (of the Soma), the destroyer of the numerous cities (of the Asuras) ever be the friend of the Munis.

॥ ಸಂಹಿತಾಪಾಠಃ ॥

ಪೃದಾಕುಸಾನುರ್ಯಜತೋ ಗವೇಷಣ ಏಕಃ ಸನ್ನಭಿ ಭೂಯಸಃ।
ಭೂರ್ಣಿಮಶ್ವಂ ನಯತ್ತುಜಾ ಪುರೋ ಗೃಭೇಂದ್ರಂ ಸೋಮಸ್ಯ
ಪೀತಯೇ ॥ ೧೫ ॥

॥ ಪದಪಾಠಃ ॥

ಪೃದಾಕುಽಸಾನುಃ । ಯಜತಃ । ಗೋಽಏಷಣಃ । ಏಕಃ । ಸನ್ । ಅಭಿ । ಭೂಯಸಃ ।
ಭೂರ್ಣಿಂ । ಅಶ್ವಂ । ನಯತ್ । ತುಜಾ । ಪುರಃ । ಗೃಭಾ । ಇಂದ್ರಂ । ಸೋಮಸ್ಯ ।
ಪೀತಯೇ ॥ ೧೫ ॥

॥ ಸಾಯಣಭಾಷ್ಯಂ ॥

ಪೃದಾಕುಸಾನುಃ । ಪೃದಾಕುಃ ಸರ್ಪಃ । ಸ ಇವ ಸಾನುಃ ಸಮುಚ್ಛ್ರಿತಃ । ತದ್ವದುಸ್ಪರ್ಶ ಇತ್ಯರ್ಥಃ । ಯದ್ವಾ । ಪೃದಾಕುವತ್ಸಾನುಃ ಸಂಭಜನೀಯಃ । ಸ ಯಥಾ ಬಹುಭಿರ್ಮಂತ್ರೌಷಧಾದಿಭಿಃ ಸ ಸೇವ್ಯೋ ನಾಲ್ಪೈಃ ಏವಮಯಮಪಿ ಬಹುಭಿಃ ಸ್ತೋತ್ರೈರಭಿಯುಕ್ತೈಃ ಸೇವ್ಯ ಇತ್ಯರ್ಥಃ । ಯಜತೋ ಯಷ್ಟವ್ಯೋ ಗವೇಷಣೋ [illegible] ಏಕಃ ಸನ್ನಸಹಾಯಃ ಕೇವಲ ಏವ ಸನ್ [illegible] ಭೂರ್ಣಿಮಶ್ವಂ [illegible] ಇಂದ್ರಂ [illegible] ಪುರಃ [illegible] ಯದ್ವಾ । [illegible] ಇತ್ಯರ್ಥಃ ।

॥ ಪ್ರತಿಪದಾರ್ಥ ॥

ಪೃದಾಕುಸಾನುಃ— [illegible] ಸರ್ಪದಂತೆ [illegible] ಯಜತಃ—ಪೂಜ್ಯನೂ । ಗವೇಷಣಃ— [illegible]ಗಳನ್ನು [illegible] ಕೊಡುವನೂ ಆದ ಇಂದ್ರನು । ಏಕಃ ಸನ್—ಅದ್ವಿತೀಯನಾಗಿ (ಒಬ್ಬನೇ) । ಭೂಯಸಃ ಅಭಿ—ಅಧಿಕವಾದ ಶತ್ರುಗಳನ್ನು ಸೋಲಿಸುತ್ತಾನೆ । ಭೂರ್ಣಿಂ—ಕ್ಷಿಪ್ರಗಾಮಿಯಾದ । ಅಶ್ವಂ—ಅಶ್ವದಂತಿರುವ । ಇಂದ್ರಂ—ಇಂದ್ರನನ್ನು । ಸೋಮಸ್ಯ—ಸೋಮವ

ರಸದ । ಪೀತಯೇ—ಪಾನಾರ್ಥವಾಗಿ । ಪುರಃ—ನಮ್ಮ ಮುಂಭಾಗಕ್ಕೆ । ತುಜಾ—ವೇಗವುಳ್ಳದ್ದೂ । ಗೃಭಾ—ಗ್ರಹಣಸಾಧನವಾದುದೂ ಆದ ಸ್ತುತಿಯಿಂದ । ನಯುತ್—(ಯಜಮಾನನು) ಆಕರ್ಷಿಸಿ ತರುತ್ತಾನೆ ॥

। ಭಾವಾರ್ಥ ।

ಹೆಡೆಯನ್ನು ಮೇಲಕ್ಕೆತ್ತಿದ ಸರ್ಪದಂತೆ ಉಚ್ಛ್ರಿತವಾದ ಶಿರಸ್ಸುಳ್ಳವನೂ, ಪೂಜ್ಯನೂ, ಗೋವುಗಳನ್ನು ಸಂಪಾದಿಸಿ ಕೊಡುವವನೂ ಆದ ಇಂದ್ರನು ಅದ್ವಿತೀಯನಾಗಿ ಅಧಿಕವಾದ ಶತ್ರುಗಳನ್ನು ಸೋಲಿಸುತ್ತಾನೆ. ಕ್ಷಿಪ್ರಗಾಮಿಯಾದ ಅಶ್ವದಂತಿರುವ ಇಂದ್ರನನ್ನು ಸೋಮರಸದ ಪಾನಾರ್ಥವಾಗಿ ಯಜಮಾನನು ವೇಗವುಳ್ಳದ್ದೂ, ಗ್ರಹಣಸಾಧನವಾದುದೂ ಆದ ಸ್ತುತಿಯಿಂದ ಆಕರ್ಷಿಸಿ ನಮ್ಮ ಮುಂಭಾಗಕ್ಕೆ ಕರೆತರುತ್ತಾನೆ

## English Translation

With head uplifted like a serpent, adorable, the recoverer of the cattle, Indra, single is superior to multitudes: (the worshipper) brings Indra to drink the Soma by a rapid seizure, like a loaded horse (by a halter).



## ಹದಿನೆಂಟನೆಯ ಸೂಕ್ತವು.

। ಸಾಯಣಭಾಷ್ಯಂ ।

ಇದಂ ಹೇತಿ ದ್ವಾವಿಂಶತ್ಯೃಚಂ ಷಷ್ಠಂ ಸೂಕ್ತಮಿರಿಂಬಿಠೇರಾರ್ಷಮುಷ್ಣಿಕ್ಛಂದಸ್ಕಂ । ಉತ ತ್ಯೇತ್ಯೇಷಾಶ್ವಿದೇವತಾಕಾ । ಶಮಗ್ನಿರಿತ್ಯೇಷಾಗ್ನಿಸೂರ್ಯವಾಯುದೇವತಾಕಾ । ಶಿಷ್ಟಾ ಆದಿತ್ಯದೇವತಾಕಾಃ । ತಥಾ ಚಾನುಕ್ರಮ್ಯತೇ । ಇದಂ ಹ ದ್ವ್ಯಧಿಕಾದಿತ್ಯಮೌಷ್ಣಿಹಮುಷ್ಟಮ್ಯಶ್ವಿಭ್ಯಾಂ ಪರಾಗ್ನಿಸೂರ್ಯಾನಿಲಾನಾಮಿತಿ ॥ ಗತೋ ವಿನಿಯೋಗಃ ॥

ಅನುವಾದವು—ಇದಂ ಹ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಇಪ್ಪತ್ತೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಾಣ್ವಗೋತ್ರದ ಇರಿಂಬಿಠಿ ಎಂಬುವನು ಋಷಿಯು ; ಉಷ್ಣಿಕ್ ಛಂದಸ್ಸು. ಈ ಸೂಕ್ತದ ಉತ ತ್ಯಾ ಎಂಬ ಎಂಟನೆಯ ಋಕ್ಕು ಅಶ್ವಿನೀದೇವತಾಕವು ; ಶಮಗ್ನಿಃ ಎಂಬ ಒಂಭತ್ತನೆಯ ಋಕ್ಕಿಗೆ ಅಗ್ನಿ, ಸೂರ್ಯ, ವಾಯುಗಳು ದೇವತೆಯು; ಉಳಿದ ಋಕ್ಕುಗಳಿಗೆ ಆದಿತ್ಯರು ದೇವತೆಯು ; ಅನುಕ್ರಮಣಿಕೆಯಲ್ಲಿ ಇದಂ ಹ ದ್ವ್ಯಧಿಕಾದಿತ್ಯಮೌಷ್ಣಿಹಮುಷ್ಟಮ್ಯಶ್ವಿಭ್ಯಾಂ ಪರಾಗ್ನಿಸೂರ್ಯಾನಿಲಾನಾಂ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೧೮

ಮಂಡಲ—೮ ॥ ಅನುವಾಕ—೩ ॥ ಸೂಕ್ತ—೧೮ ॥
ಅಷ್ಟಕ—೬ ॥ ಅಧ್ಯಾಯ—೧ ॥ ವರ್ಗ—೨೫, ೨೬, ೨೭, ೨೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೨ ॥
ಋಷಿಃ—ಇರಿಂಬಿಠಿಃ ಕಾಣ್ವಃ ।
ದೇವತಾ—೧-೭, ೧೦-೨೨. ಆದಿತ್ಯಾಃ । ೮. ಅಶ್ವಿನೌ । ೯. ಅಗ್ನಿಸೂರ್ಯಾನಿಲಾಃ ॥
ಛಂದಃ—ಉಷ್ಣಿಕ್ ॥

॥ ಸಂಹಿತಾಪಾಠಃ ॥

ಇದಂ ಹ ನೂನಮೇಷಾಂ ಸುಮ್ನಂ ಭಿಕ್ಷೇತ ಮರ್ತ್ಯಃ ।
ಆದಿತ್ಯಾನಾಮಪೂರ್ವ್ಯಂ ಸವೀಮನಿ ॥ ೧ ॥

॥ ಪದಪಾಠಃ ॥

ಇದಂ । ಹ । ನೂನಂ । ಏಷಾಂ । ಸುಮ್ನಂ । ಭಿಕ್ಷೇತ । ಮರ್ತ್ಯಃ ।
ಆದಿತ್ಯಾನಾಂ । ಅಪೂರ್ವ್ಯಂ । ಸವೀಮನಿ ॥ ೧ ॥

॥ ಸಾಯಣಭಾಷ್ಯಂ ॥

ಇದಂ ಹೇದಾನೀಂ ಖಲು ನೂನಮವಶ್ಯಮಾದಿತ್ಯಾನಾಮದಿತೇಃ ಪುತ್ರಾಣಾಮೇಷಾಂ ದೇವಾನಾಂ ಮಿತ್ರಾದೀನಾಂ ಸವೀಮನಿ ಪ್ರಸವೇ ಪ್ರೇರಣೇ ಸತಿ ಮರ್ತ್ಯೋ ಮನುಷ್ಯಃ ಸ್ತೋತಾಪೂರ್ವ್ಯಮಭಿನವಂ ಸುಮ್ನಂ ಸುಖಕರಂ ಧನಂ ಭಿಕ್ಷೇತ । ಯಾಚೇತ । ನ ಕಾಲಾಂತರೇ ॥

॥ ಪ್ರತಿಪದಾರ್ಥ ॥

ಇದಂ ಹ—ಈಗಲೇ । ನೂನಂ—ಅವಶ್ಯವಾಗಿ । ಆದಿತ್ಯಾನಾಂ—ಅದಿತಿಪುತ್ರರಾದ । ಏಷಾಂ—ಈ ಮಿತ್ರಾದಿಗಳ । ಸವೀಮನಿ—ಪೂಜಾಕಾಲದಲ್ಲಿ । ಮರ್ತ್ಯಃ—ಮಾನವನಾದ ಸ್ತುತಿಕರ್ತನು । ಅಪೂರ್ವ್ಯಂ—ನೂತನವಾದುದೂ । ಸುಮ್ನಂ—ಸುಖಕರವಾದುದೂ ಆದ ಧನವನ್ನು । ಭಿಕ್ಷೇತ—ಯಾಚಿಸಲಿ.

॥ ಭಾವಾರ್ಥ ॥

ಅದಿತಿಪುತ್ರರಾದ ಈ ಮಿತ್ರಾದಿಗಳ ಪೂಜಾಕಾಲದಲ್ಲಿ ಮಾನವನಾದ ಸ್ತುತಿಕರ್ತನು ಅವಶ್ಯವಾಗಿ ಈಗಲೇ ನೂತನವಾದುದೂ ಸುಖಕಾರಕವಾದುದೂ ಆದ ಧನವನ್ನು ಯಾಚಿಸಲಿ.

### English Translation

Let a mortal now earnestly solicit at the worship of these Adityas unprecedented riches.

। ಸಂಹಿತಾಪಾಠಃ ।

ಅನರ್ವಾಣೋ ಹ್ಯೇಷಾಂ ಪಂಥಾ ಆದಿತ್ಯಾನಾಂ ।
ಅದಬ್ಧಾಃ ಸಂತಿ ಪಾಯವಃ ಸುಗೇವೃಧಃ ॥ ೨ ॥

। ಪದಪಾಠಃ ॥

ಅನರ್ವಾಣಃ । ಹಿ । ಏಷಾಂ । ಪಂಥಾಃ । ಆದಿತ್ಯಾನಾಂ ।
ಅದಬ್ಧಾಃ । ಸಂತಿ । ಪಾಯವಃ । ಸುಗೇऽವೃಧಃ ॥ ೨ ॥

। ಸಾಯಣಭಾಷ್ಯಂ ।

ಏಷಾಮಾದಿತ್ಯಾನಾಂ ಪಂಥಾಃ ಪಂಥಾನೋ ಮಾರ್ಗಾಃ ॥ ಸುಪಾಂ ಸುಲುಗಿತಿ ಜಸಃ ಸುಃ ॥ ಅನರ್ವಾಣೋऽಪ್ರತ್ಯೃತಾಃ ಪರೈರಪ್ರತಿಗತಾಃ ಅತ ಏವಾದಬ್ಧಾ ಅಹಿಂಸಿತಾಶ್ಚ ಸಂತಿ । ಭವಂತಿ । ಹಿ ಯಸ್ಮಾದೇವಂ ತಸ್ಮಾತ್ಪಾಯವಃ ಪಾಲಯಿತಾರಸ್ತೇ ಮಾರ್ಗಾಃ ಸಗೇವೃಧಃ ಸುಗನೋಃ ಸುಖೇ ವಿಷಯೇ ವರ್ಧಕಾ ಭವಂತು ॥

॥ ಪ್ರತಿಪದಾರ್ಥ ॥

**ಏಷಾಂ ಆದಿತ್ಯಾನಾಂ**—ಈ ಆದಿತ್ಯರ । **ಪಂಥಾಃ**—ಸಂಚಾರಮಾರ್ಗವು (ಮಾರ್ಗಗಳು) । **ಅನರ್ವಾಣಃ**–ಅಪ್ರತಿಹತವಾದುದಾಗಿಯೂ । **ಅದಬ್ಧಾಃ**—ಅಹಿಂಸಿತವಾದುದಾಗಿಯೂ । **ಸಂತಿ**—ಇರುತ್ತವೆ । **ಹಿ**—ಆ ಕಾರಣ ದಿಂದಲೇ । **ಪಾಯವಃ**—ರಕ್ಷಕಗಳಾದ ಆ ಮಾರ್ಗಗಳು । **ಸುಗೇವೃಧಃ** – ನಮ್ಮ ಸುಖಗಳನ್ನು ಅಧಿಕಮಾಡುವು ದಾಗಿ ಆಗಿರಲಿ.

। ಭಾವಾರ್ಥ ।

ಈ ಆದಿತ್ಯರ ಸಂಚಾರಮಾರ್ಗಗಳು ಅಪ್ರತಿಹತವಾದವಾಗಿಯೂ, ಅಹಿಂಸಿತವಾದವಾಗಿಯೂ ಇರುತ್ತವೆ. ಆದುದರಿಂದಲೇ, ರಕ್ಷಕಗಳಾದ ಆ ಮಾರ್ಗಗಳು ನಮ್ಮ ಸುಖಗಳನ್ನು ಅಭಿವೃದ್ಧಿಮಾಡುವುವಾಗಿರಲಿ.

## English Translation

The paths of these Adityas are unobstructed and unopposed; may they yield us security and augment our happiness.

। ಸಂಹಿತಾಪಾಠಃ ।

ತತ್ಸು ನಃ ಸವಿತಾ ಭಗೋ ವರುಣೋ ಮಿತ್ರೋ ಅರ್ಯಮಾ ।
ಶರ್ಮ ಯಚ್ಛಂತು ಸಪ್ರಥೋ ಯದೀಮಹೇ । ೪ ॥

। ಪದಪಾಠಃ ।

ತತ್ । ಸು । ನಃ । ಸವಿತಾ । ಭಗಃ । ವರುಣಃ । ಮಿತ್ರಃ । ಅರ್ಯಮಾ ।
ಶರ್ಮ । ಯಚ್ಛಂತು । ಸಽಪ್ರಥಃ । ಯತ್ । ಈಮಹೇ ॥ ೩ ॥

। ಸಾಯಣಭಾಷ್ಯಂ ।

ಸವಿತ್ರಾದಯಶ್ಚತ್ವಾರೋ ದೇವಾಃ ಸಪ್ರಥಃ ಸರ್ವತಃ ಪೃಥು ವಿಸ್ತೀರ್ಣಂ ತಚ್ಛರ್ಮ ಸುಖಂ ಗೃಹಂ ವಾ ನೋಽಸ್ಮಭ್ಯಂ ಸು ಸುಷ್ಠು ಯಚ್ಛಂತು । ದದತು । ಯಚ್ಛರ್ಮೇಮಹೇ ವಯಂ ಯಾಚಾಮಹೇ ॥

। ಪ್ರತಿಪದಾರ್ಥ ।

**ಸವಿತಾ**—ಸವಿತೃವೂ । **ಭಗಃ**—ಭಗನೂ । **ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ । **ನಃ**—ನಮಗೆ । **ಯತ್**—ಯಾವ ಗೃಹಾದಿಗಳನ್ನು । **ಈಮಹೇ**—ಯಾಚಿಸುವೆವೋ। **ತತ್**—ಅಂತಹ । **ಸಪ್ರಥಃ**—ಅತ್ಯಂತ ವಿಸ್ತೃತವಾದ । **ಶರ್ಮ**— ಗೃಹಧನಾದಿಗಳನ್ನು । **ಸು**—ಅತಿಶಯವಾಗಿ । **ಯಚ್ಛಂತು**—ಕೊಡಲಿ ॥

॥ ಭಾವಾರ್ಥ ॥

ಸವಿತೃವೂ, ಭಗನೂ, ವರುಣನೂ, ಮಿತ್ರನೂ, ಅರ್ಯಮನೂ, ನಾವು ಯಾವ ಗೃಹಧನಾದಿಗಳನ್ನು ಯಾಚಿಸುವೆವೋ ಅಂತಹ ಅತ್ಯಂತ ವಿಸ್ತೃತವೂ ಪ್ರಭೂತವೂ ಆದ ಗೃಹಧನಾದಿಗಳನ್ನು ಕೊಡಲಿ.

## English Translation

May Savitri, Bhaga, Varuna, Mitra, and Aryaman bestow upon us that ample felicity which we solicit.

। ಸಂಹಿತಾಪಾಠಃ ।

ದೇವೇಭಿರ್ದೇವ್ಯದಿತೇಽರಿಷ್ಟಭರ್ಮನ್ನಾ ಗಹಿ । .

ಸ್ವ॒ಸ್ತಿಭಿಃ ಪುರುಪ್ರಿಯೇ ಸು॒ಶರ್ಮಭಿಃ ॥ ೪ ॥

॥ ಪದಪಾಠಃ ॥

ದೇ॒ವೇಭಿಃ । ದೇ॒ವಿ॒ । ಅ॒ದಿ॒ತೇ॒ । ಅರಿಷ್ಟಽಭರ್ಮನ್ । ಆ । ಗ॒ಹಿ॒ ॥

ಸ್ವಃ । ಸೂ॒ರಿಽಭಿಃ । ಪು॒ರು॒ಽಪ್ರಿ॒ಯೇ॒ । ಸು॒ಶರ್ಮಽಭಿಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ದೇವಿ ದಾನಾದಿಗುಣಯುಕ್ತೇ ಹೇ ಅರಿಷ್ಟಭರ್ಮನ್ನಹಿಂಸಿತಭರಣೇ ಹೇ ಪುರುಪ್ರಿಯೇ ಬಹುಭಿಃ ಪ್ರಿಯಮಾಣೇ ಹೇ ಏವಂಗುಣವಿಶಿಷ್ಟೇಽದಿತೇ ಸೂರಿಭಿಃ ಪ್ರಾಜ್ಞೈಃ ಸುಶರ್ಮಭಿಃ ಸುಸುಖೈರ್ದೇವೇಭಿರ್ದೇವೈರಾತ್ಮೀಯೈಃ ಪುತ್ರೈಃ ಸಾರ್ಧಂ । ಸ್ವಿತಿ ನಿಪಾತಃ ಶೋಭನಾರ್ಥಃ । ಸ್ವಿಚ್ಛೋಭನಂ ಯಥಾ ಭವತಿ ತಥಾ ಗಹಿ । ಆಗಚ್ಛ ॥

। ಪ್ರತಿಪದಾರ್ಥ ।

ದೇವಿ—ದೇವತಾತ್ಮಳೂ । ಅರಿಷ್ಟಭರ್ಮನ್—ಅಹಿಂಸಿತವಾದ ಭರಣವುಳ್ಳವಳೂ । ಪುರುಪ್ರಿಯೇ—ಅನೇಕರಿಗೆ ಪ್ರಿಯಳೂ ಆದ । ಅದಿತೇ—ಎಲೈ ಅದಿತಿಯೇ । ಸೂರಿಭಿಃ—ಪ್ರಜ್ಞಾಯುಕ್ತರೂ । ಸುಶರ್ಮಭಿಃ—ಶ್ರೇಷ್ಠವಾದ ಸುಖಯುಕ್ತರೂ ಆದ । ದೇವೇಭಿಃ—ನಿನ್ನ ಪುತ್ರರಾದ ದೇವತೆಗಳೊಡಗೂಡಿ । ಸ್ವಃ—ನಮಗೆ ಒಳ್ಳೆಯದಾಗುವ ರೀತಿಯಲ್ಲಿ । ಆ ಗಹಿ—ದಯಮಾಡು ॥

॥ ಭಾವಾರ್ಥ ॥

ದೇವತಾತ್ಮಳೂ, ಅಹಿಂಸಿತವಾದ ಭರಣವುಳ್ಳವಳೂ ಅನೇಕರಿಗೆ ಪ್ರಿಯಳೂ ಆದ ಎಲೈ ಅದಿತಿಯೇ, ಪ್ರಜ್ಞಾಯುಕ್ತರೂ ಶ್ರೇಷ್ಠವಾದ ಸುಖಯುಕ್ತರೂ ಆದ ನಿನ್ನ ಪುತ್ರರಾದ ದೇವತೆಗಳೊಡಗೂಡಿ ನಮಗೆ ಒಳ್ಳೆಯದಾಗುವ ರೀತಿಯಲ್ಲಿ ದಯಮಾಡು.

English Translation

Divine Aditi, bringer of safety, beloved of many, come propitiously with the wise and happy divinities.

॥ ಸಂಹಿತಾಪಾಠಃ ॥

ತೇ ಹಿ ಪು॒ತ್ರಾಸೋ॒ ಅದಿ॑ತೇರ್ವಿ॒ದುರ್ದ್ವೇಷಾಂ॑ಸಿ॒ ಯೋತ॑ವೇ ।

ಅಂ॒ಹೋಶ್ಚಿ॑ದುರು॒ಚಕ್ರ॑ಯೋಽನೇ॒ಹಸಃ॑ ॥ ೫ ॥

। ಪದಪಾಠಃ ।

ತೇ । ಹಿ । ಪುತ್ರಾಸಃ । ಅದಿತೇಃ । ವಿದುಃ । ದ್ವೇಷಾಂಸಿ । ಯೋತವೇ ।

ಅಂಹೋಃ । ಚಿತ್ । ಉರುऽಚಕ್ರಯಃ । ಅನೇಹಸಃ ॥ ೫ ॥

॥ ಸಾಯಣಭಾಷ್ಯಂ ॥

ಅದಿತೇಃ ಪುತ್ರಾಸಃ ಪುತ್ರಾಸ್ತೇ ಹಿ ತೇ ಖಲು ಮಿತ್ರಾದಯೋ ದೇವಾ ದ್ವೇಷಾಂಸಿ ದ್ವೇಷ್ಟ್ರೀಣಿ ರಾಕ್ಷಸಾದೀನಿ ಯೋತವೇ ಪೃಥಕ್ಕರ್ತುಂ ವಿದುಃ । ಜಾನಂತಿ ॥ ವಿದೋ ಲಟೋ ವೇತಿ ವಿದ ಉತ್ತರಸ್ಯ ಝೋರುಸಾದೇಶಃ ॥ ತಥೋರುಚಕ್ರಯೋ ವಿಸ್ತೀರ್ಣಸ್ಯ ಕರ್ಮಣಃ ಕರ್ತಾರೋऽನೇಹಸೋऽನಾಹಂತಾರೋ ರಕ್ಷಕಾಸ್ತೇऽಂಹೋಶ್ಚಿದಾಹನನಶೀಲಾತ್ಪಾಪಾದಪಿ ಯೋತವೇ ಪೃಥಕ್ಕರ್ತುಮಸ್ಮಾಞ್ಜಾನಂತಿ ॥

॥ ಪ್ರತಿಪದಾರ್ಥ ॥

ಅದಿತೇಃ—ಅದಿತಿಯ । ಪುತ್ರಾಸಃ—ಪುತ್ರರೂ । ತೇ ಹಿ—ಪ್ರಸಿದ್ಧರೂ ಆದ ಮಿತ್ರಾದಿಗಳು । ದ್ವೇಷಾಂಸಿ—ನಮ್ಮ ಶತ್ರುಗಳನ್ನು । ಯೋತವೇ—ಬೇರೆಮಾಡಿ ದೂರ ಓಡಿಸಲು । ವಿದುಃ—ತಿಳಿದಿದ್ದಾರೆ । ಉರುಚಕ್ರಯಃ—ಮಹತ್ತಾದ ಕರ್ಮಕರ್ತರೂ । ಅನೇಹಸಃ—ರಕ್ಷಾದಾತರೂ ಆದ ಅವರು । ಅಂಹೋಶ್ಚಿತ್—ಪಾಪದಿಂದಲೂ ನಮ್ಮನ್ನು ಬಿಡುಗಡೆ ಮಾಡಲು ತಿಳಿದಿದ್ದಾರೆ.

॥ ಭಾವಾರ್ಥ ॥

ಅದಿತಿಯ ಪುತ್ರರೂ, ಪ್ರಸಿದ್ಧರೂ ಆದ ಮಿತ್ರಾದಿಗಳು ನಮ್ಮ ಶತ್ರುಗಳನ್ನು ಬೇರೆ ಮಾಡಿ ದೂರಕ್ಕೆ ಓಡಿಸುವ ಕ್ರಮವನ್ನು ತಿಳಿದಿದ್ದಾರೆ. ಮಹತ್ತಾದ ಕರ್ಮಕರ್ತರೂ, ರಕ್ಷಾದಾತರೂ ಆದ ಅವರು ಪಾಪದಿಂದಲೂ ನಮ್ಮನ್ನು ಬಿಡುಗಡೆ ಮಾಡಲು ತಿಳಿದಿದ್ದಾರೆ.

## English Translation

These sons of Aditi know how to drive away (our) enemies; and, doers of great deeds and donors of security, (they know how to extricate us) from sin.

। ಸಂಹಿತಾಪಾಠಃ ।

ಅದಿತಿರ್ನೋ ದಿವಾ ಪಶುಮದಿತಿರ್ನಕ್ತಮದ್ವಯಾಃ ।

ಅದಿತಿಃ ಪಾತ್ವಂಹಸಃ ಸದಾವೃಧಾ ॥ ೬ ॥

॥ ಪದಪಾಠಃ ॥

ಅದಿತಿಃ । ನಃ । ದಿವಾ । ಪಶುಂ । ಅದಿತಿಃ । ನಕ್ತಂ । ಅದ್ವಯಾಃ ॥

ಅದಿತಿಃ । ಪಾತು । ಅಂಹಸಃ । ಸದಾऽವೃಧಾ ॥ ೬ ॥

॥ ಸಾಯಣಭಾಷ್ಯಂ ॥

ಸೋऽಸ್ಮಾಕಂ ಪಶುಮದಿತಿರದೀನಾಖಂಡನೀಯಾ ವಾ ದೇವಮಾತಾ ದಿವಾಹನಿ ಪಾತು । ರಕ್ಷತು । ತಥಾದ್ವಯಾ ಬಾಹ್ಯಾಭ್ಯಂತರಭೇದೇನ ಪ್ರಕಾರದ್ವಯರಹಿತಾ ಸರ್ವದೈಕಪ್ರಕಾರಾ ಕಪಟರಹಿತಾ ಸಾದಿತಿರ್ನಕ್ತಂ ರಾತ್ರೌ ಚಾಸ್ಮದೀಯಂ ಗವಾದಿಪಶುಜಾತಂ ರಕ್ಷತು । ತಥಾಸ್ಮಾನಪ್ಯಂಹಸಃ ಪಾಪಾತ್ ಪಾತು । ರಕ್ಷತು । ಕೇನ ಸಾಧನೇನ । ಸದಾವೃಧಾ ಸರ್ವದಾ ವೃದ್ಧಿಮತಾತ್ಮೀಯೇನ ರಕ್ಷಣೇನ ॥

॥ ಪ್ರತಿಪದಾರ್ಥ ॥

**ಅದಿತಿಃ**—ಅದಿತಿಯು । **ನಃ**—ನಮ್ಮ । **ಪಶುಂ**—ಪಶುಗಳನ್ನು । **ದಿವಾ**—ಅಹಸ್ಸುಗಳಲ್ಲಿಯೂ । **ಪಾತು**—ರಕ್ಷಿಸಲಿ । **ಅದ್ವಯಾಃ**—ವಂಚಕಬುದ್ಧಿಯಿಲ್ಲದಿರುವ । **ಅದಿತಿಃ**—ಅದಿತಿಯು । **ನಕ್ತಂ**—ರಾತ್ರಿಯಲ್ಲಿಯೂ (ರಕ್ಷಿಸಲಿ) । **ಅದಿತಿಃ**—ಅದೇ ಅದಿತಿಯು । **ಸದಾವೃಧಾ**—ಸರ್ವದಾ ವೃದ್ಧಿಯನ್ನುಂಟುಮಾಡುವ ರಕ್ಷಣೆಯಿಂದ । **ಅಂಹಸಃ**—ಪಾಪದಿಂದಲೂ ರಕ್ಷಿಸಲಿ.

॥ ಭಾವಾರ್ಥ ॥

ಅದಿತಿಯು ನಮ್ಮ ಪಶುಗಳನ್ನು ಅಹಸ್ಸುಗಳಲ್ಲಿಯು ರಕ್ಷಿಸಲಿ. ವಂಚಕಬುದ್ಧಿಯಿಲ್ಲದಿರುವ ಅದಿತಿಯು ರಾತ್ರಿಯಲ್ಲಿಯೂ ರಕ್ಷಿಸಲಿ. ಅದೇ ಅದಿತಿಯು ಸರ್ವದಾ ವೃದ್ಧಿಯನ್ನುಂಟುಮಾಡುವ ರಕ್ಷಣೆಗಳಿಂದ ನಮ್ಮನ್ನು ಪಾಪದಿಂದಲೂ ರಕ್ಷಿಸಲಿ,

## English Translation

May Aditi protect our cattle by day, and free from duplicity, (guard them) by night; may Aditi, by her constant favour, preserve us from sin.

॥ ಸಂಹಿತಾಪಾಠಃ ॥

ಉತ ಸ್ಯಾ ನೋ ದಿವಾ ಮತಿರದಿತಿರೂತ್ಯಾ ಗಮತ್ ।

ಸಾ ಶಂತಾತಿ ಮಯಸ್ಕರದಪ ಸ್ರಿಧಃ ॥ ೭ ॥

॥ ಪದಪಾಠಃ ॥

ಉತ । ಸ್ಯಾ । ನಃ । ದಿವಾ । ಮತಿಃ । ಅದಿತಿಃ । ಊತ್ಯಾ । ಆ । ಗಮತ್ ॥

ಸಾ । ಶಂऽತಾತಿ । ಮಯಃ । ಕರತ್ । ಅಪ । ಸ್ರಿಧಃ ॥ ೭ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಸ್ಯಾ ಸಾ ಪೂರ್ವೋಕ್ತಾ ಮತಿರ್ಮಂತ್ರೀ ಮಂತವ್ಯಾ ಸ್ತೋತವ್ಯಾ ವಾದಿತಿರೂತಾ ರಕ್ಷಯಾ ಸಾರ್ಧಂ ದಿವಾಹನಿ ನೋಽಸ್ಮಾನಾ ಗಮತ್ । ಆಗಚ್ಛತು । ಆಗತ್ಯ ಚ ಶಂತಾತಿ ಶಾಂತಿಕರಂ ಮಯಃ ಸುಖಂ ಸಾದಿತಿಃ ಕರತ್ । ಕರೋತು । ಸ್ರಿಧೋ ಬಾಧಕಾಞ್ಛತ್ರೂಂಶ್ಚಾಪಗಮಯತು ॥ ಸ್ರಿಧಿರ್ಬಾಧನಾರ್ಥಃ । ಶಿವಶಮರಿಷ್ಟಸ್ಯ ಕರೇ । ಪಾ. ೪-೪-೧೪೩. । ಇತಿ ಶಂಶಬ್ದಾತ್ಕರಣಾರ್ಥೇ ತಾತಿಲ್ಪ್ರತ್ಯಯಃ ॥

॥ ಪ್ರತಿಪದಾರ್ಥ ॥

ಉತ—ಮತ್ತು । ಸ್ಯಾ—ಪ್ರಸಿದ್ಧಳೂ । ಮತಿಃ—ಸ್ತುತಿಯೋಗ್ಯಳೂ ಆದ । ಅದಿತಿಃ—ಅದಿತಿಯು । ಊತ್ಯಾ—ರಕ್ಷಣೆಗಳೊಡಗೂಡಿ । ದಿವಾ—ಅಹಸ್ಸುಗಳಲ್ಲಿ । ನಃ— ನಮ್ಮಲ್ಲಿಗೆ । ಆ ಗಮತ್—ಬರಲಿ । ಸಾ— ಅದೇ ಅದಿತಿಯು । ಶಂತಾತಿ—ಶಾಂತಿಕರವಾದ । ಮಯಃ—ಸುಖವನ್ನು । ಕರತ್—ಉಂಟುಮಾಡಲಿ । ಸ್ರಿಧಃ—ಹಿಂಸಕರಾದ ಶತ್ರುಗಳನ್ನು । ಅಪ—ದೂರತಳ್ಳಲಿ.

॥ ಭಾವಾರ್ಥ ॥

ಪ್ರಸಿದ್ಧಳೂ ಸ್ತುತಿಯೋಗ್ಯಳೂ ಆದ ಅದಿತಿಯು ರಕ್ಷಣೆಗಳೊಡಗೂಡಿ ಅಹಸ್ಸುಗಳಲ್ಲಿ ನಮ್ಮಲ್ಲಿಗೆ ಬರಲಿ ಅದೇ ಅದಿತಿಯು ನಮಗೆ ಶಾಂತಿಕರವಾದ ಸುಖವನ್ನುಂಟುಮಾಡಲಿ. ಹಿಂಸಕರಾದ ಶತ್ರುಗಳನ್ನು ದೂರತಳ್ಳಲಿ.

## English Translation

May the monitress Aditi come to us for our protection by day: may she grant us tranquil felicity, and drive away (our) enemies.

॥ ಸಂಹಿತಾಪಾಠಃ ॥

ಉತ ತ್ಯಾ ದೈವ್ಯಾ ಭಿಷಜಾ ಶಂ ನಃ ಕರತೋ ಅಶ್ವಿನಾ ।

ಯುಯುಯಾತಾಮಿತೋ ರಪೋ ಅಪ ಸ್ರಿಧಃ ॥ ೮ ॥

। ಪದಪಾಠಃ ।

ಉತ । ತ್ಯಾ । ದೈವ್ಯಾ । ಭಿಷಜಾ । ಶಂ । ನಃ । ಕರತಃ । ಅಶ್ವಿನಾ ॥

ಯುಯುಯಾತಾಂ । ಇತಃ । ರಪಃ । ಅಪ । ಸ್ರಿಧಃ ॥ ೮ ॥

। ಸಾಯಣಭಾಷ್ಯಂ ।

ಉತಾಪಿ ಚ ತ್ಯಾ ತೌ ಪ್ರಸಿದ್ಧೌ ದೇವ್ಯಾ ದೇವೇಷು ಭವೌ ಭಿಷಜಾ ಚಿಕಿತ್ಸಕೌ ಈದೃಶಾವಶ್ವಿನಾವಶ್ವಿನೌ ನೋಽಸ್ಮಾಕಂ ಶಂ ಸುಖಂ ರೋಗಾಣಾಂ ಶಮನಂ ವಾ ಕರತಃ। ಕುರುತಾಂ। ಇತೋಽಸ್ಮತ್ತೋ ರಪಃ ಪಾಪಂ ಯುಯುಯಾತಾಂ। ಪೃಥಕ್ಕುರ್ಯಾತಾಂ। ಸ್ರಿಧಃ ಶತ್ರೂಂಶ್ಚಾಪಗಮಯತಾಂ ॥

॥ ಪ್ರತಿಪದಾರ್ಥ ॥

ಉತ—ಮತ್ತು । ತ್ಯಾ—ಪ್ರಸಿದ್ಧರೂ । ದೈವ್ಯಾ—ದೇವತೆಗಳಲ್ಲಿ ಉತ್ಪನ್ನರಾದವರೂ । ಭಿಷಜಾ—ದೇವವೈದ್ಯರೂ ಆದ । ಅಶ್ವಿನಾ—ಅಶ್ವಿನೀದೇವತೆಗಳು । ನಃ—ನಮಗೆ । ಶಂ—ರೋಗನಿವಾರಕವಾದ ಸುಖವನ್ನು । ಕರತಃ—ಉಂಟುಮಾಡುತ್ತಾರೆ । ಇತಃ—ನಮ್ಮಿಂದ । ರಪಃ—ಪಾಪವನ್ನು । ಯುಯುಯಾತಾಂ—ಬೇರೆ ಮಾಡಲಿ । ಸ್ರಿಧಃ—ಹಿಂಸಕರಾದ ಶತ್ರುಗಳನ್ನು । ಅಪ—ದೂರಕ್ಕೋಡಿಸಲಿ.

॥ ಭಾವಾರ್ಥ ॥

ಪ್ರಸಿದ್ಧರೂ, ದೇವತೆಗಳಲ್ಲಿ ಉತ್ಪನ್ನರಾದವರೂ ದೇವವೈದ್ಯರೂ ಆದ ಅಶ್ವಿನಿದೇವತೆಗಳು ನಮಗೆ ರೋಗನಿವಾರಕವಾದ ಸುಖವನ್ನು ಉಂಟುಮಾಡುತ್ತಾರೆ. ಅವರು ನಮ್ಮಿಂದ ಪಾಪವನ್ನು ಬೇರೆಮಾಡಲಿ. ಮತ್ತು ನಮ್ಮ ಹಿಂಸಕರಾದ ಶತ್ರುಗಳನ್ನು ದೂರಕ್ಕೋಡಿಸಲಿ.

## English Translation

May the two divine physicians, the Aswins, grant us health: may they drive away from hence iniquity : (may they drive) away our foes.

॥ ಸಂಹಿತಾಪಾಠಃ ॥

ಶಮಗ್ನಿರಗ್ನಿಭಿಃ ಕರಚ್ಛಂ ನಸ್ತಪತು ಸೂರ್ಯಃ ।

ಶಂ ವಾತೋ ವಾತ್ವರಪಾ ಅಪ ಸ್ರಿಧಃ ॥ ೯ ॥

॥ ಪದಪಾಠಃ ॥

ಶಂ । ಅಗ್ನಿಃ । ಅಗ್ನಿಽಭಿಃ । ಕರತ್ । ಶಂ । ನಃ । ತಪತು । ಸೂರ್ಯಃ ।

ಶಂ । ವಾತಃ । ವಾತು । ಅರಪಾಃ । ಅಪ । ಸ್ರಿಧಃ ॥ ೯ ॥

॥ ಸಾಯಣಭಾಷ್ಯಂ ॥

ಅಗ್ನಿಭಿಃ ಸ್ವವಿಭೂತ್ಯಾ ವಿಭಿನ್ನೈರ್ಗಾರ್ಹಪತ್ಯಾದಿಭಿರಗ್ನಿರ್ದೇವಃ ಶಂ ಕರತ್ । ಅಸ್ಮಾಕಂ ರೋಗಶಾಂತಿಂ ಸುಖಂ ವಾ ಕರೋತು । ಸೂರ್ಯಃ ಸರ್ವಸ್ಯ ಪ್ರೇರಕ ಆದಿತ್ಯಶ್ಚ ನೋಽಸ್ಮಾಕಂ ಶಂ ಸುಖಂ ಯಥಾ ಭವತಿ ತಥಾ ತಪತು । ಪ್ರದೀಪ್ಯತಾಂ । ವಾತೋ ವಾಯುಶ್ಚಾರಪಾ ಅಪಾಪಃ ಸನ್ ಶಂ ಯಥಾ ಭವತಿ ತಥಾ ಚ ವಾತು । ಅನುವರ್ತತಾಂ । ಸ್ರಿಧಃ ಶತ್ರೂಂಶ್ಚೈತೇಽಗ್ನ್ಯಾದಯೋಽಪಗಮಯಂತು ॥

॥ ಪ್ರತಿಪದಾರ್ಥ ॥

ಅಗ್ನಿಭಿಃ—ಗಾರ್ಹಪತ್ಯಾದಿ ತನ್ನ ವಿಭೂತಿ ವಿಶೇಷಗಳೊಡನೆ । ಅಗ್ನಿಃ—ಅಗ್ನಿದೇವನು । ಶಂ—ಸುಖವನ್ನು ಕರತ್—ನಮಗುಂಟುಮಾಡಲಿ । ಸೂರ್ಯಃ—ಸೂರ್ಯನು । ನಃ—ನಮಗೆ । ಶಂ—ಸುಖವುಂಟಾಗುವಂತೆ । ತಪತು—ಪ್ರಕಾಶಿಸಲಿ । ವಾತಃ—ವಾಯುವೂ । ಅರಪಾಃ—ಪಾಪರಹಿತನಾಗಿ । ಶಂ—ನಮಗೆ ಸುಖವುಂಟಾಗುವಂತೆ । ವಾತು—ಬೀಸಲಿ । ಸ್ರಿಧಃ—ನಮ್ಮ ಹಿಂಸಕರಾದ ಶತ್ರುಗಳನ್ನು । ಅಪ—ದೂರಕ್ಕೋಡಿಸಲಿ

॥ ಭಾವಾರ್ಥ ॥

ಗಾರ್ಹಪತ್ಯಾದಿ ತನ್ನ ವಿಭೂತಿವಿಶೇಷಗಳಾದ ಇತರ ಅಗ್ನಿಗಳೊಡನೆ ಅಗ್ನಿದೇವನು ನಮಗೆ ಸುಖವನ್ನುಂಟು ಮಾಡಲಿ. ಸೂರ್ಯನುನಮಗೆ ಸುಖವುಂಟಾಗುವಂತೆ ಪ್ರಕಾಶಿಸಲಿ. ವಾಯುವೂ ಪಾಪರಹಿತನಾಗಿ ನಮಗೆ ಸುಖವುಂಟಾಗುವಂತೆ ಬೀಸಲಿ. ನಮ್ಮ ಹಿಂಸಕರಾದ ಶತ್ರುಗಳನ್ನು ದೂರಕ್ಕೋಡಿಸಲಿ.

## English Translation

May Agni with his fires grant us happiness : may the sun beam upon us felicity : may the unoffending wind blow us happiness : (may they all drive) away our foes.

॥ ಸಂಹಿತಾಪಾಠಃ ॥

ಅಪಾಮೀವಾಮಪ ಸ್ರಿಧಮಪ ಸೇಧತ ದುರ್ಮತಿಂ ।

ಆದಿತ್ಯಾಸೋ ಯುಯೋತನಾ ನೋ ಅಂಹಸಃ ॥ ೧೦ ॥

॥ ಸಂಹಿತಾಪಾಠಃ ॥

ಯದಗ್ನೇ ಮರ್ತ್ಯಸ್ತ್ವಂ ಸ್ಯಾಮಹಂ ಮಿತ್ರಮಹೋ ಅಮರ್ತ್ಯಃ ।
ಸಹಸಃ ಸೂನವಾಹುತ ॥ ೨೫ ॥

॥ ಪದಪಾಠಃ ॥

ಯತ್ । ಅಗ್ನೇ । ಮರ್ತ್ಯಃ । ತ್ವಂ । ಸ್ಯಾಂ । ಅಹಂ । ಮಿತ್ರಽಮಹಃ । ಅಮರ್ತ್ಯಃ ।
ಸಹಸಃ । ಸೂನೋ ಇತಿ । ಆಽಹುತ ॥ ೨೫ ॥

॥ ಸಾಯಣಭಾಷ್ಯಂ ॥

ಹೇ ಸಹಸಃ ಸೂನೋ ಬಲಸ್ಯ ಪುತ್ರಾಹುತ ಘೃತೈರಭಿಹುತ ಹೇ ಮಿತ್ರಮಹೋಽನುಕೂಲದೀಪ್ತಿಮನ್ನಗ್ನೇ ಮರ್ತ್ಯೋ ಮರಣಧರ್ಮಾಹಂ ಯದ್ಯದಿ ತ್ವಂ ಸ್ಯಾಂ ತ್ವದುಪಾಸನಯಾ ತ್ವದ್ರೂಪಮಾಪನ್ನೋ ಭವೇಯಂ । ಯೋ ಯಥಾಯಥೋಪಾಸತೇ ತೇ ತದೇವ ಭವಂತೀತಿ ಶ್ರುತೇಃ । ತರ್ಹ್ಯಹಮಮರ್ತ್ಯೋ ಮರಣರಹಿತೋ ದೇವ ಏವ ಭವೇಯಮಿತಿ ॥

॥ ಪ್ರತಿಪದಾರ್ಥ ॥

ಸಹಸಃ ಸೂನೋ—ಶಕ್ತಿಪುತ್ರನೂ । ಆಹುತ—ಘೃತಾದಿಗಳಿಂದ ಪೂಜಿತನೂ । ಮಿತ್ರಮಹಃ—ಅನುಕೂಲವಾದ ಪ್ರಕಾಶವುಳ್ಳವನೂ ಆದ । ಅಗ್ನೇ—ಎಲೈ ಅಗ್ನಿಯೇ । ಯತ್—ಯಾವ ರೀತಿಯಲ್ಲಿ । ತ್ವಂ—ನೀನು । ಸ್ಯಾಂ—ಅಮರ್ತ್ಯನಾಗಿರುವೆಯೋ (ಅದೇ ರೀತಿ) । ಮರ್ತ್ಯಃ—ಮರಣಧರ್ಮವುಳ್ಳ । ಅಹಂ—ನಾನೂ ಸಹ । ಅಮರ್ತ್ಯಃ—ಮರಣಧರ್ಮರಹಿತನಾಗಿ (ಆಗುವಂತೆ ಅನುಗ್ರಹಿಸು).

॥ ಭಾವಾರ್ಥ ॥

ಶಕ್ತಿಪುತ್ರನೂ, ಘೃತಾದಿಗಳಿಂದ ಪೂಜಿತನೂ, ಅನುಕೂಲವಾದ ಪ್ರಕಾಶವುಳ್ಳವನೂ ಆದ ಎಲೈ ಅಗ್ನಿಯೇ, ಯಾವ ರೀತಿಯಲ್ಲಿ ನೀನು ಅಮರ್ತ್ಯನಾಗಿರುವೆಯೋ ಅದೇ ರೀತಿ ಮರಣಧರ್ಮವುಳ್ಳ ನಾನೂ ಸಹ ಮರಣಧರ್ಮರಹಿತನಾಗಿ ಆಗುವಂತೆ ಅನುಗ್ರಹಿಸು.

## English Translatian

Agni, son of strength, shining with friendly radiance, and worshipped with oblations, may I, who, although mortal, am as you are, become immortal.

। ಸಂಹಿತಾಪಾಠಃ ।

ನ ತ್ವಾ ರಾಸೀಯಾಭಿಶಸ್ತಯೇ ವಸೋ ನ ಪಾಪತ್ವಾಯ ಸಂತ್ಯ ।
ನ ಮೇ ಸ್ತೋತಾಮತೀವಾ ನ ದುರ್ಹಿತಃ ಸ್ಯಾದಗ್ನೇ ನ ಪಾಪಯಾ ॥ ೨೬ ॥

॥ ಪದಪಾಠಃ ॥

ನ । ತ್ವಾ । ರಾಸೀಯ । ಅಭಿಽಶಸ್ತಯೇ । ವಸೋ ಇತಿ । ನ । ಪಾಪಽತ್ವಾಯ । ಸಂತ್ಯ ।
ನ । ಮೇ । ಸ್ತೋತಾ । ಅಮತಿಽವಾ । ನ । ದುಃಽಹಿತಃ । ಸ್ಯಾತ್ । ಅಗ್ನೇ । ನ ।
ಪಾಪಯಾ ॥ ೨೬ ॥

। ಸಾಯಣಭಾಷ್ಯಂ ।

ಹೇ ವಸೋ ವಾಸಕಾಗ್ನೇ ತ್ವಾ ತ್ವಾಮಭಿಶಸ್ತಯೇಽಭಿಶಂಸನಾಯ ಮಿಥ್ಯಾಪವಾದಾಯ ಹಿಂಸಾಯೈ ಚ ನ ರಾಸೀಯ । ನಾಕ್ರೋಶಯೇಯಂ ॥ ರಾಸೃ ಶಬ್ದೇ ॥ ಹೇ ಸಂತ್ಯ ಸಂಭಜನೀಯಾಗ್ನೇ ಪಾಪತ್ವಾಯ ತ್ವಾಂ ನ ರಾಸೀಯ । ಮೇ ಮದೀಯಃ ಸ್ತೋತಾ ಚಾನಭಿಮತವಚನೇನ ತ್ವಾಂ ನಾಕ್ರೋಶಯತು । ಅತ ಏವಾಮತೀವಾ । ಅಮತಿರಶೋಭನಾ ಬುದ್ಧಿಃ । ತದ್ವಾನ್ ಅಪಿ ಚ ದುರ್ಹಿತಃ ಶತ್ರುರ್ಹೇ ಅಗ್ನೇ ಅಸ್ಮಾಕಂ ನ ಸ್ಯಾತ್ । ನ ಭವತು । ಅತ ಏವ ಪಾಪಯಾಶೋಭನಯಾ ಬುದ್ಧ್ಯಾ ಸ ನ ಬಾಧತಾಂ ॥

। ಪ್ರತಿಪದಾರ್ಥ ।

ವಸೋ—ವಸತಿದಾಯಕನಾದ ಎಲೈ ಅಗ್ನಿಯೇ । ತ್ವಾ—ನಿನ್ನನ್ನು । ಅಭಿಶಸ್ತಯೇ—ನಮಗೆ ಶಾಪ ಕೊಡುವಂತೆ । ನ ರಾಸೀಯ—ಕೋಪಗೊಳ್ಳುವ ಕಾರ್ಯವನ್ನು ಮಾಡಲಾರೆ । ಸಂತ್ಯ—ಪೂಜ್ಯನಾದ ಎಲೈ ಅಗ್ನಿಯೇ ಪಾಪತ್ವಾಯ—ನಿನ್ನ ವಿಷಯದಲ್ಲಿ ಪಾಪವನ್ನಾಚರಿಸುವ ಕಾರ್ಯವನ್ನು । ನ—ಮಾಡಲಾರೆ । ಮೇ—ನನ್ನ । ಸ್ತೋತಾ—ಸ್ತೋತೃವು (ನಿನ್ನನ್ನು) । ನ—ಕೋಪಗೊಳ್ಳುವಂತೆ ಮಾಡಲಾರನು । ಅಗ್ನೇ—ಎಲೈ ಅಗ್ನಿಯೇ । ಅಮತೀವಾ—ದುಷ್ಟಬುದ್ಧಿಯುಳ್ಳ । ದುರ್ಹಿತಃ—ಶತ್ರುವು । ನ ಸ್ಯಾತ್—ಸಂಭವಿಸದಂತೆ ಆಗಲಿ । ಪಾಪಯಾ-ಪಾಪಬುದ್ಧಿಯಿಂದ । ನ—ನಮ್ಮನ್ನು ಹಿಂಸಿಸದಂತೆ ಆಗಲಿ.

। ಭಾವಾರ್ಥ ।

ವಸತಿದಾಯಕನಾದ ಎಲೈ ಅಗ್ನಿಯೇ, ನಮಗೆ ಶಾಪಕೊಡುವಂತೆ ನೀನು ಕೋಪಗೊಳ್ಳುವ ಕಾರ್ಯವನ್ನು

ನಾನು ಮಾಡಲಾರೆನು. ಪೂಜ್ಯನಾದ ಎಲೈ ಅಗ್ನಿಯೇ, ನಿನ್ನ ವಿಷಯದಲ್ಲಿ ಪಾಪವನ್ನಾಚರಿಸುವ ಕಾರ್ಯವನ್ನು ಮಾಡಲಾರೆನು. ನನ್ನ ಸ್ತೋತೃವೂ ಸಹ ನಿನ್ನನ್ನು ಕ್ರುದ್ಧನಾಗುವಂತೆ ಮಾಡನು. ಎಲೈ ಅಗ್ನಿಯೇ, ದುಷ್ಟಬುದ್ಧಿಯುಳ್ಳ ಶತ್ರುವು ನಮಗೆ ಸಂಭವಿಸದಂತೆ ಆಗಲಿ. ಪಾಪಬುದ್ಧಿಯಿಂದ ನಮ್ಮನ್ನು ಹಿಂಸಿಸದಿರಲಿ.

## English Translation

May I not be accused, Vasu, of calumniating you, nor, gracious (Agni), of sinfulness (against you); let not (the priest) the reciter of my praises be dull of intellect or ill-disposed; (may he not err). Agni, through wickedness.

॥ ಸಂಹಿತಾಪಾಠಃ ॥

ಪಿತುರ್ನ ಪುತ್ರಃ ಸುಭೃತೋ ದುರೋಣ ಆ ದೇವಾಁ ಏತು ಪ್ರ ಣೋ
ಹವಿಃ ॥ ೨೭ ॥

॥ ಪದಪಾಠಃ ॥

ಪಿತುಃ । ನ । ಪುತ್ರಃ । ಸುಽಭೃತಃ । ದುರೋಣೇ । ಆ । ದೇವಾನ್ । ಏತು । ಪ್ರ । ನಃ ।
ಹವಿಃ ॥ ೨೭ ॥

॥ ಸಾಯಣಭಾಷ್ಯಂ ॥

ಪಿತುರ್ನ ಪುತ್ರಃ ಪಿತುಃ ಪುತ್ರ ಇವಾಸ್ಮಾಕಂ ಸುಭೃತಃ ಸುಷ್ಠು ಭರ್ತಾ । ಯದ್ವಾ । ಪಿತ್ರಾ ಪುತ್ರ ಇವಾಸ್ಮಾಭಿಃ ಸಮ್ಯಗ್ಭೃತೋ ಹವಿರ್ಭಿಃ ಪೋಷಿತಃ । ಅಯಮಗ್ನಿಃ ಪುತ್ರ ಇವಾಸ್ಮಾಕಂ ಸುಭೃತೋ ದುರೋಣೇ ಯಜ್ಞಗೃಹೇ ದೇವಾನಾಮಭಿಲಕ್ಷ್ಯ ನೋಽಸ್ಮಾಕಂ ಹವಿಃ ಪ್ರೈತು । ಪ್ರಗಮಯತು । ಯದ್ವಾ । ಅಗ್ನೇರೈತು । ಆಗಚ್ಛತು । ಅಸ್ಮದೀಯಂ ಹವಿಶ್ಚ ದೇವಾನ್ ಪ್ರಾಪ್ನೋತು ॥

॥ ಪ್ರತಿಪದಾರ್ಥ ॥

ಪಿತುಃ—ತಂದೆಯಿಂದ । ಪುತ್ರಃ ನ—ಪುತ್ರನು ಪೋಷಿಸಲ್ಪಡುವಂತೆ । ಸುಭೃತಃ—ನಮ್ಮಿಂದ ಆದರಪೂರ್ವಕವಾಗಿ ಬೆಳೆಸಲ್ಪಟ್ಟ ಅಗ್ನಿಯು । ದುರೋಣೇ—ಯಜ್ಞಗೃಹದಲ್ಲಿ । ದೇವಾನ್ ಆ—ದೇವತೆಗಳಿಗಭಿಮುಖವಾಗಿ । ನಃ—ನಮ್ಮ । ಹವಿಃ—ಹವಿಸ್ಸನ್ನು । ಪ್ರ ಏತು—ತೆಗೆದುಕೊಂಡು ಹೋಗಿ ಅರ್ಪಿಸಲಿ.

॥ ಭಾವಾರ್ಥ ॥

ತಂದೆಯಿಂದ ಪುತ್ರನು ಪೋಷಿಸಲ್ಪಡುವಂತೆ, ನಮ್ಮಿಂದ ಆದರಪೂರ್ವಕವಾಗಿ ಬೆಳೆಸಲ್ಪಟ್ಟ ಅಗ್ನಿಯು, ಯಜ್ಞಗೃಹದಲ್ಲಿ ದೇವತೆಗಳಿಗಭಿಮುಖನಾಗಿ ನಮ್ಮ ಹವಿಸ್ಸನ್ನು ತೆಗೆದುಕೊಂಡು ಹೋಗಿ ಅರ್ಪಿಸಲಿ.

## English Translation

Cherished by us as a son by a father, let him (Agni) in our dwelling convey promptly our oblation to the gods.

॥ ವಿಶೇಷವಿಷಯಗಳು ॥

ದೇವಾನ್ ಪ್ರ ವಿತು—ಎನ್ನುವುದಕ್ಕೆ, ಅಗ್ನಿಯು ದೇವತೆಗಳನ್ನು ನಮ್ಮ ಹವಿಸ್ಸಿಗಭಿಮುಖವಾಗಿ ಕರೆತರಲಿ ಎಂದೂ ಒಂದರ್ಥವನ್ನು ಹೇಳಬಹುದು.

॥ ಸಂಹಿತಾಪಾಠಃ ॥

ತವಾಹಮಗ್ನ ಊತಿಭಿರ್ನೇದಿಷ್ಠಾಭಿಃ ಸಚೇಯ ಜೋಷಮಾ
ವಸೋ ।
ಸದಾ ದೇವಸ್ಯ ಮರ್ತ್ಯಃ ॥ ೨೮ ॥

॥ ಪದಪಾಠಃ ॥

ತವ । ಅಹಂ । ಅಗ್ನೇ । ಊತಿಽಭಿಃ । ನೇದಿಷ್ಠಾಭಿಃ । ಸಚೇಯ । ಜೋಷಂ । ಆ ।
ವಸೋ ಇತಿ ।
ಸದಾ । ದೇವಸ್ಯ । ಮರ್ತ್ಯಃ ॥ ೨೮ ॥

॥ ಸಾಯಣಭಾಷ್ಯಂ ॥

ಹೇ ವಸೋ ವಾಸಕಾಗ್ನೇ ನೇದಿಷ್ಠಾಭಿರಂತಿಕತಮಾಭಿರ್ಋಜುಗಾಮಿನೀಭಿರ್ವಾ ದೇವಸ್ಯ ತವೋತಿಭೀ ರಕ್ಷಾಭಿರ್ಮರ್ತ್ಯೋ ಮನುಷ್ಯೋಽಹಂ ಸ್ತೋತಾ ಸದಾ ಸರ್ವದಾ ಜೋಷಮಾ ಸಚೇಯ । ಪ್ರೀತಿಮಭಿಸೇವೇಯ ॥

॥ ಪ್ರತಿಪದಾರ್ಥ ॥

ವಸೋ—ವಸತಿದಾಯಕನಾದ । ಅಗ್ನೇ—ಎಲೈ ಅಗ್ನಿಯೇ । ದೇವಸ್ಯ—ದೇವತಾತ್ಮನಾದ । ತವ—ನಿನ್ನ । ನೇದಿಷ್ಠಾಭಿಃ—ನಮಗೆ ಅತ್ಯಂತ ಸಮೀಪವಾಗಿಯೇ ಇರುವ । ಊತಿಭಿಃ–ರಕ್ಷಣೆಗಳೊಡನೆ । ಮರ್ತ್ಯಃ—ಮಾನವನಾದ । ಅಹಂ—ನಾನು । ಸದಾ—ಯಾವಾಗಲೂ । ಜೋಷಂ—ನಿನ್ನ ಪ್ರೀತಿಯನ್ನು । ಆ ಸಚೇಯ—ಅನುಭವಿಸುವಂತಾಗಲಿ.

॥ ಭಾವಾರ್ಥ ॥

ವಸತಿದಾಯಕನಾದ ಎಲೈ ಅಗ್ನಿಯೇ, ದೇವತಾತ್ಮನಾದ ನಿನ್ನ, ನಮಗೆ ಅತ್ಯಂತ ಸಮೀಪದಲ್ಲಿಯೇ ಇರುವ ರಕ್ಷಣೆಗಳೊಡನೆ, ಮಾನವನಾದ ನಾನು ಯಾವಾಗಲೂ ನಿನ್ನ ಪ್ರೀತಿಯನ್ನು ಅನುಭವಿಸುವಂತಾಗಲಿ.

## English Translation

Agni, granter of dwellings, may I, who am mortal, ever enjoy pleasure through your proximate protections.

॥ ಸಂಹಿತಾಪಾಠಃ ॥

ತವ ಕ್ರತ್ವಾ ಸನೇಯಂ ತವ ರಾತಿಭಿರಗ್ನೇ ತವ ಪ್ರಶಸ್ತಿಭಿಃ ।
ತ್ವಾಮಿದಾಹುಃ ಪ್ರಮತಿಂ ವಸೋ ಮಮಾಗ್ನೇ ಹರ್ಷಸ್ವ ದಾತವೇ ॥ ೨೯ ॥

॥ ಪದಪಾಠಃ ॥

ತವ । ಕ್ರತ್ವಾ । ಸನೇಯಂ । ತವ । ರಾತಿಽಭಿಃ । ಅಗ್ನೇ । ತವ । ಪ್ರಶಸ್ತಿಽಭಿಃ ।
ತ್ವಾಂ । ಇತ್ । ಆಹುಃ । ಪ್ರಽಮತಿಂ । ವಸೋ ಇತಿ । ಮ । ಅಗ್ನೇ । ಹರ್ಷಸ್ವ ।
ದಾತವೇ । ೨೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತವ ಕ್ರತ್ವಾ ತ್ವದೀಯೇನ ಪರಿಚರಣರೂಪೇಣ ಕರ್ಮಣಾ ಸನೇಯಂ । ತ್ವಾಂ ಸಂಭಜೇಯಂ । ಏತದೇವ ವಿಶದಯತಿ । ತವ ರಾತಿಭಿಸ್ತ್ವದೀಯೈರ್ಹವಿರ್ದಾನೈಶ್ಚ ಸನೇಯಂ । ತಥಾ ತವ ಪ್ರಶಸ್ತಿಭಿಃ ಪ್ರಶಂಸನೈಃ ಸ್ತೋತ್ರೈಶ್ಚ ತ್ವಾಂ ಸಂಭಜೇಯಂ । ಅಸ್ಯೈವ ಸಂಭಜನೇ ಕಿಂ ಕಾರಣಂ ತದಾಹ । ಹೇ ವಸೋ ವಾಸಕಾಗ್ನೇ ಮಮ ಸ್ತೋತುಃ ಪ್ರಮತಿಂ ಪ್ರಕೃಷ್ಟಬುದ್ಧಿಂ ರಕ್ಷಕಂ ತ್ವಾಮಿತ್ತ್ವಾಮೇವಾಹುಃ । ಬ್ರಹ್ಮವಾದಿನಃ ಕಥಯಂತಿ । ಅತೋ ಹೇ ಅಗ್ನೇ ದಾತವೇ ದಾತುಂ ಹರ್ಷಸ್ವ । ಹೃಷ್ಟೋ ಭವ । ಹರ್ಷಯುಕ್ತಃ ಸನ್ ಬಹು ಧನಂ ಪ್ರಯಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ತವ—ನಿನ್ನನ್ನು । ಕ್ರತ್ವಾ—ಉಪಚಾರಕರ್ಮಗಳಿಂದ । ಸನೇಯಂ—

ಪೂಜಿಸುವೆನು । ತವ—ನಿನ್ನನ್ನು । ರಾತಿಭಿಃ—ಹವಿರ್ದಾನಗಳಿಂದಲೂ ಪೂಜಿಸುವೆನು । ತವ—ನಿನ್ನನ್ನು । ಪ್ರಶಸ್ತಿಭಿಃ—ಉತ್ತಮವಾದ ಸ್ತುತಿಗಳಿಂದ (ಪೂಜಿಸುವೆನು) । ವಸೋ—ವಸತಿದಾಯಕನಾದ ಎಲೈ ಅಗ್ನಿಯೇ । ಮಮ—ಸ್ತೋತೃವಾದ ನನ್ನ । ಪ್ರಮತಿಂ—ಉತ್ತಮಬುದ್ಧಿಯುಳ್ಳ ರಕ್ಷಕನಾದ । ತ್ವಾಂ ಇತ್—ನಿನ್ನನ್ನೇ । ಆಹುಃ—ಬ್ರಹ್ಮವಾದಿಗಳೂ ಪ್ರಶಂಸಿಸುತ್ತಾರೆ । ಅಗ್ನೇ—ಎಲೈ ಅಗ್ನಿಯೇ । ದಾತವೇ—ನಮಗೆ ಧನವನ್ನು ಒದಗಿಸಲು । ಹರ್ಯಸ್ವ—ಹರ್ಷಯುಕ್ತನಾಗು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನನ್ನು ಉಪಚಾರಕರ್ಮಗಳಿಂದ ಪೂಜಿಸುತ್ತೇನೆ. ನಿನ್ನನ್ನು ಹವಿರ್ದಾನಗಳಿಂದಲೂ ಪೂಜಿಸುವೆನು. ನಿನ್ನನ್ನು ಉತ್ತಮವಾದ ಸ್ತುತಿಗಳಿಂದಲೂ ಪೂಜಿಸುವೆನು. ವಸತಿದಾಯಕನಾದ ಎಲೈ ಅಗ್ನಿಯೇ, ಸ್ತೋತೃವಾದ ನನಗೆ ಉತ್ತಮವಾದ ರಕ್ಷಕನಾದ ನಿನ್ನನ್ನೇ ಬ್ರಹ್ಮವಾದಿಗಳೂ ಪ್ರಶಂಸಿಸುತ್ತಾರೆ. ಎಲೈ ಅಗ್ನಿಯೇ ನನಗೆ ಧನವನ್ನೊದಗಿಸಲು ಹರ್ಷಯುಕ್ತನಾಗು.

## English Translation

May I propitiate you, Agni by worshipping you, by the gifts presented to you, by your praises: verily, Vasu, they have called you the benevolent-minded: delight, Agni, to give me wealth,

॥ ಸಂಹಿತಾಪಾಠಃ ॥

ಪ್ರ ಸೋ ಅಗ್ನೇ ತವೋತಿಭಿಃ ಸುವೀರಾಭಿಸ್ತಿರತೇ ವಾಜ-
ಭರ್ಮಭಿಃ ।
ಯಸ್ಯ ತ್ವಂ ಸಖ್ಯಮಾವರಃ ॥ ೩೦ ॥

॥ ಪದಪಾಠಃ ॥

ಪ್ರ । ಸಃ । ಅಗ್ನೇ । ತವ । ಊತಿಽಭಿಃ । ಸುಽವೀರಾಭಿಃ । ತಿರತೇ । ವಾಜಭರ್ಮಽಭಿಃ ।
ಯಸ್ಯ । ತ್ವಂ । ಸಖ್ಯಂ । ಆಽವರಃ ॥ ೩೦ ॥

॥ ಸಾಯಣಭಾಷ್ಯಂ ॥

ಪೂರ್ವೋಕ್ತ ಏವ ಪ್ರಶಾಸ್ತುಃ ಶಸ್ತ್ರೇ ಪ್ರ ಸ ಇತಿ ಪ್ರಗಾಥೋ ವೈಕಲ್ಪಿಕೋಽನುರೂಪಃ । ಸೂತ್ರ್ಯತೇ ಹಿ । ಪ್ರ ಸೋ ಅಗ್ನೇ ತವೋತಿಭಿರಗ್ನಿಂ ವೋ ವೃಧಂತಂ । ೭-೮. । ಇತಿ ॥

ಹೇ ಅಗ್ನೇ ತವೋತಿಭೀ ರಕ್ಷಾಭಿಃ ಸ ಯಜಮಾನಃ ಪ್ರ ತಿರತೇ । ಪ್ರವರ್ಧತೇ ಊತಯೋ

ವಿಶೇಷ್ಯಂತೇ । ಸುವೀರಾಭಿಃ । ಶೋಭನಾ ವೀರಾಃ ಪುತ್ರಾದಯೋ ಯಾಸು ತಾಸ್ತಥೋಕ್ತಾಃ । ವಾಜಭ-ರ್ಮಭಿಃ । ವಾಜಾನಾಮನ್ನಾನಾಂ ಬಲಾನಾಂ ವಾ ಭರ್ಮ ಭರಣಂ ಯಾಸು ತಾದೃಶೀಭಿಃ । ಹೇ ಅಗ್ನೇ ತ್ವಂ ಯಸ್ಯ ಯಜಮಾನಸ್ಯ ಸಖ್ಯಂ ಸಖಿತ್ವಂ ಮಿತ್ರತ್ವಮಾವರಃ ಅಭಿವೃಣೋಷಿ ಸ ತಿರತ ಇತ್ಯನ್ವಯಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಯಸ್ಯ—ಯಾವ ಯಜಮಾನನ । ಸಖ್ಯಂ—ಮಿತ್ರತ್ವವನ್ನು । ಆವರಃ—ಹೊಂದಿರುವೆಯೋ । ಸಃ—ಅದೇ ಯಜಮಾನನು । ಸುವೀರಾಭಿಃ—ಉತ್ತಮವಾದ ವೀರಪುತ್ರಪ್ರದ ವಾದವೂ । ವಾಜಭರ್ಮಭಿಃ—ಶಕ್ತಿವರ್ಧಕವಾದವೂ ಆದ । ತವ ಊತಿಭಿಃ—ನಿನ್ನ ರಕ್ಷಣೆಗಳಿಂದ ಕೂಡಿ । ಪ್ರ ತಿರತೇ—ವೃದ್ಧಿಯನ್ನು ಹೊಂದುತ್ತಾನೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಯಾವ ಯಜಮಾನನ ಮಿತ್ರತ್ವವನ್ನು ಹೊಂದಿರುವೆಯೋ, ಆ ಯಜಮಾನನು ಉತ್ತಮವಾದ ವೀರಪುತ್ರಪ್ರದವಾದವೂ, ಶಕ್ತಿವರ್ಧಕವಾದವೂ ಆದ ನಿನ್ನ ರಕ್ಷಣೆಗಳಿಂದ ಕೂಡಿ ವೃದ್ಧಿಯನ್ನು ಹೊಂದುತ್ತಾನೆ.

English Translation

He, Agni, whose friendship you accept,. prospers through your favours granting male progeny and ample food.

॥ ವಿಶೇಷವಿಷಯಗಳು ॥

ಹಿಂದೆ ಹೇಳಿದ ಯಾಗಗಳಲ್ಲಿ (ಉಕ್ಥ್ಯಯಾಗಗಳಲ್ಲಿ) ಪ್ರಶಾಸ್ತೃವೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರ ಗಳಲ್ಲಿ ಪ್ರ ಸಃ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ವೈಕಲ್ಪಿಕಾನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಪ್ರ ಸೋ ಅಗ್ನೇ ತವೋತಿಭಿಃ ಸುವೀರಾಭಿಸ್ತಿರತೇ ವಾಜಭರ್ಮಭಿಃ ಎಂಬ ಸೂತ್ರದಿಂದ (೮. ೭-೮) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ತವ ದ್ರಪ್ಸೋ ನೀಲವಾನ್ವಾಶ ಋತ್ವಿಯ ಇಂಧಾನಃ ಸಿಷ್ಣವಾ ದದೇ ।

ತ್ವಂ ಮಹೀನಾಮುಷಸಾಮಸಿ ಪ್ರಿಯಃ ಕ್ಷಪೋ ವಸ್ತುಷು ರಾಜಸಿ ॥ ೩೧ ॥

॥ ಪದಪಾಠಃ ॥

ತವ । ದ್ರಪ್ಸಃ । ನೀಲ್ऽವಾನ್ । ವಾಶಃ । ಋತ್ವಿಯಃ । ಇಂಧಾನಃ । ಸಿಷ್ಣೋ ಇತಿ । ಆ । ದದೇ ।

ತ್ವಂ । ಮಹೀನಾಂ । ಉಷಸಾಂ । ಅಸಿ । ಪ್ರಿಯಃ । ಕ್ಷಪಃ । ವಸ್ತುಷು । ರಾಜಸಿ ॥ ೩೧ ॥

॥ ಸಾಯಣಭಾಷ್ಯಂ ॥

ಹೇ ಸಿಷ್ಣೋ ॥ ಷಿಞ್ ಸೇಚನಾರ್ಥಃ ॥ ಸೋಮೇನಾಸಿಚ್ಯಮಾನಾಗ್ನೇ ದ್ರಪ್ಸೋ ದ್ರವಣಶೀಲೋ ನೀಲವಾನ್ ಶಕಟನೀಡೇಽವಸ್ಥಾನಾತ್ ತದ್ವಾನ್ ವಾಶಃ ಕಾಂತಃ ಶಬ್ದಾಯಮಾನೋ ವಾ ಋತ್ವಿಯ ಋತೌ ವಸಂತಾದಿಕಾಲವಿಶೇಷೇ ಭವ ಇಂಧಾನಃ ಸಂದೀಪಯನ್ ಏವಂಭೂತಸ್ತವ ಸೋಮ ಆ ದದೇ। ತುಭ್ಯಂ ಹೋಮಾಯಾಧ್ವರ್ಯುಣಾದೀಯತೇ । ಅಪಿ ಚ ತ್ವಂ ಮಹೀನಾಂ ಮಹತೀನಾಮುಷಸಾಂ ಪ್ರಿಯೋ ಮಿತ್ರಭೂತೋಽಸಿ । ಉಷಸಿ ಹ್ಯಗ್ನಯೋ ಹೋಮಾಯ ಪ್ರಜ್ವಾಲ್ಯಂತೇ । ತಥಾ ಕ್ಷಪಃ ಕ್ಷಪಾಯಾ ರಾತ್ರೇಃ ಸಂಬಂಧಿಷು ವಸ್ತುಷು ರಾಜಸಿ । ಪ್ರಕಾಶಸೇ । ಯದ್ವಾ । ರಾತ್ರಿಸಂಬಂಧೀನಿ ವಸ್ತೂನಿ ಪದಾರ್ಥಜಾತಾನಿ ತ್ವಂ ಪ್ರಕಾಶಯಸಿ ॥

॥ ಪ್ರತಿಪದಾರ್ಥ ॥

ಸಿಷ್ಣೋ—ಸೋಮದಿಂದ ಸಿಕ್ತನಾಗುವ ಎಲೈ ಅಗ್ನಿಯೇ । ದ್ರಪ್ಸಃ—ಸ್ರವಿಸತಕ್ಕದ್ದೂ । ನೀಲವಾನ್—ಶಕಟದಲ್ಲಿ ವಹಿಸಲ್ಪಡುವುದೂ । ವಾಶಃ—ಕಾಂತಿಯುತವಾದುದೂ । ಋತ್ವಿಯಃ—ವಸಂತಾದಿಋತುಗಳಲ್ಲಿ ಅರ್ಪಿತವಾಗುವುದೂ । ಇಂಧಾನಃ—ನಿನ್ನನ್ನು ಪ್ರಜ್ವಲಿತನನ್ನಾಗಿ ಮಾಡುವುದೂ ಆದ ಸೋಮವು । ತವ—ನಿನಗೋಸ್ಕರ । ಆ ದದೇ—ತರಲ್ಪಡುತ್ತದೆ । ತ್ವಂ—ನೀನು । ಮಹೀನಾಂ—ಮಹತ್ತಾದ । ಉಷಸಾಂ—ಉಷಸ್ಸುಗಳಿಗೆಲ್ಲಾ । ಪ್ರಿಯಃ—ಪ್ರಿಯಕರನಾಗಿ । ಅಸಿ—ಆಗಿದ್ದೀಯೆ । ಕ್ಷಪಃ—ರಾತ್ರಿಗೆ ಸಂಬಂಧಿಸಿದ । ವಸ್ತುಷು—ವಸ್ತುಗಳಲ್ಲಿ । ರಾಜಸಿ—ಪ್ರಕಾಶಿಸುತ್ತೀಯೆ.

॥ ಭಾವಾರ್ಥ ॥

ಸೋಮದಿಂದ ಸೇಕಿಸಲ್ಪಡುವ ಎಲೈ ಅಗ್ನಿಯೇ, ಸ್ರವಿಸತಕ್ಕದ್ದೂ, ಶಕಟದಲ್ಲಿ ವಹಿಸಲ್ಪಡುವುದೂ, ಕಾಂತಿಯುತವಾದುದೂ, ವಸಂತಾದಿ ಋತುಗಳಲ್ಲಿ ಅರ್ಪಿತವಾಗುವುದೂ, ನಿನ್ನನ್ನು ಪ್ರಜ್ವಲಿತನನ್ನಾಗಿ ಮಾಡುವುದೂ ಆದ ಸೋಮವು ನಿನಗಾಗಿ ತರಲ್ಪಡುತ್ತದೆ. ನೀನು ಮಹತ್ತಾದ ಉಷಸ್ಸುಗಳಿಗೆಲ್ಲಾ ಪ್ರಿಯಕರನಾಗಿ ಆಗಿದ್ದೀಯೆ. ರಾತ್ರಿಗೆ ಸಂಬಂಧಿಸಿದ ವಸ್ತುಗಳಲ್ಲೆಲ್ಲಾ ಪ್ರಕಾಶಿಸುತ್ತೀಯೆ.

## English Translation

Sprinkled, (Agni, with the libation), the dripping (juices), car-borne, agreeable, offered in due season, resplendent, have been presented

to you; you are the beloved of the mighty dawns; you reign over the things of night.

। ಸಂಹಿತಾಪಾಠಃ ।

ತಮಾಗನ್ಮ ಸೋಭರಯಃ ಸಹಸ್ರಮುಷ್ಕಂ ಸ್ವಭಿಷ್ಟಿಮವಸೇ ।
ಸಮ್ರಾಜಂ ತ್ರಾಸದಸ್ಯವಂ ॥ ೩೨ ॥

। ಪದಪಾಠಃ ।

ತಂ । ಆ । ಅಗನ್ಮ । ಸೋಭರಯಃ । ಸಹಸ್ರಽಮುಷ್ಕಂ । ಸುಽಅಭಿಷ್ಟಿಂ । ಅವಸೇ ।
ಸಂಽರಾಜಂ । ತ್ರಾಸದಸ್ಯವಂ ॥ ೩೨ ॥

। ಸಾಯಣಭಾಷ್ಯಂ ।

ಸೋಭರಯಃ ಋಷಯೋ ವಯಮವಸೇ ರಕ್ಷಣಾಯ ತಮಗ್ನಿಮಾಗನ್ಮ । ಹವಿರ್ಭಿಃ ಸ್ತುತಿಭಿಶ್ಚ ಪ್ರಾಪ್ತಾ ಅಭೂಮ । ಕೀದೃಶಂ । ಸಹಸ್ರಮುಷ್ಕಂ । ಮುಷ್ಣಂತಿ ತಮಾಂಸ್ಯಪಹರಂತೀತಿ ಮುಷ್ಕಾಣಿ ತೇಜಾಂಸಿ । ಬಹುತೇಜಸ್ಕಂ ಸ್ವಭಿಷ್ಟಿಂ ಶೋಭನಾಭ್ಯೇಷಣಂ ಸಮ್ರಾಜಂ ಸಮ್ಯಗ್ರಾಜಮಾನಂ ತ್ರಾಸದಸ್ಯವಂ । ತ್ರಸದಸ್ಯುರ್ನಾಮ ರಾಜರ್ಷಿಃ । ತಸ್ಯ ಸ್ತೋತೃತ್ವೇನ ಸಂಬಂಧಿನಂ ॥

॥ ಪ್ರತಿಪದಾರ್ಥ ॥

**ಸೋಭರಯಃ**—ಸೋಭರಿನಾಮಕರಾದ ನಾವು । **ಸಹಸ್ರಮುಷ್ಕಂ**—ತಮೋನಿವಾರಕವಾದ ಅನೇಕ ವಿಧವಾದ ತೇಜಸ್ಸುಳ್ಳವನೂ । **ಸ್ವಭಿಷ್ಟಿಂ**—ಉತ್ತಮವಾಗಿ ಪೂಜಿಸಲ್ಪಡುವವನೂ । **ಸಮ್ರಾಜಂ**—ಅಧಿಕವಾಗಿ ಪ್ರಕಾಶಿಸುವವನೂ । **ತ್ರಾಸದಸ್ಯವಂ**—ತ್ರಸದಸ್ಯುವಿನ ಮಿತ್ರನೂ ಆದ । **ತಂ**—ಅದೇ ಅಗ್ನಿಯನ್ನು । **ಅವಸೇ**—ರಕ್ಷಣಾರ್ಥವಾಗಿ । **ಆ ಅಗನ್ಮ**—ಸ್ತುತಿಗಳೊಡನೆ ಸಮಾಪಿಸುತ್ತೇವೆ.

। ಭಾವಾರ್ಥ ।

ಸೋಭರಿನಾಮಕರಾದ ನಾವು ತಮೋನಿವಾರಕವಾದ ಅನೇಕ ವಿಧವಾದ ತೇಜಸ್ಸುಳ್ಳವನೂ, ಉತ್ತಮವಾಗಿ ಪೂಜಿಸಲ್ಪಡುವವನೂ, ಅಧಿಕವಾಗಿ ಪ್ರಕಾಶಿಸುವವನೂ, ತ್ರಸದಸ್ಯುವಿನ ಮಿತ್ರನೂ ಆದ ಅದೇ ಅಗ್ನಿಯನ್ನು ರಕ್ಷಣಾರ್ಥವಾಗಿ ಸ್ತುತಿಗಳೊಡನೆ ಸಮಾಪಿಸುತ್ತೇವೆ.

## English Translation

We, the Sobharis, have come to the thousand-rayed, the sincerely worshipped, the universal sovereign, the ally of Trasadasyu, of his protection

॥ ಸಂಹಿತಾಪಾಠಃ ॥

ಯಸ್ಯ ತೇ ಅಗ್ನೇ ಅನ್ಯೇ ಅಗ್ನಯ ಉಪಕ್ಷಿತೋ ವಯಾಇವ ।
ವಿಪೋ ನ ದ್ಯುಮ್ನಾ ನಿ ಯುವೇ ಜನಾನಾಂ ತವ ಕ್ಷತ್ರಾಣಿ
ವರ್ಧಯನ್ ॥ ೩೩ ॥

॥ ಪದಪಾಠಃ ॥

ಯಸ್ಯ । ತೇ । ಅಗ್ನೇ । ಅನ್ಯೇ । ಅಗ್ನಯಃ । ಉಪಽಕ್ಷಿತಃ । ವಯಾಃಽಇವ ।
ವಿಪಃ । ನ । ದ್ಯುಮ್ನಾ । ನಿ । ಯುವೇ । ಜನಾನಾಂ । ತವ । ಕ್ಷತ್ರಾಣಿ । ವರ್ಧಯನ್ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯಸ್ಯ ತೇ ತವಾನ್ಯೇಽಗ್ನಯೋ ವಯಾ ಇವ ವೃಕ್ಷಸ್ಯ ಶಾಖಾ ಇವೋಪಕ್ಷಿತಃ ಉಪಿಕ್ಷಿತಃ ಉಪನಿಷ್ಠಾಃ ಉಪಕ್ಷಿತಃ ಉಪನಿಷಣ್ಣಾಃ ಭವಂತಿ — ಪನಿಷಣ್ಣಾಃ ನಿವಸಂತೋ ಭವಂತಿ ಜನಾನಾಂ ಜನಿಮತಾಂ ಮನುಷ್ಯಾಣಾಂ ಮಧ್ಯೇಽಹಂ ತಸ್ಯ ತವ ಕ್ಷತ್ರಾಣಿ ಬಲಾನಿ ಸ್ತುತ್ಯಾ ವರ್ಧಯನ್ ವಿಪೋ ನ । ಸ್ತೋತೄಣಾಮನ್ಯತತ್ । ಅನ್ಯೇ ಸ್ತೋತಾರ ಇವ ದ್ಯುಮ್ನಾ ದ್ಯೋತಮಾನಾನ್ಯನ್ನಾನಿ ಯಶಾಂಸಿ ವಾ ನಿ ಯುವೇ । ನಿತರಾಂ ಪ್ರಾಪ್ನೋಮಿ । ತ್ವತ್ಪ್ರಸಾದಾಲ್ಲಭೇಯೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಯಸ್ಯ—ಯಾವ । ತೇ—ನಿನ್ನಲ್ಲಿಯೇ ಇರುವ । ಅನ್ಯೇ ಅಗ್ನಯಃ—ನಿನ್ನ ವಿಭೂತಿವಿಶೇಷಗಳಾದ ಇತರ ಅಗ್ನಿಗಳೂ । ವಯಾ ಇವ—ವೃಕ್ಷದ ಕೊಂಬೆಗಳಂತೆ । ಉಪಕ್ಷಿತಃ—ನಿನ್ನನ್ನೇ ಆಶ್ರಯಿಸಿವೆಯೋ । ತವ—ಅಂತಹ ನಿನ್ನ । ಕ್ಷತ್ರಾಣಿ—ಶಕ್ತಿವಿಶೇಷಗಳನ್ನು । ಜನಾನಾಂ—ಮಾನವರ ನಡುವೆ ನಾನು । ವರ್ಧಯನ್—ಬೆಳಸುತ್ತಾ । ವಿಪೋ ನ—ಇತರ ಸ್ತುತಿಕರ್ತರಂತೆಯೇ । ದ್ಯುಮ್ನಾ—ಪ್ರಕಾಶಮಾನವಾದ ಅನ್ನಗಳನ್ನು । ನಿ ಯುವೇ—ಅಧಿಕವಾಗಿ ಹೊಂದುವಂತಾಗಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನಲ್ಲಿಯೇ, ಇರುವ ನಿನ್ನ ವಿಭೂತಿವಿಶೇಷಗಳಾದ ಯಾವ ಇತರ ಅಗ್ನಿಗಳೂ, ವೃಕ್ಷದ ಕೊಂಬೆಗಳಂತೆ ನಿನ್ನನ್ನೇ ಆಶ್ರಯಿಸಿವೆಯೋ ಅಂತಹ ನಿನ್ನ ಶಕ್ತಿವಿಶೇಷಗಳನ್ನು ಮಾನವರ ನಡುವೆ ನಾನು ಬೆಳಸುತ್ತಾ ಇತರ ಸ್ತುತಿಕರ್ತರಂತೆಯೇ, ಪ್ರಕಾಶಮಾನವಾದ ಅನ್ನಗಳನ್ನು ಅಧಿಕವಾಗಿ ಹೊಂದುವಂತಾಗಲಿ.

## English Translation

Agni, on whom your other fires are dependent, like branches (on the stem of the tree), may I among men, magnifying your powers, become possessed, like (other) votaries, of (abundant) food,

॥ ಸಂಹಿತಾಪಾಠಃ ॥

ಯಮಾದಿತ್ಯಾಸೋ ಅದ್ರುಹಃ ಪಾರಂ ನಯಥ ಮರ್ತ್ಯಂ ।
ಮಘೋನಾಂ ವಿಶ್ವೇಷಾಂ ಸುದಾನವಃ ॥ ೩೪ ॥

॥ ಪದಪಾಠಃ ॥

ಯಂ । ಆದಿತ್ಯಾಸಃ । ಅದ್ರುಹಃ । ಪಾರಂ । ನಯಥ । ಮರ್ತ್ಯಂ ।
ಮಘೋನಾಂ । ವಿಶ್ವೇಷಾಂ । ಸುऽದಾನವಃ ॥ ೩೪ ॥

॥ ಸಾಯಣಭಾಷ್ಯಂ ॥

ಹೇ ಅದ್ರುಹೋऽದ್ರೋಗ್ಧಾರೋ ಹೇ ಸುದಾನವೋ ಹೇ ಆದಿತ್ಯಾಸೋऽದಿತೇಃ ಪುತ್ರಾ ಮಿತ್ರಾದಯಃ ಮಘೋನಾಂ ಹವಿಷ್ಮತಾಂ ವಿಶ್ವೇಷಾಂ ಸರ್ವೇಷಾಂ ಮಧ್ಯೇ ಯಂ ಮರ್ತ್ಯಂ ಮನುಷ್ಯಂ ಯಜಮಾನಂ ಪಾರಂ ನಯಥ ಆರಬ್ಧಸ್ಯ ಕರ್ಮಣಃ ಸಮಾಪ್ತಿಂ ಪ್ರಾಪಯಥ । ಸ ತತ್ಫಲಂ ಲಭತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಅದ್ರುಹಃ—ಉಪಕಾರಿಗಳೂ । ಸುದಾನವಃ—ಉದಾರವಾದ ದಾನಿಗಳೂ ಆದ । ಆದಿತ್ಯಾಸಃ—ಎಲೈ ಆದಿತ್ಯರೇ । ಮಘೋನಾಂ—ಹವಿಸ್ಸನ್ನು ಹೊಂದಿದ । ವಿಶ್ವೇಷಾಂ—ಸಕಲ ಯಜಮಾನರ ನಡುವೆ । ಯಂ—ಯಾವ । ಮರ್ತ್ಯಂ—ಯಜಮಾನನ್ನು । ಪಾರಂ ನಯಥ—ಅವನ ಕರ್ಮದ ಕೊನೆಯನ್ನು ಮುಟ್ಟಿಸುವಿರೋ (ಅವನೇ ಸತ್ಫಲವನ್ನು ಹೊಂದುತ್ತಾನೆ).

॥ ಭಾವಾರ್ಥ ॥

ಉಪಕಾರಿಗಳೂ, ಉದಾರವಾದ ದಾನಿಗಳೂ ಆದ ಎಲೈ ಆದಿತ್ಯರೇ, ಹವಿಸ್ಸನ್ನು ಹೊಂದಿದ ಸಕಲ ಯಜಮಾನರ ನಡುವೆ ಯಾವ ಯಜಮಾನನ್ನು ನೀವು ಅವನ ಕರ್ಮದ ಕೊನೆಯನ್ನು ಮುಟ್ಟಿಸುವಿರೋ, ಅವನೇ ಸತ್ಫಲವನ್ನು ಹೊಂದುತ್ತಾನೆ.

## English Translation

Benevolent and generous Adityas, amidst all the offerers of oblations the man whom you conduct to the limit (of his undertakings obtains his reward.

॥ ಸಂಹಿತಾಪಾಠಃ ॥

ಯೂಯಂ ರಾಜಾನಃ ಕಂ ಚಿಚ್ಚರ್ಷಣೀಸಹಃ ಕ್ಷಯಂತಂ ಮಾನುಷಾಁ ಅನು ।
ವಯಂ ತೇ ವೋ ವರುಣ ಮಿತ್ರಾರ್ಯಮನ್ತ್ಸ್ಯಾಮೇದೃತಸ್ಯ ರಥ್ಯಃ ॥ ೩೪ ॥

॥ ಪದಪಾಠಃ ॥

ಯೂಯಂ । ರಾಜಾನಃ । ಕಂ । ಚಿತ್ । ಚರ್ಷಣಿऽಸಹಃ । ಕ್ಷಯಂತಂ । ಮಾನುಷಾನ್ । ಅನು ।
ವಯಂ । ತೇ । ವಃ । ವರುಣ । ಮಿತ್ರ । ಅರ್ಯಮನ್ । ಸ್ಯಾಮ । ಇತ್ । ಋತಸ್ಯ । ರಥ್ಯಃ ॥ ೩೪ ॥

॥ ಸಾಯಣಭಾಷ್ಯಂ ॥

ಹೇ ರಾಜಾನೋ ರಾಜಮಾನಾ ಹೇ ಚರ್ಷಣೀಸಹಃ ಶತ್ರುಭೂತಾನಾಮಭಿಭವಿತಾರ ಆದಿತ್ಯಾಃ ಯೂಯಂ ಮಾನುಷಾನನು ಮನುಷ್ಯಾನ್ಯಜಮಾನಾನನುಲಕ್ಷ್ಯ ಕ್ಷಯಂತಂ ಕ್ಷಪಯಂತಂ ಕಂ ಚಿತ್ ಕಮಪಿ ಶತ್ರುವರ್ಗಮಭಿಭವಥೇತಿ ಶೇಷಃ । ಯದ್ವಾ । ಮನುಷ್ಯೇಷು ಯಜಮಾನೇಷು ಕ್ಷಯಂತಂ ಸ್ತುತೀನಾಮೀಶ್ವರಂ ಕಂ ಚಿತ್ ಕಮಪಿ ಸ್ತೋತಾರಂ ಮಾ ಯೂಯಂ ಗಚ್ಛತ । ಹೇ ವರುಣ ಹೇ ಮಿತ್ರ ಹೇ ಅರ್ಯಮನ್ ತೇ ತಾದೃಶಾ ವಯಂ ವೋ ಯುಷ್ಮಾಕಂ ಸಂಬಂಧಿನ ಋತಸ್ಯ ಯಜ್ಞಸ್ಯ ರಥ್ಯಃ ಸ್ಯಾಮ । ನೇತಾರೋ ಭವೇಮ ॥

। ಪ್ರತಿಪದಾರ್ಥ ।

ರಾಜಾನಃ—ಪ್ರಕಾಶಮಾನರೂ । ಚರ್ಷಣೀಸಹಃ—ಶತ್ರುಗಳನ್ನು ಸೋಲಿಸುವವರೂ ಆದ ಎಲೈ ಆದಿತ್ಯರೇ । ಯೂಯಂ—ನೀವು । ಮಾನುಷಾನ್ ಅನು—ಯಜಮಾನರನ್ನು ಎದುರಿಸಿ । ಕ್ಷಯಂತಂ—ಹಿಂಸಿಸುವ । ಕಂ ಚಿತ್—ಯಾವ ಶತ್ರುವನ್ನಾದರೂ ಸೋಲಿಸಿರಿ । ವರುಣ—ಎಲೈ ವರುಣನೇ । ಮಿತ್ರ—ಎಲೈ

ಮಿತ್ರನೇ । ಅರ್ಯಮನ್—ಎಲೈ ಅರ್ಯಮನೇ । ತೇ—ನಿಮಗೆ ಸೇರಿದ । ವಯಂ—ನಾವು । ವಃ ಇತ್—ನಿಮ್ಮ ಪೂಜಕವಾದುದೇ ಆದ । ಋತಸ್ಯ—ಯಜ್ಞಕ್ಕೆ । ರಥ್ಯಃ—ನೇತೃಗಳಾಗಿ । ಸ್ಯಾಮ—ಇರುವಂತಾಗಲಿ.

। ಭಾವಾರ್ಥ ।

ಪ್ರಕಾಶಮಾನರೂ, ಶತ್ರುಗಳನ್ನು ಸೋಲಿಸುವವರೂ ಆದ ಎಲೈ ಆದಿತ್ಯರೇ, ಯಜ್ಞಕರ್ತನನ್ನು ಯಾವನಾದರೂ ಶತ್ರುವು ಎದುರಿಸಿದರೆ ಅಂತಹ ಶತ್ರುವನ್ನು ನಾಶಮಾಡಿರಿ. ಎಲೈ ಮಿತ್ರನೇ, ಎಲೈ ವರುಣನೇ, ಎಲೈ ಅರ್ಯಮನೇ ನಿಮ್ಮ ಸಂಬಂಧಿಗಳಾದ ನಾವು ನಿಮ್ಮ ಪೂಜಕವಾದುದೇ ಆದ ಯಜ್ಞಕ್ಕೆ ನೇತೃಗಳಾಗಿ ಇರುವಂತಾಗಲಿ.

## English Translation

Royal (Adityas), overcomers of (hostile) men, (you subdue) any one harassing those (who are engaged in sacred rites) and may we, Varuna, Mitra, and Aryaman, be the conveyers of the sacrifice (addressed) to you.

। ವಿಶೇಷವಿಷಯಗಳು ।

ಕ್ಷಯಂತಂ ಮಾನವಾನ್ ಅನು ಎಂಬುದಕ್ಕೆ ಬೇರೊಂದು ಅರ್ಥವನ್ನು ವೈಕಲ್ಪಿಕವಾಗಿ ಹೇಳಿದೆ. ಅದಕ್ಕಿಂತಲೂ ಮೇಲೆ ಹೇಳಿರುವ ಅರ್ಥವೇ ಸಾಧುವಾಗಿದೆ.

। ಸಂಹಿತಾಪಾಠಃ ।

ಅದಾನ್ಮೇ ಪೌರುಕುತ್ಸ್ಯಃ ಪಂಚಾಶತಂ ತ್ರಸದಸ್ಯುರ್ವಧೂನಾಂ ।

ಮಂಹಿಷ್ಠೋ ಅರ್ಯಃ ಸತ್ಪತಿಃ ॥ ೩೬ ॥

। ಪದಪಾಠಃ ।

ಅದಾತ್ । ಮೇ । ಪೌರುಽಕುತ್ಸ್ಯಃ । ಪಂಚಾಶತಂ । ತ್ರಸದಸ್ಯುಃ । ವಧೂನಾಂ ।

ಮಂಹಿಷ್ಠಃ । ಅರ್ಯಃ । ಸತ್ಽಪತಿಃ । ॥ ೩೬ ॥

॥ ಸಾಯಣಭಾಷ್ಯಂ ॥

ಇದಮಾದಿಕೇನ ಪ್ರಗಾಥೇನ ತ್ರಸದಸ್ಯೋರ್ದಾನಮೃಷಿಃ ಪ್ರಶಂಸತಿ । ಪೌರುಕುತ್ಸ್ಯಃ ಪುರುಕುತ್ಸಪುತ್ರಸ್ತ್ರಸದಸ್ಯುರ್ಮೇ ಮಹ್ಯಂ ವಧೂನಾಂ ಪಂಚಾಶತಮದಾತ್ । ದತ್ತವಾನ್ । ಕೀದೃಶಃ । ಮಂಹಿಷ್ಠೋ ದಾತೃತಮೋಽರ್ಯೋಽಭಿಗಂತವ್ಯಃ ಸ್ವಾಮೀ ವಾ ಸತ್ಪತಿಃ ಸತಾಂ ಶ್ರೇಷ್ಠಾನಾಂ ಸ್ತೋತೄಣಾಂ ಪಾಲಯಿತಾ ॥

। ಪ್ರತಿಪದಾರ್ಥ ।

ಮಂಹಿಷ್ಠಃ—ಉದಾರವಾದ ದಾನಿಯೂ । ಅರ್ಯಃ—ಸ್ವಾಮಿಯೂ । ಸತ್ಪತಿಃ—ಸಜ್ಜನರ ಪಾಲಕನೂ । ಪೌರುಕುತ್ಸ್ಯಃ—ಪುರುಕುತ್ಸನ ಪುತ್ರನೂ ಆದ । ತ್ರಸದಸ್ಯುಃ—ತ್ರಸದಸ್ಯುವು । ಮೇ—ನನಗೆ । ಪಂಚಾಶತಂ—ಐನೂರು ಸಂಖ್ಯೆಯುಳ್ಳ । ವಧೂನಾಂ—ವಧುಗಳನ್ನು । ಅದಾತ್—ಕೊಟ್ಟಿದ್ದಾನೆ.

। ಭಾವಾರ್ಥ ।

ಉದಾರವಾದ ದಾನಿಯೂ, ಸಜ್ಜನರ ಪಾಲಕನೂ, ಪುರುಕುತ್ಸನ ಪುತ್ರನೂ ಆದ ತ್ರಸದಸ್ಯುವು ನನಗೆ ಐನೂರು ಸಂಖ್ಯೆಯುಳ್ಳ ವಧುಗಳನ್ನು ಕೊಟ್ಟಿದ್ದಾನೆ.

## English Translation

The magnificent lord, the protector of the virtuous, Trasadasyu, the son of Purukutsa, has given me five hundred brides.

। ಸಂಹಿತಾಪಾಠಃ ।

ಉತ ಮೇ ಪ್ರಯಿಯೋರ್ವಯಿಯೋಃ ಸುವಾಸ್ತ್ವಾ ಅಧಿ
ತುಗ್ವನಿ ।
ತಿಸೃಣಾಂ ಸಪ್ತತೀನಾಂ ಶ್ಯಾವಃ ಪ್ರಣೇತಾ ಭುವದ್ವಸುರ್ದಿ-
ಯಾನಾಂ ಪತಿಃ ॥ ೩೭ ॥

॥ ಪದಪಾಠಃ ॥

ಉತ । ಮೇ । ಪ್ರಯಿಯೋಃ । ವಯಿಯೋಃ । ಸುऽವಾಸ್ತ್ವಾಃ । ಅಧಿ । ತುಗ್ವನಿ ।
ತಿಸೃಣಾಂ । ಸಪ್ತತೀನಾಂ । ಶ್ಯಾವಃ । ಪ್ರऽನೇತಾ । ಭುವತ್ । ವಸುಃ । ದಿಯಾನಾಂ ।
ಪತಿಃ ॥ ೩೭ ॥

। ಸಾಯಣಭಾಷ್ಯಂ ।

...... ...... ...... ...... ...... ...... ...... ॥

। ಪ್ರತಿಪದಾರ್ಥ ।

ದಿಯಾನಾಂ ಪತಿಃ—ದಾನಿಗಳೆಲ್ಲಲ್ಲಾ ಶ್ರೇಷ್ಠನೂ । ಪ್ರನೇತಾ—ಯಜ್ಞಕ್ಕೆ ನೇತೃವೂ ಆದ । ಶ್ಯಾವಃ—

ಶ್ಯಾವನು । ಮೇ—ನನಗೆ । ಸುವಾಸ್ತ್ವಾಃ—ಸುವಾಸ್ತುವೆಂಬ ನದಿಯ । ತುಗ್ವನಿ ಅಧಿ—ದಡದ ಮೇಲೆ । ಪ್ರಿಯಿಯೋಃ—ಗವಾದಿಧನಗಳ ಮತ್ತು । ವಯಿಯೋಃ—ವಸ್ತ್ರಾದಿಗಳ । ತಿಸೃಣಾಂ ಸಪ್ತತೀನಾಂ—ಎಪ್ಪತ್ತು ಸಂಖ್ಯೆಯ ಮೂರರಷ್ಟು । ವಸುಃ—ಧನಗಳನ್ನು । ಭುವತ್—ದಾನಮಾಡಿದನು.

॥ ಭಾವಾರ್ಥ ॥

ದಾನಿಗಳೆಲ್ಲರಲ್ಲಿ ಶ್ರೇಷ್ಠನೂ, ಯಜ್ಞಕ್ಕೆ ನೇತೃವೂ ಆದ ಶ್ಯಾವನು ನನಗೆ ಸುವಾಸ್ತುವೆಂಬ ನದಿಯ ದಡದ ಮೇಲೆ ಗವಾದಿಗಳ ಮತ್ತು ವಸ್ತ್ರಾದಿಗಳ ಎಪ್ಪತ್ತು ಸಂಖ್ಯೆಯ ಮೂರರಷ್ಟು (ಇನ್ನೂರ ಹತ್ತರಷ್ಟು) ಧನಗಳನ್ನು ದಾನಮಾಡಿದನು.

## English Translation

The affluent Shyava, the lord of cows, has given to me upon the banks of the Suvastu a present of three times seventy-three (cows).

॥ ವಿಶೇಷವಿಷಯಗಳು ॥

ಸುವಾಸ್ತ್ವಾಃ ಅಧಿ ತುಗ್ವನಿ—ಇದಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ.—ಸುವಾಸ್ತ್ವಾ ಅಧಿ ತುಗ್ವನಿ । ಸುವಾಸ್ತುರ್ನದೀ ತುಗ್ವ ತೀರ್ಥಂ ಭವತಿ ತೂರ್ಣಮೇತದಾಯಂತಿ । (ನಿ. ೪ ೧೫) ಸುವಾಸ್ತು ಎಂಬುದು ಒಂದು ನದಿಯ ಹೆಸರು. ತುಗ್ವ ಎಂದರೆ ತೀರ್ಥ ಅಥವಾ ದಾಟುವ ಸ್ಥಳಕ್ಕೆ ಹೆಸರು. ನದಿಯನ್ನು ದಾಟುವುದಕ್ಕಾಗಿ ಜನರು ತ್ವರೆಯಿಂದ ಅಥವಾ ಬೇಗಬೇಗನೆ ಅಲ್ಲಿಗೆ ಬರುವುದರಿಂದ ನದಿಯನ್ನು ಹಾಯುವ ಅಥವಾ ದಾಟುವ ಸ್ಥಳಕ್ಕೆ ತುಗ್ವ ಎಂದು ಹೆಸರು. ಆಳವಿಲ್ಲದೆ ನೀರು ಹೆಚ್ಚಾಗಿಲ್ಲದೆ ಹಾಯುವುದಕ್ಕೆ ಎಂದರೆ ನದಿಯ ಒಂದು ದಡದಿಂದ ಮತ್ತೊಂದು ದಡಕ್ಕೆ ದಾಟಿಕೊಂಡು ಹೋಗುವ ಸ್ಥಳಕ್ಕೆ ತುಗ್ವ (Ford) ಎಂದು ಹೆಸರು.



# ಇಪ್ಪತ್ತನೆಯ ಸೂಕ್ತವು.

॥ ಸಾಯಣಭಾಷ್ಯಂ ॥

ಆ ಗಂತೇತಿ ಷಡ್ವಿಂಶತ್ಯೃಚಮಷ್ಟಮಂ ಸೂಕ್ತಂ ಕಾಣ್ವಸ್ಯ ಸೋಭರೇರಾರ್ಷಂ ಮಾರುತಂ ಪ್ರಥಮಾದ್ಯಯುಜಃ ಕಕುಭೋ ದ್ವಿತೀಯಾದಿಯುಜಃ ಸತೋಬೃಹತ್ಯಃ । ಅನುಕ್ರಮ್ಯತೇ ಹಿ । ಆ ಗಂತ ಷಡ್ವಿಂಶತಿರ್ಮಾರುತಮಿತಿ ॥ ಗತೋ ವಿನಿಯೋಗಃ ॥

ಅನುವಾದವು—ಆ ಗಂತಾ ಎಂಬ ಈ ಸೂಕ್ತವು ಮೂರನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಇಪ್ಪತ್ತಾರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಾಣ್ವಗೋತ್ರದ ಸೋಭರಿ ಎಂಬುವನು ಋಷಿಯು; ಮರುತ್ತುಗಳು ದೇವತೆಯು; ಈ ಸೂಕ್ತದಲ್ಲಿ ೧, ೩ ಮೊದಲಾದ ಅಸಮಸಂಖ್ಯೆಯ ಋಕ್ಕುಗಳು ಕಕುಪ್ ಛಂದಸ್ಸವು. ೨, ೪ ಮೊದಲಾದ ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಸವು, ಅನುಕ್ರಮಣಿಕೆಯಲ್ಲಿ—ಆ ಗಂತ ಷಡ್ವಿಂಶತಿರ್ಮಾರುತಂ ಎಂದು ಹೇಳಿರುವುದು. ವಿನಿಯೋಗವನ್ನು ಹಿಂದೆಯೇ ಹೇಳಲಾಗಿದೆ.

## ಸೂಕ್ತ—೨೦

ಮಂಡಲ—೮ ॥ ಅನುವಾಕ—೩ ॥ ಸೂಕ್ತ—೨೦ ॥
ಅಷ್ಟಕ—೬ ॥ ಅಧ್ಯಾಯ—೧ ॥ ವರ್ಗ—೩೬, ೩೭, ೩೮, ೩೯, ೪೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೬ ॥
ಋಷಿಃ—ಸೋಭರಿಃ ಕಾಣ್ವಃ ॥
ದೇವತಾ—ಮರುತಃ ॥
ಛಂದಃ—ಪ್ರಾಗಾಥಂ ಕಾಕುಭಂ ॥ ( ವಿಷಮಾ ಕಕುಬ್ । ಸಮಾ ಸತೋಬೃಹತೀ । ೧೯. ಸತೋ ವಿರಾಟ್ ॥ )

॥ ಸಂಹಿತಾಪಾಠಃ ॥

ಆ ಗಂತಾ ಮಾ ರಿಷಣ್ಯತ ಪ್ರಸ್ಥಾವಾನೋ ಮಾಪ ಸ್ಥಾತಾ ಸಮನ್ಯವಃ ।
ಸ್ಥಿರಾ ಚಿನ್ನಮಯಿಷ್ಣವಃ ॥ ೧ ॥

॥ ಪದಪಾಠಃ ॥

ಆ । ಗಂತ । ಮಾ । ರಿಷಣ್ಯತ । ಪ್ರಽಸ್ಥಾವಾನಃ । ಮಾ । ಅಪ । ಸ್ಥಾತ ಸಽಮನ್ಯವಃ ।
ಸ್ಥಿರಾ । ಚಿತ್ । ನಮಯಿಷ್ಣವಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಪ್ರಸ್ಥಾವಾನೋ ಗಮನಶೀಲಾ ಮರುತಃ ಯೂಯಮಾ ಗಂತ । ಆಗಚ್ಛತ । ಮಾ ರಿಷಣ್ಯತ। ಅನಾಗಮನೇನಾಸ್ಮಾನ್ಮಾ ಹಿಂಸ್ತ । ಹೇ ಸಮನ್ಯವಃ ಸಮಾನತೇಜಸ್ಕಾಃ ಸಮಾನಕ್ರೋಧಾ ವಾ ಸ್ಥಿರಾ ಚಿತ್ ಸ್ಥಿರಾಣಿ ದೃಢಾನ್ಯಪಿ ಪರ್ವತಾದೀನಿ ಹೇ ನಮಯಿಷ್ಣವೋ ನಮನಶೀಲಾಃ ಕಂಪಯಿತಾರಃ ಮಾಪ ಸ್ಥಾತ । ಅಸ್ಮತ್ತೋಽಪೇತ್ಯಾನ್ಯತ್ರ ಮಾ ತಿಷ್ಠತ । ಅಸ್ಮಾಸ್ವೇವ ತಿಷ್ಠತೇತ್ಯರ್ಥಃ ॥

॥ ಪ್ರತಿಪದಾರ್ಥ ॥

ಪ್ರಸ್ಥಾವಾನಃ—ದೂರಸಂಚಾರಕ್ಕೆ ಅರ್ಹರೂ । ಸಮನ್ಯವಃ—ಒಂದೇ ಸಮನಾದ ತೇಜಸ್ಸುಳ್ಳವರೂ । ಸ್ಥಿರಾ ಚಿತ್—ಅತ್ಯಂತ ದೃಢವಾದ ವೃಕ್ಷಾದಿಗಳನ್ನೂ । ನಮಯಿಷ್ಣವಃ—ಬಗ್ಗುವಂತೆ ಮಾಡುವವರೂ ಆದ ಎಲೈ ಮರುತ್ತುಗಳೇ । ಆ ಗಂತ—ನಮ್ಮಲ್ಲಿಗೆ ದಯಮಾಡಿರಿ । ಮಾ ರಿಷಣ್ಯತ—ನಮ್ಮ ಮೇಲೆ ಆಗ್ರಹಪಟ್ಟು ಹಿಂಸಿಸಬೇಡಿರಿ । ಮಾ ಅಪ ಸ್ಥಾತ—ನಮ್ಮಿಂದ ದೂರವಾಗಿಯೂ ನಿಲ್ಲಬೇಡಿರಿ.

॥ ಭಾವಾರ್ಥ ॥

ದೂರಸಂಚಾರವುಳ್ಳವರೂ, ಒಂದೇ ಸಮನಾದ ತೇಜಸ್ಸುಳ್ಳವರೂ, ಅತ್ಯಂತ ದೃಢವಾದ ವೃಕ್ಷಾದಿಗಳನ್ನೂ

ಬಗ್ಗುವಂತೆ ಮಾಡುವವರೂ ಆದ ಎಲೈ ಮರುತ್ತುಗಳೇ, ನಮ್ಮಲ್ಲಿಗೆ ದಯಮಾಡಿರಿ. ನಮ್ಮ ಮೇಲೆ ಆಗ್ರಹಪಟ್ಟು ಹಿಂಸಿಸಬೇಡಿರಿ. ನಮ್ಮಿಂದ ದೂರವಾಗಿಯೂ ನಿಲ್ಲಬೇಡಿರಿ.

## Engalish Translation

Far-travelling (winds), alike wrathful, come hither, harm us not: benders of the solid (mountains), withdraw not from us.

॥ ಸಂಹಿತಾಪಾಠಃ ॥

ವೀಳುಪವಿಭಿರ್ಮರುತ ಋಭುಕ್ಷಣ ಆ ರುದ್ರಾಸಃ ಸುದೀತಿಭಿಃ ।
ಇಷಾ ನೋ ಅದ್ಯಾ ಗತಾ ಪುರುಸ್ಪೃಹೋ ಯಜ್ಞಮಾ
ಸೋಭರೀಯವಃ ॥ ೨ ॥

॥ ಪದಪಾಠಃ ॥

ವೀಳುಪವಿಽಭಿಃ । ಮರುತಃ । ಋಭುಕ್ಷಣಃ । ಆ । ರುದ್ರಾಸಃ । ಸುದೀತಿಽಭಿಃ ।
ಇಷಾ । ನಃ । ಅದ್ಯ । ಆ । ಗತ । ಪುರುಽಸ್ಪೃಹಃ । ಯಜ್ಞಂ । ಆ । ಸೋಭರೀಽಯವಃ ॥

॥ ಸಾಯಣಭಾಷ್ಯಂ ॥

ಹೇ ಋಭುಕ್ಷಣೋ ಮಹಾಂತ ಉರುಭಾಸಮಾನನಿವಾಸಾ ವಾ ಹೇ ರುದ್ರಾಸೋ ರುದ್ರಾ ರುದ್ರಪುತ್ರಾಃ ಈದೃಶಾಃ ಹೇ ಮರುತಃ ಸುದೀತಿಭಿಃ ಶೋಭನದೀಪ್ತಿಕೈರ್ವೀಳುಪವಿಭಿಃ । ರಥನೇಮಯಃ ಪವಯಃ । ವೀಳು ದೃಢಾಃ ಪವಯೋ ಯೇಷು ತಾದೃಶೈ ರಥೈರಾ ಗತ । ಆಗಚ್ಛತ । ಏತದೇವ ವಿವೃಣೋತಿ । ಹೇ ಪುರುಸ್ಪೃಹೋ ಬಹುಭಿಃ ಸ್ಪೃಹಣೀಯಾ ಈಪ್ಸಿತವ್ಯಾಃ ಸೋಭರೀಯವಃ ಸೋಭರಿಮೃಷಿಂ ಮಾಂ ಕಾಮಯಮಾನಾ ನೋಽಸ್ಮಾಕಂ ಯಜ್ಞಂ ಪ್ರತ್ಯದ್ಯೇದಾನೀಮಿಷಾನ್ನೇನ ಸಹಾಗಚ್ಛತ । ಆ ಪೂರಣಃ ॥

॥ ಪ್ರತಿಪದಾರ್ಥ ॥

**ಋಭುಕ್ಷಣಃ**—ಅತ್ಯಧಿಕವಾಗಿ ಪ್ರಕಾಶಿಸುವವರೂ । **ರುದ್ರಾಸಃ**—ರುದ್ರಪುತ್ರನೂ ಆದ । **ಮರುತಃ**—ಎಲೈ ಮರುತ್ತುಗಳೇ । **ಸುದೀತಿಭಿಃ**—ಅತ್ಯಂತ ಕಾಂತಿಯುತವಾದವೂ । **ವೀಳುಪವಿಭಿಃ**—ದೃಢವಾದ ಇರುಚಿಪಟ್ಟಿಗಳುಳ್ಳವೂ ಆದ ರಥಗಳೊಡನೆ । **ಆ ಗತ**—ದಯಮಾಡಿರಿ । **ಪುರುಸ್ಪೃಹಃ**—ಅನೇಕರಿಂದ ಅಪೇಕ್ಷಿತರಾದ ಎಲೈ ಮರುತ್ತುಗಳೇ । **ಸೋಭರೀಯವಃ**—ಸೋಭರಿನಾಮಕನಾದ ಋಷಿಯನ್ನು ಅಪೇಕ್ಷಿಸಿದವರಾಗಿ । **ನಃ**—ನಮ್ಮ । **ಯಜ್ಞಂ**—ಯಜ್ಞಕ್ಕೆ । **ಅದ್ಯ**—ಈಗ । **ಇಷಾ**—ಅನ್ನದೊಡನೆ । **ಆ (ಗತ)**—ದಯಮಾಡಿರಿ.

॥ ಭಾವಾರ್ಥ ॥

ಅತ್ಯಧಿಕವಾಗಿ ಪ್ರಕಾಶಿಸುವವರೂ, ರುದ್ರಪುತ್ರರೂ ಆದ ಎಲೈ ಮರುತ್ತುಗಳೇ, ಅತ್ಯಂತ ಕಾಂತಿಯುತವಾದವೂ, ದೃಢವಾದ ಇರುಚಿಪಟ್ಟಿಗಳುಳ್ಳವೂ ಆದ ರಥಗಳೊಡನೆ ದಯಮಾಡಿರಿ. ಅನೇಕರಿಂದ ಅಪೇಕ್ಷಿತರಾದ ಎಲೈ ಮರುತ್ತುಗಳೇ, ಸೋಭರಿನಾಮಕನಾದ ಋಷಿಯನ್ನು ಅಪೇಕ್ಷಿಸಿದವರಾಗಿ ನಮ್ಮ ಯಜ್ಞಕ್ಕೆ ಈಗ ಅನ್ನದೊಡನೆ ದಯಮಾಡಿರಿ.

## English Translation

Mighty sons of Rudra, Maruts come with brilliant, strong-wheeled (chariots): desired of many, well disposed to Sobhari, come to day to our sacrifice with (abundant) food.

॥ ಸಂಹಿತಾಪಾಠಃ ॥

ವಿದ್ಮಾ ಹಿ ರುದ್ರಿಯಾಣಾಂ ಶುಷ್ಮಮುಗ್ರಂ ಮರುತಾಂ ಶಿಮೀವತಾಂ ।
ವಿಷ್ಣೋರೇಷಸ್ಯ ಮೀಳ್ಹುಷಾಂ ॥ ೩ ॥

॥ ಪದಪಾಠಃ ॥

ವಿದ್ಮ । ಹಿ । ರುದ್ರಿಯಾಣಾಂ । ಶುಷ್ಮಂ । ಉಗ್ರಂ । ಮರುತಾಂ । ಶಿಮೀऽವತಾಂ ।
ವಿಷ್ಣೋಃ । ಏಷಸ್ಯ । ಮೀಳ್ಹುಷಾಂ ॥ ೩ ॥

॥ ಸಾಯಣಭಾಷ್ಯಂ ॥

ರುದ್ರಿಯಾಣಾಂ ರುದ್ರಪುತ್ರಾಣಾಂ ಶಮೀವತಾಂ ಕರ್ಮವತಾಂ ವಿಷ್ಣೋರ್ವ್ಯಾಪ್ತಸ್ಯೈಷಸ್ಯೈಷಣೀಯಸ್ಯ ವೃಷ್ಟ್ಯುದಕಸ್ಯ ಮೀಳ್ಹುಷಾಂ ಸೇಕ್ತ್ರೂಣಾಂ ಮರುತಾಮುಗ್ರಮುದ್ಗೂರ್ಣಂ ಶುಷ್ಮಂ ಬಲಂ ವಿದ್ಮ ಹಿ । ಜಾನೀಮಃ ಖಲು ॥

॥ ಪ್ರತಿಪದಾರ್ಥ ॥

ರುದ್ರಿಯಾಣಾಂ—ರುದ್ರಪುತ್ರರೂ । ಶಿಮೀವತಾಂ—ಕರ್ಮವಂತರೂ । ವಿಷ್ಣೋಃ—ವ್ಯಾಪಕವಾದುದೂ । ಏಷಸ್ಯ—ಎಲ್ಲರಿಗೂ ಬೇಕಾದುದೂ ಆದ ವೃಷ್ಟ್ಯುದಕವನ್ನು । ಮೀಳ್ಹುಷಾಂ—ಸುರಿಸುವವರೂ ಆದ । ಮರುತಾಂ—ಮರುತ್ತುಗಳ । ಉಗ್ರಂ—ಅತ್ಯಧಿಕವಾದ । ಶುಷ್ಮಂ—ಬಲವನ್ನು । ವಿದ್ಮ ಹಿ—ನಾವು ಅರಿತೇ ಇದ್ದೇವೆ.

॥ ಭಾವಾರ್ಥ ॥

ರುದ್ರಪುತ್ರರೂ, ಕರ್ಮವಂತರೂ ವ್ಯಾಪಕವಾದುದೂ ಸರ್ವಾಪೇಕ್ಷಿತವಾದುದೂ ಆದ ವೃಷ್ಟ್ಯುದಕವನ್ನು ಸುರಿಸುವವರೂ ಆದ ಮರುತ್ತುಗಳ ಅತ್ಯಧಿಕವಾದ ಬಲವನ್ನು ನಾವು ಅರಿತೇ ಇದ್ದೇವೆ.

## English Translation

We know the great strength of the active sons of Rudra, the Maruts, the shedders of the diffusive rain.

॥ ಸಂಹಿತಾಪಾಠಃ ॥

ವಿ ದ್ವೀಪಾನಿ ಪಾಪತನ್ತಿಷ್ಠದ್ದುಚ್ಛುನೋಭೇ ಯುಜಂತ ರೋದಸೀ।
ಪ್ರ ಧನ್ವಾನ್ಯೈರತ ಶುಭ್ರಖಾದಯೋ ಯದೇಜಥ ಸ್ವಭಾನವಃ ॥

॥ ಪದಪಾಠಃ ॥

ವಿ । ದ್ವೀಪಾನಿ । ಪಾಪತನ್ । ತಿಷ್ಠತ್ । ದುಚ್ಛುನಾ । ಉಭೇ ಇತಿ । ಯುಜಂತ । ರೋದಸೀ ಇತಿ ॥

ಪ್ರ । ಧನ್ವಾನಿ । ಐರತ । ಶುಭ್ರ꠰ಖಾದಯಃ । ಯತ್ । ಏಜಥ । ಸ್ವ꠰ಭಾನವಃ ॥ ೪ ॥

॥ ಸಾಯಣಭಾಷ್ಯಂ ॥

ದ್ವೀಪಾನಿ ದ್ವಯೋಃ ಪಾರ್ಶ್ವಯೋರಾಪೋ ಯೇಷು ತಾನ್ಯುದಮಧ್ಯಸ್ಥಲಾನಿ ॥ ದ್ವ್ಯಂತರುಪಸರ್ಗೇಭ್ಯೋಽಪ ಈತ್ । ಪಾ. ೬-೩-೯೭. । ಇತೀತ್ತ್ವಂ । ಋಕ್ಪೂರಿತ್ಯಾದಿನಾಕಾರಃ ಸಮಾಸಾಂತಃ ॥ ತಾನಿ ಚ ವಿ ಪಾಪತನ್ । ಅತ್ಯರ್ಥಂ ಮರುದ್ವೇಗೇನ ವಿಪತಂತಿ । ತಿಷ್ಠತ್ ಸ್ಥಾವರಂ ಚಾನ್ಯದ್ವೃಕ್ಷಜಾತಂ ದುಚ್ಛುನಾ ದುಃಖೇನ ಯುಜ್ಯತೇ । ಉಭೇ ರೋದಸೀ ದ್ಯಾವಾಪೃಥಿವ್ಯಾವಪಿ ಯುಜಂತ । ತೇ ಮರುತಃ ಸ್ವಾಗಮನಜನಿತೇನ ಕಂಪನೇನ ಯೋಜಯಂತಿ । ಪರೋಽರ್ಧರ್ಚಃ ಪರೋಕ್ಷಕೃತಃ । ಧನ್ವಾನಿ ಗಮನಶೀಲಾನ್ಯುದಕಾನಿ ಚ ಪ್ರೈರತ । ಪ್ರಗಚ್ಛಂತಿ । ಹೇ ಶುಭ್ರಖಾದಯಃ ಶೋಭನಾಯುಧಾಃ ಶೋಭನಹವಿಷ್ಕಾ ವಾ ಹೇ ಸ್ವಭಾನವಃ ಸ್ವಾಯತ್ತದೀಪ್ತಯಃ ಯೂಯಂ ಯದ್ಯದೈಜಥ ಕಂಪಯಥ, ತದ್ಯೈತತ್ಪೂರ್ವೋಕ್ತಂ ಸರ್ವಂ ನಿಷ್ಪಾದ್ಯತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

ಶುಭ್ರಖಾದಯಃ—ಪ್ರಕಾಶಯಾನವಾದ ಆಯುಧವುಳ್ಳವರೂ । ಸ್ವಭಾನವಃ—ಸ್ವಯಂಸಂಪಾದಿತವಾದ

ಪ್ರಭೆಯುಳ್ಳವರೂ ಆದ ಎಲೈ ಮರುತ್ತುಗಳೇ । ಯತ್—ಯಾವಾಗ । ಏಜಥ—ನೀವು ಕಂಪಿಸುವಂತೆ ಮಾಡುವಿರೋ ಆಗ । ದ್ವೀಪಾನಿ—ದ್ವೀಪಪ್ರದೇಶಗಳಲ್ಲಿ । ವಿ ಪಾಪತನ್—ವೇಗದಿಂದ ಬೀಸುತ್ತೀರಿ । ತಿಷ್ಠತ್—ಸ್ಥಿರವಾಗಿ ನಿಂತಿರತಕ್ಕ ವೃಕ್ಷಾದಿಗಳೂ । ದುಚ್ಛುನಾ—(ನಿಮ್ಮ ಕಂಪನದ ಫಲವಾಗಿ) ಕಷ್ಟದಿಂದ ನಿಂತಿರುವವು । ಉಭೇ ರೋದಸೀ—ದ್ಯಾವಾಪೃಥಿವಿಗಳೆರಡೂ । ಯುಜಂತೆ—ಒಟ್ಟಿಗೆ ಸೇರಿಕೊಳ್ಳುತ್ತವೆ । ಧನ್ವಾನಿ—ಪ್ರವಹಿಸುವ ಉದಕಗಳು । ಪ್ರ ಐರತ—ಸಂಚಲಿಸುತ್ತವೆ ॥

॥ ಭಾವಾರ್ಥ ॥

ಪ್ರಕಾಶಮಾನವಾದ ಆಯುಧವುಳ್ಳವರೂ, ಸ್ವಯಂಸಂಪಾದಿತವಾದ ಪ್ರಭೆಯುಳ್ಳವರೂ ಆದ ಎಲೈ ಮರುತ್ತುಗಳೇ, ಯಾವಾಗ ನೀವು ಬೀಸುತ್ತಾ ದ್ವೀಪಪ್ರದೇಶಗಳಲ್ಲಿ ವೇಗದಿಂದ ಪ್ರವೇಶಿಸುತ್ತೀರೋ ಆಗ ಸ್ಥಿರವಾಗಿ ನಿಂತಿರುವ ವೃಕ್ಷಗಳೂ ಕಂಪಿಸುತ್ತಾ ಕಷ್ಟದಿಂದ ನಿಂತಿರುವವು. ದ್ಯಾವಾಪೃಥಿವಿಗಳೆರಡೂ ಒಟ್ಟಿಗೆ ಕಂಪಿಸುತ್ತವೆ. ಪ್ರವಹಿಸುವ ಉದಕಗಳು ಸಂಚಲಿಸುತ್ತವೆ.

English Translation

They fall upon the islands; the firm-set (trees) are with difficulty sustained; they agitate both heaven and earth; they urge on the waters: bright-weaponed, far-shining, whatever (you approach) you cause to tremble.

। ಸಂಹಿತಾಪಾಠಃ ।

ಅಚ್ಯುತಾ ಚಿದ್ವೋ ಅಜ್ಮನ್ನಾ ನಾನದತಿ ಪರ್ವತಾಸೋ ವನಸ್ಪತಿಃ ।
ಭೂಮಿರ್ಯಾಮೇಷು ರೇಜತೇ ॥ ೫ ॥

। ಪದಪಾಠಃ ।

ಅಚ್ಯುತಾ । ಚಿತ್ । ವಃ । ಅಜ್ಮನ್ । ಆ । ನಾನದತಿ । ಪರ್ವತಾಸಃ । ವನಸ್ಪತಿಃ ।
ಭೂಮಿಃ । ಯಾಮೇಷು । ರೇಜತೇ ॥ ೫ ॥

। ಸಾಯಣಭಾಷ್ಯಂ ।

ಹೇ ಮರುತಃ ವೋ ಯುಷ್ಮಾಕಮಜ್ಮನ್ನಜ್ಮನಿ ಗಮನೇ ಸತ್ಯಚ್ಯುತಾ ವಿಚ್ಯಾವಯಿತುಮಶಕ್ಯಾ ಅಪಿ ಪರ್ವತಾಸಃ ಪರ್ವತಾ ಮೇಘಾ ಗಿರಯೋ ವಾ ವನಸ್ಪತಿಃ ॥ ಜಾತಾವೇಕವಚನಂ ॥ ವನಸ್ಪತಯೋ ವೃಕ್ಷಾಶ್ಚ ನಾನದತಿ । ಅಭಿತೋ ಭೃಶಂ ಶಬ್ದಾಯಂತೇ । ಅಪಿ ಚ ಯಾಮೇಷು ಯುಷ್ಮದೀಯೇಷು ಗಮನೇಷು ನಿಮಿತ್ತೇಷು ಭೂಮಿಃ ಪೃಥಿವೀ ಚ ರೇಜತೇ । ಕಂಪತೇ ॥

॥ ಪ್ರತಿಪದಾರ್ಥ ॥

(ಎಲೈ ಮರುತ್ತುಗಳೇ) ವಃ—ನಿಮ್ಮ । ಅಜ್ಮನ್—ಆಗಮನಕಾಲದಲ್ಲಿ । ಅಚ್ಯುತಾ ಚಿತ್—ಚಲನವಿಲ್ಲದೇ ಇರತಕ್ಕ । ಪರ್ವತಾಸಃ—ಪರ್ವತಗಳೂ । ವನಸ್ಪತಿಃ—ವೃಕ್ಷಾದಿಗಳೂ । ಆ ನಾನದತಿ—ಅತಿಯಾಗಿ ಶಬ್ದವನ್ನುಂಟುಮಾಡುತ್ತವೆ । ಯಾಮೇಷು—ನಿಮ್ಮ ಸಂಚಾರಕಾಲದಲ್ಲಿ । ಭೂಮಿಃ—ಭೂಮಿಯೂ । ರೇಜತೇ—ನಡಗುತ್ತದೆ ॥

॥ ಭಾವಾರ್ಥ ॥

ಎಲೈ ಮರುತ್ತುಗಳೇ, ನಿಮ್ಮ ಆಗಮನಕಾಲದಲ್ಲಿ ಚಲನವಿಲ್ಲದೇ ಇರತಕ್ಕ ಪರ್ವತಗಳೂ ವೃಕ್ಷಾದಿಗಳೂ ಅತಿಯಾಗಿ ಶಬ್ದವನ್ನುಂಟುಮಾಡುತ್ತವೆ. ನಿಮ್ಮ ಸಂಚಾರಕಾಲದಲ್ಲಿ ಭೂಮಿಯೂ ನಡುಗುತ್ತದೆ.

## English Translation

At your coming the unprecipitated mountains and trees resound; the earth shakes at your passage.

॥ ಸಂಹಿತಾಪಾಠಃ ॥

ಅಮಾಯ ವೋ ಮರುತೋ ಯಾತವೇ ದ್ಯೌರ್ಜಿಹೀತ ಉತ್ತರಾ ಬೃಹತ್ ।
ಯತ್ರಾ ನರೋ ದೇದಿಶತೇ ತನೂಷ್ವಾ ತ್ವಕ್ಷಾಂಸಿ ಬಾಹ್ವೋಜಸಃ ॥

॥ ಪದಪಾಠಃ ॥

ಅಮಾಯ । ವಃ । ಮರುತಃ । ಯಾತವೇ । ದ್ಯೌಃ । ಜಿಹೀತೇ । ಉತ್ಽತರಾ । ಬೃಹತ್ ।
ಯತ್ರ । ನರಃ । ದೇದಿಶತೇ । ತನೂಷು । ಆ । ತ್ವಕ್ಷಾಂಸಿ । ಬಾಹುಽಓಜಸಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಮರುತಃ ವೋ ಯುಷ್ಮಾಕಮಮಾಯ ಬಲಾಯ ಯಾತವೇ ಯಾತುಂ ದ್ಯೌರ್ದ್ಯುಲೋಕೋ ಬೃಹದಂತರಿಕ್ಷಂ ವಿಸೃಜ್ಯೋತ್ತರೋದ್ಗತತರಾ ಜಿಹೀತೇ । ಗಚ್ಛತಿ । ಯುಷ್ಮದಾಗಮನಾದ್ಭೀತಾ ಸತೀ ಯುಷ್ಮದೀಯಮಾಂತರಿಕ್ಷಂ ಸ್ಥಾನಂ ಪರಿತ್ಯಜ್ಯೋರ್ಧ್ವಂ ಪಾಲಯತ ಇತ್ಯರ್ಥಃ । ಯತ್ರ ಯಸ್ಮಿನ್ನಂತರಿಕ್ಷೇ ಬಾಹ್ವೋಜಸಃ ಬಾಹ್ವೋರೋಜೋ ಬಲಂ ಯೇಷಾಂ ತಾದೃಶಾ ನರೋ ನೇತಾರೋ ಮರುತಸ್ತ್ವಕ್ಷಾಂಸಿ ದೀಪ್ತಾನ್ಯಾಭರಣಾನಿ ತನೂಷ್ವಾತ್ಮೀಯೇಷು ಶರೀರೇಷ್ವಾ ದೇದಿಶತೇ ಆದಿಷ್ಟಾನಿ ಧೃತಾನಿ ಕುರ್ವಂತಿ । ಯದ್ವಾ । ತನೂಷು ವಿಸ್ತೃತಾಸು ಮೇಘಸ್ಥಾಪ್ಸ್ವಪ್ಸು ತ್ವಕ್ಷಾಂಸಿ ತನೂಕೃತಾನಿ

ತೀಕ್ಷ್ಣೀಕೃತಾನ್ಯಾಯುಧಾನಿ ಮೋಘೋದ್ವೇದನಾಯಾ ದೇದಿಶತೇ ಪುನಃಪುನರಾದಿಶಂತಿ। ತದ್ವ್ಯಹದಂ-ತರಿಕ್ಷಂ ಜಿಹೀತೆ ಇತ್ಯನ್ವಯಃ ॥

। ಪ್ರತಿಪದಾರ್ಥ ।

ಮರುತಃ—ಎಲೈ ಮರುತ್ತುಗಳೇ । ಯತ್ರ—ಯಾವ ಅಂತರಿಕ್ಷದಲ್ಲಿ । ಬಾಹ್ವೋಜಸಃ—ಬಾಹುಗಳಲ್ಲಿ ಶಕ್ತಿಯುಳ್ಳವರೂ । ನರಃ—ನೇತೃಗಳೂ ಆದ ನೀವು । ತನೂಷು—ನಿಮ್ಮ ದೇಹಗಳಲ್ಲಿ । ತ್ವಕ್ಷಾಂಸಿ—ಪ್ರಕಾಶ ಮಾನವಾದ । ಆಭರಣಗಳನ್ನು । ಆ ದೇದಿಶತೇ—ಪ್ರಕಾಶಪಡಿಸುತ್ತಾ ಧರಿಸುವಿರೋ ಅಂತಹ । ಬೃಹತ್—ವಿಸ್ತೃತವಾದ ಅಂತರಿಕ್ಷವನ್ನು ತ್ಯಜಿಸಿ । ದ್ಯೌಃ—ದ್ಯುಲೋಕವು । ವಃ—ನಿಮ್ಮ । ಅಮಾಯ—ಶಕ್ತಿಯುತವಾದ । ಯಾತವೇ—ಸಂಚಾರಕ್ಕೆ ಅನುಕೂಲಮಾಡಲು । ಉತ್ತರಾ—ಅಂತರಿಕ್ಷಕ್ಕಿಂತಲೂ ಹೆಚ್ಚು ಉನ್ನತವಾದ ಪ್ರದೇಶಕ್ಕೆ। ಜಿಹೀತೇ—ಹೋಗುತ್ತದೆ.

। ಭಾವಾರ್ಥ ।

ಎಲೈ ಮರುತ್ತುಗಳೇ, ಬಾಹುಗಳಲ್ಲಿ ಶಕ್ತಿಯುಳ್ಳವರೂ, ನೇತೃಗಳೂ ಆದ ನೀವು ನಿಮ್ಮ ದೇಹಗಳಲ್ಲಿ ಪ್ರಕಾಶಮಾನವಾದ ಆಭರಣಗಳನ್ನು ಪ್ರಕಾಶಪಡಿಸುತ್ತಾ ಧರಿಸಿ ಅಂತರಿಕ್ಷದಲ್ಲಿ ಸಂಚರಿಸುವಿರೋ ಅಂತಹ ಅಂತರಿಕ್ಷವನ್ನು ತ್ಯಜಿಸಿ ದ್ಯುಲೋಕವು ನಿಮ್ಮ ಶಕ್ತಿಯುತವಾದ ಸಂಚಾರಕ್ಕೆ ಅನುಕೂಲಮಾಡಲು ಅದಕ್ಕಿಂತಲೂ ಉನ್ನತವಾದ ಪ್ರದೇಶಕ್ಕೆ ಹೋಗುತ್ತದೆ.

English Translation

(Alarmed) at your violence, Maruts, the heaven seeks to rise higher, abandoning the firmament, where (you) the strong-armed leaders (of rites) display the ornaments of (your) persons,

। ಸಂಹಿತಾಪಾಠಃ ।

ಸ್ವಧಾಮನು ಶ್ರಿಯಂ ನರೋ ಮಹಿ ತ್ವೇಷಾ ಅಮವಂತೋ ವೃಷಪ್ಸವಃ ।
ವಹಂತೇ ಅಹ್ರುತಪ್ಸವಃ ॥ ೭ ॥

॥ ಪದಪಾಠಃ ॥

ಸ್ವಧಾಂ । ಅನು । ಶ್ರಿಯಂ । ನರಃ । ಮಹಿ । ತ್ವೇಷಾಃ । ಅಮಽವಂತಃ । ವೃಷಽಪ್ಸವಃ ।
ವಹಂತೇ । ಅಹ್ರುತಽಪ್ಸವಃ ॥ ೭ ॥

॥ ಸಾಯಣಭಾಷ್ಯಂ ॥

ನರೋ ನೇತಾರೋ ಮರುತಃ ಸ್ವಧಾಮನು । ಸ್ವಧೇತ್ಯನ್ನನಾಮ । ಹವಿರ್ಲಕ್ಷಣಮನ್ನಮನುಲಕ್ಷ್ಯ ಶ್ರಿಯಂ ಶೋಭಾಂ ಮಹಿ ಮಹತ್ಪ್ರಭೂತಂ ವಹಂತೇ । ಧಾರಯಂತಿ । ಕೀದೃಶಾಃ । ತ್ವೇಷಾ ದೀಪ್ತಾ ಅಮವಂತೋ ಬಲವಂತೋ ವೃಷಪ್ಸವೋ ವರ್ಷಣರೂಪಾ ಅಹ್ರುತಪ್ಸವೋಽಕುಟಿಲರೂಪಾಶ್ಚ ॥

॥ ಪ್ರತಿಪದಾರ್ಥ ॥

ನರಃ—ನೇತೃಗಳೂ । ತ್ವೇಷಾಃ—ಕಾಂತಿಯುತರೂ । ಅಮವಂತಃ—ಶಕ್ತಿಯುತರೂ। ವೃಷಪ್ಸವಃ—ವೃಷ್ಟಿಯನ್ನು ಸುರಿಸತಕ್ಕವರೂ । ಅಹ್ರುತಪ್ಸವಃ—ಅಕುಟಿಲವಾದ ರೂಪವುಳ್ಳವರೂ ಆದ ಮರುತ್ತುಗಳು। ಸ್ವಧಾಂ ಅನು—ಹವಿಸ್ಸಿನ ರೂಪದ ಅನ್ನಸೇವನೆಯ ಕಾಲದಲ್ಲಿ । ಮಹಿ—ಮಹತ್ತಾದ । ಶ್ರಿಯಂ—ಕಾಂತಿಯನ್ನು । ವಹಂತೇ—ಧರಿಸುತ್ತಾರೆ.

॥ ಭಾವಾರ್ಥ ॥

ನೇತೃಗಳೂ, ಕಾಂತಿಯುತರೂ, ವೃಷ್ಟಿಯನ್ನು ಸುರಿಸತಕ್ಕವರೂ, ಅಕುಟಿಲವಾದ ರೂಪವುಳ್ಳವರೂ ಆದ ಮರುತ್ತುಗಳು ಹವಿಸ್ಸಿನ ರೂಪದ ಅನ್ನಸೇವನೆಯ ಕಾಲದಲ್ಲಿ ಮಹತ್ತಾದ ಕಾಂತಿಯನ್ನು ಧರಿಸುತ್ತಾರೆ.

## English Translation

The radiant, strong, rain-shedding, undisguised leaders of rites display their great glory when accepting the (sacrificial) food.

॥ ಸಂಹಿತಾಪಾಠಃ ॥

ಗೋಭಿರ್ವಾಣೋ ಅಜ್ಯತೇ ಸೋಭರೀಣಾಂ ರಥೇ ಕೋಶೇ
ಹಿರಣ್ಯಯೇ ।
ಗೋಬಂಧವಃ ಸುಜಾತಾಸ ಇಷೇ ಭುಜೇ ಮಹಾಂತೋ ನಃ
ಸ್ಪರಸೇ ನು ॥ ೮ ॥

॥ ಪದಪಾಠಃ ॥

ಗೋಭಿಃ । ವಾಣಃ । ಅಜ್ಯತೇ । ಸೋಭರೀಣಾಂ । ರಥೇ । ಕೋಶೇ । ಹಿರಣ್ಯಯೇ ।
ಗೋಽಬಂಧವಃ । ಸುಽಜಾತಾಸಃ । ಇಷೇ । ಭುಜೇ । ಮಹಾಂತಃ । ನಃ । ಸ್ಪರಸೇ । ನು ೮

। ಸಾಯಣಭಾಷ್ಯಂ ।

ಸೋಭರೀಣಾಮೃಷೀಣಾಂ ಗೋಭಿಃ ಶಬ್ದೈಃ ಸ್ತುತಿಲಕ್ಷಣೈರ್ವಾಣೋ ಮರುದ್ವೀಣಾಜ್ಯತೇ। ವ್ಯಜ್ಯತೇ। ಪ್ರಕಟೀಕ್ರಿಯತೇ। ಕುತ್ರ। ಹಿರಣ್ಯಯೇ ರಥೇ ಕೋಶೇ ಕೋಶವದ್ವೇಷ್ಟಿತೇ ಮಧ್ಯದೇಶೇ। ಯದ್ವಾ। ಗೋಭಿರ್ಗಂತೃಭಿರ್ಗೋಮಾತೃಕೈರ್ವಾ ಮರುದ್ಭಿರ್ವಾಣೋಽಜ್ಯತೇ ವ್ಯಜ್ಯತೇ। ಸೋಭರೀಣಾಂ ಜ್ಞಾನಾಯೇದೃಶೇ ರಥೇ ವಾದ್ಯತ ಇತ್ಯರ್ಥಃ। ಅಪಿ ಚ ಗೋಬಂಧವೋ ಗೋಮಾತೃಕಾಃ ಸುಜಾತಾಸಃ ಶೋಭನಜನ್ಮಾನೋ ಮಹಾಂತೋ ಮಹಾನುಭಾವಾಸ್ತೇ ಮರುತೋ ನೋಽಸ್ಮಾಕಮಿಷೇಽನ್ನಾಯ ಭುಜೇ ಭೋಗಾಯ ಸ್ಪರಸೇ ಪ್ರೀತ್ಯೈ ಚ ಬಲನಾಯ ವಾ ನು ಕ್ಷಿಪ್ರಂ ಭವಂತ್ವಿತಿ ಶೇಷಃ॥

। ಪ್ರತಿಪದಾರ್ಥ ।

ಸೋಭರೀಣಾಂ—ಸೋಭರಿಯಸಂಬಂಧೀಕರಾದ ಋಷಿಗಳ। ಗೋಭಿಃ—ಸ್ತುತಿರೂಪವಾದ ಶಬ್ದಗಳೊಡನೆ। ವಾಣಃ—ಮರುತ್ತುಗಳ ವೀಣಾನಾದವು। ಹಿರಣ್ಯಯೇ—ಸುವರ್ಣನಿರ್ಮಿತವಾದ। ರಥೇ—ರಥದ। ಕೋಶೇ—ಮಧ್ಯಭಾಗದಲ್ಲಿ। ಅಜ್ಯತೇ—ಒಟ್ಟಿಗೆ ಸೇರಿಕೊಂಡು ಪ್ರಕಾಶಿತವಾಗುತ್ತದೆ। ಗೋಬಂಧವಃ—ಗೋಪುತ್ರರೂ (ಪೃಶ್ನಿಪುತ್ರರೂ)। ಸುಜಾತಾಸಃ—ಉತ್ತಮವಾದ ಜನ್ಮವುಳ್ಳವರೂ। ಮಹಾಂತಃ—ಮಹಾತ್ಮರೂ ಆದ ಮರುತ್ತುಗಳು। ನು—ಕ್ಷಿಪ್ರವಾಗಿ। ನಃ—ನಮಗೆ। ಇಷೇ—ಅನ್ನಲಾಭಕ್ಕೂ। ಭುಜೇ—ಸುಖಭೋಗಕ್ಕೂ। ಸ್ಪರಸೇ—ಶಕ್ತಿಸಂಪಾದನೆಗೂ (ಅನುಕೂಲಪಡಿಸಲಿ).

। ಭಾವಾರ್ಥ ।

ಸೋಭರಿಯಸಂಬಂಧೀಕರಾದ ಋಷಿಗಳ ಸ್ತುತಿರೂಪವಾದ ಶಬ್ದಗಳೊಡನೆ ಮರುತ್ತುಗಳ ವೀಣಾನಾದವು ಸುವರ್ಣನಿರ್ಮಿತವಾದ ರಥದ ಮಧ್ಯಭಾಗದಲ್ಲಿ ಒಟ್ಟಿಗೆ ಸೇರಿಕೊಂಡು ಪ್ರಕಾಶಿತವಾಗುತ್ತದೆ. ಪೃಶ್ನಿಪುತ್ರರೂ, ಉತ್ತಮವಾದ ಜನ್ಮವುಳ್ಳವರೂ, ಮಹಾತ್ಮರೂ ಆದ ಮರುತ್ತುಗಳು ನಮಗೆ ಕ್ಷಿಪ್ರವಾಗಿ ಅನ್ನಲಾಭಕ್ಕೂ, ಸುಖಭೋಗಕ್ಕೂ ಶಕ್ತಿಸಂಪಾದನೆಗೂ ಅನುಕೂಲಪಡಿಸಲಿ

English Translation

The voice (of the Maruts) blends with the fsongsthe Sobhoaris in the receptacle of their golden chariot: may the mighty well-born Maruts, the offspring of the (brindled) cow, (be gracious) to us in regard of food, enjoyment, and kindness.

ಸಂಹಿತಾಪಾಠಃ ।

ಪ್ರತಿ ವೋ ವೃಷದಂಜಯೋ ವೃಷ್ಣೇ ಶರ್ಧಾಯ ಮಾರುತಾಯ
ಭರಧ್ವಂ ।

ಹವ್ಯಾ ವೃಷಪ್ರಯಾವ್ಣೇ ॥ ೯ ॥

। ಪದಪಾಠಃ ।

ಪ್ರತಿ । ವಃ । ವೃಷತ್ಽಅಂಜಯಃ । ವೃಷ್ಣೇ । ಶರ್ಧಾಯ । ಮಾರುತಾಯ । ಭರಧ್ವಂ ।

ಹವ್ಯಾ । ವೃಷಽಪ್ರಯಾವ್ಣೇ ॥ ೯ ॥

। ಸಾಯಣಭಾಷ್ಯಂ ।

ಹೇ ವೃಷದಂಜಯೋ ವೃಷತಾ ವರ್ಷಕೇಣ ಸೋಮೇನಾಂಜಂತಃ ಸಿಂಚಂತೋಽಧ್ವರ್ಯವಃ ವೋ ಯೂಯಂ ವೃಷ್ಣೇ ವರ್ಷಿತ್ರೇ ಮಾರುತಾಯ ಮರುತ್ಸಂಘರೂಪಾಯ ಶರ್ಧಾಯ ಬಲಾಯ ಹವ್ಯಾನಿ ಹವೀಂಷಿ ಪ್ರತಿ ಭರಧ್ವಂ । ಆಹವನೀಯಂ ಪ್ರತಿ ಹರತ । ಶರ್ಧಂ ವಿಶೇಷ್ಯತೇ । ವೃಷಪ್ರಯಾವ್ಣೇ । ವೃಷಾಣಃ ಸೇಕ್ತಾರಃ ಪ್ರಯಾವಾನಃ ಪ್ರಕೃಷ್ಟಂ ಗಂತಾರೋ ಮರುತೋ ಯಸ್ಮಿನ್ ತತ್ತಥೋಕ್ತಂ। ತಸ್ಮೈ ॥

। ಪ್ರತಿಪದಾರ್ಥ ।

ವೃಷದಂಜಯಃ—ಸೋಮರಸವನ್ನು ಧಾರಾರೂಪದಲ್ಲಿ ಅರ್ಪಿಸುವ ಎಲೈ ಅಧ್ವರ್ಯುಗಳೇ । ವಃ—ನೀವು । ವೃಷಪ್ರಯಾವ್ಣೇ—ಪ್ರಕೃಷ್ಟವಾದ ಗಮನವುಳ್ಳದ್ದೂ । ವೃಷ್ಣೇ—ಕಾಮವರ್ಷಕವೂ । ಮಾರುತಾಯ—ಮರುದ್ರೂಪದ್ದೂ ಆದ । ಶರ್ಧಾಯ—ಸಂಘಕ್ಕೆ । ಹವ್ಯಾ—ಹವಿಸ್ಸನ್ನು । ಪ್ರತಿ ಭರಧ್ವಂ—ಅರ್ಪಿಸಿರಿ.

। ಭಾವಾರ್ಥ ।

ಸೋಮರಸವನ್ನು ಧಾರಾರೂಪದಲ್ಲಿ ಅರ್ಪಿಸತಕ್ಕ ಎಲೈ ಅಧ್ವರ್ಯುಗಳೇ, ನೀವು ಪ್ರಕೃಷ್ಟವಾದ ಗಮನವುಳ್ಳದ್ದೂ ಕಾಮವರ್ಷಕವಾದುದೂ, ಆದ ಮರುತ್ಸಂಘಕ್ಕೆ ಹವಿಸ್ಸನ್ನು ಅರ್ಪಿಸಿರಿ.

## English Translation

Sprinklers of the libation, present the offerings to the rain-bestowing swift-passing company of the Maruts.

। ಸಂಹಿತಾಪಾಠಃ ।

ವೃಷಣಶ್ವೇನ ಮರುತೋ ವೃಷಪ್ಸುನಾ ರಥೇನ ವೃಷನಾಭಿನಾ ।
ಆ ಶ್ಯೇನಾಸೋ ನ ಪಕ್ಷಿಣೋ ವೃಥಾ ನರೋ ಹವ್ಯಾ ನೋ ವೀತಯೇ ಗತ ॥ ೧೦ ॥

॥ ಪದಪಾಠಃ ॥

ವೃಷಣಶ್ವೇನ । ಮರುತಃ । ವೃಷಪ್ಸುನಾ । ರಥೇನ । ವೃಷನಾಭಿನಾ ।

ಆ । ಶ್ಯೇನಾಸಃ । ನ । ಪಕ್ಷಿಣಃ । ವೃಥಾ । ನರಃ । ಹವ್ಯಾ । ನಃ । ವೀತಯೇ । ಗತ ॥ ೧೦ ॥

। ಸಾಯಣಭಾಷ್ಯಂ ।

ಹೇ ನರೋ ನೇತಾರೋ ಮರುತಃ ವೃಷಣಶ್ವೇನ ವೃಷಭಿಃ ಸೇಚನಸಮರ್ಥೈರಶ್ವೈರುಪೇತೇನ ವೃಷಪ್ಸುನಾ ವರ್ಷಕರೂಪಯುಕ್ತೇನ ವೃಷನಾಭಿನಾ । ನಾಭಿಶ್ಚಕ್ರಚ್ಛಿದ್ರಂ । ವರ್ಷಕನಾಭಿಯುಕ್ತೇನ ರಥೇನ ನೋಽಸ್ಮಾಕಂ ಹವ್ಯಾನಿ ಹವೀಂಷ್ಯಾ ಗತ । ಆಗಚ್ಛತ । ವೃಥಾನಾಯಾಸೇನೈವ ವೀತಯೇ ಭಕ್ಷಣಾರ್ಥಂ । ತತ್ರ ದೃಷ್ಟಾಂತಃ । ಶ್ಯೇನಾಸೋ ನ ಪಕ್ಷಿಣಃ ಶ್ಯೇನಾಃ ಶಂಸನೀಯಗತಯಃ ಪಕ್ಷಿಣೋ ಯಥಾ ಶೀಘ್ರಮಾಗಚ್ಛಂತಿ । ತದ್ವದನಾಯಾಸೇನ ಶೀಘ್ರಮಾಗಚ್ಛತೇತ್ಯರ್ಥಃ ।

। ಪ್ರತಿಪದಾರ್ಥ ।

ನರಃ—ನೇತೃಗಳಾದ । ಮರುತಃ—ಎಲೈ ಮರುತ್ತುಗಳೇ । ವೃಷಣಶ್ವೇನ—ಕಾಮವರ್ಷಕವಾದ ಅಶ್ವಯುಕ್ತವಾದುದೂ । ವೃಷಪ್ಸುನಾ—ವೃಷ್ಟಕಾರಕವಾದ ರೂಪವುಳ್ಳದ್ದೂ । ವೃಷನಾಭಿನಾ—ವರ್ಷಕವಾದ ನಾಭಿಯುಳ್ಳದ್ದೂ ಆದ । ರಥೇನ—ರಥದೊಡನೆ । ನಃ—ನಮ್ಮ । ಹವ್ಯಾ—ಹವಿಸ್ಸುಗಳಿಗಭಿಮುಖವಾಗಿ । ವೃಥಾ—ಅನಾಯಾಸವಾಗಿ । ವೀತಯೇ—ಭಕ್ಷಿಸಲು । ಶ್ಯೇನಾಸಃ—ಪ್ರಶಂಸನೀಯವಾದ ಗತಿಯುಳ್ಳ । ಪಕ್ಷಿಣಃ ನ—ಶ್ಯೇನಪಕ್ಷಿಗಳಂತೆ ವೇಗವಾಗಿ । ಆ ಗತ—ದಯಮಾಡಿರಿ.

। ಭಾವಾರ್ಥ ।

ನೇತೃಗಳಾದ ಎಲೈ ಮರುತ್ತುಗಳೇ, ಕಾಮವರ್ಷಕವಾದ ಅಶ್ವಯುಕ್ತವಾದುದೂ, ವೃಷ್ಟಿಕಾರಕವಾದ ರೂಪವುಳ್ಳದ್ದೂ ವರ್ಷಕವಾದ ನಾಭಿಯುಳ್ಳದ್ದೂ ಆದ ರಥದೊಡನೆ ನಮ್ಮ ಹವಿಸ್ಸುಗಳಿಗಭಿಮುಖವಾಗಿ, ಅದನು ಅನಾಯಾಸವಾಗಿ ಭಕ್ಷಿಸಲು ಪ್ರಶಂಸನೀಯವಾದ ಗತಿಯುಳ್ಳ ಶ್ಯೇನಪಕ್ಷಿಗಳಂತೆ ವೇಗವಾಗಿ ದಯಮಾಡಿರಿ.

## English Translation

Maruts, leaders, (of rites), come like swift-flying birds in your rain-shedding, strong-horsed chariot, whose wheels bestow showers, to partake of our oblations.

॥ ಸಂಹಿತಾಪಾಠಃ ॥

ಸಮಾನಮಂಜ್ಯೇಷಾಂ ವಿ ಭ್ರಾಜಂತೇ ರುಕ್ಮಾಸೋ ಅಧಿ

ಬಾಹುಷು ।

ದವಿದ್ಯುತತ್ಯೃಷ್ಟಯಃ ॥ ೧೧ ॥

॥ ಪದಪಾಠಃ ॥

ಸಮಾನಂ । ಅಂಜಿ । ಏಷಾಂ । ವಿ । ಭ್ರಾಜಂತೇ । ರುಕ್ಮಾಸಃ । ಅಧಿ । ಬಾಹುಷು ।

ದವಿದ್ಯುತತಿ । ಋಷ್ಟಯಃ ॥ ೧೧ ॥

॥ ಸಾಯಣಭಾಷ್ಯಂ ॥

ಏಷಾಂ ಮರುತಾಮಂಜಿ ರೂಪಾಭಿವ್ಯಂಜಕಮಾಭರಣಂ ಸಮಾನಮೇಕವಿಧಮೇವ । ಏತದೇವಾಹ। ರುಕ್ಮಾಸೋ ರುಕ್ಮಾ ದೀಪ್ಯಮಾನಾಃ ಸುವರ್ಣಮಯಾ ಹಾರಾ ಹ ವಿ ಭ್ರಾಜಂತೇ । ವಕ್ಷಃಸ್ಥಲೇಷು ವಿಶೇಷೇಣ ದೀಪ್ಯಂತೇ । ತಥಾ ಬಾಹುಷ್ವಧ್ಯಂಸೇಷ್ವೃಷ್ಟಯಃ ಶಕ್ತ್ಯಾದೀನ್ಯಾಯುಧಾನಿ ದವಿದ್ಯುತತಿ । ಅತ್ಯರ್ಥಂ ದ್ಯೋತಂತೇ ॥

॥ ಪ್ರತಿಪದಾರ್ಥ ॥

ಏಷಾಂ—ಈ ಮರುತ್ತುಗಳ । ಅಂಜಿ—ರೂಪವ್ಯಂಜಕವಾದ ಆಭರಣವು । ಸಮಾನಂ—ಒಂದೇ ರೀತಿಯುಳ್ಳದ್ದಾಗಿರುತ್ತದೆ । ರುಕ್ಮಾಸಃ—ಸುವರ್ಣಮಯವಾದ ಹಾರಗಳು । ವಿ ಭ್ರಾಜಂತೇ—ಪ್ರಕಾಶಿಸುತ್ತವೆ । ಬಾಹುಷು ಅಧಿ—ಬಾಹುಗಳಲ್ಲಿ । ಋಷ್ಟಯಃ—ಶಕ್ತ್ಯಾದ್ಯಾಯುಧಗಳು । ದವಿದ್ಯುತತಿ—ಅತಿಶಯವಾಗಿ ಕಂಗೊಳಿಸುತ್ತವೆ.

॥ ಭಾವಾರ್ಥ ॥

ಈ ಎಲ್ಲಾ ಮರುತ್ತುಗಳ ರೂಪವ್ಯಂಜಕವಾದ ಆಭರಣವೂ ಒಂದೇ ರೀತಿಯುಳ್ಳದ್ದಾಗಿರುತ್ತದೆ. ಸುವರ್ಣಮಯವಾದ ಹಾರಗಳು ಎದೆಯ ಮೇಲೆ ಪ್ರಕಾಶಿಸುತ್ತವೆ ಬಾಹುಗಳಲ್ಲಿ ಶಕ್ತ್ಯಾದ್ಯಾಯುಧಗಳು ಅತಿಶಯವಾಗಿ ಕಂಗೊಳಿಸುತ್ತವೆ.

## English Translation

Their decoration is the same; gold (necklaces) shine (on their breasts), lances gleam upon their shoulders.

॥ ಸಂಹಿತಾಪಾಠಃ ॥

ತ ಉಗ್ರಾಸೋ ವೃಷಣ ಉಗ್ರಬಾಹವೋ ನಕಿಷ್ಟನೂಷು ಯೇತಿರೇ ।

ಸ್ಥಿರಾ ಧನ್ವಾನ್ಯಾಯುಧಾ ರಥೇಷು ವೋಽನೀಕೇಷ್ವಧಿ ಶ್ರಿಯಃ ॥

॥ ಪದಪಾಠಃ ॥

ತೇ । ಉಗ್ರಾಸಃ । ವೃಷಣಃ । ಉಗ್ರಽಬಾಹವಃ । ನಕಿಃ । ತನೂಷು । ಯೇತಿರೇ ।

ಸ್ಥಿರಾ । ಧನ್ವಾನಿ । ಆಯುಧಾ । ರಥೇಷು । ವಃ । ಅನೀಕೇಷು । ಅಧಿ । ಶ್ರಿಯಃ ॥ ೧೨ ॥

॥ ಸಾಯಣಭಾಷ್ಯಂ ॥

ಉಗ್ರಾಸ ಉದ್ಗೂರ್ಣಾಃ ಸರ್ವೇಷು ಕಾರ್ಯೇಷೂದ್ಯತಾ ವೃಷಣೋ ವರ್ಷಿತಾರ ಉಗ್ರಬಾಹವ ಉದ್ಗೂರ್ಣಬಾಹುಕಾಸ್ತೇ ಮರುತಸ್ತನೂಷ್ವಾತ್ಮೀಯೇಷು ಶರೀರೇಷು ನಕಿರ್ಯೇತಿರೇ । ರಕ್ಷಣಾಯ ನ ಪ್ರಯತಂತೇ । ನ ಹಿ ಕಶ್ಚಿತ್ತೇಷಾಂ ಶರೀರಾಣಿ ಬಾಧಿತುಂ ಶಕ್ನೋತಿ ಯೇನ ಯತ್ನಃ ಕ್ರಿಯೇತ । ಪರೋಽರ್ಧರ್ಚಃ ಪ್ರತ್ಯಕ್ಷಕೃತಃ । ಹೇ ಮರುತಃ ವೋ ಯುಷ್ಮಾಕಂ ರಥೇಷು ಧನ್ವಾನಿ ಧನೂಂಷ್ಯಾಯುಧಾನ್ಯಾಯೋಧನಾನಿ ಬಾಣಾದೀನಿ ಚ ಸ್ಥಿರಾ ಸ್ಥಿರಾಣಿ ದೃಢತರಾಣಿ ಸಂತಿ । ಅತ ಏವ ಕಾರಣಾದನೀಕೇಷ್ವಧಿ ಸೇನಾಮುಖೇಷು ಶ್ರಿಯೋ ಜಯಸಂಪದೋ ಯುಷ್ಮಾಕಂ ಭವಂತಿ ॥

॥ ಪ್ರತಿಪದಾರ್ಥ ॥

ಉಗ್ರಾಸಃ—ಭಯಂಕರವಾದ ರೂಪವುಳ್ಳವರೂ । ವೃಷಣಃ—ಕಾಮವರ್ಷಕರೂ । ಉಗ್ರಬಾಹವಃ—ಅತಿ ದೀರ್ಘವಾದ ಬಾಹುಗಳುಳ್ಳವರೂ ಆದ । ತೇ—ಆ ಮರುತ್ತುಗಳು । ತನೂಷು—ತಮ್ಮ ಶರೀರಗಳಲ್ಲಿ । ನಕಿಃ ಯೇತಿರೇ—ರಕ್ಷಣೆಗಾಗಿ ಪ್ರಯತ್ನಿಸುವುದೇ ಇಲ್ಲ (ಅವರನ್ನು ಎದುರಿಸುವ ಶತ್ರುಗಳೇ ಇಲ್ಲ) (ಎಲೈ ಮರುತ್ತುಗಳೇ)। ವಃ—ನಿಮ್ಮ । ರಥೇಷು—ರಥಗಳಲ್ಲಿ । ಧನ್ವಾನಿ—ಧನುಸ್ಸೇ ಮುಂತಾದ । ಆಯುಧಾ—ಆಯುಧಗಳು। ಸ್ಥಿರಾ—ಸ್ಥಿರವಾಗಿವೆ । ಅನೀಕೇಷು ಅಧಿ—ಯುದ್ಧರಂಗಗಳಲ್ಲಿಯೂ ಸಹ । ಶ್ರಿಯಃ—ಜಯಸಂಪತ್ತುಗಳು । (ವಃ—ನಿಮ್ಮದೇ ಆಗಿವೆ).

॥ ಭಾವಾರ್ಥ ॥

ಭಯಂಕರವಾದ ರೂಪವುಳ್ಳವರೂ, ಕಾಮವರ್ಷಕರೂ, ಅತಿ ದೀರ್ಘವಾದ ಬಾಹುಗಳುಳ್ಳವರೂ ಆದ ಆ ಮರುತ್ತುಗಳು ತಮ್ಮ ಶರೀರಗಳ ರಕ್ಷಣೆಗಾಗಿ ಪ್ರಯತ್ನಿಸುವುದೇ ಇಲ್ಲ. ಎಂದರೆ ಅವರನ್ನು ಎದುರಿಸುವ ಶತ್ರುಗಳೇ ಇರುವುದಿಲ್ಲ. ಎಲೈ ಮರುತ್ತುಗಳೇ, ನಿಮ್ಮ ರಥಗಳಲ್ಲಿ ಧನುಸ್ಸೇ ಮುಂತಾದ ಆಯುಧಗಳು ಸ್ಥಿರವಾಗಿವೆ. ಯುದ್ಧರಂಗಗಳಲ್ಲಿಯೂ ಸಹ ಜಯಸಂಪತ್ತುಗಳು ನಿಮ್ಮದೇ ಆಗಿವೆ.

## English Translation

Fierce, vigorous, strong-armed, they need not exert (the energy of their) persons: bows and arrows are ready in your chariots; the glory (of conquest) over (hostile) armies is yours.

। ಸಂಹಿತಾಪಾಠಃ ।

ಯೇಷಾಮರ್ಣೋ ನ ಸಪ್ರಥೋ ನಾಮ ತ್ವೇಷಂ ಶಶ್ವತಾಮೇಕ-
ಮಿದ್ಭುಜೇ ।

ವಯೋ ನ ಪಿತ್ರ್ಯಂ ಸಹಃ ॥ ೧೩ ॥

॥ ಪದಪಾಠಃ ॥

ಯೇಷಾಂ । ಅರ್ಣಃ । ನ । ಸಽಪ್ರಥಃ । ನಾಮ । ತ್ವೇಷಂ । ಶಶ್ವತಾಂ । ಏಕಂ । ಇತ್ ।
ಭುಜೇ ।

ವಯಃ । ನ । ಪಿತ್ರ್ಯಂ । ಸಹಃ ॥ ೧೩ ॥

। ಸಾಯಣಭಾಷ್ಯಂ ।

ಅರ್ಣೋ ನೋದಕಮಿವ ಸಪ್ರಥಃ ಸರ್ವತಃ ಪೃಥು ವಿಸ್ತೀರ್ಣಂ ತ್ವೇಷಂ ದೀಪ್ತಂ ಶಶ್ವತಾಂ ಬಹೂನಾಂ ಯೇಷಾಂ ಮರುತಾಮೀದೃಶಂ ನಾಮ ಮರುತ ಇತಿ ನಾಮಧೇಯಮೇಕಮಿದೇಕಮೇವಾ-ಸಹಾಯಮೇವ ಸದ್ಭುಜೇ ಸ್ತೋತೄಣಾಂ ಭೋಗಾಯ ಭವತಿ । ತತ್ರ ದೃಷ್ಟಾಂತಃ । ಸಹಃ ಪ್ರಸಹನಶೀಲಂ ಪಿತ್ರ್ಯಂ ಪಿತುರಾಗತಂ ವಯೋ ನಾನ್ನಮಿವ । ಯಥಾ ತದ್ವಿಸ್ರಂಭೇಣ ಭೋಗಾಯ ಭವತಿ ತಥೇತ್ಯರ್ಥಃ । ತಾನಿತ್ಯುತ್ತರತ್ರೈಕವಾಕ್ಯತಾ ॥

। ಪ್ರತಿಪದಾರ್ಥ ।

ಅರ್ಣೋ ನ—ಉದಕವು ವಿಸ್ತೃತವಾಗಿ ಹರಡುವಂತೆ । ಸಪ್ರಥಃ—ಸರ್ವತ್ರ ವ್ಯಾಪಿಸಿ ಪ್ರಸಿದ್ಧವಾಗಿರುವುದೂ । ತ್ವೇಷಂ—ಕಾಂತಿಯುತವಾದುದೂ ಆದ । ಯೇಷಾಂ—ಯಾವ ಮರುತ್ತುಗಳು । ಶಶ್ವತಾಂ—ಅನೇಕರಿದ್ದರೂ । ಏಕಮಿತ್ ನಾಮ—ಎಲ್ಲರಿಗೂ ಸಮಾನವಾದ 'ಮರುತ್' ಎಂಬ ಒಂದೇ ಹೆಸರು । ಸಹಃ—ಪುಷ್ಟಿದಾಯಕವೂ । ಪಿತ್ರ್ಯಂ—ಪಿತೃಪಿತಾಮಹಾದಿಗಳಿಂದ ಬಂದುದೂ ಆದ । ವಯೋ ನ—ಅನ್ನದಂತೆ । ಭುಜೇ—ಸ್ತೋತೃಗಳಿಗೆ ಭೋಗಸಾಧನವಾಗಿರುತ್ತದೆ

। ಭಾವಾರ್ಥ ।

ಉದಕವು ವಿಸ್ತೃತವಾಗಿ ಹರಡುವಂತೆ ಸರ್ವತ್ರ ವ್ಯಾಪಿಸಿ ಪ್ರಸಿದ್ಧರಾಗಿರುವುದೂ, ಕಾಂತಿಯುತವಾದುದೂ ಆದ ಯಾವ ಮರುತ್ತುಗಳ ಸಂಖ್ಯೆಯು ಬಹಳವಾಗಿ ಎಲ್ಲರಿಗೂ ಸಮಾನವಾದ '**ಮರುತ**' ಎಂಬ ಒಂದೇ ನಾಮಧೇಯವು, ಪುಷ್ಟಿದಾಯಕವೂ, ಪಿತೃಪಿತಾಮಹಾದಿಗಳಿಂದ ಬಂದುದೂ ಆದ ಅನ್ನದಂತೆ ಸ್ತೋತೃಗಳಿಗೆ ಭೋಗಸಾಧನವಾಗಿರುತ್ತದೆ.

## English Translation

One illustrious name is given to them all, as widely diffused as water for the gratification (of their worshippers), like invigorating paternal food.

॥ ಸಂಹಿತಾಪಾಠಃ ॥

ತಾನ್ವಂದಸ್ವ ಮರುತಸ್ತಾಁ ಉಪ ಸ್ತುಹಿ ತೇಷಾಂ ಹಿ ಧುನೀನಾಂ ।
ಅರಾಣಾಂ ನ ಚರಮಸ್ತದೇಷಾಂ ದಾನಾ ಮಹ್ನಾ ತದೇಷಾಂ ॥

॥ ಪದಪಾಠಃ ॥

ತಾನ್ । ವಂದಸ್ವ । ಮರುತಃ । ತಾನ್ । ಉಪ । ಸ್ತುಹಿ । ತೇಷಾಂ । ಹಿ । ಧುನೀನಾಂ ।
ಅರಾಣಾಂ । ನ । ಚರಮಃ । ತತ್ । ಏಷಾಂ । ದಾನಾ । ಮಹ್ನಾ । ತತ್ । ಏಷಾಂ ॥ ೧೪

॥ ಸಾಯಣಭಾಷ್ಯಂ ॥

ಹೇ ಅಂತರಾತ್ಮನ್ ತಾನ್ಪೂರ್ವೋಕ್ತಗುಣಾನ್ಮರುತೋ ವಂದಸ್ವ । ಪ್ರಣಮ । ತಾನೇವೋಪೇತ್ಯ ಸ್ತುಹಿ । ಹಿ ಯಸ್ಮಾದ್ಧುನೀನಾಂ ಕಂಪಯಿತ್ೄಣಾಂ ತೇಷಾಂ ಮರುತಾಂ ವಯಂ ಶೇಷಭೂತಾಃ ಸ್ಮಃ । ಅರಾಣಾಮರ್ಯಾಣಾಂ ಸ್ವಾಮಿನಾಂ ಯಥಾ ಚರಮೋ ಹೀನಃ ಸೇವಕಃ ಶೇಷಭೂತಸ್ತದ್ವತ್ । ತತ್ತಸ್ಮಾದೇಷಾಂ ಮರುತಾಂ ದಾನಾ ದಾನಾನಿ ಮಹ್ನಾ ಮಹತ್ತ್ವೇನ ಯುಕ್ತಾನ್ಯಸ್ಮಾಕಂ ಭವಂತಿ । ತದೇಷಾಮಿತಿ ದ್ವಿರುಕ್ತಿರಾದರಾರ್ಥಾ ಪದಪೂರಣಾರ್ಥಾ ವಾ ॥

॥ ಪ್ರತಿಪದಾರ್ಥ ॥

(ಎಲೈ ಅಂತರಾತ್ಮನೇ) ತಾನ್ ಮರುತಃ—ಆ ಮರುತ್ತುಗಳನ್ನು । ವಂದಸ್ವ—ನಮಸ್ಕರಿಸು । ತಾನ್—ಅವರನ್ನೇ । ಉಪ ಸ್ತುಹಿ—ಪ್ರಶಂಸಿಸು । ಹಿ—ಏತಕ್ಕೆಂದರೆ । ಅರಾಣಾಂ—ಸ್ವಾಮಿಗಳಿಗೆ । ಚರಮಃ ನ—ಸೇವಕನಾದವನು ವಿಧೇಯನಾಗಿರುವಂತೆ । ಧುನೀನಾಂ—ಜಗತ್ತನ್ನೆಲ್ಲಾ ಕಂಪಿಸುವಂತೆ ಮಾಡುವ । ತೇಷಾಂ—ಆ ಮರುತ್ತುಗಳಿಗೆ ನಾವೆಲ್ಲಾ ಕಿಂಕರರೂಪರಾಗಿದ್ದೇವೆ । ತತ್—ಆದುದರಿಂದಲೇ । ಏಷಾಂ—ಈ ಮರುತ್ತುಗಳ । ದಾನಾ—ದಾನಾದಿಗಳು । ಮಹ್ನಾ—ಮಹತ್ವಪೂರಿತವಾಗಿವೆ । ತತ್—ಆದುದರಿಂದಲೇ । ಏಷಾಂ—ಇವರ ಅನುಗ್ರಹಕ್ಕೆ ಪಾತ್ರರಾಗೋಣ.

॥ ಭಾವಾರ್ಥ ॥

ಎಲೈ ಅಂತರಾತ್ಮನೇ, ಮರುತ್ತುಗಳನ್ನೇ ನಮಸ್ಕರಿಸು ಅವರನ್ನೇ ಪ್ರಶಂಸಿಸು. ಏತಕ್ಕೆಂದರೆ, ಸ್ವಾಮಿ

ಗಳಿಗೆ ಸೇವಕರು ವಿಧೇಯರಾಗಿರುವಂತೆ, ಜಗತ್ತನ್ನೆಲ್ಲಾ ಕಂಪಿಸುವಂತೆ ಮಾಡುವ ಆ ಮರುತ್ತುಗಳಿಗೆ ನಾವೆಲ್ಲಾ ಕಿಂಕರರೂಪರಾಗಿದ್ದೇವೆ. ಆದುದರಿಂದಲೇ, ಈ ಮರುತ್ತುಗಳ ದಾನಾದಿಗಳು ಮಹತ್ವಪೂರ್ಣವಾಗಿವೆ. ಆದುದರಿಂದಲೇ ಇವರ ಅನುಗ್ರಹಕ್ಕೆ ಪಾತ್ರರಾಗೋಣ.

## English Translation

Praise them, praise the Maruts, for we are (dependent) upon those agitators (of all things) as a menial is upon his lords; therefore are their donations (charactarized) by munificence; such are their (gifts)-

। ಸಂಹಿತಾಪಾಠಃ ।

ಸುಭಗಃ ಸ ವ ಊತಿಷ್ವಾಸ ಪೂರ್ವಾಸು ಮರುತೋ ವ್ಯುಷ್ಟಿಷು।
ಯೋ ವಾ ನೂನಮುತಾಸತಿ ॥ ೧೫ ॥

। ಪದಪಾಠಃ ।

ಸುऽಭಗಃ । ಸಃ । ವಃ । ಊತಿಷು । ಆಸ । ಪೂರ್ವಾಸು । ಮರುತಃ । ವಿऽಉಷ್ಟಿಷು ।
ಯಃ । ವಾ । ನೂನಂ । ಉತ । ಅಸತಿ ॥ ೧೫ ॥

। ಸಾಯಣಭಾಷ್ಯಂ ।

ಹೇ ಮರುತಃ ವೋ ಯುಷ್ಮಾಕಮೂತಿಷು ರಕ್ಷಾಸು ಸತೀಷು ಸ ಸ್ತೋತಾ ಸುಭಗ ಆಸ । ಶೋಭನಧನೋ ಭವತಿ ॥ ಅಸ್ತೇಶ್ಛಾಂದಸೋ ಭೂಭಾವಾಭಾವಃ ॥ ಯದ್ವಾ ಸುಭಗ ಆಸ । ದೀಪ್ಯತೇ ॥ ಅಸ ಗತಿದೀಪ್ತ್ಯಾದಾನೇಷು॥ ಕದೇತಿ ಚೇತ್ ಉಚ್ಯತೇ । ಪೂರ್ವಾಸು ವ್ಯುಷ್ಟಿಷು ಪೂರ್ವೇಷ್ವತೀತೇಷು ವಿವಾಸಿತೇಷು ದಿವಸೇಷು । ಯದ್ವಾ । ಪೂರ್ವಾಸ್ವಾಗಾಮಿನೀಷು ವ್ಯುಷ್ಟಿಷೂಷಃಸು । ಉಷಃಕಾಲೋಪಲಕ್ಷಿತೇಷು ದಿವಸೇಷು । ಉತಾಪಿ ಚ ಯೋ ಮನುಷ್ಯಃ ಸ್ತೋತಾ ಯುಷ್ಮಾ ವಾ ನೂನಮವಶ್ಯಮಸತಿ ಯುಷ್ಮಾಕಂ ಭವತಿ ॥ ಅಸ್ತೇಶ್ಛಾಂದಸಃ ಶಪೋ ಲುಗಭಾವಃ ॥ ಸ ಸುಭಗ ಇತ್ಯನ್ವಯಃ ॥

। ಪ್ರತಿಪದಾರ್ಥ ।

ಉತ—ಮತ್ತು । ಮರುತಃ—ಎಲೈ ಮರುತ್ತುಗಳೇ । ವಃ—ನಿಮ್ಮ । ಊತಿಷು—ರಕ್ಷಣೆಗಳಲ್ಲಿರುವ । ಯಃ ವಾ—ಯಾವ ಮಾನವನು (ಸ್ತುತಿಕರ್ತನು) । ನೂನಂ—ಅವಶ್ಯವಾಗಿ । ಅಸತಿ—ನಿಮ್ಮವನೇ ಆಗಿರುವನೋ । ಸಃ—ಅವನು (ಆ ಸ್ತುತಿಕರ್ತನು). ಪೂರ್ವಾಸು ವ್ಯುಷ್ಟಿಷು—ಹಿಂದಿನ ದಿನಗಳಲ್ಲೆಲ್ಲಾ । ಸುಭಗಃ—ಶ್ರೇಷ್ಠವಾದ ಧನವುಳ್ಳವನಾಗಿ । ಆಸ—ಇದ್ದನು.

। ಭಾವಾರ್ಥ ।

ಎಲೈ ಮರುತ್ತುಗಳೇ, ನಿಮ್ಮ ರಕ್ಷಣೆಗಳಲ್ಲಿರುವ ಯಾವ ಸ್ತುತಿಕರ್ತನು ಅವಶ್ಯವಾಗಿ ನಿಮ್ಮವನೇ ಆಗಿರುವನೋ ಆ ಸ್ತುತಿಕರ್ತನು ಹಿಂದಿನ ದಿನಗಳಲ್ಲೆಲ್ಲಾ ಶ್ರೇಷ್ಠವಾದ ಧನವುಳ್ಳವನಾಗಿದ್ದನು.

## English Translation

Fortunate was he, Maruts, who, in former days, was secure in your protections, as is he who now enjoys them.

। ಸಂಹಿತಾಪಾಠ ।

ಯಸ್ಯ ವಾ ಯೂಯಂ ಪ್ರತಿ ವಾಜಿನೋ ನರ ಆ ಹವ್ಯಾ
ವೀತಯೇ ಗಥ ।
ಅಭಿ ಷ ದ್ಯುಮ್ನೈರುತ ವಾಜಸಾತಿಭಿಃ ಸುಮ್ನಾ ವೋ ಧೂತಯೋ
ನಶತ್ ॥ ೧೬ ॥

॥ ಪದಪಾಠ ॥

ಯಸ್ಯ । ವಾ । ಯೂಯಂ । ಪ್ರತಿ । ವಾಜಿನಃ । ನರಃ । ಆ । ಹವ್ಯಾ । ವೀತಯೇ । ಗಥ ।
ಅಭಿ । ಸಃ । ದ್ಯುಮ್ನೈಃ । ಉತ । ವಾಜಸಾತಿಽಭಿಃ । ಸುಮ್ನಾ । ವಃ । ಧೂತಯಃ । ನಶತ್ ॥

। ಸಾಯಣಭಾಷ್ಯಂ ।

ಹೇ ನರೋ ನೇತಾರೋ ಮರುತಃ ಯೂಯಂ ಯಸ್ಯ ವಾ ಯಸ್ಯ ಚ ವಾಜಿನೋ ಹವಿಷ್ಮತೋ ಯಜಮಾನಸ್ಯ ಹವ್ಯಾ ಹವ್ಯಾನಿ ಹವೀಂಷಿ ಪ್ರತಿ ವೀತಯೇ ಭಕ್ಷಣಾಯಾ ಗಥ ಆಗಚ್ಛಥ ಸ ಯಜಮಾನೋ ಹೇ ಧೂತಯಃ ಕಂಪಯಿತಾರೋ ಮರುತಃ ದ್ಯುಮ್ನೈರ್ದ್ಯೋತಮಾನೈರನ್ನೈರ್ಯಶೋಭಿರ್ವಾ ಉತಾಪಿ ಚ ವಾಜಸಾತಿಭಿರ್ವಾಜಾನಾಂ ಸಂಭಜನೈಶ್ಚ ವೋ ಯುಷ್ಮಾಕಂ ಸಂಬಂಧೀನಿ ಸುಖಾನ್ಯಭಿ ನಶತ್ । ಅಭಿತೋ ವ್ಯಾಪ್ನೋತಿ ॥

॥ ಪ್ರತಿಪದಾರ್ಥ ॥

ಧೂತಯಃ—ಜಗತ್ತನ್ನು ಕಂಪಿಸುವಂತೆ ಮಾಡುವವರೂ । ನರಃ—ನೇತೃಗಳೂ ಆದ ಎಲೈ ಮರುತ್ತುಗಳೇ । ಯೂಯಂ—ನೀವು । ವಾಜಿನಃ—ಹವಿಸ್ಸಂತನಾದ । ಯಸ್ಯ ವಾ—ಯಾವ ಯಜಮಾನನ । ಹವ್ಯಾ ಪ್ರತಿ—

ಹವಿಸ್ಸುಗಳನ್ನು ಲಕ್ಷಿಸಿ । ವೀತಯೇ—ಭಕ್ಷಣಾರ್ಥವಾಗಿ । ಆ ಗಥ—ಬರುವಿರೋ । ಸಃ—ಆ ಯಜಮಾನನು । ವಃ—ನಿಮ್ಮಿಂದ ದತ್ತವಾದುದೂ । ದ್ಯುಮ್ನೈಃ—ಪ್ರಕಾಶಮಾನವಾದ ಯಶೋಯುಕ್ತವಾದುದೂ । ಉತ—ಮತ್ತು । ವಾಜಸಾತಿಭಿಃ—ಅನ್ನಭೋಗಗಳೊಡನೆ ಕೂಡಿದುದೂ ಆದ । ಸುಮ್ನಾ—ಸುಖಗಳನ್ನು । ಅಭಿ ನಶತ್ — ಪೂರ್ಣವಾಗಿ ಹೊಂದುತ್ತಾನೆ.

॥ ಭಾವಾರ್ಥ ॥

ಜಗತ್ತನ್ನು ಕಂಪಿಸುವಂತೆ ಮಾಡುವವರೂ, ನೇತೃಗಳೂ ಆದ ಎಲೈ ಮರುತ್ತುಗಳೇ, ನೀವು ಹವಿಷ್ಮಂತನಾದ ಯಾವ ಯಜಮಾನನ ಹವಿಸ್ಸುಗಳನ್ನು ಲಕ್ಷಿಸಿ ಭಕ್ಷಣಾರ್ಥವಾಗಿ ಬರುವಿರೋ ಆ ಯಜಮಾನನು ನಿಮ್ಮಿಂದ ದತ್ತವಾದುದೂ, ಪ್ರಕಾಶಮಾನವಾದ ಯಶೋಯುಕ್ತವಾದುದೂ ಮತ್ತು ಅನ್ನಭೋಗಗಳೊಡನೆ ಕೂಡಿದುದೂ ಆದ ಸುಖಗಳನ್ನು ಪೂರ್ಣವಾಗಿ ಹೊಂದುತ್ತಾನೆ.

## English Translation

The sacrificer, to partake of whose oblations you approach, leaders of rites, enjoys, agitators of all things, the felicity you bestow, together with abundant viands and the gift of strength.

॥ ಸಂಹಿತಾಪಾಠಃ ॥

ಯಥಾ ರುದ್ರಸ್ಯ ಸೂನವೋ ದಿವೋ ವಶಂತ್ಯಸುರಸ್ಯ ವೇಧಸಃ ।
ಯುವಾನಸ್ತಥೇದಸತ್ ॥ ೧೭ ॥

॥ ಪದಪಾಠಃ ॥

ಯಥಾ । ರುದ್ರಸ್ಯ । ಸೂನವಃ । ದಿವಃ । ವಶಂತಿ । ಅಸುರಸ್ಯ । ವೇಧಸಃ ।
ಯುವಾನಃ । ತಥಾ । ಇತ್ । ಅಸತ್ ॥ ೧೭ ॥

॥ ಸಾಯಣಭಾಷ್ಯಂ ॥

ರುದ್ರಸ್ಯ ದುಃಖದ್ರಾವಯಿತುರೀಶ್ವರಸ್ಯ ಸೂನವಃ ಪುತ್ರಾ ಅಸುರಸ್ಯೋದಕಾನಾಂ ಕ್ಷೇಪ್ತುರ್ಮೇಘಸ್ಯ ವೇಧಸೋ ವಿಧಾತಾರಃ । ಯದ್ವಾ । ಅಸವಃ ಪ್ರಾಣಾಃ । ತಾನ್ರಾತಿ ದದಾತೀತ್ಯಸುರಂ ವೃಷ್ಟಿಜಲಂ । ತಸ್ಯ ಕರ್ತಾರಃ । ಯುವಾನೋ ನಿತ್ಯತರುಣಾ ಈದೃಶಾ ಮರುತೋ ದಿವೋಽನ್ತರಿಕ್ಷಾದಾಗತ್ಯ ಯಥಾ ಯೇನ ಪ್ರಕಾರೇಣ ವಶಂತಿ ಅಸ್ಮಾನ್ ಕಾಮಯಂತೇ ತಥೇತ್ತೇನೈವ ಪ್ರಕಾರೇಣಾಸತ್ । ಇದಂ ಸ್ತೋತ್ರಂ ಭವತು ॥ ವೃಷ್ಟೇಶ್ಛಾಂದಸಃ ಶಪೋ ಲುಗಭಾವಃ ॥

॥ ಪ್ರತಿಪದಾರ್ಥ ॥

ರುದ್ರಸ್ಯ—ರುದ್ರನಿಗೆ । ಸೂನವಃ—ಪುತ್ರರೂ । ಅಸುರಸ್ಯ—ಮೇಘಗಳಿಗೆ । ವೇಧಸಃ—ಉತ್ಪಾದಕರೂ (ವೃಷ್ಟಿಕಾರಕರೂ) । ಯುವಾನಃ—ನಿತ್ಯತರುಣರೂ ಆದ ಮರುತ್ತುಗಳು । ದಿವಃ—ಅಂತರಿಕ್ಷದಿಂದ ಬಂದು । ಯಥಾ—ಯಾವ ಪ್ರಕಾರವಾಗಿ । ವಶಂತಿ—ನಮ್ಮನ್ನು ಆದರಿಸುವರೋ । ತಥೇತ್—ಅದೇ ರೀತಿಯಲ್ಲಿ । ಅಸತ್—ಈ ಸ್ತುತಿಯು ಅವರನ್ನು ಆಕರ್ಷಿಸಲಿ.

॥ ಭಾವಾರ್ಥ ॥

ರುದ್ರಪುತ್ರರೂ, ಮೇಘಗಳಿಗೂ ವೃಷ್ಟಿಗೂ ಉತ್ಪಾದಕರೂ, ನಿತ್ಯತರುಣರೂ ಆದ ಮರುತ್ತುಗಳು ಅಂತರಿಕ್ಷದಿಂದ ಇಲ್ಲಿಗೆ ಬಂದು ಯಾವ ರೀತಿ ನಮ್ಮನ್ನು ಆದರಿಸುವರೋ ಆ ರೀತಿ ಮಾಡಲು ಈ ಸ್ತುತಿಯು ಅವರನ್ನು ಆಕರ್ಷಿಸಲಿ.

## English Translatian

May this (our praise) take effect, so that the ever-youthful sons of Rudra, creators of the cloud, (coming) from heaven, may be pleased with us.

॥ ಸಂಹಿತಾಪಾಠಃ ॥

ಯೇ ಚಾರ್ಹಂತಿ ಮರುತಃ ಸುದಾನವಃ ಸ್ಮನ್ಮೀಳ್ಹುಷಶ್ಚರಂತಿ ಯೇ।
ಅತಶ್ಚಿದಾ ನ ಉಪ ವಸ್ಯಸಾ ಹೃದಾ ಯುವಾನ ಆ ವವೃಧ್ವಂ ॥

॥ ಪದಪಾಠಃ ॥

ಯೇ । ಚ । ಅರ್ಹಂತಿ । ಮರುತಃ । ಸುಽದಾನವಃ । ಸ್ಮತ್ । ಮೀಳ್ಹುಷಃ । ಚರಂತಿ । ಯೇ ।
ಅತಃ । ಚಿತ್ । ಆ । ನಃ । ಉಪ । ವಸ್ಯಸಾ । ಹೃದಾ । ಯುವಾನಃ । ಆ । ವವೃಧ್ವಂ ॥

॥ ಸಾಯಣಭಾಷ್ಯಂ ॥

ಸುದಾನವಃ ಶೋಭನದಾನಾ ಯೇ ಚ ಯಜಮಾನಾ ಮರುತೋ ದೇವಾನರ್ಹಂತಿ ಪೂಜಯಂತಿ। ಯೇ ಚ ಮೀಳ್ಹುಷಃ ಸೇಕ್ತೄನ್ಮರುತಃ ಸ್ಮತ್ ಪ್ರಶಸ್ತಂ ಚರಂತಿ ಹವಿರ್ಭಿಃ ಪ್ರಚರಂತಿ ಯಜಂತಿ। ಯತ। ಏವಮತೋಽಪಿ ಕಾರಣಾತ್ತಾನುಭಯವಿಧಾನ್ನೋಽಸ್ಮಾನಾಭಿಲಕ್ಷ್ಯ ವಸ್ಯಸಾ ವಸೀಯಸಾ ವಸುಮತ್ತಮೇನ ಹೃದಾ ಹೃದಯೇನ ಹೇ ಯುವಾನೋ ಮರುತಃ ಉಪಾ ವವೃಧ್ವಂ। ಉಪೇತ್ಯಾಭಿಸಂಭಜತ ॥

॥ ಪ್ರತಿಪದಾರ್ಥ ॥

ಯುವಾನಃ—ನಿತ್ಯತರುಣರಾದ ಎಲೈ ಮರುತ್ತುಗಳೇ । ಸುದಾನವಃ—ಉತ್ತಮವಾಗಿ ಹವಿರ್ದಾನಗಳನ್ನು

ಮಾಡುವ । ಯೇ ಚ— ಯಾವ ಯಜಮಾನರು । ಮರುತಃ— ನಿಮ್ಮನ್ನು (ಸ್ತುತಿಗಳಿಂದ) । ಅರ್ಹಂತಿ—ಪೂಜಿಸುವರೋ । ಯೇ—ಯಾರು । ಮೀಳ್ಹುಷಃ— ವೃಷ್ಟಿಕರ್ತರಾದ ನಿಮ್ಮನ್ನು । ಸ್ಪೃತ್—ಪ್ರಶಸ್ಯವಾಗಿ । ಚರಂತಿ—ಹವಿಸ್ಸುಗಳಿಂದ ಪೂಜಿಸುವರೋ । ಅತಃ ಚಿತ್—ಆ ಎರಡು ಕರ್ಮಗಳನ್ನೂ ಹೊಂದಿರುವ ಕಾರಣದಿಂದಲೇ ।, ನಃ ಆ—ನಮ್ಮನ್ನು ಲಕ್ಷಿಸಿ । ವಸ್ಯಸಾ—ಸಂಪದ್ಯುಕ್ತವಾದ । ಹೃದಾ— ಹೃದಯದೊಡನೆ । ಉಪ ಆ ವವೃಧ್ವಂ—ಇಲ್ಲಿ ಬಂದು ನಮ್ಮನ್ನು ಸಂಪದ್ವೃದ್ಧರನ್ನಾಗಿ ಮಾಡಿರಿ.

॥ ಭಾವಾರ್ಥ ॥

ನಿತ್ಯತರುಣರಾದ ಎಲೈ ಮರುತ್ತುಗಳೇ, ಉತ್ತಮವಾಗಿ ಹವಿರ್ದಾನಗಳನ್ನು ಅರ್ಪಿಸುವ ಯಾವ ಯಜಮಾನರು ನಿಮ್ಮನ್ನು ಪೂಜಿಸುವರೋ, ಯಾರು ವೃಷ್ಟಿಕರ್ತರಾದ ನಿಮ್ಮನ್ನು ಪ್ರಶಸ್ಯವಾದ ಹವಿಸ್ಸುಗಳಿಂದ ಪೂಜಿಸುವರೋ ಆ ಎರಡು ವಿಧವಾದ ಕರ್ಮಗಳನ್ನೂ ನಾವು ಹೊಂದಿರುವ ಕಾರಣದಿಂದಲೇ ನಮ್ಮನ್ನು ಲಕ್ಷಿಸಿ ಸಂಪದ್ಯುಕ್ತವಾದ ಹೃದಯದೊಡನೆ ಇಲ್ಲಿ ಬಂದು ನಮ್ಮನ್ನು ಸಂಪದ್ವೃದ್ಧರನ್ನಾಗಿ ಮಾಡಿರಿ.

English Translation

Youthful (Maruts), approaching us with benevolent hearts, grant prosperity to those liberal men who worship you, who zealously propitiate you, the showerers of rain, with oblations.

॥ ಸಂಹಿತಾಪಾಠಃ ॥

ಯೂನ ಊ ಷು ನವಿಷ್ಠಯಾ ವೃಷ್ಣಃ ಪಾವಕಾँ ಅಭಿ ಸೋಭರೇ
ಗಿರಾ ।
ಗಾಯ ಗಾ ಇವ ಚರ್ಕೃಷತ್ ॥ ೧೯ ॥

॥ ಪದಪಾಠಃ ॥

ಯೂನಃ । ಊಂ ಇತಿ । ಸು । ನವಿಷ್ಠಯಾ । ವೃಷ್ಣಃ । ಪಾವಕಾನ್ । ಅಭಿ । ಸೋಭರೇ ।
ಗಿರಾ ।
ಗಾಯ । ಗಾಃऽಇವ । ಚರ್ಕೃಷತ್ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಸೋಭರೇ ಯೂನೋ ನಿತ್ಯತರುಣಾನ್ ವೃಷ್ಣೋ ವರ್ಷಿಷ್ಠಾನ್ ಪಾವಕಾಂಸ್ತಾನ್ಮರುತೋ

ನವಿಷ್ಠಯಾತಿಶಯೇನಾಭಿನವಯಾ ಗಿರಾ ವಾಚಾ ಸ್ತುತಿರೂಪಯಾ ಸು ಶೋಭನಮಭಿ ಗಾಯ। ಅಭಿಷ್ಟುಹಿ। ಚರ್ಕೃಷತ್ ಪುನಃಪುನಃ ಕೃಷನ್ ಕೃಷೀವಲೋ ಗಾ ಇವ । ಸ ಯಥಾ ಯೂನಃ ಶಕ್ತಾನನಡುಹಃ ಸ್ತೌತಿ ತದ್ವತ್ ॥

। ಪ್ರತಿಪದಾರ್ಥ ।

ಸೋಭರೇ—ಎಲೈ ಸೋಭರಿಮುನಿಯೇ । ಚರ್ಕೃಷತ್—ನೆಲವನ್ನು ಪದೇಪದೇ ಉಳುವ ರೈತನು । ಗಾ ಇವ—ಎತ್ತುಗಳನ್ನು ಹುರಿದುಂಬಿಸುವಂತೆ । ಯೂನಃ—ನಿತ್ಯತರುಣರೂ । ವೃಷ್ಣಃ—ವೃಷ್ಟಿಕಾರಕರೂ । ಪಾವಕಾನ್—ಶುದ್ಧಿಕಾರಕರೂ ಆದ ಮರುತ್ತುಗಳನ್ನು । ನವಿಷ್ಠಯಾ—ಅತ್ಯಂತ ನೂತನವಾದ । ಗಿರಾ—ಸ್ತುತಿವಾಕ್ಯನಿಂದ । ಸು—ಅತಿಶಯವಾಗಿ । ಅಭಿಗಾಯ—ಸ್ತುತಿಸಿ ಆಕರ್ಷಿಸು.

। ಭಾವಾರ್ಥ ।

ಎಲೈ ಸೋಭರಿಮುನಿಯೇ, ನೆಲವನ್ನು ಪದೇಪದೇ ಉಳುವ ರೈತನು ಎತ್ತುಗಳನ್ನು ಹುರಿದುಂಬಿಸುವಂತೆ, ನಿತ್ಯತರುಣರೂ, ವೃಷ್ಟಿಕಾರಕರೂ, ಶುದ್ಧಿಕಾರಕರೂ ಆದ ಮರುತ್ತುಗಳನ್ನು ಅತ್ಯಂತ ನೂತನವಾದ ಸ್ತುತಿವಾಕ್ಯನಿಂದ ಅತಿಶಯವಾಗಿ ಸ್ತುತಿಸಿ ಆಕರ್ಷಿಸು.

## English Translation

Praise, Sobhari, (and attract hither) by a new song the youthful purifying showerers, as (a ploughman) repeatedly urges his oxen.

। ಸಂಹಿತಾಪಾಠಃ ।

ಸಾಹಾ ಯೇ ಸಂತಿ ಮುಷ್ಟಿಹೇವ ಹವ್ಯೋ ವಿಶ್ವಾಸು ಪೃತ್ಸು
ಹೋತೃಷು ।
ವೃಷ್ಣಶ್ಚಂದ್ರಾನ್ನ ಸುಶ್ರವಸ್ತಮಾನ್ ಗಿರಾ ವಂದಸ್ವ ಮರುತೋ
ಅಹ ॥ ೨೦ ॥

॥ ಪದಪಾಠಃ ॥

ಸಹಾಃ । ಯೇ । ಸಂತಿ । ಮುಷ್ಟಿಹಾಽಇವ । ಹವ್ಯಃ । ವಿಶ್ವಾಸು । ಪೃತ್ಽಸು । ಹೋತೃಷು।
ವೃಷ್ಣಃ । ಚಂದ್ರಾನ್ । ನ । ಸುಶ್ರವಃಽತಮಾನ್ । ಗಿರಾ । ವಂದಸ್ವ । ಮರುತಃ । ಅಹ ॥

॥ ಸಾಯಣಭಾಷ್ಯಂ ॥

ವಿಶ್ವಾಸು ಸರ್ವಾಸು ಪೃತ್ಸು ಪೃತನಾಸು ಯುದ್ಧೇಷು ಹೋತೃಷ್ವಾಹ್ವಾನಶೀಲೇಷು ಯೋದ್ಧೃಷು ಚ ಯೇ ಮರುತಃ ಸಹಾಃ ಸಂತಿ ಅಭಿಭವಿತಾರೋ ಭವಂತಿ ಹನ್ಯೋ ಹ್ವಾತವ್ಯೋ ಮುಷ್ಟಿಹೇವ । ಮುಷ್ಟಿಭಿರೇವ ಹಂತೀತಿ ಮುಷ್ಟಿಹಾ ಮಲ್ಲಃ । ಸ ಇವ । ನೇತಿ ಸಂಪ್ರತ್ಯರ್ಥೇ । ನ ಸಂಪ್ರತಿ ವೃಷ್ಣೋ ವರ್ಷಿತೄಂಶ್ಚಂದ್ರಾನಾಹ್ಲಾದಕಾನ್ ಸುಶ್ರವಸ್ತಮಾನತಿಶಯೇನ ಶೋಭನಯಶಸ್ಕಾಂಸ್ತಾನ್ಮರುತೋಽಹ ಮರುತ ಏವ ಗಿರಾ ವಾಚಾ ವಂದಸ್ವ । ಸ್ತುಹಿ ॥

॥ ಪ್ರತಿಪದಾರ್ಥ ॥

ವಿಶ್ವಾಸು—ಸಮಸ್ತವಾದ । ಪೃತ್ಸು—ಯುದ್ಧಗಳಲ್ಲಿಯೂ । ಹೋತೃಷು—ಇವರಿಗೆ ಕರೆಯಿರುವಾಗ । ಹವ್ಯಃ—ಪ್ರತಿಸ್ಪರ್ಧಿಯನ್ನು ಕರೆಯುವ ಯೋಧನು । ಮುಷ್ಟಿಹೇವ—ಮುಷ್ಟಿಯಿಂದಲೇ ಹೊಡೆಯುವಂತೆ । ಯೇ-ಯಾವ ಮರುತ್ತುಗಳು । ಸಹಾಃ ಸಂತಿ—ಶತ್ರುಗಳನ್ನು ಸೋಲಿಸುವವರಾಗಿರುತ್ತಾರೋ ಅಂತಹ । ವೃಷ್ಣಃ—ವೃಷ್ಟಿಕಾರಕರೂ । ಚಂದ್ರಾನ್—ಆಹ್ಲಾದಕಾರಕರೂ । ಸುಶ್ರವಸ್ತಮಾನ್—ಅತಿಶಯವಾದ ಶೋಭಾಯುತರೂ ಆದ । ಮರುತ ಅಹ—ಮರುತ್ತುಗಳನ್ನೇ । ನ—ಈಗ । ಗಿರಾ—ಸ್ತುತಿಗಳಿಂದ । ವಂದಸ್ವ—ಪ್ರಶಂಸಿಸಿ ನಮಸ್ಕರಿಸು.

॥ ಭಾವಾರ್ಥ ॥

ಸಮಸ್ತವಾದ ಸಂಗ್ರಾಮಗಳಲ್ಲಿಯೂ ಮರುತ್ತುಗಳಿಗೆ ಕರೆಯಿರುವಾಗ, ಪ್ರತಿಸ್ಪರ್ಧಿಯನ್ನು ಹೋರಾಟಕ್ಕೆ ಕರೆಯುವ ಯೋಧನು ಮುಷ್ಟಿಯಿಂದಲೇ ಹೊಡೆಯುವಂತೆ ಯಾವ ಮರುತ್ತುಗಳು ಶತ್ರುಗಳನ್ನು ಸೋಲಿಸುವವರಾಗಿರುತ್ತಾರೋ ಅಂತಹ ವೃಷ್ಟಿಕಾರಕರೂ, ಆಹ್ಲಾದಕಾರರೂ, ಅತಿಶಯವಾದ ಶೋಭಾಯುತರೂ ಆದ ಮರುತ್ತುಗಳನ್ನೇ ಈಗ ಸ್ತುತಿಗಳಿಂದ ಪ್ರಶಂಸಿಸಿ ನಮಸ್ಕರಿಸು.

## English Translation

Propitiate with praise the Maruts, the senders of rain, the givers of pleasure, the libaral bestowers of food; who are ever victorious in combats and like a boxer who has been challenged over his challengers.

॥ ಸಂಹಿತಾಪಾಠಃ ॥

ಗಾವಶ್ಚಿದ್ಘಾ ಸಮನ್ಯವಃ ಸಜಾತ್ಯೇನ ಮರುತಃ ಸಬಂಧವಃ ।
ರಿಹತೇ ಕಕುಭೋ ಮಿಥಃ ॥ ೨೧ ॥

॥ ಪದಪಾಠಃ ॥

ಗಾವಃ । ಚಿತ್ । ಘ । ಸಽಮನ್ಯವಃ । ಸಽಜಾತ್ಯೇನ । ಮರುತಃ । ಸಽಬಂಧವಃ ।

ರಿಹತೇ । ಕಕುಭಃ । ಮಿಥಃ ॥ ೨೧ ॥

॥ ಸಾಯಣಭಾಷ್ಯಂ ॥

ಹೇ ಸಮನ್ಯವಃ ಸಮಾನತೇಜಸ್ಕಾಃ ಸಮಾನಕ್ರೋಧಾ ವಾ ಹೇ ಮರುತಃ ಗಾವಶ್ಚಿದ್ಗಾವಶ್ಚ ಯುಷ್ಮಾನ್ಮಾತೃಭೂತಾಃ ಸಜಾತ್ಯೇನ ।ಸಮಾನಜಾತಿತ್ವೇನ ಸಬಂಧವಃ ಸಮಾನಬಂಧುಕಾಃ ಸತ್ಯಃ ಕಕುಭೋ ದಿಶಃ ಪ್ರಾಚ್ಯಾದಿದಿಗ್ಭಾಗಾನ್ ಪ್ರಾಪ್ಯ ಮಿಥಃ ಪರಸ್ಪರಂ ರಿಹತೇ । ಲಿಹಂತಿ । ಘೇತಿ ಪೂರಕಃ ॥

॥ ಪ್ರತಿಪದಾರ್ಥ ॥

ಸಮನ್ಯವಃ—ಸಮಾನವಾದ ತೇಜಸ್ಸುಳ್ಳ । ಮರುತಃ—ಎಲೈ ಮರುತ್ತುಗಳೇ । ಗಾವಶ್ಚಿತ್—ನಿಮಗೆ ಮಾತೃಭೂತಗಳಾದ ಗೋವುಗಳು । ಸಜಾತ್ಯೇನ—ಒಂದೇ ಜಾತಿಯುಳ್ಳದ್ದಾಣದರಿಂದ । ಸಬಂಧವಃ—ಸಮಾನವಾದ ಬಂಧುತ್ವವನ್ನು ಹೊಂದಿ । ಕಕುಭಃ—ಸಕಲ ದಿಕ್ಕುಗಳನ್ನೂ । ಮಿಥಃ—ಒಟ್ಟಿಗೆ । ರಿಹತೇ ಘ—ವ್ಯಾಪಿಸುತ್ತವೆ.

॥ ಭಾವಾರ್ಥ ॥

ಸಮಾನವಾದ ತೇಜಸ್ಸುಳ್ಳ ಎಲೈ ಮರುತ್ತುಗಳೇ, ನಿಮಗೆ ಮಾತೃಭೂತಗಳಾದ ಗೋವುಗಳು ಒಂದೇ ಜಾತಿಯುಳ್ಳದ್ದಾಣದರಿಂದ ಸಮಾನವಾದ ಬಂಧುತ್ವವನ್ನು ಹೊಂದಿ ಸಕಲ ದಿಕ್ಕುಗಳನ್ನೂ ಒಟ್ಟಿಗೆ ವ್ಯಾಪಿಸುತ್ತವೆ.

## English Translation

Maruts, who are of like wrath, offspring of the maternal cow (Prishni), related by a common origin, they severally spread through the quarters of the horizon,

॥ ಸಂಹಿತಾಪಾಠಃ ॥

ಮರ್ತಶ್ಚಿದ್ವೋ ನೃತವೋ ರುಕ್ಮವಕ್ಷಸ ಉಪ ಭ್ರಾತೃತ್ವಮಾಯತಿ ।

ಅಧಿ ನೋ ಗಾತ ಮರುತಃ ಸದಾ ಹಿ ವ ಆಪಿತ್ವಮಸ್ತಿ ನಿಧ್ರುವಿ ॥

॥ ಪದಪಾಠಃ ॥

ಮರ್ತಃ । ಚಿತ್ । ವಃ । ನೃತವಃ । ರುಕ್ಮಽವಕ್ಷಸಃ । ಉಪ । ಭ್ರಾತೃಽತ್ವಂ । ಆ । ಅಯತಿ ।

ಅಧಿ । ನಃ । ಗಾತ । ಮರುತಃ । ಸದಾ । ಹಿ । ವಃ । ಆಪಿಽತ್ವಂ । ಅಸ್ತಿ । ನಿಽಧ್ರುವಿ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ನೃತವೋ ನೃತ್ಯಂತೋ ಹೇ ರುಕ್ಮವಕ್ಷಸಃ । ರೋಚಮಾನಮಾಭರಣಂ ರುಕ್ಮಂ ವಕ್ಷಸಿ ಯೇಷಾಂ ತೇ ತಥೋಕ್ತಾಃ । ಈದೃಶಾ ಹೇ ಮರುತಃ ಮರ್ತಶ್ಚಿನ್ಮನುಷ್ಯೋಽಪಿ ಸ್ತೋತಾ ವೋ ಯುಷ್ಮಾಕಂ ಭ್ರಾತೃತ್ವಂ ಸಖಿತ್ವಮಾ ಅಭಿಮುಖ್ಯೇನೋಪಾಯತಿ । ಉಪಗಚ್ಛತಿ । ಅತೋ ನೋಽಸ್ಮಾನ್ನನುಷ್ಮಾನ್ಸ್ತೋತೄನಧಿ ಗಾತ । ಅಧಿಬ್ರೂತ । ಅಸ್ಮತ್ಪಕ್ಷಪಾತವಚನಾ ಭವತ । ಹಿ ಯಸ್ಮಾದ್ವೋ ಯುಷ್ಮಾಕಮಾಪಿತ್ವಂ ಬಂಧುತ್ವಂ ನಿಧ್ರುವಿ ನಿತರಾಂ ಧಾರಯಿತವ್ಯೇ ಸ್ತೋತ್ರೇ ಯಜ್ಞೇ ವಾ ಸದಾ ಸರ್ವದಾಸ್ತಿ ವಿದ್ಯತೇ ತಸ್ಮಾದಿತ್ಯರ್ಥಃ ॥

॥ ಪ್ರತಿಪದಾರ್ಥ ॥

ನೃತವಃ—ಅಂತರಿಕ್ಷದಲ್ಲಿ ನರ್ತನಮಾಡುವವರೂ । ರುಕ್ಮವಕ್ಷಸಃ—ವಕ್ಷಸ್ಸಿನಲ್ಲಿ ಹೊಂಬಣ್ಣದ ಆಭರಣವುಳ್ಳವರೂ ಆದ । ಮರುತಃ—ಎಲೈ ಮರುತ್ತುಗಳೇ । ಮರ್ತಶ್ಚಿತ್—ನಿಮ್ಮ ಸ್ತೋತೃವು ಮಾನವನಾದರೂ ಸಹ । ವಃ—ನಿಮ್ಮೊಂದಿಗೆ । ಭ್ರಾತೃತ್ವಂ—ಮಿತ್ರತ್ವವನ್ನು । ಆ ಉಪಾಯತಿ – ಪಡೆಯುತ್ತಾನೆ (ಆದುದರಿಂದ) । ನಃ—ನಮ್ಮ ವಿಷಯದಲ್ಲಿ । ಅಧಿ ಗಾತ—ಪ್ರಶಂಸಿಸಿ ಮಾತನಾಡುವವರಾಗಿರಿ । ಹಿ—ಏತಕ್ಕೆಂದರೆ । ವಃ—ನಿಮ್ಮ । ಆಪಿತ್ವಂ—ಬಂಧುತ್ವವು । ನಿಧ್ರುವಿ—ಯಜ್ಞದಲ್ಲಿ । ಸದಾ—ಯಾವಾಗಲೂ । ಅಸ್ತಿ—ಇದ್ದೇ ಇರುತ್ತದೆ.

॥ ಭಾವಾರ್ಥ ॥

ಅಂತರಿಕ್ಷದಲ್ಲಿ ನರ್ತನಮಾಡುವವರೂ, ವಕ್ಷಸ್ಸಿನಲ್ಲಿ ಹೊಂಬಣ್ಣದ ಆಭರಣವುಳ್ಳವರೂ ಆದ ಎಲೈ ಮರುತ್ತುಗಳೇ, ನಿಮ್ಮ ಸ್ತೋತೃವು ಮಾನವನಾದರೂ ಸಹ, ನಿಮ್ಮೊಂದಿಗೆ ಮಿತ್ರತ್ವವನ್ನು ಪಡೆಯುತ್ತಾನೆ. ಆದುದರಿಂದ ನಮ್ಮ ವಿಷಯದಲ್ಲಿ ಪ್ರಶಂಸಿಸಿ ಮಾತನಾಡಿರಿ. ಏತಕ್ಕೆಂದರೆ, ಯಜ್ಞಕಾಲದಲ್ಲಿ ನಿಮ್ಮ ಬಂಧುತ್ವವು ಯಾವಾಗಲೂ ಇದ್ದೇ ಇರುತ್ತದೆ.

## Engalish Translation

Muruts, dancing (through the air), decorated with golden breast-plates, the mortal (who worships you) attains your brotherheod; speak favourably to us, for your affinity is ever (made known) at the regulated (sacrifice).

॥ ಸಂಹಿತಾಪಾಠಃ ॥

ಮರುತೋ ಮಾರುತಸ್ಯ ನ ಆ ಭೇಷಜಸ್ಯ ವಹತಾ ಸುದಾನವಃ ।

ಯೂಯಂ ಸಖಾಯಃ ಸಪ್ತಯಃ ॥ ೨೩ ॥

॥ ಪದಪಾಠಃ ॥

ಮರುತಃ । ಮಾರುತಸ್ಯ । ನಃ । ಆ । ಭೇಷಜಸ್ಯ । ವಹತ । ಸುಽದಾನವಃ ।
ಯೂಯಂ । ಸಖಾಯಃ । ಸಪ್ತಯಃ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಸುದಾನವಃ ಶೋಭನದಾನಾ ಹೇ ಸಖಾಯಃ ಸಮಾನಖ್ಯಾನಾ ಹೇ ಸಪ್ತಯಃ ಸರ್ಪಣಶೀಲಾ ಮರುತಃ ನೋಽಸ್ಮಾಕಂ ಮಾರುತಸ್ಯ ಭೇಷಜಸ್ಯಮರುತ್ಸಂಬಂಧಿ ಭೇಷಜಮೌಷಧಂ ಯೂಯಮಾವಹತ । ಆನಯತ ॥

॥ ಪ್ರತಿಪದಾರ್ಥ ॥

ಸುದಾನವಃ—ಉದಾರವಾಗಿ ದಾನಮಾಡುವವರೂ । ಸಖಾಯಃ—ಮಿತ್ರಭೂತರೂ । ಸಪ್ತಯಃ—ಸಂಚಾರಸ್ವಭಾವದವರೂ ಆದ । ಮರುತಃ—ಎಲೈ ಮರುತ್ತುಗಳೇ । ನಃ—ನಮಗೆ । ಮಾರುತಸ್ಯ—ಮರುತ್ಸಂಬಂಧಿಯಾದ । ಭೇಷಜಸ್ಯ—ಔಷಧವನ್ನು । ಯೂಯಂ—ನೀವು । ಆ ವಹತ—ತೆಗೆದುಕೊಂಡು ಬನ್ನಿರಿ

॥ ಭಾವಾರ್ಥ ॥

ಉದಾರವಾಗಿ ದಾನಮಾಡುವವರೂ, ಮಿತ್ರಭೂತರೂ, ಸಂಚಾರಸ್ವಭಾವದವರೂ ಆದ ಎಲೈ ಮರುತ್ತುಗಳೇ, ನೀವು ನಮಗೆ ಮರುತ್ಸಂಬಂಧಿಯಾದ (ನಿಮ್ಮಲ್ಲಿರುವ) ಔಷಧವನ್ನು ತೆಗೆದುಕೊಂಡು ಬನ್ನಿರಿ.

English Translation

Generous friends, Maruts, swift gliding (through the air), bring to us (the boon) of the medicaments that belong to your company.

॥ ಸಂಹಿತಾಪಾಠಃ ॥

ಯಾಭಿಃ ಸಿಂಧುಮವಥ ಯಾಭಿಸ್ತೂರ್ವಥ ಯಾಭಿರ್ದಶಸ್ಯಥಾ ಕ್ರಿವಿಂ ।
ಮಯೋ ನೋ ಭೂತೋತಿಭಿರ್ಮಯೋಭುವಃ ಶಿವಾಭಿರಸಚದ್ವಿಷಃ ॥ ೨೪ ॥

॥ ಪದಪಾಠಃ ॥

ಯಾಭಿಃ । ಸಿಂಧುಂ । ಅವಥ । ಯಾಭಿಃ । ತೂರ್ವಥ । ಯಾಭಿಃ । ದಶಸ್ಯಥ । ಕ್ರಿವಿಂ ।

ಮಯಃ । ನಃ । ಭೂತ । ಊತಿऽಭಿಃ । ಮಯಃऽಭುವಃ । ಶಿವಾಭಿಃ । ಅಸಚऽದ್ವಿಷಃ ॥ ೨೪ ॥

॥ ಸಾಯಣಭಾಷ್ಯಂ ॥

ಹೇ ಮರುತಃ ಯಾಭಿರೂತಿಭಿಃ ಸಿಂಧುಂ ಸಮುದ್ರಮವಥ ರಕ್ಷಥ ಯಾಭಿಶ್ಚ ತೂರ್ವಥ ಸ್ತೋತೄಣಾಂ ಶತ್ರೂನ್ ಹಿಂಸ್ಥ ॥ ತುರ್ವೀ ಹಿಂಸಾರ್ಥಃ ॥ ಯಾಭಿಶ್ಚ ಕ್ರಿವಿಂ ಕೂಪಂ ತೃಷ್ಣಜೇ ಗೋತಮಾಯ ದಶಸ್ಯಥ ಪ್ರಯಚ್ಛಥ । ಹೇ ಮಯೋಭುವೋ ಮಯಸಃ ಸುಖಸ್ಯ ಭಾವಯಿತಾರೋ ಹೇ ಅಸಚದ್ವಿಷೋऽಸಕ್ತಶತ್ರವಃ ಶತ್ರುರಹಿತಾಃ ಶಿವಾಭಿಃ ಕಲ್ಯಾಣೀಭಿಃ ಸರ್ವಾಭಿರೂತಿಭಿಃ ರಕ್ಷಾಭಿರ್ನೋऽಸ್ಮಾಕಂ ಮಯಃ ಸುಖಂ ಭೂತ। ಭಾವಯತ। ಉತ್ಪಾದಯತ। ಯದ್ವಾ ॥ ಭೂ ಪ್ರಾಪ್ತೌ ॥ ಪ್ರಾಪಯತ॥

॥ ಪ್ರತಿಪದಾರ್ಥ ॥

ಮಯೋಭುವಃ—ಸುಖಸಂಪಾದಕರೂ । ಅಸಚದ್ವಿಷಃ—ಶತ್ರುರಹಿತರೂ ಆದ ಎಲೈ ಮರುತ್ತುಗಳೇ । ಯಾಭಿಃ—ಯಾವ ರಕ್ಷಣೆಗಳೊಡನೆ । ಸಿಂಧುಂ—ಸಮುದ್ರವನ್ನು । ಅವಥ—ರಕ್ಷಿಸಿದಿರೋ । ಯಾಭಿಃ—ಯಾವ ರಕ್ಷಣೆಗಳೊಡನೆ । ತೂರ್ವಥ—ಸ್ತೋತೃಗಳ ಶತ್ರುಗಳನ್ನು ಹಿಂಸಿಸಿದಿರೋ । ಯಾಭಿಃ—ಯಾವ ರಕ್ಷಣೆಗಳೊಡನೆ । ಕ್ರಿವಿಂ—(ಬಾಯಾರಿದ ಗೋತಮನಿಗೆ) ಬಾವಿಯನ್ನು । ದಶಸ್ಯಥ—ಕೊಟ್ಟಿರೋ ಅಂತಹ । ಶಿವಾಭಿಃ—ಮಂಗಳಕರವಾದ । ಊತಿಭಿಃ—ರಕ್ಷಣೆಗಳೊಡನೆ । ನಃ—ನಮಗೆ । ಮಯಃ—ಸುಖವನ್ನು । ಭೂತ—ಉತ್ಪನ್ನಮಾಡಿರಿ.

॥ ಭಾವಾರ್ಥ ॥

ಸುಖಸಂಪಾದಕರೂ, ಶತ್ರುರಹಿತರೂ ಆದ ಎಲೈ ಮರುತ್ತುಗಳೇ, ಯಾವ ರಕ್ಷಣೆಗಳೊಡನೆ ನೀವು ಸಮುದ್ರವನ್ನು ರಕ್ಷಿಸಿದಿರೋ, ಯಾವ ರಕ್ಷಣೆಗಳೊಡನೆ ಸ್ತೋತೃಗಳ ಶತ್ರುಗಳನ್ನು ಹಿಂಸಿಸಿದಿರೋ, ಯಾವ ರಕ್ಷಣೆಗಳೊಡನೆ ಬಾಯಾರಿದ ಗೋತಮನಿಗೆ ಬಾವಿಯನ್ನು ಕೊಟ್ಟಿರೋ, ಅಂತಹ ಮಂಗಳಕರವಾದ ರಕ್ಷಣೆಗಳೊಡನೆ ನಮಗೆ ಸುಖವನ್ನು ಉತ್ಪನ್ನಮಾಡಿರಿ.

## English Translation

With these auspicious protections with which you have guarded the ocean, with which you have destroyed (your enemies), with which you provided the well (for Gotama), you who are the sources of happiness, the unconquerable by your adversaries, bestow happiness upon us.

